ಶ್ರೀ[illegible]ಟಿ ಸಲ[illegible]ಯುದ್ಧಸ್ತ್ರರತ್ನ[illegible]ಲಿ

ದ್ವಿತೀಯ ರತ್ನವು — ಹದಿನೈದನೆಯ ಸಂಚಿಕೆಯು

ಶ್ರೀಮನ್ನಿಗಮಾನ್ತಮಹಾದೇಶಿಕಪ್ರಣೀತ

# ಶ್ರೀಮದ್ರಹಸ್ಯತ್ರಯಸಾರೇ

## ಮೂಲಮನ್ತ್ರಾಧಿಕಾರಸ್ಸಪ್ತವಿಂಶಃ

ವಿದ್ಯಾಭ್ಯಾಸದ ಇಲಾಖಾ ರಿಟೈರ್ಡು ಸರ್ಕಲ್ ಇನ್ಸ್ಪೆಕ್ಟರು

ಸಿ. ಯಂ. ವಿಜಯರಾಘವಾಚಾರ್ಯರಿಂದ

ರಚಿಸಲ್ಪಟ್ಟ

## ಆಚಾರ್ಯಹೃದಯಾನ್ವೇಷಿಣೀ

ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯಗಳೂ,
ಶ್ರುತಿಸ್ಮೃತೀತಿಹಾಸಪುರಾಣಾದಿ ಪ್ರಮಾಣಗಳೊಂದಿಗೆ
ಉಪಪಾದನೆಯೂ ಸಹ

೧೯೪೭

ಕ್ರಯ ಮೂರು ರೂಪಾಯಿಗಳು

ಗಿರಿಜಾವಿಲಾಸ ಪ್ರೆಸ್, ಬೆಂಗಳೂರುಸಿಟಿ

ಶ್ರಿಯೈ ನಮಃ



ಶ್ರೀನಿವಾಸಾಯ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ



## ತೃತೀಯ ಸಂಪುಟವು

# ಮೂಲಮನ್ತ್ರಾಧಿಕಾರಸ್ಸಪ್ತವಿಂಶಃ ೨೭.

### ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

ಹಿಂದಿನ ಎರಡು ಭಾಗಗಳಿಂದಲೂ ಮೊದಲು ಗುರುಪರಂಪರೆಯನ್ನು ಕೊಂಡಾಡಿ, ಈ ತಾವು ಬರೆಯುವ ಗ್ರಂಥವಲ್ಲಿ ಏನು ಉಪಪಾದಿತವೆಂಬುದನು ಸಙ್ಗ್ರಹವಾಗಿ ತಿಳಿಸಿ, ಮೋಕ್ಷಾರ್ಥಿಯು ಎಲ್ಲಾ ಶಾಸ್ತ್ರಭಾಗಗಳನ್ನೂ ಅಧಿಕರಿಸಲ್ಕು ಅನುಕೂಲವಿಲ್ಲದಿದ್ದರೂ ಸಾರತಮವಾದುವನ್ನು ಗ್ರಹಿಸತಕ್ಕದ್ದೆಂದೂ, ಅದು ರಹಸ್ಯತ್ರಯಗಳ ಜ್ಞಾನವೆಂದೂ, ಮೋಕ್ಷಸಾಧನೆಗೆ ಬೇಕಾದ ತತ್ವಹಿತ ಪುರುಷಾರ್ಥ ಜ್ಞಾನವೆಂದೂ ತಿಳಿಸಿ, ಶಾಸ್ತ್ರಗಳಿಂದ ಗ್ರಹಿಸುವವಿಷಯಗಳಲ್ಲಿ ನಮ್ಮ ಶಾಸ್ತ್ರಕ್ಕೆ ಮುಖ್ಯ ತಳಹದಿಯಾಗಿರುವದನ್ನೂ ಅವುಗಳಿಂದ ತಿಳಿಯತಕ್ಕದ್ದು ಅರ್ಥಪಂಚಕಗಳಿಂದೂ ಹೇಳಿ, ಪರತತ್ವವು ಯಾವುದೆಂಬುದನ್ನುಪದೇಶಿಸಿ, ಮೋಕ್ಷಾರ್ಥಿಯಾದ ಅಧಿಕಾರಿ ಎನಿಸಲು ಎಂತವನು ಅರ್ಹನೆಂದು ಬೋಧಿಸಿ, ಮೋಕ್ಷವನ್ನು ಹೊಂದುವ ಉಪಾಯಗಳು ಎರಡಾಗಿ, ಅಧಿಕಾರಿಗಳೂ ಇಬ್ಬರೆಂದೂ, ಅವುಗಳಿಗಿರುವ ವೈಲಕ್ಷಣ್ಯವನ್ನೂ ಪ್ರದರ್ಶಿಸಿ, ಆ ಎರಡು ವಿಧಗಳಾದ ಉಪಾಯಗಳಿಗೂ ಯೋಗ್ಯಾಧಿಕಾರವು ಎಂತವರಿಗೆ ಎಂಬುದನ್ನು ವ್ಯಕ್ತಪಡಿಸಿ, ಈ ಸುಲಭವಾದ ಪ್ರಪತ್ತಿಗೆ ಪರಿಕರಗಳನ್ನೂ ಅನುಷ್ಠಾನ ಪ್ರಕಾರವನ್ನೂ ಹೀಗೆ ಮೊದಲು ಹನ್ನೆರಡು ಅಧಿಕಾರಗಳಿಂದ ಉಪಪಾದಿಸಿ ಹೇಳಿದರು. ಅನಂತರ ಅಂತಹ ಉಪಾಯ ನಿಷ್ಠನು ಕೃತಕೃತ್ಯನೆಂದೂ, ಅಂತವನಿಗೆ ತಾನು ಅನುಷ್ಠಿಸಿರುವ [illegible]ದ ಮಾಹಾತ್ಮ್ಯೆಯ ಜ್ಞಾನವೂ ಚನ್ನಾಗಿ ಇರಬೇ[illegible]ನಾದರೂ ಉತ್ತರ ಕೃತ್ಯಗಳು ಉಂಟೆಂ[illegible]ಪಕ್ಕನುಗುಣವಾಗಿ



ಅನುಷ್ಠಿಸತಕ್ಕದ್ದೆಂದೂ, ಅಂತವನಿಗೆ ಮುಖ್ಯವಾಗಿ ಬೇಕಾದುದು ಭಾಗವತ ಪ್ರಸನ್ನತೆ ಎಂದೂ, ಆತನ ಪ್ರವೃತ್ತಿಗಳೆಲ್ಲಾ ಶಾಸ್ತ್ರೀಯ ನಿಯಮಾನುಸಾರವಾಗಿರತಕ್ಕದ್ದೆಂದೂ, ಅಂತವನು ದಿವ್ಯ ಕ್ಷೇತ್ರಾದಿಗಳಲ್ಲಿ ವಸಿಸತಕ್ಕದ್ದೆಂದೂ, ಅಂತವನು ಬುದ್ಧಿಪೂರ್ವಾಪರಾಧಗಳನ್ನು ಮಾಡದೆ ಪರಿಶುದ್ಧನಾಗಿರಬೇಕೆಂದೂ, ಒಂದುವೇಳೆ ಅಜಾತುರ್ಯದಿಂದ ಬುದ್ಧಿಪೂರ್ವಕವಾಗಿ, ಅಪರಾಧ ಸಂಘಟನೆಯಾದರೆ ತತ್ಪರಿಹಾರಾರ್ಥವಾಗಿ ಪುನಶ್ಶರಣಾಗತಿಯನ್ನನುಷ್ಠಿಸತಕ್ಕದ್ದೆಂದೂ ಹೇಳಿ, ಹೀಗೆ ಪ್ರಪತ್ತ್ಯುತ್ತರಕಾಲದ ಪ್ರವೃತ್ತಿಗಳನ್ನೆಲ್ಲಾ ಮುಂದಿನ ಏಳು ಅಧಿಕಾರಗಳಮೂಲಕ ತಿಳಿಸಿದರು. ಅನಂತರ ಮುಂದಿನ ಮೂರು ಅಧಿಕಾರಗಳ ಮೂಲಕ ಈತನಿಗೆ ದೇಹಾವಸಾನಕಾಲದಲ್ಲಿ ನಡೆಯುವ ಪ್ರಕಾರವನ್ನು, ಅನಂತರ ಇಂತಹ ಕೃತಾರ್ಥನಾದವನು ಹೋಗುವ ಅರ್ಚಿರಾದಿಗತಿ ವಿಶೇಷವನ್ನೂ, ಅಲ್ಲಿಂದ ನಿತ್ಯ ವಿಭೂತಿಯಲ್ಲಿ ಉಂಟಾಗುವ ಪ್ರಯೋಜನಗಳನ್ನೂ ಉಪದೇಶಿಸಿದರು.

ಅನಂತರ ಎರಡನೆಯ ಸ್ಥಿರೀಕರಣ ಭಾಗದಲ್ಲಿ ಸಿದ್ಧೋಪಾಯ ಸಾಧ್ಯೋಪಾಯಗಳಲ್ಲಿ ಇತರರು ಹೇಳಬಹುದಾದ ಆಕ್ಷೇಪಣೆಗಳಿಗೆಲ್ಲಾ ಸಮಾಧಾನವನ್ನೂ ಹಾಗೆಯೇ ಪ್ರಪತ್ತಿ ಪ್ರಭಾವದಲ್ಲಿ ಆಧಿಕ್ಯ ನ್ಯೂನತೆಯನ್ನು ಹೇಳುವ ಪೂರ್ವ ಪಕ್ಷಗಳಿಗೂ ಸಮಾಧಾನವನ್ನು ಹೇಳಿ ಮುಗಿಸಿದರು.

ಈ ಮೂರನೆಯ ಭಾಗವು ಈ ರಹಸ್ಯ ಮನ್ತ್ರಗಳ ಉಪಪಾದನೆಯಾದುದರಿಂದ, ಮನ್ತ್ರಂ ಯತ್ನೇನ ಗೋಪಯೇತ್ ಎಂಬ ವಿಧ್ಯನುಸಾರ ಅದನ್ನು ಗೋಪನಮಾಡುವದು ಆವಶ್ಯಕವೆಂದು ಭಾವಿಸಿ, ಆದುದರಿಂದ, ಈ ಮೂರು ಮನ್ತ್ರಗಳಿಗೆ ಅರ್ಥ ತಾತ್ಪರ್ಯಗಳನ್ನು ಬರೆಯುವದು ಸರಿಯಲ್ಲವೆಂದೂ, ಪ್ರಪನ್ನಾಪ್ರಪನ್ನರು ಅದನ್ನು ಪ್ರಾಜ್ಞರಾದ ಭಾಗವತೋತ್ತಮರ ಮೂಲಕ ಸಂಗ್ರಹಿಸತಕ್ಕದ್ದು ಉಚಿತವೆಂದೂ ತಿಳಿದು ಇಲ್ಲಿಗೆ ದಾಸನು ನಿಲ್ಲಿಸಿಬಿಟ್ಟಿದ್ದೆನು. ಆದರೆ ಮೈಸೂರು ಸಂಸ್ಥಾನಾಧೀಶರರ ಗುರುವಾಗಿಯೂ ಪ್ರಾಜ್ಞರಾಗಿಯೂ ಇರುವ ಯತೀನ್ದ್ರಮಹಾದೇಶಿಕರವರು, ಶ್ರೀ ನಿಗಮಾನ್ತ ದೇಶಿಕರವರೇ ಎಲ್ಲರೂ ತಿಳಿಯುವ ಹಾಗೆ ತಮಿಳ್ ಭಾಷೆಯಲ್ಲಿ ಈ ಮನ್ತ್ರಾರ್ಥಗಳನ್ನು ಬರೆದಿರುವಾಗ, ನೀವು ಕನ್ನಡದಲ್ಲಿ ಅದಕ್ಕೆ ಅರ್ಥ ತಾತ್ಪರ್ಯಗಳನ್ನು ಏಕೆ ಬರೆಯಕೂಡದು ? ಅಗತ್ಯ ಬರೆಯತಕ್ಕದ್ದೆಂದು ಅವರು ನಿಯಮಿಸಿದುದರಿಂದ ಅವರ ಆಜ್ಞೆಯನ್ನು ಶಿರಸಾವಹಿಸಿ ಬರೆಯಲು ಉಪಕ್ರಮಿಸಿದೆನು.— ಈ ಅಧಿಕಾರಗಳ ಸಾರಭೂತಾರ್ಥಗಳೆಲ್ಲಾ ಈ ಮೂರು ರಹಸ್ಯಗಳಲ್ಲೂ ವ್ಯಕ್ತವಾಗಿ ಯಾಗಲಿ ಅರ್ಥವಾಗಿಯಾಗಲಿ ತೋರಿ ಬರುತ್ತವೆಂದೂ ಪ್ರತಿಯೊಂದು ಅಧಿಕಾರಾಂತ್ಯದಲ್ಲೂ ಉಪಪಾದಿತವು. ಅಲ್ಲಿ ಹೇಳದಿರುವ ಇನ್ನೂ ಅನೇಕ ಅಭಿಪ್ರಾಯಗಳು ಈ ಮೂರು ಮನ್ತ್ರಗಳಲ್ಲೂ ಅಡಗಿರುವದರಿಂದ ಅವುಗಳನ್ನೂ

ಈಗ ಉಪಪಾದಿಸಿ ಹೇಳಲು ಪ್ರಾರಂಭಿಸಿರುತ್ತಾರೆ. ಅವುಗಳನ್ನು ಹೇಳುವಾಗ ಪರಸ್ಪರ ವಿರೋಧಗಳಾಗಲಿ ಆಕ್ಷೇಪಗಳಾಗಲಿ ಉಂಟೋ ; ಎಂದರೆ ಅಂತಹ ಪರಸ್ಪರ ವಿರುದ್ಧಾರ್ಥಗಳು ಯಾವುವೂ ಇಲ್ಲವೆಂದು ತೋರಿಸುವದಕ್ಕಾಗಿ ಈ ಮೂರು ರಹಸ್ಯಗಳಲ್ಲೂ ತೋರಿಬರುವ ಗೂಢಾರ್ಥಗಳನ್ನೆಲ್ಲಾ ವ್ಯಕ್ತಪಡಿಸಿ ಮೂರು ಅಧಿಕಾರಗಳ ಮೂಲಕ ಆ ಮೂರರಲ್ಲೂ ತೋರಿಬರುವ ಸಾಮಾನ್ಯ ವಿಶೇಷಾರ್ಥಗಳನ್ನೆಲ್ಲಾ ಉಪಪಾದಿಸುತ್ತಾರೆ— ಈ ಮೂರು ರಹಸ್ಯಗಳಲ್ಲಿ ಮೊದಲು ಮೂಲಮನ್ತ್ರದಲ್ಲಿ ತೋರಿಬರುವ ಅರ್ಥಗಳನ್ನೆಲ್ಲಾ ಉಪದೇಶಿಸಿರುವದು ಯಾವ ಕಾರಣದಿಂದ ಎಂದರೆ, ದ್ವಯವು ಈ ಅಷ್ಟಾಕ್ಷರದಲ್ಲಿ ಹೇಳಲ್ಪಟ್ಟಿರುವದರ ಅನುಷ್ಠಾನಕ್ರಮವಾದುದರಿಂದಲೂ, ಚರಮ ಶ್ಲೋಕವು ಇದರ ವಿವರಣವಾದುದರಿಂದಲೂ, ಸ್ವರೂಪಜ್ಞಾನ ಬೋಧಕ ಮನ್ತ್ರವಾದ ಅಷ್ಟಾಕ್ಷರಮನ್ತ್ರವನ್ನು ಕುರಿತು ಪ್ರಥಮತಃ ಬೋಧಿಸುತ್ತಾರೆ. ಹೀಗೆ ಈ ಮೂರು ಮನ್ತ್ರಗಳ ಅರ್ಥಗಳಿಗೂ ಐಕಕಂಠ್ಯವು ಉಂಟು.

**"ಮನ್ತ್ರೇ ತದ್ದೇವತಾಯಾಂಚ ತಥಾ ಮನ್ತ್ರಪ್ರದೇ ಗುರೌ । ತ್ರಿಷು ಭಕ್ತಿಸ್ಸದಾ ಕಾರ್ಯಾ ಸಾ ಹಿ ಪ್ರಥಮಸಾಧನಮ್"** ಎಂದು ಹೇಳಿರುವಹಾಗೆ ಮನ್ತ್ರದಲ್ಲೂ, ಮನ್ತ್ರಾಭಿಮಾನ ದೇವತೆಯಲ್ಲೂ, ಹಾಗೆಯೇ ಮನ್ತ್ರವನ್ನುಪದೇಶಿಸಿದ ಗುರುವಿನಲ್ಲೂ, ಯಾವಾಗಲೂ ಭಕ್ತಿಯನ್ನು ಮಾಡತಕ್ಕದ್ದು" ಎಂದು ಹೇಳಿರುವ ಹಾಗೆ,ಮನ್ತ್ರವೂ ಮನ್ತ್ರದೇವತೆಯೂ, ಮತ್ತು ಮಂತ್ರವನ್ನು ಉಪದೇಶಿಸಿದವರೂ ಶ್ಲಾಘನೀಯರೇ ಎಂಬ ಕಟ್ಟಳೆಯಲ್ಲಿ ಮೂರು ಪಾಶುರಗಳಿಂದ ಕ್ರಮವಾಗಿ ಕೊಂಡಾಡುತ್ತಾರೆ. ಇವುಗಳಲ್ಲಿ ಈ ಮೊದಲು ಶ್ಲೋಕದಿಂದ ಈ ಅಷ್ಟಾಕ್ಷರವೆನಿಸುವ ಮೂಲಮಂತ್ರದ ಸ್ವರೂಪವನ್ನು ತಿಳಿಸಿ, ಆ ಮನ್ತ್ರದಿಂದ ಪ್ರತಿಪಾದ್ಯವಾದ ದೇವತಾನುಸಂಧಾನದ್ವಾರಾ ಸ್ವಾಭೀಷ್ಟಪ್ರಾರ್ಥನೆಯನ್ನುಮಾಡುತ್ತಾರೆ; ಹಾಗೆಯೇ ಅಧಿಕಾರಾರ್ಥವನ್ನೂ ಸಙ್ಗ್ರಹಿಸಿ ಹೇಳುತ್ತಾರೆ.

**ಅರ್ಥವು.— ಆಚಾರ್ಯ ದತ್ತಂ** - ಈ ಮನ್ತ್ರದ ಮಹಿಮೆಯನ್ನರಿತು ತದನುಸಾರ ಆಚರಿಸುವ ಆಚಾರ್ಯರಿಂದ ಉಪದೇಶಿಸಲ್ಪಟ್ಟ, **ಪೂರ್ವಂ** - ಮೊದಲು, **ತಾರಂ** - ಮನ್ತ್ರಶಾಸ್ತ್ರದಲ್ಲಿ **ತಾರಂ** ಎಂದು ಪ್ರಸಿದ್ಧಿಯನ್ನು ಹೊಂದಿರುವ ಓಂ ಎಂಬ ಪ್ರಣವವು, **ತಾರಯತಿ**- ಈ ಪ್ರಣವವು ಮೂರು ಮಾತ್ರೆಗಳಿಂದ ಉಚ್ಚರಿಸಿ ಪರಮಾತ್ಮನನ್ನು ಧ್ಯಾನಿಸಿದರೆ, ಸಂಸಾರದಿಂದ ದಾಟಿಸುತ್ತದೆ ಎಂಬ ಶ್ರುತ್ಯರ್ಥವು ಸೂಚಿತವು. **ತದನು** - ಅದನ್ನು ಅನುಸರಿಸಿ ಎಂದರೆ ಅನಂತರ, **ಹೃದಯಂ** - ಮನ್ತ್ರ ಶಾಸ್ತ್ರದಲ್ಲಿ ನ್ಯಾಸ ಪ್ರಕ್ರಿಯೆಯಲ್ಲಿ **ಜ್ಞಾನಾಯ ಹೃದಯಾಯ ನಮಃ** - ಎಂದು ಹೇಳಿರುವಹಾಗೆ **ಹೃದಯಂ** ಎಂಬುದರಿಂದ ಎರಡನೆಯ ಪದವಾದ **ನಮ**ಸ್ಸು ಹೇಳಲ್ಪಟ್ಟಿತು, ಪ್ರಣವಕ್ಕೆ **ತಾರಂ** ಎಂದೂ, **ನಮ** ಶ್ಶಬ್ದಕ್ಕೆ **ಹೃದಯಂ**

ಮೂ. ತಾರಂ ಪೂರಂ ತದನುಹೃದಯಂ ತೇತ್ತ್ವ ನಾರಾಯಣಾಯೇ
ತ್ಯಾಮ್ನಾಯೋಕ್ತಂ ಪದಮನಯತಾಂ ಸಾರ್ಥಮಾಚಾರ್ಯದತ್ತಮ್।
ಅಙ್ಗೀಕುರ್ವನ್ನಲಸಮನಸಾ ಮಾತ್ಮರಕ್ಷಾ ಭರಂ ನಃ।
ಕ್ಷಿಪ್ರಂ ದೇವಃ ಕ್ಷಿಪತು ನಿಖಿಲಾನ್ ಕಿಙ್ಕರೈಶ್ವರ್ಯವಿಘ್ನಾನ್ ॥೫೯॥

---

ಎಂದೂ, ಹೇಳಿರುವುದು ಮಂತ್ರಗೋಪನಕ್ಕಾಗಿ; **ಮಂತ್ರಂ ಯತ್ನೇನ ಗೋಪಯೇತ್** ಎಂದಿರುವದರಿಂದ,ಹೀಗೆ ಮೊದಲು ಪ್ರಣವವೂ ಅನಂತರ ನಮಶ್ಶಬ್ದವೂ ಗೋಪ್ಯವಾಗಿ ಬೋಧಿತವು. ಇಲ್ಲಿಯೂ ಸಹ ತದನು ಎಂದಿಟ್ಟುಕೊಳ್ಳತಕ್ಕದ್ದು, **ತದನು**-ಆದಾದನಂತರ,ಈ ಅರ್ಥವು ಚಕಾರದಿಂದ ವ್ಯಕ್ತವು; **ತತ್**-ಶ್ರುತಿ ಪ್ರಸಿದ್ಧ ವಾದ, ಅಥವಾ ಸರ್ವಾರ್ಥ ಗ್ರಾಹಕವಾಗಿ ಪ್ರಸಿದ್ಧವಾದ, **ನಾರಾಯಣಾಯೇತ್ಯಾಮ್ನಾಯೋಕ್ತಂ ಚ ಪದಂ,** ನಾರಾಯಣಾಯ ಎಂಬುದು ಮೂರನೆಯ ಪದ ವೆಂದು ಕೂಡ ನಾರಾಯಣೋಪನಿಷತ್ತು, ತೈತ್ತರೀಯ ನಾರಾಯಣೀಯಾದಿಗಳಲ್ಲಿ ಹೇಳಿರುವದು, ಹೀಗೆ ಈ ಮೂರು ಪದಗಳನ್ನೂ, **ಸಾರ್ಥಂ**- ಬಹು ಅರ್ಥಗರ್ಭಿತ ವಾಗೋಣ ಹೇಗೋಹಾಗೆ,ಅಥವಾ ನಿರತಿಶಯಪ್ರಯೋಜನವುಳ್ಳದಾಗೋಣ ಹೇಗೋ ಹಾಗೆ, **ಅನಯತಾಂ**-ಅನುಸಂಧಾನಮಾಡುವ, **ಅಲಸಮನಸಾಂ** - ಉಪಾಸನಾದಿ ಗಳಿಗೆ ಅಸಮರ್ಥರಾಗಿ, ಅಕಿಂಚನರಾಗಿ, ಈ ಮನ್ತ್ರದ ಮಹಿಮೆಯನ್ನರಿತು ಶರಣಾ ಗತಿಯನ್ನನುಷ್ಠಿಸಿದ, **ನಃ**-ನಮ್ಮ, **ಆತ್ಮರಕ್ಷಾಭರಂ**-ಈ ಜೀವಾತ್ಮನನ್ನು ರಕ್ಷಿಸುವ ಭರವನ್ನು, **ಅಙ್ಗೀಕುರ್ವನ್** - ಅಙ್ಗೀಕರಿಸಿದವನಾಗಿ, **ದೇವಃ** - ಲೀಲಾವಿಭೂ ತಿಯಲ್ಲಿ ಬಹು ಪ್ರೀತಿಯಿಂದ ಕ್ರೀಡಿಸುತ್ತಿರುವ ಶ್ರಿಯಃಪತಿಯು, **ನಿಖಿಲಾನ್**-ಪೂರ್ವಜನ್ಮಗಳಲ್ಲೆಲ್ಲಾ ಸಂಪಾದಿಸಲ್ಪಟ್ಟ ಸಮಸ್ತಗಳಾದ, **ಕಿಂಕರೈಶ್ವರ್ಯ ವಿಘ್ನಾನ್** - ಪರಮಪದದಲ್ಲಿ ಅನವರತ ಮಾಡುವ ದಾಸಭೂತರಾದ ನಮಗೆ ಯೋಗ್ಯವಾದ ಪರವಾಸುದೇವನಿಗೆ ಮಾಡುವ ಕೈಂಕರ್ಯಸಾಮ್ರಾಜ್ಯಪದವಿಗೆ ವಿಘ್ನಗಳಾಗಿರುವ ಅನಾದ್ಯವಿದ್ಯಾ ಕರ್ಮಾದಿಗಳನ್ನೆಲ್ಲಾ, **ಕ್ಷಿಪ್ರಂ** - ಬೇಗನೆ ಎಂದರೆ ಮುಂದಿನ ಜನ್ಮವಿಲ್ಲದೆ ಈ ದೇಹಾವಸಾನದಲ್ಲೇ, **ಕ್ಷಿಪತು** - ನಾಶ ಮಾಡಲಿ ಎಂಬ ಪ್ರಾರ್ಥನೆಯು. ಈ ಉತ್ತರಾರ್ಧಾರ್ಥಗಳೆಲ್ಲಾ ಈ ಮೂಲ ಮನ್ತ್ರದಲ್ಲಿ ಅಡಗಿವೆ ಎಂಬುದನ್ನೆಲ್ಲಾ ಈ ಅಧಿಕಾರದ ಉಪಪಾದನೆಯಲ್ಲಿ ತೋರಿ ಸುವೆವು ಎಂಬುದು ಗ್ರಂಥಕರ್ತರ ಆಶಯವು.

**ತಾತ್ಪರ್ಯ.** ಓಂ ಇತ್ಯೇಕಾಕ್ಷರಂ, ನಮ ಇತಿ ದ್ವೇ ಅಕ್ಷರೇ, ನಾರಾಯಣಾಯೇತಿ ಪಂಚಾಕ್ಷರಾಣಿ ಎಂದು ಶ್ರುತಿಯು ಹೇಳುವದರಿಂದ ಮೂಲಮನ್ತ್ರವು ಎಂಟು ಅಕ್ಷರಗಳುಳ್ಳದ್ದಾದುದರಿಂದ ಅಷ್ಟಾಕ್ಷರಮಂತ್ರವೆಂದು ವ್ಯವಹರಿಸಲ್ಪಟ್ಟಿರುತ್ತ ದೆಂದೂ, ಅದು ಮೂರು ಪದಗಳುಳ್ಳದ್ದೆಂದೂ ಪ್ರಥಮತಃ ಮನ್ತ್ರಸ್ವರೂಪ

ವನ್ನು ತಾರಂ ಹೃದಯಂ ನಾರಾಯಣಾಯ ಎಂಬ ಮೂರು ಪದಗಳಿಂದ ತಿಳಿಸುತ್ತಾರೆ. ಮನ್ತ್ರಂ ಯತ್ನೇನ ಗೋಪಯೇತ್ ಎಂದು ಹೇಳಿರುವದಕ್ಕನುಗುಣವಾಗಿ ಶ್ರುತಿಯೂ ಕೂಡ ಹೇಗೆ ಮೂರನ್ನೂ ಒಟ್ಟುಗೂಡಿಸಿ ಹೇಳದೆ ಪ್ರತ್ಯೇಕ ಪ್ರತ್ಯೇಕವಾಗಿ ತಿಳಿಸಿತೋ, ಹಾಗೆಯೇ ಆಚಾರ್ಯವರ್ಯರೂ ಸಹ, ಗೋಪ್ಯವಾಗಿ ತಾರಂ ಇತ್ಯಾದಿ ಪದಗಳಿಂದ ತಿಳಿಸಿರುತ್ತಾರೆ. ಇಂತಹ ಅಮೋಘಮನ್ತ್ರೋಪದೇಶವು ಸದಾಚಾರ್ಯರ ಮೂಲಕವೇ ಆಗತಕ್ಕದ್ದೆಂಬ ಸತ್ಸಂಪ್ರದಾಯ ರಕ್ಷಣೆಗಾಗಿ, ಆಚಾರ್ಯದತ್ತಂ ಎಂಬ ಪ್ರಯೋಗವು. ಇಂತಹ ಉತ್ಕೃಷ್ಟ ಸಂಸ್ಕಾರವು ತುಂಬಾ ಜ್ಞಾನಿಯಾಗಿ ಬ್ರಹ್ಮವಿದಗ್ರೇಸರರಾಗಿರುವ ಆಚಾರ್ಯರ ಮೂಲಕ ನಡೆಯತಕ್ಕದ್ದೆಂಬುದನ್ನು ಆ ಪ್ರಯೋಗದಿಂದ ಗ್ರಹಿಸಬಹುದು. ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ। ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ" (ಗೀ.೪ ೩೪.)ಎಂಬುದೇ ಶ್ರೀ ಕೃಷ್ಣಭಗವಾನರವರ ಉಪದೇಶವು. ನನು ಇತಿ ಪಶ್ಚಾತ್। ನಾರಾಯಣಾಯೇತ್ಯುಪರಿಷ್ಟಾತ್ ಎಂದಿರುವದರಿಂದಲೇ ತದನು ಎಂಬ ಪ್ರಯೋಗವು. ಇಲ್ಲಿ ನಾರಾಯಣಾಯ ಎಂಬ ಮಂತ್ರದಲ್ಲಿರುವ ಪದವನ್ನೇ ಉಪಯೋಗಿಸಿರುವದು ಏತಕ್ಕೆಂದರೆ,ಆ ಶಬ್ದದಲ್ಲಿ ಅಡಗಿರುವ ಅಮೋಘಾರ್ಥಗಳನ್ನೆಲ್ಲಾ ಇನ್ನು ಯಾವ ಪರ್ಯಾಯ ಪದವೂ ಬೋಧಿಸಲಾರದಾದುದರಿಂದ ಶ್ರುತಿಯೂ ಕೂಡ ಭಗವಂತನನ್ನು ಬೋಧಿಸುವ ಅನೇಕ ಪರ್ಯಾಯ ಪದಗಳೆಲ್ಲಾ ನಾರಾಯಣನನ್ನೇ ಬೋಧಿಸುತ್ತದೆಂದು ತಿಳಿಸಿ,ಕೊನೆಗೆ "ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ। ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಸ್ಥಿತಃ"ಎಂದು ಬೋಧಿಸಿತು. ಈ ಅಧಿಕಾರದಲ್ಲೇ ಆ ನಾರಾಯಣ ಶಬ್ದದಿಂದ ತೋರುವ ಸಕಲಾರ್ಥಗಳೂ ಉಪದೇಶಿಸಲ್ಪಡುತ್ತವೆ. ಈಗಿನ ಆಚಾರ್ಯರುಗಳು ಮಂತ್ರೋಪದೇಶಕಾಲದಲ್ಲಿ ಬರೀಮಂತ್ರವನ್ನುಮಾತ್ರವೇ ಉಪದೇಶಿಸುತ್ತಾರೆ;ಅದು ಸರಿಯಲ್ಲವೆಂದೂ ಅದು ಸಾರ್ಥವಾಗಿ ಉಪದೇಶಿಸತಕ್ಕದ್ದೆಂದೂ ತಿಳಿಸುವದಕ್ಕಾಗಿಯೂ, ಮತ್ತು ಅದರ ಮಹಿಮೆಯು ಚನ್ನಾಗಿ ವೇದ್ಯವಾಗುವದಕ್ಕಾಗಿ ತಾವು ಈಗ ಸಾರ್ಥವಾಗಿಯೇ ಉಪದೇಶಿಸುತ್ತೇವೆ ಎಂಬ ಪ್ರತಿಜ್ಞೆಯನ್ನು ಸೂಚಿಸುವದಕ್ಕಾಗಿಯೂ, ಹಾಗೆ ಪ್ರಯೋಗವು. ಈ ಮಂತ್ರವು ಅಪೌರುಷೇಯವಾಗಿರುವದರಿಂದ ಅನೇಕಾರ್ಥಗರ್ಭಿತವಾಗಿ "ಸರ್ವಂ ಅಷ್ಟಾಕ್ಷರಾನ್ತಸ್ಥಮ್" ಎಂದು ಹೇಳಿರುವ ಮೇರೆಗೆ ಮೋಕ್ಷಾರ್ಥಿಯು ತಿಳಿಯಬೇಕಾದ ಅನೇಕಾಭಿಪ್ರಾಯಗಳುಳ್ಳದ್ದೆಂದೂ ಸೂಚಿಸುವದಕ್ಕಾಗಿ ಆಮ್ನಾಯೋಕ್ತಂ ಪದಮನಯತಾಂ ಸಾರ್ಥಂ ಎಂಬ ಪ್ರಯೋಗಗಳು. ನಾರಾಯಣಾನುವಾಕ ಮತ್ತು "ನಾರಾಯಣಾಯ ವಿದ್ಮಹೇ" ಎಂಬ ತೈತ್ತರೀಯ (೪. ೧. ೬) ವಾಕ್ಯಗಳನ್ನು ಮನಸ್ಸಿನಲ್ಲಿಟ್ಟು "ಆಮ್ನಾಯೋ

ಕ್ತಂ" ಎಂಬ ಹೇಳಿಕೆಯು. **ಸಾರ್ಥಂ** ಎಂದರೆ ಪ್ರಯೋಜನದಿಂದ ಕೂಡಿದುದು ಎಂದರ್ಥಮಾಡಿದರೂ ಮಾಡಬಹುದು. ಇದರಿಂದುಂಟಾಗುವ ಜ್ಞಾನವು ದ್ವಯೋಚ್ಚಾರಣೆಗೆ ಹೇತುವಾಗಿ ಪ್ರಾಪ್ಯವನ್ನು ಹೊಂದಿಸಬಹುದಾದುದರಿಂದ ಇದು ಸಾರ್ಥವೆಂದೂ ಹೇಳಬಹುದು. ಮಿಕ್ಕ ಪ್ರಯೋಜನಗಳೆಲ್ಲಾ ಅಲ್ಪವು. ಭಗವತ್ಪ್ರಾಪ್ತಿ ಸಾಧಕವು ಯಾವುದೋ ಅದೇ ಅರ್ಥವು, ಮಿಕ್ಕಿದುದೆಲ್ಲಾ ತೃಣಪ್ರಾಯವು ಎಂಬ ಭಾವವು. ಹೀಗೆ ಮಹತ್ತಾದ ಪ್ರಯೋಜನವು ಮುಖ್ಯವಾಗಿ ಯಾರಿಗೆ ಎಂದರೆ? ಈ ಮಂತ್ರದ ಮಹಿಮೆಯನ್ನರಿತು ದ್ವಯಮಂತ್ರದ ಮೂಲಕ ಶರಣಾಗತಿಯನ್ನನುಷ್ಠಿಸುವ ಪ್ರಪನ್ನರಿಗೆ ಎಂದು ತಿಳಿಸುವದಕ್ಕಾಗಿ, **ಅಲಸಮನಸಾಂ** ಎಂಬ ಪ್ರಯೋಗವು. ಹಿಂದೆ ಪ್ರಪತ್ತಿಯೋಗ್ಯಾಧಿಕಾರಿಯು ಯಾರು ಎಂಬ ಚರ್ಚೆಯಲ್ಲಿ "**ಭಕ್ತ್ಯಾದಿ ಶಕ್ತ್ಯಭಾವಃ**" (೯೪೧ ಪುಟವನ್ನು ನೋಡಿ.) ಎಂಬಲ್ಲಿ ಉಪಪಾದಿಸಿರುವ ಹಾಗೆ ಉಪಾಸನೆಗೆ ಅನರ್ಹರಾಗಿರುವ ೧೫ ವಿಧ ಅಶಕ್ತರಾಗಿ ಆಕಿಂಚನ್ಯಾದಿ ಯುಕ್ತರಾಗಿರುವ ನಮ್ಮಂತವರನ್ನು ಎಂದು ಹೇಳಿರುತ್ತಾರೆ. ಇಂತವರ ರಕ್ಷಾಭರವನ್ನು ಶರಣಾಗತವತ್ಸಲನು ಕಾದುಕೊಂಡಿದ್ದು ರಕ್ಷಿಸುವನು; ಇದರಲ್ಲಿ ಸಂಶಯವಿಲ್ಲವೆಂದು ತಿಳಿಸುವದಕ್ಕಾಗಿ **ಅಙ್ಗೀಕುರ್ವ್** – ಎಂಬ ಪ್ರಯೋಗವು. ಆತನ ಈ ದೃಢಸಂಕಲ್ಪಕ್ಕೆ ಏನೊಂದೂ ಉಪಹತಿಇಲ್ಲವು. ಸುಗ್ರೀವಾದಿಗಳ ಪ್ರತಿಬಂಧಕಗಳು ಎಲ್ಲವೂ ಹೇಗೆ ವಿಭೀಷಣನ ಪರಿಗ್ರಹಕ್ಕೆ ವಿಘ್ನಕಾರಿಯಾಗದೆ, ಶ್ರೀ ರಘುಕುಲೋತ್ತಮನು ತನ್ನ ಸಂಕಲ್ಪತೆಯನ್ನು "ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ। ದೋಷೋ ಯದ್ಯಪಿ ತಸ್ಯ ಸ್ಯಾತ್" ಎಂಬ, "ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" ಎಂಬ ಅಮೋಘೋಕ್ತಿಗಳಿಂದ ವ್ಯಕ್ತಪಡಿಸಿರುವದರಿಂದ,ನಿಸ್ಸಂಶಯವಾಗಿ,ಆತ್ಮರಕ್ಷಾಭರ ಮಙ್ಗೀಕುರ್ವ್ಎಂದು,ಶರಣಾಗತಿಯ ವಿಷಯದಲ್ಲಿ ಮಹಾ ವಿಶ್ವಾಸವನ್ನು ಪ್ರದರ್ಶಿಸಿರುತ್ತಾರೆ. ಶರಣಾಗತಿಯನ್ನನುಷ್ಠಿಸುವದರಲ್ಲಿರುವ ವಿಶೇಷ ಪ್ರೀತಿಯನ್ನು **ದೇವಃ** ಎಂಬ ಪ್ರಯೋಗವೂ ಸೂಚಿಸುತ್ತದೆ. ಈ ಶರಣಾಗತಿಯ ಮೂಲಕವಾಗಿ ಈ ಶರಣ್ಯನು ನಮ್ಮನ್ನೆಲ್ಲಾ **ಕ್ಷಿಪ್ರಂ ಕ್ಷಿಪತು ಕಿಂಕರೈಶ್ವರ್ಯವಿಘ್ನಾನ್**-ಶೀಘ್ರದಲ್ಲಿ ಈ ದೇಹಾವಸಾನದಲ್ಲೇ ದಾಸಭೂತರಾದ ನಮ್ಮ ಸ್ವರೂಪಕ್ಕೆ ಅನುಗುಣವಾದ ಶ್ರೀ ವಾಸುದೇವನಿಗೆ ದಿವ್ಯ ವೈಕುಂಠದಲ್ಲಿ ಸರ್ವದಾ ಕೈಂಕರ್ಯಮಾಡುವ ಮಹತ್ತಾದ ಸಾಮ್ರಾಜ್ಯಪದವಿಗೆ ವಿಘ್ನಗಳಾಗಿರುವ ಸಮಸ್ತಾಪರಾಧಗಳನ್ನೂ ಹೋಗಲಾಡಿಸಲಿ ಎಂದು ಹೇಳಿರುತ್ತಾರೆ; **ಕ್ಷಿಪತಿ** ಎಂದು ಹೇಳಬೇಕಾದ ನಿಸ್ಸಂಶಯ ವಿಷಯದಲ್ಲಿ, **ಕ್ಷಿಪತು** ಎಂದು ಹೇಳಿರುವದು, ಈ ಶ್ಲೋಕವು ಮುಂದೆ ಹೇಳಲ್ಪಡುವ ರಹಸ್ಯತ್ರಯಗಳ ಅಮೋ

ಘಾರ್ಥಗಳ ಉಪಪಾದನೆಗೆ ಮಂಗಳಾಚರಣೆಯ ಶ್ಲೋಕವಾದುದರಿಂದ, ಶ್ರೀಭಾಷ್ಯದ ಮಂಗಳಾಚರಣೆಯ ಶ್ಲೋಕದಲ್ಲಿರುವ ಭವತು ಶೇಮುಷೀ ಭಕ್ತಿರೂಪಾ ಎಂದು ಹೇಳಿರುವಹಾಗೆ ಆಶೀರ್ವಾದವನ್ನು ಸೂಚಿಸುತ್ತದೆ. ಪ್ರಾರ್ಥನೆಯು ಅನಿಷ್ಟ ನಿವೃತ್ತಿ ಪರವಾದುದರಿಂದ ಮಂಗಳಾಚರಣೆಯೆಂದು ಹೇಳಲು ಏನೊಂದೂ ವಿರೋಧವಿಲ್ಲವು. **ದೇವಃ ಕ್ಷಿಪತು** ಎಂಬ ಪ್ರಯೋಗದಿಂದ ಇಷ್ಟದೇವತೆಯನ್ನು ಕುರಿತ ಮಂಗಳವು ದ್ಯೋತಿತವು ಮಂತ್ರ ದೇವತೆಯೂ ಕೂಡ ಈ ದೇವಃ ಎಂಬ ಶಬ್ದದಿಂದ ಹೇಳಲ್ಪಟ್ಟಿತು. ಇದು ಮುಂದಿನ ಶ್ಲೋಕದಲ್ಲಿ ಮುಖ್ಯವಾಗಿ ಹೇಳಲ್ಪಡುತ್ತದೆ. ಈ ಮುಂದೆ ಏನು ಹೇಳಲ್ಪಡುತ್ತದೆಂಬುದನ್ನು ಉತ್ತರಾರ್ಧದಿಂದ ನಿರ್ದೇಶಿಸಿರುತ್ತಾರೆ. ಆಗಲಿ, ಹೀಗೆ ಮಙ್ಗಳವು ರಹಸ್ಯತ್ರಯವೆಂಬುವ ಗ್ರಂಥ ಮಧ್ಯದಲ್ಲಿ ಮಾಡುವದು ಯುಕ್ತವೋ? ಎಂದರೆ ಮಙ್ಗಳವನ್ನು ಗ್ರಂಥಾದಿಯಲ್ಲಿ ಮಾತ್ರವೇ ಅಲ್ಲದೆ, ಗ್ರಂಥಮಧ್ಯದಲ್ಲೂ ಮಾಡುವ ವಾಡಿಕೆಯೂ ಉಂಟು. ಅದೂ ಅಲ್ಲದೆ ಗ್ರಂಥವು ರಹಸ್ಯತ್ರಯಸಾರವೆಂದು ವ್ಯವಹರಿಸಲ್ಪಟ್ಟು, ಅಂತಹ ಸಾರವತ್ತಾದ ಮಂತ್ರಗಳ **ಅರ್ನೋಘಾರ್ಥಗಳು** ಮುಂದೆ ಉಪಪಾದಿಸಲ್ಪಡುವದರಿಂದ, ಅದಕ್ಕಾಗಿ ಪುನಃ ಮಙ್ಗಳಾಚರಣೆಯು ಸರ್ವ ಸಮಂಜಸವಾದುದು. ಆದುದರಿಂದ **ಕ್ಷಿಪತು** ಎಂಬ ಪಾಠವೇ ಸರ್ವ ಶ್ರೇಷ್ಠವು. ಮುಂದಿನ ಶ್ಲೋಕದಲ್ಲೂ **ಅವತು** ಎಂದು ಪ್ರಾರ್ಥನಾ ಲೋಟ್ ಇರುವದರಿಂದ **ಕ್ಷಿಪತು** ಎಂಬುದೇ ಇಲ್ಲಿಯೂ ಸೂಕ್ತವು **ಸಾರವಿವರಣಿ ಭಾಷ್ಯ**ದಲ್ಲಿ ಮಾತ್ರ **ಕ್ಷಿಪತಿ** ಎಂಬ ವರ್ತಮಾನ ಪಾಠವಿರುತ್ತದೆ. ಆಗಲೂ ಕೂಡ ಪ್ರಾರ್ಥನೆಯು ಲೋಟ್ ಅರ್ಥವೇ ತೋರಿಬರುತ್ತದೆ. ನಿಸ್ಸಂಶಯ ವಿಷಯದಲ್ಲೂ ಪ್ರಾರ್ಥನೆ ಇರಬಹುದು; ಹೇಗೆಂದರೆ ರಾಜರು ಪ್ರಜಾ ಸಂರಕ್ಷಣೆಗಾಗಿಯೇ ಸುಪ್ರತಿಷ್ಠಿತರಾಗಿರುವರೆಂದು **ಪರಿಪಾಲಯನ್ತಿ** ಎಂದು ಹೇಳತಕ್ಕದ್ದಾಗಿದ್ದರೂ "**ಪರಿಪಾಲಯಂತಾಂ ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ**" ಎಂಬ ನಮ್ಮಗಳ ಪ್ರಾರ್ಥನೆಯು ಹೇಗೋ ಹಾಗೆ ಎಂಬ ಭಾವವು.

ಈ ಗ್ರಂಥಕ್ಕೆ ಅಧಿಕಾರಿ ಯಾರೆಂಬುದು **ಅಲಸ ಮನಸಾಂ** ನಃ, ಎಂಬುದರಿಂದ ಬೋಧಿತವು. ಈ ಅಧಿಕಾರಿಗೆ ಉಪಾಯವು ಯಾವುದು ಎಂಬುದು **ಆತ್ಮರಕ್ಷಾಭರಸಮರ್ಪಣೆ** ಎಂದೂ, ಪ್ರಯೋಜನವೇನು ಎಂದರೆ ದೇವನು ಅದನ್ನು ಅಙ್ಗೀಕರಿಸಿ ಅನಿಷ್ಟನಿವೃತ್ತಿಯನ್ನುಂಟುಮಾಡುವದು. ಯಾವಾಗ ಅನಿಷ್ಟ ನಿವೃತ್ತಿಯುಂಟಾಯಿತೋ, ಆಗ ಅದು ಇಷ್ಟಪ್ರಾಪ್ತಿಗೂ ಅನುಕೂಲಿಸುತ್ತದೆಂಬುದು ಸೂಚಿತವು. ॥೫೯॥

**ಅವತಾರಿಕೆಯು**—ಹಿಂದಿನ ಶ್ಲೋಕದಲ್ಲಿ ಮಂತ್ರ ಸ್ವರೂಪವನ್ನು ತಿಳಿಸಿ

**ಕಲ್ಯಾಣ ಮಾನಹತು ಕಾರ್ತಯುಗಂ ಸ್ವಧರ್ಮಂ ಪ್ರಖ್ಯಾಪಯನ್ ಪ್ರಣಿ ಹಿತೇಷು ನರಾದಿಕೇಷು। ಆದ್ಯಂ ಕಮಪ್ಯಧಿಗತೋ ರಥ ಮಷ್ಟಚಕ್ರಂ ಬಂಧು ಸ್ಸತಾಂ ಬದರಿಕಾಶ್ರಮತಾಪಸೋ ನಃ ||೬೦||**

---

ಮಂಗಳಾಚರಣೆಯನ್ನು ಮಾಡಿದರು. ಈ ಶ್ಲೋಕದಲ್ಲಾದರೋ ಹಿಂದೆ ಉದಾಹರಿಸಿದ "**ಮನ್ತ್ರೇ ತದ್ದೇವತಾಯಾಂಚ ತಥಾ ಮನ್ತ್ರಪ್ರದೇ ಗುರೌ**" ಎಂಬ ಶ್ಲೋಕವನ್ನು ಮನಸ್ಸಿನಲ್ಲಿಟ್ಟು, ಈ ಮನ್ತ್ರಾಭಿಮಾನದೇವತೆಯೂ, ಹಾಗೆಯೇ ಮನ್ತ್ರವನ್ನು ಪ್ರಥಮತಃ ಉಪದೇಶಿಸಿದ ಮಹರ್ಷಿಯೂ, ಎಂದರೆ ಗುರುವೂ ಸಹ ಯಾರೆಂಬುದು ಹೇಳಲ್ಪಡುತ್ತವೆ. ಮಂತ್ರವನ್ನುಪದೇಶಿಸಿದ ಮಹರ್ಷಿಯು ಬದರಿಕಾಶ್ರಮವಾಸಿಯಾಗಿದ್ದುಕೊಂಡು ನಾರಾಯಣ ಋಷಿಯಾದುದರಿಂದ, ಈ ಮನ್ತ್ರದ ವಿಶದವಾದ ಅವಭಾಸವು ತಮಗೆ ಸ್ಫುರಿಸಲಿ ಎಂದು ಮಙ್ಗಳಾಚರಣೆಯನ್ನು ಮಾಡುತ್ತಾರೆ. ಈ ಮನ್ತ್ರದ ಜಪದಲ್ಲಿ ಅಙ್ಗನ್ಯಾಸ ಕರನ್ಯಾಸ ಹೃದಯಾದಿನ್ಯಾಸವನ್ನು ಹೇಳುವ ಸಂದರ್ಭದಲ್ಲಿ, **ಶ್ರೀಮದಷ್ಟಾಕ್ಷರ ಮಹಾಮನ್ತ್ರಸ್ಯ ಬದರಿಕಾಶ್ರಮವಾಸೀ ಶ್ರೀಮನ್ನಾರಾಯಣ ಋಷಿಃ**" ಎಂದು ಹೇಳಲ್ಪಡುವದು ಸ್ಮಾರಿತವು. ಹಿಂದಿನ ಶ್ಲೋಕದಲ್ಲಿ ಅನಿಷ್ಟನಿವೃತ್ತಿಯುಂಟಾಗಲೆಂಬ ಪ್ರಾರ್ಥನೆಯು. ಈ ಶ್ಲೋಕದಲ್ಲಾದರೋ ಇಷ್ಟಪ್ರಾಪ್ತಿಯುಂಟಾಗಲೆಂಬ ಪ್ರಾರ್ಥನೆಯು ಎಂದೂ ಭಾವಿಸಬಹುದು.

**ಅರ್ಥವು—ಪ್ರಣಿಹಿತೇಷು** - ಕೇಳಿ ತಿಳಿಯಬೇಕೆಂದು ಸಾವಧಾನರಾದ, **ನರಾದಿಕೇಷು** - ನಾರಾಯಣಾನುಜನೆನಿಸಿ ನರಾವತಾರಿಯಾಗಿರುವ **ಅರ್ಜುನ**ನು ಮತ್ತು ಆದಿ ಶಬ್ದದಿಂದ ನಾರದರೇ ಮೊದಲಾದವರುಗಳಲ್ಲಿ, **ಕಾರ್ತಯುಗಂ**— ಕೃತಯುಗಕ್ಕೆ ಸಂಬಂಧಪಟ್ಟ, ಎಂದರೆ ಕೃತಯುಗದಲ್ಲಿ ಅನುಷ್ಠಿಸಬಹುದಾದ, **ಸ್ವಧರ್ಮಂ** - ತನ್ನ ಧರ್ಮವನ್ನು ಎಂದರೆ ಬದರಿಕಾಶ್ರಮ ತಾಪಸಿಯ ಧರ್ಮವನ್ನು ಅದು ಯಾವುದು ಎಂದರೆ, ತನಗೆ ಅಭಿಮತನಾಗಿ ಆಯಾ ಅಧಿಕಾರಿಗೆ ವಿಧಿಸಲ್ಪಟ್ಟ ವರ್ಣಾಶ್ರಮ ಧರ್ಮಗಳನ್ನು ಫಲಾಭಿಸಂಧಿ ಮೊದಲಾದವು ಇಲ್ಲದೆ ಸಾತ್ವಿಕ ತ್ಯಾಗದೊಂದಿಗೆ, ಆ ಬದರಿಕಾಶ್ರಮತಾಪಸಿಯಲ್ಲಿ ಸಮರ್ಪಿಸಿ, ಅನುಷ್ಠಿಸುವ ಧರ್ಮವನ್ನು, ಅದು ಹೇಗೆ ಆತನ ಧರ್ಮವೆಂದರೆ ಭಾರತ ಶಾನ್ತಿಪರ್ವದಲ್ಲಿ **ಪ್ರವೃತ್ತಿಲಕ್ಷಣಂ ಧರ್ಮಂ ಪ್ರಜಾಪತಿ ರಥಾ ಬ್ರವೀತ್ । ನಿವೃತ್ತಿಲಕ್ಷಣಂ ಧರ್ಮ ಮೃಷಿರ್ನಾರಾಯಣೋ ಬ್ರವೀತ್**" ಎಂದೂ "**ಪ್ರವೃತ್ತಿಃ ಪುನರಾವೃತ್ತಿ ರ್ನಿವೃತ್ತಿಃ ಪರಮಾಗತಿಃ**" ಎಂದೂ (೨೯-೨, ೩, ೪) ಈ ಮೋಕ್ಷಪ್ರಾಪ್ತಿಯನ್ನುಂಟುಮಾಡುವ ಧರ್ಮವನ್ನು ಶ್ರೀ ನಾರಾಯಣ ಋಷಿಯು ಉಪದೇಶಿಸಿದುದರಿಂದ

ಸ್ವಧರ್ಮವೆಂದರೆ ನಿವೃತ್ತಿ ಧರ್ಮವು, ಅದನ್ನು, **ಪ್ರಖ್ಯಾಪಯನ್** - ತಮ್ಮ ಶಿಷ್ಯರಿಗೆ ಪ್ರಕಾಶಗೊಳಿಸುವವರಾಗಿ, ಸಿದ್ಧಾನ್ತಿಸಿ ವ್ಯಕ್ತಗೊಳಿಸುವವರಾಗಿ, **ಅಷ್ಟಚಕ್ರಂ** - ಅಷ್ಟಾಕ್ಷರ ಮಂತ್ರವಾದುದರಿಂದ ಎಂಟು ಚಕ್ರಗಳುಳ್ಳದೆಂದು ನಾರಾಯಣೀಯ ವಾಕ್ಯವಿರುವದರಿಂದ ಹಾಗೆ ಪ್ರಯೋಗವು, **ಆದ್ಯಂ** - ಮೂಲಮಂತ್ರವೆಂದು ವ್ಯವಹರಿಸಲ್ಪಟ್ಟು ಅನಾದಿಯಾಗಿ ಅಪೌರುಷೇಯವಾದ, **ಕಮಪಿರಥಮ್**- ಮಹತ್ತಾದ ಪ್ರಸಿದ್ಧಿಯನ್ನು ಹೊಂದಿ ರಥವೆಂದು ನಾರಾಯಣೀಯದಲ್ಲಿ ರೂಪಕ ಮಾಡಲ್ಪಟ್ಟ ಈ ಮೂಲ ಮನ್ತ್ರವನ್ನು, **ಅಧಿಗತಃ** - ಹೊಂದಿರುವ, ಎಂದರೆ ಮೋಕ್ಷಗಮನಕ್ಕೆ ಅರ್ಹವಾದ ಒಂದು ಯಾನವನ್ನು ಹೊಂದಿರುವ ಎಂಬ ಭಾವವು, **ಸತಾಂ ಬಂಧುಃ** - ಆತನ ಆಜ್ಞಾರೂಪ ನಿವೃತ್ತಿ ಧರ್ಮಗಳನ್ನನುಷ್ಠಿಸಿ ದ್ವಯಮನ್ತ್ರಮೂಲಕ ತನ್ನನ್ನು ಆಶ್ರಯಿಸಿದ ಪ್ರಾಜ್ಞರಿಗೆ ಪರಮ ಬಂಧುವಾದ, **ಬದರಿಕಾಶ್ರಮ ತಾಪಸಃ**-ಬದರಿಕಾಶ್ರಮ ಋಷಿಯಾದ ಶ್ರೀಮನ್ನಾರಾಯಣನು, **ನಃ**-ನಮಗೆ ಎಂದರೆ ತಮಗೂ ತಮ್ಮ ಶಿಷ್ಯವರ್ಗಕ್ಕೆ ಸೇರಿದ ಎಲ್ಲರಿಗೂ, **ಕಲ್ಯಾಣಂ**-ಮಙ್ಗಳವನ್ನು, **ಆವಹತು** - ಉಂಟುಮಾಡಲಿ ಎಂದರೆ ನಮಗೆ ಅಂತಹ ನಿವೃತ್ತಿ ಧರ್ಮದಲ್ಲಿ ಅಭಿರುಚಿಯನ್ನುಂಟುಮಾಡಿ, ಈ ಮೂಲ ಮನ್ತ್ರವನ್ನು ಜಪಿಸುತ್ತಾ, ಅದು ಬೋಧಿಸುವ ತೆರದಿ, ಶರಣಾಗತಿ ಮನ್ತ್ರದಿಂದ ಆತನನ್ನು ಆಶ್ರಯಿಸಿ, ಈ ಮೂಲ ಮನ್ತ್ರರಥವು ದಿವ್ಯ ವೈಕುಂಠನನ್ನು ಸೇರುವ ಹಾಗೆ ಮಾಡಲಿ ಎಂಬ ಪ್ರಾರ್ಥನೆಯು ॥ ೬೦ ॥

**ತಾತ್ಪರ್ಯವು—ನಃ ಕಲ್ಯಾಣಮಾವಹತು** ಎಂದು ಶ್ರೀ ನಿಗಮಾನ್ತ ದೇಶಿಕರು ಪ್ರಾರ್ಥಿಸಿರುವದು, ಅವರ ಪರಮೌದಾರ್ಯ ಭಾವವನ್ನು ಸೂಚಿಸುತ್ತದೆ. ಮಹನೀಯರಾದವರು ತಮಗೆ ಒಬ್ಬರಿಗೆ ಮಙ್ಗಳವನ್ನು ಕೋರುವದಿಲ್ಲವು; ತಮಗೂ ತಮ್ಮ ಶಿಷ್ಯಪ್ರಶಿಷ್ಯರಿಗೂ ಮಙ್ಗಳವನ್ನು ಕೋರುವದು ಅವರುಗಳ ಸ್ವಭಾವವು. ಹಾಗೆಯೇ ಶ್ರೀ ಪರಾಶರರೂ "**ಪ್ರದಿಶತು ಭಗವಾನಶೇಷ ಪುಂಸಾಂ ಹರಿರಪಜನ್ಮಜರಾದಿಕಾಂ ಸಮೃದ್ಧಿಮ್**" ಸಮಸ್ತ ಚೇತನರಿಗೂ ಜನ್ಮ ವಾರ್ಧಕ ಮರಣಾದ್ಯವಸ್ಥೆಗಳಿಲ್ಲದ ಮೋಕ್ಷಾನಂದ ಸಮೃದ್ಧಿಯನ್ನು ದಯಪಾಲಿಸಲೆಂದು ಪ್ರಾರ್ಥಿಸಿರುತ್ತಾರೆ. ಹಾಗೆ ಪರಮಾಚಾರ್ಯರುಗಳ ಪ್ರೀತಿಯು ಅಸದೃಶವಾದುದೆಂಬುದು ಇಲ್ಲಿ ತೋರಿಬರುತ್ತದೆ. "ಅರುಳ್ ಕಂಡೀರ್ ಇವ್ವುಲಗಿನಿಲ್ ಮಿಕ್ಕದೇ" ಶ್ರೀ ದೇಶಿಕರ ಪ್ರೀತಿಯು ಅತ್ಯನ್ತ ಮಹತ್ತಾದುದು. ಈಗಿನ ಪರಿಸ್ಥಿತಿಯಲ್ಲಿ ದ್ವೇಷಾಸೂಯೆಗಳಿಂದ ಲೋಕವು ಪೂರಿತವಾಗಿರುವಾಗ, ನಾವು ಸರ್ವರನ್ನೂ ಪ್ರೀತಿಯಿಂದ ನೋಡಬೇಕೇ ವಿನಾ ಯಾರನ್ನೂ ದ್ವೇಷಿಸಕೂಡದೆಂಬ ಹಿತೋಪದೇಶವನ್ನೂ ಸಹ ಇಲ್ಲಿ ನಾವು ಗ್ರಹಿಸಬಹುದು.

ಈ ಅಧರ್ಮಭೂಯಿಷ್ಠವಾದ ಕಲಿಯುಗದಲ್ಲೂ **ಕಾರ್ತಯುಗವಾದ** ಎಂದರೆ ಕೃತಯುಗಕ್ಕೆ ಅರ್ಹವಾಗಿ ತನಗೆ ತುಂಬಾ ಅಭಿಹಿತವಾಗಿ ಇರುವ ಸ್ವಧರ್ಮಾನುಷ್ಠಾನವು ಸಾಧ್ಯವೋ ಎಂದರೆ **ಮನುಷ್ಯಾಣಾಂ ಸಹಸ್ರೇಷು** ಕಶ್ಚಿದ್ಯತತಿ **ಸಿದ್ಧಯೇ** ಎಂಬಲ್ಲಿ (ಗೀ. ೭-೩) ಹೇಳಿರುವಹಾಗೆ ಅಂತವರು ತುಂಬಾ ದುರ್ಲಭವಾದರೂ ವಿರಳವಾಗಿಯಾದರೂ ಕೆಲವರು ಇರುವರು ಎಂಬುದನ್ನು **ಪ್ರಣಿಹಿತೇಷು ನರಾದಿಕೇಷು** ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ. ತನಗೆ ಬಂಧುವಾಗಿ ತನ್ನೊಂದಿಗೆ ಅವತಾರಿಯಾಗಿ ಬಂದಿರುವ ಅರ್ಜುನನೂ, ಮತ್ತು ಆದಿಶಬ್ದದಿಂದ ನಾರದಾದಿಗಳೂ ಉಂಟೆಂದು ಹೇಳಿದರು ; ಇವರೆಂತವರೆಂದರೆ ? **ಪ್ರಣಿಹಿತೇಷು**-ಐಹಿಕ ಮಮತೆಗಳನ್ನೆಲ್ಲಾ ತೊರೆದು **ಶಾಂತ**ಮನಸ್ಕರಾಗಿ ನ್ಯಾಸ ವಿದ್ಯೆಯಲ್ಲಿರುವ ಅಭಿರುಚಿಯಿಂದ ಬದರಿಕಾಶ್ರಮವಾಸಿಯ ಉಪದೇಶವನ್ನು ಗ್ರಹಿಸಬೇಕೆಂದು ಶ್ರೋತುಕಾಮರಾಗಿ ಸಾವಧಾನದಿಂದಿರುವವರು. ಈ **ಪ್ರಣಿಹಿತೇಷು ನರಾದಿಕೇಷು** ಎಂಬುದು ಈಗಿನ ಕಾಲದ ಪ್ರಪನ್ನರಿಗೂ ಅನ್ವಯಿಸುವ ಶ್ಲೇಷೆಯುಕ್ತವಾಗಿ ತೋರುತ್ತದೆ. ಹೇಗೆಂದರೆ—**ಪ್ರಣಿಹಿತೇಷು**-ಜ್ಞಾನವೈರಾಗ್ಯ ದಿಂದ ನ್ಯಾಸವಿದ್ಯೆಯನ್ನು ಅಧಿಕರಿಸಬೇಕೆಂಬ ಆದರದಿಂದ ಸಾವಧಾನದಿಂದ ಶ್ರೋತುಕಾಮರಾದ, **ನರಾದಿಕೇಷು** - ನ್ಯಾಸವಿದ್ಯೆಗೆ ವಿರುದ್ಧವಾದ ಐಹಿಕ ಕರ್ಮ ಫಲಗಳಲ್ಲಿ **ನರಮತ ಇತಿ ನರಃ** ಎಂಬ **ವ್ಯುತ್ಪತ್ತಿ**ಯ ಮೂಲಕ ಐಹಿಕಾದ್ಯುಪ ಭೋಗಗಳಲ್ಲಿ ರಮಿಸದೇ ಇರುವ ಮೋಕ್ಷಾರ್ಥಿಯಾಗಿರುವ ಪ್ರಪನ್ನರೂ, ಆದಿ ಪದದಿಂದ ಅವರಿಗೆ ಸೇರಿದವರೂ, ಹೇಳಲ್ಪಟ್ಟರು. ಅಧರ್ಮವು ಹೆಚ್ಚಿರುವ ಈ ಕಲಿಕಾಲದಲ್ಲೂ, ಹೀಗೆ ಸರ್ವಕಾಲದಲ್ಲೂ, ಅಂತಹ ಮಹನೀಯರ ಮೂಲಕವೇ ಕಾರ್ತಯುಗವಾದ ಸ್ವಧರ್ಮಾನುಷ್ಠಾನಮಹಿಮೆಯನ್ನು ವ್ಯಕ್ತಪಡಿಸಿ ಲೋಕೋಪಕಾರವನ್ನುಂಟುಮಾಡಬೇಕೆಂಬುದೇ ಶ್ರೀಮನ್ನಾರಾಯಣನ ಸತ್ಯ ಸಂಕಲ್ಪವು. **"ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾದಧರ್ಮಶೀಲಸ್ಯ ಸುದುಃಖಿತಸ್ಯ । ಅನುಗ್ರಹಾಯೈವ ಚರನ್ತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ"** ಪ್ರಾರಬ್ಧ ಕರ್ಮಾಧೀನರಾಗಿ, ಭಗವಂತನಿಂದ ವಿಮುಖರಾಗಿರುವ, ಆ ಕಾರಣದಿಂದ ಅಧರ್ಮ ಪ್ರವೃತ್ತಿಯುಳ್ಳ, ಆ ಕಾರಣದಿಂದಲೇ ಬಹು ದುಃಖಾನುಭವಗಳಿಗೆ ಒಳಗಾದ ಜನಕ್ಕೆ, ಅನುಗ್ರಹ ಮಾಡುವದಕ್ಕಾಗಿಯೇ ಸರ್ವದೇಶ ಸರ್ವ ಕಾಲಾದಿಗಳಲ್ಲೂ ಮಹಾನುಭಾವರಾದ ಭಾಗವತೋತ್ತಮರು ಸ್ವಾಮಿ ಸಙ್ಕಲ್ಪದಿಂದ ಸಂಚರಿಸುತ್ತಿರುವರು ಎಂದು ಹೇಳಲ್ಪಟ್ಟಿರುತ್ತದೆ. **ಪ್ರಣಹಿತರಾದ ನರಾದಿಗಳು** ಆಕಾಲದಲ್ಲಿದ್ದರು, ಈ ಕಾಲದಲ್ಲೂ ಅಂತವರನ್ನನುಸರಿಸಿವವರು ಇದ್ದಾರೆಂಬುದನ್ನು ಈ ಶ್ಲೋಕಾರ್ಥದಿಂದ ಗ್ರಹಿಸಬಹುದು. ಆವರುಗಳ ಆದ್ಯೋಪದೇಶವೇ ಇರುವಾಗ

ಬೇರೆ ಅಂತಹ ಮಹನೀಯರು ಏತಕ್ಕೆ? ಎಂದರೆ ಅಲ್ಲಿ ಮಾಹಾತ್ಮ್ಯವುಂಟೆಂದು ಹೇಳುವದಕ್ಕಾಗಿ ಬೇಕು; ಆಚಾರ್ಯನಿಲ್ಲದವನಿಗೆ ಯಾವಶ್ರೇಯಸ್ಸೂ ಇಲ್ಲವು; "ಆಚಾರ್ಯವಾನ್ ಪುರುಷೋ ವೇದ" ಎಂದಿರುವದರಿಂದ ಅಂತಹ ಪ್ರಣಿಹಿತ ನರಾದಿಗಳ ಮೂಲಕವೇ ಇಂತಹ ಪರಮ ಸುಕೃತ ಸಾಧಕವಾದ ಮಂತ್ರದ ಪ್ರಖ್ಯಾನವು ಸಾಧ್ಯವೆಂಬ ಭಾವವು ವ್ಯಕ್ತಗೊಳಿಸಲ್ಪಟ್ಟಿತು. ಈ ಮಂತ್ರಕ್ಕೆ ಮೂಲ ಮಂತ್ರವೆಂಬ ಹೆಸರು ಇರುವದರಿಂದಲೇ ಆದ್ಯಂ ಎಂಬ ಪ್ರಯೊಗವು. ಈ ಮಂತ್ರಕ್ಕೆ ಕನುಷಿ ಎಂದು ಹೇಳಿದ ಪ್ರಸಿದ್ಧಿಯೂ, ಅಷ್ಟಚಕ್ರವುಳ್ಳ ರಥ ವೆಂಬ ಪ್ರಯೋಗವೂ, ಹೇಗೆ? ಎಂದರೆ ನಾರಾಯಣೀಯದಲ್ಲಿ ಹೇಳಿರುವದನ್ನು ಅನುಸಂಧಾನ ಮಾಡಬಹುದು. "ಬದರ್ಯಾಶ್ರಮ ಮಾಸಾದ್ಯ ಶಕಟೀ ಕನಕಾಮಯೀ। ಅಷ್ಟಚಕ್ರಂ ಹಿ ತದ್ಯಾನಂ ಭೂತಯುಕ್ತಂ ಮನೋಹರಮ್ (ಜವಮ್)। ತತ್ರಾದ್ಯೌ ಲೋಕ ನಾಥೌ ತೌ ಕೃಶೌ ಧಮನಿ ಸಂತತೌ। ನರನಾರಾಯಣೌ ಪೂರ್ವಂ ತಪಸ್ತೇಪತು ರುತ್ತಮಮ್। ಧರ್ಮಯಾನ ಸಮಾರೂಢೌ ಪರ್ವತೇ ಗಂಧ ಮಾದನೇ" ॥ ಈ ಬದರಿಕಾಶ್ರಮ ತಾಪಸಿಯು ಸತಾಂ ಬಂಧುಃ ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀ ಯಾಮುನ ಮುನಿಗಳೂ ಸ್ತೋತ್ರ ರತ್ನದಲ್ಲಿ "ಪಿತಾತ್ವಂ ಮಾತಾತ್ವಂ ದಯಿತ ತನಯಸ್ತ್ವಂ ಪ್ರಿಯ ಸುಹೃತ್ತ್ವಮೇವ ತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಂ" ಎಂದು ಸರ್ವವಿಧ ಬಂಧುವೂ ನೀನೇ ಎಂದು ಹೇಳಿರುತ್ತಾರೆ. ಹಾಗೆಯೇ ಲಕ್ಷ್ಮಣನು ಶ್ರೀರಾಮನನ್ನು ಕುರಿತು ಅಹಂ ತಾವನ್ಮಹಾರಾಜೇ ಪಿತೃತ್ವಂ ನೋಪಲಕ್ಷಯೇ। ಭರ್ತಾ ಬಂಧುಶ್ಚ ಭ್ರಾತಾಚ ಪಿತಾಚ ಮಮ ರಾಘವಃ" ಎಂದು ಹೇಳಿಕೊಂಡಿರುತ್ತಾನೆ. ಹಾಗೆಯೇ "ಪಿತಾಮಹಸ್ಯ ಜಗತೋ ಮಾತಾ ಧಾತಾ ಪಿತಾಮಹಃ (ಗಿ. ೯-೧೭) ಎಂಬ, "ಪಿತಾ ಚ ರಕ್ಷಕ ಶ್ಶೇಷೀ ಭರ್ತಾಜ್ಞೇಯೋ ರಮಾಪತಿಃ। ಸ್ವಾಮ್ಯಾಧಾರೋ ಮಮಾತ್ಮಾ ಚ ಭೋಕ್ತಾ ಚಾದ್ಯ ಮನೂದಿತಃ" ಎಂಬ ಉಕ್ತಿಗಳೂ ಇಲ್ಲಿ ಅನುಸಂಧೇಯಗಳು. ಈ ಎರಡನೆಯ ಶ್ಲೋಕದ ಮೂಲಕ ಪರಮಾತ್ಮನಿಗೂ, ಜೀವಾತ್ಮನಿಗೂ ನವವಿಧ ಸಂಬಧವೂ ಹೇಳಲ್ಪಟ್ಟಿತು. ಇವೆಲ್ಲಾ ಯೋನಃ ಪಿತಾ ಜನಿತಾ, ಯೋವಿಧಾತಾ" (ಋಗ್ವೇದ) ಮತ್ತು "ಸರ್ವಸ್ಯ ಶರಣಂ ಸುಹೃತ್" ಎಂಬ ಶ್ರುತಿವಾಕ್ಯಗಳ ಉಪಪಾದನೆಯು. ಬಂಧುಸ್ಸತಾಂ ಎಂದು ಹೇಳಿರುವದರಿಂದ ಅಸತ್ತುಗಳಿಗೆ ಬಂಧುವಲ್ಲವೆಂಬರ್ಥವಲ್ಲವು. ಸಮಸ್ತ ಜೀವ ರಾಶಿಯೂ ಆತನದೇ ಆಗಿರುವದರಿಂದ ಬಂಧುತ್ವವಿಲ್ಲವೆಂಬರ್ಥವಲ್ಲವು. ದುಷ್ಟನಾಗಿ ದುಷ್ಕರ್ಮಗಳನ್ನು ಎಸೆಗುವ ಮಗನೂ ತಂದೆಗೆ ಮಗನಲ್ಲವೇ? ಆತನೂ ಕೂಡ ಸುಚರಿತನಾಗಬೇಕೆಂಬ ಕುತೂಹಲವು ತಂದೆಗೆ ಇರುವದಿಲ್ಲವೇ? ಹಾಗೆಯೇ ಪರಮಪುರುಷನಿಗೂ ಕೂಡ ದುರ್ಮಾರ್ಗದಲ್ಲಿದ್ದು ಅಧರ್ಮಪ್ರವೃತ್ತಿ ಇರುವ ಚೇತನನಲ್ಲಿ ಕನಿಕರವೂ, ಆತನು ಹೇಗಾದರೂ ಸಾತ್ವಿಕನಾಗಬೇಕೆಂಬುದೂ, ಆತ

ನಿಗೆ ಉಂಟು. ತನಗೆ ಸಮಾನವಾದ ಭೋಗವನ್ನು ಕೊಡಲು ಅನರ್ಹನೇ ಎಂದು ಆತನಿಗೆ ಕೊಡತಕ್ಕ ಭಾಗವನ್ನು, ಅನರ್ಹನಾದ ಮಗನಿಗೆ ತಂದೆಯು ಯಾವ ತೆರದಿ ಕೊಡದೇ ಬೇರೆ ಅವನಿಗಾಗಿಯೇ ತೆಗದಿಟ್ಟಿರುತ್ತಾನೋ, ಹಾಗೆಯೇ ತನಗೆ ಸಮಾನವಾದ ಭೋಗವನ್ನು ಅವನಿಗೆ ಕೊಡದೇ ಇರುವನೆಂಬ ಭಾವವು. ಇವನು ಅರ್ಹನಾದರೆ ಇವನೂ ಆಗ ಬಂಧುವಾಗುವದರಿಂದ ಆತನ ಯೋಗಕ್ಷೇಮವನ್ನು ವಹಿಸುವನೆಂಬ ಭಾವವು. ಆದುದರಿಂದ ಬಂಧುತ್ವದ ಅಭಿಪ್ರಾಯವೇನೆಂದರೆ ರಾಮಾಯಣದಲ್ಲಿ **ರಕ್ಷಿತಾ ಜೀವಲೋಕಸ್ಯ ಸ್ವಜನಸ್ಯಚ ರಕ್ಷಿತಾ"** ಎಂಬಲ್ಲಿ ಹೇಳಿರುವ ಅಭಿಪ್ರಾಯವು. ಸ್ವಜನರು, ಎಂದರೆ ಸ್ವಬಂಧುಗಳು ಅವರು ಯಾರೆಂದರೆ ತನ್ನನ್ನು ಆಶ್ರಯಿಸಿ, ಶರಣಾಗತಿಯನ್ನನುಷ್ಠಿಸಿದ ಪ್ರಪನ್ನರು ಎಂಬ ಭಾವವು. ಗೀತೆಯಲ್ಲಿನ **ಕ್ಷಿಪಾಮ್ಯಜಸ್ರಂ** ಎಂಬಲ್ಲಿಯೂ ಇದೇ ಭಾವವು. ನನ್ನ ಶಾಸ್ತ್ರದ ಕಟ್ಟಳೆಯನ್ನನುಸರಿಸಿ ನಡೆಯದೆ ಮೀರಿದವನಿಗೆ ದಂಡನೆಯನ್ನು ವಿಧಿಸಬೇಕಾಗಿರುತ್ತದೆ ಎಂಬ ಭಾವವು. **ಬದರಿಕಾಶ್ರಮತಾಪಸಃ** ಎಂಬ ಪ್ರಯೋಗದಿಂದ ಇಂತಹ ಮೂಲಮಂತ್ರಾರ್ಥ ಪ್ರದರಾದ ಗುರುಗಳಾಗಬೇಕಾದರೆ, ಹೀಗೆ ಮಹಾ ವಿರಕ್ತಿಯಿಂದ ಪರ್ಣಶಾಲೆಯಲ್ಲಿದ್ದು, ಯೋಗ್ಯರಾದ ಶಿಷ್ಯರು ದೊರೆಯುತ್ತಾರೆಯೇ ಎಂದು ಕಾದಿದ್ದು, ಬಹುದಯಾಳುವಾಗಿ ಸ್ವಾರಸ್ಯಾರ್ಥವನ್ನೆಲ್ಲಾ ಉಪದೇಶಿಸಿ, ಉಪಾಯಾನುಷ್ಠಾನದಲ್ಲಿ ಅಭಿರುಚಿಯನ್ನುಂಟುಮಾಡಿ, ಅವರಿಗೆ ದೈವಾನುಗ್ರಹ ಉಂಟಾಗುವ ಹಾಗೆ ಮಾಡತಕ್ಕವರಾಗಿರಬೇಕೆಂದೂ, ಇದು ಅಂತವರ ಇತಿಕರ್ತ್ತವ್ಯತೆಯೆಂಬುದನ್ನೂ, ಕೆಲವು ಸನ್ಯಾಸಿಗಳ ಹಾಗೆ ತನ್ನಷ್ಟಕ್ಕೆ ತಾನು ವಿರಕ್ತಿಯಲ್ಲಿ ಇದ್ದುಬಿಟ್ಟು, ತನಗೂ ತಾನು ಇಹದಲ್ಲಿ ಉಪಯೋಗವಿಲ್ಲದೆಯೂ, ಇತರರಿಗೂ ಉಪಯೋಗವಿಲ್ಲದೆಯೂ ಇರತಕ್ಕದ್ದು ನ್ಯಾಯವಲ್ಲವೆಂಬುದನ್ನೂ, **"ಪ್ರಹ್ವಾಪರ್ಯ"** ಎಂಬ ಪ್ರಯೋಗದಿಂದ ಗ್ರಹಿಸತಕ್ಕದ್ದಾಗಿರುತ್ತದೆ. ಈ ಸಂದರ್ಭದಲ್ಲಿ **ಪಕ್ಷೀ ಚ ಶಾಖಾನಿಲಯಂ ಪ್ರವಿಷ್ಟಃ ಪುನಃ ಪುನಶ್ಚೋತ್ತಮಸಾಂತ್ವವಾದೀ। ಸುಸ್ವಾಗತಾಂ ವಾಚ ಮುದೀರಯಾನಃ ಪುನಃಪುನಶ್ಚೋದಯತೀ ವ ಹೃಷ್ಟಃ"** (ರಾಮಾ. ಸುಂದರ) ಎಂಬಲ್ಲಿ ವ್ಯಕ್ತವಾದ ವ್ಯಙ್ಗ್ಯಾರ್ಥವು ಅನುಸಂಧೇಯವು. **ಪಕ್ಷೀ** - ಶ್ರುತಿಯಲ್ಲಿ ಸುಪರ್ಣ ಶಬ್ದದಿಂದ ಬೋಧಿತನಾದ ಆಚಾರ್ಯ ಸ್ಥಾನದಲ್ಲಿರುವ ಆತ್ಮನು, ಪಕ್ಷಿಗೆ ಎರಡು ರೆಕ್ಕೆಗಳಿಂದ ಹೇಗೆ ಗಮನವೋ, ಹಾಗೆಯೇ ಈ ಆಚಾರ್ಯನು ದಿವ್ಯ ವೈಕುಂಠವನ್ನು ಕುರಿತು ಹೋಗುವ ಗಮನಕ್ಕೆ ಸಾಧನವಾದ ಅಙ್ಗಾಙ್ಗಭಾವದಿಂದ ಸೇರಿರುವ ಕರ್ಮಜ್ಞಾನಗಳೆಂಬ ರೆಕ್ಕೆಯುಳ್ಳವನು, **ಶಾಖಾನಿಲಯಂ ಪ್ರವಿಷ್ಟಃ** - ವಿರಕ್ತಿ ಭಾವದಿಂದ ಎಲ್ಲವನ್ನೂ ತೊರೆದು ಪರ್ಣಶಾಲೆಯನ್ನು ಹೊಂದಿದವನಾಗಿ, ಅಥವಾ ವೇದಶಾಖೆಗಳಾದ ವೇದಾಂತಾರ್ಥದಲ್ಲಿ ಪ್ರವೀಣನಾಗಿ, ಈ ಗುರುವಾದ ಆಚಾರ್ಯನು ಹೇಗಿರಬೇಕೆಂದರೆ **ಆಚಾರ್ಯೋ ವೇದಸಂಪನ್ನೋ ವಿಷ್ಣುಭಕ್ತೋ ವಿಮತ್ಸರಃ। ಮನ್ತ್ರಜ್ಞೋ ಮನ್ತ್ರಭಕ್ತಶ್ಚ ಸದಾಮನ್ತ್ರಾಶ್ರ**

ಯಶ್ಶುಚಿಃ । ಗುರುಭಕ್ತಿ ಸದಾಯುಕ್ತಃ ಪುರಾಣಜ್ಞೋ ವಿಶೇಷತಃ । ಏವಂ ಲಕ್ಷಣ ಸಂಪನ್ನೋ ಗುರುರಿತ್ಯಭಿಧೀಯತೇ" ಇದರ ಅರ್ಥವು ವ್ಯಕ್ತವು; ಇಂತಹ ಆಚಾರ್ಯನೀಗ ಉಪದೇಶಿಸಲು ಯೋಗ್ಯನಾದ ಗುರುವು, ಇಂತವನೀಗ ಆಶ್ರಮತಾಪಸ ನೆರಬ ಶಬ್ದದಿಂದ ಬೋಧಿತನು; ಇವನು ಉತ್ತಮ ಸಾಂತ್ವ ನಾಧೀ ಎಂದರೆ ತತ್ತ್ವಹಿತ ಪುರುಷಾರ್ಥಗಳಾದ ಉತ್ತಮ ವಿಷಯಗಳ ಸಾಂತ್ವ ವಾದ ಶೀಲನಾಗಿರಬೇಕು, ಸುಸ್ವಾಗತಾಂ ವಾಚಮುದೀರಯಾನಃ - ಚನ್ನಾಗಿ ತನಗೆ ಸಂಪ್ರದಾಯರೀತಿಯಲ್ಲಿ ಆಚಾರ್ಯ ಪರಂಪರೆಯ ಅನುಗ್ರಹದಿಂದ ಬಂದ ಅಷ್ಟಾಕ್ಷರಮಂತ್ರವೇನು ಅದರ ಅರ್ಥಗಳೇನು ಎಲ್ಲವನ್ನೂ ವಿಚ್ಛೇದವಿಲ್ಲದಹಾಗೆ ಸಚ್ಛಿಷ್ಯರಿಗೆ ಉಪದೇಶಿಸುವನಾಗಿರಬೇಕು. ಪುನಃ ಪುನಶ್ಚೋದಯತಿ-ಶಿಷ್ಯರ ಮನಸ್ಸು ಹಿಡಿಯುವಹಾಗೆ ಬೇಸರವಿಲ್ಲದೆ ಪತಿಯು ತನ್ನ ಮನಃಕಾಂತಳಿಗೆ ಉಪ ದೇಶಿಸುವರೀತಿಯಲ್ಲಿ ಸ್ವಲ್ಪವಾಗಲಿ ಖೇದ, ಬೇಸರ, ಕೋಪ ಮೊದಲಾದವುಗಳಿಲ್ಲದೆ ಸಂತುಷ್ಟಚಿತ್ತನಾಗಿ ಉಪದೇಶಿಸತಕ್ಕದ್ದು. ಆಚಾರ್ಯರಿಂದ ಅಧಿಕರಿಸಿದುದನ್ನು ತಾನು ಉಪದೇಶಿಸುವದು, ಋಣವಿಮೋಚನರೂಪ ಸ್ವಪ್ರಯೋಜನವೆಂದು ಭಾವಿಸಿ ಸಂತೋಷಚಿತ್ತನಾಗಿ ಉಪದೇಶಿಸತಕ್ಕದ್ದೆಂಬೀ ಸ್ವಾರಸ್ಯಾರ್ಥಗಳೂ ಈ ಶ್ಲೋಕ ದಲ್ಲಿ ತೋರಿಬರುತ್ತವೆ. ಅಂತಹ ಗುರುವಾಗಿ ಆಚಾರ್ಯಸ್ಥಾನದಲ್ಲಿ ಈ ನಾರಾ ಯಣ ಮಹರ್ಷಿಯು ಇರತಕ್ಕದ್ದೆಂಬ ಭಾವವನ್ನು ಬದರಿಕಾಶ್ರಮ ತಾಪಸೋನಃ ಎಂಬ ಪ್ರಯೋಗವು ಸೂಚಿಸುತ್ತದೆ. ಅಂತಹ ಆಚಾರ್ಯ ಸ್ಥಾನಾರ್ಹನಾದ ಗುರುವು ಎಲ್ಲಿ ವಸಿಸತಕ್ಕದ್ದು ಎಂದರೆ ಪರಮ ಪವಿತ್ರವಾದ ಬದರಿಕಾಶ್ರಮ ತುಲ್ಯವಾದ ಪುಣ್ಯಕ್ಷೇತ್ರಗಳಾದ ಶ್ರೀರಂಗ, ಕಾಂಚೀಪುರ, ತಿರುಮಲೆ ತಿರುನಾರಾಯಣಪುರವೇ ಮೊದಲಾದ ದಿವ್ಯದೇಶದಲ್ಲಿ ವಸಿಸತಕ್ಕದ್ದೆಂದು ಹಿಂದೆ ಸ್ಥಾನವಿಶೇಷಾಧಿಕಾರದಲ್ಲಿ ಉಪಪಾದಿತಾರ್ಥವೂ ಬೋಧಿತವು. ॥ ೬೦ ॥

ಶ್ರೀ ನಿಗಮಾನ್ತ ದೇಶಿಕರಾದ ಗುರುಸ್ಥಾನೀಯ ಆಚಾರ್ಯರು, "ಮನ್ತ್ರೇತದ್ದೇವತಾಯಾಂಚ ತಥಾ ಮನ್ತ್ರ ಪ್ರದೇಗುರೌ । ತ್ರಿಷುಭಕ್ತಿಸ್ಸದಾಕಾರ್ಯಾ ಸಾಹಿ ಪ್ರಥಮ ಸಾಧನಮ್"॥ ಎಂದು ಹೇಳಿರುವಹಾಗೆ ತಮಗಿರುವ ಈ ಅಷ್ಟಾಕ್ಷರ ಮನ್ತ್ರದಲ್ಲಿರುವ ನಿರತಿಶಯ ಭಕ್ತಿಯನ್ನು ಪ್ರದರ್ಶಿಸುವದಕ್ಕಾಗಿ, ಈ ಮಹತ್ತಾದ ಮನ್ತ್ರವನ್ನು ಕುರಿತು ನಮಿಸುತ್ತಾರೆ:—ಹಾಗೆ ಪ್ರಣಾಮವನ್ನೆಸಗುವದರಲ್ಲಿ ಅವರ ಅಭಿಪ್ರಾಯವೇನೆಂದರೆ—ಅದರಲ್ಲಡಗಿರುವ ಸಮಸ್ತಾರ್ಥಗಳೂ ಬೋಧಿತವಾಗಿ ಅದು ತಮ್ಮ ಶಿಷ್ಯವರ್ಗಕ್ಕೆ ಸೇರಿಡ ಅಸ್ಮದಾದಿಗಳಿಗೆಲ್ಲಾ ಅದರ ಮಾಹಾತ್ಮ್ಯೆಯು ಪ್ರಕಾಶಿಸಲಿ ಎಂಬುದು.

ಅರ್ಥವು—ಈ ಮೂಲಮನ್ತ್ರವು, ಮಹತ್ತಾದ ಮನ್ತ್ರವೆಂದು ಭಾವಿಸಿ ಅದರ ಸ್ತೋತ್ರಮೂಲಕ ನಮಸ್ಕರಿಸಿ ಮಙ್ಗಳಾಚರಣೆಯನ್ನು ಮಾಡುತ್ತಾರೆ.— ಅದು ಹೇಗೆ ಮಹತ್ತಾದುದೆಂಬುದನ್ನು ತಿಳಿಸುತ್ತಾರೆ—ವೇದವೈದಿಕವ್.

ಶ್ಲೋ. ಯದಂತಸ್ಥಮಶೇಷೇಣ ವಾಙ್ಮಯಂ ವೇದವೈದಿಕಮ್ ।
ತಸ್ಮೈ ವ್ಯಾಪಕಮುಖ್ಯಾಯ ಮನ್ತ್ರಾಯ ಮಹತೇ ನಮಃ ॥ ೬೧ ॥

ವೇದ-ನಾಲ್ಕು ವೇದಗಳ, ಇದರಿಂದ ಅವುಗಳ ಸಾರವತ್ತಾದ ಭಾಗವಾದ ಉಪನಿಷತ್ತುಗಳು ಮುಖ್ಯವಾಗಿ ಹೇಳಲ್ಪಟ್ಟವು, **ವೈದಿಕಮ್**-ಆ ವೇದಗಳನ್ನನುಸರಿಸಿಯೇ ಉಪದೇಶಿಸುವ ತತ್ಸಂಬಂಧವಿರುವ ಸ್ಮೃತಿ **ಪುರಾಣೇತಿಹಾಸ**ಗಳು, ಹೀಗೆ ಶ್ರುತಿ ಸ್ಮೃತ್ಯಾದಿರೂಪವಾದ, **ವಾಙ್ಮಯಂ** - ವಾಕ್ಕಿನಿಂದ **ಹೇ**ಳಲ್ಪಡುವ ಶಬ್ದರಾಶಿಯು, **ಅಶೇಷೇಣ** - ಅವುಗಳಲ್ಲಿ ಪ್ರಪನ್ನನಿಗೆ ಬೇಕಾಗಿರುವ ಒಂದನ್ನೂ ಬಿಡದ ಹಾಗೆ ಸಮಸ್ತವೂ, **ಯದಂತಸ್ಥಂ** - ಯಾವ ಮೂಲಮನ್ತ್ರದಲ್ಲಿ ತತ್ವಹಿತ **ಪುರುಷಾ**ರ್ಥಗಳಾದ ಸಮಸ್ತ ಅಭಿಪ್ರಾಯಗಳೂ, ಅಡಗಿವೆಯೋ, **ತಸ್ಮೈ** - ಅಂತಹ **ವ್ಯಾಪಕಮುಖ್ಯಾಯ** - ಷಡಕ್ಷರ, ದ್ವಾದಶಾಕ್ಷರ ಮೊದಲಾದ ವ್ಯಾಪಕಮನ್ತ್ರಗಳಲ್ಲಿ ಮುಖ್ಯವಾದ, **ಮಹತೇ ಮನ್ತ್ರಾಯ** - ತತ್ವಹಿತ ಪುರುಷಾರ್ಥಗಳನ್ನೆಲ್ಲಾ ಸಮಗ್ರವಾಗಿ ಯಥಾವತ್ತಾಗಿ ಪ್ರಕಾಶಪಡಿಸುವ ಸ್ವರೂಪವುಳ್ಳದಾದುದರಿಂದ ಮಹತ್ತಾದ ಮಹಿಮೆಯುಳ್ಳ, ಮನ್ತ್ರಾಯ ನಮಃ - ಮನ್ತ್ರಬ್ರಹ್ಮಕ್ಕೆ ನಮಸ್ಕಾರವು. ॥೬೧॥

**ತಾತ್ಪರ್ಯವು**— ಈ ಮನ್ತ್ರಕ್ಕೆ ಪರಮ ಮಾಹಾತ್ಮ್ಯೆಯು ಹೇಗೆ ಎಂಬುದನ್ನು ಪೂರ್ವಾರ್ಧದಿಂದ ತಿಳಿಸುತ್ತಾರೆ—ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿ, ಮೋಕ್ಷಾರ್ಥಿಯಾಗಿ ಪ್ರಪನ್ನನಾಗಲು ಯಾವ ಸಾರಭೂತಾರ್ಥಗಳು ಬೇಕೋ, ಅವೆಲ್ಲವೂ ಇವರಲ್ಲಿ ಅಡಗಿರುವದರಿಂದ ಅದಕ್ಕೆ ವಿಶೇಷ ಮಾಹಾತ್ಮ್ಯೆಯು ಎಂದು ಹೇಳುತ್ತಾರೆ. **ವಾಙ್ಮಯಮ್** ಎಂಬ ಪ್ರಯೋಗವು, ಪ್ರಥಮತಃ ಪರಮಾತ್ಮ ನಿಶ್ವಸನರೂಪವಾಗಿ, ಅನಂತರ ಉಚ್ಚಾರಣಾನುಚ್ಚಾರಣ ರೂಪದಲ್ಲಿ ಗುರುವಿಂದ ಶಿಷ್ಯನಿಗೂ, ಶಿಷ್ಯನಿಂದ ಪ್ರಶಿಷ್ಯನಿಗೂ, ಹೀಗೆ ಅಧ್ಯಯನ ಅಧ್ಯಾಪನರೂಪದಲ್ಲಿ ಉಪದೇಶವಾದುದರಿಂದಾಗಲಿ **ವಾಙ್ಮಯವು**; ಅಥವಾ **ಅಕಾರೋವೈ ಸರ್ವವಾಕ್** ಎಂಬ ಶ್ರುತ್ಯನುಸಾರವಾಗಿಯಾಗಲಿ **ವಾಙ್ಮಯವು**. ವೇದ ವೈದಿಕವೆಲ್ಲಾ ಅಕ್ಷರರಾಶಿಯಾದ ಪ್ರಯುಕ್ತವಾಗಲಿ **ವಾಙ್ಮಯಂ** ಎಂಬ ಪ್ರಯೋಗವು. ಅಷ್ಟಾಕ್ಷರ ಮನ್ತ್ರವು ಶ್ರುತಿಯಲ್ಲಿ ನಾರಾಯಣಾನುವಾದಕದಲ್ಲಿ ಉಪಪಾದಿಸಲ್ಪಟ್ಟು, ಅದರ ಮಾಹಾತ್ಮ್ಯೆಯು, **ತತೋಽಮೃತತ್ವಮಶ್ನುತೇ** ಎಂದೂ, **ನಾರಾಯಣಸಾಯುಜ್ಯಮವಾಪ್ನೋತಿ** ಎಂದೂ, ಮುಗಿಸಿರುವದರಿಂದ **ಸುವ್ಯಕ್ತವು**. ಹೀಗೆ ಅಷ್ಟಾಕ್ಷರ ಮನ್ತ್ರವು ಶ್ರುತಿಸ್ಮೃತ್ಯಾದಿಗಳಲ್ಲಿ **ಪ್ರತಿಪಾದ್ಯ**ವಾಗಿರುವದೂ ಅಲ್ಲದೆ, ಆ ಮನ್ತ್ರದಲ್ಲೇ ಪ್ರಪನ್ನನಿಗೆ ಬೇಕಾದ ಸರ್ವವೂ ಅಂತರ್ಗತವಾಗಿದೆ ಎಂದು ಹೇಳುವದಕ್ಕಾಗಿ **ಅಶೇಷೇಣ ಯದಂತಸ್ಥಮ್** ಎಂಬ ಪ್ರಯೋಗವು. ಈ ಪ್ರಯೋಗವು "**ವಾಚೀಮಾ ವಿಶ್ವಾ ಭುವನಾ ನ್ಯರ್ಪಿತಾ । ಋಚೋಯಜೂಂಷಿ ಸಾಮಾನಿ ತಥೈವಾಥರ್ವಣಾನಿಚ । ಸರ್ವಂ ಅಷ್ಟಾಕ್ಷರಾಂತಸ್ಥಂ ಯಚ್ಚಾನ್ಯದಪಿವಾಙ್ಮಯಮ್**" ಎಂಬ

**ಶ್ಲೋ. ಇಹಮೂಲಮನ್ತ್ರ ಸಂವೃತ ಮರ್ಥ ಮಶೇಷೇಣ ಕಶ್ಚಿದನುಭವತಿ।**
**ಸ್ಫಟಿಕ ತಲನಿಹಿತ ನಿಧಿಮಿವ ದೇಶಿಕದತ್ತೇನ ಚಕ್ಷುಷಾ ಜನ್ತುಃ ॥೬೨॥**

ಪ್ರಮಾಣವನ್ನು ಅನುಸರಿಸಿದಂತಾಯಿತು. ಎಲ್ಲಾ ವೇದಾರ್ಥಗಳೂ ಈ ಮೂಲ ಮನ್ತ್ರದಲ್ಲೇ ಅಡಗಿವೆ ಎಂಬ ಪ್ರಮಾಣದ ಬಲವಿರುವದರಿಂದ, ಈ ಮೂಲಮಂತ್ರವು ಸಕಲ ವೇದಗಳ ಮತ್ತು ತದುಪಬ್ರಹ್ಮಣಗಳ ಸಾರವತ್ತಾದ ಅರ್ಥಗಳ ಸಙ್ಗ್ರಹ ವೆಂಬ ಭಾವವು. ವ್ಯಾಪಕ ಮನ್ತ್ರಗಳು ದ್ವಾದಶಾಕ್ಷರವಾದ ವಾಸುದೇವ ಮನ್ತ್ರವೂ, ಷಡಕ್ಷರವಾದ ವಿಷ್ಣುಮಂತ್ರವು ಇತ್ಯಾದಿಗಳು. ಇವುಗಳಲ್ಲಿ ಅಷ್ಟಾಕ್ಷರವು ಮುಖ್ಯವಾದುದರಿಂದ **ವ್ಯಾಪಕಮುಖ್ಯಾಯ** ಎಂಬ ಪ್ರಯೋಗವು. ವ್ಯಾಪ್ಯ ವ್ಯಾಪಕಗಳ ವ್ಯಾಪ್ತಿಯು ಕಂಠೋಕ್ತಿ ಇರುವದರಿಂದಲಾಗಲಿ ವ್ಯಾಪಕ ಮುಖ್ಯವಾದ ಮಂತ್ರವು. ಅಥವಾ ಅದರಲ್ಲಿ ಮಹತ್ತಾದ ಅರ್ಥಗಳು ಶಾಬ್ದವಾಗಿಯೂ ಆರ್ಥವಾಗಿಯೂ ತೋರಿಬರುವದರಿಂದಾಗಲಿ, ಅಥವಾ ಮಹತ್ತಾದ ನಿರತಿಶಯ ಪ್ರಯೋಜನ ಪ್ರತಿಪಾದ್ಯವಾಗಿರುವದರಿಂದಲಾಗಲಿ "**ಮಹತೇ ಮನ್ತ್ರಾಯನಮಃ**" ಎಂಬ ಪ್ರಯೋಗವು ಮಂತ್ರ ಶಬ್ದದ ಅರ್ಥವು **ಮನ್ತಾರಂತ್ರಾಯತೇ ಇತಿ ಮನ್ತ್ರಃ** ಎಂದಾದುದರಿಂದ, ಜನ್ಮ ಜರಾಮರಣಾದಿ ದುಃಖಗಳಿಂದ ರಕ್ಷಿಸುವಂತಾದ್ದೆಂಬ ಭಾವವು.

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ತತ್ವಹಿತ ಪುರುಷಾರ್ಥ ಮೊದಲಾದ ಸಕಲ ಶಾಸ್ತ್ರಾರ್ಥಗಳು ಅಷ್ಟಾಕ್ಷರದಲ್ಲಿ ಅಡಗಿವೆ ಎಂದೂ, ಆದುದರಿಂದಲೇ ಅದು ಮಹತ್ತಾದ ಪ್ರಭಾವವುಳ್ಳದೆಂದೂ, ಹೇಳಿದರು. ಹಾಗಾದರೆ ಅವೆಲ್ಲವನ್ನೂ ಸರಿಯಾಗಿ ತಿಳಿದಿರುವ ಸತ್ಸಂಪ್ರದಾಯ ಸಿದ್ಧರಾದ ಸದಾಚಾರ್ಯರು ದೊರೆಯುವರೋ? ಅದು ಯಾರಿಗೆ ವೇದ್ಯವು? ಇತ್ಯಾದಿ ಶಙ್ಕೆಗಳಲ್ಲಿ ಸದಾಚಾರ್ಯ ಕಟಾಕ್ಷದಿಂದ ಎಲ್ಲೋ ಒಬ್ಬೊಬ್ಬರಿಗೆ ಅದರ ಉಪದೇಶವೆಲ್ಲಾ ದೊರೆಯುತ್ತದೆಂದು ಹೇಳುತ್ತಾರೆ.— **ಇಹ** - ಶಾಸ್ತ್ರಾರ್ಥಗಳಿಗೂ ಸತ್ಸಂಪ್ರದಾಯಾರ್ಥಗಳಿಗೂ ತುಂಬಾ ಗೌರವವಿಲ್ಲದಿರುವ ಈ ಲೋಕದಲ್ಲೂ ಕೂಡ, **ಮೂಲಮನ್ತ್ರ ಸಂವೃತಂ** - ಮೂಲಮಂತ್ರದಲ್ಲಿ ಗೋಪ್ಯವಾಗಿ ಅಡಗಿರುವ, **ಅರ್ಥಂ** - ಅಭಿಪ್ರಾಯವನ್ನು, ದ್ರವ್ಯವನ್ನೂ ಎಂದು ಇನ್ನೊಂದು ಅರ್ಥವು, ಮುಂದೆ **ಸ್ಫಟಿಕ ತಲ ನಿಹಿತನಿಧಿ ಮಿವ** ಎಂದಿರುವದರಿಂದ ದ್ರವ್ಯವೆಂಬ ಅರ್ಥವೂ ತೋರಿಬರುತ್ತದೆ. **ಅಶೇಷೇಣ**-ಯಾವುದೊಂದನ್ನೂ ಬಿಡದೆ ಸಂಪೂರ್ಣವಾಗಿ, **ಕಶ್ಚಿತ್**-ಯಾವನೋ ಒಬ್ಬ ಸುಕೃತಿಯಾದ, **ಜನ್ತುಃ** - ಜನ್ಮ ಜರಾಮರಣಾದಿಗಳಿಗೆ ಸಿಕ್ಕಿ ನರಳುತ್ತಿರುವ ಪ್ರಾಣಿಯು, **ದೇಶಿಕ ದತ್ತೇನ ಚಕ್ಷುಷಾ** - ಸದಾಚಾರ್ಯನಿಂದ ಉಪದೇಶದ ಮೂಲಕ ಕೊಡಲ್ಪಟ್ಟಿದ್ದ ದಿವ್ಯಜ್ಞಾನ ಚಕ್ಷುಸ್ಸಿನಿಂದ, **ಸ್ಫಟಿಕ ತಲ ನಿಹಿತ ನಿಧಿ ಮಿವ** - ಅಂತಹ ಸಮಸ್ತ ಅರ್ಥಗಳೂ ಆ ಮಂತ್ರದಲ್ಲಿ ಸಂವೃತವಾಗಿ,

ಗೂಢನಾಗಿದ್ದರೂ, ಸದಾಚಾರ್ಯದತ್ತ ದಿವ್ಯ ಚಕ್ಷುಸ್ಸಿನಿಂದ ಸ್ಫಟಿಕ ಶಿಲೆಯ ಕೆಳಗೆ ಇಡಲ್ಪಟ್ಟ ನಿಧಿಯು ಹಾಗೆ ವ್ಯಕ್ತವಾಗಿ, ಅನುಭವತಿ - ಕಂಡುಕೊಂಡವನಾಗಿ ಅದರಲ್ಲಿ ಸ್ವಾರಸ್ಯವನ್ನೆಲ್ಲಾ ಅನುಭವಿಸುವನು ಅದರಲ್ಲಿ ಅಷ್ಟು ಸ್ವಾರಸ್ಯವು ಅಡಗಿರುವದರಿಂದ ಅವುಗಳ ಸ್ವಾರಸ್ಯವನ್ನೆಲ್ಲಾ ಗ್ರಹಿಸಿ ಆನಂದಿಸಿ ತಲೆ ತೂಗುವನೆಂಬ ಭಾವವು ಅನುಭವತಿ ಎಂಬ ಶಬ್ದದಿಂದ ತೋರಿಬರುತ್ತದೆ. ನಿಧಿ ಶಬ್ದದಿಂದ ತತ್ವಹಿತ ಪುರುಷಾರ್ಥಗಳೆಲ್ಲಾ ಅದರಲ್ಲಿ ಅಡಗಿವೆ ಎಂಬ ಭಾವವು.

ತಾತ್ಪರ್ಯ—ಈ ಮೂಲಮಂತ್ರದ ಮಹಿಮೆಯನ್ನು ಸಮಗ್ರವಾಗಿ ತಿಳಿದಿರುವವರು ಅತಿ ವಿರಳರೆಂದು ಕಶ್ಚಿತ್ ಎಂಬ ಪ್ರಯೋಗದಿಂದ ದ್ಯೋತಿತವಾಗಿರುವಾಗ, ತಾವು ಈಗ ಆ ಮಂತ್ರದ ಪ್ರಭಾವವನ್ನು ಕುರಿತು ಹೇಗೆ ಬರೆಯಲು ಉಪಕ್ರಮಿಸುತ್ತೀರಿ ಎಂದು ಯಾರಾದರೂ ಪ್ರಶ್ನಿಸಿದುದಾದರೆ, ತಮಗೂ ಕೂಡ ಅದರಲ್ಲಿ ಸಂನ್ಯತವಾದ ಅರ್ಥಗಳ ಸ್ವಾರಸ್ಯ ಗ್ರಹಣವೂ ಸತ್ಸಂಪ್ರದಾಯ ರೀತ್ಯಾ ತಮ್ಮ ಸದಾಚಾರ್ಯರು ದಯಪಾಲಿಸಿದ ಜ್ಞಾನಚಕ್ಷುಸ್ಸಿನ ಮೂಲಕವೇ ಉಂಟಾದುದೆಂದೂ, ಅದರಿಂದ ತಮಗೆ ಉಂಟಾಗಿರುವ ಆನಂದವೂ ಸಹ ನಿರತಿಶಯವಾದುದೆಂದೂ, ವಾಚಕರಿಗೆ ಈ ಶ್ಲೋಕದ ಮೂಲಕ ತಿಳಿಸುವ ಹಾಗೆ ತೋರುತ್ತದೆಂದೂ ಹೇಳುವಹಾಗೆ ಇದೆ. ಅಂತಹ ಸದಾಚಾರ್ಯರ ಉಪದೇಶವಿಲ್ಲದವನು ಇಂತಹ ನಿರತಿಶಯಾನಂದವನ್ನು ಎಂದಿಗೂ ಹೊಂದಲಾರನೆಂಬ ಭಾವವೂ ಇಲ್ಲಿ ಸೂಚಿತವು. ತಮಗೆ ತಮ್ಮ ಪರಮಾಚಾರ್ಯರಿಂದ ಪ್ರಾಪ್ತವಾದ ಅಸದೃಶ ಉಪಕಾರವನ್ನು ಮನಸ್ಸಿನಲ್ಲಿಟ್ಟವರಾಗಿ ಶ್ರೀ ದೇಶಿಕ ವರ್ಯರು "ಅಧ್ಯಾಸೀನ ತುರಙ್ಗವಕ್ತ್ರವಿಲಸಜ್ಜಿಹ್ವಾಗ್ರಸಿಂಹಾಸನಾ ದಾಚಾರ್ಯಾದಿಹ ದೇವತಾಂ ಸಮಧಿಕಾ ಮನ್ಯಾಂ ನಮನ್ಯಾಮಹೇ" ಎಂದು ಬಹುವಾಗಿ ಕೊಂಡಾಡಿರುತ್ತಾರೆ. ಶ್ರೀ ಹಯಗ್ರೀವರು ಯಾವ ಮಹಾನುಭಾವರ ನಾಲಿಗೆಯ ತುದಿಯನ್ನೇ ಸಿಂಹಾಸನವನ್ನಾಗಿ ಮಾಡಿಕೊಂಡು ಮಹತ್ತಾದ ಉಪದೇಶವನ್ನು ಮಾಡುವಹಾಗೆ ಮಾಡಿರುವರೋ ಅಂತಹ ಪರಮಾಚಾರ್ಯರಿಗೆ ಸಮನಾದ ಅಥವಾ ಅಧಿಕವಾದ ಬೇರೇ ದೇವತೆ ಯಾರನ್ನೂ ನಾನು ಕಾಣಲಿಲ್ಲವೆಂದು ಹೇಳಿರುತ್ತಾರೆ—ಈ ಸಂದರ್ಭದಲ್ಲಿ "ಯಸ್ಯದೇವೇ ಪರಾಭಕ್ತಿ ಯಥಾದೇವೇ ತಥಾಗುರೌ ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ॥" ಎಂಬುದು ಅನುಸಂಧೇಯವು—ಯಾರಿಗೆ ಪರಮ ಪುರುಷನಲ್ಲಿ ಎಂತಹ ಶ್ರೇಷ್ಠವಾದ ಐಕಾನ್ತ್ಯ ಭಕ್ತಿಯುಂಟೋ ಅಂತಹ ಭಕ್ತಿಯೇ ಹಾಗೆಯೇ ಸದ್ಗುರುವಿನಲ್ಲೂ ಇದ್ದದೇಯಾದರೆ, ಅಂತವನಿಗೆ ಇಲ್ಲಿ ಹೇಳಲ್ಪಟ್ಟ ಸರ್ವಾಭಿಪ್ರಾಯಗಳೂ ಪ್ರಕಾಶಿಸುತ್ತವೆ ಎಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಮೂಲ ಮನ್ತ್ರದಲ್ಲಿರುವ ಅರ್ಥಗಳನ್ನೆಲ್ಲಾ (ಇದು ದ್ವಯಚರಮ ಶ್ಲೋಕಾರ್ಥಗಳಿಗೂ ಉಪಲಕ್ಷಣವು) ಎಲ್ಲರೂ ಉಪದೇಶಿಸಲು ಸಾಧ್ಯವೇ ಇಲ್ಲವೆಂಬ ಭಾವವು ವ್ಯಕ್ತವು. ಸ್ವಾಚಾರ್ಯರಾದ ಅಪ್ಪುಳ್ಳಾರವರ ಕಟಾಕ್ಷದಿಂದ ಈ ಅಮೋಘಗಳಾದ ರಹಸ್ಯಾರ್ಥಗಳೆಲ್ಲಾ ತಮಗೆ

ಲಭಿಸಿತು ಎಂದರೆ ಎಲ್ಲರಿಗೂ ಲಭಿಸೀತೇ ಎಂಬುದು ದ್ಯೋತಿತವು. ಇಲ್ಲಿ ಇಹ ಎಂಬ ಪ್ರಯೋಗದಿಂದ ಕಲಿ ಪ್ರಾಬಲ್ಯದಿಂದ ಅಧರ್ಮರೂಪ ದೋಷ ದೂಷಿತ ಜಗತ್ತಿನಲ್ಲಿ ಎಂಬ ಭಾವವು ತೋರಿಬರುತ್ತದೆ; "ಕಲೌ ಕಾರ್ತಯುಗಂ ಧರ್ಮಂ ಕರ್ತುಮಿಚ್ಛತಿ ಯೋನರಃ। ಸ್ವಾಮಿದ್ರೋಹೀತಿ ತಂ ಮತ್ವಾ ತಸ್ಮೈ ಪ್ರದ್ವಿಷತೇ ಕಲಿಃ" ಎಂಬುದು ಈ ಸಂದರ್ಭದಲ್ಲಿ ಅನುಸಂಧೇಯವು; ಸತ್ಸಂಪ್ರದಾಯವೂ, ಗುರುಭಕ್ತಿಯೂ, ಗುರೂಪದೇಶದಲ್ಲಿ ಮಮತೆಯೂ ತುಂಬಾ ಕಮ್ಮಿಯಾಗಿರುವ ಕಾಲದಲ್ಲಿ ಎಂಬುದು ಇಹ ಶಬ್ದಾರ್ಥವು. ಆದರೆ ಈಗಿನ ಕಾಲವೇನೋ ಅಧರ್ಮೋ ಧರ್ಮಂ ಗ್ರಸತಿ ಎಂಬುವಹಾಗಿರಬಹುದು; ಆಗಿನ ಕಾಲವು ಹಾಗೆಯೇ ಎಂದರೆ ಅದೂ ಹಾಗೆಯೇ ಎಂದು "ವೇದೇ ಸಂಜಾತಖೇದೇ ಮುನಿಜನವಚನೇ ಪ್ರಾಪ್ತನಿತ್ಯಾವಮಾನೇ ಸಙ್ಕೀರ್ಣೇ ಸರ್ವವರ್ಣೇ ಸತಿ ತದನುಗುಣೇ ನಿಷ್ಪ್ರಮಾಣೇ ಪ್ರಮಾಣೇ। ಮಾಯಾವಾದೇ ಸಮೋದೇ ಕಲಿಕಲುಷವಶಾಚ್ಛೂನ್ಯವಾದೇ ವಿವಾದೇ ಧರ್ಮತ್ರಾಣಾಯ ಯೋಭೂತ್ಸ ಜಯತು ಭಗವಾನ್ ವಿಷ್ಣುಘಂಟಾವತಾರಃ ಎಂಬುಕ್ತಿಯಿಂದಲೇ ಸರಿಯಲ್ಲವೆಂದೇ ತೋರಿಬರುತ್ತದೆ. ಸಾಧಾರಣವಾಗಿ ಮನ್ತ್ರದ ಅರ್ಥವು ಬಹಳಗೂಢವಾಗಿರುವದರಿಂದ ಮನ್ತ್ರಸಂವೃತಮರ್ಥಂ ಎಂಬ ಪ್ರಯೋಗವು. ಆದುದರಿಂದಲೇ ಸದ್ಗುರುವಿನ ಉಪದೇಶದ ಆವಶ್ಯಕತೆಯು. ಜನ್ತುಃ ಎಂಬ ಪ್ರಯೋಗವು, ಜನ್ಮ ಜರಾಮರಣಗಳನ್ನು ಹೊಂದುವಪ್ರಾಣಿ ಎಂದು ಹೇಳಿ, ಅಧಿಕಾರಿಯಲ್ಲಿ ಶಾಸ್ತ್ರಾದಿ ಜ್ಞಾನಶೂನ್ಯತೆಯನ್ನು ಪ್ರದರ್ಶಿಸುತ್ತದೆ. ಆದುದರಿಂದಲೇ ದೇಶಿಕ ದತ್ತ ಚಕ್ಷುಸ್ಸು ಆತನಿಗೆ ಆವಶ್ಯಕವೆಂಬ ಭಾವವು. ಅಂತವನಿಗೂ ಸುಕೃತವಿಶೇಷಾದ ಮೂಲಿಕ ದೇಶಿಕ ದತ್ತ ಜ್ಞಾನಚಕ್ಷುಸ್ಸು ಯಾವಾಗ ಲಭಿಸಿತೋ, ಆಗ ಆತನ ಜ್ಞಾನವು ಚೆನ್ನಾಗಿ ಪ್ರಕಾಶಿಸುವದೇನೂ, ಮೂಲಮನ್ತ್ರಾರ್ಥಗಳೆಲ್ಲ ಸುವ್ಯಕ್ತವೆಂದರೆ, ಹೇಳುತ್ತಾರೆ. ಹೇಗೆ ವ್ಯಕ್ತವೆಂದರೆ, ಸ್ಫಟಿಕತಲನಿಹಿತ ನಿಧಿಮಿವ-ಸ್ಫಟಿಕ ಶಿಲೆಯ ಕೆಳಗೆ ಇಟ್ಟಿರುವ ನಿಧಿಯು ಹೇಗೆ ಸ್ಫುಟತರವಾಗಿ ಕಾಣುತ್ತದೋ ಹಾಗೆ ಎಂಬ ಭಾವವು. ವ್ಯಕ್ತವಲ್ಲದೆ ಸಂವೃತವಾದುದು ಈ ದೇಶಿಕ ಕೃಪೆಯಿಂದ ಸ್ಫಟಿಕ ಶಿಲೆಯ ಕೆಳಗಿರುವ ನಿಧಿಯಹಾಗೆ ಸುಸ್ಪಷ್ಟವೆಂದು ಹೇಳಿದಂತಾಯಿತು. ಸದಾಚಾರ್ಯ ಕಟಾಕ್ಷವಿಲ್ಲದೆ ಈ ಅಮೋಘ ಮನ್ತ್ರದ ಮಹಿಮೆಯನ್ನು ಅರಿಯಲಾರೆನೆಂದು ವ್ಯಕ್ತವಾಗಿ ತಿಳಿಸಲ್ಪಟ್ಟಿತು. ಅಂತಹ ಸದಾಚಾರ್ಯಸ್ಥಾನದಲ್ಲಿ ಸರಿಯಾದ ಗುರುವು ದೊರಿಯುವದು ತುಂಬಾ ಕಷ್ಟವು. ಸದಾಚಾರ್ಯನು ಎಂತವನೆಂಬುದು ಮುಂದೆ ಹಿಂನೆಯ ಅಧಿಕಾರದಲ್ಲಿ ಚರ್ಚಿಸಲ್ಪಡುತ್ತದೆ. ಆದುದರಿಂದ ಅತಿಶಯಿತ ಜ್ಞಾನನಿಷ್ಠೆಯೂ, ಅತಿಶಯಿತ ಆಚಾರ ನಿಷ್ಠೆಯೂ ಇರುವ ಗುರುವನ್ನು ಹುಡುಕಿಕೊಂಡು ಹೋಗಿ ಆಶ್ರಯಿಸತಕ್ಕದ್ದು ಮುಮುಕ್ಷುವಿನ ಇತಿಕರ್ತವ್ಯತೆಯು; ಹಾಗೆ ಇಲ್ಲದವರನ್ನು ಆಚಾರ್ಯಸ್ಥಾನದಲ್ಲಿ ವರಿಸುವದರಿಂದ ಆಶ್ರಯಿಸಿದ ಅಧಿಕಾರಿಯ ಕೋರಿಕೆಯು ಎಂದಿಗೂ

**ವೃತ್ತಾನುವಾದ ಪುರಸ್ಸರಂ ರಹಸ್ಯತ್ರಯಾಣಾಂ ಪದವಾಕ್ಯಯೋಜನಾನಿ ಕ್ರಮೇಣ ಪ್ರತಿಜಾನೀತೇ.**

**ಸತ್ವಸ್ಥರ್ಕ್ಕು ಅನುಸನ್ಧೇಯಙ್ಗಳಾನ ಸಾರತಮಾರ್ಥಙ್ಗಳೈಯುಮ್,**

ಈಡೇರದು. ಇದು ತುಂಬಾ ಮುಖ್ಯವಾದ ವಿಷಯುವಾದುದರಿಂದ ಚೆನ್ನಾಗಿ ಗಮನಿಸತಕ್ಕದ್ದಾಗಿರುತ್ತದೆ. ಉದರ ಪೋಷಣೆಗಾಗಿ ವೇಷವನ್ನು ಧರಿಸಿರುವವರನ್ನು ಮುಖ್ಯವಾಗಿ ತ್ಯಾಗಮಾಡತಕ್ಕದ್ದು; ಏಕೆಂದರೆ ಅಂತವನನ್ನು ಸರ್ವೇಶ್ವರನೇ ಅನುಗ್ರಹಿಸುವದಿಲ್ಲವು. ಚನ್ನಾಗಿ ತಿಳಿದು ಜ್ಞಾನಿಯಾಗಿಯೂ ಕರ್ಮನಿಷ್ಠೆಯುಳ್ಳವನಾಗಿಯೂ ಇರುವ ಆಚಾರ್ಯನ ಆವಶ್ಯಕತೆಯನ್ನು ಶ್ರೀ ಕೃಷ್ಣಭಗವಾರ್ನರವರು "**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ। ಉಪದೇಕ್ಷ್ಯಂತಿ ತೇಜ್ಞಾನಂ ಜ್ಞಾನಿನ ಸ್ತತ್ವದರ್ಶಿನಃ**" ಎಂದು (ಗೀ. ೪-೩೪) ತಾವೇ ಅರ್ಜುನನಿಗೆ ಉಪದೇಶಿಸಿರುತ್ತಾರೆ. ಅಂತಹ ಗುರುವು ಸಿಕ್ಕುವದು ದುರ್ಲಭವೆಂದು "**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ**" (ಗೀ. ೭-೩.) ಎಂಬಲ್ಲೂ ಮತ್ತು "**ಸಮಹಾತ್ಮಾ ಸುದುರ್ಲಭಃ**" (ಗೀ. ೭-೧೯) ಎಂಬಲ್ಲೂ ತಿಳಿಸಿರುತ್ತಾರೆ. ಈ ಶ್ಲೋಕದಲ್ಲಿ, **ಕಶ್ಚಿತ್** ಎಂಬ ಶಬ್ದದಿಂದ ಎಲ್ಲೋ ಒಬ್ಬೊಬ್ಬನೆಂಬರ್ಥವು ತೋರಿಬರುವದರಿಂದ, ಅಂತವರು ಯಾರಾದರೂ ಉಂಟೋ ಎಂದರೆ ತಾವೂ ತಮ್ಮ ಶಿಷ್ಯಪ್ರಶಿಷ್ಯರುಗಳೂ ಸಹ ಅಂತಹ ಬಹು ದುರ್ಲಭರಲ್ಲೇ ಸೇರಿದವರು ಎಂಬುದನ್ನುಗ್ರಹಿಸಬಹುದು. ಇಂತಹ ದೌರ್ಲಭ್ಯವನ್ನು ಹಿಂದೆಯೇ ಸಾರನಿಷ್ಕರ್ಷಾಧಿಕಾರದಲ್ಲಿ **ಶಾಖಾನಾಮುಪರಿಸ್ಥಿತೇನ ಮನುನಾ ಮೂಲೇನ ಲಬ್ಧಾತ್ಮಕಃ।** ಎಂದು ಹೇಳಿ, **ಸಾರಜ್ಞೋ ಯದಿ ಕಶ್ಚಿದಸ್ತಿ ಭುವನೇ ನಾಥಸ್ಸಯೂಥಸ್ಸನಃ** ಎಂದು ವಿಶೇಷವಾಗಿ ಉಪಪಾದಿಸಿರುತ್ತಾರೆ. ಅವರುಗಳು ನಾಥಮುನಿ, ಯಾಮುನಮುನಿ, ರಾಮಾನುಜಮುನಿಗಳು ಎಂಬ ಭಾವವು. ಅದನ್ನೇ ಇಲ್ಲಿ ಪುನಃ ಜ್ಞಾಪಿಸಿರುತ್ತಾರೆ. **ಇಂತಹ ಸಾರಜ್ಞನು** ಯಾವಾಗ ಅದನೋ ಆಗ ಅದರ ಮಹಿಮೆಯಿಂದ ಪರವಶನಾಗಿ ವಿಶೇಷಾನಂದವನ್ನು ಹೊಂದುವನೆಂಬುದನ್ನು **ಅನುಭವತಿ** ಎಂಬ ಪ್ರಯೋಗದಿಂದ ವ್ಯಕ್ತಪಡಿಸಿರುತ್ತಾರೆ. ಇದರಲ್ಲಿ ಸ್ಫುಟತರವಾಗಿ ತೋರುವ ಅರ್ಥಗಳು ಯಾವುವೆಂದರೆ ತತ್ವಹಿತಪುರುಷಾರ್ಥಗಳ ಪ್ರಕಾಶನೆಯು.

**ಹಿಂದೆ ಹೇಳಿದುದರ ಆನುವಾದ ಪುರಸ್ಸರವಾಗಿ ರಹಸ್ಯತ್ರಯಗಳ ಪದವಾಕ್ಯಯೋಜನೆಗಳು ಕ್ರಮವಾಗಿ ತಿಳಿಸುವದಾಗಿ ಪ್ರತಿಜ್ಞೆ ಮಾಡುತ್ತಾರೆ.**

ಹಿಂದೆ ೨೬ ಅಧಿಕಾರಗಳಿಂದ ಹೇಳಿದ ಸಮಸ್ತ ಅಭಿಪ್ರಾಯಗಳನ್ನೂ ಸಙ್ಗ್ರಹವಾಗಿ ಹೇಳಿ, ಹಿಂದೆ ಹೇಳಿದುದಕ್ಕೂ ಮುಂದೆ ಹೇಳುವದಕ್ಕೂ ಸಂಗತಿಯನ್ನು

**ಅವತ್ತಿಸನ್ದೈಯುಂ ಸ್ಥಿರೀಕರಣ ಪ್ರಕಾರಙ್ಗಳೈಯುಮ್, ಪ್ರತಿಪಾದಿತ್ತೋಮ್. ಇವತ್ತೈ ಯೆಲ್ಲಾಮ್ ಪ್ರಕಾಶಿಪ್ಪಿಕ್ಕಿರ ರಹಸ್ಯತ್ರಯತ್ತಿಲ್ ಪದವಾಕ್ಯ ಯೋಜನೈಗಳಿರುಕ್ಕುಮ್ಪಡಿ ಶೊಲ್ಲುಗಿರೋಮ್.**

---

ವ್ಯಕ್ತಪಡಿಸುತ್ತಾರೆ. ಹೀಗೆ ಷಜ್ಞ ಹ ಶ್ಲೋಕಗಳಲ್ಲಿ ಸೂಕ್ಷ್ಮವಾಗಿ ಹೇಳಿದ ಅಭಿಪ್ರಾಯಗಳನ್ನೇ ವಿಸ್ತರಿಸಿ ಹೇಳುವವರಾಗಿ ಮೂರು ರಹಸ್ಯಗಳೂ ಹೇಗೆ[illegible]? ಅವುಗಳಲ್ಲಿ ಯಾವ ಅರ್ಥಗಳು ಉಪದೇಶಿಸಲ್ಪಡುವುವು? ಎಂಬುದನ್ನು ಪ್ರತಿಜ್ಞಾವಾಕ್ಯರೂಪದಲ್ಲಿ ಅಪ್ಪಣೆ ಕೊಡಿಸುತ್ತಾರೆ.—**ಸತ್ತ್ವಸ್ಥರ್ಕ್ಕು** - ಸತ್ತ್ವವೃದ್ಧಿಯಿಂದ ರಾಜಸ ತಾಮಸಗಳನ್ನು ಕಳೆದುಕೊಂಡು ಐಹಿಕದಲ್ಲಿ ವೈರಾಗ್ಯವನ್ನು ಹೊಂದಿ, ಮೋಕ್ಷಪ್ರಾಪ್ತಿಯಲ್ಲಿ ಮಾತ್ರವೇ ಅಭಿಲಾಷೆಯಿರುವ ಮೋಕ್ಷಾರ್ಥಿಗಳಿಗೆ, **ಅನುಸನ್ಧೇಯಙ್ಗಳಾನ**-ಮುಖ್ಯವಾಗಿ ಅನುಸಂಧಾನಮಾಡಬೇಕಾದ, **ಸಾರತಮಾರ್ಥಙ್ಗಳೈಯುಮ್** - ಉಪನಿಷತ್ತುಗಳಲ್ಲಿ ಸಾರಭೂತಗಳಾಗಿ ಉಪಾದೇಯಗಳಾಗಿ ಸಾರತಮವೆನಿಸುವ ಮೂರು ರಹಸ್ಯಗಳಿಗೆ ಸಂಬಂಧಪಟ್ಟ ಅಭಿಪ್ರಾಯಗಳನ್ನೆಲ್ಲಾ, ಹಿಂದೆ ಅರ್ಥಾನುಶಾಸನ ಭಾಗವೆನಿಸಿದ ೨೨ ಅಧಿಕಾರಗಳಲ್ಲೂ, ಮತ್ತು **ಅವತ್ತಿಸನ್ದೈಯು**-ಆ ಅರ್ಥಾನುಶಾಸನ ಭಾಗದಲ್ಲಿ ಹೇಳಲ್ಪಟ್ಟವುಗಳ **ಸ್ಥಿರೀಕರಣಪ್ರಕಾರಙ್ಗಳೈಯುಮ್** – ಸಮಸ್ತಗಳಾದ ಆಕ್ಷೇಪಗಳಿಗೆಲ್ಲಾ ಸಮಾಧಾನವನ್ನು ಹೇಳಿ, ಆ ಅರ್ಥಾನುಶಾಸನ ಭಾಗದಲ್ಲಿ ಹೇಳಲ್ಪಟ್ಟಿದುದನ್ನೇ ಸ್ಥಾಪಿಸಿ ಹೇಳಿದ ಪ್ರಕಾರಗಳನ್ನೂ ಸಹ, ಅನಂತರ ಸ್ಥಿರೀಕರಣಭಾಗವಾದ ೨೩-೨೬ನೆಯ ನಾಲ್ಕು ಅಧ್ಯಾಯಗಳಲ್ಲಿ, **ಪ್ರತಿಪನ್ನಮಾನ** - ತೋರಿಬರುವ, **ಪ್ರತಿಪಾದಿತ್ತೋಮ್** - ಹಿಂದೆ ವಿಸ್ತರಿಸಿ ಹೇಳಿದೆವು. ಇಲ್ಲಿ **ಸತ್ತ್ವಸ್ಥರ್ಕ್ಕು** ಎಂಬ ಪ್ರಯೋಗದಿಂದ ಇಲ್ಲಿ ನಾವು ಉಪದೇಶಿಸುವದೆಲ್ಲಾ ಮೋಕ್ಷಾರ್ಥಿಗಳಿಗೆ ಬೇಕಾದವಿಷಯವೇ ವಿನಾ ಬುಭುಕ್ಷುಗಳಾದ ಸತ್ತ್ವಸ್ಥರುಗಳಲ್ಲದವರಿಗಲ್ಲವೆಂದು ಹೇಳಿದಂತಾಯಿತು. ಇಲ್ಲಿ **ಸಾರತಮಾರ್ಥಙ್ಗಳೈಯುಮ್**-ತಾವು ಶಾಸ್ತ್ರದಿಂದ ಈ ಸಂದರ್ಭದಲ್ಲೇ ಗ್ರಹಿಸಿರುವ ಸರ್ವವೇದಾಂತೋದಿತವಾದ ಅರ್ಥಗಳನ್ನೆಲ್ಲಾ ಹೇಳಲು ಸಾಧ್ಯವಿಲ್ಲದುದರಿಂದಲೂ, ಶಾಸ್ತ್ರಬಾಹುಳ್ಯದಿಂದಲೂ, ಶಿಷ್ಯವರ್ಗವು ಅಲ್ಪಕಾಲವನ್ನು ಮಾತ್ರ ಈ ಉಪದೇಶಕ್ಕೆ ಕೊಡಲು ಅರ್ಹರಾದುದರಿಂದಲೂ ಈ ಪ್ರಪತ್ತಿ ಶಾಸ್ತ್ರಾರ್ಥವನ್ನು ಗ್ರಹಿಸಲು ಹೊರಟರೆ ಅನೇಕ ದೇಹಯಾತ್ರೆ ಮೊದಲಾದ ವಿಷಯಗಳಾದ ವಿಘ್ನಗಳಿರುವದರಿಂದಲೂ, ಸಾರಸಾರತರಗಳನ್ನು ತ್ಯಜಿಸಿ ಸಾರತಮವಾದುದನ್ನು ಮಾತ್ರ ಹೇಳಿದೆವೆಂದು ಸಾರನಿಷ್ಕರ್ಷಾಧಿಕಾರದ ಅಭಿಪ್ರಾಯವನ್ನು ಜ್ಞಾಪಿಸಿದರು. ಹೀಗೆ ಈ ಮೂರು ರಹಸ್ಯಗಳಲ್ಲೇ ಇವೆಲ್ಲಾ ಉಪಪಾದಿತವೆಂದು ಹೇಳಿದನಂತರ, ಈ ಮೂರು ಮನ್ತ್ರಗಳಲ್ಲೂ ತೋರುವ ಈ ಅರ್ಥಗಳನ್ನೆಲ್ಲಾ ಒಟ್ಟುಸೇರಿಸಿ ವ್ಯಕ್ತಪಡಿಸಿ ಅವುಗಳ [illegible] ಪ್ರಕಾಶಿಸುವನೆಂದು ಪ್ರತಿಜ್ಞಾವಾಕ್ಯವನ್ನು ಮುಂದಿನ ವಾಕ್ಯದಿಂದ ದಯಪಾಲಿಸುತ್ತಾರೆ.

## ರಹಸ್ಯತ್ರಯೋಪಪಾದನೇ ಪೌರ್ವಾಪರ್ಯಸ್ಯ ಕಾರಣವಾಹ.

**ಅವತ್ತಿಲ್ ಮುನ್ನಡ ತಿರುಮನ್ತ್ರಂ ಪರಶೇಷತ್ವೈಕರಸ ಸ್ವರೂಪಾದಿಗಳೈ ತೆಳಿವಿತ್ತು ಅನ್ಮುಖತ್ತಾಲೇ ಸಮಸ್ತ ಪ್ರತಿಬಂಧಕ ನಿವೃತ್ತಿಪೂರ್ವಕ ಪರಮ ಪುರುಷಾರ್ಥ ಪ್ರಾಪ್ತಿಯಿಲೇ ರುಚಿಯುಡೈಯ, ತ್ವರೈಯುಡೈಯ, ವಿಳೈವಿತ್ತು**

---

ಇವತ್ತೈಯೆಲ್ಲಾಮ್-ಹಿಂದೆ ಹೇಳಿದ ಸಮಸ್ತ ಅರ್ಥಗಳನ್ನೆಲ್ಲಾ ಎಂದರೆ ಪದ ಯೋಜನೆ, ವಾಕ್ಯಯೋಜನೆಗಳಿಂದುಂಟಾಗುವ ಅಭಿಪ್ರಾಯ.ಗಳನ್ನೆಲ್ಲಾ ಪ್ರಕಾಶಿಪ್ಪಿಕ್ಕೈ-ವ್ಯಕ್ತವಾಗಿ ತಿಳಿಸುವ, ರಹಸ್ಯತ್ರಯತ್ತಿಲ್ - ರಹಸ್ಯತ್ರಯದಲ್ಲಿ. ಪದ ವಾಕ್ಯ ಯೋಜನೆಗಳು, ಇರುಕ್ಕುಂಪಡಿ - ಇರುವ ಕ್ರಮವನ್ನು ಎಂದರೆ ತೋರಿ ಬರುವ ಕ್ರಮವನ್ನು, ಸೊಲ್ಲುಗಿರೋಮ್ - ಹೇಳುವೆವು, ಉಪದೇಶಿಸುವೆವು. ಎಂಬ ಭಾವವು. ಪದವಾಕ್ಯಯೋಜನೆಗಳಲ್ಲದೆ ಊಹೆಯಿಂದ ಸಿಕ್ಕಿದ ಎಲ್ಲಾ ಅರ್ಥಗಳನ್ನು ಹೇಳುವದಿಲ್ಲವು. ಅವುಗಳಿಂದ ಯಥಾರ್ಥವಾದ ಅರ್ಥಗಳು ಹೇಗೆ ವ್ಯಕ್ತಪಡುತ್ತವೋ, ಹಾಗೆ ಉಪದೇಶಿಸುವೆನೆಂಬ ಭಾವವು. ಹೀಗೆ ಹೇಳುವದರಲ್ಲಿ ಅತಿಶಯೋಕ್ತಿಯೇ ಮೊದಲಾದ ದೋಷಗಳು ಯಾವುವೂ ಇಲ್ಲವೆಂದು ಪ್ರತಿಜ್ಞೆ ಮಾಡಿದಂತಾಯಿತು. ಆದುದರಿಂದ ಪರಮ ವಿಶ್ವಾಸಕ್ಕೆ ಅರ್ಹವಾದವು ಆ ಅರ್ಥಗಳೆಂಬ ಭಾವವು ದ್ಯೋತಿತವು. ಪದವಾಕ್ಯ ಯೋಜನೆ ಎಂಬುದರಿಂದ ಪದಯೋಜನೆಯಿಂದಲೂ ವಾಕ್ಯಯೋಜನೆಯಿಂದಲೂ ತೋರಿಬರುವ ಅರ್ಥಗಳನ್ನು ಉಪದೇಶಿಸುವೆನೆಂದು ಹೇಳಿದಂತಾಯಿತು.

### ರಹಸ್ಯತ್ರಯದ ಉಪಪಾದನೆಯಲ್ಲಿ ಪೂರ್ವೋತ್ತರ ಕ್ರಮಗಳಿಗೆ ಕಾರಣವನ್ನು ಹೇಳುತ್ತಾರೆ.

ಈ ರಹಸ್ಯತ್ರಯಗಳಲ್ಲಿ ಮೊದಲು ಮೂಲಮಂತ್ರವನ್ನೂ, ಅನಂತರ ದ್ವಯವನ್ನೂ ಕೊನೆಗೆ ಚರಮ ಶ್ಲೋಕವನ್ನೂ ಉಪಪಾದಿಸಿ ಪದಯೋಜನಾರ್ಥಗಳನ್ನು ತಿಳಿಸಲು ಕಾರಣವೇನೆಂದು ಪ್ರಶ್ನಿಸಬಹುದು; ಅದಕ್ಕೆ ಉತ್ತರವನ್ನು ದಯಪಾಲಿಸುತ್ತಾರೆ. ಅವತ್ತಿಲ್ - ಆ ಮೂರು ರಹಸ್ಯಗಳಲ್ಲಿ, ಮುನ್ನಡ - ಮೊದಲು ತಿರುಮನ್ತ್ರಂ - ಅಷ್ಟಾಕ್ಷರ ಮಂತ್ರವು, ಪರಶೇಷತ್ವೈಕರಸ ಸ್ವರೂಪಾದಿಗಳೈ - ತಾನು ಪರಮಾತ್ಮನಿಗೆ ಶೇಷಭೂತನಾಗಿರುವ ಆನಂದವನ್ನೂ, ತನ್ನ ಮತ್ತು ಪರಮಾತ್ಮನ ಸ್ವರೂಪ ಮೊದಲಾದವುಗಳನ್ನೂ, ಆದಿ ದಪದಿಂದ. ಪರಸ್ಪರ ಸಂಬಂಧ ಸ್ವಭಾವಾದಿಗಳೂ ಉಪಾಯ ಸ್ವರೂಪ ಮೊದಲಾದವುಗಳೂ ಹೇಳಲ್ಪಟ್ಟವು, ತೆಳಿವಿತ್ತು - ತಿಳಿಸಿ, ಅನ್ಮುಖತ್ತಾಲೆ - ಆ ಮೂಲಕವಾಗಿ, ಸಮಸ್ತ ಪ್ರತಿಬಂಧಕ ನಿವೃತ್ತಿಪೂರ್ವಕ ಪರಮಪುರುಷಾರ್ಥ ಪ್ರಾಪ್ತಿಯಿಲೇ-ಅನಾದಿ [illegible] ಸಮಸ್ತ ಪ್ರತಿಬಂಧಕಗಳನ್ನು

---

ಉಪಾಯಾಧಿಕಾರ ಪೂರ್ತಿಂಚ ಯುಕ್ತಾಂ ಚೋತ್ಪಾದ್ಯೈವಮ್. ಇತ್ಯಾದಿ ಅಧಿಕಾರಿಯಾದವ

---

ತಿಳಿಯುವವರ ಮೂಲಕ **ಪರಮಪುರುಷಾರ್ಥಪ್ರಾಪ್ತಿಯಲ್ಲೀ** ನಿರತಿಶಯ ಪುರುಷಾರ್ಥವಾದ ಪರಮಾತ್ಮನೊಂದಿಗೆ ಸಮಾನವಾದ ಭೋಗಾನಂದ ಮತ್ತು ಆತನಿಗೆ ಸರ್ವವಿಧ ಕೈಂಕರ್ಯವನ್ನು ಮಾಡುವ ಸಂಪತ್ತಿನ ಪ್ರಾಪ್ತಿಯಲ್ಲಿ, ರುಚಿಯನ್ನೂ, ತ್ವರೆಯನ್ನೂ, ವಿಶ್ವಾಸವನ್ನೂ - ಉಂಟುಮಾಡಿ, ಉಪಾಯಾಧಿಕಾರ ಪೂರ್ತಿಂಚ - ಭರನ್ಯಾಸ ರೂಪವಾದ ಉಪಾಯದಲ್ಲಿ ಸಂಪೂರ್ಣಾಧಿಕಾರವನ್ನುಂಟುಮಾಡಿ ದ್ವಯಮನ್ತ್ರದ ಮೂಲಕ ಭರನ್ಯಾಸವನ್ನು ಮಾಡುವದಕ್ಕೆ ಪರಿಪೂರ್ಣ ಯೋಗ್ಯತೆಯನ್ನು, **ಉತ್ಪಾದ್ಯೈವಮ್** - ಉಂಟುಮಾಡುತ್ತದೆ; ಇಲ್ಲಿ ರುಚಿತ್ವರೆ ಶಬ್ದಗಳಿಂದ ಮೋಕ್ಷಾಧಿಕಾರಿಗೆ ಬೇಕಾದ ಅರ್ಥಿತ್ವ ಸಾಮರ್ಥ್ಯಗಳೆರಡೂ ಹೇಳಲ್ಪಟ್ಟವು. ಅಧಿಕಾರಿಗೆ ಇವೆರಡೂ ಆವಶ್ಯಕವೆಂದು ಹಿಂದೆ " **ಅರ್ಥಿತ್ವೇನ** " ಎಂಬ ಶ್ಲೋಕದಲ್ಲಿ ಉಪಪಾದಿತವು. ೯ನೆಯ ಪುಟವನ್ನು ನೋಡಿ. ಮೋಕ್ಷಾರ್ಥಿಯಾಗಿ ದ್ವಯದ ಮೂಲಕ ಭರನ್ಯಾಸಾನುಷ್ಠಾನಕ್ಕೆ ಸಂಪೂರ್ಣ ಯೋಗ್ಯತೆಯನ್ನುಂಟುಮಾಡುತ್ತದೆ, ಆದುದರಿಂದಲೇ ಮೂಲಮನ್ತ್ರದ ಉಪಪಾದನೆಯು ದ್ವಯಕ್ಕೆ ಪೂರ್ವಭಾವಿ ಇರಬೇಕೆಂಬುದು ಏರ್ಪಟ್ಟಿತೆಂಬ ಭಾವವು ದ್ವಯದ ಮೂಲಕ ಭರನ್ಯಾಸಾನುಷ್ಠಾನಕ್ಕೆ ಆವಶ್ಯಕವಾದ ಸರ್ವಜ್ಞಾನವನ್ನೂ ಈ ಮೂಲಮನ್ತ್ರವು ಪ್ರಕಾಶಪಡಿಸಿ ತಿಳಿಸುತ್ತದೆಂಬ ಭಾವವು. ಈ ಮೂಲಮನ್ತ್ರದ ಅರ್ಥಗ್ರಹಣದಿಂದ ಉಂಟಾಗುವ ಜ್ಞಾನಗಳು ಯಾವುವೆಂದರೆ (೧) ತನ್ನ ಮತ್ತು ಪರಮಾತ್ಮನ ಸ್ವರೂಪ ಸ್ವಭಾವಗಳೂ, ಆತನಿಗೂ ತನಗಿರುವ ಸಂಬಂಧವು, ತಾನು ಪರಮಾತ್ಮನಿಗೇನೇ ಶೇಷಭೂತನು ಪರತಂತ್ರನು ಎಂಬ ಜ್ಞಾನವು (೨) ತನಗೆ ಪ್ರಾಪ್ತವಾಗಿರುವ ಪ್ರತಿಬಂಧಕ ರೂಪದಲ್ಲಿರುವ ಸಮಸ್ತ ಪ್ರಾಪ್ಯ ಪಾಪಗಳು ತೊಲಗಿ ಅನಿಷ್ಟ ನಿವೃತ್ತಿಯೂ ಪರಮ ಪುರುಷಾರ್ಥ ರೂಪವಾದ ಇಷ್ಟಪ್ರಾಪ್ತಿಯೂ ಉಂಟಾಗಬೇಕೆಂಬ ಆಸೆಯೂ, ಮತ್ತು ಅದರಲ್ಲಿ ತ್ವರೆಯೂ (೩) ಇದಕ್ಕಾಗಿ ತಾನು ಭರನ್ಯಾಸವನ್ನು ಅನುಷ್ಠಿಸಬೇಕೆಂಬ ಜ್ಞಾನವೂ ಸಹ ಉಂಟಾಗುತ್ತವೆಂದು ಹೇಳಲ್ಪಟ್ಟಿತು. ಇಲ್ಲಿ ಪರಶೇಷತೈಕರಸಸ್ವರೂಪಾದಿಗಳನ್ನೇ ತಿಳಿಸಿತ್ತು ಎಂದು ಹೇಳಿರುವದರಿಂದ ಹಿಂದೆ ಪ್ರಧಾನಪ್ರತಿತಂತ್ರಾಧಿಕಾರದಲ್ಲೂ, ಅರ್ಥಪಂಚಕಾಧಿಕಾರ, ತತ್ವತ್ರಯಾಧಿಕಾರದಲ್ಲೂ ಹೇಳಲ್ಪಟ್ಟ ಅರ್ಥಗಳೆಲ್ಲಾ ಇದರಲ್ಲಿ ಅಡಗಿವೆ ಎಂಬ ಭಾವವು ಜ್ಞಾಪಿಸಲ್ಪಟ್ಟಿತು. ಪ್ರಾಪ್ಯಪ್ರಾಪ್ತೃಭಾವಗಳು ಪರಮಾತ್ಮ ಜೀವಾತ್ಮರಲ್ಲುಂಟೆಂಬುದು ಈ ಮನ್ತ್ರದಲ್ಲಿ ತೋರಿಬರುತ್ತದೆ ಎಂಬ ಭಾವವು ಇದರಿಂದ ಸೂಚಿತವು. ಆದಿ ಪದದಿಂದ ಉಪಾಯ ವಿಭಾಗಾಧಿಕಾರ ಪರಿಕರ ವಿಭಾಗಾಧಿಕಾರ, ಸಾಙ್ಗಪ್ರಪದನಾಧಿಕಾರಗಳಲ್ಲೂ ಹೇಳಲ್ಪಟ್ಟ ಸಿದ್ಧೋಪಾಯ ಸಾಧ್ಯೋಪಾಯ ಸ್ವರೂಪಗಳು ಸೂಚಿಸಲ್ಪಟ್ಟವು. ಪ್ರಾಪ್ತಿ

ಮನುಷ್ಯೈಯು ಫಲಾಪೇಕ್ಷಾಪೂರ್ವಕೋಪಾಯ ವಿಶೇಷಾನುಷ್ಠಾನ ಪ್ರಕಾಶಕತ್ತೈ ದ್ವಯಮುಮ್ ವಿಶದಮಾಗ ಪ್ರಕಾಶಿಪ್ಪಿಕ್ಕಿನ್ರದು. ಇಪ್ಪ್ಯುಪಾಯ ವಿಶೇಷತ್ತೈ

---

ವಿರೋಧಿಯು ತೊಲಗಬೇಕೆಂದೂ, ಅನಿಷ್ಟನಿವೃತ್ತಿಯಿಲ್ಲದೆ ಇಷ್ಟಪ್ರಾಪ್ತಿಯು ಸಾಧ್ಯವಿಲ್ಲವೆಂದು ಅರ್ಥಪಂಚಕಾಧಿಕಾರದಲ್ಲಿ ಹೇಳಿದ ವಿಷಯವು, ಸಮಸ್ತ ಪ್ರತಿಬಂಧಕ ನಿವೃತ್ತಿ ಪೂರ್ವಕಪರಮಪುರುಷಾರ್ಥ ಪ್ರಾಪ್ತಿಯಿಲೇ ರುಚಿ ಎಂಬ ಪ್ರಯೋಗದಿಂದ ಸೂಚಿಸಲ್ಪಟ್ಟಿತು. ಇಷ್ಟ ಪ್ರಾಪ್ತಿರೂಪವಾದ ಪರಮಪುರುಷಾರ್ಥವು ಮೋಕ್ಷವೆಂದು ಪರಿಪೂರ್ಣ ಬ್ರಹ್ಮಾನುಭವಾಧಿಕಾರದಲ್ಲಿ ಹೇಳಲ್ಪಟ್ಟಿರುವುದೂ ಸಹ ಅನುಸಂಧಾನ ಮಾಡಲ್ಪಟ್ಟಿತು. ಉಪಾಯಾಧಿಕಾರ ಪೂರ್ತಿಯೈ ಎಂಬುದರಿಂದ ಉಪಾಯ ವಿಭಾಗಾಧಿಕಾರದಲ್ಲೂ, ಪ್ರಪನ್ನತ್ವಾಧಿಕಾರದಲ್ಲೂ ಹೇಳಲ್ಪಟ್ಟ ಅಭಿಪ್ರಾಯಗಳು ಸೂಚಿಸಲ್ಪಟ್ಟವು. ಇದರಿಂದ ಮೂಲಮಂತ್ರದಲ್ಲಿ ಈ ಮೇಲೆ ಅರ್ಥಾನುಶಾಸನಭಾಗದಲ್ಲಿ ಹೇಳಲ್ಪಟ್ಟ ಸಮಸ್ತಾಭಿಪ್ರಾಯಗಳೂ ಈ ಮೂಲ ಮಂತ್ರದಲ್ಲಿ ಅಡಗಿವೆ ಎಂಬ ಭಾವದಿಂದ "ಅವತ್ತಿಲ್" ಎಂದಾರಂಭಿಸಿದ ವಾಕ್ಯದಿಂದ ತಿಳಿಸಿದ್ದಾರೆ. ಮೂಲಮಂತ್ರದಿಂದುಂಟಾಗುವ ಜ್ಞಾನವೂ ಪ್ರಯೋಜನವೂ ಯಾವುವು ಎಂದರೆ ಮೋಕ್ಷೋಪಾಯಾನುಷ್ಠಾನಾಧಿಕಾರಿಗೆ ಬೇಕಾದ ಜ್ಞಾನವನ್ನೆಲ್ಲಾ ಉಂಟುಮಾಡುವುದು ಎಂದು ಹೇಳಲ್ಪಟ್ಟಿತು.

ಮುಂದೆ ದ್ವಯಮಂತ್ರದ ಪ್ರಯೋಜನವೇನೆಂಬುದನ್ನು ತಿಳಿಸುತ್ತಾರೆ.— ಮೂಲಮಂತ್ರದ ಜ್ಞಾನಮೂಲಕ ಅಧಿಕಾರಿಯಾದವನಿಗೆ ಭರನ್ಯಾಸರೂಪೋಪಾಯಾನುಷ್ಠಾನ ಕ್ರಮವನ್ನು ಸಮಗ್ರವಾಗಿ ದ್ವಯವು ತಿಳಿಸುತ್ತದೆಯಾದುದರಿಂದ ಇದು ಉಪಾಯಾನುಷ್ಠಾನ ಮಂತ್ರವೆಂದು ಹೇಳುತ್ತಾರೆ. ಇದು ಕರಣಮಂತ್ರವೆಂದೂ ಹೇಳಲ್ಪಡುತ್ತದೆ. ಇಪ್ಪಡಿ ಅಧಿಕಾರಿಯಾನ ಮನುಷ್ಯೈಯು. ಹೀಗೆ ಮೂಲಮಂತ್ರದ ಜ್ಞಾನದಿಂದ ಉಪಾಯಾನುಷ್ಠಾನಕ್ಕೆ ಅಧಿಕಾರಿಯಾದ ಮನುಷ್ಯನಿಗೆ, ಫಲಾಪೇಕ್ಷಾ ಪೂರ್ವಕ - ಪರಮಾತ್ಮನಿಗೆ ಶೇಷಭೂತನಾಗಿಯೂ ಪರತಂತ್ರನಾಗಿಯೂ ಇರುವ ತನಗೆ ಫಲಾಪೇಕ್ಷೆಯು ಯಾವುದೆಂದರೆ? ಶ್ರೀಯಃಪತಿಯನ್ನು ಪ್ರಾಪ್ಯನಾಗಿ ಹೊಂದಿ ಲೋಕದಂಪತಿಗಳಿಗೆ ಕೈಂಕರ್ಯವನ್ನು ಎಸಗುವುದು ; ದ್ವಯದ ಉತ್ತರ ಖಂಡದಲ್ಲಿ ಹೇಳಲ್ಪಡುವದರ ಅಪೇಕ್ಷೆಯು ಪೂರ್ವಕವಾಗಿ, ಉಪಾಯ ವಿಶೇಷಾನುಷ್ಠಾನ ಪ್ರಕಾಶಕತ್ತೈ - ಶರಣಾಗತಿ ರೂಪವಾದ ಉಪಾಯ ವಿಶೇಷದ ಅನುಷ್ಠಾನಕ್ರಮವನ್ನು, ಪೂರ್ವಖಂಡದಲ್ಲೂ ದ್ವಯಮುಂ - ದ್ವಯಮನ್ತ್ರವು, ವಿಶದಮಾಗ ಪ್ರಕಾಶಿಪ್ಪಿಕ್ಕಿನ್ರದು - ಸ್ಫುಟತರವಾಗಿ ಪ್ರಕಾಶಿಸುತ್ತದೆ. ದ್ವಯದ ಪೂರ್ವಖಂಡದಲ್ಲಿ ಉಪಾಯಾನುಷ್ಠಾನ ಪ್ರಕಾರವೂ, ಉತ್ತರ ಖಂಡದಲ್ಲಿ ಅದರಿಂದುಂಟಾಗುವ ಫಲವೂ, ಹೇಳಲ್ಪಡುತ್ತವೆಂಬ ಭಾವವು. ಆದುದರಿಂದ ಮೂಲಮಂತ್ರವು ಅಧಿಕಾರ ಸಂಪಾದಕ ಮಂತ್ರವು. ಮನ್ತ್ರಶ್ರೀಶಸ್ಯ ; ದ್ವಯನಾಮರೋ

ವಿಧಿಕ್ಕಿರದುಂ ಚರಮಶ್ಲೋಕತ್ತಿಲ್. ಇವ್ವೈ ಮೂನ್ರಿಲುಮ್ ತನಿತ್ತನಿಯೇ ಎಲ್ಲಾ ಅರ್ಥಙ್ಗಳುಮ್ ಶಾಬ್ದಮಾಗವುಮ್, ಅರ್ಥಮಾಗವುಮ್ ಕಾಣಲಾಮಾಗಿಲುಮ್ ಒರೊನ್ರಿಲೇ ಒರೊನ್ರು ನೋಕ್ಕಾಯಿರುಕ್ಕುಮ್.

---

ಉಪಾಯಾನುಷ್ಠಾನರೂಪ ಶರಣಮನ್ತ್ರವಾದುದರಿಂದ ಮನ್ತ್ರರತ್ನವು ಎಂಬ ಭಾವವು. ಹೀಗೆ ಇವೆರಡೇ ಸಾಕಲ್ಲವೇ? ಮೂರನೆಯ ಚರಮ ಶ್ಲೋಕದ ಉಪಯೋಗವೇನು? ಎಂದರೆ ಮುಂದಿನವಾಕ್ಯದಿಂದ ತಿಳಿಸುತ್ತಾರೆ.—ಈ ಭರನ್ಯಾಸ ಮೋಕ್ಷೋಪಾಯಾನುಷ್ಠಾನವನ್ನು ಮಾಡತಕ್ಕದ್ದೆಂಬುದನ್ನು ಚರಮ ಶ್ಲೋಕವು ವಿಧಿಸುವುದರಿಂದ ಪರಮ ಹಿತೋಪದೇಶ ಮಂತ್ರವೆಂದು ಹೇಳುತ್ತಾರೆ. ಅವ್ವುಪಾಯ ವಿಶೇಷತ್ತೈ - ದ್ವಯ ಮಂತ್ರದ ಮೂಲಕ ಮಾಡಿದ ಭರನ್ಯಾಸ ರೂಪವಾದ ಉಪಾಯ ವಿಶೇಷವನ್ನು, ವಿಧಿಕ್ಕಿರದು - ವಿಧಿ ಎಂದರೆ ಆಜ್ಞಾರೂಪದಲ್ಲಿ ಬೋಧಿಸುವಂತಾದ್ದು. ದ್ವಯಮನ್ತ್ರವು ಅನುಷ್ಠಾನವಾಗಿ ಮುಖ್ಯವು. ಅದು ಒಂದೇ ಸಾಲದೋ, ಮೂಲಮಂತ್ರ ಚರಮ ಶ್ಲೋಕಗಳೂ ಸಹ ಆವಶ್ಯಕವೋ? ಮೂರರ ಜ್ಞಾನವೂ ಬೇಕೋ? ಎಂದರೆ ಮೂರೂ ಭರನ್ಯಾಸವಿಷಯವಾಗಿದ್ದರೂ ಮೂರೂ ಆವಶ್ಯಕವು; ಹೇಗೆಂದರೆ ತಿಳಿಸುತ್ತಾರೆ. ಮೂರರ ತಾತ್ಪರ್ಯಗಳು ಬೇರೆ ಬೇರೆ ಎಂದು ಮುಂದೆ ಹೇಳುತ್ತಾರೆ.

ಇವ್ವೈ ಮೂನ್ರಿಲುಮ್ - ಈ ಮೂರು ಮಂತ್ರಗಳಲ್ಲೂ, ತನಿತ್ತನಿಯೇ - ಪೃಥಕ್ಪೃಥಕ್ಕಾಗಿ, ಎಲ್ಲಾ ಅರ್ಥಙ್ಗಳುಮ್ - ತತ್ತ್ವಹಿತ ಪುರುಷಾರ್ಥಗಳ ವಿಷಯವಾದ ಎಲ್ಲಾ ತಾತ್ಪರ್ಯಗಳೂ, ಶಾಬ್ದಮಾಗವುಮ್ ಅರ್ಥಮಾಗವುಮ್ ಕಾಣಲಾಮಾಗಿಲುಮ್ - ಶಾಬ್ದವಾಗಿಯೂ ಅರ್ಥವಾಗಿಯೂ ಈ ಮೂರರಲ್ಲೂ ಕಾಣುವುದಾದರೂ, ಒರೊನ್ರಿಲೇ - ಒಂದೊಂದರಲ್ಲೇ, ಒರೊನ್ರು - ಒಂದೊಂದು ಭಾವವು, ನೋಕ್ಕಾಯಿರುಕ್ಕುಮ್ - ಪ್ರಧಾನವಾಗಿ ಉಪಪಾದಿತವಾಗಿದೆ. ಮೂಲಮಂತ್ರದಲ್ಲಿ ಪ್ರಧಾನಾಭಿಪ್ರಾಯವು ಅಧಿಕಾರ ಪ್ರಾಪ್ತಿಯೂ, ಚರಮ ಶ್ಲೋಕದಲ್ಲಿ ಹಿತೋಪದೇಶ ರೂಪವಿಧಿಯೂ, ಮುಖ್ಯವಾಗಿ ಉಪಪಾದಿತವು, ಎಂಬ ಭಾವವು. ಇದರಿಂದ ಅಧಿಕಾರ ಸಂಪಾದಕ ಜ್ಞಾನವು ದ್ವಯ ಚರಮ ಶ್ಲೋಕಗಳಲ್ಲಿ ಅಷ್ಟು ವ್ಯಕ್ತವಲ್ಲವೆಂದೂ, ದ್ವಯದಲ್ಲಿರುವ ಅನುಷ್ಠಾನವು ಮಿಕ್ಕೆರಡರಲ್ಲೂ ಅಷ್ಟು ವ್ಯಕ್ತವಲ್ಲವೆಂಬುದೂ, ಚರಮ ಶ್ಲೋಕದ ವಿಧಿರೂಪ ಹಿತೋಪದೇಶವು ಮಿಕ್ಕೆರಡರಲ್ಲೂ ವ್ಯಕ್ತವಲ್ಲವೆಂಬುದು ದ್ಯೋತಿತವು. ಮೂಲಮಂತ್ರದಿಂದ ಸ್ವರೂಪಜ್ಞಾನವೂ, ದ್ವಯದಿಂದ ಆ ಜ್ಞಾನದ ಮೂಲಕ ಅನುಷ್ಠಾನವೂ, ಚರಮ ಶ್ಲೋಕದಿಂದ ಅನುಷ್ಠಾನದ ಸಮರ್ಥನೆಯೂ, ಹೇಳಲ್ಪಡುವವು ಎಂಬುದು ಸಂಗ್ರಹಾಭಿಪ್ರಾಯವು. ಆದುದರಿಂದ ಮೂರೂ ಅಪರಿಹೇಯಗಳು. ಪ್ರಥಮತಃ ಮೂಲಮಂತ್ರ ಮೂಲಕ ಅಧಿಕಾರ ಪ್ರಾಪ್ತಿಯೂ, ಅನಂತರ ದ್ವಯ

ದಲ್ಲಿ ಅನುಷ್ಠಾನವೂ ಎಂದು ಹೇಳಿದ ಕ್ರಮವೇನೋ ಸರಿಹೋಯಿತು. ಆದರೆ ಚರಮ ಶ್ಲೋಕವು ವಿಧಿ ಪ್ರತಿಪಾದಕವಾದರೆ ವಿಧಿಯಾದನಂತರವಲ್ಲವೇ ಅನುಷ್ಠಾನವು, ಆದುದರಿಂದ ಚರಮ ಶ್ಲೋಕವಾದನಂತರವಲ್ಲವೇ ದ್ವಯಮಂತ್ರೋಪಪಾದನವು ಎಂಬಾಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಅಪ್ಪಣೆ ಕೊಡಿಸುತ್ತಾರೆ, ಏನೆಂದರೆ—ಮೂಲಮಂತ್ರದ ಕೆಲಭಾಗಗಳ ಉಪಪಾದನೆಯು ದ್ವಯದಲ್ಲೂ ದ್ವಯದ ಕೆಲಭಾಗದ ಉಪಪಾದನೆಯು ಚರಮ ಶ್ಲೋಕದಲ್ಲೂ ಅಡಗಿರುವದರಿಂದ ಮೂಲ ಮಂತ್ರ, ದ್ವಯ, ಚರಮ ಶ್ಲೋಕವೆಂಬ ಕ್ರಮವು ಸಾಧುವೇ ಎಂದು ಹೇಳುತ್ತಾರೆ ಚರಮ ಶ್ಲೋಕವು ದ್ವಯ ಮಂತ್ರದ ಉಪಪಾದನೆಯೆಂದೂ ಭಾವಿಸಬಹುದು. ಈ ಭಾವವನ್ನೇ ಮುಂದಿನ ವಾಕ್ಯದಿಂದ ಹೇಳುತ್ತಾರೆ. ಅಥವಾ ಭರನ್ಯಾಸಾನುಷ್ಠಾನವಿಧಿಯನ್ನು ಹೇಗೆ ಅನುಷ್ಠಿಸಬೇಕೆಂಬುದನ್ನು **ಸರ್ವ ಧರ್ಮಾನ್ ಪರಿತ್ಯಜ್ಯ** ಎಂಬುದರಿಂದ ಹೇಳಿ, ಅಂತಹ ಭರನ್ಯಾಸಾನುಷ್ಠಾನದಲ್ಲಿ ಪೂರ್ಣ ವಿಶ್ವಾಸ ಉಂಟಾಗುವದಕ್ಕಾಗಿ ಚರಮ ಶ್ಲೋಕದಲ್ಲಿ **ಮೋಕ್ಷಯಿಷ್ಯಾಮಿ** ಮತ್ತು **ಮಾಶುಚಃ** ಎಂಬ ಪ್ರಯೋಗಗಳಿರುವದರಿಂದ, ದ್ವಯಾನುಷ್ಠಾನದ ದೃಢೀಕರಣವು ಚರಮಶ್ಲೋಕವೆಂದೂ ಭಾವಿಸಬಹುದು. ಅನುಷ್ಠಾನ ಕ್ರಮವನ್ನೂ ಹೇಳಿ ಅಧಿಕಾರಿಯಲ್ಲಿ ಮಹಾ ವಿಶ್ವಾಸದ ಸ್ಥಿರೀಕರಣವು ಮಾಡಲ್ಪಡುವದರಿಂದ, ದ್ವಯಾನಂತರ ಚರಮಶ್ಲೋಕದ ಉಪಪಾದನೆಯು ಉಪಪನ್ನವೇ ಎಂಬ ಭಾವವು. ಮೂಲಮಂತ್ರದಲ್ಲಿ ಪರತತ್ವದ ಮತ್ತು ಜೀವಾತ್ಮನ ಸ್ವರೂಪವಿಧಾನವೇ ಭರನ್ಯಾಸಕ್ಕೆ ಆವಶ್ಯಕವಾಗಿ, ಅದೇ ಪ್ರಧಾನಾಂಶವು. ಶರಣ್ಯಪ್ರಾಪ್ತಿಗೆ ಬೇಕಾದ ಅನುಷ್ಠಾನದ ಮತ್ತು ಅದರಿಂದುಂಟಾಗುವ ಫಲ ಇವೇ ಮುಖ್ಯವಾಗಿ ದ್ವಯದಲ್ಲಿ ವಿಧೇಯಾಂಶವು. ಚರಮ ಶ್ಲೋಕದಲ್ಲಿ ಈ ಶರಣಾಗತಿ ರೂಪೋಪಾಯ ವಿಧಿಯ ಸಮರ್ಥನೆಯೇ ಮುಖ್ಯಾಂಶವು. ಇವುಗಳನ್ನು ಮನಸ್ಸಿನಲ್ಲಿಡತಕ್ಕದ್ದು. ಆದುದರಿಂದ ಒಂದೊಂದರಲ್ಲಿ ಒಂದೊಂದು ಪ್ರಾಧಾನ್ಯದಿಂದ ಹೇಳಲ್ಪಟ್ಟಿರುವದರಿಂದ, ಮೂರೂ ಆವಶ್ಯಕವೇ ವಿನಾ ಒಂದೊಂದೇ ಸಾಲದು. ಮೂರರ ಜ್ಞಾನವೂ ಆವಶ್ಯಕವಾದುದರಿಂದಲೇ ರಹಸ್ಯತ್ರಯವೆಂಬುದೇ ತಮ್ಮ ಗ್ರಂಥಕ್ಕೆ ನಾಮಧೇಯವಾಯಿತು ಎಂಬ ಭಾವವು. ಶಾಸ್ತ್ರ ಬಾಹುಳ್ಯದಿಂದಲೂ, ಕಾಲದ ಅಲ್ಪತ್ವದಿಂದಲೂ ಎಲ್ಲವನ್ನೂ ತ್ಯಜಿಸಿ ಸಾರತಮವಾದುದನ್ನು ಮಾತ್ರವೇ ಹೇಳುತ್ತೇನೆಂಬ ಸಙ್ಕಲ್ಪಕ್ಕನುಗುಣವಾಗಿಯೇ ಈ ಮೂರೂ ಆವಶ್ಯಕವಾಗಿ ಉಪಪಾದಿತವೆಂಬ ಭಾವವು ಸೂಚಿತವು.

ರಹಸ್ಯತ್ರಯದಲ್ಲಿ ಪರಸ್ಪರಾಭಿಪ್ರಾಯಗಳ ವಿವರಣೆಯುಂಟು.

---

**ತಿರುಮನ್ದಿರತ್ತಿಲ್** - ಮೂಲ ಮನ್ತ್ರದ, **ಪ್ರಥಮ ಪದತ್ತಿಲ್** - ಮೊದಲು ಪದವಾದ ಪ್ರಣವದ, **ಪ್ರಥಮಾಕ್ಷರತ್ತಿಲ್** - ಓಂ ಎಂಬಲ್ಲಿರುವ ಅ, ಉ,

## ರಹಸ್ಯತ್ರಯೇ ಅನ್ಯೋನ್ಯ ವಿವರಣ ವಿವರಣೀಯ ಭಾವೋಕ್ತಿ.

**ತಿರುಮನ್ತ್ರತ್ತಿಲ್ ಪ್ರಥಮ ಪದತ್ತಿಲ್ ಪ್ರಥಮಾಕ್ಷರತ್ತಿಲೇ ಸಂಕ್ಷಿಪ್ತ ಮಾನ ಶರಣ್ಯ ಪರ (ತ) ತ್ವತ್ತೈಯುಮ್, ಇದಿಲ್ ಮಧ್ಯಮ ತೃತೀಯಪದ ಙ್ಗಳಿಲೇ ಪ್ರತಿಪನ್ನಮಾನ ಉಪಾಯೋಪೇಯಙ್ಗಳೈಯುಮ್ ಅಡೈವೇ ವಿಶದಮಾಕ್ಕುಕಿರದು ದ್ವಯಮ್.**

---

ಮ.ಕಾರಗಳಲ್ಲಿ ಮೊದಲನೆಯ ಅಕ್ಷರವಾದ ಅಕಾರದಲ್ಲಿ, **ಸಂಕ್ಷಿಪ್ತಮಾನ**-ಸಂಕ್ಷೇಪ ವಾಗಿ ಅಡಗಿರುವ, **ಶರಣ್ಯಪರತ್ವತ್ತೈಯುಮ್** - **"ಅಕಾರೋವೈವಿಷ್ಣುಃ" "ಅಕಾರೋ ವಿಷ್ಣುವಾಚಕಃ" "ಅಕಾರಾರ್ಥೋವಿಷ್ಣುಃ" "ಅಕಾರೋವಿಷ್ಣು ರಿತ್ಯುಕ್ತೋ"** ಇತ್ಯಾದಿ ಪ್ರಮಾಣಾನುಸಾರವಾಗಿ, ಸರ್ವ ಲೋಕಕ್ಕೂ ರಕ್ಷಕ ನಾದ ಶ್ರೀಮಹಾವಿಷ್ಣುವಿನ ಸರ್ವೋತ್ಕೃಷ್ಟತೆಯನ್ನು, **ಶರಣ್ಯ ಪರತತ್ವತ್ತೈಯುಮ್** ಎಂಬ ಪಾಠವಾದರೆ, ಸರ್ವಲೋಕ ಶರಣ್ಯನಾನ ಶ್ರೀ ಮಹಾವಿಷ್ಣುವೇ ಜಗತ್ಕಾರಣನಾಗಿ ತನ್ಮೂಲಕ ಲಕ್ಷ್ಮೀಪತಿಯಾದ ಪರತತ್ವವಾದ ಶ್ರೀಮಹಾವಿಷ್ಣು ವನ್ನೂ, ಎಂಬರ್ಥವು. **ಇದಿಲ್**-ಈ ಅಷ್ಟಾಕ್ಷರ ಮನ್ತ್ರದಲ್ಲಿ,**ಮಧ್ಯಮ** ತೃತೀಯ **ಪದಙ್ಗಳಿಲೇ**-ಎರಡನೆಯ ಪದವಾದ **ನಮ** ಶ್ಶಬ್ದದಲ್ಲೂ,ಮೂರನೆಯ ಪದವಾದ **ನಾರಾಯಣಾಯ** ಎಂಬುವುಗಳಲ್ಲಿ,**ಪ್ರತಿಪನ್ನಮಾನ**-ತೋರಿಬರುವ,**ಉಪಾಯೋ ಪೇಯಙ್ಗಳೈಯುಮ್**-ನಮಶ್ಶಬ್ದದಿಂದ ಶರಣಾಗತಿರೂಪ ಉಪಾಯವನ್ನು,ನಾರಾ ಯಣ ಶಬ್ದದಿಂದ ಉಪೇಯವಾದ ಪ್ರಾಪ್ಯವನ್ನೂ, **ಅಡೈವೇ** - ಹೊಂದುವಿಕೆ ಯನ್ನು, **ದ್ವಯಂ** – ದ್ವಯಮನ್ತ್ರವು, **ವಿಶದಮಾಕ್ಕುಕಿರದು** - ವ್ಯಕ್ತವಾಗಿ ತಿಳಿಸುತ್ತದೆ. ಪರದೇವತಾ ಪಾರಮಾರ್ಥ್ಯಾಧಿಕಾರದಲ್ಲಿ ಹೇಳಲ್ಪಟ್ಟ **ಶ್ರಿಯಃಪ ತಿಯೇ** ಪರತತ್ವವೆಂದೂ, ಸಾಙ್ಗಪ್ರಪದನಾಧಿಕಾರದಲ್ಲಿ ಹೇಳಲ್ಪಟ್ಟ ಭರನ್ಯಾಸವೇ ಉಪಾಯನೆಂದೂ, ಫಲವು ಪರಿಪೂರ್ಣಾನುಭವಾದಿಕಾರದಲ್ಲಿ ಹೇಳಲ್ಪಟ್ಟ ಶೇಷಿ ಕೈಂಕರ್ಯ ಪ್ರಾಪ್ತಿಎಂದೂ, ವ್ಯಕ್ತವಾಗಿ ದ್ವಯವು ತಿಳಿಸುತ್ತದೆಂಬ ಭಾವವು. ಶರಣ್ಯ ಪರತ್ವವು ಅಕಾರದಿಂದ ಪ್ರತಿಪಾದನವೆಂಬುದು **ಅವರಕ್ಷಣೇ** ಎಂಬ ಧಾತ್ವರ್ಥ ದಿಂದಲೇ ವ್ಯಕ್ತವು; ಅಕಾರದಿಂದ ತೋರಿಬರುವ ಅರ್ಥಗಳು ನಾಲ್ಕು (೧) ಜಗತ್ಕಾ ರಣತ್ವವು (೨) ಸರ್ವರಕ್ಷಕತ್ವವು (೩) ಸರ್ವಶೇಷಿತ್ವವು(೪) ಲಕ್ಷ್ಮೀಪತಿತ್ವವು, ಎಂಬ ದಾಗಿ ಹಿಂದೆಯೇ ಉಪಪಾದಿತವು. ಅಕಾರವು ಉಪಾಯವನ್ನೂ ಉಪೇಯವನ್ನೂ ಎರಡನ್ನೂ ಬೋಧಿಸುತ್ತದೆಂಬುದನ್ನು ಅದರಿಂದಲೇ ಗ್ರಹಿಸಬಹುದು. ಆ ಪ್ರಮಾ ಣವು ಯಾವುದೆಂದರೆ — **"ವಿನ ಮಕ್ಷರ ರೂಪೇಣ ಕಾರಣತ್ವಮಿಹೋದಿ ತಮ್ । ರಕ್ಷಕತ್ವಂಚ ಧಾತ್ವರ್ಥಾತ್ ಶೇಷಿತ್ವಂ ಪದರೂಪತಃ । ಶ್ರೀಶತ್ವಂ ವಾಚ್ಯಗತ್ಯಾಚ ಯುಜ್ಯತೇ ಪರಮಾತ್ಮನಃ"** ಹೀಗೆ ನಾಲ್ಕು ಅರ್ಥಗಳು ತೋರಿ

**ಇದಿಲ್ "ಪ್ರಪದ್ಯೇ" ಎಙ್ಗಿರ ಪದತ್ತಿಲ್ ಉತ್ತಮನಾಲೇ ವಿವಕ್ಷಿತಮಾನ ಅಧಿಕಾರಿ ವಿಶೇಷತ್ತೈಯುಮ್, ಅರ್ಥಸಿದ್ಧಮಾನ ಉಪಾಯಾನ್ತರ ನೈರಪೇಕ್ಷ್ಯತ್ತೈಯುಮ್, ಉಪೇಯತ್ತಿಲ್ ನಮಶ್ಶಬ್ದ ಸಂಕ್ಷಿಪ್ತಮಾನ ವಿರೋಧಿ ನಿವೃತ್ತ್ಯಂಶತ್ತೈಯುಮ್ ವೆಳಿಯಿಡುಗಿರದು ಚರಮಶ್ಲೋಕಮ್.**

---

ಬರುತ್ತವೆ; ಹೀಗೆ ರಕ್ಷಕತ್ವದಿಂದ ಉಪಾಯತ್ವವೂ, ಶ್ರೀಶತ್ವದಿಂದ ಉಪೇಯತ್ವವೂ ಅಕಾರಶಬ್ದ ಒಂದರಿಂದಲೇ ತೋರಿಬಂದರೂ, ನಮಶ್ಶಬ್ದವು ಶರಣಾಗತಿಯನ್ನೂ ನಾರಾಯಣ ಶಬ್ದವು ಪ್ರಾಪ್ಯವನ್ನೂ ಬೋಧಿಸುತ್ತದೆ. ನಾರಾಯಣ ಶಬ್ದದಲ್ಲಿ ಪ್ರಾಪ್ಯವು ವ್ಯಕ್ತವು; ಹಿಂದೆ ಅರ್ಥಪಂಚಕಾಧಿಕಾರದಲ್ಲಿ, "ಆದೌ ಪ್ರಾಪ್ಯಂ" ಎಂಬಲ್ಲಿ ಅಕಾರದಲ್ಲೂ ಸೂಚಿತವೆಂದೂ ಹೇಳಿರುತ್ತಾರೆ—೩೭ನೆಯ ಪುಟವನ್ನು ನೋಡಿ. ಇಲ್ಲಿ ಮಧ್ಯಮ ತೃತೀಯಪದಗಳಲ್ಲಿ ಉಪಾಯವು ತೋರಿಬರುತ್ತದೆಂದು ಹೇಳಿರುವದರಿಂದ ಅಲ್ಲಿ ಹೇಳಿರುವ **ಇಷ್ಟೋಪಾಯಂತು ಅಯನ ನಮಸೋಃ** ಎಂಬುದನ್ನು ಮನಸ್ಸಿನಲ್ಲಿಟ್ಟು ಉಪಾಯವು ನಮಸ್ಸೆಂಬ ಎರಡನೆಯ ಪದದಲ್ಲೂ, ಮೂರನೆಯ ಪದವಾದ ನಾರಾಯಣ ಶಬ್ದದಲ್ಲಿರುವ **ಅಯನ** ವೆಂಬುದರಿಂದಲೂ ಬೋಧಿತವು ಎಂದು ಗ್ರಹಿಸತಕ್ಕದ್ದು; **ನಾರ** ಶಬ್ದವಾಚ್ಯರಾದ ಜೀವಾತ್ಮರುಗಳಿಗೆಲ್ಲಾ ಅಯನಂ ಉಪಾಯನು ಎಂಬರ್ಥವು ಬೋಧಿತವು. ಆದುದರಿಂದ ಮಧ್ಯಮತೃತೀಯ **ಪದಙ್ಗಳಿಲೇ ಪ್ರತಿಪನ್ನಮಾನ ಉಪಾಯೋಪೇಯಙ್ಗಳೈಯುಮ್** ಎಂದು ಹೇಳಿರುವದು ಕ್ರಮಾಲಂಕಾರ ಮಾತ್ರವೇ ಎಂದು ಭಾವಿಸತಕ್ಕದ್ದಲ್ಲವು. ಹೀಗೆ ಈ ಮೂರು ಅಭಿಪ್ರಾಯಗಳು (೧) ಶರಣ್ಯಪರತ್ವ (೨) ಉಪಾಯ (೩) ಉಪೇಯ ಭಾವಗಳೆಲ್ಲಾ ದ್ವಯದಲ್ಲಿ ವ್ಯಕ್ತವಾಗಿ ಉಪಪಾದಿತವಾಗಿವೆ ಎಂಬ ಭಾವವು. ಇವರಿಂದ ಮುಂದೆ ದ್ವಯಾಧಿಕಾರದಲ್ಲಿ ಇವುಗಳನ್ನು ಉಪಪಾದಿಸುವೆವು ಎಂಬ ತಾತ್ಪರ್ಯವು. ಆದುದರಿಂದ ದ್ವಯವು ಮೂಲಮನ್ತ್ರದ ವಿವರಣವೆಂದೂ ಭಾವಿಸಬಹುದೆಂಬುದು ತಾತ್ಪರ್ಯವು.

ಮುಂದೆ ದ್ವಯಾರ್ಥದ ವಿವರಣೆಯು ಚರಮ ಶ್ಲೋಕದಲ್ಲೂ ಉಂಟೆಂದು ಉಪದೇಶಿಸುತ್ತಾರೆ.—**ಇದಿಲ್** - ಈ ದ್ವಯಮನ್ತ್ರದಲ್ಲಿ, ಪೂರ್ವಖಂಡದ ಕೊನೆಯಲ್ಲಿರುವ, **ಪ್ರಪದ್ಯೇ ಎಙ್ಗಿರಪದತ್ತಿಲ್** - ಶರಣಮಹಂ ಪ್ರಪದ್ಯೇ ಎಂಬ ಪದದಲ್ಲಿರುವ, **ಉತ್ತಮನಾಲೇ ವಿವಕ್ಷಿತಮಾನ** - ನಾನು ಶರಣುಹೊಂದುವೆನು ಎಂಬ ಉತ್ತಮ ಪುರುಷ ಪ್ರಯೋಗದಿಂದ ಸೂಚಿಸಲ್ಪಟ್ಟ, **ಅಧಿಕಾರ ವಿಶೇಷತ್ತೈ**- ಅನನ್ಯ ಶರಣತ್ವ, ಆಕಿಂಚನ್ಯತ್ವಾದಿಗಳಿಂದ ಅಧಿಕಾರಿಯಾಗಿರುವ ಪ್ರಪನ್ನನಾದ ತನ್ನನ್ನು, **ಅರ್ಥಸಿದ್ಧಮಾನ ಉಪಾಯ ನೈರಪೇಕ್ಷ್ಯತ್ತೈಯುಮ್**, - ಶ್ರೀಮನ್ನಾರಾಯಣ ಚರಣೌ ಶರಣಂ ಎಂದಿರುವದರಿಂದ ತಾನು ಅನನ್ಯಗತಿಕನಾಗಿ ಆತನ ಪಾದದ್ವಯವಲ್ಲದೆ ಬೇರೆ ಉಪಾಯವೇ ಇಲ್ಲವೆಂಬುದು ಅರ್ಥವಾಗಿ ತೋರಿ

## ರಹಸ್ಯತ್ರಯಸ್ಯ ಉಪಜೀವ್ಯತೋಪಪಾದನಮ್.

**ಇವೈ ಮೂನ್ರುಮ್ ನಮಕ್ಕು ಜ್ಞಾನಾನುಷ್ಠಾನ ಫಲನಿದಾನಙ್ಗಳಾಯ್ ಕೊಂಡು ಧಾರಕ ಪೋಷಕ ಭೋಗ್ಯಙ್ಗಳ್.** (೧) "ವ್ಯಕ್ತಂ ಹಿ ಭಗವಾನ್

ಬರುವದರಿಂದ,ಪರಮಪುರುಷನಲ್ಲದೆ ಬೇರೇ ಉಪಾಯವಿಲ್ಲವು ಮತ್ತು ಶರಣಾಗತಿಯ ಪರಿಕರಗಳಮಾತ್ರವಲ್ಲದೆ ಇನ್ನೂ ಯಾವ ಸಾಧನಗಳ ಅಪೇಕ್ಷೆಯೂ ಇಲ್ಲವು ಎಂಬ ಭಾವವನ್ನು **ನಮಶ್ಶಬ್ದ ಸಂಕ್ಷಿಪ್ತವಾದ** - ಉತ್ತರಖಂಡದಲ್ಲಿರುವ "ನಾರಾಯಣಾಯ **ನಮಃ**"ಎಂಬಲ್ಲಿರುವ ನಮಶ್ಶಬ್ದದಲ್ಲಿ ಅಡಗಿರುವ,ವಿರೋಧಿನಿವೃತ್ತ್ಯಂಶ **ತ್ತೈಯುಮ್** – ವಿರೋಧಿ ಪರಿಹಾರ ವಿಷಯವನ್ನೂ, **ಚರಮಶ್ಲೋಕವು ವೆಳಿಯಿಟುಗಿರದು**-ಪ್ರತಿಪಾದಿಸುತ್ತದೆ. ದ್ವಯಮಂತ್ರದಲ್ಲಿ ತೋರಿಬರುವ ಮೂರು ಅಂಶಗಳ ಪ್ರತಿಪಾದನೆಯನ್ನು ಚರಮಶ್ಲೋಕದಲ್ಲಿ ಕಾಣಬಹುದು ಎಂದು ಹೇಳಿ ದ್ವಯಾರ್ಥದ ವಿವರಣೆಯನ್ನು ಚರಮಶ್ಲೋಕದಲ್ಲಿ ಕಾಣಬಹುದು ಎಂದು ಹೇಳಿದರು, ಆ ಮೂರು ಅಭಿಪ್ರಾಯಗಳು ಯಾವುವೆಂದರೆ—(೧) ಅನನ್ಯ ಶರಣತ್ವ, ಆಕಿಂಚನ್ಯವಿರುವ ಅಧಿಕಾರಿ ವಿಶೇಷವು (೨) ಶರಣಾಗತಿಯಲ್ಲದೆ ಅನ್ಯೋಪಾಯ ನೈರಪೇಕ್ಷ್ಯವು (೩) ವಿರೋಧಿನಿವೃತ್ತಿಯೂ; ಇವುಗಳ ವಿವರಣೆಯನ್ನು ಚರಮಶ್ಲೋಕದ ಉಪಪಾದನೆಯಲ್ಲಿ ಕಾಣಬಹುದು. ಸಙ್ಗ್ರಹವಾಗಿ ಅನನ್ಯಶರಣತ್ವ ಆಕಿಂಚನ್ಯಗಳು ಮಾಮೇಕಂ ಎಂಬಲ್ಲಿ, ಮಾಮೇಕಂ ಶರಣಂ ವ್ರಜ ಎಂಬಲ್ಲಿ ಅನ್ಯೋಪಾಯ ನೈರಪೇಕ್ಷ್ಯವು, ಮೋಕ್ಷಯಿಷ್ಯಾಮಿ ಎಂಬಲ್ಲಿ ವಿರೋಧಿ ನಿವೃತ್ತಿಯೂ ಉಪಪಾದಿಸಲ್ಪಡುವುವು.

### ಮೂರು ರಹಸ್ಯವೂ ಅವಶ್ಯಕವಾಗಿ, ಹೇಗೆ ಉಪಜೀವ್ಯವೆಂಬುದು.

ಹೀಗೆ ಮೂಲಮನ್ತ್ರದ ವಿವರಣೆಯು ದ್ವಯವಾಗಿಯೂ, ದ್ವಯದ ವಿವರಣೆಯು ಚರಮಶ್ಲೋಕವಾಗಿಯೂ,ಆದನಂತರ ಮೂರು ರಹಸ್ಯಗಳಆವಶ್ಯಕವೇನು? ದ್ವಯವು ಅನುಷ್ಠಾನ ಮಂತ್ರವಾಗಿ ಮೋಕ್ಷದಾಯಕವಾಗಿರುವದರಿಂದ ಅದು ಒಂದೇ ಸಾಕಲ್ಲವೇ?ಮೂರೂ ಹೇಗೆಆವಶ್ಯಕವೆಂದರೆ ಹೇಳುತ್ತಾರೆ. ಧಾರಕಪೋಷಕಭೋಗ್ಯಗಳಾಗಿ ಮೂರೂ ಮೋಕ್ಷಾರ್ಥಿಗೆ ಉಪಜೀವ್ಯವೆಂದು ಹೇಳುತ್ತಾರೆ---ಇವೈ **ಮೂನ್ರುಮ್** - ಈ ಮೂರು ರಹಸ್ಯಗಳೂ, **ನಮಕ್ಕು** - ಮೋಕ್ಷಾರ್ಥಿಗಳಾಗಿರುವ ನಮಗೆ, ಅನನ್ಯ ಶರಣರಾಗಿ, ಆಕಿಂಚನರಾಗಿರುವ ನಮಗೆ, **ಜ್ಞಾನಾನುಷ್ಠಾನ ಫಲನಿದಾನಙ್ಗಳಾಯ್ ಕೊಂಡು ಧಾರಕ ಪೋಷಕ ಭೋಗ್ಯಙ್ಗಳ್** - ಸ್ವಸ್ವರೂಪ ಪರಸ್ವರೂಪ, ತತ್ಸಂಬಂಧಾದಿ ಜ್ಞಾನಕ್ಕೆ ಕಾರಣವಾಗಿ ಮೂಲಮನ್ತ್ರವು ಧಾರಕವಾಗಿಯೂ, ಚರಮಶ್ಲೋಕವು ಅನುಷ್ಠಾನಕ್ಕೆ ಕಾರಣವಾಗಿ ಪೋಷಕವಾಗಿಯೂ,

(೧) ನಾರದೀಯ

ದೇವ ಸ್ಸಾಕ್ಷಾನ್ನಾರಾಯಣ ಸ್ಸ್ವಯಮ್ । ಅಷ್ಟಾಕ್ಷರ ಸ್ವರೂಪೇಣ ಮುಖೇಷು ಪರಿವರ್ತತೇ" ಎಂಬ್ಗರಪಡಿಯೇ,ದೇಶಿಕಜಿಹ್ವೆಯಿಲೇ ಇರುನ್ದು,

---

ದ್ವಯವು ಫಲವಾದ ಪರಮಪುರುಷಾರ್ಥ ಪ್ರಾಪ್ತಿಗೆ ಹೇತುವಾಗಿ ಉಪಾಯಾನುಷ್ಠಾನರೂಪವಾಗಿ ನಿರತಿಶಯ ಸುಖದಾಯಕವಾದುದರಿಂದ ಭೋಗ್ಯವಾಗಿಯೂ, ಇದೆ. ಪ್ರಥಮೋಚ್ಚಾರಣೆಯಲ್ಲಿ ದ್ವಯವು ಅನುಷ್ಠಾನಪರವು, ದ್ವಿತೀಯಾದಿ ಜಪಕಾಲದಲ್ಲಿ ಭೋಗ್ಯವೆಂಬುದೂ ಸೂಚಿತವು. ಹೀಗೆ ಮೂಲಮನ್ತ್ರವು ಧಾರಕವು; ದ್ವಯವು ಭೋಗ್ಯವು, ಚರಮಶ್ಲೋಕವು ಪೋಷಕವು ಎಂಬ ಭಾವವು. ಹೀಗೆ ಮೂರು ರಹಸ್ಯಗಳೂ ಆವಶ್ಯಕವಾಗಿ ಉಪಜೀವ್ಯಗಳು ಎಂದು ಹೇಳಲ್ಪಟ್ಟವು. ಸಸ್ಯಕ್ಕೆ ಭೂಮಿಯು ಧಾರಕವಾಗಿ ನೀರು ಮೊದಲಾದವು ಪೋಷಕವಾಗಿ ಬೀಜವು ಭೋಗ್ಯವಾಗಿ ಹೇಗೆ ಸಸ್ಯಕ್ಕೆ ಮೂರೂ ಆವಶ್ಯಕವೋ, ಹಾಗೆ ಎಂಬ ಭಾವವು.

ಮುಂದಿನ ಮೂರು ವಾಕ್ಯಗಳಿಂದ ಇವು ಮೂರು ಮನ್ತ್ರಗಳು ಧಾರಕಪೋಷಕ ಭೋಗ್ಯಗಳು ಹೇಗೆ ಎಂಬುದನ್ನು ಉಪಪಾದಿಸುತ್ತಾರೆ.—ಇವೈ ಮೂನ್ರುಮ್ - ಇವು ಮೂರೂ, ಮೂಲಮನ್ತ್ರ ಚರಮಶ್ಲೋಕ ದ್ವಯ ಮನ್ತ್ರಗಳು ಮೂರೂ ಕ್ರಮವಾಗಿ, ನಮಕ್ಕು-ಮೋಕ್ಷಾರ್ಥಿಗಳಾಗಿರುವ ನಮಗೆಲ್ಲಾ, ಜ್ಞಾನಾನುಷ್ಠಾನ ಫಲ ನಿದಾನಙ್ಗಳಾಯ್ ಕೊಣ್ಡು ಧಾರಕಪೋಷಕ ಭೋಗ್ಯಙ್ಗಳ್ – ಮೂಲಮನ್ತ್ರವು ಸಸ್ವರೂಪಾದಿ ಜ್ಞಾನಕ್ಕೆ ಕಾರಣವಾಗಿ ಧಾರಕವು, ಜ್ಞಾನವೇ ಇಲ್ಲದಿದ್ದರೆ ಅಸ್ತಿತ್ವವೇ ಇಲ್ಲವೆಂಬ ಭಾವವು. ಚರಮಶ್ಲೋಕವು ಪ್ರಪದನಾನುಷ್ಠಾನಕ್ಕೆ ಕಾರಣವಾಗಿ ಪೋಷಕವು,ಹಿತರೂಪವಾದ ವಿಧಿ ಇಲ್ಲದಿದ್ದರೆ ಅನುಷ್ಠಾನವು ಉಂಟಾಗುವದಿಲ್ಲವು ; ಹಿತೋಪದೇಶವು ಉಪದೇಶಾನುಗುಣವಾಗಿ ನಡೆಯಲು ನಿದಾನವು ಎಂದರೆ ಕಾರಣವು. ಹಾಗೆಯೇ ದ್ವಯವು ಫಲವಾದ ಮೋಕ್ಷಪ್ರಾಪ್ತಿಗೆ ಕಾರಣವಾಗಿ ತತ್ಪ್ರಾಪ್ತಿಯನ್ನುಂಟುಮಾಡುವದರಿಂದ ಭೋಗ್ಯವು ; ಪ್ರಥಮಾನುಷ್ಠಾನವು ಉಪಾಯವಾಗಿ, ಅನಂತರೋಚ್ಚಾರಣೆಗಳೆಲ್ಲಾ ತದನುಸಂಧಾನವಾಗಿ ಭೋಗ್ಯವೆಂಬ ತಾತ್ಪರ್ಯವು ; ಆದುದರಿಂದ ದ್ವಯೋಚ್ಚಾರಣೆಯನ್ನು ಸತತಮಾಡಬೇಕೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಹೀಗೆ ಇವು ಮೂರೂ ಧಾರಕ ಪೋಷಕ ಭೋಗ್ಯಙ್ಗಳೆಂಬ ಭಾವದಿಂದ ಮೂರೂ ಮೋಕ್ಷಾರ್ಥಿಗೆ ಆವಶ್ಯಕವೆಂದು ಹೇಳಿದರು.

ಕ್ರಮವಾಗಿ ತಿರುಮನ್ತ್ರವು ಹೇಗೆ ಧಾರಕವು, ಚರಮಶ್ಲೋಕವು ಪೋಷಕವು, ದ್ವಯವು ಭೋಗ್ಯವೆಂಬುದನ್ನು ಉಪಪಾದಿಸುತ್ತಾರೆ—ಸ್ವರೂಪಜ್ಞಾನಕ್ಕೆ ಕಾರಣವಾಗಿ ,ಹೇಗೆ ಸ್ವರೂಪದಾಯಕ ವೆಂಬುದನ್ನು ತಿಳಿಸುವದಕ್ಕಾಗಿ ಪ್ರಮಾಣವನ್ನುದಾಹರಿಸುತ್ತಾರೆ—"ಭಗವಾನ್ - ಹೇಯಪ್ರತ್ಯನೀಕ ಕಲ್ಯಾಣಗುಣಾಕರನಾದ, ದೇವಃ - ಸ್ವಯಂಜ್ಯೋತಿಸ್ಸಾಗಿ ಪ್ರಕಾಶಿಸುತ್ತಿರುವ ಅಥವಾ ಲೀಲಾವಿಭೂತಿಯಲ್ಲಿ ಕ್ರೀಡಿಸುವ, ನಾರಾಯಣಸ್ಸ್ವಯಮ್ - ಶ್ರೀಮನ್ನಾರಾಯಣನು

**ಶಿಷ್ಯಹೃದಯ ಗುಹಾಂಧಕಾರತ್ತೈ ಕ್ಕಳಿತ್ತು ಪರಶೇಷತ್ವೈಕರಸಮಾನ ಪರಿಶುದ್ಧ ಸ್ವರೂಪತ್ತೈ ವೆಳಿಯಿಟ್ಟು, ಸತ್ತಾಲಾಭತ್ತೈ ಪಣ್ಣುಗೈಯಾಲೇ ತಿರುಮನ್ತ್ರಮ್ ಧಾರಕಮ್.**

---

ತಾನೇ, ಅಷ್ಟಾಕ್ಷರ ಸ್ವರೂಪದಿಂದ, **ಮುಖೇಷು** - ಮನ್ತ್ರವನ್ನು ಜಪಿಸುವರ ಮುಖವಲ್ಲಿ, **ಪರಿವರ್ತತೇ** - ಸಂಚರಿಸುತ್ತಾನೆ, ಎಂಬುದು, ವ್ಯಕ್ತಂಹಿ - ವ್ಯಕ್ತವಾದುದಷ್ಟೇ." ಎಙ್ಗರಪಡಿಯೇ - ಎಂದು ಹೇಳಿರುವಹಾಗೆ; **ದೇಶಿಕ ಜಿಹ್ವೈಯಿಲೇ** - ಆಚಾರ್ಯನ ನಾಲಿಗೆಯಲ್ಲಿ, **ಇರನ್ದು** - ಇದ್ದು, **ಶಿಷ್ಯಹೃದಯ ಗುಹಾಂಧಕಾರತ್ತೈ ಕ್ಕಳಿತ್ತು**-ಶಿಷ್ಯನ ಹೃದಯ ಗುಹೆಯಲ್ಲಿರುವ ಅಜ್ಞಾನರೂಪ ಕತ್ತಲೆಯನ್ನು ಹೋಗಲಾಡಿಸಿ, **ಪರಶೇಷತ್ವೈಕರಸಮಾನ** - ಪರಮಪುರುಷನಿಗೆ ತಾನು ಶೇಷಭೂತನಾಗಿರುವದೇ ತನಗೆ ಮುಖ್ಯ ಆನಂದವಾಗಿರುವ ತನ್ನ **ಪರಿಶುದ್ಧ**ವಾದ ಎಂದರೆ ಪ್ರಕೃತಿ ವಿಯುಕ್ತವಾಗಿ ಸ್ವಯಂಪ್ರಕಾಶವಾಗಿ ಜ್ಞಾನತ್ವ, ಆನಂದತ್ವ, ಅಮಲತ್ವಾದಿ ಸ್ವರೂಪವನ್ನು, **ವೆಳಿಯಿಟ್ಟು** - ಪ್ರಕಟಿಸಿ, **ಸತ್ತಾಲಾಭತ್ತೈ** - ಸ್ವರೂಪ ಜ್ಞಾನವನ್ನು, **ಪಣ್ಣುಗೈಯಾಲೇ**-ಉಂಟುಮಾಡುವದರಿಂದ, **ತಿರುಮನ್ತ್ರಂ ಧಾರಕಂ**-ಮೂಲಮನ್ತ್ರವು ಧಾರಕವು. ದೇಶಿಕಜಿಹ್ವೆಯಿಂದ ಈ ಮೂಲಮನ್ತ್ರವೂ ತದರ್ಥವೂ ಬರುವದರಿಂದ ಅದು ಶಿಷ್ಯನ ಅಜ್ಞಾನವನ್ನೆಲ್ಲಾ ಹೋಗಲಾಡಿಸುತ್ತದೆಂದು ಹೇಳಲ್ಪಟ್ಟಿತು; ಇದರಿಂದ ಶಿಷ್ಯನಿಗೆ ತನ್ನ ಸ್ವರೂಪಜ್ಞಾನ ಉಂಟಾಗುತ್ತದೆ; ತಾನು ಪರಮಾತ್ಮನಿಗೆ ಶೇಷಭೂತನು, ಅಂತಹ ಜ್ಞಾನವೇ ತನಗೆ ಸತ್ತಾದಾಯಕವೆಂದು ತಿಳಿಯುವನು; ಇದರಿಂದ ಶಿಷ್ಯನಿಗೆ ದೇಹಾತ್ಮಭ್ರಮವೂ, ಸ್ವತಂತ್ರಾತ್ಮಭ್ರಮವೂ, ತಾನೇ ಪರಮಾತ್ಮನೆಂಬ ಭ್ರಮವೂ, ತೊಲಗುತ್ತವೆಂಬ ಭಾವವು. ಇದು ಹಿಂದೆ ತತ್ವತ್ರಯಾಧಿಕಾರದಲ್ಲೇ ಚನ್ನಾಗಿ ಉಪಪಾದಿಸಲ್ಪಟ್ಟಿತು. ತನ್ನ ಸ್ವರೂಪವು ತುಂಬಾ ಅಮೋಘವಾದುದೆಂದೂ, "**ದಾಸಭೂತಾಸ್ಸ್ವತಸ್ಸರ್ವೇ**" ಎಂಬಲ್ಲಿ ಹೇಳಿರುವ ಹಾಗೆ ತಾನು ಪರಮಾತ್ಮನಿಗೆ ದಾಸಭೂತನು ಎಂದು ತನ್ನ ಸ್ವರೂಪ ಜ್ಞಾನಲಾಭವು ಉಂಟಾಗುತ್ತದೆಂಬ ತಾತ್ಪರ್ಯವು. ಇದನ್ನೇ ಹಿಂದೆ ಸಾರನಿಷ್ಕರ್ಷಾಧಿಕಾರದಲ್ಲಿ, "**ಶಾಖಾನಾಮುಪರಿಸ್ಥಿತೇನ ಮನುನಾ ಮೂಲೇನ ಲಬ್ಧಾತ್ಮಕಃ**" ಎಂದು ಹೇಳಿ, **ಲಬ್ಧಾತ್ಮಕಃ** ಎಂಬುದರಿಂದ ಈ ಅಭಿಪ್ರಾಯವನ್ನೇ ಅಲ್ಲಿಯೂ ತಿಳಿಸಿರುತ್ತಾರೆ. ಸತ್ತಾಲಾಭವು ಹೇಗೆ? ಎಂದರೆ ಈ ಶೇಷತ್ವಜ್ಞಾನವಿಲ್ಲದಿದ್ದರೆ ಈತನು ಅಚಿತ್‌ಪ್ರಾಯನೆಂಬ ಭಾವವು. "**ಪ್ಪೊರುಳ್** ಅಲ್ಲದವನನ್ನು ಈ ಶೇಷತ್ವಜ್ಞಾನದಿಂದ "**ಪ್ಪೊರುಳಾಕ್ಕಿ**" ಎಂದು ಆಳ್ವಾರವರುಗಳು ಹೇಳಿಕೊಂಡಿರುತ್ತಾರೆ. ಇಂತಹ ಜ್ಞಾನವಿಲ್ಲದವನಿಗೆ ವಸ್ತುತ್ವವೇ ಯಿಲ್ಲವೆಂಬ ಭಾವವು, "ಅಸ್ತಿ" ಶಬ್ದವಾಚ್ಯನು ಈ ಚೇತನನು, "ನಾಸ್ತಿ" ಶಬ್ದವಾಚ್ಯವು ಅಚಿತ್ತು; ಆದುದರಿಂದ ಶೇಷತ್ವ ಜ್ಞಾನರಹಿತನು ಅಚಿತ್ಪ್ರಾಯನೆಂಬ ಭಾವವು

**ಚರಮೋಪಾಯತ್ತಿಲೇ ಪ್ರವರ್ತ್ತಿಕ್ಕುಮ್ಪಡಿಯಾನ ಜ್ಞಾನವಿಶೇಷೋಪಚಯ ಹೇತುವಾಗೈಯಾಲೇ ಶ್ರೋತವ್ಯಶೇಷಮಿಲ್ಲಾದಪಡಿ ಉಪಾಯೋಪದೇಶ ಪರ್ಯವಸಾನಮಾನ ಚರಮಶ್ಲೋಕಮ್ ಪೋಷಕಮ್.**

---

ಶ್ರುತಿಯು ಹಾಗೆಯೇ "ಅಸನ್ನೇವ ಸಭವತಿ" ಎಂಬ ವಾಕ್ಯದಲ್ಲಿ ಪರಮಾತ್ಮನ ಸರ್ವಶೇಷಿತ್ವವೇ ಮೊದಲಾದ ಸ್ವರೂಪಜ್ಞಾನ ಶೂನ್ಯನನ್ನು ಅಸತ್ತೆಂದೂ, ಅಂತಹ ಜ್ಞಾನವುಳ್ಳವನನ್ನು ಸತ್ತೆಂದೂ ಹೇಳಿರುತ್ತದೆ. (ತೈ. ಆ. ೬. ೧) ಆದುದರಿಂದ ಸತ್ತಾಜ್ಞಾನ ಪ್ರಯೋಜಕವಾಗಿ ಮೂಲಮಂತ್ರಕ್ಕೆ ಧಾರಕತ್ವವು ಉಪಪನ್ನವೆಂಬ ಭಾವವು.

ಮುಂದೆ **ಚರಮಶ್ಲೋಕವು ಹೇಗೆ ಪೋಷಕವೆಂಬುದನ್ನು ತಿಳಿಸುತ್ತಾರೆ.**— **ಚರಮೋಪಾಯತ್ತಿಲೇ** - ಮೋಕ್ಷಕ್ಕೆ ಯಾವುದು ಕಡೆಯ ಉಪಾಯವಾಗಿ ಹೇತುವಾಗುತ್ತದೋ, ಅದು ಚರಮೋಪಾಯವು, ಇಂತಹ ಅಮೋಘವಾದ ಉಪಾಯವು ಗೀತಾ ೧೮-೬೬ನೆಯ ಶ್ಲೋಕವಾದ "ಸರ್ವಧರ್ಮಾನ್ ಪರಿತ್ಯಜ್ಯ" ವೆಂಬಲ್ಲಿ ಹೇಳಿರುವವರಿಂದ ಅದು ಚರಮಶ್ಲೋಕವೆಂದು ವ್ಯವಹರಿಸಲ್ಪಟ್ಟಿರುತ್ತದೆ; ಆದುದರಿಂದ **ಚರಮೋಪಾಯತ್ತಿಲೇ** ಎಂದರೆ ಚರಮಶ್ಲೋಕದಲ್ಲಿ ಉಪಪಾದಿತವಾಗಿ ಪರಮಹಿತದಿಂದ ಉಪದೇಶಿಸಲ್ಪಟ್ಟ ಉಪಾಯದಲ್ಲಿ, **ಪ್ರವರ್ತ್ತಿಕ್ಕುಮ್ಪಡಿಯಾನ** - ದ್ವಯಮಂತ್ರದ ಮೂಲಕ ಅನುಷ್ಠಿಸುವಹಾಗೆ ಮಾಡುವ, **ಜ್ಞಾನವಿಶೇಷೋಪಚಯಹೇತುವಾಗೈಯಾಲೇ** - ಜ್ಞಾನ ವಿಶೇಷ ಸಮೃದ್ಧಿಗೆ ಹೇತುವಾಗುವದರಿಂದ, **ಶ್ರೋತವ್ಯಶೇಷಮಿಲ್ಲಾದಪಡಿ** - ಅಂತಹ ಜ್ಞಾನದಿಂದ ಶರಣಾಗತಿಯನ್ನನುಷ್ಠಿಸಿ ಕೃತಕೃತ್ಯನಾಗಬಹುದಾದುದರಿಂದ, ಕೇಳಬೇಕಾದ ಉಪಾಯಾಂತರ ರೂಪದಲ್ಲಿ ಶೇಷವೇನೂ ಇಲ್ಲದಹಾಗೆ, **ಉಪಾಯೋಪದೇಶ ಪರ್ಯವಸಾನಮಾನ,** ಉಪಾಯದ ಸೌಲಭ್ಯ ಸೌಶೀಲ್ಯಾದಿ ಮಾಹಾತ್ಮ್ಯೆಯನ್ನೇ ಫಲವಾಗಿ ವುಳ್ಳ- **ಚರಮಶ್ಲೋಕಮ್ ಪೋಷಕಮ್** - ಚರಮ ಶ್ಲೋಕವು ಪೋಷಕವು. ಶರೀರ ವೃದ್ಧಿಗೆ ಹಾಲು ಮೊಸರು ಮೊದಲಾದ ಆಹಾರಗಳು ಹೇತುವಾಗಿ ಹೇಗೆ ಪೋಷಕಗಳೋ, ಹಾಗೆ ಜ್ಞಾನಸ್ವರೂಪನಾದ ಈ ಮುಮುಕ್ಷುವಿಗೆ ಪರಮ ಹಿತರೂಪದಲ್ಲಿ ಸಾಧ್ಯೋಪಾಯವು "ತಸ್ಯಚ ವಶೀಕರಣಂ ತಚ್ಛರಣಾಗತಿರೇವ" ಎಂಬರ್ಥವನ್ನು ಸೂಚಿಸುವ "ಮಾಮೇಕಂ ಶರಣಂ ವ್ರಜ" ಎಂದು ಚರಮಶ್ಲೋಕವು ಉಪದೇಶಿಸುವದರಿಂದ, ಜ್ಞಾನಸ್ವರೂಪನಾದ ಈ ಚಿದ್ರೂಪನಾದ ಆತ್ಮಾವಿಗೆ ಈ ಪರಮ ಹಿತೋಪದೇಶರೂಪ ಜ್ಞಾನವೇ ಆಹಾರ ರೂಪದಲ್ಲಿ ಪೋಷಕವೆಂಬ ಭಾವವು. ಯಾವಾಗ ಈ ಉಪಾಯ ಜ್ಞಾನವು ಉಂಟಾಯಿತೋ ಇನ್ನು ಯಾವುದರ ಅಪೇಕ್ಷೆಯೂ ಬೇಕಿಲ್ಲದೆ, ಸಿದ್ಧೋಪಾಯನು ತಾನೇ ನಿಂತು ನಡೆಸುವನೆಂಬ ಭಾವವನ್ನು ಶ್ರೋತವ್ಯಶೇಷಮಿಲ್ಲಾದಪಡಿ ಎಂಬ ಪ್ರಯೋಗವು

**ಸಕೃದುಚ್ಚಾರಣತ್ತಾಲೇ ಪರಮಪುರುಷಾರ್ಥ ಹೇತುವಾಯ್ ಕೊಂಡು ಸದಾನುಸಂಧಾನತ್ತಾಲೇ ಕೃತಾರ್ಥ ಸಾಕ್ಕೈಗೈಯಾಲೇ ದ್ವಯಂ ಭೋಗ್ಯಮ್**

---

ಹೆಚ್ಚಿಸುತ್ತದೆ. ಈ ಅರ್ಥವೂ ಕೂಡ ಚರಮಶ್ಲೋಕ ಪೂರ್ವಾರ್ಧದಲ್ಲೇ **ಸರ್ವ ಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ತೋರಿಬರುತ್ತದೆಂಬ ಭಾವವೂ ದ್ಯೋತಿತವು. ದೇಹಕ್ಕೆ ಅನ್ನಪಾನಾದಿಗಳು ಪೋಷಕವು, ಜ್ಞಾನಸ್ವರೂಪಿಯಾದ ಪರಿಶುದ್ಧಾತ್ಮನಿಗೆ ಜ್ಞಾನವೇ ಪೋಷಕವೆಂಬುದನ್ನು ಇಲ್ಲಿ ಗ್ರಹಿಸತಕ್ಕದ್ದು. ಇಲ್ಲಿ **ಜ್ಞಾನವಿಶೇಷೋಪಚಯಹೇತು** ವೆಂದು ಚರಮಶ್ಲೋಕವು ಹೇಳಲ್ಪಟ್ಟಿದುದರಿಂದ ಪರಮ ಹಿತವನ್ನೂ ಅದರ ಮಾಹಾತ್ಮ್ಯವನ್ನೂ ಅದು ಮುಖ್ಯವಾಗಿ ತಿಳಿಸುತ್ತದೇ ವಿನಾ ಅನುಷ್ಠಾನಪರವಾದ ಮನ್ತ್ರವಲ್ಲವೆಂಬುದು ಬೋಧಿತವು ; ಅನುಷ್ಠಾನ ಮನ್ತ್ರವಾದರೋ ದ್ವಯವು ಎಂಬ ತಾತ್ಪರ್ಯವು.

**ಮುಂದೆ ದ್ವಯವು ಹೇಗೆ ಭೋಗ್ಯವಾದುದೆಂಬುದನ್ನು ತಿಳಿಸುತ್ತಾರೆ.**— **ಸಕೃದುಚ್ಚಾರಣತ್ತಾಲೇ** - ಒಂದು ಸಲ ಸದ್ಗುರುವು ಹೇಳಿದುದನ್ನನುಸರಿಸಿ ಶಿಷ್ಯನು ಉಚ್ಚರಿಸುವದರಿಂದ, **ಪರಮಪುರುಷಾರ್ಥಹೇತುವಾಯ್ ಕ್ಕೊಂಡು**-ಮೋಕ್ಷಕ್ಕೆ ಹೇತುವಾಗಿ, ಆನಂತರ **ಸದಾನುಸಂಧಾನತ್ತಾಲೇ**- **"ದ್ವಯಮರ್ಥಾನುಸಂಧಾನೇನ ಸಹ ಸದೈವಂ ವಕ್ತಾ"** ಎಂದು ಯತಿವರ್ಯರು ಕೃತಕೃತ್ಯನಾದ ತನಗೆ ಇತರ ಪ್ರವೃತ್ತಿಗಳು ಯಾವವೂ ಇಲ್ಲದೆ ಸರ್ವ ಕಾಲದಲ್ಲೂ ದ್ವಯವನ್ನು ಅರ್ಥಾನುಸಂಧಾನದೊಂದಿಗೆ ಉಚ್ಚರಿಸುತ್ತಿರಬೇಕೆಂದು ಅಪ್ಪಣೆ ಕೊಡಿಸಿರುವ ಮೇರೆಗೆ, ಯಾವಾಗಲೂ ಹೀಗೆ ಅನುಸಂಧಾನಮಾಡುವವರ ಮೂಲಕ, **ಕೃತಾರ್ಥಸಾಕ್ಕೈಗೈಯಾಲೇ** - ಸಾಧಿಸಲ್ಪಟ್ಟ ಪರಮ ಪ್ರಯೋಜನವುಳ್ಳವನನ್ನಾಗಿ ಮಾಡುವುದರಿಂದ, **ದ್ವಯವು** ಭೋಗ್ಯವಾದುದು. ಸರ್ವೋತ್ಕೃಷ್ಟ ಗುರುವು ಯಾವನೋ ಅವನನ್ನೇ ಆಶ್ರಯಿಸಿ ಪ್ರಾರ್ಥಿಸಿದರೆ, ಅವರು ಈ ಅನುಷ್ಠಾನಮನ್ತ್ರವನ್ನು ಹೇಳುತ್ತಾರೆ. ಅದನ್ನು ಈ ಅಧಿಕಾರಿಯು ಉಚ್ಚರಿಸತಕ್ಕದ್ದು; ಅದನ್ನು ಸಕೃದುಚ್ಚರಿಸತಕ್ಕದ್ದಾಗಿ ಅದೇ ಪರಮ ಹಿತೋಪಾಯವಾಗಿ ಪರಿಣಮಿಸಿ ಪರಮಪುರುಷನ ಪ್ರಸನ್ನತೆಯುಂಟಾಗಿ ಮೋಕ್ಷವು ಲಭಿಸುತ್ತದೆಂಬುದು ಪರಮ ಶಾಸ್ತ್ರಾರ್ಥವು. ಪ್ರತಿದಿನವೂ ಸಂಧ್ಯಾವಂದನೆಗಳಿಗೆ ಅಂಗವಾಗಿ ಮೂಲಮನ್ತ್ರ, ದ್ವಯ ಚರಮ ಶ್ಲೋಕಗಳನ್ನೂ ಸಹ, ಅಷ್ಟನ್ಯಾಸಾದಿಗಳ ಮೂಲಕ ಜಪಿಸತಕ್ಕದ್ದು ಸತ್ಸಂಪ್ರದಾಯವಾಗಿರುತ್ತದೆ ; ಅದೂ ಅಲ್ಲದೆ ಈ ದ್ವಯಮನ್ತ್ರವು ಸಕೃದುಚ್ಚಾರಣೆಯಿಂದ ಇಂತಹ ನಿರತಿಶಯ ಸುಖವನ್ನುಂಟುಮಾಡಿ ಪುನಃ ದುಃಖರೂಪವಾದ ಜನ್ಮಗಳನ್ನು ತಪ್ಪಿಸುವದರಿಂದ, ಎಷ್ಟು [illegible] ಅರ್ಥಾನುಸಂಧಾನವನ್ನು ಇತರ ವ್ಯಾಸಂಗಾದಿಗಳು [illegible] ಇಲ್ಲದ [illegible] ಕುಳಿತಿರುವಾಗಲೂ ನಡೆಯುವಾಗಲೂ ದ್ವಯಾನುಸಂಧಾನವನ್ನು ಮಾಡಬೇಕೆಂದು [illegible] ಗುರುವಿನಿಂದ ಉಪದೇಶಿಸಲ್ಪಟ್ಟ

### ಅಷ್ಟಾಕ್ಷರ ಮಹಾಮನ್ತ್ರಸ್ಯ ಋಷಿಚ್ಛಂದೋ ದೇವತಾದಿ ವಿಷಯಾಃ.

**ಇವತ್ತಿಲ್ ತಿರುಮನ್ತ್ರತ್ತಿನುಡೈಯ ಋಷಿಚ್ಛಂದೋ ದೇವತಾಬೀಜ ಶಕ್ತಿವರ್ಣವಿನಿಯೋಗಸ್ಥಾನ ನ್ಯಾಸಾದಿಗಳ್ ಅವ್ವೋಕಲ್ಪ ಸಂಪ್ರದಾಯಙ್ಗಳುಕ್ಕೀಡಾಗ ಕಣ್ಡುಕೊಳ್ವದು.**

---

ರುತ್ತದೆ. ಇಂತಹ ಉಚ್ಚಾರಣೆ ಮತ್ತು ಅರ್ಥಾನುಸಂಧಾನಕಾಲಗಳಲ್ಲಿ ಅದು ಭೋಗ್ಯವೆಂಬ ಭಾವವು ; ನಿರತಿಶಯ ಪುರುಷಾರ್ಥದಾಯಿಕವು ಈ ಮನ್ತ್ರವು ಎಂಬುದರಿಂದ, ಸ್ರಕ್ಚಂದನಾದಿಗಳಹಾಗೆ ಭೋಗ್ಯತ್ವವು.

### ಅಷ್ಟಾಕ್ಷರ ಮಹಾಮನ್ತ್ರದ ಋಷಿ ಛಂದಸ್ಸು ದೇವತೆ ಮೊದಲಾದ ವಿಷಯಗಳು.

**ಇವತ್ತಿಲ್**-ಈ ಮೂರು ರಹಸ್ಯಗಳಲ್ಲಿ,**ತಿರುಮನ್ತ್ರತ್ತಿನುಡೈಯ**-ಅಷ್ಟಾಕ್ಷರ ಮನ್ತ್ರದ, ಋಷಿ, ಛಂದಸ್ಸು, ದೇವತೆ, ಬೀಜ, ಶಕ್ತಿ, ವರ್ಣ, ವಿನಿಯೋಗ, ಸ್ಥಾನ. ನ್ಯಾಸವೆಂದರೆ ಕರನ್ಯಾಸ, ಹೃದಯಾದಿ ನ್ಯಾಸ, ಇವೇ ಮೊದಲಾದವುಗಳನ್ನು, **ಅವ್ವೋಕಲ್ಪ ಸಂಪ್ರದಾಯಙ್ಗಳುಕ್ಕು ಈಡಾಗ** - ಆಯಾ ನಾರಾಯಣಾತ್ಮಕ ಹೈರಣ್ಯಗರ್ಭಾದಿಗಳಲ್ಲಿ ಹೇಳಿರುವದಕ್ಕನುಸಾರವಾಗಿ, **ಕಣ್ಡುಕೊಳ್ವದು** - ತಿಳಿದುಕೊಳ್ಳತಕ್ಕದ್ದು. ಈ ನ್ಯಾಸಾದಿಗಳು ಬಹು ಪ್ರಕಾರವಾಗಿ ಬೇರೆ ಬೇರೆ ಕಲ್ಪಗಳಲ್ಲಿ ಹೇಳಿರುವದರಿಂದ ಅವರವರ ಸಂಪ್ರದಾಯಾನುಗುಣವಾಗಿ ಗ್ರಹಿಸತಕ್ಕದ್ದೆಂಬ ಭಾವವು. ಅನೇಕಕಡೆ ಶಾಸ್ತ್ರಗಳಲ್ಲಿ ಈ ಮನ್ತ್ರವು ಉಪಪಾದಿತವಾಗಿರುವದರಿಂದ ಈ ವಿಷಯಗಳಲ್ಲಿ ವ್ಯತ್ಯಾಸಗಳುಂಟೆಂಬ ಭಾವವು.

ಸಂಧ್ಯಾವಂದನದ ಉಪಸ್ಥಾನಾನಂತರ, ತನ್ನ ಗುರುಪರಂಪರೆಯನ್ನೂ ತನಿಯಗಳನ್ನೂ ಹೇಳಿ, ನಮಸ್ಕರಿಸಿ, ಸಂಧ್ಯಾಙ್ಗವಾಗಿ ಜಪಮಾಡುವ ಕ್ರಮವು ಇಲ್ಲಿ ಸೂಕ್ಷ್ಮವಾಗಿ ತಿಳಿಸಲ್ಪಡುತ್ತದೆ. ಮೂಲಮನ್ತ್ರದ ಮೂಲಕವಾಗಿಯೇ ಪ್ರಾಣಾಯಾಮ ಸಙ್ಕಲ್ಪಮಾಡಿದ ನಂತರ, **ಅಸ್ಯ ಶ್ರೀ ಮದಷ್ಟಾಕ್ಷರಮನ್ತ್ರಸ್ಯ ಬದರಿಕಾಶ್ರಮವಾಸೀ ಶ್ರೀಮನ್ನಾರಾಯಣ ಋಷಿಃ, ದೇವೀಗಾಯತ್ರೀ ಛಂದಃ, ಪರಮಾತ್ಮಾ ಶ್ರೀಮನ್ನಾರಾಯಣೋ ದೇವತಾ, ಅಂ ಬೀಜಂ, ಆಯಶಕ್ತಿಃ, ವಿಷ್ಣುಸ್ತತ್ತ್ವಮ್, ಶುಕ್ಲೋವರ್ಣಃ, ಉದಾತ್ತಾದಿಸ್ವರಃ, ಶ್ರೀ ವೈಕುಂಠಕ್ಷೇತ್ರಂ ಅಥವಾ ಸ್ಥಾನಂ, ಸ್ವಸ್ವಾಮಿಭಾವ ಸಂಬಂಧಃ, ಶ್ರೀಮನ್ನಾರಾಯಣ ಪ್ರೀತ್ಯರ್ಥೇ ವಿನಿಯೋಗಃ ;—**

ಕರನ್ಯಾಸವು.—ಓಂ – ಅಙ್ಗುಷ್ಠಾಭ್ಯಾಂ ನಮಃ। ನಮಃ – ತರ್ಜನೀಭ್ಯಾಂ ನಮಃ। ನಾರಾಯಣಾಯ-ಮಧ್ಯಮಾಭ್ಯಾಂ ನಮಃ। ಓಂ - ಅನಾಮಿಕಾಭ್ಯಾಂ ನಮಃ। ನಮಃ - ಕನಿಷ್ಠಿಕಾಭ್ಯಾಂ ನಮಃ। ನಾರಾಯಣಾಯ ಕರತಲ ಕರಪೃಷ್ಠಾಭ್ಯಾಂ ನಮಃ.

## ಮೂಲಮನ್ತ್ರಸ್ಯ ಮಾಹಾತ್ಮ್ಯಂ ಉಪನಿಷದಾದ್ಯನೇಕ ಶಾಸ್ತ್ರೇಷು ಪ್ರಸಿದ್ಧಮ್.

ಇತ್ತಿರುಮನ್ತ್ರ ಮಾಥರ್ವಣ ಶಿಖಾದ್ಯುಪನಿಷತ್ತುಕ್ಕಳಿಲುಮ್, ಮತ್ತುಮ್ ಮನ್ವಾದಿ (ಸರ್ವ) ಶಾಸ್ತ್ರಙ್ಗಳಿಲುಮ್, ನಾರಾಯಣಾತ್ಮಕ ಹೈರಣ್ಯಗರ್ಭಾದಿ ನಾರದೀಯ ಬೋಧಾಯನಾದಿ ಬಹುವಿಧ ಕಲ್ಪಙ್ಗಳಿಲುಮ್, ಪ್ರಸಿದ್ಧ ವೈಭವಮಾಯಿರುಕ್ಕುಮ್.

---

ಹೃದಯಾದಿನ್ಯಾಸವು—ಓಂ - ಜ್ಞಾನಾಯ ಹೃದಯಾಯ ನಮಃ, ನಮಃ-ಐಶ್ವರ್ಯಾಯ ಶಿರಸೇ ಸ್ವಾಹಾ, ನಾರಾಯಣಾಯ-ಶಕ್ತ್ಯೈ ಶಿಖಾಯೈ ವೌಷಟ್, ಓಂ-ಬಲಾಯ ಕವಚಾಯಹುಂ, ನಮಃ-ನೇತ್ರಾಭ್ಯಾಂ ತೇಜಸೇ ವೌಷಟ್, ನಾರಾಯಣಾಯ-ವೀರಾಯಾಸ್ತ್ರಾಯ ಫಟ್, ಭೂರ್ಭುವಸ್ಸುವ ರೋಮಿತಿ ದಿಗ್ಬಂಧಃ.

ಧ್ಯಾನಂ—

ಸವ್ಯಂ ಪಾದಂ ಪ್ರಸಾರ್ಯ ಶ್ರಿತದುರಿತಹರಂ ದಕ್ಷಿಣಂ ಕುಂಚಯಿತ್ವಾ ।
ಜಾನುನ್ಯಾದಾಯ ಸವ್ಯೇತರ ಮಿತರಭುಜಂ ನಾಗಭೋಗೇ ನಿಧಾಯ ।
ಪಶ್ಚಾದ್ಬಾಹುದ್ವಯೇನ ಪ್ರತಿಭಟಶಮನೇ ಧಾರಯನ್ ಶಂಖಚಕ್ರೇ ।
ದೇವೀ ಭೂಷಾದಿಜುಷ್ಟೋ ಜನಯತು ಜಗತಾಂ ಶರ್ಮ ವೈಕುಂಠನಾಥಃ॥

ಅನಂತರ ಈ ಮನ್ತ್ರವನ್ನು ಅಷ್ಟೋತ್ತರ ಶತಸಂಖ್ಯಯಾ ಜಪಿಸತಕ್ಕದ್ದಾಗಿರುತ್ತದೆ. ಹೀಗೆ ಸಂಧ್ಯಾ ಕಾಲಗಳಲ್ಲಿ ಜಪಿಸುವದರಿಂದ ಸಮಸ್ತ ಪಾಪವೂ ಪರಿಹಾರವಾಗುತ್ತದೆ- ಕೃತಕೃತ್ಯನಿಗೆ ಉತ್ತರಾಘವು ಪರಿಹಾರವಾಗುತ್ತದೆ, ನ್ಯಾಸಾದಿಗಳ್ ಎಂಬಲ್ಲಿರುವ ಆದಿಪದದಿಂದ, ತತ್ತ್ವ, ಸಂಬಂಧ, ಧ್ಯಾನವೇ ಮೊದಲಾದವು ಮೂಲದಲ್ಲಿ ಹೇಳಲ್ಪಡದಿರುವವೆಲ್ಲವೂ ಸಙ್ಗೃಹೀತವು.

## ಮೂಲಮನ್ತ್ರದ ಮಾಹಾತ್ಮ್ಯೆಯು ಉಪನಿಷತ್ತೇ ಮೊದಲಾದ ಅನೇಕ ಶಾಸ್ತ್ರಗಳಲ್ಲಿ ಪ್ರಸಿದ್ಧವು.

ಎಲ್ಲಾ ಮಂತ್ರಗಳಿಗಿಂತಲೂ ಈ ಮೂಲಮಂತ್ರಕ್ಕೆ ಮಾಹಾತ್ಮ್ಯೆಯು ಏತರಿಂದ ಎಂದರೆ ಅದರಮಾಹಾತ್ಮ್ಯೆಯು ಉಪನಿಷತ್ತುಮೊದಲುಗೊಂಡು ಅನೇಕ ಋಷಿಪ್ರೋಕ್ತ ಶಾಸ್ತ್ರಗಳಲ್ಲೆಲ್ಲ ಕೊಂಡಾಡಲ್ಪಟ್ಟಿರುವದರಿಂದ ಪ್ರಸಿದ್ಧವೆಂದು ಹೇಳುತ್ತಾರೆ—ಇತ್ತಿರುಮನ್ತ್ರಂ - [illegible] ಮನ್ತ್ರವು, ಅಥರ್ವಣ ಶಿಖಾದ್ಯುಪನಿಷತ್ತುಗಳಿಲುಮ್ - [illegible] ಉಪನಿಷತ್ತು, [illegible]ಉಪನಿಷತ್ತು, ಆದಿ ಶಬ್ದದಿಂದ ಸುಬಾಲೋಪನಿಷತ್ತು, ಹೇಳಲ್ಪಟ್ಟಿತು, "ಏಕಾಕ್ಷರಾಂದ್ವಿಪದಾಂ

ಷಟ್ಪದಾಂಚ, ವಾಚಕಂ ದೇವಾ ಉಪಜೀವಂತಿ ವಿಶ್ವೇವಾಚಂಗಂಧರ್ವಾ, ಪಶವೋ ಮನುಷ್ಯಾಃ, ವಾಚೀ ಮಾ ವಿಶ್ವಾ ಭುವನಾನ್ಯರ್ಪಿತಾ" ಎಂಬುದು ಆದಿ ಶಬ್ದಾರ್ಥವೆಂದು ಸಾರಪ್ರಕಾಶಿಕೆಯವರು ಹೇಳಿರುತ್ತಾರೆ—ಇವುಗಳೆಲ್ಲೂಃ ಮತ್ತು ಮನ್ವಾದಿ ಶಾಸ್ತ್ರಗಳಲ್ಲೂ ಎಂದರೆ ಸ್ಮೃತಿಗಳಲ್ಲೂ, ನಾರಾಯಣೀಯ ಹೈರಣ್ಯ ಗರ್ಭನಾರದೀಯ ಬೋಧಾಯನ ಮೊದಲಾದ, ಬಹುವಿಧ ಕಲ್ಪಸೂತ್ರಗಳಲ್ಲೂ ಪ್ರಸಿದ್ಧವೈಭವ ಮಾಯಿರುಕ್ಕುಮ್ - ಪ್ರಸಿದ್ಧವಾದ ವೈಭವ ವುಳ್ಳದ್ದಾಗಿ ರುತ್ತದೆ. ಅಥರ್ವಶಿರೋಪನಿಷತ್ತಿನಲ್ಲಿ - ಓನ್ನಮೋ ನಾರಾಯಣಾಯೇತಿ ಮನ್ತ್ರೋಪಾಸಕಃ ವೈಕುಂಠಭುವನಲೋಕಂ ಗಮಿಷ್ಯತಿ ಯೋಹವೈ ನಾರಾ ಯಣ ಸ್ಯಾಷ್ಟಾಕ್ಷರಂ ಪದಮಧ್ಯೇತಿ, ಅನಪಜ್ರುವಃ ಸರ್ವಮಾಯುರೇತಿವಿಂ ದತೇ ಪ್ರಾಜಾಪತ್ಯಂ, ರಾಯಸ್ಪೋಷಂಗೌಪತ್ಯಂ, ತತೋ ಮೃತತ್ವ ಮಶ್ನುತೇ" ಇತ್ಯಾದಿ. ಕಠಶ್ರುತಿಯಲ್ಲಿ ಈ ಮನ್ತ್ರದಲ್ಲಿ ಪ್ರಣವ ವಿಷಯದಲ್ಲಿ "ಸರ್ವೇ ವೇದಾಯತ್ಪದ ಮಾಮನನ್ತಿ ತಪಾಂಸಿ ಸರ್ವಾಣಿ ಚ ಯದ್ವದನ್ತಿ, ಯದಿ ಚ್ಛನ್ತೋ ಬ್ರಹ್ಮಚರ್ಯಂಚರನ್ತಿ, ತತ್ತೇಪದಂ ಸಙ್ಗ್ರಹೇಣ ಬ್ರವೀಮ್ಯೋ ಮಿತ್ಯೇತತ್" ಎಂಬ ವಾಕ್ಯವನ್ನು ಕಾಣಬಹುದು. ಹಾಗೆಯೇ ನಾರದೀಯ ಪ್ರಮಾಣವು ಯಾವುದೆಂದರೆ—"ಯಥಾ ಸರ್ವೇಷು ವೇದೇಷು ನಾಸ್ತಿ ನಾರಾ ಯಣಾತ್ಪರಃ । ತಥಾ ಸರ್ವೇಷು ಮನ್ತ್ರೇಷು ನಾಸ್ತಿ ಚಾಷ್ಟಾಕ್ಷರಾತ್ಪರಃ । ಭೂತ್ವೋರ್ಧ್ವಬಾಹು ರದ್ಯಾತ್ರ ಸತ್ಯಪೂರ್ವಂ ಬ್ರವೀಮಿ ವಃ । ಹೇ ಪುತ್ರಶಿಷ್ಯಾ ಶ್ಶೃಣುತ ನ ಮನ್ತ್ರೋಷ್ಟಾಕ್ಷರಾತ್ಪರಃ । ಸರ್ವವೇದಾಂತ ಸಾರಾರ್ಥಂ ಸಂಸಾ ರಾರ್ಣವತಾರಕಃ । ಗತಿರಷ್ಟಾಕ್ಷರೋ ನೃಣಾಂ ಅಪುನರ್ಭವ ಕಾಂಕ್ಷಿಣಾಂ । ಐಹಲೌಕಿಕೆ ಶ್ವೈಶ್ವರ್ಯಂ ಸ್ವರ್ಗಾದ್ಯಂ ಪಾರಲೌಕಿಕಮ್ । ಕೈವಲ್ಯಂ ಭಗ ವನ್ತಂಚ ಮನ್ತ್ರೋಯಂ ಸಾಧಯಿಷ್ಯತಿ । ಕಿಂ ತತ್ರಬಹುಭಿರ್ಮನ್ತ್ರೈಃ ಕಿಂ ತತ್ರ ಬಹುಭಿಃವ್ರತೈಃ । ನಮೋನಾರಾಯಣಾಯೇತಿಮನ್ತ್ರ ಸ್ಸರ್ವಾರ್ಥಸಾಧಕಃ । ಋಚೋ ಯಜೂಂಷಿ ಸಾಮಾನಿ ತಥೈವಾಥರ್ವಣಾನಿಚ । ಸರ್ವಮಷ್ಟಾಕ್ಷರಾಂ ತಸ್ಥಂ ಯಚ್ಚಾನ್ಯದಪಿ ವಾಙ್ಮಯಮ್ । ಅಷ್ಟಾಕ್ಷರಸ್ತು ಪ್ರಣವೇ ಅಕಾರೇ ಪ್ರಣವಸ್ಥಿತಃ । ತಸ್ಮಾದಷ್ಟಾಕ್ಷರಂ ಮನ್ತ್ರಂ ಮದ್ಭಕ್ತ್ಯೈ ರ್ವಿಗತಕಲ್ಮಷೈಃ । ಸನ್ಧ್ಯಾ ಕಾಲೇಷು ಜಪ್ತವ್ಯಂ ಸತತಂ ಚಾತ್ಮಶುದ್ಧಯೇ । ಅನ್ಯೇಷಾಮಪಿ ವಿಪ್ರಾಣಾಂ ಕಿಲ್ಬಿಷಂ ಹಿ ಪ್ರಣಶ್ಯತಿ । ಉಭೇ ಸನ್ಧ್ಯೇ ಉಪಾಸೀತ ತಸ್ಮಾ ದ್ವಿಪ್ರೋ ವಿಶುದ್ಧಯೇ" ಇದರ ತಾತ್ಪರ್ಯವೇನೆಂದರೆ—ಹೇಗೆ ಎಲ್ಲಾ ದೇವತೆ ಗಳಲ್ಲೂ ನಾರಾಯಣನಿಗಿಂತ ಶ್ರೇಷ್ಠನಾದ ದೇವತೆ ಯಿಲ್ಲವೋ, ಹಾಗೆಯೇ ಎಲ್ಲಾ ಮನ್ತ್ರಗಳಲ್ಲೂ ಅಷ್ಟಾಕ್ಷರಕ್ಕಿಂತ ಶ್ರೇಷ್ಠವಾದ ಮನ್ತ್ರವಿಲ್ಲವು. ಓ ಶಿಷ್ಯರೇ ಬಾಹು ವನ್ನು ಮೇಲಕ್ಕೆ ಎತ್ತಿ ನಿಮಗೆ ಸತ್ಯವನ್ನು ಹೇಳುವೆನು ಕೇಳಿ; ಅಷ್ಟಾಕ್ಷರ ಮನ್ತ್ರ ಕ್ಕಿಂತ ಶ್ರೇಷ್ಠವಾದುದಿಲ್ಲವು. ಆ ಮನ್ತ್ರವು ಸಮಸ್ತ ವೇದದ ಸಾರಾರ್ಥವು; ಸಂಸಾರ

## ವ್ಯಾಪಕಮನ್ತ್ರಾಣಾಂ ಮಧ್ಯೇ ಮೂಲಮನ್ತ್ರೋ ಪರಮೋ ಮನ್ತ್ರಃ.

ಮನ್ತ್ರಾನ್ತರಙ್ಗಳಿರ್ಕ್ಕಾಟ್ಟಿಲ್ ಭಗವನ್ಮನ್ತ್ರಙ್ಗಳ್ ಅಧಿಕಮಾನಾರ್ಪ್ಪೋ ಲವುಮ್, ಅನಂತಙ್ಗಳಾನ ಭಗವನ್ಮಂತ್ರಙ್ಗಳ್ ತನ್ನಿಲ್ ವ್ಯಾಪಕತ್ರಯ ಮಧಿಕಮಾನಾರ್ಪ್ಪೋಲುವುಮ್, (೧) ಮನ್ತ್ರಾಣಾಂ ಪರಮೋ ಮನ್ತ್ರೋ ಗುಹ್ಯಾನಾಂ ಗುಹ್ಯಮುತ್ತಮಮ್ । ಪವಿತ್ರಂಚ ಪವಿತ್ರಾಣಾಂ ಮೂಲಮನ್ತ್ರ

---

ಪ್ರಯೋಜನವನ್ನು ಇಳಿಸುವಂತಾದ್ದು; ಮೋಕ್ಷಾರ್ಥಿಗಳಾಗಿರುವವರಿಗೆ ಈ ಮನ್ತ್ರವು ಗತಿಯು ಎಂದರೆ ಆಶ್ರಯವು ಅಥವಾ ಆಧಾರವು. ಇಹಲೋಕದ ಐಶ್ವರ್ಯವನ್ನೆಲ್ಲಾ ಮತ್ತು ಸ್ವರ್ಗಾದಿ ಪರಲೋಕ ಭೋಗವನ್ನೂ ಕೈವಲ್ಯವನ್ನೂ ಪರಮಾತ್ಮ ಸಾಯುಜ್ಯವನ್ನೂ ಈ ಮನ್ತ್ರವು ಸಾಧಿಸುತ್ತದೆ. ಇತರ ಬಹುಮನ್ತ್ರ ಗಳಿಂದಲೂ ಬಹು ವ್ರತಗಳಿಂದೇನು? ನಮೋ ನಾರಾಯಣಾಯ ಎಂಬ ಮನ್ತ್ರವು ಎಲ್ಲಾ ಚತುರ್ವಿಧ ಪುರುಷಾರ್ಥವನ್ನೂ ಸಾಧಿಸಬಲ್ಲದು. ಋಗ್ಯಜುಸ್ಸಾಮಾಥರ್ವಣಾ ರ್ಥವೆಲ್ಲವೂ ಮತ್ತು ಇತರ ವಾಗ್ರೂಪವಿಷಯವೆಲ್ಲವೂ ಅಷ್ಟಾಕ್ಷರದಲ್ಲಿರುತ್ತವೆ. ಅಷ್ಟಾಕ್ಷರವಾದರೋ ಪ್ರಣವದಲ್ಲೂ, ಅಕಾರದಲ್ಲಿ ಪ್ರಣವವೂ, ಇರುತ್ತವೆ. ಆದುದ ರಿಂದ ಪಾಪಗಳನ್ನು ನಿತ್ಯನೈಮಿತ್ತಿಕಾನುಷ್ಠಾನದಿಂದ ಕಳೆದುಕೊಂಡ ನನ್ನ ಭಕ್ತರು ಗಳಿಂದ ಆತ್ಮಶುದ್ಧಿಗಾಗಿ ಸಂಧ್ಯಾಕಾಲಗಳಲ್ಲಿ ಈ ಮನ್ತ್ರವುಜಪಿಸಲ್ಪಡತಕ್ಕದ್ದು. ಇತರ ದ್ವಿಜರಿಗೂ ಪಾಪಗಳನ್ನೆಲ್ಲಾ ಈ ಮನ್ತ್ರವು ಹೋಗಲಾಡಿಸುತ್ತದೆ; ಆದುದರಿಂದ ವಿಪ್ರನಾದವನು ಸಂಧ್ಯಾವಂದನವಾದನಂತರ "ಸಂಧ್ಯಾಯಾಂ ಅಷ್ಟಾಕ್ಷರಮನ್ತ್ರ ಜಪಂ ಕರಿಷ್ಯೇ" ಎಂದು ಸಙ್ಕಲ್ಪಿಸಿ ಜಪಿಸತಕ್ಕದ್ದೆಂಬುದು ಈ ಶ್ಲೋಕಗಳ ತಾತ್ಪರ್ಯವು.

## ವ್ಯಾಪಕಮನ್ತ್ರಗಳಲ್ಲೆಲ್ಲಾ ಮೂಲಮನ್ತ್ರವು ಸರ್ವೋತ್ಕೃಷ್ಟಮನ್ತ್ರವು.

ಈ ವಿಷಯವನ್ನು ಸಪ್ರಮಾಣವಾಗಿ ಉಪಪಾದಿಸಿ ಆಳ್ವಾರಾಚಾರ್ಯರುಗಳ ದಿವ್ಯಸೂಕ್ತಿಗಳ ಮೂಲಕವಾಗಿಯೂಸರ್ವೋತ್ಕೃಷ್ಟಮನ್ತ್ರವೆಂದು ಒಂಭತ್ತು ಹೇತು ಗಳಿಂದ ಸ್ಥಾಪಿಸುತ್ತಾರೆ.—ಮನ್ತ್ರಾನ್ತರಙ್ಗಳಿರ್ಕ್ಕಾಟ್ಟಿಲುಮ್ - ಅನ್ಯದೇವತೆಯ ಮನ್ತ್ರಗಳಿಗಿಂತ, ಭಗವನ್ಮನ್ತ್ರಙ್ಗಳ್ – ಪರಮಾತ್ಮನನ್ನು ಕುರಿತ ಮನ್ತ್ರಗಳು, ಅಧಿಕಮಾನಾರ್ಪ್ಪೋಲ್‌ವುಮ್ - ಶ್ರೇಷ್ಠವಾದವುಗಳಾದ ಹಾಗೂ, ಮತ್ತು ಅನಂತಙ್ಗಳಾನ-ಅನೇಕಗಳಾದ, ಭಗವನ್ಮನ್ತ್ರಗಳ್ ತನ್ನಿಲ್-ಭಗವನ್ಮನ್ತ್ರಗಳಲ್ಲಿ, ವ್ಯಾಪಕತ್ರಯಂ-ನಾರಾಯಣಾಷ್ಟಾಕ್ಷರ, ವಾಸುದೇವ ದ್ವಾದಶಾಕ್ಷರ, ವಿಷ್ಣು ಷಡ ಕ್ಷರಗಳಾದ ಮೂರು ವ್ಯಾಪಕ ಮನ್ತ್ರಗಳು, ಅಧಿಕಮಾನಾರ್ಪ್ಪೋಲುವುಮ್-ಶ್ರೇಷ್ಠ

---

[೧] ನಾರದೀಯ ೧, ೧೧

**ಸ್ಸನಾತನಃ" ಎನ್ಗೈಯಾಲೇ ವ್ಯಾಪಕಮನ್ತ್ರಙ್ಗಳೆಲ್ಲಾತ್ತಿಲುಮ್ ಅಧಿಕ ಮಾಯ್ ಸರ್ವವೇದಙ್ಗಳುಕ್ಕುಮ್ ಸಾರಮಾಯ್ ಸರ್ವಾನಿಷ್ಟನಿವರ್ತನ ಕ್ಷಮ ಮಾಯ್, ಸರ್ವಪುರುಷಾರ್ಥಙ್ಗಳುಕ್ಕುಮ್ ಸಾಧಕಮಾಯ್, ಸರ್ವೋಪಾ ಯಙ್ಗಳುಕ್ಕುಮ್ ಉಪಕಾರಕಮಾಯ್, ಸರ್ವವರ್ಣಂಗಳುಕ್ಕುಮ್ ತನ್ನಾಮಧಿ**

---

ವಾದಹಾಗೂ,(೧) **ಸನಾತನಃ**-ಅನಾದಿಯಾದ, **ಮೂಲಮನ್ತ್ರಃ**-ಶ್ರೀಮದಷ್ಟಾಕ್ಷರ ಮ ನ್ತ್ರವು,**ಮನ್ತ್ರಾಣಾಂ**-ಎಲ್ಲಾಮನ್ತ್ರಗಳಲ್ಲೂ, **ಪರಮೋ ಮನ್ತ್ರಃ**-ಸರ್ವಶ್ರೇಷ್ಠಮನ್ತ್ರವು. **ಗುಹ್ಯಾನಾಂ** - ತುಂಬಾ ರಹಸ್ಯಗಳಾದ ಉಪದೇಶಗಳಲ್ಲಿ, **ಗುಹ್ಯಮುತ್ತಮಂ** - ಸರ್ವೋತ್ಕೃಷ್ಟ ರಹಸ್ಯವು, **ಪವಿತ್ರಾಣಾಂ** - ಪಾಪಹರವಾಗಿ ಆ ಕಾರಣದಿಂದ ಮಹಾಪವಿತ್ರವಾದವುಗಳಲ್ಲೆಲ್ಲಾ, **ಪವಿತ್ರಂಚ** - ಪಾಪನಾಶಕತ್ವದಲ್ಲಿ ಸರ್ವೋ ತ್ಕೃಷ್ಟವಾಗಿ ಪರಿಶುದ್ಧವಾದುದು ; ಹೀಗೆ **ಗುಹ್ಯಾನಾಂ ಪವಿತ್ರಾಣಾಂಚ** ಎಂದು ಹೇಳಿರುವದರಿಂದ ಮೂಗು ವ್ಯಾಪಕ ಮನ್ತ್ರಗಳಲ್ಲಿ ಇದೇ ಪರಮಗುಹ್ಯವಾಗಿ ಪರಮ ಪವಿತ್ರವಾಗಿಯೂ ಸರ್ವೋತ್ಕೃಷ್ಟವಾದುದೆಂಬ ಭಾವವು" **ಎನ್ಗೈಯಾಲೇ** - ಹೀಗೆ ನಾರದೀಯ ಕಲ್ಪಪ್ರಮಾಣವಿರುವದರಿಂದ, (೨) **ವ್ಯಾಪಕಮನ್ತ್ರಙ್ಗಳೆಲ್ಲಾ ತ್ತಿಲುಮ್** - ವ್ಯಾಪಕ ಮನ್ತ್ರಗಳಾದ ಶ್ರೀ ವಾಸುದೇವ ದ್ವಾದಶಾಕ್ಷರಮನ್ತ್ರಗಳಿ ಗಿಂತಲೂ, **ಅಧಿಕಮಾಯ್** - ಉತ್ಕೃಷ್ಟವಾಗಿ, (೩) **ಸರ್ವವೇದಙ್ಗಳುಕ್ಕುಮ್ ಸಾರಮಾಯ್** - ಸಮಸ್ತ ವೇದಗಳ ಮುಖ್ಯಾರ್ಥಗಳನ್ನೆಲ್ಲಾ ಪ್ರತಿಪಾದಿಸುವರಿಂದ ವೇದಗಳ ಸಾರವತ್ತಾದ ಅರ್ಥವುಳ್ಳದ್ದಾಗಿಯೂ, ಪ್ರಣವವೇ **"ಸರ್ವೇ ವೇದಾ ಯತ್ಪದ ಮಾಮನನ್ತಿ"** ಮತ್ತು ಶಿಕ್ಷಾವಲ್ಲಿಯಲ್ಲಿ "ಓಮಿತಿಬ್ರಹ್ಮ" ಎಂದಾರಂಭಿಸಿ ಬ್ರಹ್ಮೋಪಾಪ್ನವಾನೀತಿ, ಬ್ರಹ್ಮೈವೋಪಾಪ್ನೋತಿ" ಎಂದು ಮುಗಿಸಿ ಹೀಗೆ ಅನೇಕಕಡೆಗಳಲ್ಲಿ ಪ್ರಣವವೇ ತ್ರಯೀಸಾರವೆಂದುಹೇಳಿರುವಾಗ ಅದರೊಂದಿಗೆ ಸೇರಿದ ಮೂಲಮನ್ತ್ರವು ತ್ರಯೀಸಾರವೆಂಬುದು ಕೈಮುತಿಕ ನ್ಯಾಯಸಿದ್ಧವೆಂದು ಭಾವಿಸ ತಕ್ಕದ್ದು; (೪) **ಸರ್ವಾನಿಷ್ಟನಿವರ್ತನಕ್ಷಮಮಾಯ್**-ಅದನ್ನು ಸಂಧ್ಯಾವಂದನಕಾಲ ಗಳಲ್ಲಿ ತಪ್ಪದೇ ಜಪಿಸುವದರಿಂದ ಮೋಕ್ಷಾರ್ಥಿಗೆ ಅವಶ್ಯಕವಾಗಿ ಬೇಕಾದ, ಭಕ್ತಿ ಯೋಗಕ್ಕೆ ಪ್ರತಿಬಂಧಕಗಳಾದ, ಪಾಪರೂಪಾನಿಷ್ಟನಿವರ್ತನಶಕ್ತಿಯುಳ್ಳದ್ದಾ ಗಿಯೂ, ಹಾಗೆಯೇ ಉಪಾಯಾನುಷ್ಠಾನವನ್ನು ಮಾಡಿದ ಕೃತಕೃತ್ಯನ ಉತ್ತ ರಾಘಗಳಾದ ಅನಿಷ್ಟವನ್ನು ನಿವರ್ತಿಸುವ ಯೋಗ್ಯತೆವುಳ್ಳದ್ದಾಗಿಯೂ,(೫) **ಸರ್ವಪುರು ಷಾರ್ಥಙ್ಗಳುಕ್ಕುಮ್ ಸಾಧಕಮಾಯ್** - ಚತುರ್ವಿಧ ಪುರುಷಾರ್ಥಗಳಿಗೂ ಸಾಧಕವಾಗಿಯೂ, (೬) **ಸರ್ವೋಪಾಯಙ್ಗಳುಕ್ಕುಮ್ ಉಪಕಾರಕಮಾಯ್**- ಮೇಲೆ ಹೇಳಿದ ಚತುರ್ವಿಧ ಪುರುಷಾರ್ಥಗಳನ್ನು ಹೊಂದುವ ಸಮಸ್ತಗಳಾದ ಉಪಾಯಗಳಿಗೂ ಸ್ವರೂಪಜ್ಞಾನಜನನಮುಖೇನ ಸಹಾಯಕರವಾಗಿಯೂ, ಮೋಕ್ಷಪ್ರಾಪ್ತಿಗೆ ಕರ್ಮಯೋಗ ಜ್ಞಾನಯೋಗ ಸಹಕೃತ ಭಕ್ತಿಯೋಗವಾದ

ಕಾರಾನುಗುಣಮಾಗ ವೈದಿಕರೂಪತ್ತಾಲುಮ್ ತಾನ್ತ್ರಿಕ ರೂಪತ್ತಾಲುಮ್ ಉಪಜೀವ್ಯಮಾಯ್, ವ್ಯಾಪ್ಯವ್ಯಾಪಕ ಸರ್ವತತ್ತ್ವ ಕಂಠೋಕ್ತಿಮತ್ತಾಯ್ ಸರ್ವಮನ್ತ್ರ ನೈರಪೇಕ್ಷ್ಯಕರಮಾಯ್, ಸರ್ವ ಭಗವನ್ಮೂರ್ತಿಗಳುಕ್ಕುಮ್ ಸಾಧಾರಣಮಾಯ್, ಇರುಕ್ಕೈಯಾಲೇ ಸದಾಚಾರ್ಯರ್‌ಗಳ್ ನಿತ್ತ್ಯ ವಿರುಮ್ಬಿ ಪೋರುವರ್‌ಗಳ್.

---

ಉಪಾಸನೆಗೂ, ಉಪಕಾರಕವಾಗಿ ಎಂಬ ಭಾವವು; ಲಘೂಪಾಯವನ್ನನು ಷ್ಠಿಸುವವನಿಗೆ ಬೇಕಾದ ಪರಿಕರಗಳ ಪ್ರಾಪ್ತಿ, ಭರನ್ಯಾಸಾನುಷ್ಠಾನ, ಇವುಗಳಿಗೂ ಅನುಗ್ರಾಹಕವೆಂಬ ಭಾವವು ; (೬) **ಸರ್ವವರ್ಣಙ್ಗಳುಕ್ಕುಮ್** - ನಾಲ್ಕುವರ್ಣದವರಿಗೂ ಪಂಚಮರಿಗೂ ಸಹ, ಇವರಲ್ಲೇ ಪ್ರತಿಲೋಮಾನುಲೋಮಾದಿ ಭೇದಗಳೆಲ್ಲಾ ಸೇರಿದರು, **ತನ್ತಾಮಧಿಕಾರಾನುಗುಣಮಾಗ** - ಆ ಆ ವರ್ಣದ ಅಧಿಕಾರಕ್ಕನುಗುಣವಾಗಿ, **ವೈದಿಕರೂಪತ್ತಾಲುಮ್** - ತ್ರಿವರ್ಣದವರಿಗೆ ಪ್ರಣವಸಹಿತವಾಗಿಯೂ, **ತಾನ್ತ್ರಿಕರೂಪತ್ತಾಲುಮ್** - ಇತರರಿಗೆ ಪ್ರಣವವಿಲ್ಲದೆಯೂ, **ಉಪಜೀವ್ಯಮಾಯ್** - ಹೀಗೆ ಜಪಿಸಿದರೆ ಅಧಿಕಾರಿಗೆ ಬೇಕಾದ ಸತ್ತಾದಾಯಕವಾಗಿಯೂ,(೭) **ವ್ಯಾಪ್ಯವ್ಯಾಪಕ ಸರ್ವತತ್ತ್ವಕಂಠೋಕ್ತಿಮತ್ತಾಯ್** – ವ್ಯಾಪ್ಯತತ್ತ್ವಗಳು ಚೇತನಾ ಚೇತನಗಳು, ಪರಮಾತ್ಮನಿಂದ ವ್ಯಾಪಿಸಲ್ಪಟ್ಟಿರುವದರಿಂದ ವ್ಯಾಪ್ಯತತ್ತ್ವಗಳು, ಪರತತ್ತ್ವವು ಎಲ್ಲವನ್ನೂ ವ್ಯಾಪಿಸುವದರಿಂದ ವ್ಯಾಪಕ ತತ್ತ್ವವು; ಹೀಗೆ ವ್ಯಾಪ್ಯವ್ಯಾಪಕತತ್ತ್ವವೆಂಬುದರಿಂದ ತತ್ತ್ವತ್ರಯವು ಹೇಳಲ್ಪಟ್ಟಿತು, ಹೀಗೆ ಸರ್ವತತ್ತ್ವ ವೆಂದರೆ ಮೂರು ತತ್ತ್ವಗಳನ್ನೂ ಅವುಗಳ ಪ್ರಕಾರಗಳನ್ನೂ ಅವುಗಳಿಗಿರುವ ಸಂಬಂಧ ಮೊದಲಾದವುಗಳನ್ನೆಲ್ಲಾ ಕಂಠೋಕ್ತವಾಗಿ ಉಪಪಾದಿಸುವದರಿಂದಲೂ, ಇತರ ವ್ಯಾಪಕ ಮನ್ತ್ರಗಳಲ್ಲಿ ಇಷ್ಟೆಲ್ಲಾ ವ್ಯಾಪ್ಯವ್ಯಾಪಕ ಅರ್ಥಬೋಧವಿಲ್ಲವೆಂಬ ಭಾವವು ಸೂಚಿತವು; ವ್ಯಾಪಕತತ್ತ್ವವು ಭಗವಂತನು, ಆದುದರಿಂದ ಭಗವಂತನನ್ನುದ್ದೇಶಿಸಿದ ಮನ್ತ್ರಗಳಾದ ದ್ವಾದಶಾಕ್ಷರ ಷಡಕ್ಷರ ಅಷ್ಟಾಕ್ಷರ ಮನ್ತ್ರಗಳೆಂದು ವ್ಯವಹರಿಸಲ್ಪಡುತ್ತವೆ. ಈ ಅಷ್ಟಾಕ್ಷರದಲ್ಲಿರುವ ತತ್ತ್ವಬೋಧವು ಇತರ ವ್ಯಾಪಕ ಮನ್ತ್ರಗಳಲ್ಲಿ ದೊರೆಯುವದಿಲ್ಲವೆಂಬ ಭಾವವು: (೮) **ಸರ್ವಮನ್ತ್ರನೈರಪೇಕ್ಷ್ಯಕರಮಾಯ್** - ಆದುದರಿಂದ ಈ ಮನ್ತ್ರಕ್ಕೆ ಇನ್ನು ಯಾವ ಮನ್ತ್ರದ ಅಪೇಕ್ಷೆಯೂ ಇಲ್ಲದೆ, ಎಂದರೆ ಈ ಮನ್ತ್ರವನ್ನು ಅಧಿಕರಿಸುವವನಿಗೆ ಇನ್ನು ಯಾವ ಮನ್ತ್ರದ ಅಪೇಕ್ಷೆಯೂ ಇಲ್ಲವೆಂಬ ಭಾವವು, ಇದೇ ಸರ್ವಾರ್ಥ ಸಾಧಕವು ಎಂಬ ತಾತ್ಪರ್ಯವು. ಆಗಲಿ ಇದರೊಂದಿಗೆ ದ್ವಯವು ಕರಣ ಮನ್ತ್ರವಾಗಿ ಭೋಗ್ಯವು. ಚರಮಶ್ಲೋಕವು ಹಿತೋಪದೇಶವಾಗಿ ಪೋಷಕವು ಎಂದು ಹೇಳಿ, ಇಷ್ಟೂ ಅವಶ್ಯಕವೆಂದು ಹೇಳಿದುದಕ್ಕೆ ವಿರುದ್ಧವಾಗಲಿಲ್ಲವೋ? ಎಂದರೆ ಈ ಮೂಲಮನ್ತ್ರಾರ್ಥಗಳ ವಿವರಣ ರೂಪದಲ್ಲಿ ಆ ಮನ್ತ್ರಗಳು

## ಆಳ್ವಾರ್ ಪ್ರಭೃತಿಭಿರಪ್ಯತ್ಯಾದರೇಣ ಉಪಾದೇಯೋಽಯಂ ಮನ್ತ್ರಃ.

**ಆಳ್ವಾರುಗಳುಮ್ (೧) "ನಿನ್ ತಿರುವೆಟ್ಟೆಳುತ್ತುಮ್ ಕತ್ತು" ಎನ್ರುವಮ್,**

ಉಪಾದೇಯವಾದುದರಿಂದ ಅನ್ಯಮನ್ತ್ರನೈರಪೇಕ್ಷ್ಯಕ್ಕೆ ವಿರುದ್ಧವಲ್ಲವೆಂದು ತಿಳಿಯ ತಕ್ಕದ್ದು; (೯) **ಸರ್ವಮೂರ್ತಿಗಳುಕ್ಕುಂ**-ಸಮಸ್ತ ಭಗವಂತನ ದಿವ್ಯಮಙ್ಗಳ ವಿಗ್ರಹ ಗಳಾದ ರಾಮಕೃಷ್ಣ ನೃಸಿಂಹಾದಿ ಮೂರ್ತಿಗಳಿಗೂ, **ಸಾಧಾರಣಮಾಯ್ ಇರು ಕ್ಕೈಯಾಲೇ,** ಈ ಮನ್ತ್ರವು ಸಾಧಾರಣವಾಗಿ ಅನುಕೂಲಿಸುವದರಿಂದಲೂ, ಎಂದರೆ ರಾಮಕೃಷ್ಣಾದಿ ಮನ್ತ್ರಗಳು ಆಯಾ ಭಗವನ್ಮೂರ್ತಿಯ ಅರ್ಚ ನಾದಿಗಳಿಗೆ ಮಾತ್ರವೇ ಯೋಗ್ಯವು ; ಈ ಅಷ್ಟಾಕ್ಷರವಾದರೋ ಹಾಗಲ್ಲವು, ಸಕಲ ಭಗವನ್ಮೂರ್ತಿಗಳ ಅರ್ಚನೆಯಲ್ಲೂ ಅತ್ಯಾವಶ್ಯಕವು; ಇದನ್ನು ನಿತ್ಯಾದಿ ಗ್ರಂಥಗ ಳಲ್ಲಿ ಕಾಣಬಹುದು ; ಹೀಗೆ ಈ ಒಂಬತ್ತು ಕಾರಣಗಳಿಂದ, **ಸರ್ವಾಚಾರ್ಯರು ಗಳುಮ್** - ನಾಥಮುನಿ ಮೊದಲುಗೊಂಡು ಸಮಸ್ತಾಚಾರ್ಯರುಗಳೂ, **ಇತ್ತೈ**- ಈ ಮೂಲಮಂತ್ರವನ್ನು, **ವಿರುಂಬಿಪ್ಪೋರುವರ್ಗಳ್** - ಆದರವನ್ನು ಮಾಡಿ ಅಥವಾ ವಿಶ್ವಾಸವನ್ನು ತೋರಿ ಹೋಗಿರುವರು; ಎಂದರೆ ತುಂಬಾ ವಿಶ್ವಾಸದಿಂದ ಈ ಮನ್ತ್ರವನ್ನೇ ಹೊಗಳಿ, ಮುಖ್ಯವಾಗಿ ಸಂಧ್ಯೆಗಳಲ್ಲಿ ಜಪಿಸುವದೂ ಅಲ್ಲದೆ, ದೇವ ತಾರ್ಚನೆ ಕಾಲದಲ್ಲೂ ಈ ಅಷ್ಟಾಕ್ಷರ ಮನ್ತ್ರದ ಮೂಲಕವಾಗಿಯೇ ಅರ್ಘ್ಯಪಾ ದ್ಯಾದಿ ಉಪಚಾರಗಳನ್ನು ಮಾಡುವ ಸಂಪ್ರದಾಯವನ್ನು ಅವಲಂಬಿಸಿದರೆಂಬ ಭಾವವು; ಸತ್ಸಂಪ್ರದಾಯದಲ್ಲಿ ಈ ಮಂತ್ರವೇ ಅವರಿಗೆ ಮುಖ್ಯವಾಗಿ ಉಪಾ ದೇಯವಾಗಿತ್ತೆಂಬ ತಾತ್ಪರ್ಯವು.

## ಆಳ್ವಾರ್ ಪ್ರಭೃತಿಗಳಿಂದಲೂ ತುಂಬಾ ಆದರದಿಂದ ಸ್ವೀಕರಿಸಲ್ಪಟ್ಟಿದುದು.

**ಆಳ್ವಾರುಗಳುಮ್** (೧)**"ನಿನ್ ತಿರುವೆಟ್ಟೆಳುತ್ತುಮ್ ಕತ್ತು"**-"ನಿನ್ನ ಅಷ್ಟಾ ಕ್ಷರ ಮನ್ತ್ರವನ್ನು ಹೇಳಿ ಎಂದರೆ ಜಪಿಸಿ," **ಎನ್ರುವಮ್**-ಎಂದೂ, ಈ ತಿರುಮಂಗೈ ಯಾಳ್ವಾರ ದಿವ್ಯಸೂಕ್ತಿಯು ಹಿಂದೆಯೇ ಎರಡು ಸಲ ಉದಾಹರಿಸಲ್ಪಟ್ಟಿ ರುತ್ತದೆ.—ಇದರ ಪ್ರತಿಪದಾರ್ಥಕ್ಕೂ ಪೂರಾ ಪಾಶುರಕ್ಕೂ ಪರದೇವತಾ ಪಾರ ಮಾರ್ಥ್ಯಾಧಿಕಾರದ ೭೩೭ನೆಯ ಪುಟವನ್ನು ನೋಡಿ; ಪುನಃ ಪುರುಷಾರ್ಥ ಕಾಷ್ಠಾಧಿಕಾರದ ೧೮೭೯ನೆಯ ಪುಟವನ್ನು ನೋಡಿ. ಮೊದಲನೆಯ ಸ್ಥಳದಲ್ಲಿ ತದೀಯಪರ್ಯನ್ತ ದೇವತಾನ್ತರ ತ್ಯಾಗವೂ, ತದೀಯ ಪರ್ಯನ್ತ ಭಗವಚ್ಛೇಷತ್ವವೂ ಹೇಳಲ್ಪಟ್ಟವೆ ಎಂದು ತಿಳಿಸಿದರು. ಎರಡನೆಯ ಸ್ಥಳದಲ್ಲಿ ಮುಖ್ಯವಾಗಿ ಭಾಗವತ ಶೇಷತ್ವದ ಉಪಪಾದನೆಯು. ಈ ನೂರನೆಯ ಪ್ರಕರಣದಲ್ಲಿ ಹೇಳತಕ್ಕ

[೧] ಪೆರಿ. ತಿರು. ೮, ೧೦. ೩.

## (೨) "ಎಟ್ಟೆಳುತ್ತುಮ್ ಓದುವಾರ್‌ಗಳ್ ವಲ್ಲಾರ್ ವಾನನೂಳವೇ" ಎನ್ನುಮ್

ವಿಷಯವಾದರೋ, ಮೂಲಮನ್ತ್ರದ ಮಾಹಾತ್ಮ್ಯಯು; ಮತ್ತು ನೀನಲ್ಲದೆ ದೇವತಾಂತರವನ್ನು ಆಶ್ರಯಿಸಬಹುದೆಂದು ಹೇಳುವರೊಂದಿಗೆ ಯಾವ ವಿಧವಾದ ಸಂಬಂಧವನ್ನೂ ಹೊಂದುವದಿಲ್ಲವು ; ಸಂಬಂಧವು ಯಾರೊಂದಿಗೆ ಎಂದರೆ ನಿನಗೆ ದಾಸಭೂತರಾಗಿರುವ ಸಾತ್ವಿಕಶಿಖಾಮಣಿಗಳಾದ ಮಹಾ ಭಾಗವತರೊಂದಿಗೆ, ಇದನ್ನು ಹೇಗೆ ಗ್ರಹಿಸಿದುದು ಎಂದರೆ ನಿನ್ನ ಅಮೋಘವಾದ ತಿರುಮನ್ತ್ರವಾದ ಅಷ್ಟಾಕ್ಷರವು ಅರ್ಥಪಂಚಕಾದಿ ಸಕಲ ಅರ್ಥಗಳನ್ನು ಉಪಪಾದಿಸುವದಾಗಿದ್ದರೂ ಮುಖ್ಯವಾಗಿ ಆ ಮನ್ತ್ರಜಪದಿಂದ ತಿಳಿದುದು ಭಾಗವತ ಶೇಷತ್ವವೇ ಎಂಬುದು. ಅರ್ಥ ಪಂಚಕಾರ್ಥಗಳು ಈ ಮೂಲಮನ್ತ್ರದಲ್ಲಿ ಎಲ್ಲಿ ಬೋಧಿತವೆಂದರೆ, ಪ್ರಣವದಲ್ಲಿ ಪ್ರಾಪ್ತವಾದ ಜೀವಾತ್ಮನ ಸ್ವರೂಪವೂ, ನಮುಸ್ಸಿನಲ್ಲಿ ವಿರೋಧಿ ಸ್ವರೂಪವೂ, ಪ್ರಾಪ್ತ್ಯುಪಾಯದ ಸ್ವರೂಪವೂ, ನಾರಾಯಣ ಶಬ್ದದಿಂದ ಪ್ರಾಪ್ಯನಾದ ಭಗವಂತನ ಸ್ವರೂಪವೂ, **ನಾರಾಯಣಾಯ** ಎಂಬಲ್ಲಿರುವ ವ್ಯಕ್ತ ಚತುರ್ಥಿಯಿಂದ ಪುರುಷಾರ್ಥಸ್ವರೂಪವೂ, ಹೀಗೆ ಇವು ಐದೇ ಎಲ್ಲಾ ಶಾಸ್ತ್ರಗಳಲ್ಲಿ ಹೇಳಲ್ಪಟ್ಟವುಗಳಾಗಿ ಈ ಮನ್ತ್ರದಲ್ಲೂ ಹೇಳಿರುವದರಿಂದ **ಮಱ್ಱುಎಲ್ಲಾಂಪೇಶಿಲುಮ್** ಎಂಬ ಪ್ರಯೋಗವು. ಈ ಮನ್ತ್ರದಲ್ಲಿ **ನಾನ್ ಕಱ್ಱುಉಱ್ಱದು** - ನಾನು ಮುಖ್ಯವಾಗಿ ಅಧಿಕರಿಸಿ ತಿಳಿಹುದು, **ಉನ್ ಅಡಿಯಾರ್ಕ್ಕಡಿಮೈ** . ನಿನ್ನ ಭಾಗವತರಿಗೆ ಶೇಷ ಭಾವವು. ಇದನ್ನು ಎಲ್ಲಿ ಗ್ರಹಿಸಬಹುದು ಎಂದರೆ—ನಮುಸ್ಸು ಅಹಂಕಾರ ಮಮಕಾರಗಳನ್ನು ಕಳಿಯಬೇಕೆಂಬ ಉಪದೇಶವನ್ನು ಬೋಧಿಸುವದರಿಂದ, ಅಲ್ಲಿ ಭಗವತ್‌ಶೇಷತ್ವವೂ ಅದರ ಎಲ್ಲೆಯಾದ ಭಾಗವತ ಶೇಷತ್ವವೂ ಸೂಚಿತವೆಂದು ಭಾವಿಸುವರು: ಇನ್ನು ಕೆಲವರು ಪ್ರಣವದಲ್ಲಿರುವ ಅಕಾರದ ಲುಪ್ತಚತುರ್ಥಿಯಿಂದ ಭಗವಚ್ಛೇಷತ್ವವೂ ಭಾಗವತ ಶೇಷತ್ವವೂ ವ್ಯಕ್ತವೆಂದೂ, ಇನ್ನು ಕೆಲವರು ಉಕಾರವಾದ ಅವಧಾರಣದಿಂದ ತೋರುತ್ತದೆಂದೂ ಭಾವಿಸುವರು.

(೨) "ಎಟ್ಟೆಳುತ್ತುಮ್ - ಅಷ್ಟಾಕ್ಷರ ಮನ್ತ್ರವನ್ನು, **ಓದುವಾರ್‌ಗಳ್** - ಜಪಿಸುತ್ತಾ ಅಭ್ಯಾಸ ಮಾಡಿಕೊಂಡಿರುವವರು, **ವಲ್ಲಾರ್‌ವಾನನೂಳವೇ** - ಪರಮಪದ ನಿರ್ವಾಹಕರಾಗುವರು ; ಪರಮಪದವನ್ನು ಸೇರಲು ಅರ್ಹರಾಗುವರೆಂಬ ಭಾವವು, ಈ ಪೂರಾಪಾಶುರವು ಯಾವುದೆಂದರೆ—

> ಎಟ್ಟ ನೆ ಟ್ಟ ಮೆಟ್ಟನಾಯೋ ರೇಳು ಮೇಳು ನೇಳವಾಯ್ |
> ಎಟ್ಟು ಮೂಶ್ರು ಮೊನು ಮಾಗಿ ನಿನ್ರಾದಿದೇವನೈ |
> ಎಟ್ಟನಾಯು ಭೇದನೋಡಿರೈಂಜಿ ನಿನ್ರವನ್ ಶೇಯರ್ |
> ಎಟ್ಟೆಳುತ್ತು ಮೋದುವಾರ್‌ಗಳ್ ವಲ್ಲರ್ ವಾನನಾಳವೇ || ೭೭ ||

[೨] ತಿರುಚ್ಛಂದ ವಿರುತ್ತಂ. ೭೭.

(೩) "ಎಟ್ಟೆಳುತ್ತುಮ್ ವಾರಮಾಗ ವೋದುವಾರ್‌ಗಳ್ ವಲ್ಲರ್ ವಾನ

ಇದರ ಅರ್ಥವು—ಎಟ್ಟು ಮೆಟ್ಟು ಮೆ ಟ್ಟುಮಾಯ್-ಮೂರು ಎಂಟು ಎಂದು ಹೇಳಿದುದರಿಂದ ಪ್ರಕೃತಿ ಮತ್ತು ಅವುಗಳ ವಿಕೃತಿಗಳೂ ಸಹ ೨೪ ತತ್ವ ಶರೀರಕನಾಗಿರುವ, ಓರ್ - ಅದ್ವಿತೀಯನಾಗಿ, ಏಳುಮ್ - ಸಪ್ತ ಕುಲಾಚಲ ಗಳಾಗಿ ಏಳುಮ್ - ಸಪ್ತ ಸಮುದ್ರಗಳಾಗಿ, ಆಯ್ - ಹೀಗೆ ಇವುಗಳಿಗೆಲ್ಲಾ ಆತ್ಮಾವಾಗಿ, ಎಟ್ಟು ಮೂನ್ರು ಮೊನ್ರುಮಾಗಿ - ಎಂಟು, ಮೂರು ಮೇಲೆ ಒಂದು ಎನ್ನುವದರಿಂದ, ೧೨, ದ್ವಾದಿಶಾದಿತ್ಯರಿಗೂ ಅಂತರಾತ್ಮಾವಾಗಿ, ನಿನ್ರ - ಹೀಗೆ ಸರ್ವವೂ ತನಗೆ ಶರೀರವಾಗಿ, ಅವೆಲ್ಲಕ್ಕೂ ಆತ್ಮಾವಾಗಿರುವ, ಆದಿ - ಎಲ್ಲಾ ಜಗತ್ತಿಗೂ ಕಾರಣನಾಗಿ, ದೇವನ್ನೈ – ಈ ಲೀಲಾವಿಭೂತಿಯಲ್ಲಿ ತುಂಬಾ ಮಮತೆಯುಳ್ಳವನಾಗಿ ಆಶ್ರಯಿಸಲು ಯೋಗ್ಯನಾಗಿರುವ ತೇಜೋಮಯನಾದ ಸರ್ವೇಶ್ವರನನ್ನು, ಎಟ್ಟನಾಯಭೇದನೋಡು - ಅಷ್ಟಾಙ್ಗ ಪ್ರಣಾಮದೊಂದಿಗೆ, ಇರೈಂಜಿನಿನ್ರು - ಆಶ್ರಯಿಸಿ ನಿಂತು, ಎಂದರೆ ಶರಣಾಗತಿಯನ್ನನುಷ್ಠಿಸಿ, ಅವನ್- ಹೀಗೆ ಎಲ್ಲಕ್ಕು ಅಂತರಾತ್ಮವಾಗಿ, ಕಾರಣಭೂತನಾಗಿ, ಆಶ್ರಯಣೀಯನಾಗಿ- ಇರುವ ಸ್ವಾಮಿಯ, ಪೇರ್ - ದಿವ್ಯ ನಾಮಗಳನ್ನು ಹೇಳಿ, ಎಟ್ಟೆಳುತ್ತುಮ್- ಮೇಲೆ ಹೇಳಿವವನ್ನೆಲ್ಲಾ ಬೋಧಿಸುವ ಅಷ್ಟಾಕ್ಷರ ಮನ್ತ್ರವನ್ನು, ಓದುವಾರ್‌ಗಳ್ ಜಪಿಸುವವರು, ವಾನಮ್ – ಪರಮಪದವನ್ನು, ಆಳವಲ್ಲರೇ - ನಿರ್ವಹಿಸಿ ಕೊಳ್ಳಲು ಸಮರ್ಥರೇ ಸರಿ. ಹೀಗೆ ಸರ್ವಶರೀರಕನಾಗಿ ಸರ್ವಾಂತರ್ಯಾಮಿಯಾಗಿ ಜಗತ್ಕಾರಣನಾಗಿ, ಆಶ್ರಿತ ವಾತ್ಸಲ್ಯವನ್ನುಳ್ಳವನಾಗಿರುವ ಸರ್ವೇಶ್ವರನಲ್ಲಿ ಶರಣಾ ಗತಿಯನ್ನನುಷ್ಠಿಸಿ ಅಷ್ಟಾಂಗ ಪ್ರಣಾಮವನ್ನೆಸಗಿ ಮೂಲಮನ್ತ್ರವನ್ನು ಜಪಿಸುವ ವರು ಪರಮಪದ ನಿರ್ವಾಹಕರೇ ಎಂದು ಹೇಳಿರುತ್ತಾರೆ—

(೩) ಈ ಪೂರಾಪಾಶುರವು ಯಾವುದೆಂದರೆ—

ಚೋರ್‌ವಿಲ್ಲಾದ ಕಾದಲಾಲ್ ತೊಡಕ್ಕರಾಮುನತ್ತರಾಯ್ ।
ನೀರರಾವಣೈಕ್ಕಿಡನ್ದ ನಿನ್‌ಮಲನ ಲಙ್ಕಳಲ್ ।
ಆರ್‌ವನೋಡಿರೈಞ್ಜಿ ನಿನ್ನವನ್ ಪೇಯರೆಟ್ಟೆಳುತ್ತುಮ್ ।
ವಾರಮಾಗ ವೋದುವಾರಗಳ್ ವಲ್ಲರ್ ವಾನನೂನನೇ ॥ ೭೮ ॥

ಭಗವದುಪಾಸನಕ್ಕೆ ಸರ್ವೇಶ್ವರನ ಶುಭಾಶ್ರಯವೆಂದು ಹೇಳಿಸಿಕೊಳ್ಳುವ ದಿವ್ಯ ಮಙ್ಗಳ ವಿಗ್ರಹವು ಆವಶ್ಯಕವು. ಪರಮ ಕರುಣೆಯಿಂದ ಪ್ರೇರಿತನಾಗಿ ಕ್ಷೀರಾಬ್ಧಿ ಯಿಂದ ಬಂದು ಆಶ್ರಿತರ ಪ್ರಯೋಜನಕ್ಕಾಗಿ" ಏಷ ನಾರಾಯಣ ಶ್ರೀಮಾನ್ ಕ್ಷೀರಾರ್ಣವನಿಕೇತನಃ । ನಾಗಪರ್ಯಂಕ ಮುತ್ಸೃಜ್ಯ ಹ್ಯಾಗತೋಮಧುರಾಂ ಪುರೀಂ" ಎಂದು ಹೇಳಿರುವ ಹಾಗೆ ಇಲ್ಲಿಗೆ ಬಂದು ದಿವ್ಯಮಙ್ಗಳವನ್ನು ಧರಿಸಿರುವ ನನ್ನು ಆಶ್ರಯಿಸಿ, ಅಷ್ಟಾಕ್ಷರ ಮನ್ತ್ರಾರ್ಥ ಜ್ಞಾನದಿಂದ ಭಗವಚ್ಛೇಷತ್ವವನ್ನು

**ಮಾಳವೇ"** ಎನ್ರನ್, (೩) **ನಾಡುನಗರಮುಮ್ ನನ್ಗರಿಯ ನಮೋ**

---

ಅರಿತು, ಅಳವಿಲ್ಲದ ಅನನ್ಯ ಭಕ್ತಿರೂಪ ಪ್ರೇಮಾತಿಶಯದಿಂದ ಈ ಮಂತ್ರವನ್ನು ಜಪಿಸಿ, ಆತನನ್ನು ಧ್ಯಾನಿಸುವವರು ಪರಮ ಪದವನ್ನು ಹೊಂದಲು ಸಮರ್ಥರಾಗುವರೆಂದು ಉಪದೇಶಿಸುತ್ತಾರೆ—**ನೀರ್** - ಕ್ಷೀರಾಬ್ಧಿಯ ಜಲದಲ್ಲಿ, **ಅರಾವು** ಆದಿಶೇಷನ, **ಅಣೈ** - ಹಾಸಿಗೆಯಲ್ಲಿ, **ಕಿಡನ್ದ** - ಮಲಗಿರುವ, **ನಿನ್ಮಲನ್** - ಹೇಯ ಪ್ರತ್ಯನೀಕನಾದ ಭಗವಂತನ, **ನಲನ್ಕಳಲ್** - ನಿರತಿಶಯ ಸುಖರೂಪವಾದ ಪಾದ ಕಮಲಗಳನ್ನು, **ಆರ್ವನೋಡು** – ಪ್ರೇಮಾತಿಶಯದಿಂದ, ಅನನ್ಯ ಭಕ್ತಿಯಿಂದ, **ಇರೈಂಜಿನಿನ್ರು** - ಆಶ್ರಯಿಸಿ ಇರುವ, **ಶೋರ್ವು** - ಇತರ ವಿಷಯ ಭೋಗಾಸಕ್ತಿರೂಪ ಹಾನಿಯು, **ಇಲಾದ** - ಇಲ್ಲದಿರುವ, **ಕಾದಲಾಲ್** - ಪ್ರೇಮ ವಿಶೇಷದಿಂದ, **ತುಡುಕ್ಕು** - ಧ್ರುವಾಸ್ಮೃತಿರೂಪ ಚಿನ್ತನ ಮಾಡುವ ಸಂಬಂಧವು, **ಅರಾ** – ವಿಚ್ಛಿತ್ತಿಯಿಲ್ಲದ ಹಾಗೆ, **ಮನತ್ತರಾಯ್** – ಮನಸ್ಸನ್ನು ಹೊಂದಿದವರಾಗಿ, **ಅವನ್** - ಆ ಕ್ಷೀರಾಬ್ಧಿಶಾಯಿಯ, **ಪೇಯರ್** – ತಿರುನಾಮವಾದ, **ಎಟ್ಟೆಳುತ್ತು** - ಅಷ್ಟಾಕ್ಷರ ಮನ್ತ್ರವನ್ನು, ವಾರನಾಗ - ನಿಷ್ಠಾಪರರಾಗಿ, ಓದುವರ್ಗಳ್- ಅಂತಹ ತದೇಕ ನಿಷ್ಠೆಯಿಂದ ಜಪವನ್ನು ಮಾಡುವವರು, ವಾನವರ್ಆಳವಲ್ಲರೇ- ಪರಮಪದವನ್ನು ಸೇರುವದಕ್ಕೂ ಪರಿಪೂರ್ಣಾನುಭವಕ್ಕೂ, ಸಮರ್ಥರೇ ಸರಿ. **ಮನ್ಮನಾಭವಮದ್ಭಕ್ತೋ"** ಎಂದೂ, **"ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ"** ಎಂದೂ, **"ಸತ್ವಶುದ್ಧೌ ಧ್ರುವಾಸ್ಮೃತಿಃ" "ಸ್ಮೃತಿಲಂಭೇ ಸರ್ವಗ್ರನ್ಥೀನಾಂ ವಿಪ್ರಮೋಕ್ಷಃ"** ಎಂದೂ, ಹೀಗೆಲ್ಲಾ ಹೇಳಿರುವದರಿಂದ ಜ್ಞಾನ ಕರ್ಮಾನುಗೃಹೀತ ಉಪಾಸನ ರೂಪೋಪಾಯವು ಇಲ್ಲಿ **ತುಡುಕ್ಕರಾ ಮನತ್ತರಾಯ್** ಎಂಬಲ್ಲಿ ಹೇಳಲ್ಪಟ್ಟಿತು. ಆ ಉಪಾಸನೆಗೆ ಬೇಕಾದುದು ದಿವ್ಯಮಙ್ಗಳ ವಿಗ್ರಹ ಚಿನ್ತನವೂ, ಉಪಾಸ್ಯನಲ್ಲಿ ಸೌಲಭ್ಯಾದಿಗಳು, ಇವು ಆತನಿಗೆ ಉಂಟೆಂದು ಹೇಳುತ್ತಾರೆ.—**ನೀರಾಪಣೈಕ್ಕಿಡನ್ದ** ಎಂಬುದರಿಂದ ಲಾವಣ್ಯಾತಿಶಯವೂ, ಆದಿಶೇಷ ಸಂಬಂಧದಿಂದ ಆಶ್ರಿತನೊಂದಿಗೆ ಸೇರಿರುವ ಸೌಶೀಲ್ಯ ವಾತ್ಸಲ್ಯಾದಿಗಳೂ ಹೇಳಲ್ಪಟ್ಟವು. ಹಾಗೆಯೇ **ನಿನ್ಮಲನ್** - ಎಂಬುದರಿಂದ ಹೇಯಪ್ರತ್ಯನೀಕತ್ವ ಕಲ್ಯಾಣ ಗುಣಾಕರತ್ವಗಳು ಬೋಧಿಸಲ್ಪಟ್ಟವು. **ನಲ್ ಕಳಲ್** ಎಂಬುದರಿಂದ **ತಸ್ಯಚ ವಶೀಕರಣಂ ತಚ್ಛರಣಾಗತಿರೇವ** - ಎಂಬಲ್ಲಿ ಹೇಳಿರುವ ಹಾಗೆ, ಆ ಭಕ್ತಿಮಾರ್ಗಕ್ಕೆ ಬೇಕಾದ ಅಙ್ಗಪ್ರಪದನವೂ, ಆ ಭಕ್ತಿಯೋಗಕ್ಕೆ ಅಶಕ್ತನಾದವನಿಗೆ ಸ್ವತಂತ್ರ ಪ್ರಪತ್ತಿಯೂ ಸಹ ಹೇಳಲ್ಪಟ್ಟವು. **"ಮಾಮೇಕಂ ಶರಣಂವ್ರಜ" "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"** ಎಂದು ಹೇಳಿರುವಹಾಗೆ, ಹೇಯಪ್ರತಿಭಟನಾದುದರಿಂದ ಆಶ್ರಿತನ ಹೇಯಪಾಪಗಳನ್ನೂ ಹೋಗಲಾಡಿಸುವನೆಂಬರ್ಥವೂ ಸೂಚಿ

---

(೩) ತಿರುಚ್ಚಂದ ವಿರುತ್ತಂ. ೭೮.

ತವು. ಇದರಿಂದ ಶರಣಾಗತವತ್ಸಲನೆಂಬ ಬಿರುದು ಆತನಿಗೆ ಸಲ್ಲುವದೆಂಬ ಭಾವವನ್ನು ಹೇಳಿದಂತಾಯಿತು. ಭಕ್ತಿಯೋಗದಲ್ಲಿರುವ ಅನನ್ಯ ಭಕ್ತಿ ಎಂತಾದ್ದೆಂದರೆ "ಪ್ರೀತಿರೂಪಮನುಧ್ಯಾನಂ ಭಕ್ತಿರಿತ್ಯಭಿಧೀಯತೇ" ಎಂದು ಹೇಳಿರುವಹಾಗೆ ಪರಮಾತ್ಮನಲ್ಲಿ ಪ್ರೀತ್ಯತಿಶಯವನ್ನು ವ್ಯಕ್ತಪಡಿಸುತ್ತದೆ ; ಏತರಿಂದೆಂದರೆ ಈಗಿರುವ ದುಃಖರೂಪವಾದ ಸಂಸಾರವನ್ನು ತಪ್ಪಿಸಿ ದುಃಖಗಂಧವೇ ಇಲ್ಲದೆ ನಿರತಿಶಯಾನಂದವಾಗಿ ತನಗೆ ಸಮಾನವಾದ ಭೋಗವನ್ನು ದಯಪಾಲಿಸುವ ಕರುಣಾಸಾಗರನೆಂಬ ಭಾವವಿರುವದರಿಂದ ನಿರತಿಶಯ ಪ್ರೀತಿಯಿಂದ ಉಪಾಸಿಸುವನೆಂಬುದನ್ನು ತಿಳಿಸುವದಕ್ಕಾಗಿ **ಆರ್ವನೋಡು ಇರೈಂಜಿನಿನ್ರು** ಎಂಬ ಪ್ರಯೋಗವು. **"ಅಕಾರಾರ್ಥೋ ವಿಷ್ಣುಃ" "ಅಕಾರೋ ವಿಷ್ಣುವಾಚಕಃ"** ಎಂಬಿವೇ ಮೊದಲಾದ ಹೇಳಿಕೆಗನುಸಾರವಾಗಿ ಪ್ರಣವವೂ **ನಾರಾಯಣಾಯ** ಎಂಬ ಪದವೂ ಸಹ ಧ್ಯೇಯ ವಸ್ತುವನ್ನು ಬೋಧಿಸುವದರಿಂದ **ಅವನ್ ಪೇಯರೆಟ್ಟೆಳುತ್ತು** ಎಂದು ಹೇಳಲ್ಪಟ್ಟಿತು. ಎಂಟು ಅಕ್ಷರದಲ್ಲಿ ಆರು ಅಕ್ಷರವೆಲ್ಲಾ ಆತನನ್ನೇ ಬೋಧಿಸುತ್ತವೆ ಎಂಬ ಭಾವವು. **"ಓಂ ನಮೋ ನಾರಾಯಣಾಯೇತಿ ಮನ್ತ್ರೋಪಾಸಕಃ ವೈಕುಂಠಲೋಕಂಗಮಿಷ್ಯತಿ"** ಎಂಬ ಶ್ರುತ್ಯರ್ಥವು ಇಲ್ಲಿ **"ವಾರಮಾಗ ಓದುವರ್ಗಳ್ ವಲ್ಲರ್ ವಾನಮಾಳವೇ"** ಎಂದು ಹೇಳಲ್ಪಟ್ಟಿತು." ಎನ್ರುಂ ಎಂದೂ,

(೪) ಇದು **"ಏಡು ನಿಲತ್ತಿಲ್"** ಎಂಬ ತಿರುಪ್ಪಲ್ಲಾಂಡಿನ ಏಳನೆಯ ಪಾಶುರವು ನಿಮ್ಮ ಪ್ರಾಕೃತದೇಹವು **ನಾಶವನ್ನು ಹೊಂದುವದಕ್ಕೆ ಮುಂಚೆಯೇ** ಎಂದರೆ ದೇಹಾವಸಾನಕ್ಕೆ ಪೂರ್ವಭಾವಿಯಾಗಿಯೇ, ನೀವುಗಳೆಲ್ಲಾ ಈ ಸಂಸಾರಾಭಿಮಾನಗಳನ್ನೆಲ್ಲಾ ಪರಿತ್ಯಜಿಸಿ, ನಮ್ಮ ಜೊತೆಗೆ ಬಂದು ಸೇರಿರಿ ಎಂದು ಪೂರ್ವಾರ್ಧದಿಂದ **ಹಿತೋಪದೇಶ**ವನ್ನು ಮಾಡಿ, ಈ ಉತ್ತರಾರ್ಧದಿಂದ ಹೇಳುತ್ತಾರೇನೆಂದರೆ—**ನಾಡು ನಗರುಮುಂ** ಚಿಕ್ಕ ಸ್ಥಳವಾಸದಿಂದ ಹೆಚ್ಚು ಶಾಸ್ತ್ರಜ್ಞಾನಕ್ಕೆ ಅನುಕೂಲವಿಲ್ಲದವರೂ, ದೊಡ್ಡ ಪಟ್ಟಣದಲ್ಲಿ ವಾಸಮಾಡುವುದರಿಂದ ಶಾಸ್ತ್ರಜ್ಞಾನ ಪ್ರಾಪ್ತಿಗೆ ಅನುಕೂಲ ದೊರೆತಿರುವವರೂ ಸಹ, **ನಲ್ಗರಿಯ**-ಚನ್ನಾಗಿ ತಿಳಿಯುವಹಾಗೆ ಆದರದಿಂದ **"ನಮೋ ನಾರಾಯಣಾಯ,"** ಎನ್ರು-ಎಂಬದಾಗಿ **ಪಾಡುಮನಮುಡೈ**-ಹಾಡಬೇಕೆಂಬ ಮನಸ್ಸುಳ್ಳವರಾಗಿ, **ಪತ್ತರುಳ್ಳೀರ್** - ಶ್ರದ್ಧೆಯುಳ್ಳವರಾದರೆ, **ವನ್ದು ಪಲ್ಲಾಂಡು ಕೂರುಮಿನೇ** – ಬಂದು ಜಗದ್ರಕ್ಷಕನಿಗೆ ಮಂಗಳಾಶಾಸನವನ್ನು ಹೇಳಿರಿ ಎಂದು ಕರೆಯುತ್ತಾರೆ. ಇಲ್ಲಿ **ನಮೋ ನಾರಾಯಣಾಯ** ಎಂದು ಅಷ್ಟಾಕ್ಷರದ ಮಹಿಮೆಯು ಕೊಂಡಾಡಲ್ಪಟ್ಟಿತು.

(೫) "ನಲ್ವಗೈಯಾಲ್"-ಎಂದು ಹೇಳಿರುವದೂ "ಅಲ್ವಳುಕ್ಕೊನ್ರುಮಿಲ್ಲಾ" ಎಂಬ ತಿರುಪಲ್ಲಾಂಡಿನ ೧೧ನೆಯ ಪಾಶುರದ ಉತ್ತರಾರ್ಧವು. ಪೂರ್ವಾರ್ಧದ ಅರ್ಥವೇನೆಂದರೆ—ಈ ಅಷ್ಟಾಕ್ಷರ ಮನ್ತ್ರಕ್ಕೆ ಸೇರಿದ ಪ್ರಣವದಲ್ಲಿ ಬಹುಸ್ವಾರಸ್ಯವಾಗಿ ಉಪಪಾದಿಸಿರುವದು ಭಗವಚ್ಛೇಷತ್ವವು ; ಇದು ಚೇತನನ ಸ್ವಾಭಾ

ನಾರಾಯಣಾಯ" ಎನ್ರುಮ್, (೫) "ನಲ್‌ವಗೈಯಾಲ್ ನಮೋನಾರಾಯಣಾ" ಎನ್ರುಮ್, ಇತ್ತಿರುಮನ್ತ್ರತ್ತೈಯೇ ವಿರುಮ್ಬಿ ಪೋನ್ದಾರ್‌ಗಳ್. ಋಷಿಗಳುಮ್ (೬) "ಬಹವೋ(ಹಿ)ಪಿ ಮಹಾತ್ಮಾನೋ ಮುನಯಸ್ಸನಕಾದಯಃ।

---

ವಿಕ ದರ್ಮವೆಂಬುವದು ದಾಸಭೂತಾ ಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ" ಎಂಬಲ್ಲಿ ಹೇಳಿರುವ ಹಾಗೆ ಇಲ್ಲಿನ ಪಾಂಡ್ಯ ಧೊರೆಯಾದ ಶೆಲ್ವನಂಬಿಯ ನಿದರ್ಶನದಿಂದ ಚೆನ್ನಾಗಿ ಗ್ರಹಿಸಿರುತ್ತೇನೆಂದು ಹೇಳಿರುತ್ತಾರೆ. ಆತನು ಹೇಗೆ ನಿನಗೆ ಶೇಷಭೂತನೋ, ಹಾಗೆಯೇ ನಾನೂ ನಿನಗೆ ಶೇಷಭೂತನೆಂದು ತಿಳಿಸಿ ಉತ್ತರಾರ್ಧದಿಂದ ಹೇಳುತ್ತಾರೇನೆಂದರೆ—ಹೀಗೆ **ನಲ್ವಗೈಯಾಲ್**-ನಾನು ನಿನಗೆ ಸಹಜ ಕಿಂಕರನೆಂಬ ಒಳ್ಳೆಯ ಮಾರ್ಗದಿಂದ, **ನಮೋನಾರಾಯಣಾವೆನ್ರು** - ಎಂಬದಾಗಿ, ಮಃ ನ ಎಂಬ ಖಂಡ ನಮಸ್ಸಿನಿಂದ, ನಾನು ನನಗಲ್ಲವು, ಪರಮ ಪುರುಷನಾದ ನಾರಾಯಣನಿಗೇ ಶೇಷಭೂತನು ಎಂದು, ಎಂಬ ಭಾವವು, **ನಾಮಂ ಪಲಪರವಿ** - ನಿನ್ನ ದಿವ್ಯನಾಮಗಳಲ್ಲಿ ಅನೇಕವನ್ನು ಅನುಸಂಧಾನಪೂರ್ವಕವಾಗಿ ಉಚ್ಚರಿಸಿ, ಎಂಬ ಭಾವವು. **ಪವಿತ್ತಿರನೇ** - ಓ ಹೇಯ ಪ್ರತ್ಯನೀಕನೇ, **ಉನ್ನೈ ಪಲ್ಲಾಂಡುಕೂರುವನೇ** - ನಿನಗೆ ಮಙ್ಗಳಾಶಾಸನವನ್ನು ಮಾಡುವೆನು ಎಂದು ಹೇಳಲ್ಪಟ್ಟಿತು ; ಇಲ್ಲಿ ಮುಖ್ಯವಾಗಿ ಅಷ್ಟಾಕ್ಷರ ಮನ್ತ್ರವು ಭಗವಚ್ಛೇಷತ್ವವನ್ನು ಬೋಧಿಸುತ್ತದೆಂದು ಕೊಂಡಾಡಲ್ಪಟ್ಟಿತು. ಯಾವಾಗ ಭಗವಚ್ಛೇಷತ್ವದ ಅರ್ಥವು ಮಂತ್ರದಲ್ಲಿ ಸ್ಥಾಪಿತವೋ ತನ್ಮೂಲಕವಾಗಿ ಭಾಗವತ ಶೇಷತ್ವವೂ ಉಪಪಾದಿತವೆಂದು ಗ್ರಹಿಸಬಹುದು." ಎನ್ರುಮ್-ಎಂಬುದಾಗಿಯೂ, **ಇತ್ತಿರುಮನ್ತ್ರತ್ತೈಯೇ** - ಈ ಮೂಲಮಂತ್ರವನ್ನೇ, **ವಿರುಮ್ಬಿ ಪೋನ್ದಾರ್‌ಗಳ್** - ತುಂಬಾ ಆದರಿಸಿಹೋದರು ; ಎಂದರೆ ಹೀಗೆ ಅದರ ಮಹಿಮೆಯನ್ನು ಶ್ಲಾಘಿಸಿಹೋಗಿರುತ್ತಾರೆಂಬ ಭಾವವು. ಯಾರು ? ಎಂದರೆ ಇದಕ್ಕೆ, **ಆಳ್ವಾರ್‌ಗಳುಮ್** ಎಂಬ ಕರ್ತೃಪದವು ಹಿಂದೆ ಇದೆ.

ಹಿಂದೆ ಶ್ರುತಿ ಸ್ಮೃತಿ ಮೊದಲಾದ ಪ್ರಮಾಣಗಳಿಂದಲೂ, ಅನಂತರ ಆಳ್ವಾರುಗಳ ದಿವ್ಯಸೂಕ್ತಿಗಳಿಂದಲೂ, ಈ ಮೂಲ ಮನ್ತ್ರದ ಮಾಹಾತ್ಮ್ಯೆಯನ್ನು ಉಪಪಾದಿಸಿದರು, ಮುಂದೆ ಋಷಿವಾಕ್ಯಗಳನ್ನು ಉದಾಹರಿಸಿ ಶ್ಲಾಘಿಸುತ್ತಾರೆ.— **ಋಷಿಗಳುಮ್** – ಅತೀಂದ್ರಿಯವಾದವುಗಳನ್ನೂ ಕೂಡ ಸಾಕ್ಷಾತ್ಕರಿಸುವ ಶಕ್ತಿಯನ್ನು ಹೊಂದಿರುವವರಿಂದ ಋಷಿಗಳೆಂದು ಹೇಳಲ್ಪಟ್ಟ ಸದಾಚಾರ ಪ್ರವರ್ತಕರಾಗಿರುವವರೂ, ಮುಂದೆ ಎನ್ರಾರ್‌ಗಳ್ . ಎಂದು ಹೇಳಿರುತ್ತಾರೆಂದು ಅವರುಗಳು ಶ್ಲಾಘಿಸಿರುವ ಪ್ರಮಾಣಗಳನ್ನು ಉದಾಹರಿಸುತ್ತಾರೆ.—(೬) "**ಸನಕಾದಯಃ** -ಸನಕರೇ ಮೊದಲಾದವರಾದ, ಆದಿಶಬ್ದದಿಂದ ಸನಂದರೇ ಮೊದಲಾದ

---

(೬) ನಾರದೀಯ. ೧, ೧೬.

**ಅಷ್ಟಾಕ್ಷರಂ ಸಮಾಶ್ರಿತ್ಯ ತೇ ಜಗ್ಮುರ್ವೈಷ್ಣವಂ ಪದಮ್" (೭) "ಯಥಾ ಸರ್ವೇಷು ದೇವೇಷು ನಾಸ್ತಿ ನಾರಾಯಣಾತ್ಪರಃ । ತಥಾ ಸರ್ವೇಷು ಮನ್ತ್ರೇಷು ನಾಸ್ತಿ ಚಾಷ್ಟಾಕ್ಷರಾತ್ಪರಃ" ॥ (೮) "ಭೂತ್ವೋರ್ಧ್ವಬಾಹುರತ್ರಾದ್ಯ ಸತ್ಯ**

ವರು ಹೇಳಲ್ಪಟ್ಟವರು, ಮಹಾತ್ಮನಃ - ಜೀವಾತ್ಮ ಪರಮಾತ್ಮ ಸ್ವರೂಪಗಳನ್ನು ಯಥಾವತ್ತಾಗಿ ತಿಳಿದು ಉಪಾಯಾನುಷ್ಠಾನವನ್ನು ಮಾಡಿ, ಮಹತ್ತಾದ ಮನಶ್ಶಾಂತತೆಯನ್ನು ಹೊಂದಿದ, **ಮುನಯಃ** - ಮನನಶೀಲರಾದ ಮುನಿಗಳು, **ಅಷ್ಟಾಕ್ಷರಂ ಸಮಾಶ್ರಿತ್ಯ** - ಮನ್ತ್ರಗಳಲ್ಲೆಲ್ಲಾ ಪ್ರಧಾನವಾದ ಮೂಲಮನ್ತ್ರ ಜಪವನ್ನು ಕೈಕೊಂಡು. **ವೈಷ್ಣವಂ ಪದಂ** - ವಿಷ್ಣುವಿನ ಸ್ಥಾನವಾದ ದಿವ್ಯ ವೈಕುಂಠವನ್ನು, **ಜಗ್ಮುಃ** - ಹೊಂದಿದರು," ಇಲ್ಲಿ ಮೂಲ ಮನ್ತ್ರಜಪವೂ ದಿವ್ಯವೈಕುಂಠ ಪ್ರಾಪ್ತಿಗೆ ಸಹಕಾರಿ ಸಾಧನವೆಂದು ಭಾವಿಸತಕ್ಕದ್ದೇ ಪಿನಾ ಅದೇ ಅವ್ಯವಹಿತವೆಂದರೆ ಸಾಕ್ಷಾದುಪಾಯವೆಂದು ಭಾವಿಸತಕ್ಕದ್ದಲ್ಲವು. **"ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್"** ಎಂಬಲ್ಲಿ ಹೇಳಿರುವ ರೀತಿಗೆ ಉಪಾಯಾನುಷ್ಠಾನದ ಪೂರ್ವಭಾವಿಯಾಗಿ ಈ ಅಮೋಘ ಮನ್ತ್ರಜಪದಿಂದ ಉಪಾಯಾನುಷ್ಠಾನ ಸಿದ್ಧಿಯೂ, ತದನಂತರ ಮಾಡುವ ಈ ಮನ್ತ್ರಜಪದಿಂದ ಭಗವನ್ಮುಖೋಲ್ಲಾಸವೂ, ಬುದ್ಧಿ ಪೂರ್ವೋತ್ತರಾಘದಲ್ಲಿ ವಿಮುಖತ್ವವೂ ಉಂಟಾಗಿ ಭಗವಂತನ ವಿಶೇಷ ಪ್ರೀತಿಸಂಪಾದಕವಾಗಿಯೂ ಪರಿಣಮಿಸಬಹುದು. ಇದು ಸಂಧ್ಯಾವಂದನಾಂಗವಾಗಿ ಅನುಷ್ಠಿಸತಕ್ಕದ್ದಾದುದರಿಂದ, ಸಂಧ್ಯಾವಂದನವನ್ನು ಫಲಾಭಿಸಂಧಿಯಿಲ್ಲದೆ ಅನುಷ್ಠಿಸುವದರಿಂದ ಹೇಗೆ ಅದು ಭಗವತ್ಪ್ರೀತಿ ಸಂಪಾದಕವೋ, ಹಾಗೆಯೇ ಈ ಜಪವೂ ಕೂಡ ಎಂದು ಭಾವಿಸತಕ್ಕದ್ದು. (೭) **"ಯಥಾ** - ಹೇಗೆ **ಸರ್ವೇಷು ದೇವೇಷು** - ಸಮಸ್ತರಾದ ಆರಾಧ್ಯ ದೇವತೆಗಳಲ್ಲೂ, **ನಾರಾಯಣಾತ್** - ಶ್ರೀಮನ್ನಾರಾಯಣನಿಗಿಂತ, **ಪರಃ** - ಶ್ರೇಷ್ಠವಾದ ಆರಾಧ್ಯ ದೇವತೆಯು **ನಾಸ್ತಿ** - ಇಲ್ಲವೋ. ಹಾಗೆಯೇ, **ಸರ್ವೇಷು ಮನ್ತ್ರೇಷು** - ಸಮಸ್ತ ಮಂತ್ರಗಳಲ್ಲೂ, **ಅಷ್ಟಾಕ್ಷರಾತ್** - ಅಷ್ಟಾಕ್ಷರಕ್ಕಿಂತ, **ಪರಃ** - ಶ್ರೇಷ್ಠವಾದ ಮಂತ್ರವು, **ನಾಸ್ತಿ** - ಇಲ್ಲವು"; ಇಲ್ಲಿ ಮೂಲ ಮನ್ತ್ರವೂ ಮನ್ತ್ರಗಳಲ್ಲಿ ಹೇಗೋ ಹಾಗೆ ನಾರಾಯಣನೂ ದೇವತೆಗಳಲ್ಲಿ ಒಬ್ಬ ದೇವತೆ ಎಂದು ಭಾವಿಸತಕ್ಕದ್ದಲ್ಲವು; ಏಕೆಂದರೆ ದೇವತೆಗಳೆಲ್ಲಾ ಚತುರ್ಮುಖ ಮೊದಲುಗೊಂಡು ಎಲ್ಲರೂ ಜೀವಕೋಟಿಗೆ ಸೇರಿದವರು; ನಾರಾಯಣನಾದರೋ ಪರತತ್ತ್ವವು, ಆದುದರಿಂದ ನಾರಾಯಣನೂ ದೇವತೆಗಳಲ್ಲಿ ಒಬ್ಬನೆಂದು ಊಹಿಸತಕ್ಕದ್ದಲ್ಲವು. (೮) **ಹೇ ಪುತ್ರಶಿಷ್ಯಾಃ** - ಹೇ ಪುತ್ರರೇ ಶಿಷ್ಯರೇ, **ಅತ್ರ** - ಈ ಸ್ಥಳದಲ್ಲಿ, ಈ ಸಂದರ್ಭದಲ್ಲಿ, **ಅದ್ಯ** - ಈಗ, **ವಃ** - ನಿಮಗೆ, **ಸತ್ಯಪೂರ್ವಂ** - ಯಥಾರ್ಥ ಪೂರ್ವಕವಾಗಿ: **ಬ್ರವೀಮಿ** - ಹೇಳು

(೭) ನಾರದೀಯ ೧, ೪೨, (೮) ನಾರಸಿಂಹ ಪುರಾಣ ೧೮ ೩೨,

ಪೂರ್ವಂ ಬ್ರುವೀಮಿವಃ । ಹೇ ಪುತ್ರಶಿಷ್ಯಾ ಶೃಣುತ ನಮನ್ತ್ರೋಽಷ್ಟಾಕ್ಷರಾತ್ಪರಃ । ತದರ್ಚನ ಪರೋನಿತ್ಯಂ ತದ್ಭಕ್ತಸ್ತನ್ನಮಸ್ಕುರು । ತದ್ಭಕ್ತಾನ ವಿನಶ್ಯನ್ತಿ ಹ್ಯಷ್ಟಾಕ್ಷರ ಪರಾಯಣಾಃ ॥" (೯) "ಆಸೀನಾವಾ ಶಯಾನಾವಾ ತಿಷ್ಠನ್ತೋ ಯತ್ರಕುತ್ರವಾ । ನಮೋನಾರಾಯಣಾಯೇತಿ ಮನ್ತ್ರೈಕ ಶರಣಾವಯಮ್" ಎನ್ಪಾರ್‌ಗಳ್.

---

ವೆನು, **ಶೃಣುತ** - ಕೇಳಿರಿ, **ಅಷ್ಟಾಕ್ಷರಾತ್** - ಅನೋಘವಾದ ಮೂಲಮನ್ತ್ರಕ್ಕಿಂತ, **ಪರಃ** - ಶ್ರೇಷ್ಠವಾದ, **ಮನ್ತ್ರಃ** - ಮನ್ತ್ರವು, **ನ** - ಇಲ್ಲವು; **ತದರ್ಚನ ಪರಃ** - ತಚ್ಛಬ್ದವಾಚ್ಯನಾಗಿ ಮಹತ್ತಾದ ಪ್ರಸಿದ್ಧಿಯನ್ನು ಹೊಂದಿರುವ ಭಗವಂತನ ಆರಾಧನೆಯಲ್ಲಿ ನಿರತರಾಗಿ, ಅಥವಾ ಆ ಮೂಲಮನ್ತ್ರದ ಮೂಲಕ ಎಂದರೆ ಆ ಮನ್ತ್ರವನ್ನು ಜಪಿಸುತ್ತಾ ಭಗವದರ್ಚನೆಯಲ್ಲಿ ನಿರತನಾದ, **ತದ್ಭಕ್ತಃ** - ಆತನನ್ನು ನಿರತಿಶಯ ಪ್ರೀತಿಯಿಂದ ಭಜಿಸುವವ, **ತಂ** - ಆ ಭಗವಂತನನ್ನು, **ನಮಸ್ಕುರು** - ನಮಸ್ಕರಿಸು ಎಂದರೆ ಆ ಶರಣಾಗತವತ್ಸಲನಲ್ಲಿ ಶರಣಾಗತಿಯನ್ನನುಷ್ಠಿಸು ಎಂಬ ಭಾವವು; ಹೀಗೆ **ತದ್ಭಕ್ತಾಃ** - ಹೀಗೆ ಆತನನ್ನು ಸಿದ್ಧೋಪಾಯವಾಗಿ ವರಿಸಿ ಸಾಧ್ಯೋಪಾಯವನ್ನನುಷ್ಠಿಸಿ, **ಅಷ್ಟಾಕ್ಷರ ಪರಾಯಣಾಃ** - ಮೂಲ ಮನ್ತ್ರವನ್ನು ಜಪಿಸುವ ನಿಷ್ಠೆಯುಳ್ಳವರು, **ನವಿನಶ್ಯನ್ತಿ** - ಆತ್ಮಹಾನಿಯನ್ನು ಮಾಡಿಕೊಳ್ಳುವದಿಲ್ಲವು ಎಂದರೆ ದಿವ್ಯ ವೈಕುಂಠವನ್ನು ಸೇರುವರು ಎಂಬ ಭಾವವು, "(೯) **ಯತ್ರಕುತ್ರ** - ಎಲ್ಲೋ ಒಂದು ಸ್ಥಳದಲ್ಲಿ, **ಆಸೀನಾವಾ** - ಕೂತುಕೊಂಡಿರುವರೇಯಾಗಲಿ, **ಶಯಾನಾವಾ** - ಮಲಗಿಕೊಂಡಿರುವರೇ ಆಗಲಿ, **ತಿಷ್ಠನ್ತೋವಾ** - ನಿಂತಿರುವರೇಯಾಗಲಿ. "ನಮೋನಾರಾಯಣಾಯ" ಎಂಬ, **ಮನ್ತ್ರೈಕಶರಣಾ ವಯಮ್** - ಮೂಲ ಮನ್ತ್ರವನ್ನೇ ಮೋಕ್ಷೋಪಾಯಕ್ಕೆ ಸಾಧಕವಾಗಿ ಉಳ್ಳವರು ನಾವು" ಎಂದೂ ಎನ್ಪಾರ್ಗಳೇ - ಎಂದು ಶ್ಲಾಘಿಸಿರುತ್ತಾರೆ. ಇದಕ್ಕೆ ಕರ್ತೃಪದವು "**ಋಷಿಗಳುಮ್**" ಎಂದು ಹಿಂದೆ ಇರುತ್ತದೆ. ಇಲ್ಲಿ **ಶರಣಾವಯಮ್** ಎಂದು ಹೇಳಿರುವದು ಮೂಲ ಮನ್ತ್ರವೇ ಸಾಕ್ಷಾತ್ತಾಗಿ ಅವ್ಯವಹಿತ ಉಪಾಯವೆಂಬ ಭಾವನೆಯಿಂದಲ್ಲವು. ಭಗವದನುಗ್ರಹ ಸಂಪಾದಕವಾದ ಉಪಾಯಕ್ಕೆ ಬೇಕಾದ ಜ್ಞಾನವನ್ನು ಕೊಡುವದರ ಮೂಲಕ ಸಹಾಯ ಭೂತವೆಂಬ ಭಾವವು. ಇಲ್ಲಿ **ಪರಾಯಣಾಃ** - ಶ್ರೇಷ್ಠವಾದ, **ಅಯನ** ವೆಂದರೆ ಗತಿ, ಆಧಾರವನ್ನಾಗಿ ಭಾವಿಸುವರು. ಈ ಪದವೇ **ನಾರಾಯಣ** ಎಂಬ ಶಬ್ದದಲ್ಲೂ ಇರುತ್ತದೆ.

ಈ ಮನ್ತ್ರಕ್ಕೆ ಗುರೂಪದೇಶರೂಪ ಸಂಸ್ಕಾರವು ಆವಶ್ಯಕವೆಂದು ಹೇಳಿ,

---

(೯) ನಾರದೀಯ

**ಇತ್ತಿರುಮನ್ತ್ರತ್ತೈ ಸರ್ವೇಶ್ವರರ್ ಶ್ರೀ ನಾರದ ಭಗವಾನ್ನೈ ಇಟ್ಟು ಶ್ರೀ ಪುಂಡರೀಕನುಕ್ಕು ಉಪದೇಶಿಕ್ಕ, ಅವನುಮ್ ಇತ್ತೈಯೇ ಪರಮ ಹಿತಮಾಗ ಕೇಟ್ಟಪಡಿಯಾಲೇ (೧) "ಪುಂಡರೀಕೋಽಪಿ ಧರ್ಮಾತ್ಮಾ ನಾರಾ**

---

ಅಂತಹ ಆಚಾರ್ಯ ನಿಷ್ಠೆಯು ಉತ್ತಾರಕವಾಗುತ್ತದೆಂದು ದೃಷ್ಟಾಂತಮೂಲಕವಾಗಿ ಉಪಪಾದಿಸುತ್ತಾರೆ.—**ಇತ್ತಿರುಮನ್ತ್ರತ್ತೈ** - ಈ ಮೂಲಮನ್ತ್ರವನ್ನು, **ಸರ್ವೇಶ್ವರರ್** - ಸರ್ವೇಶ್ವರನು, **ಶ್ರೀನಾರದ ಭಗವಾನ್ನೈ** - ಶ್ರೀನಾರದ ಭಗವಾನರವರನ್ನು, **ಇಟ್ಟು** - ಮೂಲವಾಗಿ ಮಾಡಿಕೊಂಡು, **ಶ್ರೀ ಪುಂಡರೀಕನುಕ್ಕು** - ಪುಂಡರೀಕನಿಗೆ, **ಉಪದೇಶಿಕ್ಕ** - ಉಪದೇಶಿಸಲು, **ಅವನುಮ್** - ಆ ಪುಣ್ಯವಂತನಾದ ಪುಂಡರೀಕನೂ, **ಇತ್ತೈಯೇ** - ಈ ಮೂಲಮನ್ತ್ರವನ್ನೇ, **ಪರಮ ಹಿತಮಾಗ** - ಪರಮ ಹಿತವಾಗಿ, **ಕೇಟ್ಟಪಡಿಯಾಲೇ** - ಉಪದೇಶ ಮೂಲಕ ಕೇಳಿ ತಿಳಿದನಾದುದರಿಂದ (೧) "**ಪುಂಡರೀಕೋಽಪಿ ಧರ್ಮಾತ್ಮಾ** - ಸುಕೃತಿಯಾದ ಪುಂಡರೀಕನೂ ಕೂಡ, **ನಾರಾಯಣ ಪರಾಯಣಃ** - ಶ್ರೀಮನ್ನಾರಾಯಣನೇ ತನಗೆ ಪ್ರಾಪ್ಯ, ಆಧಾರ, ಗತಿ ಎಂದು ನಂಬಿದವನಾಗಿ, **ನಮೋನಾರಾಯಣಾಯ** ಎಂಬ **ಅಷ್ಟಾಕ್ಷರಂ** - ಅಷ್ಟಾಕ್ಷರ ಮನ್ತ್ರವನ್ನು, **ಜಪನ್** - ನಿಯತವಾಗಿ ಜಪಿಸುವವನಾಗಿ" **ಇತ್ಯಾದಿಗಳಿಲ್** - ಎಂಬಿವೇ ಮೊದಲಾದ ಪ್ರಮಾಣಗಳಲ್ಲಿ, **ಶೊಲ್ಲುಗಿರಪಡಿಯೇ** - ಹೇಳಿರುವ ಮೇರಿಗೆ, ಇಲ್ಲಿನ **ಆದಿ** ಪದದಿಂದ ಕ್ಷತ್ರಬಂಧು ವೃತ್ತಾನ್ತವನ್ನು ಹೇಳುವ ಪ್ರಮಾಣವು ಸೂಚಿತವು, ಅದೂ ಪಾದ್ಮೋತ್ತರದಲ್ಲೇ ಹೇಳಲ್ಪಟ್ಟಿರುತ್ತದೆ, **ಇಮ್ಮನ್ತ್ರನಿಷ್ಠನಾಯ್** - ತನ್ನ ಆಚಾರ್ಯರು ಉಪದೇಶಿಸಿದ ಈ ಮನ್ತ್ರಶ್ರೇಷ್ಠವನ್ನು ಜಪಿಸುವವನಾಗಿ, **ಮುಕ್ತನಾನ್** - ಮುಕ್ತಿಯನ್ನು ಹೊಂದಿದನು. ಇಲ್ಲಿ ಈ ಮೂಲಮನ್ತ್ರವು ಪರಮಹಿತವೆಂದು ಹೇಳಲ್ಪಟ್ಟಿರುತ್ತದೆ; ಏತರಿಂದೆಂದರೆ ಆಚಾರ್ಯರನ್ನು ಆಶ್ರಯಿಸಿ, ಅವರಿಂದ ಉಪದೇಶವನ್ನು ಹೊಂದಿದುದರಿಂದ; ಈ ಇತಿಹಾಸವು, ಹಿಂದೆಯೇ "**ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್**" ಎಂಬ ಹಿತೋಪದೇಶದ ಪ್ರಕರಣದಲ್ಲಿ ಹೇಳಲ್ಪಟ್ಟಿರುತ್ತದೆ. ಪುಂಡರೀಕ ವೃತ್ತಾಂತಕ್ಕೆ ಗುರುಪರಂಪರಾಸಾರದ ೫೧ ನೆಯ ಪುಟವನ್ನು ಪರಾಂಬರಿಸಿ; ಇವರು ಶ್ರೀ ನಾರದರನ್ನು ಆಶ್ರಯಿಸಿದುದೂ, ಹಾಗೆಯೇ ಸರ್ವರಿಗೂ ಉಂಟಾಗುವ ಅನುಗ್ರಹಗಳೆಲ್ಲವೂ ಭಗವತ್ಪ್ರಸಾದ ಮೂಲಕವಾಗಿಯೇ ಎಂದು ತಿಳಿಸುವದಕ್ಕಾಗಿ ಇಲ್ಲಿ "**ಸರ್ವೇಶ್ವರರ್ ನಾರದ ಭಗವಾನ್ನೈ ಇಟ್ಟು**" ಎಂಬ ಪ್ರಯೋಗವು. ಸಿದ್ಧೋಪಾಯನ ಅನುಗ್ರಹವಿಲ್ಲದೆ ಯಾವ ಶ್ರೇಯಸ್ಸೂ ಇಲ್ಲವೆಂಬ ಶಾಸ್ತ್ರಾರ್ಥವು ಇಲ್ಲಿ ಬೋಧಿತವು. ಶ್ರೀ ನಾರದ ಮುನಿಗೆ ಭಗವಚ್ಛಬ್ದವನ್ನು ಪ್ರಯೋಗಿಸುವದರಲ್ಲೂ, ಹಾಗೆಯೇ ಇತರ ಮಹಾ ಪ್ರಾಜ್ಞರಿಗೆ ಉಪಯೋಗಿಸುವದರಲ್ಲೂ, ಭಗವಂತನಿಗೆ ಉಪಯೋಗಿಸುವದರಲ್ಲೂ ಅರ್ಥವ್ಯತ್ಯಾಸ ಉಂಟು

---

(೧) ಪಾದ್ಮೋತ್ತರ ೬. ೮೧-೧೩೨.

**ಯಣಪರಾಯಣಃ । ನಮೋನಾರಾಯಣಾಯೇತಿ ಮನ್ತ್ರ ಮಷ್ಟಾಕ್ಷರಂ ಜಪನ್" ಇತ್ಯಾದಿಗಳಿಲ್ ಶೊಲ್ಲುಗಿರಪಡಿಯೇ ಇಮ್ಮನ್ತ್ರನಿಷ್ಠನಾಯ್ ಮುಕ್ತನಾನಾನ್. ಇಮ್ಮನ್ತ್ರತ್ತೈ (ಇತ್ತಿರುಮನ್ತ್ರತ್ತೈ) ತ್ತಿರುಮಜ್ಗೈಯಾಳ್ವಾರುಕ್ಕು ಸರ್ವೇಶ್ವರನ್ ತಾನೇ ಉಪದೇಶಿತ್ತಾನ್.**

---

ಇವನ್ನು ಶ್ರೀ ಪರಾಶರರು ವ್ಯಕ್ತಪಡಿಸಿರುತ್ತಾರೆ—ಭಗವಚ್ಛಬ್ದವು ಪರಮಾತ್ಮನ ವಿಷಯದಲ್ಲಿ ಮುಖ್ಯವೃತ್ತಿಯುಳ್ಳದ್ದೆಂದೂ ಇತರ ಪ್ರಾಜ್ಞರವಿಷಯದಲ್ಲಿ ಔಪಚಾರಿಕವಾದುದೆಂದೂಹೇಳಿ,ಭಕಾರ,ಗಕಾರ,ವಕಾರ ನಿರುಕ್ತಾರ್ಥವನ್ನು ಮೂರುಶ್ಲೋಕದಲ್ಲಿ ಹೇಳಿ,ಅನಂತರ ಪರಮಾತ್ಮನು ಷಾಡ್ಗುಣ್ಯ ಪರಿಪೂರ್ಣತೆಯಿಂದ ಕಲ್ಯಾಣಗುಣಕರನೆಂದೂ ಹೇಯಪ್ರತ್ಯನೀಕನೆಂದೂ "**ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯ ತೇಜಾಂಸ್ಯಶೇಷತಃ। ಭಗವಚ್ಛಬ್ದವಾಚ್ಯಾನಿ ವಿನಾಹೇಯೈರ್ಗುಣಾದಿಭಿಃ**" ಎಂಬ ಶ್ಲೋಕದಲ್ಲಿ ಉಪಪಾದಿಸುತ್ತಾರೆ. ಇತರರಿಗೆ ಪ್ರಯೋಗಿಸಿದಾಗ"**ಉತ್ಪತ್ತಿಂ ಪ್ರಳಯಂ ಚೈವ ಭೂತಾನಾ ಮಾಗತಿಂ ಗತಿಮ್ । ವೇತ್ತಿವಿದ್ಯಾಮವಿದ್ಯಾಂಚ ಸವಾಚ್ಯೋ ಭಗವಾನಿತಿ**" (ವಿ. ಪು. ೫. ೭೭-೭೮) ಯಾವ ಪ್ರಾಜ್ಞನು ಪರಮಾತ್ಮನ ಸೃಷ್ಟಿ ಸ್ಥಿತಿಲಯಾದಿ ವ್ಯಾಪಾರಗಳನ್ನೂ, ಕ್ಷೇತ್ರಜ್ಞರಿಗುಂಟಾಗುವ ಬಂಧಮೋಕ್ಷಗಳನ್ನೂ, ಮೋಕ್ಷಕ್ಕೆ ಸಾಧನವಾದ ಬ್ರಹ್ಮವಿದ್ಯೆಯನ್ನೂ, ಅದಕ್ಕೆ ಸಹಕಾರಿಯಾದ ನಿತ್ಯ ನೈಮಿತ್ತಿಕಾನುಷ್ಠಾನವನ್ನೂ ಸಹ ತಿಳಿದಿರುತ್ತಾನೋ ಅವನು ತುಂಬಾ ಪೂಜ್ಯನಾದುದರಿಂದ ಭಗವಚ್ಛಬ್ದವಾಚ್ಯನೆಂದು ಹೇಳಲ್ಪಟ್ಟಿರುತ್ತದೆ. ಇಂತಹ ಪ್ರಾಜ್ಞರಾದ ನಾರದ ಮಹರ್ಷಿಯನ್ನು ಆಶ್ರಯಿಸಿ ಮುಕ್ತನಾದನೆಂದು ಹೇಳಿರುವದರಿಂದ, ಇವರುಗಳಿಗೆ ಭಾಗವತ ಸಂಶ್ರಯಣರೂಪ ಉಪಾಯವು ಪ್ರಾಪ್ತವಾಗಿ, ಅವರುಗಳು ಉಪದೇಶಿಸಿದ ಮೂಲಮನ್ತ್ರ ಪ್ರಭಾವವೂ ದೊರೆತು, ಮೋಕ್ಷವು ಲಭಿಸಿತೆಂಬ ಭಾವವು. ಇಲ್ಲಿ ಪುಂಡರೀಕ ವೃತ್ತಾನ್ತವನ್ನು ಹೇಳಿರುವದು, ಎಂತಹ ಪಾಪಿಷ್ಠನಾಗಿದ್ದರೂ, ಈ ಭಾಗವತ ಸಂಶ್ರಯಣದೊಂದಿಗೆ ಮೂಲ ಮನ್ತ್ರಪ್ರಾಪ್ತಿಯಿಂದ ಪರಮ ಶ್ರೇಯಸ್ಸುಂಟೆಂಬುದು ಅದೇ ಪ್ರಕರಣದಲ್ಲೇ ಪಾಪಿಷ್ಠನಾದ ಕ್ಷತ್ರಬಂಧು ವೃತ್ತಾಂತಕ್ಕೂ ಉಪಲಕ್ಷಣವು.

ಹೀಗೆ ಶ್ರೀ ನಾರದರು ತಮ್ಮನ್ನು ಆಶ್ರಯಿಸಿದ ಸುಕೃತ ದುಷ್ಕೃತಿಗಳಿಬ್ಬರಿಗೂ ಈ ಮನ್ತ್ರವು ಉದ್ಧಾರಕವೆಂದು ಭಾವಿಸಿದುದು ನ್ಯಾಯವೋ ? ಎಂಬ ಶಙ್ಕೆ ಉಂಟಾದೀತೆಂದು ಭಾವಿಸಿ, ಸರ್ವಲೋಕ ಶರಣ್ಯನೇ ಈ ಮಾರ್ಗವನ್ನೇ ಅವಲಂಬಿಸಿ, ಶಿಷ್ಯೋಪಾದೇಯವಾಗಲೆಂದು ಪ್ರಕಟಿಸಿರುವ ಒಂದು ದೃಷ್ಟಾಂತವನ್ನು ಉದಾಹರಿಸುತ್ತಾರೆ—ಇಮನ್ತ್ರತ್ತೈ - ಈ ಮೂಲ ಮನ್ತ್ರವನ್ನು, ತಿರುಮಜ್ಗೈಯಾಳ್ವಾರ್ಕ್ಕು - ಚತುರ್ಥ ಜಾತೀಯರಾದ ತಿರುಮಜ್ಗೈಯಾಳ್ವಾ

**ಅಷ್ಟಾಕ್ಷರ ಮನ್ತ್ರಸ್ಯ ಪ್ರಣವ ಚತುರ್ಥೀ ರಾಹಿತ್ಯೇ ಸರ್ವಾಧಿಕಾರತ್ವಮ್**

**ಇದು ಪ್ರಣವಚತುರ್ಥಿಗಳ್ ಯೊಳಿನ್ದ ಪೋದುಸರ್ವಾಧಿಕಾರಮೆನ್ನುಮಿಡಮ್ ಶ್ರೀ ವರಾಹಪುರಾಣತ್ತಿಲ್ ಕೈಶಿಕದ್ವಾದಶಿ ಮಾಹಾತ್ಮ್ಯತ್ತಿಲೇ, "ನಮೋ ನಾರಾಯಣೇತ್ಯುಕ್ತ್ವಾ ಶ್ವಪಾಕಃ ಪುನರಾಗಮತ್" ಎಙ್ಗಿರವಚನತ್ತಾಲೇ**

ರಿಗೆ, **ತಾನೇ** - ಶ್ರೀ ನಾರದಾದಿ ಮಹಾ ಭಾಗವತರ ಅಪೇಕ್ಷೆಯಿಲ್ಲದೆ, **ತಾನೇ, ಉಪದೇಶಿತ್ತಾರ್** - ಉಪದೇಶಿಸಿದರು. ಶ್ರೀ ತಿರುಮಙ್ಗೈಯಾಳ್ವಾರವರ ವೃತ್ತಾಂತಕ್ಕೆ ದಾಸನು ಬರೆದಿರುವ ಗುರುಪರಂಪರಾಸಾರದ ೩೭-೩೯ನೆಯ ಪುಟಗಳನ್ನು ಪರಾಂಬರಿಸಿ.

**ಪ್ರಣವ ಚತುರ್ಥಿಗಳಿಲ್ಲದಿದ್ದರೆ ಮೂಲಮನ್ತ್ರದಲ್ಲಿ ಸರ್ವರಿಗೂ ಅಧಿಕಾರ ಉಂಟು.**

ನೀಲರೆಂಬ ಚತುರ್ಥರ ಪುತ್ರರಾದ ಈ ತಿರುಮಙ್ಗೈಯಾಳ್ವಾರಿಗೆ ಸರ್ವಲೋಕ ಶರಣ್ಯನೇ ಉಪದೇಶಿಸಿದನೆಂದು ಹೇಳಲ್ಪಟ್ಟಿತಲ್ಲಾ. ಹಾಗಾದರೆ ಈ ಮನ್ತ್ರವು ಶೂದ್ರಾದಿ ಸರ್ವಾಧಿಕಾರ ಉಳ್ಳದೋ ಎಂದರೆ ಶೂದ್ರಾದಿಗಳಿಗೂ ಉಪದೇಶಿಸಬಹುದೋ ? ಎಂಬ ಶಙ್ಕೆಗೆ ಸಮಾಧಾನವನ್ನು ಹೇಳುತ್ತಾರೆ.—**ಇದು** - ಈ ಮೂಲಮನ್ತ್ರವು, **ಪ್ರಣವ ಚತುರ್ಥಿಗಳೊಳಿನ್ದ ಪೋದು** - ಮೊದಲು ಅಕ್ಷರವಾದ ಓಂಕಾರವೂ, ಕೊನೆಯ ಪದವಾದ ನಾರಾಯಣಾಯ ಎಂಬಲ್ಲಿನ ಕೊನೆಯ ಚತುರ್ಥೀ ವಿಭಕ್ತಿಯೂ, ಇಲ್ಲದಿರುವ ಸಂದರ್ಭದಲ್ಲಿ, **ಸರ್ವಾಧಿಕಾರ ಮೆನ್ನುಮಿಡಂ** - **ತಾಂತ್ರಿಕ**ವಾಗಿ ಸರ್ವರಿಗೂ ಅಧಿಕಾರವುಂಟೆಂಬ ಸ್ಥಳದಲ್ಲಿ ಪ್ರಮಾಣಗಳು ಉಂಟೆಂದೂ, ಅವು ಯಾವುವೆಂದರೆ ತಿಳಿಸುತ್ತಾರೆ.—ಸ್ವಾಮಿ ದೇಶಿಕರವರು ತಾವು ಪ್ರಮಾಣೈಕ ಶರಣರೆಂದು ಹೇಳಿಕೊಂಡಿರುವದರಿಂದ ಪ್ರಮಾಣಗಳಿಲ್ಲದ ಅಭಿಪ್ರಾಯಗಳನ್ನು ಎಂದಿಗೂ ಉಪದೇಶಿಸುವದಿಲ್ಲವು; ಹಾಗೆಯೇ ಶ್ರೀ ಭಾಷ್ಯಕಾರರೂ ಯಾಮುನ ಮುನಿಗಳೂಸಹ; ಆದುದರಿಂದ ಅವರುಗಳ ಪದ್ಧತಿಯನ್ನೇ ಅವಲಂಬಿಸಿರುತ್ತಾರೆ—**ನಮೋನಾರಾಯಣೇತ್ಯುಕ್ತ್ವಾ**-ಪ್ರಣವ ಚತುರ್ಥಿಗಳಿಲ್ಲದೆ ಈ **ನಮೋನಾರಾಯಣ** ಎಂಬ ಆರು ಅಕ್ಷರಗಳನ್ನು ಹೇಳಿ, **ಶ್ವಪಾಕಃ** - ನಾಯಿಯ ಮಾಂಸವನ್ನು ಬೇಯಿಸಿ ತಿನ್ನುವ ಪಂಚಮನು, **ಪುನರಾಗಮತ್** – ಹಿಂತಿರುಗಿ ಬಂದನು ಎಂದರೆ ಅಧೋಗತಿಯಿಂದ ಮೇಲಕ್ಕೆ ಬಂದನು, **ಎಙ್ಗಿರ ವಚನತ್ತಾಲೇ** - ಎಂಬ ವಾಕ್ಯದಿಂದ, **ಕಾಟ್ಟಪಟ್ಟದು** - ಪ್ರದರ್ಶಿಸಲ್ಪಟ್ಟಿತು. ಶ್ವಪಾಕ ಮೊದಲುಗೊಂಡು ಸರ್ವರಿಗೂ ಈ ಮನ್ತ್ರೋಚ್ಚಾರಣೆಯಲ್ಲಿ ಅಧಿಕಾರ ಉಂಟೆಂಬುದಕ್ಕೆ ಪ್ರಮಾಣವುಂಟೆಂದು ಹೇಳಿದರು. ಶೂದ್ರಾದಿಗಳಿಗೆ ಪ್ರಣವ ಚತುರ್ಥಿ –

ಕಾಟ್ಟಪ್ಪಟ್ಟದು. ಇವ್ವರ್ಥಂ (೧) ನಾಮಂ ಶೊಲ್ಲಿ ನಮೋನಾರಾಯಣವೇ"

---

ಗಳಿಲ್ಲದೆ ಉಪದೇಶಿಸತಕ್ಕದ್ದೆಂದು ಏರ್ಪಟ್ಟಿತು. ಕೆಲವು ಆಳ್ವಾರುಗಳು ಬ್ರಾಹ್ಮಣರಲ್ಲದೆ ಇರುವವರಿಂದ ಅವರು ಹೇಗೆ ಈ ಮನ್ತ್ರವನ್ನು ಸ್ವೀಕರಿಸಿದರು? ಎಂದರೆ ಅವರುಗಳ ಪಾಶುರಗಳಲ್ಲೂ "ನಮೋನಾರಾಯಣಾ" ಎಂದು ತಾಂತ್ರಿಕವಾಗಿಯೇ ಪ್ರಯೋಗಿಸಿರುವದರಿಂದ ವರಾಹ ಪುರಾಣದ ಕೈಶಿಕದ್ವಾದಶಿ ಮಾಹಾತ್ಮ್ಯ ವಚನವೇ ಅವರುಗಳಿಗೂ ಉಪಾದೇಯವೆಂದು ಮುಂದಿನವಾಕ್ಯದಿಂದ ತಿಳಿಸುತ್ತಾರೆ.—

ಆ ಕೈಶಿಕ ವೃತ್ತಾಂತವೇನೆಂದರೆ—ಚರಕ ಕುಲದಲ್ಲಿ ಹುಟ್ಟಿದ ಸೋಮಶರ್ಮನೆಂಬ ಬ್ರಾಹ್ಮಣನು ಯಥಾಕ್ರಮವಾಗಿ ಯಾಗವನ್ನು ಮಾಡದಿರುವದರ ಫಲವಾಗಿ ಶ್ರೀಮದ್ರಾಮಾಯಣದಲ್ಲಿ "ಛಿದ್ರಂ ಹಿ ಮೃಗಯಂತೇತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ" (ಬಾ. ೧೨.೧೭) ಎಂಬಲ್ಲಿ ಹೇಳಿರುವಹಾಗೆ, ಬ್ರಹ್ಮರಕ್ಷಸ್ಸಾದನು. ಆಗ ಆತನಿದ್ದ ಸ್ಥಳಕ್ಕೆ ಪಂಚಮ ಜಾತಿಯವರಾದ ಕೈಶಿಕರೆಂಬ ಭಾಗವತೋತ್ತಮರು ಕಾರ್ತೀಕ ಶುದ್ಧ ಏಕಾದಶಿ ರಾತ್ರಿ ತಿರಕ್ಕುರುಂಗುಡಿ ಎಂಬ ಪುಣ್ಯಕ್ಷೇತ್ರದಲ್ಲಿರುವ ಸ್ವಾಮಿಯ ಸೇವೆಯನ್ನು ಮಾಡುವದಕ್ಕಾಗಿ ಹೋಗುತ್ತಿರುವ ಕಾಲದಲ್ಲಿ ಇವರನ್ನು ಕಂಡು ಆ ಬ್ರಹ್ಮರಕ್ಷಸ್ಸು ಭಕ್ಷಿಸುವದಕ್ಕಾಗಿ ಬರಲು; ಆಗ ಕೈಶಿಕರು ತಮ್ಮ ಇಷ್ಟವನ್ನು ತಿಳಿಯಪಡಿಸಿ, ಸ್ವಾಮಿಯನ್ನು ಗಾನದಿಂದ ಆನಂದಗೊಳಿಸಿ ಖಂಡಿತವಾಗಿಯೂ ಬರುವೆನು; ಆಗ ನೀನು ನನ್ನನ್ನು ಭಕ್ಷಿಸಬಹುದು ಎನ್ನಲು; ಇದಕ್ಕೆ ಬ್ರಹ್ಮರಕ್ಷಸ್ಸು ಒಪ್ಪಲಾಗಿ ಮನದಣಿಯ ಸ್ವಾಮಿಯನ್ನು ಗಾನದಿಂದ ಆನಂದಪಡಿಸಿ ಬಂದು ಬ್ರಹ್ಮರಕ್ಷಸ್ಸಿನ ಎದುರಿಗೆ ನಿಲ್ಲಲು; ಈ ಮಹಾ ಭಾಗವತರ ಸತ್ಯಕ್ಕೆ ಮೆಚ್ಚಿ ಆ ಬ್ರಹ್ಮರಕ್ಷಸ್ಸು, ನಿನ್ನ ವ್ರತದ ಫಲವನ್ನು ನನಗೆ ಕೊಡು, ನಿನ್ನನ್ನು ಬಿಟ್ಟುಬಿಡುತ್ತೇನೆಂದು ಹೇಳಿತು. ಈ ಭಾಗವತರು ಅದಕ್ಕೆ ಒಪ್ಪದೇ ಹೋಗಲು; ಆ ಬ್ರಹ್ಮರಕ್ಷಸ್ಸಿಗೆ ಪರಿಪಕ್ವಕಾಲವು ಈ ಭಾಗವತರ ಸಂಬಂಧದಿಂದ ಒದಗಿದುದರಿಂದ, ಆ ರಕ್ಷಸ್ಸು "ತ್ವಂ ವೈ ಗೀತ ಪ್ರಭಾವೇನ ನಿಸ್ತಾರಯಿತುಮರ್ಹಸಿ । ಏವಮುಕ್ತ್ವಾತು ಚಂಡಾಲಂ ರಾಕ್ಷಸ ಶ್ಶರಣಂ ಗತಃ" ಎಂಬಲ್ಲಿ ಹೇಳಿರುವಹಾಗೆ, ಆ ಭಾಗವತರನ್ನೂ ಶರಣು ಹೋಗಲಾಗಿ, ಅವರು ಆ ರಕ್ಷಸ್ಸಿಗೆ ಆ ವ್ರತ ಫಲವನ್ನು ಕೊಟ್ಟದುದರಿಂದ, ಆ ಬ್ರಹ್ಮರಕ್ಷಸ್ಸಿಗೆ ಪರಿಶುದ್ಧವಾದ ಬ್ರಾಹ್ಮಣ ಜನ್ಮವು ಪ್ರಾಪ್ತವಾಯಿತು ಎಂದು ಹೇಳಲ್ಪಟ್ಟಿರುತ್ತದೆ. ಆ ಕೈಶಿಕರಿಗೆ ಮಾಹಾತ್ಮ್ಯ ಏತರಿಂದವೆಂದರೆ ಮೂಲಮನ್ತ್ರದಿಂದವೆಂದು ಇಲ್ಲಿಹೇಳಲ್ಪಟ್ಟಿರುತ್ತದೆ.

ಇವ್ವರ್ಥಂ - ಈ ಅಭಿಪ್ರಾಯವು ಎಂದರೆ ಪ್ರಣವಚತುರ್ಥಿಗಳಿಲ್ಲದಿದ್ದರೆ ಶೂದ್ರಾದಿ ಸರ್ವರಿಗೂ ಉಪದೇಶಾರ್ಹವೆಂಬುದು, ತಿರುಮಂಗೈಯಾಳ್ವಾರವರ ಪಾಶು

---

(೧) ಪೆ. ೬. ೧೦. ೧.

ರದಲ್ಲೂ ಪೊಯ್'ಗೆ ಮುನಿ ಪಾಶುರಗಳಲ್ಲೂ ಸಿದ್ಧಂ - ಸಿದ್ಧವಾದುದು ಎಂದು ಹೇಳುತ್ತಾರೆ; ಆ ಪಾಶುರಗಳು ಯಾವುವೆಂದರೆ—

(೧) **ನಾಮಂ ಶೊಲ್ಲಿ ನಮೋ ನಾರಾಯಣನೇ** ಎಂಬುದು ಪಾಶುರದ ನಾಲ್ಕನೆಯ ಪಾದವು, ಎಂದರೆ ಪ್ರಣವ ಚತುರ್ಥಿಗಳಿಲ್ಲದಿದ್ದರೆ ಶೂದ್ರಾದಿ ಸರ್ವರಿಗೂ ಉಪದೇಶಾರ್ಹವೆಂಬುದು; ಇದು ಹಿಂದೆಯೇ ಉದಾಹರಿಸಲ್ಪಟ್ಟಿರುತ್ತದೆ, ೨೪೬೩-ಆನೆಯ ಪುಟಗಳನ್ನು ನೋಡಿ, ಪೂರ್ಣಪಾಶರವು —

**ಕಿಡನ್ದ ನಮ್ಬಿ ಕುಡನ್ದೈ ಮೇವಿಕ್ಕೇಳಲಾ ಯುಲಗೈ**
**ಯಿಡನ್ದ ನಮ್ಬಿ ಎಙ್ಗಳ ನಮ್ಬಿ ಎರಿಞಾರಣಳಿಯ**
**ಕಡನ್ದ ನಮ್ಬಿ ಕಡಿಯರಾಲಙ್ಗೈ ಉಲಗೈ ಈರಡಿಯಾಲ್**
**ನಡನ್ದ ನಮ್ಬಿ ನಾಮಂ ಶೊಲ್ಲಿಲ್ ನಮೋನಾರಾಯಣನೇ ॥ ೧ ॥**

ಇದರರ್ಥವು—**ಕುಡನ್ದೈ** - ತಿರುಕ್ಕುಡನ್ದೈಯಲ್ಲಿ, **ಮೇವಿಕ್ಕಿಡನ್ದ** - ಬಿಜಮಾಡಿಸಿ ಶಯಿನಿಸಿಕೊಂಡಿರುವ, **ನಮ್ಬಿ** - ಸ್ವಾಮಿಯು, **ಕೇಳಲ್ ಆಯ್** - ವರಾಹ ರೂಪಿಯಾಗಿ, **ಉಲಗೈಯಿಡನ್ದ ನಮ್ಬಿ** - ಭೂಮಿಯನ್ನು ಮೇಲಕ್ಕೆ ಎತ್ತಿದ ಸ್ವಾಮಿಯು, **ಎಙ್ಗಳ್ ನಂಬಿ** – ನಮ್ಮ ಕ್ಲೇಶಗಳನ್ನೆಲ್ಲಾ ಹೋಗಲಾಡಿಸಿ ನಮಗೆ ಅಭೀಷ್ಟಪ್ರದನಾದ ಸ್ವಾಮಿಯು, **ಎರಿಞಾರ್ ಅರಣ್ ಅಳಿಯ** – ಶತ್ರುಗಳ ಕೋಟೆಯು ನಾಶವಾಗುವಹಾಗೆ, **ಕಡಿಯರಾಲಙ್ಗೈ ಅಡನ್ದನಂಬಿ** ಕ್ರೂರರಾದ ರಾಕ್ಷಸರನ್ನು ನಾಶಮಾಡಿದ ಸ್ವಾಮಿಯಾದ ಶ್ರೀ ರಾಮಚಂದ್ರಪ್ರಭುವು, **ಉಲಗೈ ಈರಡಿಯಾಲ್ ನಡನ್ದನಂಬಿ** - ಲೋಕಗಳನ್ನೆಲ್ಲಾ ಎರಡು ಹೆಜ್ಜೆಯಿಂದ ಅಳೆದ ತ್ರಿವಿಕ್ರಮಾವತಾರಿಯಾದ ಸ್ವಾಮಿಯು, ಇಂತವನ, **ನಾಮಂ ಶೊಲ್ಲಿಲ್**-ದಿವ್ಯ ನಾಮೋಚ್ಚಾರಣೆಯನ್ನು ಮಾಡುವದಾದರೆ, **ನಮೋ ನಾರಾಯಣನೇ** - ನಮೋನಾರಾಯಣವೆಂಬ ಮೂಲಮಂತ್ರವೇ; ಅದು ನಮೋ ನಾರಾಯಣ ಎಂಬ ಮಂತ್ರ ಜಪವೇ ಎಂಬ ಭಾವವು. ಹೀಗೆ ತಿರುನರೆಯೂರಲ್ಲಿರುವ (ಸುಗಂಧನಗರಿ) ಸ್ವಾಮಿಯು ತಮಗೆ ಆಚಾರ್ಯರಾಗಿ ಮೂಲ ಮನ್ತ್ರೋಪದೇಶವನ್ನು ಮಾಡಿ, ಆ ಸ್ವಾಮಿಯೇ ಈಗ ತಿರುಕ್ಕುಡಂದೈಯಲ್ಲಿ ಮಲಗಿರುವದು ಏತಕ್ಕೆಂದರೆ ವರಾಹಾವತಾರಿಯಾಗಿ ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ಮೇಲಕ್ಕೆ ಎತ್ತಿದ ಶ್ರಮಪರಿಹಾರಕ್ಕಾಗಿಯೂ, ರಾಮಾವತಾರಿಯಾಗಿ ಅಸಂಖ್ಯಾಕರಾದ ಕ್ರೂರ ರಾಕ್ಷಸರನ್ನೆಲ್ಲಾ ಕೊಂದ ಶ್ರಮಪರಿಹಾರಕ್ಕಾಗಿಯೂ, ಹಾಗೆಯೇ ತ್ರಿವಿಕ್ರಮಾವತಾರಿಯಾಗಿ ಎರಡು ಹೆಜ್ಜೆಗಳಿಂದಲೇ ಎಲ್ಲಾ ಲೋಕಗಳನ್ನೂ ಅಳೆದ ಶ್ರಮ ಪರಿಹಾರಕ್ಕಾಗಿಯೂ ಏನಾದರೂ ಇಲ್ಲಿ ಮಲಗಿದ್ದಾರೋ ಎಂಬ ಹಾಗೆ ಸೇವೆಯನ್ನೀಯುವ, ಮತ್ತು ನಮ್ಮಂತಹ ಬಂಧನದಲ್ಲಿ ಸಿಕ್ಕಿ ನರಳುತ್ತಿರುವವರನ್ನು ಉದ್ಧಾರ ಮಾಡುವದಕ್ಕಾಗಿಯೂ ಮಲಗಿರುವ ಹಾಗೆ ಸೇವೆಯನ್ನೀಯುವ

**ಎನ್ರುವರ್, (೨) "ನ್ ಮಾಲೈಕೊಣ್ಡು ನಮೋ ನಾರಣಾ" ಎನ್ರುವರ್**

ಸ್ವಾಮಿಯ ದಿವ್ಯನಾಮಗಳನ್ನು ಹೇಳುವದು ನಮೋ ನಾರಾಯಣವೆಂಬ ಮೂಲ ಮನ್ತ್ರವೇ ಎಂಬುದು ತಾತ್ಪರ್ಯವು.

(೨) "ನ್ನಮಾಲೈ ಕೊಣ್ಡುನಮೋನಾರಣಾ ಎನ್ರುವರ್" - ಇವರ ಪೂರಾ ಪಾಶುರವು ಯಾವುದೆಂದರೆ—ಅಯಲ್ ನಿನ್ರವಲ್ ವಿನೈಯೈ ಯಂಜಿ ನೇನಂಜಿ। ಯ್ಯುನಿನ್ರಿರು ವಡಿಯೇ ಶೇರ್ವಾನ್ - ನಯನಿನ್ರ। ನನ್ಮಾ ಲೈಕೊಂಡು ನಮೋ ನಾರಾಯಣ ವೆನ್ನುವರ್ । ಶೊನ್ಮಾಲೆ ಕತ್ತಿರ್ೀ ತೊಳುದು। (೫೭) ಅರ್ಥವು ಅಯಲ್ ನಿನ್ರ - ಯಾವಾಗಲೂ ಬಿಟ್ಟ ಇಸ್ದುದರಿಂದ ಈಗಲೂ ಬಿಟ್ಟು ಹೋಗಲಾರನೆಂದು ಪಕ್ಕದಲ್ಲೇ ಇರುವ, ವಲ್ ವಿನೈಯೈ - ತ ಂಬಾ ಬಲಿಷ್ಠವಾದ ಪ ಪವನ್ನು ಕುರಿತು, ಅಂಜಿನೇನ್ - ಭಯ ಪಟ್ಟೆನು, ಅಂಜಿ – ಭಯಪಟ್ಟು, ಉಯ್ಯ - ಉಜ್ಜೀವಿಸುವದಕ್ಕಾಗಿ, ನೀ - ಕರುಣಾ ಸಾಗರರಾದ ನಿಮ್ಮ, ತಿರುವಡಿ - ಪಾದ ಕಮಲವನ್ನು, ಶೇರ್ವಾನ್ ಲ್ಲಿ ಹೊಂದುವದಕ್ಕಾಗಿ, ನಯವರ್ ನಿನ್ರ - ಸುಖವಾಗಿರುವ ಅಥವಾ ಶಾಸ್ತ್ರಗಳ- ಸ್ಥಾಪಿತವಾಗಿರುವ, ನಲ್ - ಶ್ರೇಷ್ಠವಾದ, ಮಾಲೈಕ್ಕೊಂಡು – ಮಾಲಾ ರೂಪವಾದ ಪಾಶುರವನ್ನು ಸ್ವೀಕರಿಸಿ, ತೊಳಿದು. ಸ್ತುತಿಯ ಮೂಲಕ ಆಶ್ರ ಯಿಸಿ, ನಮೋನಾರಾಯಣಾವೆನ್ನುವರ್-ನಮೋ ನಾರಾಯಣವೆಂಬ, ಶೊನ್ಮಾಲೈ ಮಾಲಾರೂಪವಾದ ವಾಕ್ಕನ್ನು, ಕತ್ತಿರ್ೀ-ಯಾವಾಗಲೂ ಘಟ್ಟಿಯಾಗಿ ಉಚ್ಚರಿ ಸಿದೆ. ಬಲಿಷ್ಠಗಳಾದ ಪಾಪಗಳ ದೆಶೆಯಿಂದ ಭಯಪಟ್ಟು, ಈ ಆತ್ಮಸಂರಕ್ಷ ಣೆಗೆ ನಮೋ ನಾರಾಯಣ ಎಂಬ ಮನ್ತ್ರೋಚ್ಚಾರಣೆಯೇ ಸರಿಯೆಂದು ತಿಳಿದು ಆ ಮನ್ತ್ರವನ್ನೇ ಉಚ್ಚರಿಸಿದೆನು ಎಂಬುದು ತಾತ್ಪರ್ಯವು; ಈ ಮನ್ತ್ರವೇ ಸತ್ತಾದಾಯಕ ವಾಗಿ ರಕ್ಷಿಸಿತು ಎಂಬ ಭಾವವು. ಶೊನ್ಮಾಲೈ ಎಂದು ಹೇಳಿರುವದು ಮಹತ್ತಾದ ಅರ್ಥತಾತ್ಪರ್ಯಗಳುಂಟಾಗುವ ಹಾಗೆ ಶಬ್ದಗಳು ಪೋಣಿಸಿರುವದರಿಂದಲಾಗಲಿ ಅಥವಾ ಮೂಲಮನ್ತ್ರದಲ್ಲಿ ಅಶೇಷವಾದ ಪರಶೇಷತ್ವ, ಅನನ್ಯಾರ್ಹ ಶೇಷತ್ವ ಗಳ ಬೋಧೆ ಇರುವದರಿಂದ ರಮಣೀಯತ್ವವನ್ನುದ್ದೇಶಿಸಿಯಾಗಲಿ ಮಾಗ್ರೂಪ ಮಾಲೆ ಶೊನ್ಮಾಲೈಎಂಬ ಪ್ರಯೋಗವು.

(೩) ಈ ಪೂರಾ ಪಾಶುರವು ಯಾವುದೆಂದರೆ—"ನಾವಾಯಿ ಉಣ್ಣೋ ನಮೋನಾರಣಾವೆನ್ರು ಓವಾದುರಕ್ಕು ಮುರೈಯುಂಡೇ – ಮೂವಾದ ಮಾಕ್ಕತಿಕ್ಕಟ್ಟಿಲ್ಲುಮ್ ವಗೈಯುಂಡೇ ಎನ್ನುವರ್ ಕೀಕ್ಕ ಕಿಕ್ಕಟ್ಟಿಲ್ಲುಮ್ ತಿರಮ್" - ಅರ್ಥವು— "ನಾರಾಯಣೇತಿ ಮನ್ತ್ರೋಸ್ತಿ ವಾಗಸ್ತಿ ವಶವ ರ್ತಿನೀ। ತಥಾಪಿ ನರಕೇ ಘೋರೇ ಪತನ್ತೀತಿ ಕಿಮದ್ಭುತಮ್" ನಾರಾಯ

(೨) ಪೆರಿಯ ತಿರುವಂದಾದಿ. ೫೭,

(೩) "ನಾವಾಯಿಲುಣ್ಡೇ ನಮೋ ನಾರಣಾವೆನ್ನೋ ವಾಕ್ಕುರೈಕ್ಕ ಮುರೈ ಯುಣ್ಡೇ" ಎನ್ರುಮ್, ಶೊಲ್ಲುಗಿರ ಪಾಶುರಙ್ಗಳಾಲುಮ್ ಸಿದ್ಧಮ್.

---

ಹೇತಿ ಎಂಬ ನಾಮೋಚ್ಚಾರಣೆ ಅಥವಾ ನಮೋ ನಾರಾಯಣಾಯ ಎಂಬ ರೂಪವಾದ ಮನ್ತ್ರವಿದೆ, ನಮಗೆ ಅಧೀನವಾಗಿ ವಾಕ್ಕು ಇದೆ. ಹೀಗೆ ಸುಲಭವಾಗಿ ಮನ್ತ್ರೋಚ್ಚಾರಣೆಯನ್ನು ಮಾಡುತ್ತಾ ಕ್ರಮೇಣ ಪರಮಾತ್ಮನನ್ನು ಹೊಂದಬಹುದು. ಹೀಗಿದ್ದರೂ, ಅನೇಕರು ಇಂತಹ ಸುಲಭೋಪಾಯವನ್ನವಲಂಬಿಸದೆ ಘೋರ ನರಕದಲ್ಲಿ ಬೀಳುತ್ತಾರೆಂಬುದು ಎಂತಹ ಆಶ್ಚರ್ಯವು, ಎಂಬೀ ಶ್ಲೋಕಾರ್ಥವನ್ನೇ ಈ ಪಾಶುರದಲ್ಲಿ ಉಪಪಾದಿಸಿರುತ್ತಾರೆ—ನಾ - ನಾಲಿಗೆಯು, ವಾಯಿಲುಂಡೇ - ಬಾಯಲ್ಲೇ ನಕ್ಕುವಶವಾಗಿರುತ್ತದೆ, ಓವಾದು - ಬಿಡದೇ, ನಮೋ ನಾರಾಯಣಾವೆನ್ರು - ನಮೋ ನಾರಾಯಣಾವೆಂದು, ಉರೈಕ್ಕುಮ್ - ಹೇಳುವದಕ್ಕೆ ಉರೈ - ತಿರುಮನ್ತ್ರವು, ಉಂಡೇ ಇರುತ್ತದೆ. ಮೂವಾದ - ಪುನರಾವರ್ತಿಯಿಲ್ಲದ, ಮಾ - ಶ್ರೇಷ್ಠವಾದ ಗತಿಕ್ಕಣ್ - ಅರ್ಚಿರಾದಿಗಳ ಮೂಲಕ ಶೆಲ್ಲುಮ್ - ದಿವ್ಯ ವೈಕುಂಠವನ್ನು ಕುರಿತು ಹೋಗಲು, ವಗೈ - ಉಪಾಯವು, ಉಂಡೇ - ಇರುತ್ತದೆ. ಹೀಗಿದ್ದರೂ ಕೂಡ, ಇಂತಹ ಸುಲಭ ಮಾರ್ಗವನ್ನು ತ್ಯಜಿಸಿ, ಒರುವರ್ - ಒಬ್ಬರು, ತೀಕ್ಕತಿಕ್ಕಣ್ - ದುಷ್ಟಮಾರ್ಗವಾದ ನರಕವನ್ನಾಗಲಿ, ಅಥವಾ ಪುನಃ ಬಂಧವನ್ನು ಕೊಡುವ ಧೂಮಾದಿಮಾರ್ಗವನ್ನಾಗಲಿ, ಶೆಲ್ಲುಮ್ - ಹೊಂದುವ, ತಿರುವ್ - ಪ್ರಕಾರವು, ಎನ್ - ಎಂತಾದ್ದು? ಎಂದರೆ ಏನು ಆಶ್ಚರ್ಯವು ಎಂಬ ಭಾವವು. ಸರ್ವೇಶ್ವರನು ತನ್ನನ್ನು ಹೊಂದಲು ಬಹು ಸುಲಭವಾದ ಸಾಧನಗಳನ್ನು ಬಹು ಕೃಪೆಯಿಂದ ಒದಗಿಸಿರುತ್ತಾನೆ; ಹೇಗೆಂದರೆ ವಾಗಿಂದ್ರಿಯವಾದ ನಾಲಿಗೆಯು ನಮ್ಮ ಬಾಯಲ್ಲಿ ನಮ್ಮ ವಶದಲ್ಲಿರುವ ಹಾಗೆ ಮಾಡಿದ್ದಾನೆ, ನಮೋನಾರಾಯಣವೆಂದು ಹೇಳಿದರೆ ಸಾಕು ಎಂದು ಸರ್ವೋತ್ಕೃಷ್ಟ ಮನ್ತ್ರವನ್ನು ಏರ್ಪಡಿಸಿರುತ್ತಾನೆ. ಈ ಮನ್ತ್ರೋಚ್ಚಾರಣೆಯ ಮಾಹಾತ್ಮ್ಯದಿಂದ ಅನನ್ಯಾರ್ಹಶೇಷತ್ವಜ್ಞಾನ ಉಂಟಾಗಿ ಪರಮಾತ್ಮನಲ್ಲೇ ತನ್ನ ಆತ್ಮವನ್ನು ಸಮರ್ಪಿಸುವ ಜ್ಞಾನವನ್ನು ಕೊಟ್ಟಿರುತ್ತಾನೆ. ಹೀಗಿದ್ದರೂ ಕೂಡ ಮುಂದಕ್ಕೆ ಎಂದಿಗೂ ದುಃಖಸಂಬಂಧವೇ ಇಲ್ಲದ ಇಂತಹ ಸುಲಭ ಮಾರ್ಗವನು ಬಿಟ್ಟು, ಜನರು ನಾನಾವಿಧ ಬಾಧೆಗಳನ್ನು ಅನುಭವಿಸಿ ನರಕಮಾರ್ಗವನ್ನಾಗಲಿ ಅಥವಾ ಪುನಃ ಬಂಧದಲ್ಲಿ ಸಿಕ್ಕಿ ನಾನಾವಿಧಕ್ಲೇಶಗಳನ್ನನುಭವಿಸುವ ಧೂಮಾದಿ ಮಾರ್ಗವನ್ನಾಗಲಿ ಹೊಂದುವ ಕ್ರಮವನ್ನು ಹುಡುಕುತ್ತಾರಲ್ಲಾ, ಇದೆಂತಹ ಆಶ್ಚರ್ಯವು. ಇಂತಹ ಅವಿವೇಕ ಉಂಟೋ ಎಂಬ ಭಾವವು. ಎನ್ರುಮ್ ಶೊಲ್ಲುಗಿರ - ಎಂದು ಹೇಳುವ ಪಾಶುರಙ್ಗಳಾಲುಮ್ - ಪಾಶುರಗಳಿಂದಲೂ ಸ್ಥಾಪಿತವು.

---

(೩) ಮುದ್ಗಿಲ್ ತಿರುವನ್ದಾದಿ. ೯೫.

## ಮೂಲಮನ್ತ್ರಸ್ಯ ಸರ್ವಾಧಿಕಾರತ್ವ ಮುಪಪಾದಯತಿ.

ಇದು ಬ್ರಾಹ್ಮಣಾದಿಗಳಿಕ್ಕು ಅಧೀತವಾನ ಕ್ರಮತ್ತಿಲೇ ಪ್ರಣವ ತ್ತೋಡೆ ಕೂಡ ಅಷ್ಟಾಕ್ಷರ ಮಾಯಿರುಕ್ಕುಮ್. (೧) "ವೈದಿಕಂ ತಾಂತ್ರಿಕಂ ಚೈವ ತಥಾವೈದಿಕ ತಾಂತ್ರಿಕಮ್ । ತ್ರಿವಿಧಂ ಕರ್ಮಸಂಪ್ರೋಕ್ತಂ ಪಾಂಚ

## ಮೂಲಮನ್ತ್ರಕ್ಕೆ ಸರ್ವಾಧಿಕಾರತ್ವವನ್ನುಪಪಾದಿಸುತ್ತಾರೆ.

ಹೀಗೆ ಪ್ರಣವ ಚತುರ್ಥಿಗಳಿಲ್ಲದೆ ಉಪದೇಶಿಸಿದರೆ ಆದು ಅಷ್ಟಾಕ್ಷರ ಮನ್ತ್ರವು ಹೇಗಾಯಿತು ? ಆಗ ಎಂಟು ಅಕ್ಷರಗಳು ಮನ್ತ್ರದಲ್ಲಿಲ್ಲವಲ್ಲಾ ಎಂದರೆ ಬ್ರಾಹ್ಮಣೇತರರ ವಿಷಯದಲ್ಲಿ ಹಾಗೆ ತಾನ್ತ್ರಿಕವಾಗಿ ಅಕ್ಷರ ಲೋಪವಿದ್ದರೂ ಆಗಬಹುದು ಎಂದು ಸಮಾಧಾನವನ್ನು ಹೇಳಿದರೆ, ಅಂತಹ ಉಪದೇಶವೂ ಶಾಸ್ತ್ರ ಸಮ್ಮತವು ಎಂಬುದಕ್ಕೇನಾದರೂ ಪ್ರಮಾಣ ಉಂಟೋ ಎಂದರೆ ಉಂಟು ಎಂದು ಪ್ರಮಾಣವನ್ನು ಉದಾಹರಿಸುತ್ತಾರೆ. ಎಂಟು ಅಕ್ಷರದ ಅರ್ಥಗಳೂ ಅಂತಹ ತಾಂತ್ರಿಕ ಮನ್ತ್ರದಲ್ಲುಂಟೋ ? ಫಲವೇನು ಬ್ರಾಹ್ಮಣ ಬ್ರಾಹ್ಮಣೇತರರಿಗೂ ಸಮವೇ ? ಇಲ್ಲವೇ ವ್ಯತ್ಯಾಸವೇ ? ಇತ್ಯಾದಿ ಶಙ್ಕೆಗಳಿಗೆಲ್ಲಾ ಮುಂದಿನ ನಾರದೀಯಪ್ರಮಾಣಗಳ ಮೂಲಕ ಸಮಾಧಾನವನ್ನು ಹೇಳುತ್ತಾರೆ ನಾಲ್ಕು ವರ್ಣದವರಿಗೂ ಉಪದೇಶಕ್ರಮದಲ್ಲಿರುವ ಇವರ ವ್ಯತ್ಯಾಸವನ್ನು ವ್ಯಕ್ತಪಡಿಸುತ್ತಾರೆ. ಇದು - ಈ ಅಷ್ಟಾಕ್ಷರಮನ್ತ್ರವು. ಬ್ರಾಹ್ಮಣಾದಿಗಳುಕ್ಕು - ಬ್ರಾಹ್ಮಣರೇ ಮೊದಲಾದವರುಗಳಿಗೆ, ಇಲ್ಲಿ ಆದಿ ಪದದಿಂದ ಬೋಧಿತಾರ್ಥವನ್ನು ಪಂಚ ವ್ಯಾಖ್ಯಾತೃಗಳೂ ಹೇಳಲಿಲ್ಲವು, ಬಹುಶಃ ಬ್ರಾಹ್ಮಣಪ್ರಭೇದಗಳೆಲ್ಲಾ ಆದಿ ಶಬ್ದದಿಂದ ಸಙ್ಗ್ರಹಿಸಲ್ಪಟ್ಟುದಾಗಿ ತೋರುತ್ತದೆ, ಅಧೀತವಾನಕ್ರಮತ್ತಿಲೇ - "ಓನ್ನಮೋ ನಾರಾಯಣಾಯೇತಿ ಮನ್ತ್ರೋಪಾಸಕಃ" ಎಂದು ನಾರಾಯಣೋಪನಿಷತ್ತು ಉಪದೇಶಿಸಿರುವ ಕ್ರಮದಲ್ಲಿ ಪ್ರಣವತ್ತೋಡೆ ಕೂಡ ಅಷ್ಟಾಕ್ಷರ ಮಾಯಿರುಕ್ಕುಮ್ - ಪ್ರಣವದೊಂದಿಗೆ ಸೇರಿ, ಇದರಿಂದ ಚತುರ್ಥಿಯಿಂದಲೂ ಸೇರಿ ಎಂದು ಹೇಳಿದಂತಾಯಿತು, ಎಂಟು ಅಕ್ಷರಗಳುಳ್ಳದ್ದಾಗಿರುತ್ತದೆ. ಹೀಗೆ ಎಂಟು ಅಕ್ಷರಗಳಿದ್ದರೆ ವೈದಿಕ ಕ್ರಮವೆಂದು ಏರ್ಪಡುತ್ತದೆ. ಕ್ಷತ್ರಿಯ ವೈಶ್ಯ ಶೂದ್ರಾದಿಗಳಿಗೆ ಉಪದೇಶ ಕ್ರಮ ಹೇಗೆ ಎಂದು ಮುಂದೆ ಪ್ರಮಾಣದೊಂದಿಗೆ ತಿಳಿಸುತ್ತಾರೆ. ೧—"ವೈದಿಕಂ- ವೈದಿಕವೆಂದೂ, ತಾನ್ತ್ರಿಕಂಚೈವ-ತಾಂತ್ರಿಕವೆಂದೂ,ವೈದಿಕತಾಂತ್ರಿಕಮ್-ವೈದಿಕ ತಾಂತ್ರಿಕವೆಂದೂ,ಪಾಂಚರಾತ್ರಾಮೃತಾರ್ಣವೇ-ಪಾಂಚರಾತ್ರ ಶಾಸ್ತ್ರವು ತುಂಬಾ ಅಮೋಘವಾದ ವಿಸ್ತಾರವಾದ,ಭಗವಚ್ಛಾಸ್ತ್ರವಾದುದರಿಂದ,ಅಮೃತಾರ್ಣವವೆಂದರೆ ಅಮೃತರೂಪ ಸಮುದ್ರದಲ್ಲಿ, ಅಥವಾ ಕ್ಷೀರಸಮುದ್ರದಲ್ಲಿ ತ್ರಿವಿಧಂ ಕರ್ಮಸಂಪ್ರೋ

(೧) ನಾರದೀಯಂ.

ರಾತ್ರಾನ್ಯೃತಾರ್ಣವೇ । ವೈದಿಕಂ ಬ್ರಾಹ್ಮಣಾನಾಂತು ರಾಜ್ಞಾಂ ವೈದಿಕ ತಾಂತ್ರಿಕಮ್ । ತಾಂತ್ರಿಕಂ ವೈಶ್ಯಶೂದ್ರಾಣಾಂ ಸರ್ವೇಷಾಂ ತಾಂತ್ರಿಕಂತು ವಾ । ಅಷ್ಟಾಕ್ಷರಶ್ಚ ಯೋ ಮನ್ತ್ರೋ ದ್ವಾದಶಾಕ್ಷರ ಏವಚ । ಷಡಕ್ಷರಶ್ಚ ಯೋ ಮನ್ತ್ರೋ ವಿಷ್ಣೋರಮಿತತೇಜಸಃ। ಏತೇ ಮನ್ತ್ರಾಃಪ್ರಧಾನಾಸ್ತು ವೈದಿಕಾಃ ಪ್ರಣವೈರ್ಯುತಾಃ। ಪ್ರಣವೇನ ವಿಹೀನಾಸ್ತು ತಾಂತ್ರಿಕಾ ಏವ

---

ಕೈತಮ್-ಈ ಅಷ್ಟಾಕ್ಷರಮನ್ತ್ರಜಪವೂ ಹಾಗೆಯೇ ಅವರವರಿಗೆ ವಿಧಿಸಲ್ಪಟ್ಟ ಕರ್ಮವೂ ಸಹ ಹೀಗೆ ಮೂರುವಿಧವೆಂದು ಹೇಳಲ್ಪಟ್ಟಿರುತ್ತದೆ. ವೈದಿಕರೂಪದಲ್ಲೂ ತಾಂತ್ರಿಕರೂಪದಲ್ಲೂ ವೈದಿಕ ತಾಂತ್ರಿಕರೂಪದಲ್ಲೂ ನಾಲ್ಕು ವರ್ಣದಲ್ಲಿ ಯಾರಿಗೆ ಉಪದೇಶಿಸತಕ್ಕದ್ದೆಂದರೆ ಮುಂದೆ ಹೇಳಲ್ಪಡುತ್ತದೆ. ಬ್ರಾಹ್ಮಣಾನಾಂತು - ಬ್ರಾಹ್ಮಣರಿಗಾದರೋ,ತು ಶಬ್ದವು ಮಿಕ್ಕ ಇತರ ವರ್ಣದವರನ್ನು ವ್ಯಾವರ್ತಿಸಿರುತ್ತದೆ,ವೈದಿಕರೂಪದಲ್ಲೂ, ರಾಜ್ಞಾಂ-ಕ್ಷತ್ರಿಯರಿಗೆ, ವೈದಿಕ ತಾಂತ್ರಿಕಂ-ವೈದಿಕತಾಂತ್ರಿಕರೂಪದಲ್ಲೂ, ವೈಶ್ಯ ಶೂದ್ರಾಣಾಂ-ವೈಶ್ಯ ಶೂದ್ರರಿಗೆ ತಾಂತ್ರಿಕವಾಗಿಯೂ, ಸರ್ವೇಷಾಂ - ವೈದಿಕತ್ವ ಅರ್ಹತೆ ಯಿಲ್ಲದ ಮಿಕ್ಕ ಎಲ್ಲರಿಗೂತಾಂತ್ರಿಕಂತುವಾ - ತಾಂತ್ರಿಕವಾಗಿಯೇಯಾಗಲಿ,ಹೀಗೆ ಎರಡೇ ವಿಧವಾಗಿ, ಎಂಬದಾಗಿ ಪಾಂಚರಾತ್ರಾ ನ್ಯೃತಾರ್ಣವೇ ಸಂಪ್ರೋಕ್ತಂ ಎಂದು ಅನ್ವಯವು. ಮುಂದಿನ ವಾಕ್ಯದಿಂದ ಮುಖ್ಯವಾದ ವ್ಯಾಪಕ ಮಂತ್ರಗಳು ಯಾವುವೆಂದೂ ವೈದಿಕ, ತಾಂತ್ರಿಕ ಶಬ್ದಾರ್ಥಗಳೇನೆಂಬುದನ್ನು ತಿಳಿಸುತ್ತಾರೆ.—ಅಷ್ಟಾಕ್ಷರ ವೆಂಬ ಯಾವ ಮಂತ್ರವುಂಟೋ, ಮತ್ತು ದ್ವಾದಶಾಕ್ಷರ ವೆಂಬ ವಾಸುದೇವ ಮನ್ತ್ರವುಂಟೋ, ಮತ್ತು ಅಮಿತ ತೇಜಸಃ - ನಿರವಧಿಕವಾದ ತೇಜಸ್ಸನ್ನು ಹೊಂದಿರುವ, ವಿಷ್ಣೋ ವಿನ, ಯೋ ಷಡಕ್ಷರಶ್ಚ ಮನ್ತ್ರಃ - ಯಾವ ವಿಷ್ಣುವಿನ ಆರು ಅಕ್ಷರಗಳಿರುವ ಮನ್ತ್ರವೋ ಏತೇ ಮನ್ತ್ರಾಃ - ಹೀಗೆ ಈ ಮೂರು ಮನ್ತ್ರಗಳೂ, ಪ್ರಧಾನಾಃ - ಮುಖ್ಯವಾದವುಗಳ, ಆದುದರಿಂದ ಇವು ವ್ಯಾಪಕ ಮಂತ್ರಗಳೆಂದು ಹೇಳಲ್ಪಡುವುವು. ಅವು ಪ್ರಣವೈರ್ಯುತಾಃ - ಓಂ ಎಂಬ ಪ್ರಣವದೊಂದಿಗೆ ಸೇರಿದ್ದರೆ ವೈದಿಕಾಃ-ವೈದಿಕಗಳೆಂದು ಹೇಳಲ್ಪಡುವುವು. ನಮೋ ಭಗವತೇ ವಾಸುದೇವಾಯ ಎಂಬುದಕ್ಕೆ ಪ್ರಣವ ಸೇರಿಸಿದರೆ ವೈದಿಕರೂಪವೆನಿಸುತ್ತದೆ, ಹಾಗೆಯೇ ನಮೋವಿಷ್ಣವೇ ಎಂಬುದಕ್ಕೂ, ನಮೋ ನಾರಾಯಣಾಯ ಎಂಬುದಕ್ಕೂ ಪ್ರಣವ ಸೇರಿಸಿದರೆ ವೈದಿಕ ಮನ್ತ್ರವೆನಿಸುತ್ತದೆ. ಹೀಗೆ ಪ್ರಣವವಿಲ್ಲದಿದ್ದರೆ ತಾನ್ತ್ರಿಕವೆಂದು ಹೇಳಲ್ಪಡುತ್ತದೆ. ಪ್ರಣವೇನ ವಿಹೀನಾಸ್ತು-ಈ ಮೂರು ಮನ್ತ್ರಗಳನ್ನೂ ಪ್ರಣವವಿಲ್ಲದೆ ಉಚ್ಚರಿಸಿದರೆ, ತಾಂತ್ರಿಕಾ ಏವಕೀರ್ತಿತಾಃ - ತಾಂತ್ರಿಕಗಳೆಂದು ಹೇಳಿಸಿಕೊಳ್ಳುತ್ತವೆ, ಇಲ್ಲಿ ಪ್ರಣವರಾಹಿತ್ಯ ಮಾತ್ರವೇ ತಾಂತ್ರಿಕ ಪ್ರಕ್ರಿಯೆಗೆ ಹೇಳಲ್ಪಟ್ಟಿತೇ ವಿನಾ ಚತುರ್ಥೀಯ ರಾಹಿತ್ಯವು ಹೇಳಲ್ಪಡಲಿಲ್ಲವು. ಆದು

ಕೀರ್ತಿತಾಃ । ನಸ್ವರಃ ಪ್ರಣವೋಽಙ್ಗಾನಿ ನಾಪ್ಯನ್ಯ ವಿಧಯಸ್ತಥಾ । ಸ್ತ್ರೀಣಾಂತು ಶೂದ್ರಜಾತೀನಾಂ ಮಂತ್ರಮಾತ್ರೋಕ್ತಿ ರಿಷ್ಯತೇ । " ಎಙ್ಗರಪಡಿಯೇ ಪ್ರಣವ ಮೊಳಿನ್ದಪೋದು, (೨) "ತತ್ರೋತ್ತರಾಯಣಸ್ಯಾದಿರ್ಬಿಂದುಮಾನ್ವಿಷ್ಣು ರಂ ತತಃ । ಬೀಜ ಮಷ್ಟಾಕ್ಷರಸ್ಯ ಸ್ಯಾತ್ತೇನಾಷ್ಟಾಕ್ಷರತಾ

ದರಿಂದ ತಾಂತ್ರಿಕವಾಗಲು ಚತುರ್ಥಿಯೂ ಇಲ್ಲದಿರಬೇಕೆಂಬ ನಿಯಮವಿಲ್ಲವೆಂದು ತೋರಿಬರುತ್ತದೆ. ಆದರೆ ಹಿಂದೆ ಪ್ರಣವ ಚತುರ್ಥಿಗಳೊಳಿನ್ದ ಪೋದು ಸರ್ವಾಧಿಕಾರತ್ವವುಳ್ಳದ್ದಾಗುತ್ತದೆಂದು ಹೇಳಿ, "ನಮೋನಾರಾಯಣೇತ್ಯುಕ್ತ್ವಾ" ಎಂಬ ವರಾಹ ಪುರಾಣವಾಕ್ಯದ ಉದಾಹರಣೆಯು ಹೇಗೆ ಸಮಂಜಸವು? ಎಂದರೆ ಪ್ರಣವ ಕೂಡದೆಂಬುದು ನಿರ್ವಿವಾದವಿಷಯವು. ಚತುರ್ಥಿ ಕೂಡದೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವು ಎಂದು ಇಟ್ಟುಕೊಳ್ಳತಕ್ಕದ್ದು, ಪ್ರಣವ ವಿಲ್ಲದೆ ಚತುರ್ಥಿ ಇದ್ದರೂ ವೈದಿಕ ತಾಂತ್ರಿಕವೆಂದೇ ಎಣಿಸಬಹುದೆಂಬ ಭಾವವು ತೋರಿಬರುತ್ತದೆ. ಆದರ ಸರ್ವಾಧಿಕಾರ ವುಳ್ಳ ತಿರುಪ್ಪಲ್ಲಾಂಡಿನಲ್ಲಿ "ನಮೋನಾರಾಯಣಾಯವೆನ್ರು" ಎಂಬ ಪ್ರಯೋಗವನ್ನು ಕಾಣಬಹುದು. ತಾಂತ್ರಿಕವಾದಾಗ ಅಙ್ಗನ್ಯಾಸ ಕರನ್ಯಾಸಾದಿಗಳೂ ಇಲ್ಲವೆಂದು ಹೇಳುತ್ತಾರೆ. ನಸ್ವರಃ-ಆಗ ಉದಾತ್ತಾದಿ ಸ್ವರವೂ ಇಲ್ಲವು, ಪ್ರಣವವೂ ಇಲ್ಲವು, ಅಙ್ಗಾನಿ-ಹೃದಯಾದಿ ಅಙ್ಗನ್ಯಾಸಾದಿಗಳೂ ಇಲ್ಲವು, ತಥಾ - ಹಾಗೆಯೇ ನಾಪ್ಯನ್ಯವಿಧಯಃ - ಮಿಕ್ಕ ಇನ್ನು ಯಾವ ಶಾಸ್ತ್ರವಿಧಿಗಳೂ ಇಲ್ಲವು, ಇದರಿಂದ ಸಙ್ಕಲ್ಪಾದಿಗಳೂ ಸಂಧ್ಯಾಕಾಲಗಳಲ್ಲಿ ಜಪವೂ, ಇವು ಯಾವುವೂ ಇಲ್ಲವೆಂದು ಹೇಳಲ್ಪಟ್ಟವು; ಸ್ತ್ರೀಣಾಂ ಶೂದ್ರಜಾತೀನಾಂತು - ಸ್ತ್ರೀಯರಿಗೂ ಶೂದ್ರಜಾತೀಯರಿಗಾದರೋ, ಮನ್ತ್ರಮಾತ್ರೋಕ್ತಿ ರಿಷ್ಯತೇ - ಮೇಲೆ ಹೇಳಿದ ಮೂರು ಮಂತ್ರಗಳು ಮಾತ್ರ ಎಂದರೆ ಪ್ರಣವವಿಲ್ಲದೆ ಎಂಬ ಭಾವವು, ಹೀಗೆ ಮನ್ತ್ರಮಾತ್ರವೇ, ಇಷ್ಯತೇ - ಅಪೇಕ್ಷಿಸಲ್ಪಟ್ಟಿರುತ್ತದೆ." ಎಙ್ಗರಪಡಿಯೇ - ಎಂದು ಹೇಳಿರುವ ಹಾಗೆ, ಪ್ರಣವ ಒಳಿನ್ದಪೋದು – ಓಂ ಎಂಬ ಪ್ರಣವ ವಿಲ್ಲದಿರುವಾಗ, ಮುಂದೆ ಪ್ರಮಾಣವನ್ನು ಉದಾಹರಿಸಿ, ಆಗಲೂ ಎಂಟಕ್ಷರದ ಅಭಿಪ್ರಾಯವು ಕೂಡತ್ತದೆಂದು ಹೇಳುತ್ತಾರೆ.—ತತ್ರ-ಆ ಮೂಲಮನ್ತ್ರದಲ್ಲಿ. ಉತ್ತರಾಯಣಸ್ಯ-ನಾರಾಯಣ ಶಬ್ದದ ಉತ್ತರ ಭಾಗದಲ್ಲಿರುವ ಅಯನ-ಶಬ್ದದ ಅಥವಾ ಕೊನೆಯಲ್ಲಿರುವ ಅಯನ ಶಬ್ದದ, ಆದಿಃ - ಮೊದಲಿನ ಅಕ್ಷರವು, ವಿಷ್ಣುಃ - ವಿಷ್ಣು ವಾಚಕವಾಗಿ, ಬಿಂದುಮಾನ್ - ಅನುಸ್ವಾರದಿಂದ ಕೂಡಿದುದಾಗಿ, ತತಃ - ಅನಂತರದಲ್ಲಿ, ಅಂ ಎಂಬುದಾಗಿ, ಅಷ್ಟಾಕ್ಷರಸ್ಯ – ಮೂಲ ಮನ್ತ್ರಕ್ಕೆ, ಬೀಜಂ - ಬೀಜಾಕ್ಷರವೆಂದೆನಿಸಿ, ತೇನ - ಅದರಿಂದ ಸೇರಿ, ಅಷ್ಟಾಕ್ಷರತಾ ಭವೇತ್ – ಪ್ರಣವವಿಲ್ಲದಿ

(೨) ನಾರದೀಯ ೧, ೫, ೭.

**ಭವೇತ್॥"** ಎಙ್ಗರಪ್ರಕ್ರಿಯೈಯಾಲೇ ಎಟ್ಟೆಳುತ್ತುಮ್ ಅನುಸಂಧೇಯ ಮಾಗ ವಿಧಿಕ್ಕಪಟ್ಟದು. ಪ್ರಣವ ಮೊಳಿನ್ದಾಲುಮ್, ಅದು ಕೂಡಿನಾಳುಳ್ಳ ಫಲಮ್ ಇನ್ವಧಿಕಾರಿಗಳುಕ್ಕುಣ್ಡೆನ್ರುಮಿಡನ್ (೩) "ಕಿಂ ತತ್ರ ಬಹುಭಿ

---

ದ್ದರೂ ಎಂಟು ಅಕ್ಷರ ವುಳ್ಳ ಮನ್ತ್ರವೆಂದೇ ಆಗುತ್ತದೆ. ಇಲ್ಲಿ ಉತ್ತರವಾದ ಅಯನ ಶಬ್ದವಿರುವದರಿಂದ, ಪೂರ್ವವಾದ ಅಯನವು ಯಾವುದು ಎಂಬ ಶಙ್ಕಾ ಉತ್ಪನ್ನ ವಾಗಬಹುದು; ತನ್ನಿವಾರಣಾರ್ಥವಾಗಿ ಸಾರದೀಪಿಕೆಯವರೇ ಮೊದಲಾದವರೆಲ್ಲಾ ಅರ್ಥಮಾಡಿರುವದು ಹೇಗೆ ಎಂದರೆ, ನಾರಾಯಣ ಪದದ ಉತ್ತರ ಶಬ್ದವಾದ ಅಯನವೆಂದಾಗಲಿ, ಅಥವಾ ಮನ್ತ್ರದಲ್ಲಿ ಉತ್ತರಭಾಗದಲ್ಲಿರುವ ಅಯನ ಶಬ್ದ ವೆಂದಾಗಲಿ ಅರ್ಥಮಾಡಬಹುದು. ಈ ಶ್ಲೋಕದಲ್ಲಿ ಅಂತತಃ ಎಂಬುದನ್ನು ಒಂದೇ ಪದವಾದರೆ ಅಕಾರವು ಅಂತ್ಯದಲ್ಲಿ ಅನುಸ್ವಾರವನ್ನು ಹೊಂದಿದುದಾಗಿ ಎಂಬರ್ಥವು ಪ್ರಣವವು ಇಲ್ಲದಿದ್ದರೆ ಏಳು ಅಕ್ಷರಗಳಾದವು, ಆಗ ಅಷ್ಟಾ ಕ್ಷರವೆಂಬ ವ್ಯವಹಾರವು ಹೇಗೆ ಕೂಡುತ್ತದೆ ? ವಿಷ್ಣುವಾಚಕವಾದ ಅಕಾರವೇ ಆಗ ಇಲ್ಲದೇ ಹೋಗುತ್ತದಲ್ಲಾ? ಎಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ —**ನಾರಾಯಣ** ಶಬ್ದದಲ್ಲಿ ನಾರ ಅಯನ ಎಂಬ ಎರಡು ಪದಗಳುಂಟು, ಅದರಲ್ಲಿ ಉತ್ತರವಾದ ಅಯನ ಶಬ್ದದ ಮೊದಲಕ್ಷರವು ಅಕಾರವಾದುದರಿಂದ ವಿಷ್ಣುವಾಚಕಾಕ್ಷರವೂ ಅದರಲ್ಲೇ ಇರುತ್ತದೆ, ಈ ಅಕಾರಕ್ಕೆ ಅನುಸ್ವಾರ ಸೇರಿದರೆ ಅಮ್ ಎಂದಾಗುತ್ತದೆ. ಈ ಮೂಲಮನ್ತ್ರದ ನ್ಯಾಸಾದಿ ಪ್ರಕ್ರಿಯೆಯಲ್ಲಿ ಅಂಬೀಜಮ್, ಆಯ ಶಕ್ತಿಃ, ಮಮ್ ಕೀಲಕಮ್ ಹೀಗೆಲ್ಲಾ ಹೇಳಿರುವದರಿಂದ ಅಂ ಎಂಬುದು ಬೀಜಾಕ್ಷರವೆಂದು ಹೇಳಿಸಿಕೊಳ್ಳುತ್ತದೆ, ಹೀಗೆ **ತೇನ** - ಆ ಅಂ ಎಂಬ ಬೀಜಾಕ್ಷರದಿಂದ, **ಅಷ್ಟಾಕ್ಷರತಾ ಭವೇತ್** - ಎಂಟು ಅಕ್ಷರಗಳುಳ್ಳ ಭಾವವು ಉಂಟಾಗುತ್ತದೆ" **ಎಙ್ಗರಪ್ರಕ್ರಿಯೈಯಾಲೇ** -ಎಂದು ಹೇಳಿರುವ ಮೇರೆಗೆ, **ಎಟ್ಟೆಳಿತ್ತುಮ್** - ಎಂಟು ಅಕ್ಷರವೂ ಸಹ, **ಅನುಸಂಧೇ ಯಮಾಗ ವಿಧಿಕ್ಕಪಟ್ಟದು** - ಅನುಸಂಧಾನ ಮಾಡಬೇಕೆಂಬದಾಗಿ ವಿಧಿಸಲ್ಪ ಟ್ಟಿರುತ್ತದೆ. ಆಗಲಿ, ಎಂಟು ಅಕ್ಷರಗಳೂ, ಪ್ರಣವ ವಿಲ್ಲದ ದಶೆಯಲ್ಲಿಯೂ ಅಡಗಿವೆ ಎಂದೇನೋ ಅನುಸಂಧಾನಮಾಡತಕ್ಕದ್ದೆಂಬ ಭಾವವನ್ನು ಅಙ್ಗೀಕರಿ ಸೋಣ ; ಆದರೆ ವೈದಿಕ ಮಂತ್ರೋಕ್ತಿಗೆ ಏನು ಫಲವೋ, ಆ ಫಲವೇ ಅಥವಾ ಭಿನ್ನಫಲವೇ? ಎಂದರೆ ಫಲದಲ್ಲೇನೂ ವ್ಯತ್ಯಾಸವಿಲ್ಲವೆಂದು ತಿಳಿಸುತ್ತಾರೆ. **ಪ್ರಣ ವ ಮೊಳಿನ್ದಾಲುಮ್** - ತಾಂತ್ರಿಕ ಪ್ರಯೋಗದಲ್ಲಿ ಪ್ರಣವವು ಇಲ್ಲದಿದ್ದರೂ, **ಫಲಮ್** - ಮೂಲಮನ್ತ್ರದಿಂದ ಪ್ರಾಪ್ತವಾಗುವ ಫಲವು, ಎಂದರೆ ಭಗವದನು ಗ್ರಹ ಸಂಪಾದಕ ಫಲವು, **ಇವ್ವಧಿಕಾರಿಗಳುಕ್ಕುಮ್** - ವೈದಿಕವಲ್ಲದೆ ತಾಂತ್ರಿಕ ಮನ್ತ್ರಕ್ಕೆ ಅಧಿಕಾರಿಗಳಾದವರಿಗೂ, **ಉಣ್ಡೆನ್ರುಮಿಡಮ್** - ಉಂಟೆಂಬ ಸಂದ

ರ್ಮನ್ತ್ರೈಃ ಕಿಂ ತತ್ರ ಬಹುಭಿರ್ವ್ರತೈಃ। ನಮೋನಾರಾಯಣಾಯೇತಿ ಮನ್ತ್ರ
ಸ್ಸರ್ವಾರ್ಥಸಾಧಕಃ" ಇತ್ಯಾದಿಗಳಾಲೇ ಸಿದ್ಧನ್.

---

ರ್ಥದಲ್ಲಿ ನಾರದೀಯ ಕಲ್ಪಪ್ರಮಾಣದಿಂದ ಸಿದ್ಧವೆಂದು ಪ್ರಮಾಣವನ್ನು ಉದಾಹ
ರಿಸುತ್ತಾರೆ.—(೩) ತತ್ರ - ಕರುಣಾಸಾಗರನ ಅನುಗ್ರಹವನ್ನು ಹೊಂದುವದರಲ್ಲಿ,
ಬಹುಭಿರ್ಮನ್ತ್ರೈಃ - ಅನೇಕ ಇತರ ಮನ್ತ್ರಗಳಿಂದಲೂ, ಕಿಂ-ಏನು ಪ್ರಯೋಜ
ನವು? ಬಹುಭಿರ್ವ್ರತೈಃ - ಅನೇಕ ವ್ರತಗಳಿಂದಲೂ, ಕಿಂ - ಏನು ಪ್ರಯೋಜ
ನವು? ಹಾಗಾದರೆ ಸರ್ವೋತ್ಕೃಷ್ಟ ಸಾಧನವು ಯಾವುದು ಎಂದರೆ,"ನಮೋನಾರಾ
ಯಣಾಯ" ಇತಿ - ಎಂಬ, ಮನ್ತ್ರವು, ಸರ್ವಾರ್ಥ ಸಾಧಕಃ - ಸಮಸ್ತ ಪುರು
ಷಾರ್ಥವನ್ನು ಪರಮಾತ್ಮನಿಂದ ಸಾಧಿಸಿಕೊಡುವಂತಾದ್ದು," ಇತ್ಯಾದಿಗಳಾಲೆ -
ಇವೇ ಮೊದಲಾದ ಪ್ರಮಾಣಗಳಿಂದ, ಸಿದ್ಧನ್ - ಸ್ಥಾಪಿತವು ; ಈ ಪ್ರಮಾಣ
ದಲ್ಲಿ ಪ್ರಣವ ಒಂದು ಮಾತ್ರವಿಲ್ಲದೆ ಹೇಳಿಸುತ್ತದೇ ವಿನಾ ಚತುರ್ಥಿಯು ಇರ
ಕೂಡದೆಂದು ಹೇಳಲಿಲ್ಲವು ; ಆದುದರಿಂದ ಸ್ತ್ರೀ ಶೂದ್ರಾದಿಗಳಿಗೆಲ್ಲಾ ಪ್ರಣವ
ಒಂದನ್ನು ಮಾತ್ರವಿಲ್ಲದೆ ಉಪದೇಶಿಸಬಹುದೆಂಬ ಭಾವವು ಇಲ್ಲಿ ತೋರಿಬರುತ್ತದೆ.
ಈ ಮನ್ತ್ರವು ಚತುರ್ವಿಧ ಪುರುಷಾರ್ಥ ಸಾಧನೆಗೂ ಹೇತುವು ಎಂಬ ಭಾವವು.

ಆಗಲಿ, ಹೀಗೆ ಪ್ರಣವ ರಾಹಿತ್ಯದಲ್ಲಿ ಏಳು ಅಕ್ಷರಗಳಿದ್ದರೂ ಅಯನ
ಶಬ್ದದ ಅಕಾರದಿಂದಲೂ, ಪ್ರಣವದ ಅಕಾರದಿಂದಲೂ, ತೋರಿಬರುವ ಸರ್ವಾರ್ಥ
ಗಳು ತೋರಿಬರುವದರಿಂದ ಅಷ್ಟಾಕ್ಷರ ಸಿದ್ಧಿಯೂ, ತನ್ಮೂಲಕ ಸಕಲ ಪುರುಷಾರ್ಥ
ಗಳಿಗೂ ಹೇತುವೂ ಆಗುತ್ತದೆಂದು ಹೇಳಿದುದೇನೋ ಒಪ್ಪಬಹುದು;ಆದರೆ ಪ್ರಣ
ವವು ಅಕಾರ, ಉಕಾರ, ಮಕಾರಗಳಿಂದ ಯುಕ್ತವಾಗಿರುವಾಗ, ಮಿಕ್ಕ ಎರಡರ
ಸಂಬಂಧದಿಂದ ತೋರುವ ಸಮಸ್ತಾರ್ಥಗಳೂ ಎಲ್ಲಿ ತೋರಿಬರುತ್ತವೆ? ಅದು
ಇಲ್ಲದಿರುವದರಿಂದ ಅಂತಹ ಅರ್ಥಾನುಸಂಧಾನಕ್ಕೆ ನ್ಯೂನತೆಯೂ, ಆ ಕಾರಣ
ದಿಂದ ಫಲ ನ್ಯೂನತೆಯೂ, ಉಂಟಾಗಬೇಕಲ್ಲಾ ಎಂದರೆ, ಮುಂದಿನ ವಾಕ್ಯದಿಂದ
ಸಮಾಧಾನವನ್ನು ಹೇಳುತ್ತಾರೆ.—ಮುಖ್ಯವಾಗಿ ಮಿಕ್ಕ ಎರಡಕ್ಷರಗಳಿಂದ ವಿಷ್ಣು
ವಿಗೇನೇ ಈ ಮಕಾರವಾಚ್ಯನಾದ ಜೀವಾತ್ಮನು ಶೇಷಭೂತನು ಎಂಬ ಪ್ರಧಾನಾ
ರ್ಥವೇ ಇಲ್ಲವಾಗುತ್ತದಲ್ಲಾ ನ್ಯೂನತೆ ಬರಲಿಲ್ಲವೇ ? ಎಂದರೆ ಸಮಾಧಾನವನ್ನು
ಹೇಳುತ್ತಾರೆ. ಉಕಾರಾರ್ಥವನ್ನೂ ಮಕಾರಾರ್ಥವನ್ನೂ ಗ್ರಹಿಸುವ ಸ್ಥಳವನ್ನು
ಈ ತಾಂತ್ರಿಕ ಮನ್ತ್ರದಲ್ಲೇ ವ್ಯಕ್ತಪಡಿಸುತ್ತಾರೆ—

**ಪ್ರಣವವಿಲ್ಲದೆ ತಾಂತ್ರಿಕವಾದರೆ ಅದರ ಎಲ್ಲಾ ಅರ್ಥಾನುಸಂಧಾನ ,
ಫಲಗಳ ಸಿದ್ಧಿಯು ಹೇಗೆ ?**

ಇಪ್ಪದಿ - ಹೀಗೆ, ಹಿಂದೆ ಉಪಪಾದಿಸಿದ ರೀತಿಯಲ್ಲಿ, ಪ್ರಣವ ಮೊಳಿಯ

---

(೩) ನಾರದೀಯ ೧. ೪೧.

 

**ಪ್ರಣವರಾಹಿತ್ಯೇ ಕಥಂ ತದರ್ಥಫಲ ಸಿದ್ಧಿರಿತ್ಯತ್ರಾಹ :—**

**ಇಪ್ಪಡಿ ಪ್ರಣವ ಮೊಳಿಯಾ ಅಷ್ಟಾಕ್ಷರಮಾನಪೋದು ಪ್ರಣವತ್ತಿ ಅರ್ಥಮೆಲ್ಲಾಮ್ ಇಪ್ಪ್ರಣವ ಪ್ರತಿಚ್ಛನ್ದಮಾಗ ಶಾಸ್ತ್ರಮ್ ವಕುತ್ತ ಅಕ್ಷರ ತ್ತಿಲೇ ಪ್ರಥಮಾಕ್ಷರಮ್ ಸರ್ವಸಙ್ಗ್ರಹಕಮಾನ ಕಣಕ್ಕಿಲೇ ಶುರಙ್ಗ ಅನುಸನ್ಧೇಯಮ್. ಮಧ್ಯಮಾಕ್ಷರತ್ತಿಲ್ ಪೊರುಳುಮ್ ಅರ್ಥಸಿದ್ಧಮಾಮ್.**

---

**ಅಷ್ಟಾಕ್ಷರಮಾನಪೋದು** – ಪ್ರಣವವಿಲ್ಲದಿರುವಾಗ ಸರ್ವಾಧಿಕಾರವುಳ್ಳದ್ದಾಗಿ ಆಗಲೂ ಅಷ್ಟಾಕ್ಷರವೆಂದೆನಿಸಿ ತಾಂತ್ರಿಕ ಮನ್ತ್ರವಾದಾಗಲೂ, **ಪ್ರಣವತ್ತಿಲರ್ಥ ಮೆಲ್ಲಾಮ್** – ಪ್ರಣವದ ಮೂರು ಅಕ್ಷರಗಳಿಂದಲೂ ತೋರಿಬರುವ ಸಮಸ್ತಾಭಿ ಪ್ರಾಯವೆಲ್ಲಾ, **ಪ್ರಣವಪ್ರತಿಚ್ಛನ್ದಮಾಗ** - ಪ್ರಣವಕ್ಕೆ ಪ್ರತ್ಯಾಮ್ನಾಯವಾಗಿ ಎಂದರೆ ಬದಲಾಗಿ, **ಶಾಸ್ತ್ರಮ್ ವಕುತ್ತ** - ನಾರದೀಯ ಶಾಸ್ತ್ರದಲ್ಲಿ "**ಬೀಜ ಮಷ್ಟಾಕ್ಷರಸ್ಯ**" ಎಂಬ ವಾಕ್ಯದಲ್ಲಿ ಪ್ರತಿ ಪಾದಿಸಲ್ಪಟ್ಟ ಹಾಗೆ, **ಪ್ರಥಮಾಕ್ಷರಂ** - ಪ್ರಣವದ ಮೊದಲಿನ ಅಕ್ಷರವನ್ನು ಬೋಧಿಸುವ **ಅಮ್** ಎಂಬ ಪದವು, **ಸರ್ವಸಙ್ಗ್ರಹಕಮಾನ ಕಣಕ್ಕಿಲೇ** – ಜಗತ್ಕಾರಣತ್ವ, ಸರ್ವರಕ್ಷಕತ್ವ, ಶ್ರಿಯಃಪತಿತ್ವ, ಅಖಿಲ ಹೇಯ ಪ್ರತ್ಯನೀಕತ್ವ, ಕಲ್ಯಾಣ ಗುಣಾಕರತ್ವಾದಿ ಸಕಲಾರ್ಥಗಳೂ ಸಙ್ಗ್ರಹವಾಗಿ ತೋರಿಬರುವ ರೀತಿಯಲ್ಲಿ, **ಶುರಙ್ಗ ಅನುಸಂಧೇಯಮ್**–ನಾರಾಯಣ ಶಬ್ದದ ಅಯನ ಎಂಬಲ್ಲಿರುವ ಅಕಾರದಲ್ಲಾಗಲಿ, ಅಥವಾ **ಅಮ್** ಎಂಬ ಬೀಜಾಕ್ಷರದಲ್ಲಿಯಾಗಲಿ ಅನುಸಂಧಾನಮಾಡಬಹುದು. "**ಅಕಾರೋವೈ ಸರ್ವಾ ವಾಕ್**" ಎಂಬ ಪ್ರಮಾಣವನ್ನು ಮನಸ್ಸಿನಲ್ಲಿಟ್ಟು "**ಸರ್ವಸಙ್ಗ್ರಹಕಮಾನ ಕಣಕ್ಕಿಲೇ** ಎಂಬ ಪ್ರಯೋಗವು; **ನಾರಾಯಣ** ಶಬ್ದದಲ್ಲಿ ತತ್ಪುರುಷ ಬಹು ವ್ರೀಹಿ ಸಮಾಸಗಳಿಂದ ತೋರಿಬರುವ ಸಮಸ್ತ ಅರ್ಥಗಳೂ ಮುಂದೆ ಉಪಪಾದಿ ಸಲ್ಪಡುವುವು; ಆ ಅರ್ಥಗಳೆಲ್ಲವೂ ಸಙ್ಗ್ರಹವಾಗಿ ಈ ಅಕಾರದಲ್ಲೇ ದ್ಯೋತಿತವು ಎಂಬ ಭಾವದಿಂದ **ಸರ್ವಸಙ್ಗ್ರಹಕಮಾನ ಕಣಕ್ಕಿಲೇ** ಎಂಬ ಪ್ರಯೋಗವು. ಮನ್ತ್ರದ ಪ್ರಥಮಾಕ್ಷರವಾದ **ಓಂ** ಎಂಬ ಪ್ರಣವವು ಹೇಗೆ ಮನ್ತ್ರದ ಸರ್ವಾರ್ಥದ ಸಙ್ಗ್ರಹವೋ, ಹಾಗೆಯೇ ಪ್ರಣವದ ಪ್ರಥಮಾಕ್ಷರವೂ ಕೂಡ ಸರ್ವಾರ್ಥ ಸಙ್ಗ್ರಹಕವೆಂದಾಗಲಿ ತಾತ್ಪರ್ಯವು **ನಮೋನಾರಾಯಣಾಯ** ಎಂಬಲ್ಲಿ ತೋರಿಬರುವ ಅರ್ಥಗಳೆಲ್ಲಾ ಪ್ರಣವ ಮನ್ತ್ರದ ಪ್ರಥಮಾಕ್ಷರವಾದ ಅಕಾರದಲ್ಲೂ ತೋರಿ ಬರುತ್ತದೆಂದಾಗಲಿ ತಾತ್ಪರ್ಯವು. ಯಾವ ಯಾವ ಅರ್ಥಗಳು ಪ್ರಣವದಲ್ಲಿ ಅಕಾರದಲ್ಲೂ ಬೋಧಿತವೆಂಬುದು ಮುಂದೆ ಹೇಳಲ್ಪಡುತ್ತದೆ. ಹೀಗೆ ಪ್ರಣವಾರ್ಥವೆಲ್ಲಾ ಅಕಾರದಲ್ಲೇ ಸಂಗ್ರಹವಾಗಿ ದ್ಯೋತಿತವೆಂದು ಹೇಳಿದುದು ಹೇಗೆ? ಅಕಾರಾರ್ಥ ಮಕಾರಾರ್ಥಗಳು ಅಕಾರದಲ್ಲಿ ಎಲ್ಲಿ ತೋರಿಬರುತ್ತವೆ? ಎಂದರೆ ಸಮಾಧಾನವನ್ನು

ಮುಂದಿನ ಎರಡು ವಾಕ್ಯಗಳಿಂದ ತಿಳಿಸುತ್ತಾರೆ.—ಪ್ರಣವದ ಮಧ್ಯಮಾಕ್ಷರವಾದ ಉಕಾರವಾದ ಅವಧಾರಣವು, ಮಕಾರವಾಚ್ಯನಾದ ಜೀವಾತ್ಮನು ಅಕಾರವಾಚ್ಯನಾದ ಪರಮಾತ್ಮನಿಗೇ ಶೇಷಭೂತನು ಎಂಬರ್ಥವು ಅಕಾರದಲ್ಲಿ ತೋರಿಬರುತ್ತದೆಂದು "ಮಧ್ಯಮಾಕ್ಷರತ್ತಿಲ್ ಪೊರುಳುಂ ಅರ್ಥಸಿದ್ಧಮಾಮ್" ಎಂಬ ವಾಕ್ಯದಿಂದ ತಿಳಿಸುತ್ತಾರೆ.—ಮಧ್ಯಮಾಕ್ಷರತ್ತಿಲ್ - ಪ್ರಣವದ ಮಧ್ಯಮಾಕ್ಷರವಾದ ಉಕಾರದಲ್ಲಿ, ಪೊರುಳುಮ್ - ಜೀವಾತ್ಮನು ಪರಮಾತ್ಮನಿಗೇ ಶೇಷಭೂತನೆಂದು ಹೇಳುವ ಶೇಷತ್ವ ಬೋಧಕ ಮುಖ್ಯಾರ್ಥವಾದ ಅವಧಾರಣಾರ್ಥವು, ಅರ್ಥಸಿದ್ಧಮಾಮ್ - ಅರ್ಥವಾಗಿ ತೋರಿಬರುತ್ತದೆಂದು ಹೇಳುತ್ತಾರೆ.—ಇದು ಹೇಗೆಂದರೆ—ಅಕಾರವು ಲುಪ್ತವಾದ ಚತುರ್ಥ್ಯರ್ಥವುಳ್ಳದಾದುದರಿಂದ ಆಯ ಎಂದಾಗುತ್ತದೆ; ಇದಕ್ಕೆ ಅರ್ಥವು ಚಿದಚಿದ್ವಿಶಿಷ್ಟವಾದ ಈ ಜಗತ್ತಿನ ಸರ್ವವೂ ಅಕಾರವಾಚ್ಯನಾದ ಶ್ರೀ ಮಹಾವಿಷ್ಣುವಿಗೇ ಎಂಬರ್ಥವಾಗುವದರಿಂದ,ಸರ್ವ ಶೇಷಿತ್ವವು ಪರಮ ಪುರುಷನಿಗೆ ಸಿದ್ಧವು. ಇದು ಸಾರದೀಪಿಕೆ ಸಾರಾಸ್ವಾದಿನಿಯುವರುಗಳ ಅರ್ಥವು ಸಾರವಿವರಣೆಯವರು ಹೇಳಿರುವದೇನೆಂದರೆ—ಪ್ರಣವವು ತಾಂತ್ರಿಕವಾದಾಗ ಅಂ ಎಂದು ಅಕಾರವು ಬಿಂದುಯುಕ್ತವಾದರೆ, ಆ ಅನುಸ್ವಾರದಲ್ಲಿ ಮಕಾರವು ಇರುವದರಿಂದ ಮಕಾರಾರ್ಥವಾದ ಜ್ಞಾತೃತ್ವವುಳ್ಳ ಜೀವಾತ್ಮನು ಹೇಳಲ್ಪಟ್ಟನೆಂದು ಭಾವಿಸಬಹುದೆಂದು,ಅಕಾರವು ಲುಪ್ತಚತುರ್ಥಿಯಾಗಿ ಆಯ ಎಂದಾಗುವದರಿಂದ ಪರಮಾತ್ಮನಿಗೆ ಜೀವಾತ್ಮನು ಶೇಷನೆಂಬರ್ಥವಾದ ಉಕಾರಾರ್ಥವೂ ಮತ್ತು ಪರಮಾತ್ಮನು ಶೇಷಿಯಾಗಿ ಸರ್ವರಕ್ಷಕನೆಂಬರ್ಥವೂ ತೋರಿಬರುತ್ತದೆಂದೂ, ಹಾಗೆಯೇ ಅಕಾರವು ವಿಷ್ಣುವಾಚಕವಾಗಿ ನಿತ್ಯಾನಪಾಯಿನಿಯಾದ ಲಕ್ಷ್ಮೀಯುಕ್ತನಾದವನನ್ನು ಬೋಧಿಸುವದರಿಂದ ಲಕ್ಷ್ಮೀವಿಶಿಷ್ಟತೆಯೂ ವ್ಯಕ್ತವೆಂದೂ, ಅಥವಾ "ಸರ್ವಂ ವಾಕ್ಯಂ ಸಾವಧಾರಣಮ್ ಎಂಬ ನ್ಯಾಯಾನುಸಾರವಾಗಲಿ ಭಗವಂತನ ಶೇಷಿತ್ವವೂ ಜೀವಾತ್ಮನ ಶೇಷತ್ವವೂ ಸಿದ್ಧಿಸುತ್ತವೆಂದು ಹೇಳುತ್ತಾರೆ; ಈ ತಾಂತ್ರಿಕ ಪ್ರಣವರೂಪವಾದ ಅಂ ಎಂಬುದನ್ನು ಅಙ್ಗೀಕರಿಸದೇ ಇದ್ದ ಪಕ್ಷದಲ್ಲಿ "ಮಧ್ಯಮಾಕ್ಷರತ್ತಿಲ್ ಪೊರುಳುಮ್ ಅರ್ಥಸಿದ್ಧಮಾಮ್" ಎಂದು ಹೇಳಲ್ಪಟ್ಟಿತೆಂದು ಭಾವಿಸಿ ಮಕಾರದಿಂದ ತೋರುವ ಜೀವನು ಪರಮಾತ್ಮನಿಗೆ ಶೇಷನು ಎಂಬ ಭಾವವು. ಸಖಂಡ ನಮಸ್ಸಿನಿಂದಲೇ, ಮಃ ನ ಎಂದರೆ ಮಮ ನ-ನಾನು ನನಗಲ್ಲ ಎಂದಾಗಿಯೂ, ನಾರಾಯಣಾಯ - ಶ್ರೀಮನ್ನಾರಾಯಣನಿಗಾಗಿಯೇ ಎಂಬರ್ಥವು ತೋರಿಬರುತ್ತದೆ, ಎಂಬ ಭಾವವು. ಯಾವಾಗ ತಾನು ತನಗಲ್ಲವೆಂಬದಾಗಿ ತನ್ನ ಶೇಷಿತ್ವವು ನಿಷೇಧಿಸಲ್ಪಟ್ಟಿತೋ, ಆವಾಗ ಪರಮಾತ್ಮನಿಗೇನೆ ತಾನು ಶೇಷಭೂತನೆಂಬ ಅನನ್ಯಾರ್ಹ ಶೇಷತ್ವವೂ ಸಿದ್ಧಿಸಿತು; ಪರದೇವತಾ ಪಾರಮಾರ್ಥ್ಯಾಭಿಪ್ರಾಯವೂ ಆಗ ತೋರಿ, ಬ್ರಹ್ಮರುದ್ರಾದಿಗಳಿಗೆ ತಾನು ಶೇಷಭೂತನಲ್ಲವು; ಪರಮಪುರುಷನೇ ತನಗೆ ಶೇಷಿ ಎಂಬ ಶೇಷ ಶೇಷಿಸಂಬಂಧವೂ ದ್ಯೋತಿ

ಇದಿಲ್ ತೃತೀಯಾಕ್ಷರತ್ತಿಲ್ ಶೊಲ್ಲುಗಿರ ಜ್ಞಾತೃತ್ವಾದಿಗಳುಮ್ ನ್ನಮುಸ್ಸಿಲ್ ದ್ವಿತೀಯಾಕ್ಷರತ್ತಿಲ್ ಪ್ರಕೃತಿಯಿಲೇ ಅನುಸಂಧೇಯಮ್.
ಅಥ ಪ್ರಣವಸ್ಯ ಸ್ವತನ್ತ್ರಸ್ಥಿತೌ ಮಂತ್ರಾನ್ತರ ಶೇಷಸ್ಥಿತೌಚ ಅರ್ಥ್ಯ ಆಹ.

ಪ್ರಣವಮ್ ಸ್ವತನ್ತ್ರಮಾನಪೋದು ಏಕಮಾತ್ರಮ್, ದ್ವಿಮಾತ್ರಮ್

ತವೆಂಬ ಭಾವವು. ಸಾರಸಜ್ಞ್ರಹ ವ್ಯಾಖ್ಯಾನದಲ್ಲಿ ಹೇಳಿರುವದೇನೆಂದರೆ.—ನಮಃ ಎಂಬುದರಿಂದ ನಮನವು ಹೇಳಲ್ಪಟ್ಟಿತು; ಪರಮಪುರುಷನು ಸೇವ್ಯನಾಗಿ ರಕ್ಷಕ ನಾಗಿ ಶೇಷಿಯಾಗಿರುವದರಿಂದ ಜೀವಾತ್ಮನ ಅನನ್ಯಾರ್ಹ ಶೇಷತ್ವವೂ,ಪರಮಾತ್ಮನ ಶೇಷಿತ್ವವೂ ಸಿದ್ಧವೆಂದು ತಿಳಿಸುತ್ತಾರೆ; ಮತ್ತು ನಮನ ಕಾರ್ಯದಿಂದಲೇ ಜ್ಞಾನಸ್ವರೂಪತ್ವ ಜ್ಞಾತೃತ್ವವೂ ಸಿದ್ಧವೆಂದು ತೋರಿಬರುತ್ತದೆ.

ಮುಂದಿನ ವಾಕ್ಯದಿಂದ ತಾಂತ್ರಿಕ ಮಂತ್ರದಲ್ಲೂ ಜೀವಾತ್ಮನು ಜ್ಞಾನ ಸ್ವರೂಪನಾಗಿಯೂ, ಜ್ಞಾನಯುಕ್ತನಾಗಿಯೂ ಇರುವದರಿಂದ ಜ್ಞಾತೃತ್ವವೂ ಆತನಲ್ಲಿ ಉಂಟೆಂಬ ಮಕಾರಾರ್ಥವೂ ಶಾಬ್ದವಾಗಿಯೇ ಸೂಚಿತವೆಂದು ಹೇಳುತ್ತಾರೆ—ಇದಿಲ್ - ಈ ತಾಂತ್ರಿಕ ಮನ್ತ್ರದಲ್ಲೂ, ತೃತೀಯಾಕ್ಷರ ತ್ತಿಲ್-ಪ್ರಣವದ ಮೂರನೆಯ ಅಕ್ಷರವಾದ ಮಕಾರದಲ್ಲಿ, ಶೊಲ್ಲುಗಿರ ಜ್ಞಾತೃತ್ವಾ ದಿಗಳುಮ್-ಜ್ಞಾತೃತ್ವವೇ ಮೊದಲಾದವುಗಳೂ, ನಮುಸ್ಸಿಲ್ - ನಮಃ ಎಂಬ ಶಬ್ದದ, ದ್ವಿತೀಯಾಕ್ಷರತ್ತಿಲ್-ಎರಡನೆಯ ಅಕ್ಷರವಾದ, ಮಃ - ಎಂಬ ಪದದ, ಪ್ರಕೃತಿಯಿಲೇ-ಪ್ರತ್ಯಯವನ್ನು ಬಿಟ್ಟ ಶಬ್ದಕ್ಕೆ ಪ್ರಕೃತಿಎಂದು ಹೆಸರು,ಅದುದರಿಂದ ಮ್ ಎಂಬಲ್ಲಿ, ಅನುಸಂಧೇಯಮ್ - ಅನುಸಂಧಾನ ಮಾಡಬಹುದು; ನಮಃ ಎಂಬಲ್ಲಿರುವ ಎರಡನೆಯಪದವಾದ ಮಃ ಎಂಬುದು ಮ್ ಎಂಬ ಶಬ್ದದ ಷಷ್ಠಿಯು; ಇಲ್ಲಿ ಮ್ ಎಂಬುದೂ ಶಾಬ್ದವಾಗಿಯೇ ಜೀವಾತ್ಮನನ್ನು ಬೋಧಿಸುತ್ತದೆ; ಮನ ಜ್ಞಾನೇ ಎಂಬ ಧಾತುವಿನಿಂದ ಮ್ ಶಬ್ದವು ಜ್ಞಾತೃತ್ವಾದಿಗಳನ್ನು ಬೋಧಿಸು ತ್ತದೆ ಎಂಬ ಭಾವವು. ಹೀಗೆ ಪ್ರಣವ ಚತುರ್ಥಿಗಳಿಲ್ಲದೆ ನಮೋನಾರಾಯಣಾ ಎಂದು ಮೂಲಮಂತ್ರವನ್ನು ಉಚ್ಚರಿಸಿದರೂ ಪ್ರಣವ ಚತುರ್ಥಿಗಳ ಅರ್ಥಗಳೆಲ್ಲಾ ಆದರಲ್ಲೇ ಬೋಧಿತವೆಂದು ಉಪಪಾದಿಸಿದರು. ತಾಂತ್ರಿಕವಾಗಿ ಅಮ್ ನಮೋ ನಾರಾಯಣಾಯ ಎಂದೂ ಹೇಳಬಹುದೆಂದು ತೋರಿಬರುತ್ತದೆ.

ಮುಂದೆ ಪ್ರಣವದ ಸ್ವತಂತ್ರಸ್ಥಿತಿಯಲ್ಲೂ ಇತರ ಮನ್ತ್ರಗಳೊಂದಿಗೆ ಸೇರಿರುವಾಗಲೂ ಬೋಧಿತಾರ್ಥಗಳನ್ನು ತಿಳಿಸುತ್ತಾರೆ.

ಪ್ರಣವವು ವೇದಗಳಲ್ಲಿ ಎರಡು ವಿಧದಲ್ಲಿ ಪ್ರಯೋಗಿಸಲ್ಪಟ್ಟಿದೆ, (೧) ಓಂ ಇತ್ಯಾತ್ಮಾನಂ ಯುಂಜೀತ ಇತ್ಯಾದಿ ಸ್ಥಳಗಳಲ್ಲಿ ಸ್ವತಂತ್ರವಾಗಿ ಪ್ರಯೋಗ ವಿರು ತ್ತದೆ. (೨) ಈ ಮೂಲಮಂತ್ರವೇ ಮೊದಲಾದ ವ್ಯಾಪಕ ಮನ್ತ್ರಗಳ ಪ್ರಾರಂಭ

ತ್ರಿಮಾತ್ರಮ್, ಸಾರ್ಧತ್ರಿಮಾತ್ರಮ್ ಎನ್ರಾರ್‍ಪ್ಪೋಲೆ, ಪಲಪ್ರಕಾರಙ್ಗಳಾಯ್ ಅರ್ಥಙ್ಗಳು ಮಪ್ಪಡಿಯೇ ಕಾರ್ಯಕಾರಣಾವಸ್ಥ ಪರಮಾತ್ಮವಾಚಕತ್ವಾದಿ ಪ್ರಕ್ರಿಯೈಯಾಲೇ ಪಲವಗೈಪ್ಪಟ್ಟಿರುಕ್ಕುಮ್. ವ್ಯಾಪಕಮನ್ತ್ರಙ್ಗಳಿಲುಮ್ ಪ್ರಣವತ್ತೈ ಪರಮಾತ್ಮ ಪ್ರಧಾನಮಾಗವುಮ್ ಶಿಲಶಾಸ್ತ್ರಙ್ಗಳ್ ಶೊಲ್ಲುಮ್.

---

ದಲ್ಲೂ, ವೇದ ಮನ್ತ್ರಗಳನ್ನು ಪ್ರಾರಂಭಿಸುವ ಮತ್ತು ಮುಗಿಸುವ ಸ್ಥಳಗಳಲ್ಲೂ ಉಪಯೋಗಿಸತಕ್ಕದ್ದಾಗಿಯೂ ಇರುತ್ತದೆ. ಈ ಎರಡು ವಿಧ ಪ್ರಯೋಗಗಳಲ್ಲೂ ಪ್ರಣವದ ಅರ್ಥ ವಿವರಣೆಯನ್ನು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ–ಮೊದಲು ಸ್ವತಂತ್ರ ಪ್ರಯೋಗಾರ್ಥವನ್ನು ತಿಳಿಸುತ್ತಾರೆ—ಪ್ರಣವಮ್ ಸ್ವತಂತ್ರಮಾಪ್ಪೋದು - ಪ್ರಣವವು ಸ್ವತಂತ್ರವಾಗಿ ಪ್ರಯೋಗಿಸಲ್ಪಟ್ಟಾಗ, ಏಕಮಾತ್ರಮಿತ್ಯಾದಿ - ಒಂದು ಮಾತ್ರೆ, ಎರಡು ಮಾತ್ರೆ, ಮೂರು ಮಾತ್ರೆ, ಮೂರೂವರೆ ಮಾತ್ರೆ, ಎನ್ನಾರ್‍ಪ್ಪೋಲೆ - ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ, ಪಲಪ್ರಕಾರಙ್ಗಳಾಯ್ - ನಾನಾವಿಧವಾಗಿ, ಅರ್ಥಙ್ಗಳುಮ್ ಅಪ್ಪಡಿಯೇ - ಅರ್ಥಗಳೂ ಹಾಗೆಯೇ, ಕಾರ್ಯಕಾರಣಾವಸ್ಥಪರಮಾತ್ಮವಾಚಕತ್ವಾದಿ – ಕಾರ್ಯಾವಸ್ಥೆಯ ಪರಬ್ರಹ್ಮವೆಂದರೆ ಸ್ಥೂಲ ಚಿದಚಿದ್ವಿಶಿಷ್ಟ ಪರಮಾತ್ಮನನ್ನು ಮತ್ತು ಕಾರಣಾವಸ್ಥೆಯ ಪರಬ್ರಹ್ಮವೆಂದರೆ ಸೃಷ್ಟ್ಯುನ್ಮುಖನಾದ, ಸೂಕ್ಷ್ಮ ಚಿದಚಿದ್ವಿಶಿಷ್ಟ ಪರಮಾತ್ಮನನ್ನೂ ಬೋಧಿಸುವದೇ ಮೊದಲಾದ, ಪ್ರಕ್ರಿಯೈಯಾಲೇ - ರೀತಿಯಲ್ಲಿ, ಪಲವಗೈಪಟ್ಟಿರುಕ್ಕುಮ್ - ಹಲವು ಬಗೆಯಾಗಿರುವುವು. "ಏಕಮಾತ್ರೋ ಭವೇದ್ಧ್ರಸ್ವಃ ದ್ವಿಮಾತ್ರೋ ದೀರ್ಘ ಉಚ್ಯತೇ । ತ್ರಿಮಾತ್ರಸ್ತು ಪ್ಲುತೋ ಜ್ಞೇಯಃ ವ್ಯಂಜನಂತ್ವರ್ಧ ಮಾತ್ರಕಮ್" ಎಂಬ ಪ್ರಮಾಣ ರೀತ್ಯಾ ಪ್ರಣವೋಚ್ಚಾರಣೆಯು ಏಕಮಾತ್ರೆ, ದ್ವಿಮಾತ್ರೆ, ತ್ರಿಮಾತ್ರೆ, ಸಾರ್ಧತ್ರಿಮಾತ್ರೆಯಾಗಿರಬಹುದು; ಆಗ ಅವುಗಳು ಬೇರೆ ಬೇರೆ ವಿಧವಾಗಿ ಪರಮಾತ್ಮವಾಚಕಗಳು ಹೇಗೆಂದರೆ—ಏಕಮಾತ್ರೆಯಾದಾಗ ಕಾರ್ಯರೂಪ ಭೂಲೋಕಾದಿ ಶರೀರಕ ಪರಮಾತ್ಮನನ್ನೂ, ದ್ವಿಮಾತ್ರೆಯಾದಾಗ ಕಾರ್ಯರೂಪವಾದ ಅಂತರಿಕ್ಷ ಶರೀರವಾಚಿ ಪರಮಾತ್ಮನನ್ನೂ, ತ್ರಿಮಾತ್ರೆಯಾದಾಗ ಸ್ವರ್ಲೋಕ ಶರೀರಕವಾಚಿ ಪರಮಾತ್ಮನನ್ನೂ, ಸಾರ್ಧತ್ರಿಮಾತ್ರೆಯಾದಾಗ ಕಾರಣಾವಸ್ಥೆಯ ಪರಮಾತ್ಮನನ್ನೂ ಬೋಧಿಸುತ್ತದೆಂದು ಛಾಂದೋಗ್ಯದಲ್ಲಿ ಹೇಳಲ್ಪಟ್ಟಿರುತ್ತದೆಂಬ ತಾತ್ಪರ್ಯವು. ಈ ಮೇಲೆ ಹೇಳಿದ ರೀತ್ಯಾ ಉಚ್ಚರಿಸುತ್ತಾ ಉಪಾಸಿಸುವವರಿಗೆ, ಫಲದಲ್ಲೂ ಭೇದಗಳುಂಟು; ಹೇಗೆಂದರೆ.–ಮಾತ್ರೆಯ ಭೇದದಿಂದ ಕ್ರಮವಾಗಿ ಅವರುಗಳಿಗೆ ಭೂಲೋಕ, ಭುವರ್ಲೋಕ, ಸುವರ್ಲೋಕ ಪರಮಪದ ಪ್ರಾಪ್ತಿಗಳು ಲಭಿಸುತ್ತವೆಂಬ ಭಾವವು. ಹೀಗೆ ಸ್ವತಂತ್ರ ಪ್ರಣವೋಪಾಸನಕ್ಕೆ ಅರ್ಥಫಲಗಳಲ್ಲಿ ಭೇದವು ಉಚ್ಚಾ

## ಪ್ರಣವಮಾಹಾತ್ಮ್ಯವಾದ.

ಇದಿರ್ ಪ್ರಭಾವಮ್ (೧) "ಆದ್ಯಂತು ತ್ರ್ಯಕ್ಷರಂ ಬ್ರಹ್ಮ ತ್ರಯಿಾ

ರಹೆಯು ಭೇದದಿಂದ ಉಂಟಾಗುತ್ತವೆ ಎಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವು ಅಥರ್ವಶಿಖೋಪನಿಷದ್ವಾಕ್ಯವಾದ "ಓಮಿತ್ಯೇದಕ್ಷರಂ ಬ್ರಹ್ಮಾಸ್ಯಪಾದಾ ಶ್ಚತಾ್ವರೋ ವೇದಾ ಶ್ಚತುಷ್ಪಾದಿ ದಮಕ್ಷರಮ್। ಪೂರ್ವೇಸ್ಯ ಮಾತ್ರಾ ಪೃಥಿವ್ಯಾಕಾರಃ" ಎಂದಾರಂಭಿಸಿ "ಪ್ರಥಮಾ ರಕ್ತಪೀತಾ ಮಹದ್ಬ್ರಹ್ಮ ದೈವತ್ಯಾ, ದ್ವಿತೀಯಾ ವಿದ್ಯುಮತೀ, ಕೃಷ್ಣಾ ವಿಷ್ಣು ದೈವತ್ಯಾ ತೃತೀಯಾ ಶುಭಾ ಶುಭಾ ಶುಕ್ಲಾ ರುದ್ರ ದೈವತ್ಯಾ ಯಾವಸಾನೇಸ್ಯ ಚತುರ್ಥ್ಯರ್ಧಮಾತ್ರಾ ಸಾವಿದ್ಯುಮತೀ ಸರ್ವವರ್ಣಾಃ ಪುರುಷ ದೈವತ್ಯಾ" ಎಂಬಲ್ಲಿ ಹೇಳಿರುತ್ತದೆ. ಪಾತಂಜಲಿ ಸೂತ್ರದಲ್ಲಿ "ತಸ್ಯವಾಚಕಃ ಪ್ರಣವಃ" ಎಂದೂ ಹಾಗೆಯೇ "ಓಂಕಾರೋ ವಿಷ್ಣುರವ್ಯಯಃ" ಎಂದೂ ಇದೆ.

ಈ ಪರಮಾತ್ಮ ಬೋಧಕಾರ್ಥವು ಸ್ವತಂತ್ರ ಪ್ರಣವಕ್ಕೆ ಮಾತ್ರವೇ ಅಲ್ಲವು; ವ್ಯಾಪಕ ಮಂತ್ರಗಳೊಂದಿಗೆ ಸೇರಿ ಅವುಗಳಿಗೆ ಅವಯವವಾದ ಪ್ರಣವಕ್ಕೂ ಸಹ ಪರಮಾತ್ಮನನ್ನು ಬೋಧಿಸುವ ಪ್ರಧಾನ ಭಾವವು ಉಂಟೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಈ ವಿಷಯದಲ್ಲಿ ಸ್ವತಂತ್ರ ಪ್ರಣವವೂ ವ್ಯಾಪಕ ಮಂತ್ರಗಳಿಗೆ ಶೇಷಭೂತವಾದ ಅಖಂಡ ಪ್ರಣವವೂ ಸಮಾನಾರ್ಥಕಗಳೆಂದು ತಿಳಿಸುತ್ತಾರೆ; ಹಾಗೆ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ ಎಂಬ ಭಾವವು:— ವ್ಯಾಪಕ ಮಂತ್ರಙ್ಗಳಿಲುಮ್ – ಅಷ್ಟಾಕ್ಷರ ದ್ವಾದಶಾಕ್ಷರ ಷಡಕ್ಷರ ಮಂತ್ರಗಳಾದ ವ್ಯಾಪಕ ಮಂತ್ರಗಳಲ್ಲೂ, ಪ್ರಣವತ್ತೈ–ಅಕಾರ ಉಕಾರ ಮಕಾರ ಭಾವನೆಗಳಿಲ್ಲದೆ ಸುಮ್ಮನೆ ಅಖಂಡವಾಗಿ ಉಚ್ಚರಿಸಲ್ಪಟ್ಟ ಪ್ರಣವವನ್ನು, ಪರಮಾತ್ಮ ಪ್ರಧಾನಮಾಗವುಮ್-ಸ್ವತಂತ್ರ ಪ್ರಣವವು ಹೇಗೆ ಪರಮಾತ್ಮ ವಾಚಿಯೋ, ಹಾಗೆಯೇ ಈ ಅಙ್ಗ ಪ್ರಣವವೂಕೂಡ ಪರಮಾತ್ಮ ವಾಚಿಯಾಗಿ ಹೀಗೆ ಪ್ರಧಾನವಾಗಿರುವಹಾಗೆ, ಶಿಲಶಾಸ್ತ್ರಙ್ಗಳ್ ಶೊಲ್ಲುಮ್ - ಕೆಲವು ಶಾಸ್ತ್ರಗಳು ಬೋಧಿಸಿರುತ್ತವೆ. ಅವು ಯಾವುವು ಎಂದರೆ "ಓಮಿತ್ಯೇಕಾಕ್ಷರಂ ಬ್ರಹ್ಮ" "ಓಮಿತಿ ಬ್ರಹ್ಮ" "ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣ ಸ್ತ್ರಿವಿಧ ಸ್ಸ್ಮೃತಃ" "ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್" ಇತ್ಯಾದಿಗಳು.

ಪ್ರಣವದ ಮಾಹಾತ್ಮ್ಯೆಯನ್ನು ತಿಳಿಸುತ್ತಾರೆ.

ಈ ಪ್ರಣವದ ಅರ್ಥವನ್ನು ಗ್ರಹಿಸಿದವನೇ ವೇದವಿತ್ತು ಎಂಬದಾಗಿ ಹೇಳುವ ಮನುಸ್ಮೃತಿವಾಕ್ಯವನ್ನು ಉದಾಹರಿಸುತ್ತಾರೆ.— ಇದಿನ್ ಪ್ರಭಾವಮ್-

(೧) ಮನುಸ್ಮೃತಿ ೧೧. ೨೬೫.

**ಯತ್ರ ಪ್ರತಿಷ್ಠಿತಾ। ಸ ಗುಹ್ಯೋಽನ್ಯ ಸ್ತ್ರಿವೃದ್ವೇದೋ ಯಸ್ತಂ ವೇದ ಸ ವೇದವಿತ್" ಇತ್ಯಾದಿಗಳಿಲೇ ಪ್ರಸಿದ್ಧಮ್.**

---

ಈ ಪ್ರಣವದ ಪ್ರಭಾವವು **"ಆದ್ಯಂತು"** ಎಂಬ ಮನುಸ್ಮೃತಿ ವಾಕ್ಯವೇ ಇತ್ಯಾದಿಗಳಿಲೇ - ಇವೇ ಮೊದಲಾದವುಗಳಲ್ಲಿ ಪ್ರಸಿದ್ಧವು, ಪ್ರಮಾಣದ ಅರ್ಥವೇನೆಂದರೆ, **ಆದ್ಯಂತು** - ಎಲ್ಲಾ ವೇದಗಳ ಅಧ್ಯಯನದಲ್ಲೂ "ಹರಿಃ ಓಮ್" ಎಂದು ಮೊದಲು ಉಚ್ಚರಿಸತಕ್ಕದ್ದಾದ, **ತ್ರ್ಯಕ್ಷರಂ ಬ್ರಹ್ಮತು** - ಅಕಾರ ಉಕಾರ ಮಕಾರ ಮೂರು ಅಕ್ಷರಗಳುಳ್ಳ ವೇದರೂಪವಾದ ಪ್ರಣವವಾದರೋ ಇಲ್ಲಿ ಬ್ರಹ್ಮ ಶಬ್ದಕ್ಕೆ ವೇದವೆಂಬ ಅರ್ಥವು, ಮತ್ತು **ಯತ್ರ**-ಯಾವ ಪ್ರಣವದಲ್ಲಿ, **ತ್ರಯೀ** - ಮೂರು ವೇದಗಳಾದ • ಋಗ್ಯಜುಸ್ಸಾಮ ವೇದಗಳೂ, **ಪ್ರತಿಷ್ಠಿತಾ** - ಅಡಗಿರುವವೋ, **ಸಃ** - ಅಂತಹ ಪ್ರಣವ ರೂಪ ವೇದವು, **ಗುಹ್ಯಃ** - ಬಹು ರಹಸ್ಯಾರ್ಥಗಳುಳ್ಳದು. ಇದರಿಂದ ಪ್ರಣವೋಚ್ಚಾರಣೆಯಲ್ಲಿ ಸ್ತ್ರೀ ಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂಬುದು **ಗುಹ್ಯ** ಶಬ್ದದಿಂದ ಬೋಧಿತವು. ಶಬ್ದತಃ ಅರ್ಥತಃ ಗುಹ್ಯವೆಂಬತಾತ್ಪರ್ಯವು. **ಅನ್ಯಃ** - ಇತರ ವೇದಗಳಿಗಿಂತಲೂ ವಿಲಕ್ಷಣವಾದುದು, **ಯಃ** - ಯಾವ ದ್ವಿಜನು, **ತ್ರಿವೃತ್** - ಮೂರು ಅಕ್ಷರಗಳುಳ್ಳದ್ದಾಗಿಯೂ ಅಥವಾ ಮೂರು ವೇದಗಳ ಸಾರಭೂತಾರ್ಥವುಳ್ಳದ್ದಾಗಿಯೂ ಇರುವ, **ತಂ** - ಆ ಪ್ರಣವರೂಪ ವೇದವನ್ನು, **ವೇದ** - ಗೂಢಾರ್ಥಗಳನ್ನೆಲ್ಲಾ ವಿಮರ್ಶಿಸಿ ತಿಳಿಯುವನೋ, **ಸಃ**-ಅವನೇ, **ವೇದವಿತ್** - ವೇದಾರ್ಥಗಳನ್ನೆಲ್ಲಾ ತಿಳಿದವನು, ಹೀಗೆ ಹೇಳಿದುದು ಪ್ರಶಂಸಾ ರೂಪವಾದುದು. ಎಲ್ಲಾ ವೇದವನ್ನು ತಿಳಿದವನಾಗುತ್ತಾನೆಯೇ? ಇಲ್ಲವು; ಆದುದರಿಂದ ಪ್ರಶಂಸೆಯು. ಮಹತ್ತಾದ ಪ್ರಣವದ ಅರ್ಥ ತಿಳಿದವನಾದುದರಿಂದ ಪ್ರಾಜ್ಞರಲ್ಲೇ ಆತನ ಗಣನೆಯು ಎಂಬತಾತ್ಪರ್ಯವು. **ಏತದೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯತತ್"** ಎಂಬುದು ಅನುಸಂಧೇಯವು. ಹರಿಃ ಓಂ ಎಂದು ಹೇಳಿಯೇ ವೇದವಾಕ್ಯಗಳನ್ನು ಉಚ್ಚರಿಸಬೇಕೆಂಬ ನಿಯಮವೆಂದರೆ, ಚತುರ್ಮುಖನಿಗೆ ಮೊದಲು ಉಪದೇಶವಾದಾಗಲೂ ಹಾಗೆಯೇ ಹರಿಃ ಓಂ ಎಂದು ಹೇಳಿ ಉಪದೇಶವಾದುದರಿಂದ, ವೇದವು ಹೇಗೆ ಅಪೌರುಷೇಯವಾಗಿ ಆದ್ಯವೋ, ಅದೇರೀ ಮುಂಚಿತವಾಗಿ ಹರಿಃ ಓಂ ಎಂದು ಹೇಳಿ ಉಪದೇಶವಾದುದರಿಂದ ಈ ಪ್ರಣವವು, ಅಂತಹ ಅಪೌರುಷೇಯ ವೇದವಹಾಗೆ ಆದ್ಯವೆಂಬ ಭಾವವು. ವೇದಾದಿಯಲ್ಲೂ ವೇದದ ಅಂತ್ಯದಲ್ಲೂ ಪ್ರಣವೋಚ್ಚಾರಣೆಯು ಆವಶ್ಯಕವೆಂದು ತುಂಬಾ ಪ್ರಸಿದ್ಧರಾದ ಮನುವೇ "ಬ್ರಹ್ಮಣಃ ಪ್ರಣವಂ ಕುರ್ಯಾ ದಾದಾವನ್ತೇಚ ಸರ್ವದಾ" ಎಂದು ಹೇಳಿರುತ್ತಾರೆ. ಹೀಗೆ ಈ ವಿಧಿಯನ್ನನುಸರಿಸದಿದ್ದರೆ ವಿಶೇಷ ಪ್ರತ್ಯವಾಯವೂ ಉಂಟೆಂದು ತಿಳಿಸಿರುತ್ತಾರೆ. ಹೀಗೆ ವೇದವನ್ನು ಚತುರ್ಮುಖ ಬ್ರಹ್ಮನು ಶ್ರೀ ಮಹಾವಿಷ್ಣು

## ಪ್ರಣವಸ್ಯ ಅಧಿಕಪ್ರಶಂಸಾ, ಆತ್ಮಸಮರ್ಪಣ ಪರತ್ವಾತ್.

ಇದು, (೧) "ಹವಿರ್ಗೃಹೀತ್ವಾತ್ಮರೂಪಂ ವಸುರಣ್ಯೇತಿ ಮನ್ತ್ರತಃ।
ಜುಹುಯಾ ತ್ಪ್ರಣವೇನಾಗ್ನಾ ವಚ್ಯುತಾಖ್ಯೇ ಸನಾತನೇ॥" ಎಜ್ಞಾರಪಡಿಯೇ

ವಿಂದ ಆದಿಯಲ್ಲಿ ಅಧಿಕರಿಸುವಾಗಲೂ "ಹರಿಃ ಓಂ" ಎಂದೇ ಉಪದೇಶವಾದು ದರಿಂದ, ಪರತತ್ವವು ಹರಿಯೇ ವಿನಾ, ಬ್ರಹ್ಮ ರುದ್ರೇಂದ್ರಾದಿಗಳಲ್ಲವೆಂಬುದನ್ನು ನಿಸ್ಸಂಶಯವಾಗಿ ಗ್ರಹಿಸತಕ್ಕದ್ದಾಗಿರುತ್ತದೆ. ಹರಿಃ ಓಂ ಎಂದು ಹೇಳಿಯೇ ವೇದಾಧ್ಯಯನ ಮಾಡತಕ್ಕದ್ದೆಂದು "ಓ ಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ" ಎಂಬ "ಓಂಕಾರ ಪ್ರಭವಾವೇದಾಃ" ಎಂಬ, "ಯದ್ವೇದಾದೌ ಸ್ವರಃ ಪ್ರೋಕ್ತೋ ವೇದಾನ್ತೇ ಚ ಪ್ರತಿಷ್ಠಿತಃ" ಎಂಬ, "ಓಮಿತಿ ಸಾಮಾನಿಗಾಯನ್ತಿ" ಎಂಬ, "ಓ ಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ" ಎಂಬ ಪ್ರಮಾಣಗಳು ಬೋಧಿಸುತ್ತವೆ. ಹೀಗೆ ಪ್ರಣವಾರ್ಥಜ್ಞಾನವು ಪ್ರಶಂಸಿಸಲ್ಪಟ್ಟು, ಅಂತವನನ್ನು ವೇದವಿತ್ ಎಂದು ಈ ಮನುವಾಕ್ಯವು ಕೊಂಡಾಡಿರುತ್ತದೆ. ಹಾಗೆ ಕೊಂಡಾಡಲು, ಈ ಪ್ರಣವಕ್ಕೆ "ಏತದೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್" ಎಂದು ಹೇಳಿರುವಹಾಗೆ ಇದನ್ನು ಅಧಿಕರಿಸುವ ಅಧಿಕಾರಿಗೆ ಸರ್ವಾಭೀಷ್ಟ ಸಾಧನತ್ವ ಉಂಟೆಂಬುದರಿಂದ, ಹೀಗೆ ಪ್ರಶಂಸೆಯು ಎಂಬ ಭಾವವು. ಯತ್ರ ತ್ರಯೀ ಪ್ರತಿಷ್ಠಿತಾ ಎಂಬುದಕ್ಕೆ ಪ್ರಮಾಣವು ಯಾವುದೆಂದರೆ "ಅಕಾರಾತ್ಮಾ ಹಿ ಋಗ್ವೇದ ಉಕಾರಾತ್ಮಾ ಯಜುಶ್ಶ್ರುತಿಃ। ಸಾಮವೇದೋ ಮಕಾರಾತ್ಮಾ ಅನುಸ್ವಾರೋಽಹ್ಯಥರ್ವಣಃ, ಹೀಗೆ ನಾಲ್ಕು ವೇದಗಳೂ ಅಡಗಿವೆ ಎಂಬ ಪ್ರಮಾಣವಿದ್ದರೂ, ಮೂರುಮಾತ್ರ ಹೇಳಲ್ಪಡಲು ಕಾರಣವೇನೆಂದರೆ, ಅವುಗಳಲ್ಲಿ ಋಗ್ಯಜುಸ್ಸಾಮವೇದಗಳೇ ಮುಖ್ಯವಾಗಿ ತ್ರಯೀ ಶಬ್ದದಿಂದ ವೇದವು ಹೇಳಲ್ಪಟ್ಟಿರುವದರಿಂದ ಹಾಗೆ ಪ್ರಯೋಗವು. ಪ್ರಣವದ ಪ್ರಶಂಸೆಯು ಮುಖ್ಯವಾಗಿ ಆತ್ಮಸಮರ್ಪಣ ಪರವಾದುದರಿಂದ ಎನ್ನುತ್ತಾರೆ. ಪ್ರಣವದ ಪ್ರಶಂಸೆಯು ಮುಖ್ಯವಾಗಿ ಆತ್ಮಸಮರ್ಪಣ ಪರವಾದುದರಿಂದ.

ಇದು - ಈ ಪ್ರಣವವು, (೧) **ಆತ್ಮರೂಪಂ** - ತನ್ನ ಆತ್ಮರೂಪವಾದ, **ಹವಿಃ** - ಹವಿಸ್ಸನ್ನು, **ಗೃಹೀತ್ವಾ** - ತೆಗೆದುಕೊಂಡು, **ಸನಾತನೇ** - ಅನಾದಿಯಾಗಿರುವ, **ಅಚ್ಯುತಾಖ್ಯೇ ಅಗ್ನೌ** - ಅಚ್ಯುತನೆಂಬ ಅಗ್ನಿಯಲ್ಲಿ, **ವಸುರಣ್ಯೇತಿ ಮನ್ತ್ರತಃ**-"ವಸೋರಣ್ಯೋ ವಿಭೂರಸಿ" ಎಂಬ ತೈತ್ತಿರೀಯ ಮನ್ತ್ರದ ಮೂಲಕವಾಗಿ, ಎಂದರೆ ಅದನ್ನು ಪಠಿಸುತ್ತಾ, **ಜುಹುಯಾತ್** - ಹೋಮಮಾಡತಕ್ಕದ್ದು. ಈ ಜೀವಾತ್ಮನೂ ಪರಮಾತ್ಮನ ಸ್ವತ್ತಾದುದರಿಂದ ಆತನ ಸ್ವತ್ತನ್ನು ಆತನೇ ರಕ್ಷಿಸಿಕೊಳ್ಳತಕ್ಕದ್ದೆಂದು ಆತನಲ್ಲೇ ಸಮರ್ಪಿಸತಕ್ಕದ್ದು, ವಸೋರಣ್ಯೋ

ವಿಭೂರಸಿ ಎಂಬ ಮನ್ತ್ರವನ್ನು ಉಚ್ಚರಿಸುತ್ತಾ ಸಮರ್ಪಿಸತಕ್ಕದ್ದೆಂಬ ಭಾವವು. "ವಸುರಣ್ಯ" ಎಂಬ ಮನ್ತ್ರವು ಯಾವುದೆಂದರೆ.—"ವಸುರಣ್ಯೋ ವಿಭೂರಸಿ । ಪ್ರಾಣೇ ತ್ವಮಸಿ ಸಂಧಾತಾ । ಬ್ರಹ್ಮನ್ ತ್ವಮಸಿ ವಿಶ್ವಸೃಕ್ । ತೇಜೋದಾ ಸ್ತ್ವ ಮಸ್ಯಗ್ನೇರ್ವರ್ಚೋದಾಸ್ತ್ವಮಸಿ ಸೂರ್ಯಸ್ಯ ದ್ಯುಮ್ನೋದಾ ಸ್ತ್ವಮಸಿ ಚನ್ದ್ರಮಸ ಉಪಯಾಮ ಗೃಹೀತೋಸಿ ಬ್ರಹ್ಮಣೇ ತ್ವಾಮಹಸ ಓ ಮಿತ್ಯಾತ್ಮಾನಂ ಯುಂಜೀತ । ಏತದ್ವೈ ಮಹೋಪನಿಷದಂ ದೇವಾನಾಂ ಗುಹ್ಯಂ ಯ ಏವಂ ವೇದ ಬ್ರಹ್ಮಣೋ ಮಹಿಮಾನ ಮಾಪ್ನೋತಿ ತಸ್ಮಾದ್ಬ್ರಹ್ಮಣೋ ಮಹಿಮಾನ ಮಿತ್ಯುಪನಿಷತ್" ಎಂಬದು ಮನ್ತ್ರವು, (ತೈ. ನಾರಾ. ೪. ೫೧.) ಇದು ನ್ಯಾಸವಿದ್ಯೆಯಲ್ಲಿ ಪ್ರಪದನವನ್ನನುಷ್ಠಿಸುವಾಗ ಹೇಳುವ ಮನ್ತ್ರಗಳಲ್ಲಿ ಒಂದು ; ದ್ವಯ ಮನ್ತ್ರದ ಹಾಗೆ ಎಂಬ ತಾತ್ಪರ್ಯವು. ಇಲ್ಲಿ ವಸುರಣ್ಯವೆಂದರೆ ವಸುಪ್ರಾಪ್ಯವು,ವಸು ಶಬ್ದದಿಂದ ತೋರಿಬರುವ ಸಮಸ್ತ ದೇವತೆಗಳಿಗೂ ಉಪಾಸ್ಯವು, ಪ್ರಾಪ್ಯವು, ನೀನು ಸರ್ವವನ್ನು ವ್ಯಾಪಿಸಿರುತ್ತೀಯೇ, ಪ್ರಾಣಶಬ್ದದಿಂದ ಹೇಳಲ್ಪಟ್ಟ ಕಾರ್ಯಕಾರಣ ಸಂಘಾತವನ್ನು ಸೇರಿಸುವವನು, ನೀನು ವಿಶ್ವವನ್ನು ಸೃಷ್ಟಿಸುವವನು ; ಅದಕ್ಕೆ ಕಾನ್ತಿಯನ್ನುಂಟುಮಾಡುವವನು, ಕಾನ್ತಿಯನ್ನು ಕೊಡುವವನು, ನಿನ್ನನ್ನು ಶರಣವನ್ನು ಹೊಂದೋಣ; ಬಹುಕಾಲಕ್ಕೆ ನೀನು ಸಿಕ್ಕಿರುವೆ ; ಯಾರ ಪ್ರಯೋಜನಕ್ಕಾಗಿ ಎಂದರೆ ಪರಬ್ರಹ್ಮವಾದ ನಿನಗಾಗಿಯೇ ಎಂದರೆ ನಿನ್ನಪ್ರಾಪ್ತಿಯು ನಿನಗೇ ಭೋಗ್ಯವು ಎಂಬ ಭಾವವು. ಹೀಗೆ ಆತ್ಮಾವನ್ನು ಪ್ರಣವವನ್ನುಚ್ಚರಿಸುತ್ತಾ,ಸ್ವಾಮಿಯಲ್ಲಿ ಸೇರಿಸತಕ್ಕದ್ದು;ಇದೇ ಮಹತ್ತಾದ ಉಪನಿಷತ್ತುಗಳಿಂದ ಪ್ರತಿಪಾದಿತವಾದುದು,ದೇವತೆಗಳಿಗೂಕೂಡ ರಹಸ್ಯವಾಗಿರುವ ವಿಷಯವು ; ಹೀಗೆ ತಿಳಿದು ಆತ್ಮ ಸಮರ್ಪಣವನ್ನು ಮಾಡುವವನು ಪರಮಾತ್ಮನಿಗೆ ಸಮನಾಗಿ ಆತನ ಸಾಯುಜ್ಯವನ್ನು ಹೊಂದುವನು ಎಂಬುದು ಮನ್ತ್ರದ ತಾತ್ಪರ್ಯವು" ಎಙ್ಗಿರಪಡಿಯೇ - ಎಂದು ಹೇಳಿರುವಹಾಗೆ, ನ್ಯಾಸವಿದ್ಯೆಯಿಲ್-ಭರನ್ಯಾಸವಿದ್ಯೆಯಲ್ಲಿ, ಸ್ವತನ್ತ್ರ ಮಾಯ್-ಇನ್ನು ಯಾವ ಮನ್ತ್ರಕ್ಕೂ ಸೇರದೆ ಸ್ವತಂತ್ರವಾಗಿ, ಆತ್ಮಸಮರ್ಪಣ ಪರಮಾಯಿರುಕ್ಕುಮ್ - ಪ್ರಪದನಶಾಸ್ತ್ರದಲ್ಲಿ ಹೇಳಲ್ಪಟ್ಟ ಆಜ್ಞೆಯಾದ ಆತ್ಮಾವನ್ನು ಸ್ವಾಮಿಯ ಪಾದಾರವಿಂದದಲ್ಲಿ ಸಮರ್ಪಿಸುವದನ್ನು ಬೋಧಿಸುವಂತಾದ್ದಾಗಿರುತ್ತದೆ ; ಏಕೆಂದರೆ ಮನ್ತ್ರದಲ್ಲಿ ಓಮಿತ್ಯಾತ್ಮಾನಂಯುಂಜೀತ ಎಂದು ಆತ್ಮಸಮರ್ಪಣೆಯನ್ನು ವಿಧಿಸಿರುವದರಿಂದ.

ಸ್ವತಂತ್ರ ಪ್ರಣವಾಭಿಪ್ರಾಯವು ಆತ್ಮಸಮರ್ಪಣೆಯಾದ ಪಕ್ಷದಲ್ಲಿ ಮೂಲಮನ್ತ್ರಾದಿ ವ್ಯಾಪಕ ಮನ್ತ್ರಗಳಲ್ಲಿನ ಪ್ರಣವಾಭಿಪ್ರಾಯವು ಏನು ? ಎಂದರೆ ಈ ಸಂದರ್ಭದಲ್ಲೂ ಅಭಿಪ್ರಾಯವು ಸಮಾನವಾದುದೆಂದು ಮಹನೀಯರು ಭಾವಿಸುವರು. ಏಕೆಂದರೆ ಶೇಷತ್ವಾನುಸಂಧಾನವೇ ತನ್ನ ಸ್ವರೂಪಜ್ಞಾನಕ್ಕೆ ಮುಖ್ಯವಾದದರಿಂದ, ಅಂತಹ ಜ್ಞಾನವು ಈ ಆತ್ಮ ಸಮರ್ಪಣೆಯ ಮೂಲಕ ದೊರೆಯುವ

**ನ್ಯಾಸವಿದ್ಯೆಯಿಲ್ ಸ್ವತಂತ್ರಮಾಯ್. ಆತ್ಮಸಮರ್ಪಣಮಾಯಿರುಕ್ಕುಮ್. ಅಕ್ಕಟ್ಟಳೈಯಿಲೇ ಇಜ್ಞಮ್ ಸಮರ್ಪಣ ಪರಮಾಗವುಮ್ ಯೋಜಿಪ್ಪರ್‌ಗಳ್. ಇವ್ವಿಡತ್ತಿಲ್ ಸ್ವರೂಪಜ್ಞಾನಪ್ರಾಧಾನ್ಯತ್ತಾಲೇ ಶೇಷತ್ವಾನುಸಂಧಾನ ಮಾತ್ರಮ್ ಉಪಜೀವ್ಯಮೆನ್ನುಮ್ ಯೋಜಿಪ್ಪರ್**

---

ದರಿಂದ ಎಂದು ಅಭಿಪ್ರಾಯಪಡುವರು ಎಂದು ತಿಳಿಸುತ್ತಾರೆ. ಸ್ವತಂತ್ರಸಂದರ್ಭದಲ್ಲಿ ವಿಧಿಯೇ ಇರುವುದರಿಂದ ಚತುರ್ಥಿಯ ಅರ್ಥವು ತೋರಿಬರುತ್ತದೆ. ಇಲ್ಲಿಯಾದರೋ ಲುಪ್ತ ಚತುರ್ಥಿಯಿಂದ ಶೇಷತ್ವಾನುಸಂಧಾನರೂಪಸ್ವರೂಪಜ್ಞಾನವು ತೋರಿಬರುವದರಿಂದ ಆತ್ಮಸಮರ್ಪಣ ಪರವೆಂದು ಕೆಲವರು ಅಭಿಪ್ರಾಯಪಡುವರೆಂದು ಹೇಳುತ್ತಾರೆ.—**ಅಕ್ಕಟ್ಟಳೈಯಿಲೇ** - ಅದೇ ನ್ಯಾಯದಿಂದ, ಎಂದರೆ ಓಮಿತ್ಯಾತ್ಮಾನಂ ಯುಂಜೀತ ಎಂಬಲ್ಲಿ ಪರಮ ಪುರುಷನಿಗೆ ಭೋಗ್ಯವಾದುದೆಂದು ಆತನಿಗಾಗಿಯೇ ಸಮರ್ಪಿಸತಕ್ಕದ್ದು ಎಂಬ ಆತ್ಮಸಮರ್ಪಣೆಯು ಏರ್ಪಟ್ಟಿತೋ, ಅದೇ ನ್ಯಾಯದಿಂದಲೇ, **ಇಜ್ಞಮ್** - ಈ ಮೂಲಮನ್ತ್ರಕ್ಕೆ ಸೇರಿದ ಪ್ರಣವದಲ್ಲೂ ತಾದರ್ಥ್ಯ ಚತುರ್ಥಿಯು ಅಕಾರದಲ್ಲಿ ಲುಪ್ತವಾಗಿರುವದರಿಂದ ಇಲ್ಲೂ ಎಂಬ ಭಾವವು, **ಸಮರ್ಪಣಪರಮ್** - ಆತ್ಮ ಸಮರ್ಪಣ ಪರವೆಂದೇ, **ಯೋಜಿಪ್ಪರ್‌ಗಳ್** – ಯೋಜನೆಮಾಡಿ ಹೇಳುವರು, ಎಂದರೆ ಅಭಿಪ್ರಾಯ ಪಡುವರೆಂಬ ಭಾವವು; **ಇವ್ವಿಡತ್ತಿಲ್** - ಈ ಮೂಲ ಮನ್ತ್ರದಲ್ಲಿ, ಪ್ರಕೃತವಾದ ಪ್ರಣವದಲ್ಲಿ ಎಂಬ ಭಾವವು, **ಸ್ವರೂಪಜ್ಞಾನಪ್ರಾಧಾನ್ಯತ್ತಾಲೇ**-ತನ್ನ ಸ್ವರೂಪವು ಯಾವುದೆಂದರೆ, ತಾನು ಪರಮಾತ್ಮನಿಗೆ ಶೇಷಭೂತನೆಂಬ ಅನುಸಂಧಾನದ ಪ್ರಾಧಾನ್ಯದಿಂದ, **ಈ ಶೇಷತ್ವಾನುಸಂಧಾನಮಾತ್ರಮ್** - ಈ ಶೇಷತ್ವಾನುಸಂಧಾನವೇ, **ಉಪಜೀವ್ಯಮೆನ್ನುಮ್** - ರಕ್ಷಣೆಗೆ ಯೋಗ್ಯತೆಯನ್ನುಂಟುಮಾಡುತ್ತದೆಂದು, **ಯೋಜಿಪ್ಪರ್‌ಗಳ್** - ಭಾವಿಸುವರು; ಹೀಗೆ ಹೇಳಿದುದರಿಂದ ಇವರುಗಳ ಅಭಿಪ್ರಾಯವು ಸಾಕ್ಷಾತ್ತಾಗಿ ಸಮರ್ಪಣಪರವೇ ಅಲ್ಲದಿದ್ದರೂ, ರಕ್ಷಣೆಗೆ ಶೇಷತ್ವಾನುಸಂಧಾನವು ಮುಖ್ಯವಾದುದರಿಂದ ಶೇಷತ್ವಾನು ಸಂಧಾನವು ಈ ಅಜ್ಞಪ್ರಣವದಲ್ಲೂ ಲುಪ್ತ ಚತುರ್ಥಿಯಿಂದ ತೋರಿಬರುತ್ತದೆಂಬ ಭಾವವು; ಈ ಅಭಿಪ್ರಾಯವು ಶೇಷತ್ವಾನುಸಂಧಾನಮಾತ್ರಮ್ ಎಂಬಲ್ಲಿರುವ ಮಾತ್ರಮ್ ಎಂಬ ಶಬ್ದದಿಂದ ತೋರಿಬರುತ್ತದೆ; ಮಾತ್ರ ಪದವು ಸಮರ್ಪಣ ಪರವನ್ನು ವ್ಯವಚ್ಛೇದಿಸುತ್ತದೆ; ಈ ಮೂಲಮನ್ತ್ರವು ಭರಸಮರ್ಪಣ ಮಂತ್ರವಲ್ಲದೆ ದ್ವಯಮನ್ತ್ರ ಮೂಲಕ ಭರಸಮರ್ಪಣವಾದುದರಿಂದ, ಪ್ರಧಾನವಾದುದು ಈ ಪ್ರಣವದಲ್ಲಿ ಶೇಷತ್ವಾನು ಸಂಧಾನವಾದುದರಿಂದ, ಉಪಜೀವ್ಯವೆಂಬದಾಗಿ ಭಾವಿಸುವರು ಎಂಬ ತಾತ್ಪರ್ಯವು. ಉಪಜೀವ್ಯವೆಂದರೆ ಭಗವಂತನಿಂದ ರಕ್ಷಿಸಲ್ಪಡಬೇಕಾದರೆ ಮುಖ್ಯವಾಗಿ ನಾವು ಭರನ್ಯಾಸಕ್ಕೆ ಪೂರ್ವಭಾವಿಯಾಗಿ, ಹೊಂದತಕ್ಕದ್ದು ಎಂಬ

**ಗಳ್. ಅಪ್ಪೋದು ಇಶ್ಶೇಷತ್ವಜ್ಞಾನಾನುಸಂಧಾನಮ್ ಅಧಿಕಾರತ್ತಿಲೇ ಸೇರುಮ್.** (೧) **ಕ್ಷೇತ್ರಜ್ಞಸ್ಯೇಶ್ವರಜ್ಞಾನಾದ್ವಿಶುದ್ಧಿಃ ಪರಮಾಮತಾ"** ಎನ್ನದು

---

ಭಾವವು. ಆದರೆ ಇವರುಗಳ ಅಭಿಪ್ರಾಯವು, ಈ ಶೇಷತ್ವಾನುಸಂಧಾನವೇ ಸಾಕು, ಈ "ಮಾತ್ರ" ಶಬ್ದದಿಂದ ಭರಸಮರ್ಪಣೆಯೇ ಆವಶ್ಯಕವಲ್ಲವೆಂದು ವ್ಯವಚ್ಛೇದವು ಎಂಬ ಅಭಿಪ್ರಾಯವಾದರೆ, ಸ್ವಾಮಿ ದೇಶಿಕರವರು, ಅದನ್ನು ಹಿಂದೆಯೇ ನಿರಾಕರಿಸಿದುದೂ ಅಲ್ಲದೆ ಮುಂದೆ ಚರಮ ಶ್ಲೋಕಾಧಿಕಾರದಲ್ಲೂ ನಿರಸನಮಾಡುತ್ತಾರೆ. ಭರಸಮರ್ಪಣರೂಪವಾದ ಉಪಾಯಾನುಷ್ಠಾನವು ಶಾಸ್ತ್ರರೀತ್ಯಾ ಅವಶ್ಯಕವು; ಇದನ್ನೇ ಮುಂದೆಯೇ ವ್ಯಕ್ತಪಡಿಸುತ್ತಾರೆ. ಈ ಶೇಷತ್ವ ಜ್ಞಾನವು ಪ್ರಪದನಾನುಷ್ಠಾನಕ್ಕೆ ಪ್ರಬಲಹೇತುವು ಎಂಬುದು ಉಪಜೀವ್ಯವೆಂಬುದರ ತಾತ್ಪರ್ಯವು.

ಅಖಂಡ ಪ್ರಣವವು ಓಮಿತ್ಯಾತ್ಮಾನಂ ಯುಂಜೀತ ಇತ್ಯಾದಿ ಸ್ಥಳದಲ್ಲಿ ಆತ್ಮಸಮರ್ಪಣ ಪರವೆಂದು ಹೇಳಿದರು. ಹಾಗಲ್ಲದೆ ಮನ್ತ್ರಗಳಿಗೆ ಅವಯವವಾದಾಗ ಕೆಲವರು ಅಲ್ಲಿಯೂ ಸಮರ್ಪಣವೆಂದು ಭಾವಿಸುವರು; ಇನ್ನು ಕೆಲವರು ಶೇಷತ್ವಾನುಸಂಧಾನಪರವೆಂದು ಹೇಳುವರು; ಇಂತಹ ಭಾವನೆಯಿಂದುಂಟಾಗುವ ಪ್ರಯೋಜನವೇನು ? ಎಂದರೆ ಆತ್ಮಸಮರ್ಪಣಕ್ಕೆ ಅಧಿಕಾರವನ್ನುಂಟು ಮಾಡುವದೇ ಪ್ರಯೋಜನವೆಂದು ಮುಂದಿನ ವಾಕ್ಯದಿಂದ ಹೇಳಿ, ಅದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ.—**ಅಪ್ಪೋದು** - ಆ ಸಂದರ್ಭದಲ್ಲಿ ಎಂದರೆ ಅಂತಹ ಶೇಷತ್ವಾನುಸಂಧಾನ ಉಂಟಾದಾಗ, **ಇಶ್ಶೇಷತ್ವಜ್ಞಾನಾನು ಸಂಧಾನವು, ಅಧಿಕಾರತ್ತಿಲೇ ಸೇರುಮ್** - ಅಧಿಕಾರವನ್ನುಂಟುಮಾಡುವದಕ್ಕೆ ಅರ್ಹವಾಗುತ್ತದೆ, ಎಂದರೆ ಭರನ್ಯಾಸಕ್ಕೆ ಅರ್ಹತೆಯನ್ನು ಸಂಪಾದಿಸಿ ಕೊಡುತ್ತದೆಂಬ ಭಾವವು.

ಹೀಗೆ ಈ ಶೇಷತ್ವಾನು ಸಂಧಾನವು ಭರನ್ಯಾಸಾರ್ಹತೆಯನ್ನುಂಟುಮಾಡುತ್ತದೆಂಬುದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ.—**ಕ್ಷೇತ್ರಜ್ಞಸ್ಯ**-ಈ ಶರೀರವನ್ನು ಧರಿಸಿರುವ ಮನುಷ್ಯನಿಗೆ, **ಈಶ್ವರಜ್ಞಾನಾತ್** - (೧) ಈಶ್ವರನಿಗೆ ತಾನು ಶೇಷಭೂತನು ಈಶ್ವರನು ಶೇಷಿಯು ಎಂಬ ಜ್ಞಾನದಿಂದ, ಅಥವಾ (೨) ಈಶ್ವರನೇ ಉಪಾಯನು ಎಂಬ ಜ್ಞಾನದಿಂದ, ಹೀಗೆ ಎರಡು ವಿಧವಾಗಿ ಅರ್ಥವನ್ನು ಹೇಳಬಹುದು, **ಪರಮಾ** - ಸರ್ವೋತ್ಕೃಷ್ಟವಾದ, **ವಿಶುದ್ಧಿಃ** - (೧) ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪನಿವೃತ್ತಿಯುಂಟಾಗುವದರ ಮೂಲಕ ಪರಿಶುದ್ಧತೆಯಾಗಲಿ, ಅಥವಾ (೨) ಈ ಪ್ರಕೃತಿ ಶರೀರವು ತೊಲಗಿ ಹೋಗುವದರ ಮೂಲಕ ಶುದ್ಧತೆಯಾಗಲಿ ಉಂಟಾಗುತ್ತದೆಂಬುದು, **ಮತಾ** - ನನ್ನ ಅಭಿಪ್ರಾಯವು. ಹೀಗೆ ಈ ಪ್ರಮಾಣಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳಬಹುದು,

---

(೧) ಯಾಜ್ಞವಲ್ಕ್ಯಸ್ಮೃತಿ ೩. ೩೪.

**ಶೇಷಿತ್ವಜ್ಞಾನಮಾತ್ರ ಪರಮಾನಪ್ಯೋದು, ಉಪಾಯಾನರ್ಹತಾ ನಿವೃತ್ತಿ ಪರಮ್; ಉಪಾಯಜ್ಞಾನರೂಪಜ್ಞಾನಾನ್ತರತ್ವೇ ವಿವಕ್ಷಿಕ್ಕನ್ಪೋದು ಮೋಕ್ಷಪರಮ್.**

ಆದುದರಿಂದ ಆ ಎರಡು ಅಭಿಪ್ರಾಯಗಳನ್ನೂ ಉಪದೇಶಿಸುತ್ತಾರೆ—" ಎನ್ನದ - ಎಂದು ಹೇಳಿರುವದು, ಮೊದಲಿನ ಯೋಜನೆಯು ಅರ್ಥವನ್ನು ಮೊದಲು ತಿಳಿಸುತ್ತಾರೆ—**ಉಪಾಯಾನರ್ಹತಾ ನಿವೃತ್ತಿ ಪರಮ್** - ಉಪಾಯಾನುಷ್ಠಾನಕ್ಕೆ ಅಧಿಕಾರವಿಲ್ಲವೆಂಬುದರ ನಿವೃತ್ತಿಯನ್ನು ಬೋಧಿಸುತ್ತದೆ. ಉಪಾಯಾಧಿಕಾರಕ್ಕೆ ಶಾರೀರಕ ಸೂತ್ರದಲ್ಲಿ ಹೇಳಿರುವದು ಮುಖ್ಯವಾಗಿ (೧) ಅರ್ಥಿತ್ವವೂ (೨) ಸಾಮರ್ಥ್ಯವೂ; ಇವೆರಡರಲ್ಲಿ ಸಾಮರ್ಥ್ಯರೂಪ ಅಧಿಕಾರಾಂಗವೂ ಭರನ್ಯಾಸವಾದುದರಿಂದ ಎಲ್ಲರಲ್ಲೂ ಉಂಟು; ಅರ್ಥಿತ್ವಮಾತ್ರ ಎಲ್ಲರಲ್ಲೂ ಇಲ್ಲದುದರಿಂದ, ಎಲ್ಲರೂ ಅನುಷ್ಠಿಸುವದಿಲ್ಲವು; ತಾನು ಶೇಷನು, ಪರಮಾತ್ಮನು ಶೇಷಿಯು ಎಂಬ ತನ್ನ ಮತ್ತು ಈಶ್ವರನ ಸ್ವರೂಪ ಜ್ಞಾನದ ಅನುಸಂಧಾನದಿಂದ ಅರ್ಥಿತ್ವ ಉಂಟಾಗುತ್ತದೆಂಬ ಭಾವವು. ಇನ್ನೊಂದು ಉಪಾಯವಾದ ಉಪಾಸನಕ್ಕೆ ಯಾದರೋ, ಅರ್ಥಿತ್ವವೂ ಸಾಮರ್ಥ್ಯವೂ ಎರಡೂ ಲಭಿಸುವದು ಕಷ್ಟವು. ಕರ್ಮಯೋಗಾದಿ ಅನುಷ್ಠಾನಗಳಲ್ಲಿ ಈ ಶೇಷತ್ವ ಜ್ಞಾನವೂ ಆವಶ್ಯಕವಾದುದರಿಂದ, ಆದರಿಂದ ಉಪಾಯಾರಂಭ ವಿರೋಧಿ ಪಾಪಗಳು ತೊಲಗುವದರ ಮೂಲಕ ಅರ್ಥಿತ್ವ ಉಂಟಾಗುತ್ತದೆ. ಹಾಗೆಯೇ ಈ ಉಪನಯನ ಸಂಸ್ಕಾರ ತನ್ಮೂಲಕ ವೇದಾಧ್ಯಯನಾದಿಗಳು ಒದಗಿ, ಕರ್ಮಯೋಗದ ಮೂಲಕ ಸಾಮರ್ಥ್ಯವೂ ಪ್ರಾಪ್ತವಾಗುವದರಿಂದ ಹೀಗೆ ಅರ್ಥಿತ್ವ ಉಂಟಾಗುತ್ತದೆ. ಹಾಗೆಯೇ ಈ ಕರ್ಮಯೋಗಾದಿ ಅನುಷ್ಠಾನ ಸಾಮರ್ಥ್ಯವೂ ಪ್ರಾಪ್ತವಾಗುವದರಿಂದ, ಹೀಗೆ ಅರ್ಥಿತ್ವ ಸಾಮರ್ಥ್ಯವೆರಡೂ ಲಭಿಸಿ, ಉಪಾಸನರೂಪೋಪಾಯಕ್ಕೆ ಅರ್ಹತೆ ಯುಂಟಾಗುತ್ತದೆ; ಇವನ್ನು ಪ್ರಾಸಙ್ಗಿಕವಾಗಿ ತಿಳಿಸಿರುವೆವು. ಮುಂದೆ ಮೇಲಿನ ಪ್ರಮಾಣಕ್ಕೆ ಎರಡನೆಯ ಯೋಜನೆಯ ಪ್ರಕಾರವಾಗಿ ಅರ್ಥವಾದರೆ ಆಗ ಏನು ಅಭಿಪ್ರಾಯವೆಂಬುವನ್ನು ತಿಳಿಸುತ್ತಾರೆ—**ಉಪಾಯರೂಪ ಜ್ಞಾನಾನ್ತರತ್ವೇ ವಿವಕ್ಷಿಕ್ಕಿಂ ಪೋದು** – ಭಗವಂತನೇ ತನಗೆ ಉಪಾಯ ಭೂತನೆಂಬ ಶೇಷಶೇಷಿತ್ವ ಜ್ಞಾನಕ್ಕಿಂತ ಬೇರೆಯಾದ ಜ್ಞಾನವನ್ನು ಬೋಧಿಸುತ್ತದೆಂದು ಅನ್ವಯಿಸಬೇಕೆಂಬ ಆಶೆ ಇದ್ದರೆ, ವಿಶುದ್ಧಿ ಶಬ್ದವು ಮೋಕ್ಷವನ್ನು ಬೋಧಿಸುತ್ತದೆಂಬ ಭಾವವು. ಆಗ ಮೇಲಿನ ಪ್ರಮಾಣಕ್ಕೆ ಅರ್ಥವು ಹೇಗೆಂದರೆ - ಈಶ್ವರ ಜ್ಞಾನದಿಂದ ಯಾವಾಗ ಕ್ಷೇತ್ರಜ್ಞನಿಗೆ ನ್ಯಾಸೋಪಾಸನೆಗಳಾದ ಎರಡು ಉಪಾಯಗಳಲ್ಲಿ ಯಾವುದಾದರೂ ಒಂದರ ಮೂಲಕ ಪರಮಾತ್ಮನೇ ತನಗೆ ಸಿದ್ಧೋಪಾಯನೆಂಬ ಜ್ಞಾನ ಉಂಟಾಯಿತೋ, ಆಗ ಆತನಿಗೆ ಮೋಕ್ಷವೇ ಲಭಿಸಿತು ಎಂದು ಭಾವಿಸತಕ್ಕದ್ದು;

ಇಪ್ಪ್ರಣವಾರ್ಥಾನುಸಂಧಾನಕ್ರಮತ್ತೈ, (೨) ಈದೃಶಃ ಪರಮಾತ್ಮಾ ಯಂ ಪ್ರತ್ಯಗಾತ್ಮಾ ತಥೇ ದೃಶಃ । ತತ್ಸಂಬಂಧಾನುಸಂಧಾನ ಮಿತಿ ಯೋಗಃ ಪ್ರಕೀರ್ತಿತಃ" ಎನ್ರು ಶಾಣ್ಡಿಲ್ಯಭಗವಾನ್ ಅರುಳಿಚ್ಚೆಯ್‌ದಾನ್.

ಅಂತವನಿಗೆ ಮೋಕ್ಷವು ತುಂಬಾ ಸನ್ನಿಹಿತವೆಂಬ ತಾತ್ಪರ್ಯವು; ಏಕೆಂದರೆ ಸಿದ್ಧೋಪಾಯ ಸಾಧ್ಯೋಪಾಯಗಳ ಎರಡರ ಸಿದ್ಧಿಯು ಲಭಿಸುವದರಿಂದ ಎಂಬುದು ಅಭಿಪ್ರಾಯವು.

ಹೀಗೆ ಮೇಲಿನ ಪ್ರಮಾಣಕ್ಕೆ ಈಶ್ವರ ಜ್ಞಾನಾತ್ ಎಂಬುದಕ್ಕೆ ತಾನು ಶೇಷನೆಂಬ ಜ್ಞಾನದಿಂದ ಎಂಬ ಯೋಜನೆಯಲ್ಲೂ, ಮತ್ತು ಈಶ್ವರ ತತ್ವಜ್ಞಾನವೆಂದರೆ ಉಪಾಯ ಜ್ಞಾನದಿಂದ ಎಂಬ ಯೋಜನೆಯಲ್ಲೂ, ಉಂಟಾಗುವ ಅಭಿಪ್ರಾಯಗಳನ್ನು ವಿಶದೀಕರಿಸಿದರು. ಮುಂದೆ ಪ್ರಣವಾರ್ಥಾನುಸಂಧಾನಕ್ಕೆ ಪ್ರಮಾಣ ವಚನವನ್ನು ಉದಾಹರಿಸುತ್ತಾರೆ.—ಇಪ್ಪ್ರಣವಾರ್ಥಾನುಸಂಧಾನದ ಕ್ರಮವನ್ನು, (೨) "ಅಯಂ ಪರಮಾತ್ಮಾ - ಈ ಪರಮಾತ್ಮನು, ಈದೃಶಃ - ಇಂತಹ ಸ್ವರೂಪ ಸ್ವಭಾವಯುಕ್ತನು, ಎಂದರೆ ಆತನೇ ಸರ್ವರಿಗೂ ಶೇಷಿಯು, ರಕ್ಷಕನು, ಪಿತಾ, ಶರಣ್ಯನು, ಕಾರುಣ್ಯವಾತ್ಸಲ್ಯಾದಿ ಮಹೋದಧಿಯು, ತಥಾ – ಹಾಗೆಯೇ ಪ್ರತ್ಯಗಾತ್ಮಾ - ಜೀವಾತ್ಮನಾದ ತಾನು, ಈದೃಶಃ - ಶೇಷನು, ರಕ್ಷ್ಯನು, ಪುತ್ರನು, ಅನನ್ಯಶರಣನು ದಯನೀಯನು, ಹೀಗೆ ತತ್ಸಂಬಂಧಾನುಸಂಧಾನ - ಹೀಗೆ ತನಗೂ ಈಶ್ವರನಿಗೂ ಇರುವ ನವವಿಧ ಸಂಬಂಧಗಳನ್ನೂ ಅವುಗಳಲ್ಲಿ ಮುಖ್ಯವಾಗಿ ಶೇಷಿ ಶೇಷರೂಪ ಅನುಸಂಧಾನವೇ, ಯೋಗ ಇತಿ – ನ್ಯಾಸೋಪಾಸನ ರೂಪ ಉಪಾಯಕ್ಕೆ ಸಾಧನವೆಂದು, ಪ್ರಕೀರ್ತಿತಃ - ಹೊಗಳಲ್ಪಟ್ಟಿರುತ್ತದೆ, ಇತಿ ಶಬ್ದದಿಂದ ಅನುಸಂಧಾನವೇ ಉಪಾಯಕ್ಕೆ ಸಾಧನವೆಂಬ ಅರ್ಥವನ್ನು ಸೂಚಿಸುತ್ತದೆ. ಮುಖ್ಯವಾದ ಈ ಶೇಷಿ ಶೇಷರೂಪಾನುಸಂಧಾನವು ಎಲ್ಲಿ ತೋರಿಬರುತ್ತದೆ ಎಂದರೆ ಅ ಎಂಬಲ್ಲಿರುವ ಲುಪ್ತಚತುರ್ಥಿಯಿಂದ ತೋರಿಬರುತ್ತದ. ಅ ಎಂದರೆ ಆಯ ಎಂದಾಗುವದರಿಂದ ಮಕಾರ ವಾಚ್ಯನಾದ ಜೀವನು, ಅಕಾರವಾಚ್ಯನಾದ ವಿಷ್ಣುವಿಗೇನೇ ಶೇಷಭೂತನೆಂಬ ಅರ್ಥವಾಗುವದರಿಂದ ತೋರಿಬರುತ್ತದೆ. ಈಗ ಇಲ್ಲಿ ಹೇಳಿರುವದು ಸಖಂಡ ಪ್ರಣವ ವಿಷಯವಲ್ಲವು; ತ್ರ್ಯಕ್ಷರ ಯುಕ್ತವೆಂಬ ಪ್ರಣವವು ಇಲ್ಲಿ ಹೇಳಲ್ಪಟ್ಟಿತು. ನಮಃ ಎಂಬುದು ಸ್ಥೂಲ ಯೋಜನೆಯಿಂದ ಉಪಾಯ ಪರವೆಂಬುದು ವ್ಯಕ್ತವು.

ಮುಂದೆ ಇದೇ ಸಾಂಪ್ರದಾಯಾರ್ಥವು; ಮಹಾ ಪ್ರಾಜ್ಞರಾದ ಶ್ರೀ ಪರಾಶರ ಭಟ್ಟರವರೂ ಮೂರು ರಹಸ್ಯಗಳ ಅರ್ಥಗಳನ್ನು ಸಜ್ಗ್ರಹವಾಗಿ

(೨) ಶಾಂಡಿಲ್ಯ ಸಂಹಿತೆ. ೫. ೧೭.

ಇತ್ಯೈ (೩) "ಅಕಾರಾರ್ಥೋ ವಿಷ್ಣುರ್ಜಗದುದಯರಕ್ಷಾಪ್ರಳಯಕೃನ್ಮಕಾರಾರ್ಥೋ ಜೀವಸ್ತದುಪಕರಣಂ ವೈಷ್ಣವಮಿದಂ । ಉಕಾರೋಽನನ್ಯಾರ್ಹಂ ನಿಯಮಯತಿ ಸಂಬಂಧಮನಯೋಃ ತ್ರಯೀಸಾರಸ್ತ್ರ್ಯಾತ್ಮಾ ಪ್ರಣವ ಇಮಮರ್ಥಂ ಸಮದಿಶತ್" ಎನ್ರು ವಿವರಿತ್ತಾರ್‌ಗಳ್.

---

ಅಷ್ಟಶ್ಲೋಕಿಯಲ್ಲಿ ಹೇಳಿರುವಾಗ, ಪ್ರಣವಾರ್ಥವನ್ನು ಬೋಧಿಸುವ ಪ್ರಥಮ ಶ್ಲೋಕದಲ್ಲೂ ಹೀಗೆಯೇ ಉಪದೇಶಿಸಿರುತ್ತಾರೆಂದು ತಿಳಿಸುತ್ತಾರೆ. (೩) ಜಗತಾಂ - ಲೋಕಗಳ, ಉದಯ ರಕ್ಷಾ ಪ್ರಳಯಕೃತ್ - ಸೃಷ್ಟಿ, ರಕ್ಷಣೆ ಪ್ರಳಯಗಳನ್ನುಂಟುಮಾಡುವ, ವಿಷ್ಣುಃ - ಅಕಾರಾರ್ಥಃ - ಪ್ರಣವದ ಅಕಾರದಿಂದ ಹೇಳಲ್ಪಟ್ಟಿರುವವನು, ಇದಕ್ಕೆ ಪ್ರಮಾಣಗಳು,-"ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ" ಎಂಬ ಶ್ರುತಿಯೂ, ವಿಷ್ಣೋಸ್ಸಕಾಶಾದುದ್ಭೂತಂ ಜಗತ್ತತ್ರೈವ ಚ ಸ್ಥಿತಂ। ಸ್ಥಿತಿಸಂಯಮಕರ್ತಾಸೌ ಜಗತೋಸ್ಯಜಗಚ್ಚ ಸಃ"(ವಿ.ಪು.೧೯.) ವಿಷ್ಣು ಶಬ್ದವು, ಧಾತ್ವರ್ಥದಿಂದ ಜಗತ್ತನ್ನೆಲ್ಲಾ ವ್ಯಾಪಿಸಿರುವವನು "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬರ್ಥವನ್ನು ಆ ನಾಮವೇ ಬೋಧಿಸುತ್ತದೆ; ಹಾಗೆಯೇ "ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ" ಎಂಬ (ಪು. ಸೂ) ವಾಕ್ಯವೂ, ಮತ್ತು "ಸರ್ವತ್ರಾಸೌ ಸಮಸ್ತಂ ಚ ವಸತ್ಯತ್ರೇತಿ ವೈ ಯತಃ। ತತಸ್ಸ ವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ"ಇತ್ಯಾದಿ ಪ್ರಮಾಣಗಳು ಅನುಸಂಧೇಯಗಳು; ಅವ ಎಂಬ ಧಾತುವು ರಕ್ಷಣವೆಂಬರ್ಥವುಳ್ಳದಾದುದರಿಂದ ಜಗತ್ತನ್ನು ಸೃಷ್ಟಿಸಿ ರಕ್ಷಿಸುವ ವಿಷ್ಣುವೆಂದು ಅಕಾರಾರ್ಥವು. ಆತನು ಜಗತ್ಕಾರಣನೆಂಬುದನ್ನೂ "ಸಮಸ್ತಶಬ್ದಮೂಲತ್ವಾದಕಾರಸ್ಯ ಸ್ವಭಾವತಃ। ವಾಚ್ಯವಾಚಕಸಂಬಂಧಸ್ತಯೋರರ್ಥಾತ್ಪ್ರತೀಯತೇ" ಎಂಬ ಪ್ರಮಾಣದಿಂದಲೂ ಗ್ರಹಿಸಬಹುದು. ಮಕಾರಾರ್ಥೋ ಜೀವಃ - ನಿತ್ಯ ಮುಕ್ತ ಬದ್ಧ ತ್ರಿವಿಧ ಚೇತನವರ್ಗವೂ, ಮಕಾರಾರ್ಥಃ - ಮಕಾರದ ಅರ್ಥವು, "ಪಂಚ ವಿಂಶಗ್ಂ ಶೋಯಂ ಪುರುಷಃ" "ಪಂಚವಿಂಶಗ್ಂತ ಆತ್ಮಾಭವತಿ" "ಮಕಾರೋ ಜೀವವಾಚಕಃ"; ಮಕಾರದ ಧಾತುವು ಮನಜ್ಞಾನೇ ಎಂಬ ಜ್ಞಾನವನ್ನು ಬೋಧಿಸುವದರಿಂದ ಜ್ಞಾತಾವಾದ ಜೀವನು ಹೇಳಲ್ಪಟ್ಟನು; ವೈಷ್ಣವಂ - ವಿಷ್ಣುವಿಗೇನೇ ಸೇರಿದ, ಇದಂ - ಈ ಆತ್ಮವಸ್ತುವು, ತದುಪಕರಣಂ - ಆತನಿಗೇ ಭೋಗ್ಯವಾಗಿ ಶೇಷಭೂತವಾದ ವಸ್ತುವು; ಇದರಿಂದ ತ್ರಿವಿಧ ಚೇತನರಿಗೆ ಸೇರಿರುವ ಅಚೇತನವೂ ಕೂಡ ವಿಷ್ಣುವಿಗೆ ಶೇಷಭೂತವಾದುದು; ಇದು ಅಕಾರದ ಲುಪ್ತಚತುರ್ಥ್ಯರ್ಥದಿಂದಲೂ ಸಿದ್ಧವು. "ಪತಿಂ ವಿಶ್ವಸ್ಯಾತ್ಮೇ

---

(೩) ಅಷ್ಟಶ್ಲೋಕೀ. ೧.

ಶ್ವರಗ್‌ಂ" ಎಂಬ ಶ್ರುತಿ ಸಿದ್ಧವಾದುದು; "ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಂ" "ಆತ್ಮದಾಸ್ಯಂ ಹರೇ ಸ್ಸ್ವಾಮ್ಯಂ ಸ್ವಭಾವಂಚ ಸದಾ ಸ್ಮರ" "ದಾಸಭೂತಾ ಸ್ಸ್ವತ ಸರ್ವೇ ಹ್ಯಾತ್ಮಾನಃ ಪರಮಾತ್ಮನಃ । ನಾನ್ಯಥಾ ಲಕ್ಷಣಂ ತೇಷಾಂ ಬಂಧೇಮೋಕ್ಷೇ ಚ ವಿದ್ಯತೇ" ಎಂಬೀ ಪ್ರಮಾಣಗಳು ಅನುಸಂಧೇಯಗಳು. ಮುಂದೆ ಉಕಾರಾರ್ಥವನ್ನು ತಿಳಿಸುತ್ತಾರೆ.—ಉಕಾರವು, "ತದೇವಾಗ್ನಿ ಸ್ತದ್ವಾಯು ಸ್ತತ್ಸೂರ್ಯ ಸ್ತದುಚನ್ದ್ರಮಾಃ" ಎಂಬ ಪ್ರಮಾಣದಲ್ಲಿ ತದು ಎಂಬುದು ತದೇವ ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವ ಹಾಗೆ, ಅವಧಾರಣಾರ್ಥವುಳ್ಳದ್ದು. ಹೇಗೆಂದರೆ ಮಕಾರವಾಚ್ಯನಾದ ಜ್ಞಾನ ಸ್ವರೂಪನಾದ ಜ್ಞಾನಗುಣಕನಾದ ಜೀವಾತ್ಮನು ಅಯ ಏವ - ಅಕಾರ ವಾಚ್ಯನಾದ ವಿಷ್ಣುವಿಗಾಗಿಯೇ ಎಂದರ್ಥವಾಗುವದರಿಂದ, ಆತನಿಗೆ ಶೇಷಭೂತನಾಗಿ ಅವನಿಗೆ ಕೈಙ್ಕರ್ಯ ಮಾಡುವದಕ್ಕಾಗಿಯೇ ಎಂಬರ್ಥವು. ಆದುದರಿಂದ ಅನಯೋಃ - ಅಕಾರ ಮಕಾರ ವಾಚ್ಯರಾದ ವಿಷ್ಣು ಜೀವಾತ್ಮರಿಗಿಬ್ಬರಿಗೂ, ಸಂಬಂಧಂ - ಸಂಬಂಧವು, ಅನನ್ಯಾರ್ಹಂ - ಇನ್ನ್ಯಾರಿಗೂ ಅರ್ಹವಾದುದಲ್ಲವು. ಎಂದರೆ ಪರಮಾತ್ಮನಿಗೆ ಮಾತ್ರನೇ ಶೇಷಭೂತನೇ ವಿನಾ ಅನ್ಯದೇವತೆಗಳಿಗೆ ಅಲ್ಲವು, ಎಂಬ ಭಾವವು. ಆಗಲಿ ಲಕ್ಷ್ಮೀ, ಭಾಗವತರು, ಆಚಾರ್ಯರು ಇವರುಗಳಿಗೂ ಶೇಷಭೂತನಲ್ಲವೇ ಜೀವಾತ್ಮನು? ಎಂದರೆ, ಯಾವಾಗ ಪರಮಪುರುಷನಿಗೆ ಶೇಷಭೂತನಾದನೋ ಆಗ ತದೀಯರಾದ ಲಕ್ಷ್ಮೀ ಭಾಗವತಾಚಾರ್ಯರುಗಳಿಗೆ ಶೇಷಭೂತನೆಂಬುದು ಸಿದ್ಧವು. ಇದರಿಂದ ಅನನ್ಯಾರ್ಹಶಬ್ದಕ್ಕೆ ವಿರೋಧವಿಲ್ಲವೆಂಬ ತಾತ್ಪರ್ಯವು. ಅನ್ಯದೇವತೆಗಳಿಗೆ ಈತನು ಶೇಷನಲ್ಲವೆಂದು ಶ್ರೀವ್ಯಾಸರೇ ಹೇಳಿರುತ್ತಾರೆ. "ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾದೇವತಾಸ್ಸ್ಮೃತಾಃ । ಪ್ರತಿಬುದ್ಧಾ ನ ಸೇವನ್ತೇ ಯಸ್ಮಾತ್ಪರಿಮಿತಂ ಫಲಮ್." ಆದುದರಿಂದ ಈ ಪ್ರಣವವು ತ್ರಯೀಸಾರಃ - ಮೂರು ವೇದಗಳ ಸಾರಭೂತವಾದದ್ದು. ಓಂಕಾರಃ ಭೂರಿತಿ ಋಗ್ವೇದಾದ ಜಾಯತ, ಭುವ ಇತಿ ಯಜುರ್ವೇದಾತ್, ಸುವರಿತಿ ಸಾಮವೇದಾತ್, ತಾನಿ ಶುಕ್ರಾಣ್ಯಭ್ಯತಪತ್" ॥ ತೇಭ್ಯೋಽಭಿತಪ್ತೇಭ್ಯ ಸ್ತ್ರಯೋವರ್ಣಾ ಅಜಾಯನ್ತ" "ಅಕಾರಂಚಾಪ್ಯುಕಾರಂಚ ಮಕಾರಂಚ ಪ್ರಜಾಪತಿಃ । ವೇದತ್ರಯಾ ನ್ನಿರಬೃಹದ್ಭೂರ್ಭುವಸ್ಸುವರೀತಿಚ"ಎಂಬ ಪ್ರಮಾಣಗಳು ಅನುಸಂಧೇಯಗಳು. ಇಂತಹ ಅಮೋಘಾರ್ಥಗಳನ್ನೆಲ್ಲಾ ಒಳಗೊಂಡಿರುವ ಪ್ರಣವವು. ಇಮಮರ್ಥಂ - ಮೇಲೆ ವಿವರಿಸಿರುವ ಅರ್ಥವನ್ನು, ಸಮ್ಯಕ್ - ಚನ್ನಾಗಿ ಪ್ರತಿಪಾದಿಸುತ್ತದೆ. ಈ ಮುಖ್ಯವಾದ ಅರ್ಥವು ಯಾವುದೆಂದರೆ, "ಅಕಾರೋ ವಿಷ್ಣುರಿತ್ಯುಕ್ತೋ ಮಕಾರೋ ಜೀವವಾಚಕಃ । ತಯೋಸ್ತು ನಿತ್ಯ ಸಂಬಂಧ ಉಕಾರೇಣ ಪ್ರಕೀರ್ತಿತಃ" ಎಂಬುದು. ಅಕಾರ ವಾಚ್ಯನು ವಿಷ್ಣುವು, ಮಕಾರ ವಾಚ್ಯನಾದವನು ಜೀವನು, ಇವರಿಬ್ಬರಿಗೂ ಸಂಬಂಧವು ಶೇಷ ಶೇಷಿ ಸಂಬಂಧವು, ಇದು

(೪) "ಕಣ್ಣಪುರ ಮೊನ್ರುಡೈಯಾನುಕ್ಕಡಿಯೇ ನೊರುವರ್‌ಕ್ಕುರಿಯೇನೋ" ಎಂಬ್ರ ಪಾಶುರದ ಪ್ರಣವಾರ್ಥವಿವರಣವು.

---

ಉಕಾರದಿಂದ ಹೇಳಲ್ಪಟ್ಟಿತು ಎಂಬುದು" ಎನ್ರು ವಿವರಿತ್ತಾರ್‌ಗಳ್ - ಎಂಬದಾಗಿ ಶ್ರೀವತ್ಸಾಂಕರ ಕುಮಾರರಾದ ಶ್ರೀಪರಾಶರ ಭಟ್ಟರವರು ವಿವರಿಸಿ ಹೇಳಿದರು.

(೪) ಈ ಪ್ರಮಾಣದ ಪೂರಾ ಪಾಶುರವು ಯಾವುದೆಂದರೆ.—

ವಿಡೈಯೇಳನ್‌ಱು ಡರ್‌ತ್ತು ವೆಕುಂಡು ವಿಲಙ್ಗಲುರ ।
ಪಡೈಯಾಲಾಳಿದಟ್ಟ ಪರಮನ್ ಪರಂಜ್ಯೋತಿ ।
ಮಡೈಯಾರ್ ನೀಲಮುಲ್ ಕುಮ್ ವಯಲ್ ಶೂಳ್ ಕಣ್ಣಪುರೆನ್ರೊನ್ರು
ಡೈಯಾನಕ್ಕು ಅಡಿಯೇಣ್ ಒರುವರ್ ಕ್ಕುರಿಯೇನೋ ॥ ೩ ॥

ಇದರರ್ಥವು.—ಪರಮಾತ್ಮನಿಗೇನೇ ತಾನು ಶೇಷಭೂತನು, ಇನ್ನು ಯಾವ ಅನ್ಯದೇವತೆಗಳಿಗೂ ಅಲ್ಲವೆಂಬ ಅನನ್ಯಾರ್ಹಶೇಷತ್ವವನ್ನು ಉಪಪಾದಿಸಿ ಹೇಳುತ್ತಾರೆ.—ಶೇಷನಾದವನು ಶೇಷಿಯಾಗಿ ಸರ್ವಶಕ್ತನಾದವನನ್ನು ಆಶ್ರಯಿಸತಕ್ಕದ್ದು. ಪರಮಪುರುಷನಿಗಿಂತ ಶಕ್ತರು ಯಾರಿದ್ದಾರೆ? ಅಂತವನನ್ನು ತಾನು ಆಶ್ರಯಿಸಿದಬಳಿಕ ನೀಚಾಶ್ರಯವನ್ನು ಬಯಿಸುವೆನೇ ಎಂದು ಹೇಳುತ್ತಾರೆ. ಪರಮಪುರುಷನು ಹೇಗೆ ನಿರತಿಶಯಶಕ್ತಿಯುಳ್ಳವನೆಂದರೆ ಹೇಳುತ್ತಾರೆ.—ಅನ್ರು - ಹಿಂದೆ ಎಂದರೆ ಕೃಷ್ಣಾವತಾರಿಯಾಗಿ ಸತ್ಯಭಾಮೆಯನ್ನು ವಿವಾಹಮಾಡಿಕೊಳ್ಳುವ ಸಂದರ್ಭದಲ್ಲಿ, ಏಳ್‌ವಿಡೈ - ಏಳು ವೃಷಭಗಳನ್ನು, ವೆಗುಂಡು-ತೀವ್ರಕೋಪದಿಂದ, ಅಡರ್‌ತ್ತು-ನಿಗ್ರಹಿಸಿದವನಾಗಿಯೂ, ಮತ್ತು ವಿಲಂಗಲ್ - ಲಂಕೆಯ ತ್ರಿಕೂಟ ಪರ್ವತವನ್ನು ಉರ - ಹೋಗಿ ಸೇರುವದಕ್ಕಾಗಿ, ಪಡೈಯಾಲ್ - ವಾನರ ಸೇನೆಯಿಂದ, ಆಳಿ - ಸಮುದ್ರವನ್ನು, ತಟ್ಟ - ದಾಟಿಸಿದವನಾಗಿಯೂ ಪರಮ್ - ನಿಸ್ಸಮಾಭ್ಯಧಿಕನಾಗಿಯೂ, ಮತ್ತು ಪರಂಜ್ಯೋತಿ - "ಜ್ಯೋತಿಷಾಂ ಜ್ಯೋತಿಃ" ಎಂದು "ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂದೂ ಹೇಳಿರುವಹಾಗೆ, ಎಲ್ಲಾ ಜ್ಯೋತಿಸ್ಸುಗಳಾದ ಸೂರ್ಯಾಗ್ನಿ ಮೊದಲಾದವರಿಗೂ ಜ್ಯೋತಿಸ್ಸನ್ನೂ ಕೊಡುವ ಸರ್ವೋತ್ಕೃಷ್ಟ ತೇಜಸ್ಸುಳ್ಳವನಾಗಿಯೂ ಇರುವ, ಮತ್ತು ಮಡೈ ಆರ್ - ನೀರಿನಿಂದ ತುಂಬಿರುವ, ನೀಲಂ - ನೀಲೋತ್ಪಲಗಳು, ಮುಲ್‌ಗುಮ್ - ವ್ಯಾಪಿಸಿಕೊಂಡಿರುವ, ವಯಲ್ - ಭತ್ತದ ಗದ್ದೆಗಳಿಂದ, ಶೂಳ್ - ಸುತ್ತಲ್ಪಟ್ಟ, ಕಣ್ಣಪುರಮೆನ್ರು - ತಿರುಕ್ಕಣ್ಣಪುರವೆಂಬ ದಿವ್ಯದೇಶವನ್ನು, ಉಡೈಯಾನಕ್ಕು ಆಶ್ರಯಿಸಿರುವ ಪರಮ ಪುರುಷನಿಗೆ, ಅಡಿಯೇನ್ - ಸಹಜ ಶೇಷಭೂತನಾದ ನಾನು, ಒರುವರ್‌ಕ್ಕು - ಇಂತಹ ಶಕ್ತಿಯಿಲ್ಲದ ಅಲ್ಪರಾದ ಇತರ ದೇವತೆಗಳಲ್ಲಿ ಯಾರಿಗಾಗಲಿ, ಉರಿಯೇನೋ - ಶೇಷಭೂತನಾಗೇನೋ? ಎಂದಿಗೂ ಇಲ್ಲ ವೆಂಬ ಭಾವವು. ಇಲ್ಲಿ ವಿಲಂಙ್ಗಲುರ್‌ಪಡೈಯಾಲಾಳಿತಟ್ಟ ಪರಮ್ ಎಂಬು

## ಪ್ರಣವಸ್ತ್ರಯೀಸಾರಸ್ತ್ರ್ಯಕ್ಷರ್ಯಾ.

**ಪ್ರಣವತ್ತಿಲ ಕ್ಷರತ್ರಯತ್ತೈಯುಮ್ ವೇದತ್ರಯಸಾರಮಾಗ ಶ್ರುತಿ ಸ್ಮೃತಿಗಳ್ ಪ್ರಪಞ್ಚಿತ್ತನ.**

---

ದಕ್ಕೆ ಇನ್ನೊಂದು ವಿಧವಾಗಿ ಅರ್ಥಮಾಡಿರುತ್ತಾರೆ.—ಹೇಗೆಂದರೆ ? ಆಳಿ - ಸೂರ್ಯನು, ವಿಲಂಗಲ್ ಉರ - ಅಸ್ತಮಯ ಪರ್ವತವನ್ನು ಸೇರಿಬಿಟ್ಟನೆನ್ನುವ ಹಾಗೆ, ಪಡೈಯಾಲ್ - ಸುದರ್ಶನ ಚಕ್ರದಿಂದ, ತಟ್ಟಿ - ನಿರೋಧಿಸಿದ, ಮರೆಸಿದ, ಪರಮನ್ - ಸರ್ವ ಶ್ರೇಷ್ಠನು. ಜಯದ್ರಥನು ಅರ್ಜುನನ ಮಗನಾದ ಅಭಿಮನ್ಯುವನ್ನು ಕೊಂದಿದ್ದರಿಂದ ಆತನನ್ನು ಮಾರನೆಯ ದಿನ ಸೂರ್ಯಾಸ್ತಮಯದ ಒಳಗೆ ಕೊಲ್ಲುವೆನೆಂದು ಅರ್ಜುನನು ಪ್ರತಿಜ್ಞೆಯನ್ನು ಮಾಡಲು; ಶತ್ರು ಪಕ್ಷದವರು ಜಯದ್ರಥನನ್ನು ಮಧ್ಯೆ ಇಟ್ಟುಕೊಂಡು ರಕ್ಷಿಸುತ್ತಿರಲು ; ಆಗ ಶ್ರೀ ಕೃಷ್ಣನು ತನ್ನ ಚಕ್ರವನ್ನು ಸೂರ್ಯನಿಗೆ ಅಡ್ಡಲಾಗಿ ಹಿಡಿಯುದರಿಂದ ಸೂರ್ಯಾಸ್ತಮಯವಾಯಿತೆಂದು ತಟಸ್ಥರಾಗಿರುವ ಕಾಲದಲ್ಲಿ, ಜಯದ್ರಥನನ್ನು ಅರ್ಜುನನ ಕೈಯಲ್ಲಿ ಕೊಲ್ಲಿಸಿದನೆಂಬುದು ಇತಿಹಾಸವು. ಶ್ರೀ ಭಾರತ ದ್ರೋಣಪರ್ವದ ೭೩ನೆಯ ಮತ್ತು ೧೪೭ನೆಯ ಅಧ್ಯಾಯಗಳನ್ನು ಪರಾಂಬರಿಸಿ. ಎಙ್ಗುರುದುವುಮ್ - ಎಂದು ಹೇಳಿರುವದೂ ಸಹ, ಪ್ರಣವಾರ್ಥ ವಿವರಣಮ್-ಮುಖ್ಯವಾಗಿ ಪರಮಾತ್ಮ ಶೇಷತ್ವವನ್ನು ಪಪಾದಿಸುವ ಪ್ರಣವಾರ್ಥದ ವಿವರಣ ಪ್ರಕರಣವೇ.

**ಪ್ರಣವವು ಮೂರು ಅಕ್ಷರಗಳುಳ್ಳದ್ದಾಗಿ ಮೂರು ವೇದಗಳ ಸಾರವು.**

---

ಮುಂದಿನ ವಾಕ್ಯದಿಂದ ಪ್ರಣವದ ಮೂರು ಅಕ್ಷರಗಳೂ ಮೂರು ವೇದಗಳ ಸಾರವೆಂದು ಶ್ರೀ ಪರಾಶರ ಭಟ್ಟರ ಶ್ಲೋಕದಲ್ಲಿ "ತ್ರಯೀಸಾರಸ್ತ್ರ್ಯಕ್ಷರ್ಯಾ" ಎಂದು ಹೇಳಿರುವ ಅಭಿಪ್ರಾಯವನ್ನು ತಿಳಿಸುತ್ತಾರೆ.—ಪೆರಿಯಾಳ್ವಾರವರು "ಮೂಲಮಾಗಿಯ ಒತ್ತೈ ಎಳುತ್ತೈ" ಎಂಬಲ್ಲಿ ಅಖಂಡವಾಗಿ ಪರಮಾತ್ಮ ವಾಚಿ ಎಂದು ಉಪಪಾದಿಸಿದರು ; ತಿರುಮಙ್ಗೈಯಾಳ್ವಾರವರು ಸಖಂಡವಾಗಿ ಭಾವಿಸಿ ಅರ್ಥವನ್ನು ಹೇಳಿದರು. ಇದರಲ್ಲಿ ಪರಸ್ಪರ ವಿರೋಧವೇನೂ ಇಲ್ಲವು. ಅಖಂಡ ನಮಸ್ಸು ಸಖಂಡ ನಮಸ್ಸುಗಳ ಅರ್ಥಗಳೆರಡೂ ಗ್ರಾಹ್ಯವೇ, ಎಂಬ ಭಾವವು ; ಪ್ರಣವತ್ತಿಲ್ - ಪ್ರಣವದಲ್ಲಿ, ಅಕ್ಷರತ್ರಯತ್ತೈಯುಮ್ - "ಅಕಾರ ಉಕಾರ ಮಕಾರ ಇತಿ" ಎಂದು ವೇದದಲ್ಲೇ ತೋರಿಸಿರುವ ಮೂರು ಅಕ್ಷರಗಳನ್ನೂ, ವೇದತ್ರಯಸಾರಮಾಗ-ಮೂರು ವೇದಗಳಾದ ಋಗ್ಯಜುಸ್ಸಾಮವೇದಗಳ, ಸಾರಮಾಗ - ಸಾರಭೂತಾರ್ಥವನ್ನು ಪ್ರತಿಪಾದಿಸುವವಾಗಿ, ಶ್ರುತಿ ಸ್ಮೃತಿಗಳು - ಪ್ರಪಞ್ಚಿತ್ತನ - ವಿಸ್ತರಿಸಿ ಹೇಳಿದವು. ಶ್ರುತಿಯಲ್ಲಿ ಎಲ್ಲಿ ಹೇಳಿದೆ?

## ಪ್ರಣವಸ್ಯ ಅಕಾರಸ್ಯ ಅರ್ಥಃ

**ಇನ್ವಕ್ಷರಙ್ಗಳಿಲ್ ಇನ್ವರ್ಥಙ್ಗಳೈ ಚೊಲ್ಲುಗಿರಪಡಿ ಯೆಙ್ಗನೇ ಎನ್ನಿಲ್?** **(೧) ಅಷ್ಟಾಕ್ಷರ ಶರೀರಾಙ್ಗ ಪ್ರಣವಾದ್ಯಕ್ಷರೇಣ ತು । ಅಕಾರೇಣಾ ಖಿಲಾಧಾರಃ ಪರಮಾತ್ಮಾ ಭಿಧೀಯತೇ । ಸಮಸ್ತಶಬ್ದಮೂಲತ್ವಾದಕಾರಸ್ಯ**

---

ಎಂದರೆ—"**ಭೂರಿತಿ ಋಗ್ವೇದಾದಜಾಯತ, ಭುವ ಇತಿ ಯಜುರ್ವೇದಾತ್, ಸುವರಿತಿ ಸಾಮವೇದಾತ್, ತಾನಿಶುಕ್ರಾಣ್ಯಭ್ಯತಪತ್, ತೇಭ್ಯೋಽಭಿತಪ್ತೇಭ್ಯಸ್ತ್ರಯೋವರ್ಣಾ ಅಜಾಯನ್ತ, ಅಕಾರೋಕಾರ ಮಕಾರ ಇತಿ, ತಾನೇಕಧಾ ಸಮಭರತ್ತದೇತದೋಮಿತಿ**" ಸ್ಮೃತಿ ಪ್ರಮಾಣಕ್ಕೆ ಉದಾಹರಣೆಯು— "**ಅಕಾರಂ ಚಾಪ್ಯುಕಾರಂ ಚ ಮಕಾರಂಚ ಪ್ರಜಾಪತಿಃ । ವೇದತ್ರಯಾನ್ನಿರಬೃಹದ್ಭೂರ್ಭುವಸ್ಸ್ವರಿತಿ**" ಪ್ರಜಾಪತಿಯು ವೇದತ್ರಯಗಳಿಂದ ಈ ಪ್ರಣವದ ಅಕಾರ ಉಕಾರ ಮಕಾರಗಳಾಗಿ ಸಾರಭೂತವಾದವನ್ನು ತೆಗೆದರು.

## ಪ್ರಣವದ ಅಕಾರಾರ್ಥವು.

ಪ್ರಣವದ ಅಕ್ಷರಗಳು ಯಾವ ಅಭಿಪ್ರಾಯಗಳನ್ನು ಬೋಧಿಸುತ್ತವೆ ಎಂಬುದನ್ನು ಪ್ರಶ್ನೋತ್ತರ ರೂಪದಲ್ಲಿ ಉಪಪಾದಿಸುತ್ತಾರೆ.—ಮೊದಲು ಅಕಾರಾರ್ಥವನ್ನು ಬೋಧಿಸುತ್ತಾರೆ—**ಇನ್ವಕ್ಷರಙ್ಗಳ್** - ಪ್ರಣವದ ಈ ಮೂರು ಅಕ್ಷರಗಳೂ, **ಇನ್ವರ್ಥತ್ತೈ** - ಪರಮಾತ್ಮನಿಗೆ ಈ ಜೀವಾತ್ಮನು ಶೇಷಭೂತನೆಂದೂ ಮತ್ತು ಮೂರು ವೇದಗಳ ಸಾರಭೂತಾರ್ಥವನ್ನು ಪ್ರತಿಪಾದಿಸುತ್ತವೆಂದೂ, **ಶೊಲ್ಲುಗಿರಪಡಿ** - ಹೇಳುವಪ್ರಕಾರವು, **ಎಙ್ಗನೇ ಎನ್ನಿಲ್?**-ಎಲ್ಲಿ ಯಾವಪ್ರಮಾಣದಲ್ಲಿ? ಎಂದರೆ ಇದಕ್ಕೆ, ಉತ್ತರವನ್ನು ಹೇಳುತ್ತಾರೆ—ವಾಮನಪುರಾಣವಾಕ್ಯದಿಂದ ಸಿದ್ಧವೆಂದು ತಿಳಿಸುತ್ತಾರೆ.—(೧) "**ಅಷ್ಟಾಕ್ಷರ ಶರೀರಾಂಗ ಪ್ರಣವಾದ್ಯಕ್ಷರೇಣತು** - ಒಂದೇ ಸಮಾಸಪದವು, ಅಷ್ಟಾಕ್ಷರವು ಯಾವ ಮೂಲ ಮನ್ತ್ರದ ಸ್ವರೂಪವೋ, ಅದಕ್ಕೆ ಅಙ್ಗವಾಗಿರುವ ಪ್ರಣವದ ಮೊದಲನೆಯ ಅಕ್ಷರದಿಂದಲಾದರೋ ಅದು ಯಾವುದೆಂಬುದು ವ್ಯಕ್ತವಾಗಿ ಹೇಳಲ್ಪಡುತ್ತದೆ. **ಅಕಾರೇಣ** - ಆ ಅಕಾರದಿಂದ, **ಅಖಿಲಾಧಾರಃ** - ಸಮಸ್ತ ಚಿದಚಿತ್ತುಗಳಿಗೂ ಆಧಾರ ಭೂತನಾದ, **ಪರಮಾತ್ಮಾ** - ಎಲ್ಲಕ್ಕೂ ಆತ್ಮವಾಗಿ ವ್ಯಾಪಿಸಿರುವ ಪರಮಾತ್ಮನು, **ಅಭಿಧೀಯತೇ** - ಹೇಳಲ್ಪಡುತ್ತಾನೆ ; ಅದು ಹೇಗೆಂದರೆ ಕಾರಣವನ್ನು ಹೇಳುತ್ತಾರೆ. **ಅಕಾರಸ್ಯ** - ಅಕಾರಕ್ಕೆ, **ಸ್ವಭಾವತಃ** - ಸ್ವಾಭಾವಿಕವಾಗಿ, **ಶಬ್ದಮೂಲತ್ವಾತ್**- ಎಲ್ಲಾ ಶಬ್ದಗಳಿಗೂ ಕಾರಣಭೂತವಾಗಿರುವದರಿಂದ, ಹಾಗೆಯೇ **ಬ್ರಹ್ಮಣೋಽಪಿ**- ಪರಬ್ರಹ್ಮಕ್ಕೂ ಕೂಡ, **ಸ್ವಭಾವತಃ** - ಸ್ವಾಭಾವಿಕವಾಗಿ, **ಸಮಸ್ತವಾಚ್ಯಮೂಲ**

---

(೧) ವಾಮನ ಪುರಾಣ.

ಸ್ವಭಾವತಃ । ಸಮಸ್ತ ವಾಚ್ಯಮೂಲತ್ವಾದ್ಬ್ರಹ್ಮಣೋಽಪಿ ಸ್ವಭಾವತಃ । ವಾಚ್ಯವಾಚಕ ಸಂಬಂಧ ಸ್ತಯೋಃ ರರ್ಥಾತ್ ಪ್ರತೀಯತೇ" ಎನ್ನು ಶ್ರೀ ವಾಮನ ಪುರಾಣವಚನತ್ತಾಲೇ ಸರ್ವವಾಚಕ ಜಾತಪ್ರಕೃತಿಯಾನ ಪ್ರಥಮಾಕ್ಷರತ್ತುಕ್ಕು ಸರ್ವವಾಚ್ಯಜಾತ ಪ್ರಕೃತಿಯಾನ ನಾರಾಯಣರ್ಕ್ಕ ವಾಚ್ಯ

---

ತ್ವಾತ್ - ಸಮಸ್ತ ವಸ್ತು ವ್ಯವಹಾರಕ್ಕೂ ಕಾರಣಭೂತನಾಗಿರುವದರಿಂದಲೂ, ಹೀಗೆ ತಯೋಃ - ಪರಬ್ರಹ್ಮನಿಗೂ ಅಕಾರಕ್ಕೂ ಸಹ, ವಾಚ್ಯವಾಚಕ ಸಂಬಂಧಃ - ವಾಚ್ಯವು ಪರಬ್ರಹ್ಮನಾಗಿಯೂ, ವಾಚಕವು ಅಕಾರವಾಗಿಯೂ, ಪರಬ್ರಹ್ಮವು ಹೇಳಿಸಿಕೊಳ್ಳುವದು ; ಅಕಾರವು ಇಂತಹ ಸಂಬಂಧವನ್ನು ಹೇಳುತ್ತದೆ. ಅರ್ಥಾತ್ - ಸ್ವಾಭಾವಿಕವಾಗಿ ಏನೊಂದೂ ಯತ್ನಬೇಕಿಲ್ಲದೆ ಅರ್ಥಗಳು ಎರಡು ವಿಧವಾಗಿ ತೋರಿಬರುತ್ತವೆ. (೧) ಶಬ್ದಮೂಲಕವಾಗಿ (೨) ಅರ್ಥಮೂಲಕವಾಗಿ ಇಲ್ಲಿ ಶಬ್ದವಾಗಿ ತೋರದಿದ್ದರೂ ಅರ್ಥವಾಗಿ ತೋರಿಬರುತ್ತದೆಂಬಭಾವವು, ಪ್ರತೀಯತೇ - ತೋರಿಬರುತ್ತದೆ. ಅಕಾರವು ಅಕ್ಷರಕ್ಕೆ ಆದಿಯಾಗಿ ಸರ್ವವಾಚಕ ಪದಗಳಿಗೂ ಕಾರಣವು. ಹಾಗೆಯೇ ಪರಮಾತ್ಮನೂ ಜಗತ್ತಿಗೆಲ್ಲಾ ಕಾರಣವಾಗಿ ವ್ಯವಹರಿಸಲ್ಪಡುವ ಸಮಸ್ತವಾಚ್ಯ ವಸ್ತುಗಳಿಗೆ ಕಾರಣನು. ಆದುದರಿಂದ ಅಕಾರದಿಂದ ಅಖಿಲಾಧಾರನಾದ ಪರಮಾತ್ಮನು ಹೇಳಲ್ಪಡುವನೆಂಬಭಾವವು. ಇಲ್ಲಿ ಅಷ್ಟಾಕ್ಷರ ಶರೀರ ವೆಂಬ ಪ್ರಯೋಗದಿಂದ ಅಷ್ಟಾಕ್ಷರಕ್ಕಿಂತ ಅವರ ಶರೀರವು ಬೇರೆ ಎಂದು ಭಾವಿಸತಕ್ಕದ್ದಲ್ಲವು. ಗುಂಡು ಕಲ್ಲಿನ ಶರೀರನಂದರೆ ಹೇಗೆ ಗುಂಡು ಕಲ್ಲೋ, ಹಾಗೆಯೇ ಅಷ್ಟಾಕ್ಷರದ ಶರೀರವು ಅಷ್ಟಾಕ್ಷರವೇ ಎಂದು ಭಾವಿಸತಕ್ಕದ್ದು. ಆದರೆ ನಮ್ಮ ಶರೀರವೆಂಬ ಪ್ರಯೋಗದಲ್ಲಿ ಒಂದು ಚಿತ್ತೂ, ಇನ್ನೊಂದು ಅಚಿತ್ತೂ ಇವೆ; ಆದುದರಿಂದ ಆತ್ಮಾ ಬೇರೆ, ಶರೀರವು ಬೇರೆಯು. ಅಕಾರೋವೈ ಸರ್ವವಾಕ್ ಎಂದುಇರುವದರಿಂದ ಸರ್ವಶಬ್ದಗಳಿಗೂ ಅಕಾರವು ಕಾರಣವು. ಅಂತಹ ಅಕಾರವು ಸರ್ವ ಶಬ್ದವಾಚ್ಯನಾದ ಪರಬ್ರಹ್ಮನನ್ನೇ ಬೋಧಿಸುತ್ತದೆಂಬುದು ತೈತ್ತರೀಯ ನಾರಾಯಣದಲ್ಲೂ (೨೪) ವ್ಯಕ್ತವು. ಯವ್ವೇದಾದೌ ಸ್ವರಃ ಪ್ರೋಕ್ತೋವೇದಾನ್ತೇಚ ಪ್ರತಿಷ್ಠಿತಃ । ತಸ್ಯ ಪ್ರಕೃತಿ ಲೀನಸ್ಯ ಯಃ ಪರಸ್ಸ ಮಹೇಶ್ವರಃ" ಇದರರ್ಥವೇನೆಂದರೆ ವೇದವನ್ನು ಆರಂಭಿಸುವಾಗಲೂ (ಹರಿಃ) ಓಂ ಎಂಬ ಯಾವ ಸ್ವರವು ಹೇಳಲ್ಪಡುತ್ತದೋ ಅಂತಹ ಪ್ರಣವದ ಪ್ರಕೃತಿ ಎಂದರೆ ಮೂಲಾಕ್ಷರವಾದ ಅಕಾರದಲ್ಲಿರುವ ಯಾವನು ಪರಃ ಎಂದರೆ ಪ್ರತಿಪಾದ್ಯನೋ ಅವಕ್ಕೂ ಎಲ್ಲಾದಕ್ಕೂ ಮಹತ್ತಾದ ನಿಯಾಮಕನು ಎಂಬುದು ಎನ್ನ-ಎಂಬವಾಗಿ, ಶ್ರೀ ವಾಮನ ಪುರಾಣ ವಚನ ದಿಂದ, ಸರ್ವವಾಚಕ ಜಾತಪ್ರಕೃತಿಯಾನ - ಸಮಸ್ತ ಶಬ್ದ ಸಮೂಹಗಳಿಗೆ ಕಾರಣಭೂತವಾದ, ಪ್ರಥಮಾಕ್ಷರತ್ತುಕ್ಕು - ಪ್ರಣವದ ಮೊದಲಿನ ಅಕ್ಷರವಾದ ಅಕಾರಕ್ಕೆ, ಎಂದರೆ ಅಕಾರದಿಂದ

**ನೆನ್ರು ಪ್ರಸಿದ್ಧಮಾನಅರ್ಥತ್ತೈ ವೇದಾರ್ಥಸಙ್ಗ್ರಹತ್ತಿಲೇ ಯರುಳಿಚ್ಚೆಯ್ ದಾರ್.**

---

ಸರ್ವವಾಚಕ ಜಾತಪ್ರಕೃತಿಯಾನ - ಸಮಸ್ತ ಶಬ್ದಗಳಿಂದಲೂ ವ್ಯವಹರಿಸಲ್ಪಡುವ ಚಿದಚಿದ್ವಸ್ತು ಸಮೂಹಗಳಿಗೂ ಮೂಲಕಾರಣನಾದ, ನಾರಾಯಣ ವಾಚ್ಯನೆನ್ರು - ಶ್ರೀಮನ್ನಾರಾಯಣನೇ ವ್ಯವಹರಿಸಲ್ಪಡುವನೆಂದು, ಪ್ರಸಿದ್ಧಮಾನ- ಹೀಗೆ ಪ್ರಸಿದ್ಧವಾದ, ಅರ್ಥತ್ತೈ - ಅರ್ಥವನ್ನು, ವೇದಾರ್ಥಸಙ್ಗ್ರಹತ್ತಿಲೇ- ಶ್ರೀ ಯತಿವರ್ಯರು ಅನುಗ್ರಹಿಸಿದ ವೇದಾರ್ಥಸಙ್ಗ್ರಹದಲ್ಲಿ, ಅರುಳಿಚ್ಚೆಯ್ ದಾರ್ - ಅನುಗ್ರಹಿಸಿರುತ್ತಾರೆ, ಯದ್ವೇದಾದೌ ಸ್ವರಃಪ್ರೋಕ್ತೋ ವೇದಾನ್ತೇ ಚ ಪ್ರತಿಷ್ಠಿತಃ ಎಂಬ ಶ್ರುತ್ಯರ್ಥವನ್ನು ವಿಚಾರಮಾಡುವ ಸ್ಥಳದಲ್ಲಿ ಜಗತ್ಕಾರಣನಾದುದರಿಂದ ಶ್ರೀ ಮಹಾವಿಷ್ಣುವು ಅಕಾರವಾಚ್ಯನೆಂದು ಸ್ಥಾಪಿಸಿರುತ್ತಾರೆಂಬ ಭಾವವು. ಹೀಗೆ ಎಲ್ಲಾ ಚಿದಚಿತ್ತುಗಳಿಗೂ ಕಾರಣಭೂತನಾಗಿ ಅವುಗಳಿಗೆ ಆತ್ಮಾವಾಗಿ ಅವುಗಳನ್ನು ವ್ಯಾಪಿಸಿರುವದರಿಂದ, ಶ್ರೀನಿಗಮಾನ್ತದೇಶಿಕರವರು ಶ್ರೀಶರಣಾಗತಿ ದೀಪಿಕೆ ಎಂಬ ದೀಪಪ್ರಕಾಶರಸ್ತೋತ್ರದಲ್ಲಿ, "ಸರ್ವಾಗಿರ ಸ್ತ್ವಯಿ ಪತನ್ತಿ ತತೋಽಸಿ ಸರ್ವಃ" ಎಲ್ಲಾ ಪದಾರ್ಥವಾಚಿಶಬ್ದಗಳೂ ಪರಮಾತ್ಮನನ್ನೇ ಬೋಧಿಸುತ್ತವೆಂದೂ, ಆದುದರಿಂದ ಆತನೇ ಎಲ್ಲವೆಂದೂ ಹೇಳಿರುತ್ತಾರೆ. ಇದು ಹೇಗೆ ಎಂದರೆ ಎಲ್ಲಾ ಚಿದಚಿದ್ರೂಪ ವಸ್ತುಗಳು ಪರಮಾತ್ಮನಿಗೆ ಶರೀರವೆಂದು ಶ್ರುತಿ ಸ್ಮೃತೀತಿಹಾಸ ಪುರಾಣಗಳೆಲ್ಲಾ ಹೇಳುತ್ತವೆ. ಆದುದರಿಂದ ಮನುಷ್ಯೋಽಹಂ ಎಂಬಲ್ಲಿ ಮನುಷ್ಯ ಶರೀರಕ್ಕೆ ಆತ್ಮಾವಾದವನು ಮನುಷ್ಯ ಶಬ್ದದಿಂದ ಹೇಗೆ ವ್ಯವಹರಿಸಲ್ಪಡುವನೋ, ಹಾಗೆಯೇ ಸರ್ವ ವಸ್ತುಗಳಿಗೂ ಆತ್ಮಾವಾದ ಪರಮಾತ್ಮನು ಸರ್ವವಾಚ್ಯಶಬ್ದಗಳಿಂದಲೂ ವ್ಯವಹರಿಸಲ್ಪಡುವನೆಂಬುದು ತಾತ್ಪರ್ಯವು. ಆದುದರಿಂದ, ಎಲ್ಲಾ ದೇವ ಮನುಷ್ಯಾದಿ ವಾಚಕಶಬ್ದಗಳೂ, ಗಿರಿ ನದಿ ಸಮುದ್ರ ಮೊದಲಾದ ಶಬ್ದಗಳೂ ತತ್ತಚ್ಛರೀರಕ ಪರಮಾತ್ಮನನ್ನೇ ಬೋಧಿಸುತ್ತವೆ ಎಂಬ ಭಾವವು. ಸರ್ವ ಶಬ್ದಗಳಿಗೂ ಆಕಾರವು ಮೂಲಕಾರಣವು; ಅಂತಹ ಶಬ್ದಗಳೆಲ್ಲಾ ಶ್ರೀಮಹಾವಿಷ್ಣುವನ್ನೇ ಬೋಧಿಸುತ್ತವೆ. ಆದುದರಿಂದ ಅಕಾರವು ಜಗತ್ಕಾರಣ ವಿಷ್ಣುವಾಚಕವೆಂಬ ಭಾವವು. ಯಾವಾಗ ಅಕಾರವು ಸರ್ವಶಬ್ದಗಳಿಗೂ ಮೂಲಕಾರಣವಾಗಿ, ಆ ಸರ್ವಶಬ್ದಗಳಿಂದಲೂ ಶ್ರೀಮಹಾವಿಷ್ಣುವೇ ವಾಚ್ಯನಾದನೋ, ಆಗ ಅಕಾರವು ವಿಷ್ಣುವಾಚಕ ಮಾತ್ರವೇ ಅಲ್ಲದೆ ಆತನನ್ನು ವಿಶೇಷಿಸಿ ಹೇಳುವ ಸಮಸ್ತ ಗುಣಗಳನ್ನು ಬೋಧಿಸುವ ಶಬ್ದಗಳಿಗೂ ಮೂಲ ಕಾರಣವಾದ ಆತನ ಸರ್ವಜ್ಞತ್ವ ಸರ್ವಶಕ್ತಿತ್ವ ಸತ್ಯಸಙ್ಕಲ್ಪಾದಿ ಕಲ್ಯಾಣಗುಣಗಣವೇ ಮೊದಲಾದವನ್ನೆಲ್ಲಾ ಬೋಧಿಸುತ್ತದೆಂದು ತಿಳಿಸುತ್ತಾರೆ.— ಇತ್ತಾಲೇ - ಈ ಆಕಾರಕ್ಕೆ ಸರ್ವಶಬ್ದಕ್ಕೂ ಕಾರಣವಾಗಿ ಸರ್ವ ಶಬ್ದವಾಚ್ಯತ್ವವು ಇರುವದರಿಂದ, ಕಾರಣವಾಕ್ಯ ಸಿದ್ಧಮಾನ—"ಯತೋ ವಾ ಇಮಾನಿ ಭೂತಾನಿ

**ಇತ್ಯಾಲೇ ಕಾರಣವಾಕ್ಯಸಿದ್ಧಮಾನ ಸಕಲ ಜಗನ್ನಿಮಿತ್ತೋಪಾದಾನ ಕಾರಣತ್ವಮುಮ್, ಅತ್ತಾಲೇ ಆಕ್ಷಿಪ್ತಮಾನ ಸರ್ವಜ್ಞತ್ವ ಸರ್ವಶಕ್ತಿತ್ವಾದಿ ಗುಣವರ್ಗಮು ಮಿಙ್ಗೇ ಸಿದ್ಧಮಾಯಿತ್ತು.**

---

**ಜಾಯನ್ತೇ ಯೇನ ಜಾತಾನಿ ಜೀವನ್ತಿ ಯತ್ಪ್ರಯನ್ತ್ಯಭಿ ಸಂವಿಶನ್ತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ**" ಎಂಬುದೂ, ಮತ್ತು "**ಬ್ರಹ್ಮವನಂ ಬ್ರಹ್ಮಸ ವೃಕ್ಷ ಆಸೀತ್**" ಎಂಬುದೂ ಮತ್ತು "**ಏಷ ಸೇತುರ್ವಿಧರಣಃ ಏಷಾಂ ಲೋಕಾನಾ ಮಸಂಭೇದಾಯ**" ಎಂಬುದೂ, **ಕಾರಣವಾಕ್ಯ**ಗಳು ; ಅದರಿಂದ ಸಿದ್ಧವಾದ ಅರ್ಥವು ಯಾವುದೆಂದರೆ, ಯಾವನು ಸಮಸ್ತ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೋ, ಆತನೇ ಪರಬ್ರಹ್ಮವು, ಅಂತವನೇ ಧ್ಯೇಯ ವಸ್ತುವು ಎಂಬುದು, **ಸಕಲಜಗನ್ನಿಮಿತ್ತೋಪಾದಾನಕಾರಣತ್ವಮುಮ್** - ಸಮಸ್ತ ಜಗತ್ತುಗಳಿಗೆ ನಿಮಿತ್ತ ಮತ್ತು ಉಪಾದಾನ ಕಾರಣನೆಂಬ ಅರ್ಥವೂ, **ಅತ್ತಾಲೇ** - ಹೀಗೆ ಜಗಜ್ಜನ್ಮಾದಿ ಕಾರಣನಾಗಿರುವದರಿಂದ, **ಆಕ್ಷಿಪ್ತಮಾನ** - ಇಲ್ಲದಿದ್ದರೆ ಆಕ್ಷೇಪಕ್ಕೆ ಗುರಿಮಾಡುವ, ಎಂದರೆ ಜಗಜ್ಜನ್ಮಾದಿ ಕಾರಣನೆಂಬುದು, ಸರ್ವಜ್ಞತ್ವಾದಿಗಳನ್ನು ಆತನಲ್ಲಿ ಒಪ್ಪಿಕೊಳ್ಳದಿದ್ದರೆ ಜಗಜ್ಜನ್ಮಾದಿ ಕಾರಣತ್ವವೇ ಆಕ್ಷೇಪಕ್ಕೆ ಒಳಗಾಗುತ್ತದೆಂಬ ಭಾವದಿಂದ ಆಕ್ಷಿಪ್ತ ಎಂದರೆ ಬಲಾತ್ಕಾರದಿಂದ ಒಪ್ಪಿಕೊಳ್ಳಬೇಕಾದುದು ಹೇಳಲ್ಪಟ್ಟಿತು; ಜಗನ್ನಿಮಿತ್ತೋಪಾದಾನ ಕಾರಣತ್ವವನ್ನು ಒಪ್ಪಿಕೊಳ್ಳಬೇಕಾದರೆ ಸರ್ವಜ್ಞತ್ವಾದಿಗಳನ್ನೂ ಹಾಗೆಯೇ ಒಪ್ಪಿಕೊಂಡೇ ತೀರಬೇಕೆಂಬ ಭಾವವು ಸೂಚಿತವು ; ಸರ್ವಜ್ಞತ್ವ ಸರ್ವಶಕ್ತಿತ್ವವೇ ಮೊದಲಾದ ಪರಮಾತ್ಮನಿಗೇ ಅಸಾಧಾರಣಗಳಾಗಿರುವ, **ಗುಣವರ್ಗಮುಮ್** - ಷಾಡ್ಗುಣ್ಯ ಪರತ್ವ ಸೌಲಭ್ಯತ್ವಾದಿ ಕಲ್ಯಾಣ ಗುಣಗಣವು ಇಲ್ಲಿ ಹೇಳಲ್ಪಟ್ಟಿತು ; **ಇಙ್ಗೇ** - ವಿಷ್ಣು ವಾಚಕವೆಂದು ಹೇಳಲ್ಪಡುವ ಅಕಾರದಲ್ಲೇ, **ಸಿದ್ಧಮಾಯಿತ್ತು** - ಸ್ವತಸ್ಸಿದ್ಧವಾಗಿ ತೋರುತ್ತದೆಂದು ಹೇಳಿದಂತಾಯಿತು. ಪರಮಾತ್ಮನು ಬರೀ ನಿಮಿತ್ತ ಕಾರಣನು, ಉಪಾದಾನ ಕಾರಣನಲ್ಲವೆಂಬ ವಾದವು ಶಾಸ್ತ್ರ ಸಮ್ಮತವಾದ ಅಭಿಪ್ರಾಯವಲ್ಲವು ; ಸರ್ವಕಾರಣನೂ ಅವನೇ ಎಂದು ತಿಳಿಸುವದಕ್ಕಾಗಿ **ನಿಮಿತ್ತೋಪಾದಾನ ಕಾರಣತ್ವಮುಮ್** ಎಂಬ ಪ್ರಯೋಗವು. ಮೇಲಿನ **ಆಕ್ಷಿಪ್ತಮಾನ** ಎಂದು ಪ್ರಯೋಗಿಸಿರುವದು, ಶ್ರೀ ಯತಿವರ್ಯರು ೨ನೆಯ ಬ್ರಹ್ಮಸೂತ್ರ ಸಿದ್ಧಾನ್ತದಲ್ಲಿರುವ "**ಜಗನ್ನಿಮಿತ್ತೋಪಾದಾನತಾಕ್ಷಿಪ್ತ ಸರ್ವಜ್ಞತ್ವ ಸತ್ಯಸಙ್ಕಲ್ಪತ್ವ ವಿಚಿತ್ರ ಶಕ್ತಿತ್ವಾದ್ಯಾಕಾರಬೃಹತ್ತ್ವೇನ ಪ್ರತಿಪನ್ನಂ ಬ್ರಹ್ಮ**" ಎಂಬ ಪ್ರಯೋಗವನ್ನು ಸ್ಮರಿಸುವಹಾಗೆ ಮಾಡುತ್ತದೆ. "**ಸದೇವಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಮ್**" (ಛಾಂ. ೬. ೨. ೧.) ಎಂಬ ಶ್ರುತಿಯು ಏಕಮೇವ ಎಂಬುದರಿಂದ ಉಪಾದಾನ ಕಾರಣನೂ ಆತನೇ, ಅದ್ವಿತೀಯಮ್ ಎಂಬುದರಿಂದ

ಏವಮೌಚಿತ್ಯಾದಕಾರಸ್ಯ ವಿಷ್ಣುವಾಚಕತ್ವಮುಕ್ತ್ವಾ ರೂಢ್ಯಾಪಿ ತದಾಹ.

---

ಇನ್ನಕ್ಷರಮ್ ಭಗವದ್ವಾಚಕಮೆನ್ರು ನಿಡಮ್, (೧) ಅನಿಷೇಧೇ ಪುನರ್ನಾ ವಿಷ್ಣೌ"ಎನ್ರುಮ್. (೨)"ಅಕಾರೋ ವಿಷ್ಣುವಾಚಕಃ" ಎನ್ರುಮ್,

---

ನಿಮಿತ್ತಕಾರಣನೂ ಅವನೇ ಎಂದು ವ್ಯಕ್ತವಾಗಿ ಹೇಳಿರುತ್ತದೆ. ಹೀಗೆ ಸರ್ವ ಕಾರಣನೂ ಪರಮಾತ್ಮನೇ ಎಂಬುದರ ಸಮರ್ಥನೆಗಾಗಿ "ಯಥೋರ್ಣನಾಭಿ ಸ್ಸೃಜತೇ ಗೃಹ್ಣತೇಚ" ಎಂಬಲ್ಲಿ ಜಾಡರ ಹುಳದ ದೃಷ್ಟಾಂತವನ್ನು ಶ್ರುತಿಯು ಕೊಟ್ಟಿರುತ್ತದೆ. ಜಾಡರಹುಳವು ತನ್ನಸಙ್ಕಲ್ಪ ಮತ್ತು ತಂತುಗಳಮೂಲಕ ಗೂಡಿನ ನಿರ್ಮಾಣಕ್ಕೂ, ಆತಂತುಗಳನ್ನು ಇಷ್ಟಬಂದರೆ ನುಂಗಿಬಿಡುವದಕ್ಕೂ ಹೇಗೆ ಹೇತು ವೋ, ಹಾಗೆಯೇ ನಿಮಿತ್ತ ಉಪಾದಾನ ಸಹಕಾರಿರೂಪಗಳಾದ,ಜಗತ್ತಿಗೆ ಸರ್ವವಿಧ ಕಾರಣನು ಪರಬ್ರಹ್ಮನೇ- ಅಂತಹ ಹುಳವನ್ನು ಸೃಷ್ಟಿಸಿದ ಪರಮ ಪುರುಷನು ಜಗತ್ತಿನ ಸೃಷ್ಟಿ ಲಯಗಳಿಗೆ ನಿಮಿತ್ತೋಪಾದಾನ ಸಹಕಾರಿಕಾರಣನೆಂದು ಹೇಳಲು ಅಭ್ಯಂತರವೇನು ? ದ್ವೈತಿಗಳು ಪರಮ ಪುರುಷನು ನಿಮಿತ್ತ ಕಾರಣನು, ಜೀವಾ ಧಿಷ್ಠಿತ ಪ್ರಕೃತಿಯು ಉಪಾದಾನಕಾರಣವೆಂದು ಹೇಳುವರು. ಹೀಗೆ ಹೇಳುವದು ಶ್ರುತಿ ವಿರುದ್ಧವಾಗಿ ತೋರಿದರೂ, ವಿಮರ್ಶಿಸಿದರೆ ಅಭಿಪ್ರಾಯವೇನೋ ನಾವು ಹೇಳುವಹಾಗೆ ಸರ್ವವಿಧ ಕಾರಣನೆಂಬುದೇ ತೋರಿಬರುತ್ತದೆ. ಅದ್ವೈತಿಗಳಾದರೋ ನಾವು ಹೇಳುವಹಾಗೆ ಸರ್ವವಿಧ ಕಾರಣನು ಪರಬ್ರಹ್ಮವೇ ಎಂದು ಹೇಳಿ, ಜಗತ್ತಿಗೆ ಪ್ರಮಾಣಬಲವಿಲ್ಲದ ಮಿಥ್ಯಾತ್ವವನ್ನು ಆರೋಪಿಸುತ್ತಾರೆ.

ಹೀಗೆ ಔಚಿತ್ಯದಿಂದ ಅಕಾರಕ್ಕೆ ವಿಷ್ಣುವಾಚಕತ್ವವನ್ನು ಹೇಳಿ, ರೂಢಿಯಿಂದಲೂ ಅದೇ ಅರ್ಥವೇ ಎಂದು ಹೇಳುತ್ತಾರೆ.

---

ಆಗಲಿ ಅಕಾರದಿಂದಪರಮಾತ್ಮನು ಹೇಳಲ್ಪಟ್ಟನೆಂಬುದನ್ನು ಒಪ್ಪೋಣ; ಆದರೆ ಶ್ರೀಮನ್ನಾರಾಯಣನೇ ಅಕಾರ ವಾಚ್ಯನೆಂದು ಹೇಳಿದುದು ಹೇಗೆ? ಎಂದರೆ ನಿಘಂಟಿನಲ್ಲಿ ಅಕಾರವು ವಿಷ್ಣು ವಾಚಕನೆಂದು ಹೇಳಿರುವದರಿಂದಲೂ, ಪ್ರಾಜ್ಞರ ಪ್ರಯೋಗಗಳಿಂದಲೂ, ಶ್ರೀಮನ್ನಾರಾಯಣನೇ ಹೇಳಲ್ಪಟ್ಟನೆಂದು ಭಾವಿಸುವೆವು ಎಂದು ತಿಳಿಸುತ್ತಾರೆ.—ಇನ್ನಕ್ಷರಂ- ಈಪ್ರಣವದ ಅಕಾರವು,ಭಗವದ್ವಾಚಕ ಮೆನ್ರು,ನಿಡಮ್-ಭಗವಂತನನ್ನು ಬೋಧಿಸುತ್ತದೆ ಎಂಬ ಸಂದರ್ಭದಲ್ಲಿ(೧)ಅ ಎಂಬ ಅಕ್ಷರವು,ನಿಷೇಧೇ- ಅಸತ್ಯ ಅಸಂಭವ ಇತ್ಯಾದಿ ಶಬ್ದಗಳಲ್ಲಿನಹಾಗೆ ನಿಷೇಧಾರ್ಥ ದಲ್ಲೂ(ಇಲ್ಲಿ ಅಕಾರವು ಪ್ರತ್ಯಯವು), ಪುನರ್ನಾ- ಅಃ ಎಂದು ಪುಲ್ಲಿಂಗ ನಾಮಪದ

---

(೧) ... (೨) ...

(೩) ಅ ಇತಿ ಭಗವತೋ ನಾರಾಯಣಸ್ಯ ಪ್ರಥಮಾಭಿಧಾನ ಮಭಿದಧತಾ ಕಿನ್ನಾಮ ಮಙ್ಗಳಂ ನಕೃತಮ್" ಎನ್ನುಸ್,ನಿಘಂಟುಗಳಿಲುಮ್ ಪ್ರಯೋಗಙ್ಗಳಿಲುಮ್, ಪ್ರಸಿದ್ಧಮ್.

## ಯೋಗೇನಾಪಿ ಅಕಾರಸ್ಯ ಭಗವದ್ವಾಚಕತ್ವಮಾಹ.

ಇದು ವ್ಯಾಕರಣ ವ್ಯುತ್ಪತ್ತಿಯಾಲೇ ಸರ್ವೇಶ್ವರನೈಚ್ಚೊಲ್ಲುಮ್ ಪೋದು ರಕ್ಷಣ ಪ್ರೀಣನಾದಿ ವಿಷಯಮಾನ ಧಾತುವಿಲೇ ಕರ್ತ್ರರ್ಥವಾಚಿಯಾನ ಪ್ರತ್ಯಯತ್ತಾಲೇ ನಿಷ್ಪನ್ನಮಾನ ಪದಮಾಯ್ ಸರ್ವರಕ್ಷಕತ್ವಾದಿ ವಿಶಿಷ್ಟನಾಹಕ್ಕಾಟ್ಟುಮ್.

---

ವಾದರೆ, ವಿಷ್ಣೌ - ವಿಷ್ಣುವೆಂಬರ್ಥದಲ್ಲಿ, ಪ್ರಯೋಗವು" ಎನ್ನುಮ್ - ಎಂಬದಾಗಿಯೂ (೨) "ಅಕಾರೋ ವಿಷ್ಣುವಾಚಕಃ - ಎನ್ನುಮ್" ಅಕಾರವು ವಿಷ್ಣುವನ್ನು ಬೋಧಿಸುತ್ತದೆಂದೂ, (೩) "ಅ ಇತಿ- ಅಃ ಎಂಬ ಪದವು, ಭಗವತೋ ನಾರಾಯಣಸ್ಯ - ಭಗವಂತನಾದ ನಾರಾಯಣನ, ಪ್ರಥಮಾಭಿಧಾನಂ - ಮೊದಲನೆಯ ನಾಮವನ್ನು, ಅಭಿದಧತಾ - ಹೇಳಿರುವ ಮಹರ್ಷಿಯಿಂದ, ಕಿನ್ನಾಮ ಮಙ್ಗಳಂ - ಯಾವ ವಿಧವಾದ ಮಙ್ಗಳಾಚರಣೆಯು, ನಕೃತಮ್ - ಮಾಡಲ್ಪಡಲಿಲ್ಲವು? ಎಂದರೆ ಸರ್ವವಿಧ ಮಙ್ಗಳಾಚರಣೆಯು ಅ ಎಂಬ ಪ್ರಯೋಗದಿಂದ ಆಚರಿಸಲ್ಪಟ್ಟಿತೆಂಬ ಭಾವವು." ಎನ್ನುಮ್ - ಎಂಬದಾಗಿಯೂ ಹೀಗೆ ನಿಘಂಟುಗಳಲ್ಲೂ (ಮೇಲೆ ಉದಾಹರಿಸಿರುವ ಒಂದನೆಯ ಪ್ರಮಾಣವು ನಿಘಂಟು), ಪ್ರಯೋಗಗಳಲ್ಲೂ (೨ ಮತ್ತು ೩ ಪ್ರಯೋಗಗಳು) ಪ್ರಸಿದ್ಧಮ್ - ಪ್ರಸಿದ್ಧವು- ಹೀಗೆ ರೂಢವಾಗಿಯೂ ಅಕಾರಕ್ಕೆ ಭಗವದ್ವಾಚಕತ್ವವನ್ನು ಉಪಪಾದಿಸಿ ಮುಂದೆ ಯೋಗದಿಂದಲೂ ಭಗವದ್ವಾಚಕತ್ವವುಂಟೆಂದು ಸ್ಥಾಪಿಸುತ್ತಾರೆ.

## ಯೋಗರೀತಿಯಲ್ಲೂ ಅಕಾರವು ಭಗವದ್ವಾಚಕವೇ

ಇದು - ಈ ಅಕಾರವು, ವ್ಯಾಕರಣ ವ್ಯುತ್ಪತ್ತಿಯಾಲೇ - ವ್ಯಾಕರಣ ಮೂಲಕ ಧಾತು ಪ್ರತ್ಯಯಗಳಿಂದುಂಟಾದ ಪದಭಾವನೆಯಿಂದ, ಸರ್ವೇಶ್ವರನೈಚ್ಚೊಲ್ಲುಂ ಪೋದು - ಸರ್ವೇಶ್ವರನನ್ನು ಬೋಧಿಸುವಾಗ, ರಕ್ಷಣ ಪ್ರೀಣನಾದಿ ವಿಷಯಮಾನ ಧಾತುವಿಲೇ - ರಕ್ಷಣಾರ್ಥ ಪ್ರೀಣನಾರ್ಥವೇ ಮೊದಲಾದವನ್ನುಳ್ಳ ಧಾತುವಿನಿಂದ, ಅವರಕ್ಷಣ ಪ್ರೀಣನಾದಿಷು ಎಂದು ಹೇಳಿರುವಹಾಗೆ ಅವ ಎಂಬ ಧಾತುವಿಗೆ ರಕ್ಷಣ ಪ್ರೀಣನವೇ ಮೊದಲಾದ ಅರ್ಥಗಳುಂಟು, ಅಂತಹ ಅವಧಾತುವಿನಿಂದ ಕರ್ತ್ರರ್ಥವಾಚಿಯಾನ ಪ್ರತ್ಯಯತ್ತಾಲೇ - ಕರ್ತೃ

---

(೩) ಪಾಣಿನಿ ಸೂತ್ರ ವ್ಯಾಖ್ಯಾನವು ಮತ್ತು ಅಭಿಯುಕ್ತರ ಪ್ರಯೋಗವು.

ವನ್ನು ಸೂಚಿಸುವ ಕ್ವಿಪ್ರತ್ಯಯದಿಂದ, **ನಿಷ್ಪನ್ನವಾನ ಪದವಾಯ್** - ನಿಷ್ಪನ್ನವಾದ ಪದವಾಗಿ, ಹೇಗೆಂದರೆ **ಅವತೀತಿ ಅಃ** ಎಂಬದಾಗಿ ನಿಷ್ಪತ್ತಿಯು **ಸರ್ವರಕ್ಷಕಜ್ವಾದಿ ವಿಶಿಷ್ಟನಾಹ** - ಸರ್ವ ರಕ್ಷಕತ್ವವೇ ಮೊದಲಾದ ಕಲ್ಯಾಣ ಗುಣದಿಂದ ಯುಕ್ತನಾಗಿರುವಹಾಗೆ, **ಕಾಟ್ಟುವತ್** - ತೋರಿಸುತ್ತದೆ. ಇಲ್ಲಿನ ಆದಿಪದದಿಂದ ಪ್ರೀಣನತ್ವವೂ ಹೇಳಲ್ಪಟ್ಟಿತು; ಪ್ರಾಣಿವರ್ಗವನ್ನೆಲ್ಲಾ ಪ್ರೀತಿಸುವ ಶೀಲವು ಸೂಚಿಸಲ್ಪಟ್ಟಿತು. **"ರಕ್ಷಣಪ್ರೀಣನಾದಿ ವಿಷಯವಾನ ಧಾತು"** ವೆಂಬಲ್ಲಿ ಹೇಳಿರುವ ಆದಿ ಪದದಿಂದ, ಅವಧಾತುವಿಗೆ ರಕ್ಷಣೆ ಪ್ರೀಣನಗಳಲ್ಲದೆ ಇತರ ಅರ್ಥಗಳುಂಟೆಂಬ ಭಾವವು ಸೂಚಿಸಲ್ಪಟ್ಟಿತು. **ಅವರಕ್ಷೇ ಗತೌ ಕಾಂತೌ ಪ್ರೀತೌ ತೃಪ್ತೌ ದ್ಯುತೌ ಶ್ರುತೌ । ಪ್ರಾಪ್ತೌ ಶ್ಲೇಷೇರ್ಥನೇಚ್ಛೈವ"** ಎಂದೂ ಮತ್ತು **"ಅವತೀ ರಕ್ಷಣೇ ಕಾಂತೌ ಪ್ರೀತೌ ತೃಪ್ತೌ ದ್ಯುತೌ ಶ್ರುತೌ"** ಎಂದೂ ಹೇಳಿರುವಹಾಗೆ ಅವಧಾತುವಿಗೆ ನಾನಾರ್ಥವಿರುವದನ್ನು ಸೂಚಿಸುವದಕ್ಕಾಗಿ ಇಲ್ಲಿ ಆದಿ ಪದವು. ಅಂತಹ ಸರ್ವರಕ್ಷಕತ್ವವೂ ಸರ್ವರನ್ನೂ ಪ್ರೀತಿಸುವಸ್ವಭಾವವೂ ಭಗವಂತನಲ್ಲಿ ಮಾತ್ರವೇ ಇರುವದರಿಂದ **ಅವತೀತಿ ಅಃ** ಎಂಬುದರ ಮೂಲಕವಾಗಿ ಯೋಗರೂಪದಲ್ಲೂ ಅಕಾರವು ಭಗವದ್ವಾಚಕವೆಂದು ಉಪಪಾದಿಸಿದರು. **"ರಕ್ಷಿತಾ ಜೀವಲೋಕಸ್ಯ ಸ್ವಜನಸ್ಯ ಚ ರಕ್ಷಿತಾ" "ಪಿತೇವಪರಿತುಷ್ಯತಿ"** ಎಂಬ, **"ಪ್ರಜಾನಾಂಚ ಹಿತೇ ರತಃ"**(ರಾಮಾ. ಬಾಲ. ೧. ಎಂಬ)ಮಹರ್ಷಿಯ ಪ್ರಯೋಗಗಳು ಇಲ್ಲಿ ಅನುಸಂಧೇಯವು. ಸಾಮಾನ್ಯವಾಗಿ ಎಲ್ಲಾ ಜೀವರಾಶಿಗೂ ಅವರವರ ಕರ್ಮಾನುಸಾರವಾಗಿ ಆತನು ರಕ್ಷಕನು, **ಸ್ವಜನಸ್ಯಚ** - ತನ್ನ ಶರಣಾಗತರಾದ ಭಕ್ತರಿಗಾದರೋ, **ರಕ್ಷಿತಾ** – ಮೋಕ್ಷಪ್ರದಾತಾವಾಗಿಯೂ, ರಕ್ಷಕನೆಂಬುದು ಮೇಲಿನ ಶ್ಲೋಕಾರ್ಥಾರ್ಥವು. ಈ ರಕ್ಷಕತ್ವವು ನಿರುಪಾಧಿಕವೂ ಎಂದು ಸಾಮಾನ್ಯವಾಗಿ ಹೇಳಿ, ಆಶ್ರಿತರಲ್ಲಿ ಮಾತ್ರ ವ್ಯಾಜವನ್ನು ಅಪೇಕ್ಷಿಸುವದಾಗಿ ಸಹೇತುಕ ವೈಲಕ್ಷಣ್ಯವನ್ನುಳ್ಳದ್ದೆಂದು ಶ್ರೀರಾಮಾಯಣ ಪ್ರಮಾಣವು ಸೂಚಿಸುತ್ತದೆ. ಧಾತುವು ಕರ್ತೃತ್ವವನ್ನು ತೋರಿಸುವ ಸಂದರ್ಭದಲ್ಲಿ ಧಾತುವಿನ **ವ** ಕಾರಕ್ಕೆ ಲೋಪ ಬಂದು **ಅಃ** ಎಂದಾಗುತ್ತದೆಂಬ ಭಾವವು.

**ಅಕಾರದ ಧಾತುವಿಗೆ ಅನೇಕಾರ್ಥವಿರುವಾಗ ಪ್ರಾಧಾನ್ಯವು ರಕ್ಷಣಾರ್ಥಕ್ಕೆಹೇಗೆ?**

---

ಮೇಲೆ ಉದಾಹರಿಸಿರುವ **"ಅವರಕ್ಷೇಗತೌ"** ಎಂಬ ವಾಕ್ಯದಲ್ಲಿ ತೋರಿಬರುವಹಾಗೆ ಅವಧಾತುವಿಗೆ ಅನೇಕಾರ್ಥಗಳಿರುವಾಗ ಅದಕ್ಕೆ ರಕ್ಷಣಾರ್ಥವನ್ನು ಮಾತ್ರ ಮುಖ್ಯವಾಗಿ ಹೇಳಿದುದು ಹೇಗೆ? ಇತರಾರ್ಥಗಳ ನಿರುಕ್ತಿಯಿಂದ ಅರ್ಥಗಳನ್ನೇಕೆ ಹೇಳಕೂಡದು? ಎಂಬಾಕ್ಷೇಪಣೆಗೆ ಕಾರಣ ಸಹಿತವಾಗಿ ಸಮಾಧಾನವನ್ನು ಹೇಳುತ್ತಾರೆ. **ಇದ್ಧಾತು** - ಈ ಅಕಾರದಲ್ಲಿರುವ ಅವಧಾತು, **ಅನೇಕಾರ್ಥವಾಯಾಗಿಲುಮ್** - ನಿಘಂಟುವಿನಪ್ರಕಾರ ಅನೇಕಾರ್ಥವುಳ್ಳದ್ದಾದರೂ,

### ಅಸ್ಯ ಧಾತೋ ರನೇಕಾರ್ಥತ್ವಾ ತ್ಕಥ ಮಸ್ಯ ಪ್ರಾಧಾನ್ಯೇನ ರಕ್ಷಕತ್ವ ಬೋಧಕತ್ವ ಮಿತ್ಯತ್ರಾಹ

**ಇದ್ದಾತು ಅನೇಕಾರ್ಥಮೇಯಾಗಿಲುಮ್, ರಕ್ಷಣಾರ್ಥತ್ತಿಲ್ ಪ್ರಸಿದ್ಧಿ ಪ್ರಕರ್ಷತ್ತಾಲುಮ್, ಇನ್ವರ್ಥಮಿಙ್ಗೇ ಅಪೇಕ್ಷಿತಮಾಗೈಯಾಲುಮ್, ಇಙ್ಗೇ ನಾನಾರ್ಥಙ್ಗಳ್ ಅನುಸಂಧೇಯಙ್ಗಳಾಗ ಒರುನಿರುಕ್ತಿಯಿಲ್ಲಾಮೈಯಾಲುಮ್, ಪ್ರಥಮಪಠಿತಮಾನ ರಕ್ಷಣಮ್ ಶಾಬ್ದಮಾಯ್, ಮತ್ತ ಅಪೇಕ್ಷಿತಾರ್ಥಙ್ಗಳ್ ಇತ್ತಾಲೇ ಆಕ್ಷಿಪ್ತಙ್ಗಳಾಗ ಅನುಸಂಧಿಕ್ಕೈ ಉಚಿತಮೆನ್ರು ಇವ್ವಳವಿಲೇ ಯಾಚಾರ್ಯರ್‌ಗಳ್ ವ್ಯಾಖ್ಯಾನಮ್ ಪಣ್ಣಿನಾರ್‌ಗಳ್.**

---

**ರಕ್ಷಣಾರ್ಥತ್ತಿಲ್** - ರಕ್ಷಣೆ ಎಂಬ ಅರ್ಥದಲ್ಲಿ, **ಪ್ರಸಿದ್ಧಿ ಪ್ರಕರ್ಷತ್ತಾಲುಮ್**- ಪ್ರಸಿದ್ಧಿರೂಪ ಉತ್ಕರ್ಷವಿರುವದರಿಂದಲೂ, **ಇನ್ವರ್ಥಂ** - ಚೇತನನಿಗೆ ಅನಿಷ್ಟ ನಿವೃತ್ತಿಮೂಲಕ ಇಷ್ಟಪ್ರಾಪ್ತಿರೂಪ ರಕ್ಷಣತ್ವವು, **ಇಙ್ಗೇ ಅಪೇಕ್ಷಿತಮಾಗೈಯಾಲುಮ್** – ಈ ಪ್ರಣವಾರ್ಥ ಪ್ರಶಂಸೆಯಲ್ಲಿ ಬೇಕಾಗಿರುವದರಿಂದಲೂ, **ಇಙ್ಗೇ**- ಈ ಪ್ರಣವದ ಅಕಾರಾರ್ಥ ನಿರ್ಣಯದ ಸಂರ್ಭದಲ್ಲಿ, **ಒರು ನಿರುಕ್ತಿಯಿಲ್ಲಾಮೈಯಾಲುಮ್** - ಯಾವ ಪ್ರಾಜ್ಞರೊಬ್ಬರೂ ನಿರುಕ್ತಿಯ ಮೂಲಕ ಇತರ ಧಾತ್ವರ್ಥಗಳಿಂದುಂಟಾದ ಅರ್ಥಗಳನ್ನು ಬೋಧಿಸಲಿಲ್ಲವಾದುದರಿಂದಲೂ, ನಿರುಕ್ತಿ ಎಂದರೆ ಧಾತ್ವರ್ಥ ಪ್ರತ್ಯಯಗಳ ಮೂಲಕ ಅರ್ಥಮಾಡೋಣವು, **ಪ್ರಥಮಪಠಿತಮಾನ**-ನಾನಾರ್ಥವನ್ನು ಬೋಧಿಸುವ ವಾಕ್ಯದಲ್ಲಿ ಮೊದಲು ಹೇಳಲ್ಪಟ್ಟ, ಅವ ರಕ್ಷೇ ಗತೌ ಎಂಬ ವಾಕ್ಯದಲ್ಲಿ ಅವರಕ್ಷೇ ಎಂದು ಮೊದಲು ಹೇಳಲ್ಪಟ್ಟಿರುವ, **ರಕ್ಷಣಮ್ ಶಾಬ್ದಮಾಯ್**-ರಕ್ಷಣವು ಶಾಬ್ದವಾಗಿ, **ಅನುಸಂಧಿಕ್ಕೈ**-ತೋರಿಬರುತ್ತದೆಂದು ಅನುಸಂಧಾನಮಾಡೋಣವೂ, **ಮತ್ತ ಅಪೇಕ್ಷಿತಾರ್ಥಙ್ಗಳ್** - ಮಿಕ್ಕ ಅಪೇಕ್ಷಿತವಾದ ಇತರ ಧಾತ್ವರ್ಥದಿಂದ ತೋರಿಬರುವ ಅರ್ಥಗಳು, **ಆಕ್ಷಿಪ್ತಙ್ಗಳಾಗ** - ಬಲಾತ್ಕಾರವಾಗಿ ತೋರಿ ಅವುಗಳನ್ನು ಒಳಗೊಂಡವುಗಳಾಗಿ, **ಅನುಸಂಧಿಕ್ಕೈ** - ಅನುಸಂಧಾನಮಾಡುವದೂ ಕೂಡ, **ಉಚಿತಮೆನ್ರು** - ಯೋಗ್ಯವಾದುದೆಂದು ಭಾವಿಸಿ, **ಇವ್ವಳವೇ** – ಇಷ್ಟು ಮಾತ್ರವೇ, **ಆಚಾರ್ಯರ್‌ಗಳ್** - ಪರಾಶರ ಭಟ್ಟರೇ ಮೊದಲಾದ ಆಚಾರ್ಯರುಗಳು, **ವ್ಯಾಖ್ಯಾನಮ್ - ಪಣ್ಣಿನಾರ್‌ಗಳ್** - ವ್ಯಾಖ್ಯಾನವನ್ನು ಮಾಡಿದರು. ಅದೇನು ಅವರಕ್ಷೇ ಎಂಬ ಧಾತ್ವರ್ಥವನ್ನು ಮಾತ್ರ ಪರಿಗ್ರಹಿಸಿ ಮಿಕ್ಕ ಧಾತ್ವರ್ಥಗಳನ್ನೆಲ್ಲಾ ಪರಿತ್ಯಾಗಮಾಡಿದುದು ? ಎಂದರೆ ಸಂಪ್ರದಾಯಾರ್ಥವೇ ನಮಗೆ ಉಪಾದೇಯವೇ ವಿನಾ ಮಿಕ್ಕ ಅರ್ಥಗಳು ನಮಗೆ ಉಪಾದೇಯವಲ್ಲವೆಂದು ಹೇಳಿದರು. ಪ್ರಣವದ ಅಕಾರದಿಂದ ಶೇಷ ಶೇಷಿ ಭಾವವೂ ರಕ್ಷ್ಯರಕ್ಷಕ ಭಾವವೇ ಮುಖ್ಯವಾ ಚೇತನನ ರಕ್ಷಣತ್ವವೇ ಹೇಳಬೇಕಾಗಿರುವದರಿಂದ, ಇತರ ಧಾತ್ವರ್ಥಗಳನ್ನು ಅಙ್ಗೀಕರಿಸಿ ಯಾವ ಆಚಾ

**ಇನ್ದ ರಕ್ಷಕತ್ವಂ ಅನಚ್ಛೇದ(ಕೆ)ಮಿಲ್ಲಾಮೈಯಾಲೇ ಸರ್ವವಿಷಯಮ್. ರಕ್ಷಾ (ರಕ್ಷಣ) ಪ್ರಕಾರಙ್ಗಳ್ ವಿಷಯಙ್ಗಳ್ ತೋರುಮ್ ಪ್ರಮಾಣಙ್ಗಳ್ ಕಾಟ್ಟಿನ ಪಡಿಯಿಲೇ ವಿಚಿತ್ರಙ್ಗಳಾಯಿರುಕ್ಕುಮ್.**

---

ರ್ಯರುಗಳೂ ಸ್ವಾರಸ್ಯಾರ್ಥಗಳನ್ನು ನಿರುಕ್ತಿಯಿಂದ ತೋರಿಸಲಿಲ್ಲವಾದುದರಿಂದಲೂ, ಮುಖ್ಯವಾದ ರಕ್ಷಣಾರ್ಥವೇ ಪ್ರಥಮದಲ್ಲಿ ನಾನಾರ್ಥವಾಕ್ಯದಲ್ಲಿ ಶಬ್ದವಾಗಿ ಬೋಧಿತವಾಗಿರುವದರಿಂದಲೂ, ಇತರ ಧಾತ್ವರ್ಥಗಳಿಂದ ಯಾವ ಅರ್ಥ ಸ್ವಾರಸ್ಯವನ್ನೂ ಸಾಂಪ್ರದಾಯಿಕವಾಗಿ ನಮ್ಮ ಆಚಾರ್ಯರುಗಳು ತಮ್ಮ ಸಚ್ಛಿಷ್ಯರಿಗೆ ಬೋಧಿಸದೆ ಇರುವದರಿಂದಲೂ, ಸರ್ವರಕ್ಷಕತ್ವವೆಂಬರ್ಥವನ್ನೇ ಅಕಾರ ವಾಚ್ಯಪ್ರಧಾನಾರ್ಥವನ್ನಾಗಿ ಭಾವಿಸಿದರು ಎಂಬಭಿಪ್ರಾಯವು.

ಆಗಲಿ, ಭಗವಂತನೇನೋ ರಕ್ಷಕನು ಎಂದೇನೋ ಹೇಳಿದಂತಾಯಿತು. ಬಹುಶಃ ಕೆಲವರನ್ನು ಮಾತ್ರ ಆತನು ರಕ್ಷಿಸಬಹುದು. ಆದನ್ನು **ಪ್ರಸಿದ್ಧಿ ಪ್ರಕರ್ಷತಾತ್ತುಲುಮ್** ಎಂದು ಪ್ರಯೋಗಿಸಿರುವದು ಹೇಗೆ ನ್ಯಾಯವು? ಎಂಬ ಆಕ್ಷೇಪಕ್ಕೆ ಆತನು ಸರ್ವರಕ್ಷಕನು, ಜೀವವರ್ಗವೆಲ್ಲಾ ರಕ್ಷ್ಯವೆ, ಎಂದು ಸಮಾಧಾನವನ್ನು ಸಹೇತುಕವಾಗಿ ಹೇಳುತ್ತಾರೆ—

**ಇನ್ದ ರಕ್ಷಕತ್ವಂ** - ಮೇಲೆ ಶಾಬ್ದವಾಗಿ ಅವರಕ್ಷಣೇ ಎಂಬ ಧಾತ್ವರ್ಥದಿಂದ ಸ್ಥಾಪಿಸಿದ ರಕ್ಷಕತ್ವವು, **ಅನಚ್ಛೇದಕೆ ಮಿಲ್ಲಾಮೈಯಾಲೇ** - ಇಂತವರಿಗೆ ಮಾತ್ರವೇ ರಕ್ಷಣೆಯುಂಟು, ಇಂತವರಿಗೆ ಇಲ್ಲವೆಂದು ಸಂಕೋಚವಿಲ್ಲದಿರುವದರಿಂದ, **ಸರ್ವವಿಷಯಮ್** – ಸಮಸ್ತ ಜೀವ ವರ್ಗವನ್ನೂ ಕುರಿತದ್ದು. ಈ ಸರ್ವ ರಕ್ಷಕತ್ವವನ್ನೇ "**ಕೋಹ್ಯೇವಾ ನ್ಯಾತ್ಕಃ ಪ್ರಾಣ್ಯಾತ್, ಯದೇಷ ಆಕಾಶ ಆನಂದೋ ನಸ್ಯಾತ್, ಏಷಹ್ಯೇವಾಽನಂದಯಾತಿ**" ಎಂಬ ಉಪನಿಷದ್ವಾಕ್ಯವು ಸಮರ್ಥಿಸುತ್ತದೆ.—ಈ ಪರಮಾತ್ಮನು ಆನಂದಮಯನಲ್ಲದಿದ್ದರೆ ಇನ್ನು ಯಾರುತಾನೇ ಸರ್ವವಿಧ ಸಾಂಸಾರಿಕ ಆಮುಷ್ಮಿಕ ಪುರುಷಾರ್ಥಗಳನ್ನು ಕೊಡಲು ಶಕ್ತರು; ಆದುದರಿಂದ ಸರ್ವರಿಗೂ ಆನಂದವನ್ನು ಕೊಡುವವನೇ ಅವನು ಎಂಬ ತಾತ್ಪರ್ಯವು. **ರಕ್ಷಿತಾಜೀವಲೋಕಸ್ಯ** ಎಂದು ಹೇಳಿದ ಹಾಗೆ ಸಮಸ್ತ ಜೀವ ವರ್ಗಕ್ಕೂ ಈ ರಕ್ಷಕತ್ವವು ಅನ್ವಯಿಸುತ್ತದೆಂಬ ಭಾವವು. ಆಗಲಿ ಬದ್ಧರು ಮುಕ್ತರು ನಿತ್ಯರು ಎಂದು ಜೀವವರ್ಗವು ಮೂರು ವಿಧವು. ಆವರಿಗೆಲ್ಲಾ ಒಂದೇ ವಿಧವಾದ ರಕ್ಷಕತ್ವವು ಹೇಗೆ? ಬದ್ಧರಲ್ಲೇ ಸುಕೃತದುಷ್ಕೃತ ಪರಿಪಾಕದಿಂದ ಭಿನ್ನತ್ವವಿದೆ. ಹೀಗಿರುವಾಗ ಒಂದೇ ವಿಧರಕ್ಷಕತ್ವವು ಹೇಗೆ? ಎಂದರೆ ಅವರವರುಗಳ ಸ್ಥಿತ್ಯನುಸಾರವಾಗಿ ರಕ್ಷಣೆಯಲ್ಲೂ ವೈಚಿತ್ರ್ಯವೂ ವ್ಯತ್ಯಾಸವೂ ಉಂಟು ಎಂದು ಮುಂದೆ ಹೇಳುತ್ತಾರೆ.—**ಈ ರಕ್ಷಾಪ್ರಕಾರಙ್ಗಳ್** - ಈ ಚೇತನರನ್ನು ಭಗವಂತನು ರಕ್ಷಿಸುವ ಪ್ರಕಾರಗಳು, **ವಿಷಯಙ್ಗಳ್ ತೋರುಮ್** – ಸಂಸಾರಿ

**ಇದು ಹೇತುನಿರ್ದೇಶಮ್ ಪಞ್ಚಮ್ಯೈಯಾಲೇ ನಿರುಪಾಧಿಕಮಾಯ್**

ಮುಮುಕ್ಷು, ಮುಕ್ತಾದಿಗಳ ವಿಷಯದಲ್ಲಿ, **ಪ್ರಮಾಣಙ್ಗಳ್ ಕಾಟ್ಟಿನ ಪಡಿಯಿಲೇ** - ಶಾಸ್ತ್ರ ಪ್ರಮಾಣಗಳು ಪ್ರದರ್ಶಿಸಿದ ಹಾಗೆ, **ವಿಚಿತ್ರಙ್ಗಳಾಯಿರುಕ್ಕುಮ್** - ನಾನಾ ವಿಧವಾಗಿ ವ್ಯತ್ಯಸ್ತವಾಗಿರುವದರಿಂದ ವಿಚಿತ್ರಗಳಾಗಿರುವುವು. ಸಂಸಾರಿ ವಿಷಯದಲ್ಲಿ ಒಂದು ವಿಧ ರಕ್ಷಣೆಯೂ, ಮುಮುಕ್ಷುವಿಗೆ ಬೇರೆ ವಿಧವಾಗಿಯೂ ನಿತ್ಯಮುಕ್ತರಿಗೆ ವಿಲಕ್ಷಣವಾಗಿಯೂ ಹೀಗೆ ವಿಚಿತ್ರವಾಗಿರುವದು ಎಂಬ ತಾತ್ಪರ್ಯವು. ಬದ್ಧರಿಗೆಲ್ಲಾ ಸಾಮಾನ್ಯವಾಗಿ ಕರಣ ಕಳೇಬರ ಯೋಗವೇನು, ಸುಕೃತಿಗೆ ಜ್ಞಾನವಿರುವ ಮನುಷ್ಯಾದಿ ಜನ್ಮವೇನು, ಶಾಸ್ತ್ರಪ್ರದಾನವೇನು, ಶಾಸ್ತ್ರ ಬೋಧಕ ಸದ್ಗುರುಪ್ರಾಪ್ತಿಯುಂಟಾಗುವದೇನು, ಇವೆಲ್ಲವೂ ರಕ್ಷಣವೇ. ಸಂಸಾರಿಗಳಿಗಿರುವ ಐಹಿಕ ಸುಖಗಳಿಗೆ ಬೇಕಾದ ಅನ್ನಪಾನ ದ್ರವ್ಯಾದಿಗಳನ್ನೂ ಕಳತ್ರ ಸುತಗೇಹಕ್ಷೇತ್ರಪ್ರಾಪ್ತಿಗಳನ್ನೂ,ಉಂಟುಮಾಡುವಪ್ರಕಾರದಲ್ಲಿರಕ್ಷಣೆಯು;ಮೋಕ್ಷಾರ್ಥಿಗಳಿಗೆ ಬೇಕಾದ ಉಪಾಯಾನುಷ್ಠಾನ ಉಂಟಾಗುವದಕ್ಕಾಗಿ ಮಾಡುವ ಸಹಾಯಗಳಾದ ಸಾಧುಸಮಾಗಮ, ಸದಾಚಾರ್ಯಪ್ರಾಪ್ತಿ, ತತ್ವ ಯಾಥಾತ್ಮ್ಯೋಪದೇಶವೂ, ಅನಂತರ ಉಪಾಯಾನುಷ್ಠಾನವೂ, ಅರ್ಚಿರಾದಿಗತಿ, ಸ್ವಪ್ರಾಪ್ತಿ ಇವೇ ಮೊದಲಾದ ರಕ್ಷಣೆಗಳು ; ಮುಕ್ತರಿಗೆ ಪರಿಪೂರ್ಣ ಬ್ರಹ್ಮಾನುಭವ ನಿತ್ಯ ಕೈಙ್ಕರ್ಯ ಪ್ರಾಪ್ತಿ ರೂಪರಕ್ಷಣೆಯು ; ನಿತ್ಯರಿಗೆ ಇದರೊಂದಿಗೆ ಸ್ವಾಮಿ ಅಪೇಕ್ಷಾನುಗುಣವಾಗಿ ನಿಯತ ಕೈಙ್ಕರ್ಯವು. ಹೀಗೆ ರಕ್ಷಣೆಯಲ್ಲಿ ವೈಲಕ್ಷಣ್ಯವು ಇರುವದರಿಂದ ವಿಚಿತ್ರಙ್ಗಳಾಯಿರುಕ್ಕುಮ್ ಎಂಬ ಪ್ರಯೋಗವು.

ಈ ಜೀವವರ್ಗದ ವಿಷಯದಲ್ಲಿ ಕೃಪಾ ಪ್ರೇರಿತನಾದ ಭಗವಂತನ ಈ ರಕ್ಷಕತ್ವವೇನು ಸೋಪಾಧಿಕವೇ ಅಥವಾ ನಿರುಪಾಧಿಕವೇ ಎಂದು ಮುಂದೆ ಚರ್ಚಿಸುತ್ತಾರೆ. ಇಂತವರಿಗೆ ಈ ಕಾರಣದಿಂದ ರಕ್ಷಣೆ ಎಂದು ಹೇಳವಿರುವದರಿಂದ ಸಾರ್ವತ್ರಿಕವಾಗಿ ರಕ್ಷಕತ್ವವೆಂಬುದು "**ರಾಮಃ ಕರುಣ ವೇದೀಚ ಪ್ರಜಾನಾಂ ಚ ಹಿತೇ ರತಃ**" ಎಂಬಲ್ಲಿ ಹೇಳಿರುವಹಾಗೆ ಯಾವಾಗ ಏರ್ಪಟ್ಟಿತೋ, ಆಗ ನಿರುಪಾಧಿಕವೆಂದು ತೋರಿಬರುತ್ತದೆ; ಹಾಗಾದರೆ ಸಾಧಾರಣ ರಕ್ಷಣೆಗೆ ಸುಕೃತಾಪೇಕ್ಷೆಯೂ, ಮೋಕ್ಷಾರ್ಥಿಗೆ ಭಕ್ತಿಪ್ರಪತ್ತಿರೂಪಉಪಾಯಾನುಷ್ಠಾನವೂ, ಅಪೇಕ್ಷಿತವಾಗಿರುವದು ಹೇಗೆ? ಎಂದರೆ ಸಮಾಧಾನವನ್ನು ಹೇಳುತ್ತಾರೆ. ಲೋಕದಲ್ಲಿ ಎಲ್ಲರ ವ್ಯಾಪಾರಗಳು ಒಂದೇ ವಿಧವಲ್ಲವು. ಶ್ರುತಿಯಲ್ಲಿ ಸಾಧುಕರ್ಮಕ್ಕೆ ಒಳ್ಳೇ ಫಲವೂ ಅಸಾಧು ಕರ್ಮಕ್ಕೆ ನೀಚಫಲವೂ ಹೇಳಿರುತ್ತದೆ. ಅವರವರುಗಳ ಕರ್ಮಾನುಗುಣವಾಗಿ ಫಲವನ್ನು ಕೊಟ್ಟರೇನೇ ಸರ್ವೇಶ್ವರನಿಗೆ ವೈಷಮ್ಯಾದಿ ದೋಷವಿಲ್ಲವಾಗುವದರಿಂದ, ಸಾಮಾನ್ಯವಾಗಿ ರಕ್ಷಣವು ನಿರುಪಾಧಿಕವಾದರೂ, ಆಯಾ ಫಲಗಳಿಗೆ ಅನುಗುಣವಾದ ವ್ಯಾಜಸಾಪೇಕ್ಷವನ್ನು ಸ್ವಾಮಿಯು ಎದುರು ನೋಡುವನೆಂದು ಮುಂದೆ

**ತ್ತೋನ್ರಿನಾಲುಮ್ ಸಾಪರಾಧರಾನ ಸಂಸಾರಿಗಳುಕ್ಕು ಮೋಕ್ಷಾದಿ ಪ್ರದಾನತ್ತಿಲ್ ಸ್ವತಂತ್ರನಾನ ಈಶ್ವರರ್ ತಾಂ ಸಙ್ಕಲ್ಪಿತ್ತು ವೈತ್ತದೊರು ವ್ಯಾಜತ್ತೈ ಅಪೇಕ್ಷಿತ್ತಿರುಕ್ಕುಮ್.**

---

ಹೇಳುತ್ತಾರೆ.—ಇದು - ಈ ರಕ್ಷಣೆಯು, **ಹೇತು ನಿರ್ದೇಶಮ್ ಪಣ್ಣಾಮೈಯಾಲೇ** - ಆದಕ್ಕೆ ಕಾರಣವನ್ನು ಹೇಳದೆ ಇರುವದರಿಂದ, ಇಂತಹ ಸಂದರ್ಭದಲ್ಲೇ ರಕ್ಷಣವು, ಅದಿಲ್ಲದಿದ್ದರೆ ಇಲ್ಲವೆಂದು ಹೇಳದೇ ಇರುವದರಿಂದ, **ನಿರುಪಾಧಿಕಮಾಯ್ ತೋನ್ರಾಲುಮ್** – ನಿರುಪಾಧಿಕವಾಗಿ ತೋರಿದರೂ, **ಸಾಪರಾಧರಾನ ಸಂಸಾರಿಗಳುಕ್ಕು** - ಅಪರಾಧದಿಂದ ಕೂಡಿದ ಸಂಸಾರಿಗಳಿಗೆ, **ಮೋಕ್ಷಾದಿಪ್ರದಾನತ್ತಿಲ್**-ಮೋಕ್ಷವೇ ಮೊದಲಾದವುಗಳನ್ನು ಕೊಡುವದರಲ್ಲಿ, ಸ್ವತಂತ್ರನಾದ, ಸರ್ವೇಶ್ವರನು, **ತಾಂ ಸಙ್ಕಲ್ಪಿತ್ತು ವೈತ್ತದು** - ತಾನು ಸಂಙ್ಕಲ್ಪಿಸಿಟ್ಟಿರುವ **ಒರುವ್ಯಾಜತ್ತೈ** - ಒಂದು ವ್ಯಾಜವನ್ನು ಎಂದರೆ ಭಕ್ತಿ ಪ್ರಪತ್ತಿಗಳಾದ ಉಪಾಯಗಳಲ್ಲೊಂದನ್ನೂ, ಸದ್ವಾರಕ ಪ್ರಪತ್ತಿ ಅಥವಾ ಅದ್ವಾರಕ ಪ್ರಪತ್ತಿಯ ಅನುಷ್ಠಾನವನ್ನು ಎಂಬ ಭಾವವು, **ಅಪೇಕ್ಷಿತ್ತಿರುಕ್ಕುಮ್** - ಅಪೇಕ್ಷಿಸಿರುತ್ತದೆ. ರಕ್ಷಕತ್ವವೇನೋ ನಿರ್ಹೇತುಕವೇ, ಏಕೆಂದರೆ ಈ ವ್ಯಾಜರೂಪಗಳಾದ ಭಕ್ತಿ ಪ್ರಪತ್ತಿಗಳ ಮೂಲಕವಾದರೂ ಮೋಕ್ಷವನ್ನು ತಾನು ಕೊಡಬೇಕೆಂಬ ನಿರ್ಬಂಧವೇನು ? ಹಾಗೆ ಸಙ್ಕಲ್ಪಿಸಿರುವದೇ ನಿರ್ಹೇತುಕವಲ್ಲವೋ? ಹಾಗೆ ಸಙ್ಕಲ್ಪಿಸಿರುವದು ತಾನು ಸರ್ವಸತಂತ್ರನಾದ ಪ್ರಯುಕ್ತವಾದುದೆಂದು ತಿಳಿಸುವದಕ್ಕಾಗಿಯೇ ಸ್ವತಂತ್ರನಾದ ಈಶ್ವರರ್ ಎಂಬ ಪ್ರಯೋಗವು. ಹಾಗೆ ಸ್ವತಂತ್ರನಾದರೆ ಹಾಗೆಯೇ ಮೋಕ್ಷವನ್ನು ತನಗೆ ಇಷ್ಟ ಬಂದವರಿಗೆ ಕೊಡಬಹುದಲ್ಲಾ ? ಎಂದರೆ, ಹಾಗೆ ಕೊಟ್ಟರೆ ವೈಷಮ್ಯ ನೈರ್ಘೃಣ್ಯಕ್ಕೆ ಆತನನ್ನು ಗುರಿಮಾಡುವರು. ರಾಜನೇನೋ ಸ್ವತಂತ್ರನು ಮಹಾಧರ್ಮಿಷ್ಠನು ; ಆತನಿಗೆ ಈಷದಪಿ ಪಕ್ಷಪಾತವಿಲ್ಲವು. ಆದರೂ ಶಿಕ್ಷರಕ್ಷೆಗಳಿಗೆ ಕಾನೂನನ್ನು ಏರ್ಪಡಿಸಿ ತದನುಗುಣವಾಗಿಯೇ ಹೇಗೆ ನಡೆಯುತ್ತಾನೋ ಹಾಗೆಯೇ ಈ ಸಂದರ್ಭದಲ್ಲೂ ಎಂದು ಭಾವಿಸತಕ್ಕದ್ದು. ಆದರಿಂದ ರಾಜನ ಸ್ವಾತಂತ್ರ್ಯಕ್ಕೇನೂ ಹೇಗೆ ನ್ಯೂನತೆಯಿಲ್ಲವೋ ಹಾಗೆಯೇ ಸರ್ವೇಶ್ವರನಿಗೂ ಕೂಡ ಈ ವ್ಯಾಜ ಸಾಪೇಕ್ಷತ್ವದಿಂದ ಆತನ ಸ್ವಾತಂತ್ರ್ಯಕ್ಕೇನೂ ಕುಂದಕವಿಲ್ಲವು; ಆದುದರಿಂದ ರಕ್ಷಕತ್ವವು ನಿರ್ಹೇತುಕವೆಂದು ಹೇಳಲು ಏನೊಂದೂ ಅಭ್ಯಂತರವಿಲ್ಲವು.

ಹಿಂದಿನ ವಾಕ್ಯದಲ್ಲಿ ಬದ್ಧರ ವಿಷಯದಲ್ಲಿ ರಕ್ಷಕತ್ವವ್ಯತ್ಯಾಸವನ್ನುಪಪಾದಿಸಿ ವ್ಯಾಜಸಾಪೇಕ್ಷತ್ವವನ್ನು ಉಪಪಾದಿಸಿ ಹೇಳಿದರು. ಮುಂದಿನ ವಾಕ್ಯದಿಂದ ರಕ್ಷಕತ್ವದ ವೈಚಿತ್ರ್ಯತೆಯು ನಿತ್ಯಮುಕ್ತರ ವಿಷಯದಲ್ಲಿ ಹೇಗೆ ಎಂಬುದನ್ನು ತಿಳಿಸುತ್ತಾರೆ. ಬದ್ಧರ ವಿಷಯದಲ್ಲಿ ಹೀಗೆ ಸ್ವಲ್ಪಮಟ್ಟಿಗೆ ಸೋಪಾಧಿಕವಾಗಿ ತೋರಿದರೂ, ನಿತ್ಯಮುಕ್ತರ ವಿಷಯದಲ್ಲಾದರೋ ಸೋಪಾಧಿಕವಲ್ಲದೆ ಸಂಪೂರ್ಣವಾಗಿ

**ನಿತ್ಯರ್ ಪಕ್ಕಲಿಲುಮ್, ಮುಕ್ತರ್ ಪಕ್ಕಲಿಲುಮ್, ನಿರುಪಾಧಿಕ ಸಹಜ ಕಾರುಣ್ಯಮಾತ್ರತ್ತಾಲೇ ಸ್ಥಿತಸ್ಥಾಪನರೂಪೇಣರಕ್ಷೈಮುಳಕ್ಕ ನಡಕ್ಕುಮ್.**

**ಇಪ್ಪಡಿ ಸ್ವಾಭಾವಿಕಮಾನ ರಕ್ಷಕತ್ವಂ ಪ್ರಾತಿಕೂಲ್ಯಂ ನಡೆಕ್ಕುಂ ಕಾಲತ್ತಿಲ್ ಅನಾದ್ಯಪರಾಧತ್ತಾಲೇ ಪಿರನ್ದ ನಿಗ್ರಹ ರೂಪೋಪಾಧಿಯಾಲೇ ಪ್ರತಿಬದ್ಧ(ಮಾ)ಮ್. ಪ್ರತಿಬಂಧಕಮಾನ ಇವ್ವುಪಾಧಿಯೈಕಳಿಕ್ಕೈಕ್ಕಾಗವೇ ಪ್ರಪತ್ತಿ ಮುದಲಾನ ವ್ಯಾಜಙ್ಗಳ್ ಶಾಸ್ತ್ರಸಿದ್ಧಙ್ಗಳ್.**

---

ನಿರುಪಾಧಿಕವೆಂದು ಉಪಪಾದಿಸುತ್ತಾರೆ.—**ನಿತ್ಯರ್ ಪಕ್ಕಲಿಲುಮ್** - ನಿತ್ಯರ ವಿಷಯದಲ್ಲೂ, **ಮುಕ್ತರ ಪಕ್ಕಲಿಲುಮ್** - ಮುಕ್ತರ ವಿಷಯದಲ್ಲೂ, **ನಿರುಪಾಧಿಕ ಸಹಜಕಾರುಣ್ಯಮಾತ್ರತ್ತಾಲೇ** - ಬದ್ಧರ ವಿಷಯದಲ್ಲಿನಹಾಗೆ ಏನೊಂದೂ ವ್ಯಾಜಗಳೂ ಬೇಕಿಲ್ಲದೇ ಬರೀ ತನ್ನ ಸಹಜವಾಗಿ ನಿರ್ಹೇತುಕವಾದ ಕಾರುಣ್ಯಮಾತ್ರದಿಂದಲೇ, **ಸ್ಥಿತಸ್ಥಾಪನರೂಪೇಣ** - ಇರುವದನ್ನೇ ಸ್ಥಾಪಿಸುವ ರೀತಿಯಲ್ಲಿ, ಹೇಗೆಂದರೆ ರಾಜನಿಂದ ರಕ್ಷಿಸಲ್ಪಟ್ಟ ರಾಜ್ಯದಲ್ಲೇ ಅಭಿಷಿಕ್ತನಾದ ರಾಜಪುತ್ರನು ರಕ್ಷಿಸುವರೀತಿಯಲ್ಲಿ, ನಿರ್ಹೇತುಕ ಕೃಪೆಯು ಇದ್ದೇ ಇತ್ತು, ಅದಕ್ಕೆ ಈಗ ಯಾವದೊಂದು ಪ್ರತಿಬಂಧಕವೂ ಇಲ್ಲವಾದುದರಿಂದ ಅದು ಸ್ಥಾಪಿತವಾಯಿತು ಎಂಬ ಭಾವವನ್ನು ಪ್ರದರ್ಶಿಸುವದಕ್ಕಾಗಿ ಸ್ಥಿತ ಸ್ಥಾಪನರೂಪೇಣ ಎಂಬ ಪ್ರಯೋಗವು, **ರಕ್ಷೈ** - ರಕ್ಷಣೆಯು, **ಮುಳಕ್ಕ** - ಏನೊಂದೂ ಪ್ರತಿಬಂಧವಿಲ್ಲದೆ ನಿರ್ಹೇತುಕವಾಗಿ, **ನಡಕ್ಕುಮ್** - ತನಗೆ ಹೇಗೆ ಆನಂದವೋ, ಅದಕ್ಕೆ ಸಮಾನವಾದ ಆನಂಡವನ್ನು ಕೊಡುವದರ ಮೂಲಕ ನಡೆಯುತ್ತದೆ. ಬದ್ಧರ ವಿಷಯದಲ್ಲಿ ಈ ನಿರುಪಾಧಿಕ ರಕ್ಷಕತ್ವವು ವ್ಯಾಜಸಾಪೇಕ್ಷವಾಗಿಯೂ ನಿತ್ಯಮುಕ್ತರ ವಿಷಯದಲ್ಲಿ ವ್ಯಾಜಸಾಪೇಕ್ಷವಿಲ್ಲದೆ ಸಂಪೂರ್ಣವಾಗಿ ನಿರುಪಾಧಿಕವಾಗಿಯೂ ಇರಲು ಕಾರಣವೇನೆಂಬುದನ್ನು ಮುಂದಿನ ವಾಕ್ಯಗಳಿಂದ ಉಪಪಾದಿಸಿ ಹೇಳುತ್ತಾರೆ—**ಇಪ್ಪಡಿ**- ಮೇಲೆ ನಿತ್ಯಮುಕ್ತರ ವಿಷಯದಲ್ಲಿ ಉಪಪಾದಿಸಿ ಹೇಳಿದ ರೀತಿಯಲ್ಲಿ, **ಸ್ವಾಭಾವಿಕಮಾನ ರಕ್ಷಕತ್ವಂ** - ಸಹಜವಾಗಿ ರಕ್ಷಿಸುವ ಸ್ವಭಾವವು, **ಪ್ರಾತಿಕೂಲ್ಯಂ ನಡೆಕ್ಕುಂ ಕಾಲತ್ತಿಲ್** - ಪ್ರಾತಿಕೂಲ್ಯವು ಹೆಚ್ಚಾಗಿ ನಡೆಯುವ ಸಂಸಾರಾವಸ್ಥೆಯಲ್ಲಿ, **ಅನಾದ್ಯ ಪರಾಧತ್ತಾಲೇ** - ಬದ್ಧ ಜೀವರು ಅನಾದಿಕಾಲದಿಂದಲೂ ಮಾಡುತ್ತಿರುವ ಅಪರಾಧದಿಂದ, **ಪಿರನ್ದ** - ಹುಟ್ಟಿದ, **ನಿಗ್ರಹ ರೂಪೋಪಾಧಿಯಾಲೇ** - ಭಗವನ್ನಿಗ್ರಹರೂಪವಾದ ತಡೆಯಿಂದ, **ಪ್ರತಿಬದ್ಧಮಾಮ್** – ನಿರೋಧಿಸಲ್ಪಡುತ್ತದೆ. **ಪ್ರತಿಬಂಧಕಮಾನ** - ಆರಕ್ಷಣೆಗೆ ಪ್ರತಿಬಂಧಕವಾದ **ಇವ್ವುಪಾಧಿಯೈ** – ಭಗವನ್ನಿಗ್ರಹರೂಪ ತಡೆಯನ್ನು, **ಕಳಿಕ್ಕೈಕ್ಕಾಹವೇ** – ಕಳೆದುಕೊಳ್ಳುವದಕ್ಕಾಗಿಯೇ, **ಪ್ರಪತ್ತಿಮೊದಲಾನ** - ಭಕ್ತಿ ಪ್ರಪತ್ತಿರೂಪ ಉಪಾಯಾನುಷ್ಠಾನಗಳು, **ಶಾಸ್ತ್ರಸಿದ್ಧಙ್ಗಳ್** - ಶಾಸ್ತ್ರಗಳಿಂದ ಬೋಧಿತಗಳಾಗಿವೆ.

ರಕ್ಷೈಕತ್ವವೇ ಭಗವಂತನಿಗೆ ಸಹಜ ಧರ್ಮವು; ನಿರ್ಹೇತುಕ ಕೃಪಾ ಪ್ರವಾಹ ದಿಂದುಂಟಾದುದು; ಈ ರಕ್ಷಣೆಗೆ ಬೇಕಾದುದು ಸಾಮರ್ಥ್ಯವೂ ಕರುಣೆಯೂ; ಇವೆರಡೂ ಸಮಗ್ರವಾಗಿ ಭಗವಂತನಲ್ಲಿ ನೆಲೆಗೊಂಡಿವೆ. ಬದ್ಧದೆಶೆಯಲ್ಲಿ ಇದು ನಿರುಪಾಧಿಕವಾಗಿರಲು ತಡೆ ಏನು ಎಂದರೆ ನಾವು ಪ್ರತಿಕೂಲ ಪ್ರವೃತ್ತಿಯುಳ್ಳವರಾಗಿ ಅನಾದಿ ಕಾಲದಿಂದಲೂ ಮಾಡಿರುವ ಅಪರಾಧ ರಾಶಿಯು. ಇದರಿಂದ ಸ್ವಾಮಿಯ ನಿಗ್ರಹವನ್ನು ಸಂಪಾದಿಸಿ ಕೊಂಡಿರುವೆವು; ಇಂತಹ ನಿಗ್ರಹವು ಹೋಗುವದಕ್ಕೂ ಪಾಪರಾಶಿಗಳೆಲ್ಲಾ ತೊಲಗುವುದಕ್ಕೂ ಸಹ ಆತನಲ್ಲಿ ಮಾಡುವ ಸದ್ವಾರಕ ಪ್ರಪತ್ತಿ ಅಥವಾ ಅದ್ವಾರಕರೂಪ ಪ್ರಪತ್ತಿಯ ರೂಪದಲ್ಲಿ ವ್ಯಾಜಗಳ ಆವಶ್ಯಕವು. "ತಸ್ಯ ವಶೀಕರಣಂ ತಚ್ಛರಣಾಗತಿರೇವ" ಎಂದು ಶ್ರೀ ಯತಿಶೇಖರರು ಹೇಳಿರುವ ಹಾಗೆ ಶರಣಾಗತಿ ರೂಪವ್ಯಾಜವು ಯಾವಾಗ ಆ ಪ್ರತಿಬಂಧಕವನ್ನು ನಿವಾರಣೆ ಮಾಡುತ್ತದೆಯೋ, ಆಗ ಸಹಜ ಕಾರುಣ್ಯವೂ ರಕ್ಷಣೆಯೂ ಪ್ರಕಾಶಿಸುತ್ತವೆ. ಸೂರ್ಯನ ಸಹಜವಾದ ತೇಜಸ್ಸಿಗೆ ಅಡ್ಡವಾಗಿದ್ದ ಮೇಘವು ತೊಲಗಿ ಹೋದರೆ ಆತನ ದೀಪ್ತಿಯು ಹೇಗೆ ಪ್ರಕಾಶಿಸುತ್ತದೋ ಹಾಗೆ ಎಂಬ ಭಾವವು. ಆನಾದ್ಯಪರಾಧದಿಂದ "ಜೀವೇದುಃಖಾಕುಲೇ ವಿಷ್ಣೋಃ ಕೃಪಾಕಾಪ್ಯುಪಜಾಯತೇ" ಎಂದು ಹೇಳಿರುವ ಹಾಗೆ ಜೀವಾತ್ಮನು ದೀನನಾಗಿ ದುಃಖಿತನಾದರೆ, ಸಿದ್ಧೋಪಾಯನಾದ ವಿಷ್ಣುವು ಆತನ ಯಾವುದೋ ಒಂದು ಸುಕೃತವನ್ನು ಮೂಲ ಮಾಡಿಕೊಂಡು ಕೃಪೆಯಿಂದ ಪ್ರೇರಿತನಾಗಿ ಆತನು ತನ್ನನ್ನು ಶರಣುಹೊಂದುವ ಹಾಗೆ ಮಾಡಿ ರಕ್ಷಿಸುವನೆಂಬ ಭಾವವು. ಹಾಗೆ ಮಾಡಿರುವದಕ್ಕೇನಾದರೂ ನಿದರ್ಶನಗಳುಂಟೋ ಎಂದರೆ, ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾಚ್ಛಾಸ್ತ್ರಪಾಣಿನಾ - ಇಂತಹ ಸಂಸಾರದಲ್ಲಿ ಮುಳಗಿದವರನ್ನು ತನ್ನ ಅಪಾರಕಾರುಣ್ಯದಿಂದ ಪ್ರೇರಿತನಾಗಿ ಸಚ್ಛಾಸ್ತ್ರವೆಂಬ ಕೈಯಿಂದ ಮೇಲಕ್ಕೆ ಎತ್ತಿರುವದೇ ನಿದರ್ಶನವು. ಇದೂ ಅಲ್ಲದೆ ಇತಿಹಾಸಗಳಲ್ಲಿ ಗಜೇಂದ್ರ, ಕಾಕ, ವಿಭೀಷಣಾದಿಗಳನ್ನು ಕರುಣೆಯಿಂದ ರಕ್ಷಿಸಿರುವದೂ ನಿದರ್ಶನಗಳು. ಕಾಕನ ರಕ್ಷಣೆಯಲ್ಲಿ ಶರಣಾಗತನು ಯಾವಾಗ ಆದನೋ, ಒಡನೆಯೇ "ಕೃಪಯಾ ಪರ್ಯಪಾಲಯತ್" ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಗಜೇಂದ್ರನೂ ತನ್ನ ಪೂರ್ವಜನ್ಮದ ಸಂಸ್ಕಾರ ಬಲದಿಂದುಂಟಾದ "ಪೌರ್ವದೇಹಿಕ ಬುದ್ಧಿ ಸಂಯೋಗ" ವನ್ನು ಹೊಂದಿ ಶರಣಾಗತನಾದನೋ, ಒಡನೆಯೇ "ಸಗ್ರಾಹಮಾಶುಸರಸಃ ಕೃಪಯೋಜ್ಜಹಾರ" ಎಂದು ಹೇಳಲ್ಪಟ್ಟಿರುತ್ತದೆ. ಸಹಜಕೃಪಾ ಪ್ರವೃತ್ತಿಗೆ ಪ್ರತಿಬಂಧಕಾಪರಾಧವು ಯಾವಾಗ ತೊಲಗಿತೋ ಆಗ ನಿರ್ಹೇತುಕ ಕೃಪೆಯೂ ನಿರುಪಾಧಿಕ ರಕ್ಷಣೆಯೂ ಉಂಟಾಗುತ್ತವೆ. ಹೀಗೆ ಕೃಪೆಯಿಂದ ರಕ್ಷಿಸಲ್ಪಟ್ಟವರ ಅನೇಕ ನಿದರ್ಶನಗಳುಂಟೋ? ಎಂಬ ಸಂದರ್ಭದಲ್ಲಿ ಭಾಗವತದಲ್ಲಿ, ಅವರುಗಳ ಹೆಸರೆಲ್ಲಾ ಹೇಳಲ್ಪಟ್ಟಿವೆ. (ಭಾಗ. ೧-೧೨. ೫-೮, ಭಾಗ. ೨. ೭. ೪೩-೪೬.)

**ರಕ್ಷಣೇ ದಯಾಯಾಃ ಪ್ರಧಾನ ಕಾರಣತ್ವಮ್ ; ನ್ಯಾಸಾದೀನಾಂತು ವ್ಯಾಜಮಾತ್ರಮ್.**

**ಕಾ. ತ್ರಾಣೇ ಸ್ವಾಮಿತ್ವ ಮೌಚಿತ್ಯಂ ನ್ಯಾಸಾದ್ಯಾ ಸ್ಸಹಕಾರಿಣಃ ।**
**ಪ್ರಧಾನ ಹೇತು ಸ್ಸ್ವಾತಂತ್ರ್ಯ ವಿಶಿಷ್ಟಾಕರುಣಾ ವಿಭೋಃ ॥೩೮॥**

**ರಕ್ಷಣೆಗೆ ಪ್ರಧಾನ ಕಾರಣವು ದಯೆಯು ; ನ್ಯಾಸಾದಿಗಳಾದರೋ ವ್ಯಾಜಮಾತ್ರವೇ.**

ರಕ್ಷಣೆಗೆ ಬೇಕಾದ ಸರ್ವೇಶ್ವರನ ಸಹಜ ಕರುಣೆಗೆ ಜೀವಾತ್ಮನ ಅನಾದ್ಯಪರಾಧ ಪರಂಪರೆಯು ಪ್ರತಿಬಂಧಕವಾಗಿತ್ತೆಂದೂ, ಆ ಪ್ರತಿಬಂಧಕ ನಿವಾರಣೆಗೆ ಅಙ್ಗ ಶರಣಾಗತಿ (ಉಪಾಸನ) ಯಾಗಲಿ ಅಂಗಿಶರಣಾಗತಿಯಾಗಲಿ (ಭರನ್ಯಾಸ) ಆವಶ್ಯಕವೆಂದು ಹೇಳಲ್ಪಟ್ಟಿತು. ಜೀವಾತ್ಮನು ಪರಮಾತ್ಮನ ಸ್ವತ್ತು, ಪರಮಾತ್ಮನು ಸ್ವಾಮಿಯು; ಜೀವಾತ್ಮನು ದಾಸನು ಪರಮಾತ್ಮನು ಯಜಮಾನನು; ಜೀವಾತ್ಮನು ಶೇಷನು ಪರಮಾತ್ಮನು ಶೇಷಿಯು; ಜೀವಾತ್ಮನು ಪುತ್ರನು ಪರಮಾತ್ಮನು ಲೋಕ ಪಿತಾ, ಹೀಗೆ ಸಂಬಂಧವಿರುವಾಗ, ಸ್ವಾಮಿಯಾಗಿ ಯಜಮಾನನಾಗಿ ಶೇಷಿಯಾಗಿ ಲೋಕ ಪಿತಾವಾಗಿರುವವನು ಈ ಜೀವಾತ್ಮನ ರಕ್ಷಣೆಗೆ ವ್ಯಾಜನಿರೀಕ್ಷೆಯನ್ನು ಮಾಡಬೇಕೇ ? ರಕ್ಷಣೆಯು ಆತನ ಕರ್ತವ್ಯತೆಯಲ್ಲವೇ ? ಮತ್ತು ಕೃಪೆಯು ನಿರ್ಹೇತುಕವಾದುದಾದರೆ ವ್ಯಾಜಸಾಪೇಕ್ಷೆಯು ಏತಕ್ಕೆ ? ಇತ್ಯಾದಿ ಶಙ್ಕಾನಿವಾರಣಾರ್ಥವಾಗಿ ಸಮಾಧಾನವನ್ನು ಒಂದು ಕಾರಿಕೆಯ ಮೂಲಕ ಸಿದ್ಧಾನ್ತಿಸಿ ಹೇಳುತ್ತಾರೆ.—

**ಅರ್ಥವು - ತ್ರಾಣೇ** – ರಕ್ಷಣದಲ್ಲಿ, **ಸ್ವಾಮಿತ್ವ ಮೌಚಿತ್ಯಂ** - ಪರಮಾತ್ಮನ ಸ್ವಾಮಿತ್ವವೇನೋ ಉಚಿತವಾದುದೇ ; ಎಂದರೆ ಪರಮಾತ್ಮನ ಸ್ವರೂಪಕ್ಕೆ ಯೋಗ್ಯವಾದುದೇ. ರಕ್ಷಿಸತಕ್ಕದ್ದು ನ್ಯಾಯವಾದುದರಿಂದ ಯಾವಾಗ ರಕ್ಷಿಸಲಿ ಎಂದು ಸಮಯ ನಿರೀಕ್ಷಣೆಯಲ್ಲೇ ಇರುವನು ; ತಂದೆಯಾದವನು ಮಗನಿಗೆ ಸಲ್ಲತಕ್ಕ ದಾಯಧನವನ್ನು ಯಾವಾಗ ಕೊಟ್ಟು ಬಿಟ್ಟು ತನ್ನ ಇತಿಕರ್ತವ್ಯತೆಯನ್ನು ನಡೆಸಿದನೇ ಎಂದು "ಕೃತಕೃತ್ಯಸ್ತದಾ ರಾಮೋ ವಿಜ್ವರಃ ಪ್ರಮುಮೋದಹ" (ರಾಮಾ. ಬಾ. ೧.೮೩) ಶ್ರೀರಾಮಚಂದ್ರನು ವಿಭೀಷಣನಿಗೆ ವಾಗ್ದಾನಮಾಡಿದ್ದ ರಾಜ್ಯವನ್ನು ಒಪ್ಪಿಸಿ ಕೃತಕೃತ್ಯನೆಂದು ಭಾವಿಸಿದ ತೆರನಿ, ಸಂತುಷ್ಟನಾಗುವನು. ಇದು ಪರಮಾತ್ಮನ ಸ್ವರೂಪಕ್ಕೆ ಉಚಿತವಾದುದು. ಆದರೆ ಆ ಸುತನು ಯೋಗ್ಯನಲ್ಲದಿದ್ದರೆ ದಾಯಧನವನ್ನು ಕೊಡಲು ಹೇಗೆ ಸಾಧ್ಯವಲ್ಲವೋ, ಹಾಗೆ ಅನಾದ್ಯಪರಾಧಗಳಿಂದ ಭಗವನ್ನಿಗ್ರಹಕ್ಕೆ ಪಾತ್ರನಾಗಿ ಆತನ ಕೃಪೆಗೆ ಅನರ್ಹನೆಂದು ತೋರಿಸಿಕೊಂಡಿರುತ್ತಾನೆ. ಈಗಲಾದರೂ ಅರ್ಹನೆಂದು ತೋರಿಸಿಕೊಳ್ಳ

ವದಕ್ಕಾಗಿ ಆತನಿಗೆ ಶರಣಾಗತನಾದರೆ, ಭಗವನ್ನಿಗ್ರಹವು ತೊಲಗಿ ಭಗವತ್ಕೃಪೆಯು ಉಂಟಾಗುತ್ತಾದುದರಿಂದ ಶರಣಾಗತಿಯು ಭಗವತ್ಕೃಪೋತ್ಥಂಭನಕ್ಕೆ ಸಹಕಾರಿ ಎಂದು ಮುಂದೆ ಹೇಳುತ್ತಾರೆ. **ನ್ಯಾಸಾದ್ಯಾಸ್ಸಹಕಾರಿಣಃ** - ಭರನ್ಯಾಸನೇ ಮೊದಲಾದವುಗಳು ರಕ್ಷಣೆಗೆ ಸಹಕಾರಿಗಳು; ಅಪರಾಧಗಳಿಂದ ಪ್ರಾಪ್ತವಾದ ಭಗವನ್ನಿಗ್ರಹರೂಪ ಪ್ರತಿಬಂಧಕವನ್ನು ಹೋಗಲಾಡಿಸುವದರ ಮೂಲಕ ಸಹಕಾರಿಗಳು, ಇಲ್ಲಿ ಆದ್ಯಾಃ ಎಂಬುದರಿಂದ ಭಕ್ತಿಯೋಗವೂ ತದನುಗ್ರಾಹಕಗಳಾದ ಕರ್ಮಯೋಗ ಜ್ಞಾನಯೋಗಗಳೂ ಹೇಳಲ್ಪಟ್ಟವು. ಹೀಗೆ ಅನುಷ್ಠಾನ ಪರಂಪರೆಯು ಭಗವದುಪಾಸನಾ ರೂಪೋಪಾಯಕ್ಕೆ ಇರುವದರಿಂದ ಬಹುವಚನವು; ಅದೂ ಅಲ್ಲದೆ ಉಪಾಸನಾರೂಪ ಬ್ರಹ್ಮವಿದ್ಯೆಯೂ ನಾನಾವಿಧವಾಗಿರುವದರಿಂದಲೂ ಬಹುವಚನವು; ಹೀಗೆ ರಕ್ಷಣೆಗೆ ಉಪಾಯಾನುಷ್ಠಾನವೂ ಆವಶ್ಯಕವು, ಭಗವತ್ಕೃಪೆಯೂ ಆವಶ್ಯಕವು; ಎಂದಾದರೆ, ಯಾವುದಕ್ಕೆ ಪ್ರಾಧಾನ್ಯವು ಎಂದರೆ ಸಿದ್ಧೋಪಾಯನಾದ ಭಗವಂತನ ಕರುಣೆಯೇ ಮುಖ್ಯವಾದುದು ಎಂದು ಮುಂದೆ ಹೇಳುತ್ತಾರೆ.—**ವಿಭೋಃ** - ಹೀಗೆ ಸರ್ವರಿಗೂ ಸ್ವಾಮಿಯಾಗಿರುವ ಸರ್ವೇಶ್ವರನ, **ಸ್ವಾತಂತ್ರ್ಯವಿಶಿಷ್ಟಾ ಕರುಣಾ** - ಸ್ವಾತಂತ್ರ್ಯದಿಂದ ಯುಕ್ತವಾದ ಕರುಣೆಯೇ, **ಪ್ರಧಾನಹೇತುಃ** – ರಕ್ಷಣೆಗೆ ಮುಖ್ಯಕಾರಣವು. ಇಲ್ಲಿ ಸ್ವಾತಂತ್ರ್ಯ ವಿಶಿಷ್ಟವಾದ ಕರುಣೆ ಎಂದು ಏಕೆ ಹೇಳಲ್ಪಟ್ಟಿತೆಂದು ಕೇಳಬಹುದು; ಕರುಣೆ ಏನೋ ಬೇಕಾದಷ್ಟು ಒಬ್ಬನಲ್ಲಿರಬಹುದು. ಆತನಿಗೆ ಏನನ್ನು ಮಾಡಲೂ ಪಾರತಂತ್ರ್ಯದಿಂದ ಶಕ್ತಿ ಇಲ್ಲದೆ ಹೋದರೆ, ಏನು ಮಾಡಿಯಾನು? ಆದುದರಿಂದ ಕರುಣೆಯು ಸ್ವಾತಂತ್ರ್ಯ ವಿಶಿಷ್ಟವಾಗಿರಬೇಕು; ಮತ್ತು ಸರ್ವಸ್ವತಂತ್ರತೆ ಮಾತ್ರ ಇದ್ದು ಕಾರುಣ್ಯವಿಲ್ಲದಿದ್ದರೂ ಆಗ ರಕ್ಷಣೆಯು ದೊರೆಯಲಾರದು. ಆದುದರಿಂದಲೇ '**ಸ್ವಾತಂತ್ರ್ಯ ವಿಶಿಷ್ಟಾ ಕರುಣೆಯೇ** ಪ್ರಧಾನಕಾರಣವೆಂದು ಹೇಳಲ್ಪಟ್ಟಿರುತ್ತದೆ.—ಸ್ವಾತಂತ್ರ್ಯವಿರುವದರಿಂದ ಕರುಣೆಯು ಫಲವನ್ನುಂಟುಮಾಡಲು ಏನೊಂದೂ ತಡೆಯಿಲ್ಲವು; ಅದಕ್ಕೆ ಇನ್ನು ಯಾವುದರ ಸಹಾಯವೂ ಬೇಕಿಲ್ಲವು; ಆದುದರಿಂದಲೇ ಆ ಕರುಣೆಗೇನೇ ಪ್ರಧಾನ ಕಾರಣತ್ವವು ಎಂಬ ಭಾವವು. ನ್ಯಾಸಾದಿಗಳು ಸಹಕಾರಿ ಎಂದೂ, ಅವ್ಯಾಜದಿಂದುಂಟಾದ ಭಗವತ್ಕೃಪೆಯೇ ಪ್ರಧಾನಹೇತುವೆಂಬುದನ್ನೂ ಶ್ರೀ ಮದ್ಭಾಗವತದ ನಾರದ ವಾಕ್ಯದಿಂದ ವ್ಯಕ್ತವು:—

**ಯೇಷಾಂಸ ಏಷ ಭಗವಾನ್ ದಯಯೇದನನ್ತಸ್ಸರ್ವಾತ್ಮನಾಶ್ರಿತಪದೋ ಯದಿನಿರ್ವ್ಯಳೀಕಂ । ತೇದುಸ್ತರಾಮತಿತರನ್ತಿ ಚ ದೇವಮಾಯಾಂ ನೈಷಾಂ ಮಮಾಹ ಮಿತಿ ಧೀಶ್ಶ್ವಸೃಗಾಲಭಕ್ಷ್ಯೇ ॥** ಯಾರು ಭಗವನ್ತನ ಸ್ವರೂಪಸ್ವಭಾವ ಜ್ಞಾನವನ್ನರಿತು, ಆತನು ಅಪರಿಚ್ಛಿನ್ನನು, ಆತನೇ ಉಪಾಯನು, ಆತನೇ ಉಪೇಯನು ಎಂಬ ಬುದ್ಧಿಯುಳ್ಳವರಾಗಿ ಆಶ್ರಯಿಸುತ್ತಾರೋ, ಅವರು ದುಸ್ತರವಾದ ಸಂಸಾರಬಂಧವನ್ನು ದಾಟುವರು.

## ಅಕಾರಸ್ಯ ಶ್ರಿಯಃಪತಿತ್ವ ಬೋಧಕತ್ವಮ್.

**ಸರ್ವರಕ್ಷಣ ದೀಕ್ಷಿತನಾನರ್ಶ (೧)ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ । ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷು ಚ ಗೀಯತೇ" ಇತ್ಯಾದಿಗಳಿಲ್ಪಡಿಯೇ ಸಪತ್ನೀಕನಾಗಸಿದ್ಧನಾಯಿರುಕ್ಕೈಯಾಲೇ ಇಜ್ಜ್ಗೇ ಪ್ರಮಾಣ ಸಿದ್ಧೋಪಯೋಗ ವಿಶೇಷವಾನ ಪತ್ನೀಸಂಬಂಧಮಾರ್ಥಮ್.**

## ಅಕಾರವು ಲಕ್ಷ್ಮೀಪತಿತ್ವವನ್ನೂ ಅರ್ಥವಾಗಿ ಬೋಧಿಸುತ್ತದೆ.

ಪ್ರಣವದ ಅಕಾರದಲ್ಲಿನ ಅವರಕ್ಷಣೇ ಎಂಬ ಧಾತ್ವರ್ಥದಿಂದ ವಿಷ್ಣುವಾಚಕತ್ವವು ವ್ಯಕ್ತವಾಗಿ ಶಾಬ್ದವಾಗಿ ತೋರಿದರೂ, ಅರ್ಥವಾಗಿ ಲಕ್ಷ್ಮಿಯೂ ಸಹ ಅಕಾರದಿಂದಲೇ ತೋರಿಬರುತ್ತಾಳಾದುದರಿಂದ ಜೀವರಕ್ಷಣೆಯಲ್ಲಿ ಎಂದರೆ ಅವರುಗಳು ಕೋರುವ ಸಮಸ್ತ ಪುರುಷಾರ್ಥಗಳನ್ನೂ, ಮುಖ್ಯವಾಗಿ ಮುಮುಕ್ಷುವಿಗೆ ಮೋಕ್ಷವನ್ನೂ, ಕೊಟ್ಟು, ಸಂಸಾರ ತಾಪಗಳಿಲ್ಲದಹಾಗೆ ಸಂರಕ್ಷಣೆಯನ್ನೂ ಮಾಡುವದರಲ್ಲಿ ನಾರಾಯಣನಿಗೆ ಮಾತ್ರವೇ ಅಲ್ಲದೆ, ವಿಶೇಷಣವಾಗಿ, ಆತನೊಂದಿಗೆ ಅನಪಾಯಿನಿಯಾದ ಶ್ರೀ ಮಹಾಲಕ್ಷ್ಮಿಗೂ ಅನ್ವಯ ಉಂಟೆಂದು ಹೇಳುತ್ತಾರೆ—**ಸರ್ವರಕ್ಷಣ ದೀಕ್ಷಿತನಾನರ್ಶ** – ಆ ಶರಣಾಗತಿಯ ಮೂಲಕ ಆಶ್ರಯಿಸಿದ ಸಮಸ್ತರ ರಕ್ಷಣೆಯಲ್ಲಿ ದೃಢಸಙ್ಕಲ್ಪನಾದ ನಾರಾಯಣನು, (೧) **ಹೃಷೀಕೇಶಃ**-ಸಕಲರ ಇಂದ್ರಿಯುಗಳ ಪ್ರವೃತ್ತಿಗಳ ನಿಯಾಮಕನಾದ ನಾರಾಯಣನು, **ದೇವ್ಯಾ** - ಲೀಲಾ ವಿಭೂತಿಯಲ್ಲಿ ಪರಮಾಸಕ್ತಳಾದ, **ಕಾರುಣ್ಯರೂಪಯಾ** - (ಪರಮಾತ್ಮನ) ಕರುಣೆಯೇ ಮೂರ್ತೀಭವಿಸಿದ ಹಾಗಿರುವ, **ಲಕ್ಷ್ಮ್ಯಾಸಹ**-ಲಕ್ಷ್ಮಿಯೊಂದಿಗೆ ಸೇರಿಯೇ, **ರಕ್ಷಕಃ**-ರಕ್ಷಕನು ಎಂದು, **ಸರ್ವಸಿದ್ಧಾನ್ತೇ** - ಸಮಸ್ತ ಸಿದ್ಧಾನ್ತಗಳಲ್ಲೂ, ವೇದಾನ್ತಗಳಲ್ಲೂ-ಉಪಬೃಂಹಣಗಳಾದ ವಿಷ್ಣುಪುರಾಣ,ರಾಮಾಯಣ, ಭಾರತ ಭಾಗವತ ಭಗವಚ್ಛಾಸ್ತ್ರಾದಿಗಳಲ್ಲೆಲ್ಲಾ, **ಗೀಯತೇ** - ಕೊಂಡಾಡಲ್ಪಟ್ಟಿರುತ್ತದೆ." ಇತ್ಯಾದಿಗಳಿಲ್ಪಡಿಯೇ-ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವಹಾಗೆ **ಸಪತ್ನೀಕನಾಗ ಸಿದ್ಧನಾಯಿರುಕ್ಕೈಯಾಲೇ** - ಯಾವಾಗಲೂ ಅಪೃಥಕ್ಸಿದ್ಧ ವಿಶೇಷಣ ರೂಪದಲ್ಲಿ ನಿತ್ಯಾನಪಾಯಿನಿಯಾಗಿ ಒಟ್ಟಿಗೇ ಸದಾ ಇರುವದರಿಂದ ಪತ್ನಿಯೊಂದಿಗೇನೇ ಸಿದ್ಧೋಪಾಯನಾಗಿರುತ್ತಾನೆಂಬುದು ದ್ವಯಾದಿ ಮನ್ತ್ರಗಳಿಂದಲೂ ಇತಿಹಾಸ ಪುರಾಣಾದಿಗಳಿಂದಲೂ ಸಿದ್ಧವಾದುದರಿಂದ, **ಇಜ್ಜ್ಗೇ** – ಈ ಅಕಾರದಲ್ಲಿ, **ಪ್ರಮಾಣ ಸಿದ್ಧ** - ಈ ಮೇಲಿನ ಪ್ರಮಾಣಗಳಿಂದ ಸಿದ್ಧವಾದ, **ಉಪಯೋಗವಿಶೇಷವಾನ** - ಅನುಗ್ರಹ ಮಾಡುಳ್ಳಾಗಿ ಲಕ್ಷ್ಮಿತ್ತಾಯಿಯೂ ಪುರುಷಕಾರ

(೧) ಲಕ್ಷ್ಮೀತಂತ್ರ. ೩೮. ೧೪.

ರೂಪದಲ್ಲೂ ಸಹ, ಉಪಯೋಗ ವಿಶೇಷವಾದ, ಪತ್ನೀಸಂಬಂಧವು, ಅರ್ಥಾತ್-ಅರ್ಥವಾಗಿ ತೋರಿಬರುತ್ತದೆ. ವಾಚ್ಯ ವಾಚಕ ಸಂಬಂಧದಿಂದ "ಸೈಷಾವತಿ ಜಗತ್ತ್ರಯಮ್" "ತ್ವಯೀ ದಾನೀಂ ಸಮೇಧಿತಂ" "ಲಕ್ಷ್ಮ್ಯಾ ಸಹ ಹೃಷೀಕೇಶಃ" ಇತ್ಯಾದಿಗಳಲ್ಲಿ ತೋರುವ ನಿತ್ಯಾನಪಾಯಿನಿಯಾದ ಲಕ್ಷ್ಮಿಯೊಂದಿಗೆ ಸೇರಿಯೇ ರಕ್ಷಕತ್ವವಾದುದರಿಂದ, ಲಕ್ಷ್ಮೀವಿಶಿಷ್ಟತೆಯಿಲ್ಲದಿದ್ದರೆ ರಕ್ಷಕತ್ವದ ಅಸಿದ್ಧಿಯು ಎಂಬುದು ಸೂಚಿತವು. ಅವರಕ್ಷಣೇ ಎಂಬ ಧಾತ್ವರ್ಥದಿಂದ ಅಕಾರವು ವಿಷ್ಣುವಾಚಕವೆಂಬುದು ಸಾಕ್ಷಾತ್ತಾಗಿ ಶಾಬ್ದವಾಗಿಯೇ ತೋರಿಬರುತ್ತದೆ. ಆದರೆ ಲಕ್ಷ್ಮಿಯು ಯಾವಾಗಲೂ ವಿಷ್ಣುವಿನೊಂದಿಗೇನೇ ಸೇರಿರುವದರಿಂದ ಯಾವಾಗ ಅಕಾರವು ನಾರಾಯಣನನ್ನು ಬೋಧಿಸಿತೋ, ಆಗ ಸದಾ ಜೊತೆಯಲ್ಲಿಯೇ ಇರುವ ಲಕ್ಷ್ಮಿಯನ್ನೂ ಸಹ ಅರ್ಥವಾಗಿ ಬೋಧಿಸುತ್ತದೆಂಬ ಭಾವವು. ಇದನ್ನೇ ಚನ್ನಾಗಿ ಮುಂದಿನ ವಾಕ್ಯದಲ್ಲಿ ವ್ಯಕ್ತಪಡಿಸುತ್ತಾರೆ. ಅಕಾರದಲ್ಲಿ ಲಕ್ಷ್ಮಿಯು ಶಾಬ್ದವಾಗಿ ಬೋಧಿತವಲ್ಲದಿದ್ದರೆ, ಪ್ರಣವದ ಮುಂದಿನ ಅಕ್ಷರವಾದ ಉಕಾರವು ಲಕ್ಷ್ಮಿಯನ್ನು ಶಾಬ್ದವಾಗಿಯೇ ಬೋಧಿಸುತ್ತದೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಅದು ಯಾವುದೆಂದರೆ.—"ಅಕಾರೇಣೋಚ್ಯತೇ ವಿಷ್ಣುಸ್ಸರ್ವಲೋಕೇಶ್ವರೋ ಹರಿಃ। ಉದ್ಧೃತಾ ವಿಷ್ಣುನಾ ಲಕ್ಷ್ಮೀರುಕಾರೇಣೋಚ್ಯತೇ ತಥಾ। ಮಕಾರಸ್ತು ತಯೋರ್ದಾಸ ಇತಿ ಪ್ರಣವಲಕ್ಷಣಮ್॥" ಎಂಬುದು. ಮಹಾನುಭಾವರಾದ ಪೆರಿಯವಾಚ್ಚಾನ್ ಪಿಳ್ಳೈಯವರೂ ಸಹ ತಿರುವಾಯ್ ಮೊಳಿಯ (೬. ೯. ೩) ಅವೋಘ ಪಾಶುರವಾದ "ಗಾಲತ್ತೋಡೆ ನಡೆನ್ದು ನಿನ್ರುನ್" ಎಂಬುದರ ಭಾಷ್ಯವಾದ ಈಡಿನಲ್ಲಿ ಬರೆದಿರುತ್ತಾರೇನೆಂದರೆ—"ಅಕಾರಾರ್ಥತ್ತೈ ಸಕ್ರಮವಾಕ ವ್ಯಾಖ್ಯಾನಂ ಪಣ್ಣಾಗಿರಾರ್, ಅವರಕ್ಷಣೆ ಇತ್ಯಾದಿ - ಇಪ್ಪಡಿ ರಕ್ಷಿಕ್ಕು ಮಿಡತ್ತಿಲ್ "ನಕಶ್ಚಿನ್ನಾಪರಾಧ್ಯತಿ" ಎನ್ನುಮವಳುಮ್ "ಎನ್ನಡಿಯಾರ್ ಇದುಶೆಯ್ಯಾರ್" ಎನ್ನುಮವನುಂ ಕೂಡನಾಯಿತ್ತು. ಅಗೈಯಾಲ್ ಅಕಾರಮ್ ಮಿಥುನತ್ತುಕ್ಕು ವಾಚಕಮಾಯಿತ್ತು" ಎಂದು ಅಪ್ಪಣೆ ಕೊಡಿಸಿರುತ್ತಾರೆ. ಈ ವಾಕ್ಯಗಳಿಗೆ ಭಾಷ್ಯವನ್ನು ಬರೆದ ಶ್ರೀ ಜೀಯರವರೂ ಸಹ ಹೇಳಿರುವುದೇನೆಂದರೆ.—"ಅಕಾರಂ ಪ್ರಾಪ್ಯ ಪ್ರಾಪಕವಾಚಕಮೆನ್ನುಮದರ್ಕು ಪ್ರಮಾಣತ್ವೇನ, ಏವಮುಕ್ಷರರೂಪೇಣ ಕಾರಣತ್ವ ಮಿವೋದಿತಮ್। ರಕ್ಷಕತ್ವಂಚ ಧಾತ್ವರ್ಥಾ ಚ್ಛೇಷಿತ್ವಂ ಪದರೂಪತಃ। ಶ್ರೀಶತ್ವಂ ವಾಚ್ಯಗತ್ಯಾಚ ಯುಜ್ಯತೇ ಪರಮಾತ್ಮನಃ" ಎಂದು ಉದಾಹರಿಸಿರುತ್ತಾರೆ. ಅಕಾರದಿಂದ ತೋರುವ ಅರ್ಥಗಳು ನಾಲ್ಕು; ಅವು ಯಾವುವೆಂದರೆ—(೧) ಜಗತ್ಕಾರಣತ್ವ (೨) ಸರ್ವರಕ್ಷಕತ್ವ (೩) ಸರ್ವಶೇಷಿತ್ವ (೪) ಶ್ರೀಯಃಪತಿತ್ವವೆಂದು ತಿಳಿಸುತ್ತಾರೆ, ಲಕ್ಷ್ಮೀಪತಿತ್ವವು ವಾಚ್ಯಗತಿಯಿಂದ ತೋರುತ್ತದೆಂದು ಹೇಳಲ್ಪಟ್ಟಿರುತ್ತದೆ; ಪರಮಾತ್ಮನನ್ನು ಯಾವಾಗ ಬೋಧಿಸಿತೋ ಆಗ ಆತನೊಂದಿಗೇ ಸೇರಿ

ಇಪ್ಪಡಿ ಸನ್ನಿಯೋಗ ಶಿಷ್ಟನ್ಯಾಯತ್ತಾಲೇ ಎಮ್ಬೆರುಮಾನ್ನೈ ಚ್ಚೊಲ್ಲ ಮಿಡಮೆಙ್ಗುಂ ಪಿರಾಟ್ಟಿಯೈಯುಂ ಶೊಲ್ಲಿತ್ತಾನೆನ್ನುಮಿಡತ್ತೈ(೧)"ತದಂತರ್ಭಾವಾತ್ತ್ವಾಂ ನ ಪೃಥಗಭಿಧತ್ತೇ ಶ್ರುತಿರಪಿ" ಎನ್ನುಸಮರ್ಥಿತ್ತಾರ್ಗಳ್.

---

ರುವ ಲಕ್ಷ್ಮಿಯೂ ಬೋಧಿತಳೆಂಬ ಭಾವವು. ದಾಸನು ಬರೆದಿರುವ ಚತುಶ್ಲೋಕಿಯ ವ್ಯಾಖ್ಯಾನದ ೩೭-೩೮ನೆಯ ಪುಟಗಳನ್ನು ಪರಾಂಬರಿಸಿ. ಮೇಲೆ ಉದಾಹರಿಸಿರುವ ಪ್ರಮಾಣದಲ್ಲಿ ಲಕ್ಷ್ಮ್ಯಾಸಹ ಎಂಬ ತೃತೀಯೆಯನ್ನು ಅಪ್ರಧಾನ ತೃತೀಯೆ ಎಂದು ಹೇಳಿ ಲಕ್ಷ್ಮಿಗೆ ಉಪಾಯತ್ವದಲ್ಲಿ ಅನ್ವಯವಿಲ್ಲವೆಂದು ಹೇಳುವರು. ಈ ಅಭಿಪ್ರಾಯವು ಶ್ರೀ ನಿಗಮಾನ್ತ ದೇಶಿಕರವರಿಗೆ ಸಮರ್ಪಕವಾಗದೆ ಈ ಲಕ್ಷ್ಮ್ಯಾಸಹ ಎಂಬುದರಿಂದ ಉಪಾಯತ್ವದಲ್ಲಿ ಲಕ್ಷ್ಮಿಗೂ ಅನ್ವಯವು ವ್ಯಕ್ತವು ಎಂಬ ಅಭಿಪ್ರಾಯವನ್ನು ಸ್ಥಿರೀಕರಣಭಾಗದಲ್ಲೂ ವ್ಯಕ್ತಪಡಿಸಿರುತ್ತಾರೆ. ಅನುಗ್ರಹಮಯಳಾದ ಲಕ್ಷ್ಮಿಯ ಅನ್ವಯವು ರಕ್ಷಣೆಗೆ ಅತ್ಯಾವಶ್ಯಕವೆಂದೇ ಪ್ರಮಾಣದಲ್ಲಿ ಪ್ರಧಾನವಾಗಿ ಪ್ರಥಮತಃ ಹೇಳಲ್ಪಟ್ಟಿರುತ್ತದೆ; ಅದನ್ನು ಸಮರ್ಥಿಸಿ ಹೇಳುವದಕ್ಕಾಗಿಯೇ ದೇವ್ಯಾ ಕಾರುಣ್ಯರೂಪಯಾ ಎಂಬ ಎರಡು ವಿಶೇಷಣಗಳು ಉಪಾಯಾರ್ಹತೆಯನ್ನು ಬೋಧಿಸುವದಕ್ಕಾಗಿ ಹೇಳಲ್ಪಟ್ಟಿವೆ. ದಾಸನು ಮುದ್ರಿಸಿರುವ ಚತುಶ್ಲೋಕಿಯ, ೫೭ನೆಯ ಪುಟವನ್ನು ನೋಡಿ. ಶ್ರೀ ಯತಿವರ್ಯರ ಅನನ್ಯ ಶರಣಃ ಎಂದು ಲಕ್ಷ್ಮೀಶರಣಾಗತಿಯಲ್ಲಿ ಹೇಳಿರುವದು ಇಬ್ಬರೂ ಉಪಾಯವೆಂಬ ಭಾವವನ್ನು ಸೂಚಿಸುತ್ತದೆ(ಚತುಶ್ಲೋಕಿಯ ೬೬ನೆಯ ಪುಟವನ್ನು ನೋಡಿ,)ಶ್ರೀ ಯತಿವರ್ಯರ ಅಭಿಪ್ರಾಯವನ್ನು ಚನ್ನಾಗಿ ಅರಿತ ಶ್ರೀ ಕೂರೇಶರು "ಯಸ್ಯಾವೀಕ್ಷ್ಯ ಮುಖಂ ತದಿಂಗಿತ ಪರಾಧೀನೋ ವಿಧತ್ತೇಽಖಿಲಮ್" ಲಕ್ಷ್ಮಿಯು ಜೊತೆಯಲ್ಲೇ ಇರುವವರ ಪ್ರಯೋಜನವನ್ನು ವ್ಯಕ್ತಪಡಿಸುತ್ತಾರೆ. ಇವರ ಪುತ್ರರಿಗೆ ಶಿಷ್ಯರಾದ ಪಂಜೀಯರು ಶ್ರೀಸೂಕ್ತ ಭಾಷ್ಯದಲ್ಲಿ ಈ ಅಂಶವನ್ನು ನಿಪುಣತರವಾಗಿ ಉಪಪಾದಿಸಿರುತ್ತಾರೆ. ಆದುದರಿಂದಲೇ ಇದನ್ನೆಲ್ಲಾ ಮನಸ್ಸಿನಲ್ಲಿಟ್ಟೇ "ಸಪತ್ನೀಕನಾಗ ಸಿದ್ಧನಾಯಿರುಕ್ಕೈಯಾಲೇ"ಎಂಬ, ಮತ್ತು "ಪ್ರಮಾಣಸಿದ್ಧೋಽಪಯೋಗ ವಿಶೇಷ ಮಾನ ಪತ್ನೀಸಂಬಂಧಂ" ಎಂಬ ಪ್ರಯೋಗಗಳು.

ಮೇಲಿನ ವಾಕ್ಯಾಭಿಪ್ರಾಯವನ್ನೇ ವ್ಯಕ್ತಪಡಿಸುತ್ತಾರೆ.—**ಇಪ್ಪಡಿ** – ಈ ರೀತಿಯಲ್ಲಿ ಎಂದರೆ ಮೇಲೆ "ವಿಷ್ಣೋಶ್ಶ್ರೀರೇಷಾನಪಾಯಿನೀ" (ವಿ. ಪು.) ಎಂಬ ಮಹರ್ಷಿ ಸೂಕ್ತಿಯ ಪ್ರಕಾರ ಹೀಗೆ ನಿತ್ಯಯೋಗವು ಲಕ್ಷ್ಮೀನಾರಾಯಣರೊಂದಿಗೆ ಇರುವದರಿಂದ, **ಸನ್ನಿಯೋಗ ಶಿಷ್ಟನ್ಯಾಯತ್ತಾಲೇ** – ಸನ್ನಿಯೋಗ ಶಿಷ್ಟನ್ಯಾಯದ ಪ್ರಕಾರ, **ಎಂಬೆರುಮಾನ್ನೈಚ್ಚೊನ್ನಮಿಡಂ** – ಸರ್ವೇಶ್ವರನನ್ನು ಕುರಿತು ಹೇಳಿದ ಸ್ಥಳವು, **ಎಙ್ಗುಂ** - ಎಲ್ಲಾ ಕಡೆಯಲ್ಲೂ, **ಪಿರಾಟ್ಟಿಯೈ**

---

(೧) ಶ್ರೀಗುಣ. ೨೮.

ಯೈಯುಮ್-ಲಕ್ಷ್ಮಿಯನ್ನೂ ಸಹ, **ಶೊಲ್ಲಿತ್ತಾಮ್**-ಹೇಳಿದಹಾಗಾಯಿತೆ, ಎನ್ನ ಮಿಡತ್ತೈ - ಎಂದು ಹೇಳುವ ಸಂದರ್ಭದಲ್ಲಿ, **ತದಂತರ್ಭಾವಾತ್** - ಆ ಪತಿ ಯಾವ ನಾರಾಯಣನೊಂದಿಗೆ ಯಾವಾಗಲೂ ಅಡಗಿರುವವರಿಂದ, **ತ್ವಾಂ** - ಲಕ್ಷ್ಮಿಯಾದ ನಿನ್ನನ್ನು, **ಶ್ರುತಿರಪಿ** - ಶ್ರುತಿಯೂ ಕೂಡ, **ನಪೃಥಗಭಿದತ್ತೇ** - ಬೇರೆಯಾಗಿ ವಿಶೇಷಿಸಿ **"ಪತಿಂ ವಿಶ್ವಸ್ಯ", "ಏಕೋ ನಾರಾಯಣ ಆಸೀತ್"** ಇತ್ಯಾದಿ ಶ್ರುತಿ ವಾಕ್ಯಗಳಲ್ಲಿ, ಹೇಳಲ್ಪಡಲಿಲ್ಲವು, ಎನ್ರು - ಎಂಬದಾಗಿ **ಸನುರ್ಥಿ ತ್ತಾರ್‌ಗಳ್**-ಉಪಪಾದಿಸಿ ಹೇಳಿವರು;ಯಾರು ಎಂದರೆ ಶ್ರೀಪರಾಶರಭಟ್ಟರು ಅವರು ಅನುಗ್ರಹಿಸಿರುವ ಶ್ರೀ ಗುಣರತ್ನಕೋಶದಲ್ಲಿ ಹೇಳಿರುತ್ತಾರೆಂಬ ಭಾವವು. **ಸನ್ನಿಯೋಗಶಿಷ್ಟನ್ಯಾಯ** ವೆಂದರೆ ವಿಶೇಷಣ ವಿಶೇಷ್ಯ ಭಾವದಲ್ಲಿ ಯಾವಾಗಲೂ ಒಟ್ಟಿಗೆ ಅಗಲದೇ ಇರುವ ಎರಡು ವಸ್ತುಗಳ ವಿಷಯದಲ್ಲಿ, ವಿಶೇಷ್ಯವನ್ನು ಹೇಳಿದರೆ ವಿಶೇಷಣವನ್ನೂ ಹೇಳಿದಂತೆಯೇ ಭಾವಿಸತಕ್ಕದ್ದು ಎಂಬ ಭಾವವು. ಏತಕ್ಕೆಂದರೆ ಅವುಗಳಿಗೆ **ಸಹವಾ ಪ್ರವೃತ್ತಿಃ ಸಹವಾ ನಿವೃತ್ತಿಃ** ಎಂದು ಹೇಳಿರುವ ಹಾಗೆ ಪ್ರವೃತ್ತಿ ನಿವೃತ್ತಿಗಳು ಒಟ್ಟಿಗೆಯಾಗುವದರಿಂದ. ಹೇಗೆ ? ಎಂದರೆ ಸೂರ್ಯನು ಉದಯಿಸಿದನು, ಅಸ್ತಮಿಸಿದನು ಎಂದರೆ ಸೂರ್ಯ ಕಿರಣಗಳೂ ಯಾವಾಗಲೂ ಸೂರ್ಯನೊಂದಿಗೇನೆ ಇರುವದರಿಂದ, ಸೂರ್ಯಕಿರಣಗಳೂ ಉದಯಿಸಿದವು, ಅಸ್ತಮಿಸಿವವು ಎಂದು ಹೇಳಬೇಕಾದ ಅವಶ್ಯಕತೆ ಹೇಗೆ ಇಲ್ಲವೋ? ಹಾಗೆ. ಹಾಗೆಯೇ ಗರ್ಭಿಣಿ ಸ್ತ್ರೀ ಬಂದಳು ಎಂದರೆ, ಗರ್ಭಸ್ಥ ಶಿಶುವೂ ಬಂತು ಎಂದು ಹೇಳುವ ಅವಶ್ಯಕತೆಯು ಇಲ್ಲವೆಂಬ ಭಾವವು. ಹಾಗೆಯೇ, ನಾರಾಯಣನೂ ಲಕ್ಷ್ಮಿಯೊಂದಿಗೆ ಯಾವಾಗಲೂ ಇರುವುದರಿಂದ ನಾರಾಯಣ ವಿಷಯವಾಗಿ ಹೇಳುವ ಸಂದರ್ಭದಲ್ಲಿ ವೇದವು, ಲಕ್ಷ್ಮಿಯನ್ನು ಕುರಿತು ಪ್ರತ್ಯೇಕವಾಗಿ ಹೇಳಬೇಕಾದ ಅವಶ್ಯಕವಿಲ್ಲವೆಂದು ಹೇಳಲಿಲ್ಲವು. ಇದರಿಂದ ಶ್ರುತಿಯು ಲಕ್ಷ್ಮಿಯನ್ನು ಕುರಿತು ಎಲ್ಲಿಯೂ ಹೇಳಲಿಲ್ಲವೆಂಬುದು ಇಲ್ಲಿ ಅಭಿಪ್ರಾಯವಲ್ಲವು; ಏಕೆಂದರೆ ಶ್ರುತಿಯು ಕೆಲವು ಕಡೆಗಳಲ್ಲಿ ಲಕ್ಷ್ಮಿಯನ್ನು ಕುರಿತು ಹೇಳಿದೆಯಾದುದರಿಂದ ; ಅಭಿಪ್ರಾಯವೇನೆಂದರೆ ನಾರಾಯಣನನ್ನು ಕುರಿತು ಹೇಳಿದ ಎಲ್ಲಾ ಕಡೆಯಲ್ಲೂ ಪ್ರತ್ಯೇಕಿಸಿ ಲಕ್ಷ್ಮಿಯನ್ನು ವೇದವು ಹೇಳಲಿಲ್ಲನೆಂಬುದು ಅಭಿಪ್ರಾಯವು. ಆದುದರಿಂದ ಭಗವದ್ಗೀತೆಯಲ್ಲೂ ಲಕ್ಷ್ಮೀತತ್ವವು ಪೃಥಕ್ಕಾಗಿ ಬೋಧಿಸಲ್ಪಡಲಿಲ್ಲವು. ಶ್ರೀ ಕೃಷ್ಣನಲ್ಲೇ ಅಂತರ್ಗತವೆಂಬ ಭಾವದಿಂದ ಹೇಳಲಿಲ್ಲವು. ಲಕ್ಷ್ಮಿಯು ಸ್ವಾಮಿಯ ವಿಭೂತಿಗೆ ಸೇರಿದವಳೆಂದು ಮಾತ್ರ, **ಕೀರ್ತಿಶ್ಶ್ರೀರ್ವಾಕ್ಚನಾರೀಣಾಂ ಸ್ಮೃತಿರ್ಮೇಧಾ ಧೃತಿಕ್ಷಮಾ"** (ಗೀ. ೧೦. ೩೪) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. "ತೈತ್ತರೀಯದಲ್ಲಿ **"ಅನೀದವಾತಗ್ಂ ಸ್ವಧಯಾ ತದೇಕಂ"** ಎಂಬಲ್ಲಿ "ಲಕ್ಷ್ಮಿಯೊಂದಿಗೆ ಸೇರಿದ ಪರಮಾತ್ಮನು ಸೃಷ್ಟಿಗೆ ಮೊದಲು ಒಬ್ಬನೇ ಇದ್ದನೆಂದು" ಹೇಳಲ್ಪಟ್ಟಿರುತ್ತದೆ. ಹಾಗೆಯೇ ಪುರುಷ ಸೂಕ್ತದಲ್ಲಿ **"ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ"**

ಎಂದೂ ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀ ಸೂಕ್ತಪ್ರಮಾಣವೂ ಇರುತ್ತದೆ. "ಶ್ರದ್ಧಯಾದೇವೋ ದೇವತ್ವಮಶ್ನುತೇ"ಎಂಬ ಶ್ರುತಿವಾಕ್ಯವೂಉಂಟು. ಹೀಗೆ ಸರ್ವೇಶ್ವರನು ಲಕ್ಷ್ಮಿಯೊಂದಿಗೆ ಸದಾ ಸೇರಿಯೇ ಇರತ್ತಾನೆಂದು ಎಲ್ಲೋ ಕೆಲವುಕಡೆ ಗಳಲ್ಲಿ ಹೇಳಲ್ಪಟ್ಟಿತೇ ವಿನಾ, ಎಲ್ಲಾ ಕಡೆಯಲ್ಲೂ ಹೇಳಲಿಲ್ಲವು; ಏಕೆಂದರೆ ಅಪೃಥ ಕ್ಸಿದ್ಧ ವಿಶೇಷಣವನ್ನು ಹೇಳಬೇಕಾದುದಿಲ್ಲವು. ಮನುಷ್ಯನು ಬರುತ್ತಾನೆಂದು ಹೇಳುವಾಗ ಅವನಿಗೆ ಅಪೃಥಕ್ಸಿದ್ಧಗಳಾದ ತಲೆ, ಕೈ, ಕಾಲುಗಳೂ ಬರುತ್ತವೆ ಎಂದು ಹೇಳುವ ಆವಶ್ಯಕತೆಯು ಹೇಗೆ ಇಲ್ಲವೋಹಾಗೆ ಎಂಬ ಭಾವವು. ಹೂವನ್ನು ತಂದನು ಎಂದರೆ ಅದರ ಪರಿಮಳವನ್ನು ತಂದನೆಂದು ಹೇಳುವ ಆವಶ್ಯವಿಲ್ಲವು. ಹೀಗೆ ಸರ್ವೇಶ್ವರನ ಎಲ್ಲಾ ವ್ಯಾಪಾರಗಳಾದ ಜಗತ್ಸೃಷ್ಟಿಸ್ಥಿತಿಲಯಾದಿ ವ್ಯಾಪಾರಗ ಳಲ್ಲೂ ಜೀವಾತ್ಮನಿಗೆ ಉಪಾಯನಾಗಿ ಅನುಗ್ರಹಿಸುವ ಸಮಸ್ತ ವ್ಯಾಪಾರಗಳಲ್ಲೂ ಲಕ್ಷ್ಮೀಯುಕ್ತನಾಗಿ ನಡೆಸುವನೆಂಬುದನ್ನು ಮಹರ್ಷಿಗಳು ಸಹಧರ್ಮಚರೀತವ" "ವಿಷ್ಣೋರೇಷಾನಪಾಯಿನೀ ಇತ್ಯಾದಿ ಪ್ರಯೋಗಗಳಿಂದ ವ್ಯಕ್ತಪಡಿಸಿರುತ್ತಾರೆ. ಅನೇಕ ದುಷ್ಟರ ನಿಗ್ರಹಕ್ಕೂ ಶಿಷ್ಟರ ಅನುಗ್ರಹಕ್ಕೂ ರುಕ್ಮಿಣಿಯೂ ಸೀತೆಯೂ ಸಹ ಕಾರಣಭೂತರು. ಇದನ್ನು ಅನೇಕ ಇತಿಹಾಸಗಳಿಂದ ತಿಳಿಯಬಹುದು. ಈ ಅಭಿಪ್ರಾಯಗಳನ್ನೆಲ್ಲಾ ಶ್ರೀ ಪರಾಶರರು ವಿಷ್ಣು ಪುರಾಣದಲ್ಲಿ ಬಹು ಸ್ವಾರಸ್ಯ ವಾಗಿ ಉಪಪಾದಿಸಿರುತ್ತಾರೆ. ಅಲ್ಲಿ ಸ್ವರೂಪದಿಂ ಇಬ್ಬರವ್ಯಾಪ್ತಿಯೂ,ರೂಪವನ್ನೆತ್ತಿದ ಅವತಾರಕಾಲಗಳಲ್ಲೂ ಸಹಾ ಒಟ್ಟಿಗೆ ಇರುವವರೆಂದೂ ಸ್ವಾರಸ್ಯವಾಗಿ ಅವರ ತನ್ನ ಶಿಷ್ಯರಾದ ಮೈತ್ರೇಯರಿಗೆ ಉಪದೇಶಿಸಿರುತ್ತಾರೆ.

"ನಪೃಥಗಭಿದಧತೇ ಶ್ರುತಿರಪಿ" ಎಂಬ ಪೂರಾ ಶ್ಲೋಕವು ಯಾವು ದೆಂದರೆ.—"ಸ್ವರೂಪಂ ಸ್ವಾತಂತ್ರ್ಯಂ ಭಗವತ ಇದಂ ಚಂದ್ರವದನೇ। ತ್ವದಾಶ್ಲೇಷೋತ್ಕರ್ಷಾದ್ಭವತಿ ಖಲು ನಿಷ್ಕರ್ಷಸಮಯೇ। ತ್ವಮಾಸೀ ರ್ಮಾತಶ್ಶ್ರೀಃ ಕಮಿತುರಿಪ ಮಿತ್ಥಂ ತ್ವವಿಭವಂ ತದನ್ತರ್ಭಾವಾತ್ತ್ವಂ ನ ಪೃಥಗಭಿಧತ್ತೇ ಶ್ರುತಿರಪಿ ॥" ಎಂಬುದು. ಓ ಲಕ್ಷ್ಮಿಯೇ ಭಗವಂತನಿಗೆ ಸ್ವರೂಪವೂ ಸ್ವಾತಂತ್ರ್ಯವೂ ಸಹ ನಿನ್ನ ಸಂಬಂಧದಿಂದಲೇ ಉಂಟಾದುದು. ಆತನಿ ಗುಂಟಾಗಿರುವ ಸಮಸ್ತವಾದ ಶ್ರೈಷ್ಠ್ಯವೂ ಸರಿಯಾಗಿ ಪರಿಶೀಲಿಸಿ ನಿಷ್ಕರ್ಷಿಸುವ ಸಮಯದಲ್ಲಿ ನಿನ್ನ ಮೂಲಕವಾಗಿಯೇ ಉಂಟಾದ ಹಾಗೆ ತೋರಬರುತ್ತದೆ. ಓ ಲೋಕಮಾತೆಯೇ ! ಓ ಲಕ್ಷ್ಮಿಯೇ ! ನೀನು ಆರು ವಿಧ ಅರ್ಥಗಳನ್ನು ಪ್ರತಿ ಪಾದಿಸುವ ಶ್ರೀ ಶಬ್ದವಾಚ್ಯಳಾಗಿದ್ದೀಯೇ ; ನಿನ್ನ ಮಾಹಾತ್ಮ್ಯೆಯನ್ನು ಇಷ್ಟೆಂದು ಹೇಳಲು ಸಾಧ್ಯವೇ? ನಿನ್ನ ಪ್ರಿಯನ 'ಐಶ್ವರ್ಯವು ಇದು, ಇಂತಹದ್ದು' ಎಂಬುದು ನೀನೇಯಾಗಿದ್ದೀ: ಹೀಗೆ ಆತನ ಸರ್ವವಿಧ ಪ್ರಾಶಸ್ತ್ಯಕ್ಕೂ ಕಾರಣ ಭೂತಳಾಗಿ ಆತನೊಂದಿಗೇನೇ ಯಾವಾಗಲೂ ಇರುವದರಿಂದ, ಪೃಥಕ್ಕರಿಸಿ ನಿನ್ನನ್ನು ವೇದವು ಕೊಂಡಾಡಲಿಲ್ಲವು, ಎಂದು ಶ್ರೀ ಪರಾಶರಭಟ್ಟರು ಲಕ್ಷ್ಮಿಯನ್ನು ಸ್ತುತಿಸಿರು

ಆಗೈಯಾಲ್ ಸ್ವರೂಪನಿರೂಪಕ ಧರ್ಮಙ್ಗಳ್ ಸರ್ವ ವಿದ್ಯೈಗಳಿಲುಮ್ (ವರು)ಶೊಲ್ಲುಗಿರ ಕಣಕ್ಕಿಲೇ ಅವತ್ತಿಲ್ ಪ್ರಧಾನನಾನ ಇವ್ವಿಶೇಷಣಮುಂ ಸರ್ವ ವಿದ್ಯೈಗಳಿಲುಮನುಸಂಧೇಯಮ್. ಇದು ತಾಣ ದೇವತಾನ್ತರ

---

ತ್ತಾರೆ. ಇದರಿಂದ ಕರುಣಾಸಾಗರನೆಂಬ ಮಾಹಾತ್ಮ್ಯೆಗೆ ಲಕ್ಷ್ಮಿಯೇ ಕಾರಣಳು ಎಂದು ಹೇಳಿದಂತಾಯಿತು. ಈ ಸಂದರ್ಭದಲ್ಲಿ "ಅಪ್ರಮೇಯಂ ಹಿ ತತ್ತೇಜೋ ಯಸ್ಯ ಸಾ ಜನಕಾತ್ಮಜಾ" ಎಂದು ಮಾರೀಚ ವಾಕ್ಯದಿಂದ ಮಹರ್ಷಿಯು ಲಕ್ಷ್ಮಿಯ ಮಾಹಾತ್ಮ್ಯೆಯಿಂದ ಪರಮಾತ್ಮನಿಗೆ ಮಾಹಾತ್ಮ್ಯೆಯುಂಟೆಂಬುದನ್ನು ವ್ಯಕ್ತಪಡಿಸಿರುವದು ಅನುಸಂಧೇಯವು. ಆಗೈಯಾಲ್ - ಆ ಕಾರಣದಿಂದ, ಸ್ವರೂಪನಿರೂಪಕಧರ್ಮಙ್ಗಳ್ – ಪರಮಾತ್ಮನ ಸ್ವರೂಪವನ್ನು ಬೋಧಿಸುವ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಶ್ರುತಿಯಲ್ಲಿ ಹೇಳಿರುವ ಸತ್ಯತ್ವ ಜ್ಞಾನತ್ವಾದಿ ಧರ್ಮಗಳು, ಸರ್ವವಿದ್ಯೈಗಳಿಲುಮ್-ಸಮಸ್ತಗಳಾದ ದಹರ ವೈಶ್ವನರಾದಿಗಳಲ್ಲೂ, ಶೊಲ್ಲುಗಿರಕಣಕ್ಕಿಲೇ-ಗುಣೋಪಸಂಹಾರರೀತ್ಯಾಸೇರಿರುವಹಾಗೆ ಹೇಳಿರುವ ರೀತ್ಯಾ ಅವತ್ತಿಲ್ – ಆ ಸ್ವರೂಪ ನಿರೂಪಕ ಧರ್ಮಗಳಲ್ಲಿ, ಪ್ರಧಾನನಾನ - ತುಂಬಾ ಮುಖ್ಯವಾದ, ಇವ್ವಿಶೇಷಣಮುಮ್ - ಸ್ವರೂಪ ನಿರೂಪಕ ಧರ್ಮನಾದ ಶ್ರಿಯಃಪತಿತ್ವವು, ಸರ್ವವಿದ್ಯೈಗಳಿಲುಮ್ - ಸಮಸ್ತ ಬ್ರಹ್ಮವಿದ್ಯೆಗಳಲ್ಲೂ ಅನುಸಂಧೇಯವು. ಪುರುಷ ಸೂಕ್ತದಲ್ಲೂ, ಶಿವ, ಶಂಭು, ಅಚ್ಯುತ, ಪರಂಜ್ಯೋತಿಸ್ಸು ಎಂಬಿವೇ ಮೊದಲಾದ ಸಮಸ್ತ ಶಬ್ದಗಳೂ ನಾರಾಯಣನನ್ನೇ ಬೋಧಿಸುತ್ತವೆಂದು ಹೇಳಿದನಂತರ ಆ ನಾರಾಯಣನಿಗೆ ಮುಖ್ಯವಾದ ಸ್ವರೂಪ ನಿರೂಪಕ ಧರ್ಮವೆಂದು ಹೇಳುವದಕ್ಕಾಗಿ, "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಎಂದು ಬೋಧಿಸಿ, ಉಮಾಪತಿ, ಸರಸ್ವತೀ ಪತಿ, ಯಾರೂ ಪರತತ್ವವಲ್ಲವೆಂದು ವ್ಯಾವರ್ತಿಸಿ ತಿಳಿಸಿರುತ್ತದೆ. ಗುಣೋಪಸಂಹಾರ ಪಾದವಾದ ವ್ಯಾಸ ಸೂತ್ರಗಳ ತೃತೀಯ ಅಧ್ಯಾಯದ ತೃತೀಯ ಪಾದದಲ್ಲಿ ಹೇಳಿರುವ ಹಾಗೆ ಒಂದು ದಹರ ವಿದ್ಯೆಯಲ್ಲಿ ಹೇಳಿರುವುದನ್ನು ಇನ್ನೊಂದುಕಡೆಯಲ್ಲೂ ಹೇಗೆ ಇಟ್ಟುಕೊಳ್ಳತಕ್ಕದ್ದೋ, ಹಾಗೆಯೇ ಪ್ರತಿಯೊಂದು ವಿದ್ಯೆಯ ಉಪಾಸನದಲ್ಲೂ ಉಪಾಸ್ಯನನ್ನು ಶ್ರೀಯಃಪತಿಯೆಂದೇ ಇಟ್ಟುಕೊಳ್ಳತಕ್ಕದ್ದೆಂಬ ತಾತ್ಪರ್ಯವು. ಸಕಲ ಕಲ್ಯಾಣ ಗುಣಾಕರನೆಂಬುದನ್ನು ಹೇಗೆ ಸಕಲ ವಿದ್ಯೆಯಲ್ಲೂ ಇಟ್ಟುಕೊಳ್ಳಬೇಕೋ ಹಾಗೆಯೇ ಉಪಾಸ್ಯನು ಶ್ರೀಯಃ ಪತಿಯು ಎಂದು ಸಕಲ ಬ್ರಹ್ಮವಿದ್ಯೆಯಲ್ಲೂ ಇಟ್ಟುಕೊಳ್ಳಬೇಕೆಂಬ ತಾತ್ಪರ್ಯವು. ಲಕ್ಷ್ಮೀಪತಿತ್ವಾನುಸಂಧಾನವಿಲ್ಲದಿದ್ದರೆ ಪರದೇವತಾ ಪಾರಮಾರ್ಥ್ಯಜ್ಞಾನವೇ ಇಲ್ಲವೆಂಬ ಭಾವವು. ಏಕೆಂದರೆ ಪರತತ್ವವು, "ಶ್ರೀಮಾನ್ನಾರಾಯಣೋ ನಃ ಪತಿ ರಖಿಲತನು ರ್ಮುಕ್ತಿದೋ ಮುಕ್ತ ಭೋಗ್ಯಃ" ಎಂಬಲ್ಲಿ ಶ್ರೀ ನಿಗಮಾಂತದೇಶಿಕರವರು ನಿರೂಪಿಸಿರುವ ಹಾಗೆ

**ವ್ಯಾವೃತ್ತಿಯೈಯುಮ್ ಪಣ್ಣಿಕೊಂಡು ಸರ್ವಾತಿಶಾಯಿಯಾನ ಸ್ವತಂತ್ರ ನುಡೈಯ ಸ್ವರೂಪತ್ತುಕ್ಕು ನಿರೂಪಕಮಾನ್.**

---

ಶ್ರೀಮನ್ನಾರಾಯಣನೆಂಬ ಅನುಸಂಧಾನವಿಲ್ಲದೇ ಹೋದರೆ ಯಥಾರ್ಥವಾದ ಪರ ತತ್ವ ಜ್ಞಾನವೇ ಇಲ್ಲವೆಂಬ ಭಾವವನ್ನೂ ಇಲ್ಲಿ ಗ್ರಹಿಸಬಹುದು. ಆದುದರಿಂದ ನ್ಯಾಸ ವಿದ್ಯೆಯೂ ಬ್ರಹ್ಮವಿದ್ಯೆಯಾಗಿ ಮೂಲಮನ್ತ್ರಜಪವು ವಿಧಿಸಲ್ಪಟ್ಟಿರುವದ ರಿಂದ ಮೂಲಮನ್ತ್ರದ ಅಕಾರದಲ್ಲಿ ಶ್ರೀ ಮಹಾವಿಷ್ಣುವಾಚಕತ್ವವನ್ನು ಅನು ಸಂಧಾನ ಮಾಡುವಾಗ ಶ್ರೀಯಃಪತಿತ್ವವೂ ಬೋಧಿತವೆಂದು ವಾಚ್ಯವಾಚಕ ಭಾವದಿಂದ ಗ್ರಹಿಸತಕ್ಕದ್ದು. ಯಾವಾಗ ಅಕಾರವು ವಿಷ್ಣುವನ್ನು ಬೋಧಿಸಿತೋ, ಯಾವಾಗಲೂ ಆತನೊಂದಿಗೇ ಲಕ್ಷ್ಮಿಯೂ ಸೇರಿರುವದರಿಂದ ಲಕ್ಷ್ಮೀಪತಿತ್ವವೂ ಬೋಧಿತವು ಎಂಬ ಭಾವವು.

ಇದುತಾರ್ - ಈ ಲಕ್ಷ್ಮೀ ಸಂಬಂಧವೀಗ, **ದೇವತಾನ್ತರ ವ್ಯಾವೃತ್ತಿಯೈ ಯುಮ್** - ಬ್ರಹ್ಮರುದ್ರಾದಿ ಇತರ ದೇವತೆಗಳು ಯಾರೂ ಪರತತ್ವವೂ ಅಲ್ಲವು, ಆ ಕಾರಣದಿಂದ ರಕ್ಷಕರೂ ಅಲ್ಲವು, ಮೋಕ್ಷದಾಯಕರೂ ಅಲ್ಲವು ಎಂದು ವ್ಯಾವ ರ್ತಿಸಿ ಹೇಳೋಣವನ್ನು, **ಪಣ್ಣಿಕೊಂಡು** - ಮಾಡಿಕೊಂಡು, **ಸರ್ವಾತಿಶಾಯಿ ಯಾನ** - **"ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ"** (ಶ್ವೇ. ೬.೮) ಎಂದು ಶ್ರುತಿ ಯಲ್ಲಿ ಹೇಳಿರುವ ಹಾಗೆ, ಎಲ್ಲರಿಗಿಂತಲೂ ಹೆಚ್ಚು ಅತಿಶಯವುಳ್ಳ, ಸ್ವತಂತ್ರನಾದ ನಾರಾಯಣನಸ್ವರೂಪದ, **ನಿರೂಪಕಮಾನ್**-ನಿರೂಪಣವಾಗುತ್ತದೆ. ಲಕ್ಷ್ಮೀಪತಿ ತ್ವವು ಒಂದು ಸ್ವರೂಪನಿರೂಪಕಧರ್ಮವು. ಎಂತವನು ಪರತತ್ವವು? ಯಾರುರಕ್ಷಕನು ಮೋಕ್ಷದಾಯಕನು? ಎಂದರೆ ಲಕ್ಷ್ಮಿಯು ಯಾರಿಗೆ ಪತ್ನಿಯೋ ಅಂತಹ ನಾರಾ ಯಣನು ಎಂದು ಲಕ್ಷಣವನ್ನು ಹೇಳುವದರಿಂದ, ಅನ್ಯದೇವತೆಗಳಾದ ಉಮಾಪತಿ, ಸರಸ್ವತೀ ಪತಿಗಳು ಪರತತ್ವವೂ ಅಲ್ಲವು; ರಕ್ಷಕರೂ ಅಲ್ಲವು; ಮೋಕ್ಷದಾಯಕರೂ ಅಲ್ಲವು ; ಅಂತವರಿಗೆ ಜೀವಾತ್ಮನು ಸಹಜ ಶೇಷಭೂತನೂ ಅಲ್ಲವು ಎಂಬ ವ್ಯಾವೃತ್ತಿ ಉಂಟಾಗುತ್ತದೆಂಬ ಭಾವವು. ಆದುದರಿಂದ ಅಕಾರವು ವಾಚ್ಯವಾಚಕ ಸಂಬಂಧ ಮೂಲಕ ಅಕಾರ ವಾಚ್ಯನಾದ ವಿಷ್ಣುವು ಲಕ್ಷ್ಮೀಪತಿಯು ಎಂದು ಅರ್ಥ ವಾಗಿ ತೋರಿಬರುತ್ತದೆಂಬ ಭಾವವು.

ಅಕಾರದಲ್ಲಿ ಅರ್ಥವಾಗಿ ಲಕ್ಷ್ಮೀ ಪತಿತ್ವವು ತೋರಿಬರುತ್ತದೆಂದು ಹೇಳು ವದೂ, ಅದರಿಂದ ಸರ್ವೇಶ್ವರನ ಸಮಸ್ತ ಪ್ರವೃತ್ತಿಗಳಲ್ಲೂ ಲಕ್ಷ್ಮಿಗೆ ಅನ್ವಯ ಉಂಟೆಂಬ ಉಪಪಾದನೆಯೂ ಸಹ ತಮ್ಮ ಕಲ್ಪನೆಯಲ್ಲವು; ಮಹತ್ತಾದ ಜ್ಞಾನಾಗ್ರೇ ಸರಾಗಿ ವೇದಶಾಸ್ತ್ರಾರ್ಥವನ್ನು ತಿಳಿದ ಮಹರ್ಷಿಗಳಾದ ಶ್ರೀಪರಾಶರರ ದಿವ್ಯ ಸೂಕ್ತಿಗಳಲ್ಲಿ ವ್ಯಕ್ತವಾಗಿ ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ. — ಇವನು ಡೈಯ - ಈ ಶ್ರಿಯಃಪತಿಯಾದ ಶ್ರೀ ಮಹಾ ವಿಷ್ಣುವಿನ, ಸ್ವತಸ್ಸಿದ್ಧಾತಿ

ಇವನುಡೈಯ ಸ್ವತಸ್ಸಿದ್ಧಾತಿಶಯಙ್ಗಳಾನ ಸ್ವರೂಪಗುಣವಿಗ್ರಹ ವಿಭೂತಿಗಳ್ (೧) "ಭಾಸ್ಕರೇಣ ಪ್ರಭಾಯಥಾ" ಎನ್ನುಂಪಡಿ ವಿಶೇಷಣಮಾಯ್ ನಿರ್ಕ್ಕಿರ ಇವಳುಡೈಯ ಸ್ವರೂಪವಿಗ್ರಹ ವಿಭೂತಿಗಳಾಲುಮ್ ಲಬ್ಧಾತಿಶಯಙ್ಗಳಾಯ್‌ಕ್ಕೊಂಡು ವಿಳಙ್ಗಾ ಯಿರುಕ್ಕುಮೆನ್ನುಮಿಡತ್ತ್ ದೇವತಾಪಾರಮಾರ್ಥ್ಯವೇದಿಗಳಾನ ಮಹರ್ಷಿಗಳಾಲೇ ಪ್ರಪಂಚಿತಮ್.

---

ಶಯಙ್ಗಳಾನ - ಇನ್ನು ಯಾವ ಕಾರಣದಿಂದಲೂ ಉಂಟಾಗದೆ ತನಗೇನೇ ಅಸಾಧಾರಣವಾಗಿ ಸಿದ್ಧವಾದ ಅತಿಶಯಗಳಾದ, ದಿವ್ಯ ಸ್ವರೂಪಗುಣ ವಿಗ್ರಹ ವಿಭೂತಿಗಳು, "ಭಾಸ್ಕರೇಣ ಪ್ರಭಾಯಥಾ" - "ಸೂರ್ಯನೊಂದಿಗೆ ಆತನ ಪ್ರಭೆಯಾದ ಕಿರಣಗಳಿರುವ ಹಾಗೆ" ಎನ್ನುಂಪಡಿ - ಎಂದು ಹೇಳಿರುವ ಹಾಗೆ, ವಿಶೇಷಣಮಾಯ್ - ಪತಿಯನ್ನು ಬಿಟ್ಟಗಲದೆ ನಿತ್ಯಾನಪಾಯಿಯಾಗಿರುವ ವಿಶೇಷಣವಾಗಿ, ನಿರ್ಕ್ಕಿರ - ಇರುವ, **ಇವಳುಡೈಯ** - ಈ ಮಹಾ ಲಕ್ಷ್ಮಿಯ, ಸ್ವರೂಪ, ಗುಣವಿಗ್ರಹ ವಿಭೂತಿಗಳಿಂದ **ಲಬ್ಧಾತಿಶಯಙ್ಗಳಾಯ್‌ಕ್ಕೊಂಡು** - ಹೊಂದಲ್ಪಟ್ಟ ಅತಿಶಯಗಳಾಗಿ, **ವಿಳಙ್ಗಿರುಕ್ಕುಮೆನ್ನುಮಿಡಮ್** - ಪ್ರಕಾಶಿಸಿ ದಿವ್ಯಗಳಾಗಿವೆ ಎಂದು ಹೇಳುವ ಸಂದರ್ಭದಲ್ಲಿ, **ದೇವತಾಪಾರಮಾರ್ಥ್ಯವೇದಿಗಳಾನ** - ಪರದೇವತಾ ತತ್ವವನ್ನು ಚನ್ನಾಗಿ ವಿಮರ್ಶಿಸಿ ತಿಳಿದ, **ಮಹರ್ಷಿಗಳಾಲೇ** - ಮಹರ್ಷಿಗಳಾದ ಶ್ರೀ ಪರಾಶರರಿಂದ, **ಪ್ರಪಂಚಿತಮ್**-ವಿಸ್ತರಿಸಿ ಹೇಳಲ್ಪಟ್ಟಿತು. ಇಲ್ಲಿ ಬಹುವಚನವು ಗೌರವಾರ್ಥದಲ್ಲಿ ಎಂದು ಭಾವಿಸಬಹುದು, ಏತಕ್ಕೆಂದರೆ ಶ್ರೀ ಪರಾಶರರೇ ಎಲ್ಲಾ ಮಹರ್ಷಿಗಳಿಗಿಂತಲೂ ಬಹು ವಿಶದವಾಗಿ ಲಕ್ಷ್ಮೀ ತತ್ವಯಾಥಾತ್ಮ್ಯವನ್ನು ಹೇಳಿರುವರಾದ ಪ್ರಮುಖರು; ಅಥವಾ ಇತರ ದೇವತಾಪಾರಮಾರ್ಥ್ಯ ತಿಳಿದ ಮಹರ್ಷಿಗಳೂ ಹೇಳಿದರೆಂದು ಬಹುವಚನದಿಂದಭಾವಿಸುವದಾದರೆ "ಭಾಸ್ಕರೇಣ ಪ್ರಭಾಯಥಾ"ಎಂದೂ. ಅಪ್ರಮೇಯಂ ಹಿತತ್ತೇಜಃ ಯಸ್ಯಸಾ ಜನಕಾತ್ಮಜಾ" (ರಾ ಅರ) ಎಂದೂ,"ತುಲ್ಯಶೀಲವಯೋವೃತ್ತಾಂತುಲ್ಯಾಭಿಜನಲಕ್ಷಣಾಂ। ರಾಘವೋಽರ್ಹತಿವೈದೇಹೀಂ ತಂಚೇಯಮಸಿತೇಕ್ಷಣಾಮ್" (ರಾ. ಸುಂ,) ಎಂದೂ, ಹೇಳಿದ ವಾಲ್ಮೀಕಿ ಮಹರ್ಷಿಗಳೂ, ಹಾಗೆಯೇ "ಏಕಾಕೀ ವಿದ್ಯಯಾಸಾರ್ಧಂ ವಿಹರಿಷ್ಯೇ ದ್ವಿಜೋತ್ತಮ। ತತೋಭೂಯೋಜಗತ್ಸೃಷ್ಟಿಂ ಕರಿಷ್ಯಾಮಿಹವಿದ್ಯಯಾ" ಎಂದೂ, "ಪುಂಡರೀಕಂ ಚ ಶ್ರಿಯಾಯುಕ್ತಮ್" ಎಂದೂ ಹೇಳಿದ ವ್ಯಾಸಮಹರ್ಷಿಯೂ ಹೇಳಲ್ಪಟ್ಟರೆಂದೂ ಭಾವಿಸಬಹುದು. ಇವರುಗಳೆಲ್ಲಾ ಈ ವಾಕ್ಯಗಳಿಂದ ನಿತ್ಯಾನಪಾಯಿನಿಯು ಲಕ್ಷ್ಮಿಯು ಎಂಬುದನ್ನು ಸ್ಥಾಪಿಸಿರುತ್ತಾರೆಂಬ ತಾತ್ಪರ್ಯವು. ಇವರುಗಳೆಲ್ಲರೂ ದೇವತಾಪಾರಮಾರ್ಥ್ಯವನ್ನೂ ತಿಳಿದ ಮಹಾ ಜ್ಞಾನಿಗಳೇ. ಶ್ರೀ ಪರಾಶರರು, ಇಲ್ಲಿ ಸರ್ವೇ

---

(೧) ರಾ. ಸುಂ. ೨೧-೧೫

ಶ್ವರನ ಈ ಸ್ವರೂಪ ರೂಪ ಗುಣ ವಿಭವಾದಿಗಳಿಗೆ ಅತಿಶಯವು, ಲಕ್ಷ್ಮಿಯ ಸ್ವರೂಪ ರೂಪಗುಣ ವಿಭವಾದಿಗಳ ಅತಿಶಯದಿಂದ, ಎಂದು ತೋರಿಸಿರುತ್ತಾರೆ ಎಂದರೆ ಶ್ರೀ ವಿಷ್ಣು ಪುರಾಣದ ಪ್ರಥಮಾಧ್ಯಾಯದ ೮, ೯, ೧೦ ನೆಯ ಅಧ್ಯಾಯಗಳಲ್ಲಿ ನಿಪುಣ ತರವಾಗಿ ಉಪಪಾದಿಸಿರುತ್ತಾರೆ. ಪತ್ನಿಯ ಮಹತ್ತ್ವದ ಸ್ವರೂಪ ರೂಪಗುಣ ಮೊದಲಾದವು ಪತಿಗೆ ಅತಿಶಯಾವಹವೆಂಬುದೂ ಲೋಕ ಪ್ರಸಿದ್ಧವಾದ ವಿಷಯವು. ಅಥವಾ ಈ ಮಹತ್ತ್ವವುಪರಸ್ಪರಾತಿಶಯಾವಹವೆಂಬುದೂ ಲೋಕವಿದಿತವಾದ ವಿಷಯವು. ಲಕ್ಷ್ಮಿಯ ಸ್ವರೂಪವು ವಿಷ್ಣುವಿನ ಸ್ವರೂಪದ ಹಾಗೆಯೇ ಮಹತ್ತಾದ್ದೆಂದು, "ನಿತ್ಯೈವೈಷಾಜಗನ್ಮಾತಾ ವಿಷ್ಣೋಃಶ್ರೀರನಪಾಯಿನೀ। ಎಂದೂ "ಯಥಾಸರ್ವಗತೋವಿಷ್ಣುಃ ತಥೈವೇಯಂ ದ್ವಿಜೋತ್ತಮ" (ವಿ. ಪು. ೮.೧೭) ಎಂದೂ, "ತ್ವಯೈತದ್ವಿಷ್ಣುನಾಚಾಂಬಜಗದ್ವ್ಯಾಪ್ತಂ ಚರಾಚರಮ್" (ವಿ. ಪು. ೯. ೧೪೬) ಎಂದೂ, ಇಬ್ಬರಿಗೂ ಸಕಲ ಜಗದ್ವ್ಯಾಪ್ತಿಯುಂಟೆಂದು ಹೇಳಿರುತ್ತಾರೆ. ಅಲ್ಲಿ ಈಕೆಯಗುಣಗಳೂಕೂಡ ಅಮೋಘವಾದುವು,ಪತಿಗೆಉತ್ಕರ್ಷವನ್ನು ಕೊಡುವಂತಾದ್ದೆಂದು "ನತೇವರ್ಣಯಿತುಂಶಕ್ತಾ ಗುಣಾನ್ ಜಿಹ್ವಾಪಿ ವೇಧಸಃ" ಎಂದೂ ಹೇಳಿರುತ್ತಾರೆ. ಅನುಗ್ರಹಮಯಿಯೆಂದೂ ಅಜ್ಞಾತನಿಗ್ರಹಳೆಂಬ ಬಿರುದನ್ನೂ ಹೊಂದಿ ಆಂಜನೇಯನಿಗೆ "ಕಸ್ಯದೋಷಃಕುಲೇನಾಸ್ತಿ ನಕಶ್ಚಿನ್ನಾಪರಾಧ್ಯತಿ" ಎಂದು ಹೇಳಿದ ಇತಿಹಾಸಗಳು ಪತಿಗೆ ಉತ್ಕರ್ಷವನ್ನುಂಟುಮಾಡುವಂತಾದ್ದು. ಅವತಾರ ಕಾಲಗಳಲ್ಲಿ ತಾನೂ "ಅವತಾರಂ ಕರೋತ್ಯೇಷಾ ತದಾ ಶ್ರೀಸ್ತತ್ಸಹಾಯಿನೀ"ಪತಿಗೆ ಸಹಾಯಕಗಳೆಂದೂ,ಪತಿಗೆ ಅನುರೂಪವಾದ ಶ್ಲಾಘ್ಯವಾದ ದಿವ್ಯಮಙ್ಗಳ ವಿಗ್ರಹಗಳನ್ನು ಧರಿಸುವಳು ಎಂದೂ, "ದೇವತ್ವೇ ದೇವದೇಹೇಯಂ ಮನುಷ್ಯತ್ವೇಚ ಮಾನುಷೀ। ವಿಷ್ಣೋರ್ದೇಹಾನು ರೂಪಾಂ ವೈಕರೋತ್ಯೇಷಾತ್ಮನಸ್ತನುಮ್" ದೇವತೆಯಾಗಿ ವಿಷ್ಣುವು ಅವತರಿಸಿದರೆ ತಾನು ದೇವತೆಯಾಗಿ, ಆತನು ಮಾನುಷ ವಿಗ್ರಹವನ್ನು ತಾಳಿದರೆ, ತಾನೂ ಮಾನುಷ ವಿಗ್ರಹ ಯುಕ್ತಳಾಗಿ, ವಿಷ್ಣುವಿಗೆ ಅನುರೂಪವಾದ ವಿಗ್ರಹವನ್ನೇ ಧರಿಸುತ್ತಾಳೆಂದು ಹೇಳಲ್ಪಟ್ಟಿರುತ್ತದೆ. ವಿಭೂತಿಯ ವಿಷಯದಲ್ಲಿ ಉಭಯ ವಿಭೂತಿಗಳೂ ಇಬ್ಬರ ನಿಯಮನಕ್ಕೂ ಒಳಪಟ್ಟಿರುವದರಿಂದ ಸರ್ವೇಶ್ವರನು ಲೋಕೈಕೇಶ್ವರನಾಗಿರುವ ಹಾಗೆ ಈಕೆಯೂ ಲೋಕೈಕೇಶ್ವರಳು ; ಅದರಲ್ಲಿ ಅರ್ಥ ವಿಭೂತಿಯಲ್ಲಿ ಸರ್ವೇಶ್ವರನಿಗೆ ಹೇಗೆ ಮಮತೆಯೋ, ಹಾಗೆಯೇ ಇನ್ನರ್ಧದಲ್ಲಿ ಲಕ್ಷ್ಮಿಗೆ ಪ್ರೀತಿಯು ಎಂದು ವಿಸ್ತರವಾಗಿ ಉಪದೇಶಿಸಿ; ಕೊನೆಗೆ ಸಂಕ್ಷೇಪದಲ್ಲಿ "ದೇವತಿರ್ಯಙ್ಮನುಷ್ಯೇಷು ಪುನ್ನಾಮಾ ಭಗವಾನ್ ಹರಿಃ। ಸ್ತ್ರೀನಾಮ್ನೀ ಶ್ರೀಶ್ಚವಿಜ್ಞೇಯಾ ನಾನಯೋರ್ವಿದ್ಯತೇ ಪರಮ್" ಎಂದು ಹೇಳಿ ಮುಗಿಸಿರುತ್ತಾರೆ. ಕಿರಣಗಳು ಹೇಗೆ ಆದಿತ್ಯನಿಗೂ, ಪರಿಮಳವು ಪುಷ್ಪಕ್ಕೂ, ಸ್ವಾರಸ್ಯಾರ್ಥವು ದಿವ್ಯಸೂಕ್ತಿಗೂ, ಹೇಗೆ

**ಏವಂ ಪತ್ನೀ ವೈಶಿಷ್ಟ್ಯಂ ಸನ್ನಿಯೋಗ ಶಿಷ್ಟನ್ಯಾಯೇನ ನಾರಾಯಣಶಬ್ದೇ ಪ್ರಾಪ್ಯಪ್ರಾಪಕತ್ವಾವಸ್ಥಾಯಾಮಪಿ ಅನುಸಂಧೇಯಮ್.**

**ಇಪ್ಪಡಿ ನಾರಾಯಣ ಶಬ್ದತ್ತಿಲುಮ್ ಪತ್ನೀಸಂಬಂಧಮನುಸಂಧೇಯಮ್. ಈ ಪತ್ನೀಸಂಬಂಧಂ ದ್ವಯತ್ತಿಲೇ ಕಂಠೋಕ್ತಮ್. ದ್ವಯ**

---

ಉತ್ಕರ್ಷಾವಹಗಳೋ, ಹಾಗೆಯೇ ಲಕ್ಷ್ಮಿಯೂ ಪರಮಾತ್ಮನಿಗೆ ಉತ್ಕರ್ಷಾವಹಳು ಎಂದು ಭಾವಿಸತಕ್ಕದ್ದು. ಪರನು ಪುರುಷನಿಗೆ ಸ್ವತಸ್ಸಿದ್ಧವಾದ ಸಮಸ್ತವಾದ ಪರಿಪೂರ್ಣತ್ವವೂ ಇರುವಾಗ, ಈ ಪತ್ನೀ ಸಂಬಂಧವು ಹೇಗೆ ಅತಿಶಯಾವಹವು? ಎಂಬ ಪೂರ್ವಪಕ್ಷ ವುಂಟಾಗಬಹುದು. ಇಹಲೋಕದಲ್ಲೇ ಪತ್ನಿಯ ಸರ್ವಲಕ್ಷಣ ಸಂಪನ್ನತೆಯು ಪತಿಗೆ ವಿಶೇಷ ಉತ್ಕರ್ಷೆಯನ್ನುಂಟು ಮಾಡುವದನ್ನು ಕಂಡಿರುವೆವು. ಹಾಗೆಯೇ ವಿಶೇಷ್ಯಕ್ಕೆ ಉತ್ಕರ್ಷೆಯು ಅಮೋಘವಾದ ವಿಶೇಷಣ ಮೂಲಕವೇ ಯಾದುದರಿಂದ ವಿಶೇಷಣವಾದ ಲಕ್ಷ್ಮಿಯಿಂದಲೇ ವಿಶೇಷ್ಯನಾದ ವಿಷ್ಣುವಿಗೆ ಸರ್ವಾತಿಶಯವೆಂದು ಭಾವಿಸತಕ್ಕದ್ದು. ದೀಪ್ತಿಯು ರತ್ನಕ್ಕೆ ಉತ್ಕರ್ಷಾವಹವಲ್ಲವೇ?

**ಹೀಗೆ ಪತ್ನೀವೈಶಿಷ್ಟ್ಯವು ಸನ್ನಿಯೋಗಶಿಷ್ಟನ್ಯಾಯದಿಂದ ನಾರಾಯಣ ಶಬ್ದದಲ್ಲೂ ಪ್ರಾಪ್ಯಪ್ರಾಪಕಾವಸ್ಥೆಯಲ್ಲೂ ಅನುಸಂಧೇಯವು.**

**ಇಪ್ಪಡಿ** - ಹೀಗೆ ನಿತ್ಯಾನಪಾಯಿನಿಯಾಗಿರುವ ಲಕ್ಷ್ಮಿಸಂಬಂಧವನ್ನು ಪ್ರಣವದ ಆಕಾರದಲ್ಲಿ ಉಪಪಾದಿಸಿದ ರೀತಿಯಲ್ಲಿ, **ನಾರಾಯಣ ಶಬ್ದತ್ತಿಲುಮ್** - ಮೂಲ ಮನ್ತ್ರದ ನಾರಾಯಣ ಶಬ್ದದಲ್ಲೂ, **ಪತ್ನೀ ಸಂಬಂಧವು, ಅನುಸಂಧೇಯವು.** ಹೇಗೆ? ಎಂದರೆ— **ನರಾಃ** ಎಂದರೆ ನಾಶವಿಲ್ಲದವು, ಇವುಗಳ ಸಮೂಹವು **ನಾರ**ವೆನಿಸುತ್ತದೆ. ಈ ನಾರಶಬ್ದಕ್ಕೆ ಅರ್ಥವು ಮುಂದೆ ಸವಿಸ್ತಾರವಾಗಿ ಹೇಳಲ್ಪಡುತ್ತದೆ; ಲಕ್ಷ್ಮಿಯೂ ಇನ್ನೂ ಅನೇಕ ನಿತ್ಯವಾದ ವಸ್ತುಗಳ ಹಾಗೆ ನಿತ್ಯಳಾದುದರಿಂದ ನಾರಾಯಣಶಬ್ದದಲ್ಲಿ ಈ **ಪತ್ನೀಸಂಬಂಧಂ**-ಹೀಗೆ ಯಾವಾಗಲೂ ಪತ್ನಿಯೊಂದಿಗಿರೋಣವು, **ಅನುಸಂಧೇಯವು. ದ್ವಯತ್ತಿಲೇ** - ದ್ವಯಮನ್ತ್ರದಲ್ಲಿ, **ಕಂಠೋಕ್ತಮ್** - ಅಷ್ಟಾಕ್ಷರದ ಪ್ರಣವದಲ್ಲಿ ಅರ್ಥವಾಗಿ ತೋರುವ ಹಾಗೆ ಅಲ್ಲದೆ, ಸ್ವತಃ ಪದಗಳಿಂದಲೇ ಸ್ಪಷ್ಟವಾಗಿ ವ್ಯಕ್ತವೆಂಬ ಭಾವವು. ಯಾವ ಪದಗಳಿಂದ ಎಂದರೆ ಶ್ರೀಮನ್ನಾರಾಯಣ ಎಂಬಲ್ಲಿಯೂ ಶ್ರೀಮತೇನಾರಾಯಣಾಯ ಎಂಬಲ್ಲಿಯೂ ಇರುವ ಶ್ರೀಮಚ್ಛಬ್ದದಿಂದ ಕಂಠೋಕ್ತವು ಎಂಬ ಭಾವವು. ಕಂಠೋಕ್ತಮ್ ಎಂದು ಏಕೆ ಹೇಳಿದರೆಂದರೆ? ಪ್ರಣವದ ಆಕಾರದಲ್ಲಿ ಕಂಠೋಕ್ತವಲ್ಲದೆ ಅರ್ಥವಾಗಿ ತೋರಿದ ಹಾಗಲ್ಲದೆ ಇಲ್ಲಿಯಾದರೋ

**ವಿವರಣಮಾನ ಗದ್ಯತ್ತಿಲ್ ಪ್ರಥಮತ್ತಿಲೇ“ಭಗವನ್ನಾರಾಯಣಾ”ಎನ್ರು ತುಡಙ್ಗಿ, ಚೊಲ್ಲಚ್ಚೆಯ್‌ದೇ ನಾರವರ್ಗತ್ತಿಸ್ ನಡುವೇ ಇವಳೈಚ್ಚೊಲ್ಲಿತ್ತುವ್ ಪತ್ನೀತ್ವ ನಿಬಂಧನವಾನ ಪತಿಪಾರಾರ್ಥ್ಯತ್ತಾಲುಮ್ “ನರಸಂಬಂಧಿನೋ ನಾರಾಃ” ಎಙ್ಗಿರ ವ್ಯುತ್ಪತ್ತಿಯಾಲುಮ್ ಆಗಕ್ಕಡವದು.**

---

ಕಂಠೋಕ್ತ ನೆಂಬ ಭಾವವು. ದ್ವಯಮನ್ತ್ರವೇ ಶ್ರೀ ವೈಶಿಷ್ಟ್ಯವನ್ನು.ಸ್ಫುಟವಾಗಿ ಹೇಳುತ್ತದೆಂಬ ತಾತ್ಪರ್ಯವು, ಈ ಅಭಿಪ್ರಾಯವನ್ನೇ ಶ್ರೀ ಯತಿವರ್ಯರು ತಮ್ಮ ಶರಣಾಗತಿ (ಪೃಥು) ಗದ್ಯದಲ್ಲಿ ಶ್ರೀ ಶರಣಾಗತಿಯನ್ನು ಹೇಳುವ ಸಂದರ್ಭದಲ್ಲಿ ವ್ಯಕ್ತಪಡಿಸಿರುತ್ತಾರೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—**ದ್ವಯವಿವರಣಮಾನ ಗದ್ಯತ್ತಿಲ್ ಪ್ರಥಮತ್ತಿಲೇ**-ಶ್ರೀ ಯತಿವರ್ಯರು ಉಪಾಯಾನುಷ್ಠಾನ ರೂಪವಾದ ದ್ವಯಮನ್ತ್ರವನ್ನೇ ಉಪಪಾದಿಸಿ ಶರಣಾಗತಿ ಗದ್ಯವನ್ನು ಬರೆದಿರುತ್ತಾರೆಂಬಭಾವದಿಂದ ಹಾಗೆ ಪ್ರಯೋಗವು; ದ್ವಯದ ಅರ್ಥವನ್ನೇ ಉಪಪಾದಿಸಿಹೇಳುವ ಶರಣಾಗತಿ ಗದ್ಯದ ಆದಿಯಲ್ಲಿ,**“ಭಗವನ್ನಾರಾಯಣಾ”**ಎಂದು,**ತುಡಙ್ಗಿ**-ಆರಂಭಿಸಿ, **ಚೊಲ್ಲಚ್ಚೆಯ್‌ದೇ**-ಹೇಳುವ ಸಂದರ್ಭದಲ್ಲಿ, **ನಾರವರ್ಗತ್ತಿನ್ ನಡುವೇ**-ನಾರಾಯಣಶಬ್ದದಲ್ಲಿರುವ ನಾರವೆಂಧರೆ ನಿತ್ಯಗಳಾದ ವಸ್ತುಸಮೂಹಮಧ್ಯದಲ್ಲಿ,**ಇವಳೈಚ್ಚೊಲ್ಲಿತ್ತುವ್** – ಇವಳನ್ನು ಕುರಿತು ಹೇಳಿ ಶ್ರೀ ಶರಣಾಗತಿಯನ್ನು ಅನುಷ್ಠಿಸೋಣವು, **ಪತ್ನೀತ್ವನಿಬಂಧನವಾನ** – ಲಕ್ಷ್ಮಿಯು ಪತ್ನಿಯಾಗಿ ಯಾವಾಗಲೂ ಒಟ್ಟಿಗಿರುವದರ ಮೂಲಕವಾಗಿ ತೋರುವ, **ಪತಿಪಾರಾರ್ಥ್ಯತ್ತಾಲುಮ್** - ಪತಿಯೇ ತನಗೆ ಪರದೇವತೆಯೆಂದು ಆಕೆಯು ಭಾವಿಸಿ ಪತಿಗೇನೇ ತಾನು ಶೇಷಭೂತಳೆಂಬ ಭಾವದಿಂದಲೂ, ಮತ್ತು **“ನರಸಂಬಂಧಿನೋ ನಾರಾಃ” ಎಙ್ಗಿರ** - ಎನ್ನುವ **ವ್ಯುತ್ಪತ್ತಿಯೊಲುಮ್** - ಯೋಗ ಮೂಲಕ ತೋರುವ ಅರ್ಥದಿಂದಲೂ **ಆಗಕ್ಕಡವದು** ಉಂಟಾಯಿತೆಂದು ಭಾವಿಸತಕ್ಕದ್ದು. ಈ ವಾಕ್ಯ ತಾತ್ಪರ್ಯವೇನೆಂದರೆ, ಶರಣಾಗತ್ಯನುಷ್ಠಾನ ಮನ್ತ್ರವಾದ ದ್ವಯಮಂತ್ರಾರ್ಥವನ್ನು ಚನ್ನಾಗಿ ಎಲ್ಲರಿಗೂ ವ್ಯಕ್ತಪಡಿಸುವದಕ್ಕಾಗಿ, ತಾವೂ ಅನುಷ್ಠಿಸಿ, ಆ ಅನುಷ್ಠಾನ ಪ್ರಕಾರವನ್ನು ಶರಣಾಗತಿ ಗದ್ಯದ ಮೂಲಕ ಪ್ರಕಟಿಸಿರುತ್ತಾರೆ. ಇದರಲ್ಲಿ **“ಭಗವನ್ನಾರಾಯಣಾಭಿಮತಾನುರೂಪ ಸ್ವರೂಪ ರೂಪ ಗುಣವಿಭವೈಶ್ವರ್ಯ ಶೀಲಾದ್ಯನವಧಿಕಾತಿಶಯಾಸಂಖ್ಯೇಯ ಕಲ್ಯಾಣಗುಣಗಣಾಂ ಪದ್ಮವನಾಲಯಾಂ ಶ್ರಿಯಂದೇವೀಂ ನಿತ್ಯಾನಪಾಯಿನೀಂ ನಿರವದ್ಯಾಂ ದೇವ ದೇವ ದಿವ್ಯಮಹಿಷೀ ಮಖಿಲಜಗನ್ಮಾತರ ಮಸ್ಮನ್ಮಾತರ ಮಶರಣ್ಯ ಶರಣ್ಯಾ ಮನನ್ಯಶರಣಶ್ಶರಣಮಹಂಪ್ರಪದ್ಯೇ”** ಎಂದು ಹೇಳಿ ಲಕ್ಷ್ಮೀಶರಣಾಗತಿಯನ್ನುಮಾಡಿ ಅನಂತರ ನಾರಾಯಣನಲ್ಲೂ ಶರಣಾಗತಿಯನ್ನು ಅನುಷ್ಠಿಸಿರುತ್ತಾರೆ. ಇದು ಅನೇಘ

ವಾಕ್ಯವಾಗಿ ಪರಮಾರ್ಥ ಗರ್ಭಿತವಾಗಿರುವದರಿಂದ ಶ್ರೀ ದೇಶಿಕರವರೇ ಶ್ರೀಮದ್ರಹಸ್ಯರಕ್ಷೆ ಎಂಬುವ ವ್ಯಾಖ್ಯಾನವನ್ನು ವಿಸ್ತಾರವಾಗಿ ಬರೆದಿರುತ್ತಾರೆ. ಹಾಗೆ ಶರಣಾಗತಿಯನ್ನನುಷ್ಠಿಸಿರುವದು ಉಪಾಯೋಪೇಯಗಳಲ್ಲೂ ಲಕ್ಷ್ಮೀ ವೈಶಿಷ್ಟ್ಯವನ್ನು ದ್ವಯಮನ್ತ್ರವು ತೋರಿಸುತ್ತವೆಂಬುದನ್ನು ವ್ಯಕ್ತಪಡಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು.

ನಾರಾಯಣ ಶಬ್ದದಲ್ಲೂ ಪತ್ನೀ ಸಂಬಂಧವು ಬೋಧಿತವು ಎಂದು ಹೇಳಿದುದು ಹೇಗೆ ? ಎಂದರೆ ರೀಂಗ್ ಕ್ಷಯೇ ಎಂಬ ಧಾತುವಿನಿಂದ ರ ಶಬ್ದವು ಕ್ಷಯಾರ್ಥ ಬೋಧಕವು; ರಾಃ ನಭವನ್ತೀತಿ ನರಾಃ ಎಂಬುದರಿಂದ ನಿತ್ಯವಾದ ವಸ್ತುಗಳು ಹೇಳಲ್ಪಟ್ಟವು. ಅವು ಯಾವುವೆಂದರೆ ಪರಮಾತ್ಮನಿಗೆ ಶೇಷಭೂತರಾಗಿರುವ ತ್ರಿವಿಧ ಚೇತನಾ ಚೇತನಗಳು, ಪರಮಾತ್ಮನ ದಿವ್ಯಾತ್ಮಗುಣಗಳು, ದಿವ್ಯ ರೂಪ ಗುಣಗಳೂ, ದಿವ್ಯಾಯುಧ ಭೂಷಣಾದಿಗಳೂ, ಲಕ್ಷ್ಮಿಯೂ, ಸಹ ಪರಮಪುರುಷನಿಗೆ ಶೇಷಭೂತಳಾಗಿ ನಿತ್ಯಳಾಗಿರುವದರಿಂದ ನಾರಾಃ ಎಂಬುದರಲ್ಲೇ ಅಂತರ್ಗತಳು. ನರಸಂಬಂಧಿನೋ ನಾರಾಃ ಎಂಬುದರಿಂದ ನಾರ ಶಬ್ದಕ್ಕೆ ಈ ನಿತ್ಯವಾದವುಗಳ ವರ್ಗವೆಂದು ಅರ್ಥವಾಗುತ್ತದೆ. ತತ್ಪುರುಷ ಸಮಾಸರೀತ್ಯಾ ನಾರಾಣಾಂ ಅಯನಂ ಎಂದರೆ ಈ ನಾರವರ್ಗಕ್ಕೆ ಪ್ರಾಪ್ಯಪ್ರಾಪಕ ಆಧಾರನೆಂಬ ಅರ್ಥಗಳು, ಅಯನ ಶಬ್ದದಲ್ಲಿರುವ ಇಣ್‌ಗತೌ ಎಂಬ ಧಾತುವ್ಯುತ್ಪತ್ತಿಯಮೂಲಕ ಉಂಟಾಗುತ್ತವೆ. ಆದುದರಿಂದ ನಾರಾಯಣಶಬ್ದವು ಲಕ್ಷ್ಮಿಗೆಆಧಾರಭೂತನುಎಂಬ ಅರ್ಥವನ್ನು ಕೊಡುವದರಿಂದಲೇ, ಇದನ್ನೆಲ್ಲಾ ಮನಸ್ಸಿನಲ್ಲಿಟ್ಟು ಶ್ರೀ ದೇಶಿಕರವರು ಸಙ್ಗ್ರಹವಾಗಿ ಇಪ್ಪಡಿ ನಾರಾಯಣ ಶಬ್ದತ್ತಿಲುಮ್ ಪತ್ನೀಸಂಬಂಧ ಮನುಸಂಧೇಯಮ್ ಎಂದು ಪ್ರಯೋಗಿಸಿರುತ್ತಾರೆ. ದ್ವಯದಲ್ಲಿರುವ ಮತ್ತು ಮೂಲ ಮನ್ತ್ರದಲ್ಲೂ ಇರುವ ನಾರಾಯಣ ಶಬ್ದದಲ್ಲಿರುವ ನಾರಾಣಾಂ ಎಂಬ ಪದದಲ್ಲಿರುವ ನಾರಶಬ್ದದಲ್ಲಿ ಇವಳೂ ಅಂತರ್ಗತಳು ಎಂಬ ಭಾವವು. ಇದಕ್ಕೆ ಎರಡು ಕಾರಣಗಳನ್ನುಹೇಳಿದರು.—(೧) ಲಕ್ಷ್ಮಿಯು ತನ್ನಪತಿಗೆ ಶೇಷಭೂತಳಾಗಿ ಪತಿಪಾರಾರ್ಥ್ಯವುಳ್ಳವಳೆಂಬುದು ಪ್ರಸಿದ್ಧವು. (೨) ನರಸಂಬಂಧಿನೋ ನಾರಾಃ ಎಂಬ ವ್ಯುತ್ಪತ್ತಿ ಮೂಲಕವೆಂದು ಹೇಳಿದರು. (೧) ನೆಯದು ಮುಂದೆ ಉಪಪಾದಿಸಲ್ಪಡುತ್ತದೆ, (೨) ನೆಯದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ. ಆದರೆ ಲಕ್ಷ್ಮಿಯು ಶ್ರೀ ಮಹಾವಿಷ್ಣುವಿಗೆ ಶೇಷಭೂತಳೆಂಬುದಕ್ಕೆ ಪ್ರಮಾಣ ವುಂಟೋ? ಎಂದರೆ ವಿಷ್ವಕ್ಸೇನ ಸಂಹಿತೆಯ ಪ್ರಮಾಣವಾದ "ಯಥಾ ಮಯಾ ಜಗದ್ವ್ಯಾಪ್ತಂ ಸ್ವರೂಪೇಣ ಸ್ವಭಾವತಃ । ತಥಾವ್ಯಾಪ್ತಂ ತಯಾ ಸರ್ವಂ ನಿಯನ್ತ್ರೀಚ ತಥೇಶ್ವರೀ । ಮಚ್ಛೇಷಭೂತಾ ಸರ್ವೇಷಾ ಮೀಶ್ವರೀ ವಲ್ಲಭಾ ಮಮ । ಅಸ್ಯಾ ಮಮ ಚ ಶೇಷಂ ಹಿ ವಿಭೂತಿ ರುಭಯಾತ್ಮಿಕಾ। ಎಂಬಲ್ಲಿ ಸರ್ವೇಶ್ವರವಾಕ್ಯದಿಂದಲೇವ್ಯಕ್ತವು.

## ಅಥ ಅಕಾರಸ್ಯ ಲುಪ್ತ ಚತುರ್ಥ್ಯರ್ಥಂ ಉಪದಿಶತಿ.

---

**ಇಙ್ಗು ಪ್ರಥಮಾಕ್ಷರಮ್ ಚತುರ್ಥ್ಯೇಕವಚನಾನ್ತಮಾಯ್ ವಿಭಕ್ತಿ ಲೋಪಮ್ ಪಿರನ್ದು ಕಿಡಕ್ಕಿರದು. ಆದೆಙ್ಗನೇ ಎನ್ನಿಲ್?—ಪರಮಾತ್ಮಾ**

---

ಈ ಲಕ್ಷ್ಮಿಯ ಶೇಷತ್ವವನ್ನು ಮಹರ್ಷಿಯೂ ರಾಮಾಯಣದಲ್ಲಿ ಅನೇಕ ಕಡೆಗಳಲ್ಲಿ ಉಪಪಾದಿಸಿರುತ್ತಾರೆ—"ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್ । ನತ್ವಾಂ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹ ತೇಜಸಾ ॥" ಸೀತೆಯು ರಾವಣನನ್ನು ಕುರಿತು ನೀನು ಪರಮಾಧರ್ಮಿಯಾದುದರಿಂದ ನನ್ನ ಕಣ್ಣಿನ ತೇಜಸ್ಸಿನಿಂದಲೇ ಭಸ್ಮಮಾಡಿಬಿಡಲು ಯೋಗ್ಯನಾಗಿದ್ದರೂ, ಪತಿಯು ಹಾಗೆ ಆಜ್ಞಾಪಿಸಲಿಲ್ಲವಾದುದರಿಂದ ನಿನ್ನನ್ನು ಭಸ್ಮಮಾಡುವದಿಲ್ಲವೆಂದು ಹೇಳಿರುತ್ತಾಳೆ. ಪುನಃ "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ" ಎಂದೂ ಹೇಳಿಕೊಂಡಿರುತ್ತಾಳೆ. ಹೀಗೆ ಮೂಲಮನ್ತ್ರದಲ್ಲಿರುವ ನಾರಾಯಣ ಶಬ್ದದಲ್ಲಿ ಪತ್ನೀ ಸಂಬಂಧವನ್ನು ಧಾತು ವ್ಯುತ್ಪತ್ತಿಯ ಮೂಲಕ ಸಾಧಿಸತಕ್ಕದ್ದಾಗಿರುತ್ತದೆ. ಆದರೆ ದ್ವಯಮನ್ತ್ರದಲ್ಲಾದರೋ ಹಾಗಲ್ಲದೆ ವ್ಯಕ್ತವಾಗಿಯೇ ಶ್ರೀಮನ್ನಾರಾಯಣ, ಶ್ರೀಮತೇ ನಾರಾಯಣಾಯ ಎಂಬದಾಗಿ ನಾರಾಯಣ ಶಬ್ದವು ಸವಿಶೇಷಣವಾಗಿರುವದರಿಂದ, ದ್ವಯತ್ತಿಲೇ ಕಂಠೋಕ್ತಮ್ ಎಂದು ಹೇಳಲ್ಪಟ್ಟಿತು. ದ್ವಯದಲ್ಲಿ ತೋರಿಬರುವ ಅರ್ಥವನ್ನು ಶ್ರೀ ಯತಿವರ್ಯರು ಶರಣಾಗತಿ ಗದ್ಯದಲ್ಲಿ ಚನ್ನಾಗಿ ಉಪಪಾದಿಸಿ ಹೇಳಿರುತ್ತಾರೆಂದು ತಿಳಿಸಲ್ಪಟ್ಟಿತು.

**ಅನಂತರ ಅಕಾರದಲ್ಲಿ ಲುಪ್ತಚತುರ್ಥ್ಯರ್ಥ ಉಂಟೆಂದು ಉಪದೇಶಿಸುತ್ತಾರೆ.**

---

ಹಿಂದೆ ಆಕಾರದ ಪ್ರಕೃತ್ಯರ್ಥವನ್ನು ಬೋಧಿಸಿದ ೧. ಅಕಾರವಾಚ್ಯನು ಶೇಷಿಯಾಗಿ ಸರ್ವ ವಿಭೂತಿಯೂ ಆತನಿಗೆ ಶೇಷಭೂತವಾದುದರಿಂದ, ಅದನ್ನು ವ್ಯಕ್ತಪಡಿಸುವ ಸಂಪ್ರದಾನವಿಭಕ್ತಿಯಾದ ಚತುರ್ಥಿಯು ಅಕಾರದಲ್ಲಿದ್ದು ಆಯ ಎಂದಿರಬೇಕಲ್ಲವೇ? ಅದು ಏಕೆ ಹಾಗಿಲ್ಲವೆಂದರೆ ಚತುರ್ಥಿಯು ಲುಪ್ತವಾಗಿದೆ ಎಂದೂ, ಅದು ವ್ಯಾಕರಣಸೂತ್ರಾನುಸಾರವಾಗಿಯೇ ಇದೆ ಎಂದೂ, ಉಪಪಾದಿಸಿ ಹೇಳುತ್ತಾರೆ.

ಇಙ್ಗು–ಈಪ್ರಣವದ, ಪ್ರಥಮಾಕ್ಷರಂ–ಮೊದಲನೆಯ ಅಕ್ಷರವಾದ ಅಕಾರವು ಚತುರ್ಥ್ಯೇಕವಚನಾನ್ತಮಾಯ್ - ಚತುರ್ಥ್ಯೇಕವಚನವನ್ನು ಅಂತ್ಯದಲ್ಲುಳ್ಳದ್ದಾಗಿ, ವಿಭಕ್ತಿಲೋಪಂ - ಚತುರ್ಥೀ ವಿಭಕ್ತಿಯ ಪ್ರತ್ಯಯದ ಲೋಪವು, ಪಿರನ್ದು - ಉಂಟಾಗಿ, ಕಿಡಕ್ಕಿರದು – ಇರುತ್ತದೆ. ಇದು ವ್ಯಾಕರಣ ಶಾಸ್ತ್ರಜ್ಞ

**ವುಕ್ಕು ಸ್ವಾತ್ಮಾವೈ ಸಮರ್ಪಿಕ್ಕ ವಿಧಿಕ್ಕಿರ ವಿಡತ್ತಿಲೇ ಪ್ರಣವತ್ತೈ ಮನ್ತ್ರ ಮಾಗ ವಿಧಿಕ್ಕೈಯಾಲುಮ್, ಇದುಕ್ಕು ಅನುಷ್ಠೇಯಾರ್ಥ ಪ್ರಕಾಶನಂ ಪ್ರಾಪ್ತಮಾಗೈಯಾಲುಮ್, ಇದಿಲ್ ಸಮರ್ಪಣೀಯನಾನ ಆತ್ಮಾ ಕೃತೀಯಾ ಕ್ಷರತ್ತಿಲೇ ಪ್ರಕಾಶಿಕ್ಕೈಯಾಲುಮ್, ಇದುಕ್ಕು ಉದ್ದೇಶ್ಯಮಾನ ಪರ**

---

ರಿಗೆ ವ್ಯಕ್ತವಾದುದರಿಂದ ಇಲ್ಲಿ ಉಪಪಾದಿಸಲಿಲ್ಲವು. ಆಗಲಿ, ಚತುರ್ಥೀ ವಿಭಕ್ತಿಯೇ ಲೋಪಿಸಿರುತ್ತದೆ, ಪ್ರಥಮಾದಿ ವಿಭಕ್ತಿಗಳ ಲೋಪವಿಲ್ಲವು ಎಂದು ಹೇಳಲು ಸಾಧನವೇನು? ಎಂದರೆ, ಮುಂದಿನ ವಾಕ್ಯಗಳಿಂದ ಹಾಗೆಯೇ ಭಾವಿಸತಕ್ಕ ದ್ದೆಂಬುದನ್ನು ಐದು ಕಾರಣಗಳಿಂದ ಉಪಪಾದಿಸಿ, **ಅದೆಙ್ಗನೇ ಎನ್ನಿಲ್** - ಅದು ಹೇಗೆ ಎಂದರೆ, ಹಾಗೆ ಹೇಳಲು ಕಾರಣಗಳೇನು? ಎಂಬ ಭಾವವು.—(೧) **ಪರಮಾ ತ್ಮಾವುಕ್ಕು ಸ್ವಾತ್ಮಾವೈ ಸಮರ್ಪಿಕ್ಕ ವಿಧಿಕ್ಕಿರ ವಿಡತ್ತಿಲೇ** - ಪರಮಾತ್ಮನಿಗೆ ತನ್ನ ಆತ್ಮಾವನ್ನು ಭರನ್ಯಾಸರೂಪದಲ್ಲಿ ಸಮರ್ಪಿಸತಕ್ಕದ್ದೆಂದು ನ್ಯಾಸವಿದ್ಯೆಯಲ್ಲಿ ತೈತ್ತಿರೀಯದಲ್ಲಿ **ಓಂ ಇತ್ಯಾತ್ಮಾನಂ ಯುಂಜೀತ** ಎಂದು ವಿಧಿಸಿರುವ ಸ್ಥಳದಲ್ಲಿ, **ಪ್ರಣವತ್ತೈ** - ಪ್ರಣವವಾದ ಓಂ ಎಂಬುವದನ್ನೇ ಮನ್ತ್ರವಾಗಿ ವಿಧಿಸಿರುವದ ರಿಂದಲೂ, **ಚತುರ್ಥೀ ವಿಭಕ್ತಿಯೈ ಇವ್ವಿಡತ್ತಿಲ್ ಕೊಳ್ಳಪ್ರಾಪ್ತಮ್** – ಅಕಾರದಲ್ಲಿ ಚತುರ್ಥಿ ವಿಭಕ್ತಿಯೇ ಲೋಪಿಸಿರುತ್ತದೆಂದು ಭಾವಿಸುವದೇ ಉಚಿತವೇ ವಿನಾ ಪ್ರಥಮಾದಿ ವಿಭಕ್ತಿಯಲ್ಲವೆಂಬ ಭಾವವು. ತನ್ನ ಆತ್ಮಾವನ್ನು ಪರಮಾತ್ಮ ನಲ್ಲಿ ಸಮರ್ಪಿಸುವದು "ವಸುರಣ್ಯೋ ವಿಭೂರಸಿ" ಎಂದಾರಂಭಿಸಿ, "ಓಮಿತ್ಯಾ ತ್ಮಾನಂ ಯುಂಜೀತ" ಎಂದು ಸಮರ್ಪಿಸತಕ್ಕದ್ದೆಂದು ತೈತ್ತಿರೀಯದಲ್ಲಿ ವಿಧಿಸಿರು ತ್ತದೆ. ಪರಮಾತ್ಮನಿಗೇನೇ ಸ್ವಾಭಾವಿಕ ಶೇಷಭೂತನಾಗಿ ಸಮರ್ಪಿಸಬೇಕಾದರೆ ಶ್ರೀ ಮಹಾವಿಷ್ಣುವಿಗೇನೇ ತಾನು ಎಂಬ ಸಂಪ್ರದಾನಾರ್ಥವು ಆವಶ್ಯಕವಾಗಿರುವದ ರಿಂದ, ಆಯ ಎಂಬಲ್ಲಿರುವ ಚತುರ್ಥೀ ವಿಭಕ್ತಿಯು ಲೋಪಿಸಿರುತ್ತದೆ ಎಂಬ ಭಾವವು. ಎರಡನೆಯ ಕಾರಣವನ್ನು ಹೇಳುತ್ತಾರೆ.—(೨) **ಇದುಕ್ಕು ಅನುಷ್ಠೇ ಯಾರ್ಥಪ್ರಕಾಶನಂ ಪ್ರಾಪ್ತಮಾಗೈಯಾಲುಮ್** - ಈ ಪ್ರಣವಕ್ಕೆ, ಹೀಗೆ ಮಕಾರವಾಚ್ಯನಾದ ಜೀವನನ್ನು ಪರಮಾತ್ಮಾವಿಗೆ ಸಮರ್ಪಿಸಿಬಿಡೋಣವೆಂಬ ಅರ್ಥವನ್ನು ಪ್ರಕಾಶಪಡಿಸುತ್ತೆಂಬುವದೇ ಉಚಿತವಾದ ಅರ್ಥವಾದುದರಿಂದಲೂ ಲುಪ್ತಚತುರ್ಥ್ಯರ್ಥವನ್ನೇ ಹೇಳತಕ್ಕದ್ದೆಂದು ತಿಳಿಸುತ್ತಾರೆ. **ಓಂ ಇತ್ಯಾತ್ಮಾನಂ ಯುಂಜೀತ** ಎಂಬಲ್ಲಿ, ಓಂ ಎಂದು ಹೇಳಿ ಈ ಆತ್ಮಾವನ್ನು ಪರಮಾತ್ಮನಿಗೆ ಸಮ ರ್ಪಿಸು ಎಂದು ಶ್ರುತಿಯು ಬೋಧಿಸಿರುವದರಿಂದ ಓಂ ಎಂಬುದರ ಅರ್ಥವು, ಆತ್ಮಾನಂ ಯುಂಜೀತ ಎಂಬಲ್ಲಿ ತೋರುವದು ಆತ್ಮಸಮರ್ಪಣೆಯಾದುದರಿಂದ, ಇದನ್ನೇ ಪ್ರಣವವೂ ಪ್ರಕಾಶಪಡಿಸುತ್ತದೆಂಬುದು ವ್ಯಕ್ತವು; ಈ ಆತ್ಮಸಮರ್ಪ ಣೆಗೆ ಅಕಾರವಾಚ್ಯನೇ ಉದ್ದೇಶ್ಯವಾದುದರಿಂದಲೂ ಲುಪ್ತಚತುರ್ಥ್ಯರ್ಥವು ವ್ಯಕ್ತ

ಬ್ರಹ್ಮಂ ಪ್ರಥಮಾಕ್ಷರತ್ತಿಲ್ ಪ್ರಕೃತಿಯಾಲೇ ತೋತ್ತುಗೈಯಾಲುಮ್, ಉದ್ದೇಶ್ಯಕಾರಕತ್ತೈಯುಮ್, ಸಮರ್ಪಣೀಯ ವಸ್ತುವೈಯುಮ್ ಸಮಾನಾಧಿಕರಿತ್ತು ಪ್ರಯೋಗಿಕ್ಕೈ ಉಚಿತಮಲ್ಲಾಮೈಯಾಲುಮ್, ಉದ್ದೇಶ್ಯಕಾರಕತ್ತುಕ್ಕು ಅನುರೂಪಮಾನ ಚತುರ್ಥೀ ವಿಭಕ್ತಿಯೈ ಇವ್ವಿಡತ್ತಿಲೇ ಕೊಳ್ಳಪ್ರಾಪ್ತಮ್.

---

ವೆಂಬ ಭಾವವು. (೩) ಇದಿಲ್ ಸಮರ್ಪಣೀಯಮಾನ ಆತ್ಮಾ ತೃತೀಯಾಕ್ಷರತ್ತಿಲೇ ಪ್ರಕಾಶಿಕ್ಕೈಯಾಲುಮ್-ಈ ಪ್ರಣವದಲ್ಲಿ ಹವಿಸ್ಸನ್ನೋಪಾದಿಯಲ್ಲಿ ಸಮರ್ಪಿಸಲು ಯೋಗ್ಯನಾದ ಜೀವಾತ್ಮನು ಮೂರನೆಯ ಅಕ್ಷರದಲ್ಲಿ ಚನ್ನಾಗಿ ತೋರಿಬರುವದರಿಂದಲೂ, ಲುಪ್ತಚತುರ್ಥಿಯೂ ಅಕಾರದಲ್ಲಿ ಎಂಬುದು ವ್ಯಕ್ತವೆಂಬ ಭಾವವು. ಮ ಕಾರದ ಮ್ ಜ್ಞಾನೇ ಎಂಬುದರಿಂದ, ಮಕಾರವು ಜ್ಞಾತಾವಾದ ಜೀವಾತ್ಮನನ್ನೇ ಬೋಧಿಸುತ್ತದೆ, ಈತನು ಪರಮಾತ್ಮನಿಗೆ ಶೇಷಭೂತನೆಂಬುದು ಶಾಸ್ತ್ರಗಳಲ್ಲಿ "ದಾಸಭೂತಾಸ್ಸ್ವತಸ್ಸರ್ವೇ" ಎಂಬಿವೇ ಮೊದಲಾದ ಸ್ಥಳಗಳಲ್ಲಿ ಸುಸ್ಪಷ್ಟನಾದುದರಿಂದ, ಅಕಾರದಲ್ಲಿ ಚತುರ್ಥಿಯು ಲುಪ್ತವೆಂಬುದು ವ್ಯಕ್ತವು ಎಂಬ ತಾತ್ಪರ್ಯವು. (೪) ಇದುಕ್ಕು ಉದ್ದೇಶ್ಯಮಾನ ಪರಬ್ರಹ್ಮಮ್ ಪ್ರಥಮಾಕ್ಷರತ್ತಿಲ್ ಪ್ರಕೃತಿಯಾಲೇ ತೋತ್ತುಗೈಯಾಲುಮ್ - ಈ ಆತ್ಮಸಮರ್ಪಣೆಗೆ ಉದ್ದೇಶ್ಯವಾದ ಪರಬ್ರಹ್ಮವು ಮೊದಲಿನ ಅಕ್ಷರದಲ್ಲಿ ವಿಭಕ್ತಿ ಇಲ್ಲದವಂ ಪ್ರಕೃತಿಯಾದ ಅಕಾರದಲ್ಲಿ ತೋರಿಬರುವದರಿಂದಲೂ, ಚತುರ್ಥಿಯು ಅಕಾರದಲ್ಲಿ ಲುಪ್ತವಾಗಿದೆ ಎಂಬ ಭಾವವು, ಯಾವಾಗ ಪರಬ್ರಹ್ಮವು ಸಮರ್ಪಿಸುವದಕ್ಕೆ ಉದ್ದೇಶ್ಯನೆಂದಾವನಂತರ,ಯಾರಿಗೆಸಮರ್ಪಣವೆಂದರೆ"ಬ್ರಹ್ಮತಲ್ಲಕ್ಷ್ಯಮುಚ್ಯತೇ" ಎಂದು ಪರಬ್ರಹ್ಮವಿಗೆ ಎಂಬುದು ಸಿದ್ಧವಾದನಂತರ ಚತುರ್ಥಿಯು ಲೋಪಿಸಿದೆ ಎಂಬುದು ಸ್ಫುಟವಾಗಿ ತೋರಿಬರುತ್ತದೆಂಬುದು ತಾತ್ಪರ್ಯವು."(೫) "ಉದ್ದೇಶ್ಯಕಾರಕತ್ತೈಯುಮ್ ಸಮರ್ಪಣೀಯವಸ್ತುವುಮ್ ಸಮಾನಾಧಿಕರಿತ್ತು ಪ್ರಯೋಗಿಕ್ಕೈ ಉಚಿತಮಲ್ಲಾಮೈಯಾಲುಮ್-ಯಾರಲ್ಲಿ ಸಮರ್ಪಿಸತ್ತೇವೋ ಅವನನ್ನು ಸಮರ್ಪಿಸುವ ವಸ್ತುವನ್ನೂ, ಸಮಾನಾಧಿಕರಿತ್ತು-ಸಾಮಾನ್ಯಾಧಿಕರಣದಿಂದ ಒಂದೇ ವಿಭಕ್ತಿಯಿಂದ ಪ್ರಯೋಗಿಸೋಣವು, ಉಚಿತಮಲ್ಲಾಮೈಯಾಲುಮ್ ಯೋಗ್ಯವಲ್ಲದುದರಿಂದಲೂ, ಹೀಗೆ ಈ ಐದು ಕಾರಣಗಳಿಂದಲೂ, ಉದ್ದೇಶ್ಯಕಾರಕತ್ತುಕ್ಕು-ಉದ್ದೇಶ್ಯನಾದಆತ್ಮಹವಿಸ್ಸಮರ್ಪಣೆಗೆಅರ್ಹನಾಗಿರುವ ಪರಮಾತ್ಮನನ್ನೂ, ಸಮರ್ಪಣೀಯ ವಸ್ತುವುಮ್ ಸಮರ್ಪಿಸುವದಕ್ಕೆ ಯೋಗ್ಯವಾದ ವಸ್ತುವಾಗಿರುವ ಜೀವಾತ್ಮನನ್ನೂ, ಸಮಾನಾಧಿಕರಿತ್ತು-ಸಮಾನವೆಂದು ಭಾವಿಸಿ ಸಮಾನ ವಿಭಕ್ತಿಯಿಂದ ಪ್ರಯೋಗಿಕ್ಕೈ - ಪ್ರಯೋಗಿಸುವದು, ಉಚಿತ

ಪ್ರಥಮ ತೃತೀಯಾಕ್ಷರಙ್ಗಳೈ ಸಮಾನಾಧಿಕರಣಙ್ಗಳಾಗಕ್ಕೊಂಡು ಜೀವಪರಮಾತ್ಮಾಕ್ಕಳುಡೈಯ ಸ್ವರೂಪೈಕ್ಯಮ್ ಇಙ್ಗೆ ಶೊಲ್ಲಪ್ಪಡುಗಿರದೆನ್ರುಮ್ ಕುದೃಷ್ಟಿ ಪಕ್ಷತ್ತುಕ್ಕು ಬಹುಪ್ರಮಾಣ ವಿರೋಧಮುಮ್, ಸಮಭಿವ್ಯಾಹೃತ ನಮಶ್ಶಬ್ದ ನಾರಾಯಣ ಶಬ್ದ ಚತುರ್ಥಿಗಳುಡೈಯ ಸ್ವರಸಾರ್ಥವಿರೋಧಮುಮ್ ವರುಮ್.

---

**ಮಲ್ಲಾಮೈಯಾಲುಮ್** - ಸಮಂಜಸವಲ್ಲದುದರಿಂದಲೂ **ಉದ್ದೇಶ್ಯಕಾರಕತ್ತುಕ್ಕು** - ಉದ್ದೇಶ್ಯವಾದ ವಸ್ತುವನ್ನು ಬೋಧಿಸುವ ಪದಕ್ಕೆ. **ಅನುರೂಪಮಾನ** ವ್ಯಾಕರಣರೀತ್ಯಾ ಯೋಗ್ಯವಾದ ಎಂದರೆ ಸಮಂಜಸವಾದ, **ಚತುರ್ಥಿವಿಭಕ್ತಿಯೇ**–ಉದ್ದೇಶ್ಯವನ್ನು ಪ್ರಕಟಿಸುವ ಸಂಪ್ರದಾನ ಕಾರಕ ವಿಭಕ್ತಿಯನ್ನು **ಇವ್ವಿಡತ್ತಿಲೇ** · ಈ ಸ್ಥಳದಲ್ಲಿ, **ಕೊಳ್ಳಪ್ಪ್ರಾಪ್ತಮ್** - ಅಂಗೀಕರಿಸುವದು ಯುಕ್ತವು. ಅಕಾರ ವಾಚ್ಯನಾದ ವಿಷ್ಣುವು, ಈ ಆತ್ಮ ಹವಿಸ್ಸಮರ್ಪಣೆಗೆ ಉದ್ದೇಶ್ಯನು. ಇದು ಶಾಸ್ತ್ರವಿಹಿತವಾದ ಅರ್ಥವಾಗಿರುವಾಗ, ಉದ್ದೇಶ್ಯನನ್ನು ಹೇಳುವದು ಚತುರ್ಥೀ ವಿಭಕ್ತಿಯ ಮೂಲಕವಾಗಿರುವಾಗ, ಸಾಮಾನಾಧಿಕರಣ್ಯವನ್ನು ವಿಷ್ಣುವಿಗೂ ಜೀವಾತ್ಮನಿಗೂ ಹೇಳಿ ಎರಡೂ ಪ್ರಥಮಾಂತ ಪದಗಳೆಂದು ಭಾವಿಸುವದು ಶಾಸ್ತ್ರವಿರುದ್ಧ ವಿಷಯವು. ಉದ್ದೇಶ್ಯವನ್ನೂ ಹವಿಸ್ಸಮರ್ಪಣೆಯನ್ನೂ ಹೇಳಬೇಕಾಗಿರುವದರಿಂದ, ಉದ್ದೇಶ್ಯವನ್ನು ಸಂಪ್ರದಾನ ವಿಭಕ್ತಿಯಿಂದ ಹೇಳುವದೇ ಸಮಂಜಸವಾದುದರಿಂದ ಲುಪ್ತಚತುರ್ಥಿಯುಳ್ಳದು ಅಕಾರವು, ಎಂದು ಭಾವಿಸುವದೇ ನ್ಯಾಯವೆಂಬ ಭಾವವು. ಹೀಗೆ ಐದು ಕಾರಣಗಳಿಂದ ಇದನ್ನು ಸ್ಥಾಪಿಸಿದರು. ಆದುದರಿಂದ ಬೋಧಿತವಾಗುವ ಪ್ರಣವಾರ್ಥವೇನೆಂದರೆ ಮಃ ಅಯ್ಯೈವ-ಮಕಾರವಾಚ್ಯನಾದ ಜೀವನು ಅಕಾರ ವಾಚ್ಯನಾದ ವಿಷ್ಣುವಿಗೋಸ್ಕರ ಸಮರ್ಪಣೀಯನು" ಎಂಬುದು.

ಶ್ರುತಿಯಲ್ಲಿ ಆತ್ಮಾನಂ "ಯುಂಜೀತ" ಎಂದಿರುವದರಿಂದ ಪರಮಾತ್ಮನಲ್ಲಿ ಜೀವಾತ್ಮನನ್ನು ಸೇರಿಸಿಬಿಡು ಎಂಬರ್ಥವಾಗುವದರಿಂದ ಐಕ್ಯಭಾವನೆಯು ಏಕೆ ಕೂಡದು ? ಸಾಮಾನಾಧಿಕರಣ್ಯದಿಂದ ಅಕಾರಮಕಾರಗಳೆರಡೂ ಸಮಾನ ವಿಭಕ್ತಿಗಳಾದ ಪ್ರಥಮಾಂತಪದಗಳಾಗಿ ಭಾವಿಸಿ, ಜೀವಾತ್ಮನೂ ವಿಷ್ಣುವಾದ ಪರಮಾತ್ಮನೇ ಎಂಬ ಅದ್ವೈತಾರ್ಥವನ್ನು ಏಕೆ ಹೇಳಕೂಡದೆಂದು ಆಕ್ಷೇಪಿಸಿದರೆ, ಬಹು ಶಾಸ್ತ್ರಪ್ರಮಾಣಗಳಿಗೂ, ಮೂಲ ಮಂತ್ರದ ನಮಶ್ಶಬ್ದ ನಾರಾಯಣ ಶಬ್ದಗಳಿಂದ ತೋರಿಬರುವ ಸ್ವಾರಸ್ಯಾರ್ಥಗಳಿಗೂ ವಿರುದ್ಧವಾದುದಾಗುತ್ತದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—ಪ್ರಥಮತೃತೀಯಾಕ್ಷರಙ್ಗಳೈ - ಅಕಾರ ಮಕಾರಗಳೆಂಬ ಅಕ್ಷರಗಳನ್ನು, ಸಮಾನಾಧಿಕರಣಙ್ಗಳಾಗಕ್ಕೊಂಡು-ಸಾಮಾನಾಧಿಕರಣ್ಯ

ವನ್ನು ಬೋಧಿಸುವ ಭಾವನೆಯಿಂದ, ಎರಡೂ ಪ್ರಥಮಾನ್ತ ಪದಗಳಾಗಿರುವದ ರಿಂದ **ಜೀವಪರಮಾತ್ಮಾಕ್ಕಳುಡೈಯ ಸ್ವರೂಪೈಕ್ಯಮ್** - ಜೀವ ಪರಮಾತ್ಮ ರಿಗೆ ಸ್ವರೂಪೈಕ್ಯವು, ಇಜ್ಜ್ಗೇ – ಈ ಪ್ರಣಪದಲ್ಲಿ, **ಶೊಲ್ಲಪ್ಪಡುಗಿರ ದೆನ್ರುಮ್** - ಹೇಳಲ್ಪಡುತ್ತದೆಂದು, **ಕುದೃಷ್ಟಿಪಕ್ಷತ್ತುಕ್ಕು** - ತಮ್ಮ ಸಿದ್ಧಾಂತ ಸ್ಥಾಪನೆಗಾಗಿ ವೇದಗಳಿಗೆ ಸಮಂಜಸವಲ್ಲದ ಅರ್ಥವನ್ನು ಬೋಧಿಸುವ ವಾದಕ್ಕೆ, **ಬಹುಪ್ರಮಾಣಗಳ ವಿರೋಧವೂ, ಸಮಭಿವ್ಯಾಹೃತ** - ಪ್ರಣವ ದೊಂದಿಗೆ ವ್ಯವಹರಿಸಲ್ಪಟ್ಟ, ಹೇಳಲ್ಪಟ್ಟ, **ನಮಶ್ಶಬ್ದ ವೇನು, ನಾರಾಯಣ ಶಬ್ದವೇನು, ಮತ್ತು ಚತುರ್ಥಿಗಳುಡೈಯ** – ನಾರಾಯಣಾಯ ಎಂಬಲ್ಲಿರುವ ಚತುರ್ಥಿಯೇನು, ಇವುಗಳ **ಸ್ವರಸಾರ್ಥವಿರೋಧಮುಮ್**-ಸ್ವಾರಸ್ಯಾರ್ಥಗಳಿಗೆ ವಿರೋಧವೂ, **ವರುಮ್** - ಉಂಟಾಗುತ್ತದೆ. ಅದ್ವೈತಿಗಳ ಸ್ವರೂಪೈಕ್ಯಾರ್ಥ ವನ್ನು ಮೂಲ ಮನ್ತ್ರದಲ್ಲಿನ ಪ್ರಣವಕ್ಕೆ ಹೇಳಲು ಸಾಧ್ಯವಿಲ್ಲವೆಂದು ಈ ವಾಕ್ಯ ದಿಂವ ಹೇಳುತ್ತಾರೆ—ಏಕೆಂದರೆ ಅನೇಕ ಶ್ರುತಿ ಸ್ಮೃತಿ ಪ್ರಮಾಣಗಳಿಗೆ ವಿರೋಧ ವಾಗುತ್ತದೆಂದು ಹೇಳುತ್ತಾರೆ—ಅಂತಹ ಕೆಲವು ಶ್ರುತಿ ಪ್ರಮಾಣಗಳು ಯಾವು ವೆಂದರೆ,—(೧) **ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್, ತಸ್ಮಿಂಶ್ಚಾನ್ಯೋ ಮಾಯಯಾ ಸನ್ನಿರುದ್ಧಃ** (ಶ್ವೇ. ೪. ೯.) ಇಲ್ಲಿ ವ್ಯಕ್ತವಾಗಿ ಅನ್ಯಃ ಎಂಬ ಪದ ವಿರುವದರಿಂದ ಸೃಷ್ಟಿಕರ್ತನೇ ಬೇರೆ, ಸೃಜ್ಯವಸ್ತುವಿನಲ್ಲಿ ಸೇರಿ ಪ್ರಕೃತಿಯಿಂದ ಬಂಧಿ ಸಲ್ಪಟ್ಟ ಜೀವಾತ್ಮನೇ ಬೇರೆ ಎಂದು ಹೇಳಲ್ಪಟ್ಟಿರುತ್ತದೆ. (೨) **ಕ್ಷರಂ ಪ್ರಧಾನಂ, ಅಮೃತಾಕ್ಷರಂ ಹರಃ, ಕ್ಷರಾತ್ಮಾನಾವೀಶತೇ ದೇವ ಏಕಃ** (ಶ್ವೇ. ೧-೧೦) ಭೋಗ್ಯವಸ್ತುವನ್ನು ಭೋಗ್ಯವಾಗಿದೆ ಎಂದು ಅಪಹರಿಸುವ ಭೋಕ್ತಾವನ್ನೂ ಭೋಗ್ಯವನ್ನೂ, ಹೀಗೆ ಇವೆರಡನ್ನೂ ನಿಯಮಿಸುತ್ತಾನೆ ಈಶ್ವರನು. **"ಸಕಾರಣಂ ಕರಣಾಧಿಪಾಧಿಪಃ"** (ಶ್ವೇ. ೬-೯) ಪರಮಾತ್ಮನೇ ಸರ್ವಕ್ಕೂ ಕಾರಣನು, ಇಂದ್ರಿಯಗಳಿಗೆಲ್ಲಾ ಅಧಿಪನಾಗಿರುವ ಜೀವಾತ್ಮನಿಗೂ ಸ್ವಾಮಿಯು ; (೫) **"ಪ್ರಧಾನ ಕ್ಷೇತ್ರಜ್ಞಪತಿಃ"** (ಶ್ವೇ. ೬-೧೬) ಪ್ರಕೃತಿಗೂ ಆತ್ಮ ವರ್ಗಕ್ಕೂ ಸರ್ವೇಶ್ವರನು ನಿಯಾಮಕನು. (೬) **"ಜ್ಞಾಜ್ಞೌ ದ್ವಾವಜಾ ವೀಶನೀಶೌ"** (ಶ್ವೇ. ೧-೯) ಎರಡು ವಿಧ ಆತ್ಮರುಗಳು ಯಾರೆಂದರೆ ಒಬ್ಬನು ಸರ್ವಜ್ಞನು, ಇನ್ನೊಬ್ಬನು ಅದನ್ನು ಕಳೆದುಕೊಂಡಿರುವನು, ಇಬ್ಬರೂ ನಿತ್ಯರು, ಒಬ್ಬನು ದಾಸನು ಇನ್ನೊಬ್ಬನು ಸ್ವಾಮಿಯು. (೭) **ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್** (ಕಠ. ೧-೧೩) ನಿತ್ಯರಾದ ಅನೇಕರಾದ ಜೀವಾತ್ಮರಿಗೆ, ಯಾವ ನಿತ್ಯನಾದ ಒಬ್ಬನಾದ ಪರಮಾತ್ಮನು ಸಮಸ್ತಾಭೀಷ್ಟಗಳನ್ನು ದಯಪಾಲಿಸುವನೋ, (೮) **ಭೋಕ್ತಾಭೋಗ್ಯಂ ಪ್ರೇರಿತಾರಂಚಮತ್ವಾ** (ಶ್ವೇ. ೧.೧೨) ಭೋಕ್ತವಾದ ಜೀವಾತ್ಮನು ಭೋಗ್ಯವಸ್ತುವಾದ

ಪ್ರಕೃತಿಯನ್ನೂ ತನಗೂ ಪ್ರೇರಿತಾವಾದ ಪರಬ್ರಹ್ಮವನ್ನು ತಿಳಿದು, (೯) "**ದ್ವಾಸು ಪರ್ಣಾ.... ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ** ಮುಂ. ೩-೧-೧) ಪರಮಾತ್ಮನೂ ಜೀವಾತ್ಮನೂ ಎಂಬದಾಗಿ ಎರಡು ವಿಧ ಆತ್ಮರುಗಳು, ಒಂದೇ ವೃಕ್ಷವೆಂಬರಿ ಶರೀರದಲ್ಲಿರುವವರಾಗಿ ಅವರಲ್ಲಿ ಒಬ್ಬನಾದ ಜೀವಾತ್ಮನು ಆ ವೃಕ್ಷದಲ್ಲಿ ಬಿಟ್ಟ ಕರ್ಮಫಲವನ್ನು ಭೋಗ್ಯವಾಗಿ ಅನುಭವಿಸುವನು; ಇನ್ನೊಬ್ಬನಾದ ಪರಮಾತ್ಮನು ಕರ್ಮವಶ್ಯನಲ್ಲದೆ ಪ್ರಕಾಶಿಸುತ್ತಾ ನಿಯನ್ತಾವಾಗಿರುವನು. (೧೦) **ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ** (ಶ್ವೇ. ೧-೬) ಜೀವಾತ್ಮನೂ ಪ್ರೇರಿತಾವಾದ ಪರಮಾತ್ಮನನ್ನೂ ಬೇರೆ ಎಂದು ತಿಳಿದು (೧೧) **ದಾಸಭೂತಾ ಸ್ಸ್ವತ ಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ** (ಮನ್ತ್ರರಾಜಸ್ತೋತ್ರ) ಜೀವಾತ್ಮರೆಲ್ಲಾ ಪರಮಾತ್ಮನಿಗೆ ದಾಸಭೂತರು. ಹಾಗೆಯೇ ಸ್ಮೃತಿಯಲ್ಲೂ (೧೨) "**ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ। ಜೀವಭೂತಾಂ**" (ಗೀ. ೭-೪) ತನಗೆ ಶರೀರವಾಗಿ ಸೇರಿರುವುವು ಎರಡು ಪ್ರಕೃತಿಗಳು.—**ಅಚೇತನ ಪ್ರಕೃತಿಯೊಂದು**, ಅದಕ್ಕೂ ಶ್ರೇಷ್ಠವಾದ ಜೀವವರ್ಗವಾದ ಪ್ರಕೃತಿಯೆಂದು ಹೇಳಲ್ಪಟ್ಟಿರುತ್ತದೆ. (೧೩) "**ಪ್ರಕೃತಿಂ ಪುರುಷಂಚೈವ ವಿದ್ಧ್ಯನಾದೀ ಉಭಾವಪಿ**" (ಗೀ. ೯-೭) (೧೪) **ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ। ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ। ಉತ್ತಮಃ ಪುರುಷಸ್ತ್ವನ್ಯಃ** (ಗೀ. ೧೫-೧೬-೧೭) ಬದ್ಧಮುಕ್ತಜೀವಾತ್ಮರುಗಳಿಗಿಂತ ಬೇರೆಯಾದವನು ಪರಮಪುರುಷನೆಂದು ಹೇಳಲ್ಪಟ್ಟಿರುತ್ತದೆ. (೧೫) "**ಇದಂ ಜ್ಞಾನಮುಪಾಶ್ರಿತ್ಯಮಮಸಾಧರ್ಮ್ಯಮಾಗತಾಃ**" (ಗೀ.೧೪-೨) ಈ ಜ್ಞಾನರೂಪವಾದ ಉಪಾಸನವನ್ನು ಆಶ್ರಯಿಸಿ, ಮುಕ್ತಿದೆಶೆಯಲ್ಲಿ ನನಗೆ ಸಮಾನವಾದ ಧರ್ಮವನ್ನು ಹೊಂದುತ್ತಾರೆ. ಹಾಗೆಯೇ ಶ್ರುತಿಯೂ ಹೇಳುತ್ತದೆ. "**ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ** (ಮುಂ. ೩-೧೩) ಹೀಗೆ ಅಸಂಖ್ಯೇಯ ಪ್ರಮಾಣಗಳನ್ನು ಉದಾಹರಿಸಬಹುದು. ಇವುಗಳಿಗೆ ಸ್ವರೂಪೈಕ್ಯವಾದವು ಕೂಡುವದಿಲ್ಲವು. ಇಷ್ಟು ಪ್ರಮಾಣ ವಾಕ್ಯಗಳ ವಿರುದ್ಧ ಭಾವವನ್ನು ಸಹಿಸಿಕೊಂಡು ಸ್ವರೂಪೈಕ್ಯವಾದವು ಬಹುಜನ ಸಮ್ಮತವನ್ನು ಹೊಂದಿರುವದು ಆಶ್ಚರ್ಯಕರವಾದ ವಿಷಯವು.

**ನ**ಮುಶ್ಶಬ್ದ ಸ್ವರಸಾರ್ಥವು ಯಾವುದೆಂದರೆ ಪ್ರಹ್ವೀಭಾವವು, "**ಅಹಮಪಿ ನಮಮ; ಭಗವತ ಏವ ಅಹಮಸ್ಮಿ; ಯಾಶ್ಚ ಕಾಶ್ಚನಕೃತಯೋಮಮಭವನ್ತಿ, ಮಮ ಮಮತಾ ನಾಸ್ತಿ ತಾಸು; ಭಗವತ ಏವತಾಃ**" ಇತ್ಯಾದಿ ಸ್ವಾರಸ್ಯಾರ್ಥಗಳಿಗೆ ವಿರೋಧವು. ಈ ಪ್ರಹ್ವೀಭಾವವು, ಶರಣಾಗತನು ಮಾಡುವದಾಗಿ, ಶರಣ್ಯನಾಗಿ ಸರ್ವಾಭೀಷ್ಟಫಲಪ್ರದನಾಗಿರುವವನಿಗೇನೇ ಸಲ್ಲತಕ್ಕದ್ದು. ಹಾಗಲ್ಲದೆ ತಾನೇಪರಮಾತ್ಮನಾ

ಇದು ಪ್ರಣವತ್ತೈ ಧನುಸ್ಸಾಗವುಮ್, ಆತ್ಮಾವೈ ಶರಮಾಗವುಮ್ ಬ್ರಹ್ಮತ್ತೈ ಇಲಕ್ಕಾಗವುಮ್, ಆತ್ಮಸಮರ್ಪಣತ್ತೈ ಲಕ್ಷ್ಯವೇಧಮಾಗವುಮ್ ವಗುತ್ತು ಚೊಲ್ಲುಗಿರ ವಾಕ್ಯತ್ತಾಲುಮ್ ಸಿದ್ಧಮ್.

---

ದರೆ ತನ್ನ ಕಾಲಿಗೆ ತಾನೇ ಶರಣಾರ್ತಿ ಎಂಬ ಗಾದೆಗೆ ಅನುಸಾರವಾಗಿ ಸ್ವಾರಸ್ಯಕ್ಕೆ ಭಂಗವು. ಪ್ರಹ್ವೀಭಾವವು ಎಲ್ಲಿ ಕೂಡುತ್ತದೆ ಎಂದರೆ ದೀನ ದಾನಿಗಳಲ್ಲಿ ಶೇಷಶೇಷಿಗಳಲ್ಲಿ, ದಾಸ ಸ್ವಾಮಿಗಳಲ್ಲಿ. ದಾಸನು, ಸ್ವಾಮಿಯಲ್ಲೇ ಈ ಪ್ರಹ್ವೀಭಾವವನ್ನು ತೋರಿಸತಕ್ಕದ್ದು. ನಾರಾಯಣ ಶಬ್ದದ ಸ್ವರಸಾರ್ಥಕ್ಕೂ ವಿರುದ್ಧವು; ಹೇಗೆಂದರೆ—ನಾರವಸ್ತುಗಳಲ್ಲಿ ಸೇರಿದ ಜೀವಾತ್ಮರಿಗೆ ಅಯನಂ - ಪ್ರಾಪ್ಯ, ಪ್ರಾಪಕ, ಗತಿಯು (ತತ್ಪುರುಷಾರ್ಥವು) "ನಾರಸ್ತ್ವಿತಿ ಸರ್ವಪುಂಸಾಂ ಸಮೂಹಃ ಪರಿಕೀರ್ತಿತಃ । ಗತಿರಾಲಂಬನಂ ತಸ್ಯ ತೇನ ನಾರಾಯಣ ಸ್ಮೃತಃ" ಎಂಬಲ್ಲಿ ಹೇಳಲ್ಪಟ್ಟ ನಾರ ಶಬ್ದದ ಸ್ವಾರಸ್ಯಾರ್ಥಕ್ಕೂ ವಿರುದ್ಧವು. ಅಥವಾ ಈ ಜೀವಾತ್ಮರಿಗೆ ತಾನು ಆತ್ಮಾವಾಗಿರುವದರಿಂದ, ಈ ಆತ್ಮರನ್ನೇ ಆಶ್ರಯವಾಗಿ ಉಳ್ಳವನು (ಬಹುವ್ರೀಹಿ ಅರ್ಥವು.) ಜೀವಾತ್ಮ ಪರಮಾತ್ಮೈಕ್ಯವಾದದಲ್ಲಿ ಇವೆರಡೂ ಕೂಡುವದೇ ಇಲ್ಲವು; ಆದುದರಿಂದ ವಿರುದ್ಧವು.

ಚತುರ್ಥೀ ಸ್ವಾರಸ್ಯಾರ್ಥಕ್ಕೂ ವಿರೋಧವು; ಹೇಗೆಂದರೆ—ಚತುರ್ಥಿಯ ಅರ್ಥವು ಶೇಷತ್ವ ಕೈಙ್ಕರ್ಯಗಳು; ಇವು ಶೇಷಿಯಾಗಿ ಸ್ವಾಮಿಯಾದವನು ಇನ್ನೊಬ್ಬನಿದ್ದರೆ ಸ್ವರಸವಾಗಿ ಸಲ್ಲುವುವು. ಹಾಗಿಲ್ಲದೆ ಜೀವಾತ್ಮ ಪರಮಾತ್ಮೈಕ್ಯವಾದದಲ್ಲಿ ಇವು ಕೂಡುವದೇ ಇಲ್ಲವು; ಆದುದರಿಂದ, ಪರಮ ವಿರುದ್ಧವು.

ಅಕಾರ ಮಕಾರಾರ್ಥಗಳ ಸಾಮಾನಾಧಿಕರಣ್ಯಬಲದಿಂದ ಸ್ವರೂಪೈಕ್ಯವಾದಕ್ಕೆ, ನಮಗೆ "ಬ್ರಹ್ಮವೇದ ಬ್ರಹ್ಮೈವ ಭವತಿ" "ತತ್ತ್ವಮಸಿ" ಇತ್ಯಾದಿ ವಾಕ್ಯಗಳ ಬಲವಿರುವದರಿಂದ, ಹಾಗೆಯೇ ಅರ್ಥ ಹೇಳುವದು ಉಚಿತವಲ್ಲವೋ? ಎಂದರೆ ಬ್ರಹ್ಮವೇದ ಎಂಬ ಪ್ರಯೋಗವೇ ಸ್ವರೂಪೈಕ್ಯವಾದವನ್ನು ನಿರಸನ ಮಾಡುತ್ತದೆ; ಪರಬ್ರಹ್ಮನೇ ಬೇರೆ, ಅದನ್ನು ಉಪಾಸಿಸುವನೇ ಬೇರೇ ಎಂಬುದು ವ್ಯಕ್ತವು. ಸ್ವರೂಪೈಕ್ಯವಾದಕ್ಕೆ ವಿರುದ್ಧವಾಗಿಯೇ ಶ್ರುತಿಯಲ್ಲಿ ಪ್ರಣವಾರ್ಥ ವಿವರಣೆಯು ಇರುತ್ತದೆಂದು ಮುಂದೆ ಆ ವಾದವನ್ನು ಖಂಡಿಸುತ್ತಾರೆ.—ಇದು ಈ ಅಕಾರದಲ್ಲಿರುವ ಲುಪ್ತಚತುರ್ಥ್ಯರ್ಥವು ಎಂದರೆ ಪರಮಾತ್ಮನಿಗೂ ಜೀವನಿಗೂ ಇರುವ ಶೇಷಿ ಶೇಷ ಭಾವವು, ಪ್ರಣವತ್ತೈ ಧನುಸ್ಸಾಗವುಮ್ - ಪ್ರಣವವನ್ನೇ ಒಂದು ಧನುಸ್ಸೆಂದೂ, ಆತ್ಮಾವೈ ಶರಮಾಗವುಮ್ - ಆತ್ಮಾವನ್ನು ಬಾಣವೆಂದೂ, ಬ್ರಹ್ಮತ್ತೈ ಇಲಕ್ಕಾಗವುಮ್ - ಪರಬ್ರಹ್ಮವನ್ನು ಬಾಣ ಬಿಡುವ ಲಕ್ಷ್ಯವೆಂದರೆ ಗುರಿಯಾಗಿಯೂ, ಆತ್ಮ ಸಮರ್ಪಣತ್ತೈ-ಆತ್ಮಾನಂ ಯುಂಜೀತ

ಎಂಬಲ್ಲಿ ತೋರುವ ಆತ್ಮಸಮರ್ಪಣೆಯನ್ನು, **ಲಕ್ಷ್ಯವೇಧವಾಗವುಪತ್** - ಲಕ್ಷ್ಯದಲ್ಲಿ ಸೇರಿದುದರಿಂದ ಗುರಿಯನ್ನು ಬೇಧಿಸುವ **ವ್ಯಾಪಾರವೆಂದು ವಗುತ್ತು** - ಪೃಥಕ್ತ್ವಾಗಿ, ಲಕ್ಷ್ಯವಾದ ಪರಮಾತ್ಮನೇ ಬೇರೆ, ಶರವಾದ ಆತ್ಮನೇ ಬೇರೆ ಎಂದು **ಶೊಲ್ಲುಗಿರವಾಕ್ಯತ್ತಾಲುಮ್** - ಹೇಳುವ ಶ್ರುತಿವಾಕ್ಯದಿಂದ **ಸಿದ್ಧಮ್** - ಸ್ಥಾಪಿತವು. ಸ್ವರೂಪೈಕ್ಯವು ಅಕಾರ ಮಕಾರಗಳಿಂದ ಪ್ರಣವ ದಲ್ಲಿ ಹೇಳಲ್ಪಟ್ಟಿತೇ ಅಥವಾ ಶೇಷಶೇಷಿಭಾವ ತೋರುವ ತಾದರ್ಥ್ಯವು ಹೇಳಲ್ಪಟ್ಟಿತೇ ? ಎಂಬ ಈ ವಿವಾದಗಳೇ ಬೇಕಿಲ್ಲವು. ಶ್ರುತಿಯೇ ಶೇಷಿಶೇಷ ಭಾವವು ತೋರುವ ಈ ವಾಕ್ಯಾರ್ಥವುಳ್ಳದರಲ್ಲಿ ವ್ಯಕ್ತಪಡಿಸಿರುತ್ತದೆ. ವಿವಾ ದಕ್ಕೆ ಆಸ್ಪದವೇ ಇಲ್ಲವೆಂಬ ಭಾವವನ್ನು **ಸಿದ್ಧಮ್** ಎಂಬುದರಿಂದ ತೋರಿಸಿರು ತ್ತಾರೆ. ಆ ಶ್ರುತಿವಾಕ್ಯವು ಯಾವುದೆಂದರೆ—**"ಪ್ರಣವೋ ಧನುಶ್ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯ ಮುಚ್ಯತೇ । ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್"**(ಮುಂ. ೨-೪) ಎಂಬಲ್ಲಿ ರೂಪಕವಾಡಿ ಹೇಳಲ್ಪಟ್ಟಿರುತ್ತದೆ. ಪ್ರಣವವೇ ಧನಸ್ಸು, ಅದರಲ್ಲಿ ಮಕಾರದಿಂದ ಬೋಧಿಸಲ್ಪಟ್ಟ ಆತ್ಮಾವೇ ಬಾಣವು, **ಬ್ರಹ್ಮ ತಲ್ಲಕ್ಷ್ಯ ಮುಚ್ಯತೇ** - ಅಕಾರವಾಚ್ಯ ಪರಬ್ರಹ್ಮವೇ ಆ ಬಾಣಕ್ಕೆ ಗುರಿಯು, **ಅಪ್ರಮತ್ತೇನ ವೇದ್ಧವ್ಯಂ** - ಆಕಡೆ ಈಕಡೆ ನೋಡದೆ ಅದನ್ನೇ ನೋಡುತಾ ಗುರಿ ಇಟ್ಟು ಹೊಡೆಯತಕ್ಕದ್ದು, ಎಂದರೆ ಪರವೈಕಾಂತ್ಯದಿಂದ ಧ್ಯಾನಿಸತಕ್ಕದ್ದೆಂಬ ಭಾವವು. **ಶರವತ್** - ಬಾಣವು ಹೇಗೆ ಹೋಗಿ ಲಕ್ಷ್ಯದಲ್ಲಿ ಸೇರಿಕೊಳ್ಳುತ್ತದೋ ಹಾಗೆ, **ತನ್ಮಯೋ ಭವೇತ್** - "ಮಮ ಸಾಧರ್ಮ್ಯಮಾಗತಾಃ" ಎಂಬಲ್ಲೂ, **"ನಿರಂಜನಃ ಪರಮಂ ಸಾಮ್ಯಮುಪೈತಿ"** - ಎಂಬಲ್ಲೂ ಹೇಳಿರುವ ಹಾಗೆ ಪರಮಾ ತ್ಮನ ಹಾಗೆ ಆಗಿ, ಆತನಿಗಿರುವ ಆನಂದವನ್ನು ಹೊಂದುವನು; ಸ್ವರೂಪೈಕ್ಯವನ್ನು ಹೊಂದುವನೆಂಬರ್ಥವಲ್ಲವು; ಐಕ್ಯವೆಂದೇಕೆ ಅರ್ಥಕೊಡದು ಎಂದರೆ ಬಾಣವೇ ಬೇರೆ ಲಕ್ಷ್ಯವೇ ಬೇರೆಯಾದುದರಿಂದ ಸ್ವರೂಪೈಕ್ಯವುಹೇಳಲಿಲ್ಲವು. ಹಾಗೆಯೇ ಶ್ರುತಿಯೂ **"ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ"** ಎಂದು ಪರಮಾತ್ಮ ಜೀವಾತ್ಮ ಭೇದ ವನ್ನೇ ಬೋಧಿಸಿರುತ್ತದೆ. ಈ ಶ್ರುತಿ ವಾಕ್ಯವು ಪ್ರಣವಾರ್ಥದ ಉಪಪಾದನೆಯು. ಹೀಗೆ ಗೂಢವಾಗಿ ಸ್ವಾರಸ್ಯವಾಗಿ ಹೇಳಿರುವ ಆತ್ಮ ಭರಸಮರ್ಪಣೆಯ ಅರ್ಥವನ್ನೇ ತೈತ್ತಿರೀಯವು ಭರಸಮರ್ಪಣ ಮನ್ತ್ರವಾದ **"ವಸುರಣ್ಯೋ ವಿಭೂರಸಿ"** ಎಂಬಲ್ಲಿ **ಓಂ** ಎಂಬುದಕ್ಕೆ **ಓಮಿತ್ಯಾತ್ಮಾನಂ ಯುಂಜೀತ** ಎಂಬ ವಿವರಣವಾದುದರಿಂದ, **ಆತ್ಮಾನಂ ಯುಂಜೀತ** ಎಂಬುದೇ ಪ್ರಣವಾರ್ಥವು ಆತ್ಮ ಭರಸಮರ್ಪಣೆಯನ್ನೇ ಪ್ರಣವವು ಬೋಧಿಸುತ್ತದೆ. ತಂದೆಯು ಮೃತಿಯನ್ನು ಹೊಂದಿದ್ದನ್ನು ತಿಳಿದು, ಭರ ತನು ರಾಜ್ಯವನ್ನು ನಿರಾಕರಿಸಿ, ಸೈನ್ಯಕೋಶ ಮೊದಲಾದವುಗಳನ್ನೆಲ್ಲಾ ಶ್ರೀ ರಾಮ ಚಂದ್ರಪ್ರಭುವಿನ ಪಾದದಲ್ಲಿ ಶರಣಾಗತನಾಗಿಸಮರ್ಪಿಸಿ,ಆತನನ್ನು ಚಿತ್ರಕೂಟದಿಂದ

## ಪ್ರಣವೇ ಶೇಷಶೇಷಿ ಭಾವಮನುಸಂಧೇಯಮ್.

### ಇಜ್ಯಾ ಭರಸಮರ್ಪಣಮ್ ಪೂರುಷಾವೇಕ್ಷೇದು ಸ್ವತಂತ್ರಪ್ರಣವತ್ರಿರ್

ಹಿಂತಿರುಗಿ ಹೇಗಾದರೂಮಾಡಿ ಕರೆದುಕೊಂಡೇ ಹೋಗಬೇಕೆಂದುನಿಶ್ಚಯಿಸಿ ಬಂದು ದನ್ನುವ್ಯತ್ಯಸ್ತವಾಗಿ ಭಾವಿಸಿ, ಲಕ್ಷ್ಮಣನು, ಅವರನ್ನೆಲ್ಲಾ ಧ್ವಂಸಮಾಡುವದಕ್ಕಾಗಿ ಶ್ರೀರಾಮಾಜ್ಞೆಯನ್ನುಪ್ರಾರ್ಥಿಸಲಾಗಿ,ಆಗ ಶ್ರೀರಾಮಪ್ರಭುವು ಹೇಳುತ್ತಾನೇನೆಂದರೆ ಭರತನು ಮಹಾಪ್ರಾಜ್ಞನಾಗಿ ಮಹೇಷ್ವಾಸನು,ಮಹತ್ತಾದ ಬಾಣವನ್ನು ಹಿಡಿದ ವನ್,ಅದುಯಾವುದೆಂದರೆ,ತನ್ನ ಆತ್ಮಾಎಂಬ ಬಾಣವನ್ನುನನ್ನ ಪಾದವೆಂಬ ಲಕ್ಷ್ಯ ದಲ್ಲಿಸಮರ್ಪಿಸುವದಕ್ಕಾಗಿ ಬಂದವನ ಮೇಲೆ ಓ ಲಕ್ಷ್ಮಣನೇ ನಿನ್ನ ಬಾಣಗಳು ಯಾವುವೂ ಕಾರ್ಯಕಾರಿಯಾಗಲಾರವು; ನಿನಗೆ ರಾಜ್ಯಾಭಿಲಾಷೆಯಿದ್ದರೆ ಹೇಳು, ಭರತನಿಗೆ ಹೇಳಿಕೊಡಿಸುವೆನು, ಎನ್ನಲು; ಲಜ್ಜೆಯಿಂದ ಸುಮ್ಮನಾದನು ಎಂದು ಹೇಳಲ್ಪಟ್ಟಿರುತ್ತದೆ. "ಕಿಮತ್ರಧನುಷಾ ಕಾರ್ಯಂ ಅಸಿನಾವಾ ಸಚರ್ಮಣಾ। ಮಹೇಷ್ವಾಸೇ ಮಹಾಪ್ರಾಜ್ಞೇ ಭರತೇ ಸ್ವಯಮಾಗತೇ" (ಶ್ರೀರಾಮಾ. ಅಯೋಧ್ಯಾ. ೯೮. ೩) ಈ ಆತ್ಮಸಮರ್ಪಣ ರೂಪಶರವಿಮೋಚನೆಯಲ್ಲೇ ಧನು ರರ್ಥಕ್ಕೆ ಅಭಿಪ್ರಾಯವೆಂದೇ ಗೀತಾಂತ್ಯದಲ್ಲಿ "ಯತ್ರಪಾರ್ಥೋ ಧನು ರ್ಧರಃ" ಎಂಬಲ್ಲಿ ಸ್ವರಸವಾಗಿ ಹೇಳಲ್ಪಟ್ಟಿರುತ್ತದೆಂದು ಭಾವಿಸತಕ್ಕದ್ದು. ಪ್ರಣ ವೋಚ್ಚಾರಣ ಪೂರ್ವಕ ಆತ್ಮರೂಪ ಶರವಿಮೋಚನೆಯೇ ಅಮೋಘಾಸ್ತ್ರಪ್ರಯೋ ಗವೇ ವಿನಾ ಗಾಂಡೀವದಿಂದ ಬಂದ ಶರಪ್ರಯೋಗವಲ್ಲವು- "ಪ್ರಣವೋ ಧನುಶ್ಶರೋಹ್ಯಾತ್ಮಾ" ಎಂಬ ಮುಂಡಕ ಶ್ರುತಿವಾಕ್ಯಾರ್ಥಕ್ಕೆ ಸಾರವಿವರಣಿಯು ವರು ಬೇರೇ ವಿಧವಾಗಿ ಅವತಾರಿಕೆಯನ್ನು ಕೊಟ್ಟಿರುತ್ತಾರೆ; ಹೇಗೆಂದರೆ – ಹಿಂದೆ "ಓ ಮಿತ್ಯಾತ್ಮಾನಂಯುಂಜೀತ"ಎಂಬುವು ಭರಸಮರ್ಪಣಪರವಾಗಿ ಓಂ ಎಂಬ ಪ್ರಣವದ ವಿವರಣವೆಂದು ಹೇಳಿದುವು ಸರಿಯಲ್ಲವೆಂದು ಹೇಳಿ ಅದು ಉಪಾಸನ ಪರವೆಂದು ಕೆಲವರು ಅಭಿಪ್ರಾಯಪಡುವರು; ಅವರ ನಿರಸನಕ್ಕಾಗಿ ಈ ಶ್ರುತಿಯ ಅರ್ಥವೂ ಈ ಮುಂಡಕ ವಾಕ್ಯವೂ ಒಂದೇಯಾಗಿ ಅತ್ಯೈತ್ತರೀಯಾರ್ಥವೂ ಭರ ಸಮರ್ಪಣವೆಂದು ಸ್ಥಾಪಿಸುವದಕ್ಕಾಗಿ ಪ್ರವೃತ್ತವೆಂದು ಹೇಳಿರುತ್ತಾರೆ.

### ಪ್ರಣವದಲ್ಲಿ ಶೇಷ ಶೇಷೀಭಾವವು ಅನುಸಂಧೇಯವು.

ಪ್ರಣವಲ್ಲಿ ಅಕಾರ ಮಕಾರಗಳ ಸಾಮಾನಾಧಿಕರಣ್ಯವೂ, ತನ್ಮೂಲಕ ಸ್ವರೂ ಪೈಕ್ಯವೂ ಕೂಡುವದಿಲ್ಲವೆಂದು ಹೇಳಿದರು. ಈಗ ಇನ್ನೊಂದು ಕಾರಣದಿಂದಲೂ ಮೂಲಮನ್ತ್ರದ ಪ್ರಣವಾರ್ಥವು ಭರಸಮರ್ಪಣವೇ ವಿನಾ ಸ್ವರೂಪೈಕ್ಯ ಪ್ರದ ರ್ಶಕ ವಲ್ಲವೆಂದು ಹೇಳುತ್ತಾರೆ:—ಇಜ್ಯಾ - ಈ ಮೂಲಮನ್ತ್ರದ ಪ್ರಣವದಲ್ಲಿ,

ಕೆಂಡ ಚತುರ್ಥಿಯಿರ್ಪಡಿಯೇ ಇಚ್ಚತುರ್ಥಿಕ್ಕು ಮರ್ಥಮಾಗಕ್ಕಡವದು. ಇಙ್ಙುಪ್ರಣವಮ್ ಪರಶೇಷತ್ವೈಕರಸ ಸ್ವರೂಪ ಪ್ರತಿಪಾದನ ಪರಮಾನ ಪೊರಳಿಲ್ (ಪೋದು) ಇಚ್ಚತುರ್ಥೀ ತಾದರ್ಥ್ಯತ್ತೈ ವಿವಕ್ಷಿಕ್ಕೈಯಾಲೇ

---

ಭರಸಮರ್ಪಣಮ್ ಪೊರುಳಾಂ ಪೋದು – ಆತ್ಮಾವನ್ನು ಪರಮಾತ್ಮನಲ್ಲಿ ಸಮರ್ಪಿಸಿ, ಅದರ ರಕ್ಷಣೆಯ ಭರವೂ ನಿನ್ನದೇಎಂಬುದು ಅರ್ಥವಾದಾಗ,ಸ್ವತಂತ್ರ ಪ್ರಣವತ್ತಿಲ್ - ಮೂಲಮನ್ತ್ರದ ಪ್ರಣವವಲ್ಲದೆ "ಓ ಮಿತ್ಯಾತ್ಮಾನಂ ಯುಂಜೀತ" ಎಂಬಲ್ಲಿ ಹೇಳಿರುವ ಸ್ವತಂತ್ರ ಪ್ರಣವದಲ್ಲಿ, ಕೆಂಡ - ವ್ಯಕ್ತಪಡುವ, ಚತುರ್ಥಿ ಇರ್ಪಡಿಯೇ - "ಬ್ರಹ್ಮಣೇ ತ್ವಾ ಮಹಸ ಓಮಿತ್ಯಾತ್ಮಾನಂ ಯುಂಜೀತ" ಎಂಬುದು ನ್ಯಾಸಮನ್ತ್ರವಾಗಿ, ಬ್ರಹ್ಮಣೇ ಮಹಸೇ ಎಂದು ವ್ಯಕ್ತವಾಗಿರುವ ಚತುರ್ಥಿಯಲ್ಲಿ ತೋರಿಬರುವಹಾಗೆ, ಇಚ್ಚತುರ್ಥಿಕ್ಕು-ಈ ಅಕಾರದ ಲುಪ್ತ ಚತುರ್ಥಿಗೂ ಅರ್ಥಮಾಗಕ್ಕಡವದು - ಅರ್ಥವಾಗಿರತಕ್ಕದ್ದು. ಇದರ ತಾತ್ಪರ್ಯವೇನೆಂದರೆ ಈ ಮೇಲಿನ ತೈತ್ತರೀಯ ನಾರಾಯಣೀಯ ಮನ್ತ್ರದಲ್ಲಿ "ಮಹತ್ತಾದ ಪರಬ್ರಹ್ಮನಾದ ನಿನಗಾಗಿ ಓಂ ಎಂದು ಸ್ವತಂತ್ರ ಪ್ರಣವೋಚ್ಚಾರವನ್ನು ಮಾಡಿ ನಿನ್ನ ಸ್ವತ್ತಾದ ಈ ಆತ್ಮಾವನ್ನು ಸಮರ್ಪಿಸಿ ಭರಸಮರ್ಪಣೆಯನ್ನು ಮಾಡತಕ್ಕದ್ದೆಂದು ವಿಧಿಸಿರುವದರಿಂದ, ಇಲ್ಲಿ ಭರಸಮರ್ಪಣೆಯೂ ಚತುರ್ಥ್ಯರ್ಥವೂವ್ಯಕ್ತವು. ಯಾವಾಗ ಓಂ ಎಂದು ಆತ್ಮಾನಂ ಯುಂಜೀತ ಎಂದು ಮನ್ತ್ರವು ವಿಧಿಸಿತೋ, ಆಗ ಓಂ ಎಂಬುದರಅರ್ಥವೂ ಆತ್ಮಾನಂ ಯುಂಜೀತ ಎಂಬುದರ ಅರ್ಥವನ್ನೇ ಪ್ರತಿಪಾದಿಸುತ್ತದೆಂದು ಹೇಳಲು ಏನೊಂದೂ ಅಭ್ಯನ್ತರವಿಲ್ಲವೆಂಬ ಭಾವವು; ಮೂಲಮನ್ತ್ರದ ಪ್ರಣವವೂ ಇಲ್ಲಿರುವ ಪ್ರಣವವೂ, ಸಮಾನಾರ್ಥಕಗಳೇ. ಆದುದರಿಂದ ಸ್ವತಂತ್ರ ಪ್ರಣವವಿರುವ ವಾಕ್ಯದಲ್ಲಿ ವ್ಯಕ್ತವಾಗಿ ಪರಮಾತ್ಮನಿಗೆ ಎಂದು ತಾದರ್ಥ್ಯವನ್ನು ತೋರಿಸುವ ಸಂಪ್ರದಾನ ಚತುರ್ಥಿಯು ಇರುವದರಿಂದ ಈ ಮೂಲಮನ್ತ್ರದ ಓಂ ಎಂಬುದರ ಅರ್ಥವು ಅದೇ ಆಗಿ, ಅಕಾರದಲ್ಲಿ ತಾದರ್ಥ್ಯವನ್ನು ಪ್ರಕಾಶಿಸುವ ಲುಪ್ತ ಚತುರ್ಥಿಯು ಇರತಕ್ಕದ್ದೆಂಬುದು ವ್ಯಕ್ತವೆಂಬ ಭಾವವು. ಪ್ರಣವ ಶಬ್ದಾರ್ಥವನ್ನು ಶ್ರುತಿಯೇ ವ್ಯಕ್ತಪಡಿಸಿತು. ಆದುದರಿಂದ ಆ ಅರ್ಥವು ನಮಗೆ ಪರಮ ಗ್ರಾಹ್ಯವೇ ವಿನಾ ಸ್ವರೂಪೈಕ್ಯಾರ್ಥವೆಂದಿಗೂ ಅಲ್ಲವೆಂಬ ಭಾವವು.

ಆದುದರಿಂದ ಈ ಮೂಲತಂತ್ರದ ಪ್ರಣವದಿಂದ ಗ್ರಹಿಸತಕ್ಕ ಮುಖ್ಯ ಭಾವವು ಪರಮಾತ್ಮನೇ ತನಗೆ ಶೇಷಿಯು, ತಾನು ಆತನಿಗೇ ಶೇಷನು ಎಂಬ ಶೇಷಿಶೇಷಭಾವವೆಂದು ಹೇಳುತ್ತಾರೆ. ಇಙ್ಙುಪ್ರಣವಮ್ - ಈ ಮೂಲಮನ್ತ್ರದಲ್ಲಿರುವ ಪ್ರಣವವು, ಪರಶೇಷತ್ವೈಕರಸ ಸ್ವರೂಪಪ್ರತಿಪಾದನ ಪರಮಾನ -

**ಆತ್ಮಪರಮಾತ್ಮಾಕ್ಕಳುಡೈಯ ಶೇಷಶೇಷಿ ಭಾವಮ್ ಪ್ರಕಾಶ್ಯಮಾಗೈಯಾಲ್ ನಿರುಪಾಧಿಕ ಸರ್ವಶೇಷಿಯಾನ ಈಶ್ವರನೈಪ್ಪತ್ತ ತಾ಼ ನಿರುಪಾಧಿಕ ಶೇಷಮಾನಪಡಿ ಅನುಸಂಧೇಯಮ್.**

---

ಪರಮಾತ್ಮನಿಗೆ ನಿರುಪಾಧಿಕ ಶೇಷಭೂತನಾಗಿರುವದೇ ತನಗೆ ಸ್ವರೂಪವೆಂದು ಪ್ರಕಾಶಪಡಿಸುವ ಅರ್ಥವಾದ, **ಪೊರುಳಿಲ್** - ಅಭಿಪ್ರಾಯದಲ್ಲಿ, **ಇಚ್ಚತುರ್ಥೀ** ಈ ಅಕಾರದ ಲುಪ್ತಚತುರ್ಥಿಯು, **ತಾದರ್ಥ್ಯತ್ತೈ** - ನಿರುಪಾಧಿಕ ದಾಸನಾದ ತಾನು ಆ ಪರಮಾತ್ಮನಿಗಾಗಿಯೇ ಎಂದರೆ ಆತನಿಗೆ ಕೈಂಕರ್ಯಮಾಡುವ ಸುಕೃತಕ್ಕಾಗಿಯೇ ಎಂದು, **ವಿವಕ್ಷಿಕ್ಕೈಯಾಲೇ**-ಹೇಳುವ ಭಾವವಿರುವದರಿಂದ, **ಆತ್ಮಪರಮಾತ್ಮಾಕ್ಕಳುಡೈಯ ಶೇಷಶೇಷಿಭಾವಮ್** - ಜೀವಾತ್ಮರುಗಳಿಗೂ ಪರಮಾತ್ಮನಿಗೂ ಇರುವ ಶೇಷಶೇಷಿ ಸಂಬಂಧಾಭಿಪ್ರಾಯವು, **ಪ್ರಕಾಶ್ಯಮಾಗೈಯಾಲೇ** - ಚನ್ನಾಗಿ ವ್ಯಕ್ತವಾಗುವದರಿಂದ, **ನಿರುಪಾಧಿಕ ಸರ್ವಶೇಷಿಯಾದ** ಸರ್ವೇಶ್ವರನನ್ನು, **ಪತ್ತ** - ಕುರಿತು, **ತಾನು**, **ನಿರುಪಾಧಿಕ ಶೇಷಮಾನ ಪಡಿ** - ನಿರುಪಾಧಿಕನಾಗಿರುವ "**ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ**" ಎಂದು ಹೇಳಿರುವಹಾಗೆ ದಾಸನು ಎಂದು, **ಅನುಸಂಧೇಯಮ್** - ಅನುಸಂಧಾನ ಮಾಡತಕ್ಕದ್ದು. "**ಅಕಾರಾರ್ಥಾಯೈವ ಸ್ವಮಹಂ**" ತಾನು ಪರಮಾತ್ಮನಿಗೇನೇ ಸಲ್ಲತಕ್ಕ ಸ್ವತ್ತು; ತಾನು ಅವನಿಗೇನೇ ದಾಸನು ಎಂಬ ಅನುಸಂಧಾನವಿರತಕ್ಕದ್ದೆಂಬ ತಾತ್ಪರ್ಯವು. ಈ ಲೋಕದಲ್ಲಿ ಕಾಣುವ ಸ್ವಾಮಿ ಭೃತ್ಯಸಂಬಂಧವು ಸೋಪಾಧಿಕವಾದುದು. ಹಾಗಿಲ್ಲದೇ ಈಸಂಬಂಧವು ಅನಾದಿಯಾಗಿಬಂದುಯಾವಾಗಲೂ ಇರತಕ್ಕದ್ದಾದುದರಿಂದ ನಿರುಪಾಧಿಕ ಶೇಷಿಶೇಷತ್ವವೆಂಬ ಪ್ರಯೋಗಗಳು. "**ಪತಿಂ ವಿಶ್ವಸ್ಯ**" ಎಂದು ಶ್ರುತಿಯೇ ಹೇಳುವಾಗ ನಿರುಪಾಧಿಕ ಶೇಷಿತ್ವವು ವ್ಯಕ್ತವು. "**ನಾನ್ಯೋಹೇತುರ್ವಿದ್ಯತೇ ಈಶನಾಯ**" ಎಂಬ ಪ್ರಮಾಣವು ನಿರುಪಾಧಿಕ ಶೇಷಿತ್ವವನ್ನು ಪ್ರಕಟಿಸುತ್ತದೆ. ಮೇಲೆ ಉದಾಹರಿಸಿರುವ "**ದಾಸಭೂತಾಸ್ಸ್ವತಸ್ಸರ್ವೇ**" ಎಂಬುದು ಜೀವಾತ್ಮರ ನಿರುಪಾಧಿಕ ಶೇಷತ್ವವನ್ನು ಬೋಧಿಸುತ್ತದೆ. ಇದರಿಂದ ಬದ್ಧ ದೆಶೆಯಲ್ಲಿ ತೋರಿಬರುವ ಅನ್ಯಶೇಷತ್ವವೆಲ್ಲಾ ಸೋಪಾಧಿಕವು ಎಂದು ಹೇಳಿದಂತಾಯಿತು. ಆಗಲಿ, ಹೀಗೆ ಶೇಷ ಶೇಷಿಭಾವ ಸಂಬಂಧವು ಷಷ್ಠೀ ವಿಭಕ್ತಿಯಿಂದ ಹೇಳತಕ್ಕದ್ದಲ್ಲವೇ? **ಸಂಬಂಧೇ ಷಷ್ಠೀ ಸ್ಯಾತ್** ಎಂದಲ್ಲವೇ ಹೇಳಿರುವದು? ಎಂದರೆ ಆ ಸಂಬಂಧದಲ್ಲಿ ತಾದರ್ಥ್ಯವು ಮುಖ್ಯವಾಗಿ ವಿವಕ್ಷಿತವಾದುದರಿಂದ ಚತುರ್ಥಿಯೇ ಉಚಿತವೆಂದು ಹೇಳಿ, ಅದೇ ಇಲ್ಲಿ ಮುಖ್ಯವಾಗಿ ಅನುಸಂಧೇಯವೆಂದು ಹೇಳಿದರು.

**ಪ್ರಣವೇ ಶೇಷಿಶೇಷಯೋರ್ಮಧ್ಯೇ ಸಂಬಂಧಾಭಿಧಾನಂ ಕಥಮಿತ್ಯತ ಆಹ.**

**"ತ್ವಂ ಮೇ" ಎನ್ರು ಸ್ವಾಮಿಯಾನ ಸರ್ವೇಶ್ವರರ್ ತುಡರ್‌ನ್ದು ಪಿಡಿಕ್ಕಾ ಲುಮ್, "ಅಹಂ ಮೇ" ಎನ್ರು ತಿಮಿರಪ್ಪಣ್ಣು ಮಹಙ್ಕಾರ ವಿಶೇಷತ್ತಾಲೇ ಅಸತ್ಕಲ್ಪನಾನ ವಿಜ್ಞೀವಾತ್ಮಾವೈ ಶೇಷತ್ವಾನುಸಂಧಾನಮ್ ಉಜ್ಜೀವಿಪ್ಪಿ ಕ್ಕಿರದಾಗೈಯಾಲೇ ಇದಿನ್ ಪ್ರಾಧಾನ್ಯಮ್ ತೋತ್ತುಗೈಕ್ಕಾಗ ಧರ್ಮಿಕ್ಕಿ ಮುನ್ನೇ ಶೇಷಿಯೋಡೆ ಸಂಬಂಧತ್ತೈ ಚೊಲ್ಲಿತ್ತು.**

---

**ಅಕಾರ ಮಕಾರಗಳನ್ನು ಪ್ರಣವದಲ್ಲಿ ಒಟ್ಟಿಗೆ ಹೇಳದೆ, ಮಧ್ಯೆ ಈ ಸಂಬಂಧವನ್ನು ಉಕಾರದಿಂದ ಹೇಳಲು ಕಾರಣವೇನು.**

ಪ್ರಣವದಲ್ಲಿ ಅಕಾರನಿಗಾಗಿ ಮಕಾರನು ಎಂಬುದು ತಾತ್ಪರ್ಯವಾದ ನಂತರ ಇವೆರಡು ಧರ್ಮಿಗಳು ಒಟ್ಟಿಗೇನೇ ಇರತಕ್ಕದ್ದು; ಅಕಾರವಾದ ನಂತರ ಮಕಾರ ವಿರಬೇಕಾಗಿತ್ತು. ಹಾಗಲ್ಲದೆ ಅವರುಗಳಿಗಿರುವ ಶೇಷಿ ಶೇಷಭಾವವನ್ನು ಉಪಪಾದಿಸುವ **ಉ** ಕಾರವು ಮಧ್ಯೆ ಇರಲು ಕಾರಣವೇನು? ಎಂದರೆ ಉತ್ತರವನ್ನು ಹೇಳುತ್ತಾರೆ—**"ತ್ವಂ ಮೇ"** - ನೀನು ನನ್ನವನು ಎಂದರೆ ನೀನು ನನ್ನ ಸ್ವತ್ತಾಗಿ ನನಗೇನೇ ಶೇಷಭೂತನು, **ಎನ್ರು** - ಎಂಬದಾಗಿ, **ಸ್ವಾಮಿಯಾನ ಸರ್ವೇಶ್ವರನ್** - ಸಮಸ್ತ ಭೂತಗಳಿಗೂ ಸ್ವಾಮಿಯಾಗಿ ಸಮಸ್ತಕ್ಕೂ ನಿಯಾಮಕನಾಗಿರುವ ಸರ್ವೇಶ್ವರನು, **ತುಡರ್‌ನ್ದು ಪಿಡಿಕ್ಕಾಲುಮ್** - ಎಲ್ಲಿ ಕೆಟ್ಟುಹೋಗುತ್ತಾನೋ ಎಂಬ ಭಯದಿಂದ ಕೈಹಿಡಿದು ಸ್ವೀಕರಿಸಿದರೂ ಕೂಡ, **"ಅಹಂ ಮೇ"** ನಾನು ನನ್ನವನೇ ಎಂದರೆ ನಾನು ಯಾರಿಗೂ ಶೇಷಭೂತನಲ್ಲವು, ಸ್ವತಂತ್ರನು **ಎನ್ರು, ತಿಮಿರಪ್ಪಣ್ಣುಂ**- ನಾನು ನಿನ್ನವಲ್ಲವು ಎಂದು ಹೇಳಿಕೆಯನ್ನು ತಳ್ಳಿಬಿಟ್ಟು ಪರಮಾತ್ಮನಿಂದ ವಿಶ್ಲೇಷೆಯನ್ನುಂಟುಮಾಡುವ, **ಅಹಂಕಾರತ್ತಾಲೇ** - ಅಹಂಕಾರದಿಂದ, **ಅಸತ್ಕಲ್ಪನಾನವಿಜ್ಜೀವಾತ್ಮಾವೈ**–ಸ್ವರೂಪಜ್ಞಾನಾದಿಗಳಿಲ್ಲವಾದುದರಿಂದ, ಪ್ರಕೃತ್ಯಾತ್ಮಭ್ರಾನ್ತಿ ಸ್ವತಂತ್ರಾತ್ಮಭ್ರಾನ್ತಿಗಳಿಂದ ಪರಮಾತ್ಮಾನುಗ್ರಹವಿಲ್ಲದೆ ನಷ್ಟನಾಗಿರುವ ಈ ಜೀವಾತ್ಮನನ್ನು, **ಈ ಶೇಷತ್ವಾನುಸಂಧಾನಮ್**-ತಾನು ಪರಮಾತ್ಮನಿಗೆ ಶೇಷಭೂತನೆಂಬ ಅನುಸಂಧಾನವು, **ಉಜ್ಜೀವಿಪ್ಪಿಕ್ಕಿರದಾಗೈಯಾಲೇ** - ಭಗವದನುಗ್ರಹವನ್ನುಂಟುಮಾಡಿ ಆತ್ಮಸಮರ್ಪಣೆಯಲ್ಲಿ ಬುದ್ಧಿಯನ್ನುಂಟುಮಾಡಿ ಹೀಗೆ ಉಜ್ಜೀವಿಸುವಹಾಗೆ ಮಾಡುತ್ತಾದುದರಿಂದ, **ಇದಿನ್ ಪ್ರಾಧಾನ್ಯಂ** – ತಾನು ಪರಮಾತ್ಮನಿಗೆ ನಿರುಪಾಧಿಕ ಶೇಷಭೂತನೆಂಬ ಈ ಸಂಬಂಧಜ್ಞಾನದ ಪ್ರಾಧಾನ್ಯವು, **ತೋತ್ತುಗೈಕ್ಕಾಗ** - ಚನ್ನಾಗಿ ವ್ಯಕ್ತವಾಗುವದಕ್ಕಾಗಿ, **ಧರ್ಮಿಕ್ಕಿ ಮುನ್ನೇ** - ಶೇಷಭೂತನಾಗಿ ಮಕಾರ ವಾಚ್ಯನಾದ ಧರ್ಮಿಯಾದ ಜೀವಾತ್ಮನಿಗೆ ಮುಂದೆ, **ಶೇಷಿಯೋಡೆ ಸಂಬಂಧತ್ತೈ**-

ತದೇನ ಪ್ರಾಧಾನ್ಯಂ ಕಾರಿಕಯಾ ಸಂಗೃಹ್ಣಾತಿ.

ನಿಶ್ಚಿತೇ ಪರಶೇಷತ್ವೇ ಶೇಷಂ ಸಂಪರಿಪೂರ್ಯತೇ ।
ಅನಿಶ್ಚಿತೇ ಪುನ ಸ್ತಸ್ಮಿನ್ನನ್ಯತ್ಸರ್ವ ಮಸತ್ಸಮಮ್ ॥೬॥

ಉಕಾರದಿಂದ ಹೇಳಲ್ಪಡುವ ಅಕಾರ ವಾಚ್ಯನಾದ ವಿಷ್ಣುವಿಗೇನೇ ತಾನು ನಿರು ಪಾಧಿಕ ಶೇಷಭೂತನೆಂದು ತೋರಿಸುವ ಅವಧಾರಣಾರ್ಥವನ್ನು, ಚೊಲ್ಲಿತು – ಉಕಾರದಿಂದ ಹೇಳಲ್ಪಟ್ಟಿತು. "ತ್ವಂ ಮೇಹಂಮೇ" ಎಂಬುದು ಶ್ರೀಪರಾಶರಭಟ್ಟರ ಪರಮಾತ್ಮ ಜೀವಾತ್ಮ ಸಂವಾದ ರೂಪ ಶ್ಲೋಕವು. ಇದರ ಪೂರಾ ಶ್ಲೋಕಕ್ಕೂ ಅರ್ಥಕ್ಕೂ ಅರ್ಥ ಪಂಚಕಾಧಿಕಾರದ ೪೨೧-೩ ನೆಯ ಪುಟವನ್ನು ಪರಾಂಬರಿಸಿ.
ಆ ಪ್ರಾಧಾನ್ಯವನ್ನೇ ಒಂದು ಕಾರಿಕೆಯಮೂಲಕ ಸಙ್ಗ್ರಹಿಸಿ ಹೇಳುತ್ತಾರೆ.

ಹಿಂದೆ ಉಪಪಾದಿಸಿದ ರೀತಿಯಲ್ಲಿ ಪರಮಾತ್ಮನು ನಿರುಪಾಧಿಕ ಶೇಷಿಯಾಗಿ, ಜೀವನು ನಿರುಪಾಧಿಕ ಶೇಷನೆಂಬುದು ಅಕಾರದ ಲುಪ್ತಚತುರ್ಥಿಯಿಂದ ವ್ಯಕ್ತ ವಾದನಂತರ, ಅಕಾರನಾದ ಶೇಷಿಯೊಂದಿಗೆ ಮಕಾರನಾದ ಜೀವನು ಹೇಳಲ್ಪಡ ತಕ್ಕದ್ದು ನ್ಯಾಯವು; ಹಾಗಲ್ಲದೆ ಮಧ್ಯೆ ಉಕಾರವಿದ್ದು ಅನಂತರ ಮಕಾರವಿರ ಬಹುದೋ ಎಂದರೆ, ಉಕಾರವು ಈ ಮಕಾರವಾಚ್ಯನ ಶೇಷತ್ವ ಸಂಬಂಧವನ್ನು ಪ್ರಕಟಿಸಿ, ಆ ಶೇಷತ್ವಜ್ಞಾನವೇ ತನಗೆ ಪರಮೋತ್ತಾರಕವಾಗಿ, ಅಹಂಕಾರವೂ ಸ್ವತಂತ್ರಾತ್ಮಭ್ರಮೆಯೂ ತೊಲಗಿ, ಹಾಗೆಯೇ ಜೀವೇಶ್ವೈಕ್ಯಭ್ರಮವೂ ದೂರೀಕೃತ ವಾಗಿ, ಪರಮಪುರುಷಾನುಗ್ರಹ ಸಂಪಾದಕವಾಗಿ, ದಾಸಭೂತನಿಗೆ ಪರಮಸುಕೃತ ವಾದ ಕಿಂಕರತ್ವಾಧಿರಾಜ್ಯವನ್ನು ಸಂಪಾದಿಸಿಕೊಡುವ ಉಪಾಯಾನುಷ್ಠಾನಕ್ಕೆ ಹೇತುವಾಗುವದರಿಂದ, ಈ ಸಂಬಂಧವನ್ನು ಧರ್ಮಿಗೆ ಮುಂದೆಯೇ ಹೇಳುವದು ಆದರಪ್ರಾಧಾನ್ಯವನ್ನು ವ್ಯಕ್ತಪಡಿಸುನವಕ್ಕಾಗಿ ಎಂದು ಹೇಳುತ್ತಾರೆ— ಪರಶೇಷತ್ವೇ- ತಾನು ಪರಮಾತ್ಮನಿಗೆ ಶೇಷಭೂತನೆಂಬ ಭಾವವು, ನಿಶ್ಚಿತೇ ಸತಿ - ನಿಶ್ಚಯಜ್ಞಾನ ಉಂಟಾಗಲಾಗಿ, ಶೇಷಂ - ಮಿಕ್ಕಬೇಕಾದುದೆಲ್ಲಾ ಎಂದರೆ ತನ್ನ ಸ್ವರೂಪಕ್ಕೆ ಅನುರೂಪವಾದ ಪುರುಷಾರ್ಥದಲ್ಲಿ ಅಭಿರುಚಿಯೂ, ಅಂತಹ ಲಕ್ಷಣವುಳ್ಳ ಅಧಿ ಕಾರವೂ, ಅದಕ್ಕೆ ಅನುರೂಪವಾದ ಪ್ರಪದನ ರೂಪೋಪಾಯಾನುಷ್ಠಾನವೂ, ಸಂಪರಿಪೂರ್ಯತೇ - ಚನ್ನಾಗಿ ಕ್ರಮೇಣ ಪೂರ್ಣವಾಗುತ್ತವೆ; ಶೇಷತ್ವಜ್ಞಾನ ಉಂಟಾದರೆ ಸರಿ, ಮಿಕ್ಕವೆಲ್ಲಾ ಎಂದರೆ ಇನ್ನೂ ಬೇಕಾದ ಜ್ಞಾನವೆಲ್ಲಾ ತನ್ನ ಆತ್ಮಯಾಥಾತ್ಮ್ಯಜ್ಞಾನ, ಪರಮಾತ್ಮ ಯಾಥಾತ್ಮ್ಯಜ್ಞಾನ, ತನ್ನ ಈಗಿನದುಸ್ಥಿತಿ ಯಜ್ಞಾನ, ಉಪಾಯಾನುಷ್ಠಾನಕ್ಕೆ ಬೇಕಾದ ಜ್ಞಾನ, ಇವೆಲ್ಲವೂ, ತಾನಾಗಿಯೇ ಕ್ರಮೇಣ ಉಂಟಾಗುತ್ತವೆ ಎಂಬ ಭಾವವು. ಹಾಗಲ್ಲದೆ, ತಸ್ಮಿನ್ - ಆ ಪರ

## ಭಗವತಃ ಸರ್ವಶೇಷಿತ್ವಮಿವ ಲಕ್ಷ್ಮ್ಯಾಃ ಅಪಿ ಸರ್ವಶೇಷಿತ್ವ ಮಸ್ತ್ಯೇವ.

**ಇಪ್ಪಡಿ ಯೀಶ್ವರ್ರ ಸರ್ವಶೇಷಿಯಾನ್ಪೋದು (೧) "ಅಸ್ಯಾ ಮಮಚ ಶೇಷಂ ಹಿ ವಿಭೂತಿರುಭಯಾತ್ಮಿಕಾ।ಇತಿ ಶ್ರುತಿ ಶಿರಸ್ಸಿದ್ಧಂ ಮಚ್ಛಾಸ್ತ್ರೇಷ್ವಪಿ ಮಾನ (ನಾರ)ದ"॥ಎನ್ರುಮ್, (೨) "ಉಭಯಾಧಿಷ್ಠಾನಂ ಚೈಕಶೇಷಿತ್ವಂ" ಎನ್ರುಮ್ ಶೊಲ್ಲುಗಿರಪಡಿಯೇ ಸಪತ್ನೀಕನಾಯಿರುಕ್ಕುಮ್.**

---

ಶೇಷತ್ವ ಜ್ಞಾನವು, **ಅನಿಶ್ಚಿತೇಪುನಃ** - ನಿಶ್ಚಯಿಸಲ್ಪಡದೇ ಇದ್ದರಾದರೋ, **ಅನ್ಯತ್ಸರ್ವಂ** - ಮಿಕ್ಕ ಎಲ್ಲವೂ, **ಅಸತ್ಸಮಮ್** – ಸ್ವರೂಪ, ಉಪಾಯ, ಪುರುಷಾರ್ಥವೇ ಮೊದಲಾದವೆಲ್ಲಾ ಅಸತ್ಪ್ರಾಯವಾಗುತ್ತವೆ; ಆದುದರಿಂದ ಮಕಾರ ಧರ್ಮಿಗಿಂತಲೂ ಮುಂಚಿತವಾಗಿ, ತಾನು ಪರಮಾತ್ಮನಿಗೆ ಶೇಷಭೂತನೆಂಬುದು ಹೇಳಲ್ಪಟ್ಟಿತೆಂಬ ಭಾವವು.

### ಭಗವಂತನು ಹೇಗೆ ಎಲ್ಲಕ್ಕೂ ಶೇಷಿಯೋ ಹಾಗೆಯೇ ಲಕ್ಷ್ಮಿಯೂ ಸಹ ಶೇಷಿಯು.

**ಇಪ್ಪಡಿ** - ಈಗ ನಾವು ಉಪಪಾದಿಸಿದ ರೀತಿಯಲ್ಲಿ, **ಈಶ್ವರ್ರ** - ಸರ್ವೇಶ್ವರನು, **ಸರ್ವಶೇಷಿಯಾನ್ಪೋದು** - ಲೀಲಾ ವಿಭೂತಿ ನಿತ್ಯ ವಿಭೂತಿ ಎರಡಕ್ಕೂ ಶೇಷಿಯಾಗಿರುವಾಗ ( ) "**ಉಭಯಾತ್ಮಿಕಾ**-ಚಿದಚಿದಾತ್ಮಕವಾಗಿ, ಅಥವಾ ನಿತ್ಯ ವಿಭೂತಿ ಲೀಲಾವಿಭೂತಿಯಾಗಿ, ಎರಡಾಗಿರುವ, **ವಿಭೂತಿಃ**-ವಿಭೂತಿ ವರ್ಗವೆಲ್ಲಾ, **ಅಸ್ಯಾಃ**-ನನ್ನ ಪತ್ನಿಯಾದ ಲಕ್ಷ್ಮಿಗೂ ನನಗೂ ಸಹ, **ಶೇಷಂ ಹಿ**-ಶೇಷಭೂತವಾದುದಷ್ಟೇ, **ಇತಿ**-ಎಂಬುದು, **ಶ್ರುತಿಶಿರಸ್ಸಿದ್ಧಮ್** - ತೈತ್ತರೀಯ ಕಠವೊದಲಾದ ಉಪನಿಷತ್ತುಗಳಲ್ಲೂ ಋಗ್ವೇದಾದಿ ವೇದಭಾಗಗಳಲ್ಲೂ ವಿಶೇಷತೈತ್ತರೀಯದಲ್ಲೂ, ಇವುಗಳ ಉಪಬ್ರಹ್ಮಣವಾದ ವಿಷ್ಣು ಪುರಾಣ ಪಾದ್ಮಪುರಾಣಾದಿಗಳಲ್ಲೂ ಸ್ಥಾಪಿತವಾದವು, ಇಷ್ಟೇ ಅಲ್ಲದೆ, ಓ ಮಾನದ ಅಥವಾ **ಓ ನಾರದ**-ನಾರದರೇ, **ಮಚ್ಛಾಸ್ತ್ರೇಷು** - ನನ್ನ ಶಾಸ್ತ್ರವಾಗಿ ಭಗವಚ್ಛಾಸ್ತ್ರವೆಂದು ಹೇಳಿಸಿಕೊಳ್ಳುವವುಗಳಲ್ಲೂ ಸಿದ್ಧವು" **ಎನ್ರುಮ್** - ಎಂದೂ (೨) **ಏಕಶೇಷಿತ್ವಂ** – ಎಲ್ಲಾ ವಿಭೂತಿಗೂ ಶೇಷಿಯಾಗಿರುವದು ಒಂದೇಯಾದರೂ **ಉಭಯಾಧಿಷ್ಠಾನಂಚ** - ಅದು ನಾರಾಯಣನನ್ನೂ ಲಕ್ಷ್ಮಿಯನ್ನೂ ಸಹ ಹೀಗೆ ಇಬ್ಬರನ್ನೂ ಆಶ್ರಯವಾಗಿ ಉಳ್ಳದು" **ಎನ್ರುಮ್** - ಎಂದೂ, **ಶೊಲ್ಲುಗಿರ ಪಡಿಯೇ** – ಹೀಗೆ ಹೇಳಿರುವಹಾಗೆ, **ಸಪತ್ನೀಕನಾಯಿರುಕ್ಕುಮ್** - ಪತ್ನಿಯೊಂದಿಗೆ ಶೇಷಿ

---

(೧) ವಿಷ್ವಕ್ಸೇನ ಸಂಹಿತೆ. (೨) ಶ್ರೀಸಾತ್ವತಾಭಿಪ್ರಾಯವು. ಸೋಮೇಶಯಾಂಡಾರ್, ಷಡರ್ಥ ಸಙ್ಗ್ರಹ.

ಯಾಗಿರುವನೆಂಬ ಭಾವವು. ಅಕಾರವಾಚ್ಯನಾದ ವಿಷ್ಣುವಿಗೇ ಎಲ್ಲವೂ ಶೇಷಭೂತವು ಎಂದಾಗಿ, ಅಕಾರದಿಂದ ಲಕ್ಷ್ಮೀ ವಿಶಿಷ್ಟನೆಂಬುದು ಯಾವಾಗ ಏರ್ಪಟ್ಟಿತೋ, ಆಗ ಎಲ್ಲವೂ ಲಕ್ಷ್ಮಿಗೂ ವಿಷ್ಣುವಿಗೂ ಶೇಷಭೂತವೆಂದಾಯಿತು ಎಂಬ ತಾತ್ಪರ್ಯವು. ಆದುದರಿಂದ ಈ ಆತ್ಮರೂಪಹವಿಸ್ಸಮರ್ಪಣೆಯು ಲಕ್ಷ್ಮೀ ನಾರಾಯಣರಿಬ್ಬರಿಗೂ ಉದ್ದೇಶ್ಯವಾದುದು ; ಏಕೆಂದರೆ ಇಬ್ಬರೂ ಉಪಾಯೋಪೇಯರು, ಪ್ರಾಪಕರೂ ಪ್ರಾಪ್ಯರೂ ಸಹ ಎಂಬ ಭಾವವು. **"ಪತ್ಯುರ್ನೋ ಯಜ್ಞ ಸಂಯೋಗೇ"** ಎಂಬ ಪ್ರಮಾಣರೀತ್ಯಾ ಬ್ರಾಹ್ಮಣನಿಗೆ ಪತ್ನಿಯಾಗಿದ್ದರೇನೇ ಯಜ್ಞಾಧಿಕಾರವು ಹೇಗೋ ಹಾಗೆಯೇ ಯಜ್ಞರೂಪವಾದ ಜಗತ್ಸೃಷ್ಟಿ, ಸ್ಥಿತಿ, ನಿಯಮನ, ಚೇತನರಕ್ಷಣಾದಿಗಳಲ್ಲಿ ವಿಷ್ಣುವಿಗೆ ಲಕ್ಷ್ಮಿಯೊಂದಿಗೇ ಅಧಿಕಾರವು; **"ಜಾಯಾಪತ್ಯೋರ್ನವಿಭಾಗೋ ವಿದ್ಯತೇ"** ಎಂಬ ಹೇಳಿಕೆಯ ಪ್ರಕಾರ ಶೇಷಿತ್ವದಲ್ಲಿ ಇಬ್ಬರಿಗೂ ಏನೊಂದೂ ವ್ಯತ್ಯಾಸವಿಲ್ಲದೆ ಇಬ್ಬರೂ ಸರ್ವವಿಭೂತಿಗೂ ಶೇಷಿಗಳೇ ಎಂದು ಭಾವಿಸತಕ್ಕದ್ದು. **"ಭರ್ತೃಭಾಗ್ಯಂತು ಭಾರ್ಯೈಕಾ ಪ್ರಾಪ್ನೋತಿ ಪುರುಷರ್ಷಭ"** (ಅಯೋಧ್ಯಾ ೨೭. ೪) ಎಂಬ ಮಹರ್ಷಿಯ ವಾಕ್ಯವು ಇಹಲೋಕಕ್ಕೆ ಮಾತ್ರವೇ ಅಲ್ಲದೆ, ಸರ್ವಲೋಕೇಶ್ವರೇಶ್ವರಿಗಳಲ್ಲೂ ಅನ್ವಯಿಸುತ್ತದೆ, "ಶ್ರುತಿಶಿರಸ್ಸಿದ್ಧಮ್" ಎಂದು ಹೇಳಲ್ಪಟ್ಟಿತಲ್ಲಾ, ಎಲ್ಲಿ ಎಂದರೆ "ಆನೀದವಾತಗ್ಂ ಸ್ವಧಯಾತದೇಕಮ್" (ಋಗ್ವೇದ) **"ಶ್ರದ್ಧಯಾ ದೇವೋ ದೇವತ್ವ ಮಶ್ನುತೇ"** ಎಂಬಲ್ಲೂ, ಮತ್ತು **"ಅಕಾರೇಣೋಚ್ಯತೇ ವಿಷ್ಣುಸ್ಸರ್ವಲೋಕೇಶ್ವರೋ ಹರಿಃ। ಉದ್ಧೃತಾ ವಿಷ್ಣುನಾಲಕ್ಷ್ಮೀ ರುಕಾರೇಣೋಚ್ಯತೇ ತಥಾ। ಮಕಾರಸ್ತು ತಯೋರ್ದಾಸ ಇತಿಪ್ರಣವ ಲಕ್ಷಣಮ್"** (ಕಠವಾಕ್ಯವು) ಅಕಾರದಿಂದ ಸರ್ವಲೋಕಕ್ಕೂ ಸ್ವಾಮಿಯಾಗಿ ನಿಯಾಮಕನಾಗಿಯೂ ಆಶ್ರಿತರ ಪಾಪಗಳ ಪರಿಹಾರಕನಾಗಿಯೂ, ಸರ್ವವ್ಯಾಪಿಯಾಗಿಯೂ ಇರುವ ವಿಷ್ಣುವು ಹೇಳಲ್ಪಡುತ್ತಾನೆ; ಹಾಗೆಯೇ ವಿಷ್ಣುವಿನಿಂದ ಧರಿಸಲ್ಪಟ್ಟ ಲಕ್ಷ್ಮಿಯೂ ಉಕಾರದಿಂದ ಹೇಳಲ್ಪಡುತ್ತಾಳೆ; ಮಕಾರ ಶಬ್ದವಾಚ್ಯನಾದರೋ, ಅವರಿಬ್ಬರಿಗೂ ದಾಸನಾಗಿರುವ ಜೀವಾತ್ಮನು ಎಂದು ಹೇಳಲ್ಪಡುತ್ತಾನೆ. ಇದೀಗ ಪ್ರಣವ ಸ್ವರೂಪದ ತಾತ್ಪರ್ಯವು. ಹೀಗೆ ಲಕ್ಷ್ಮೀ ವಿಶಿಷ್ಟತೆಯು ಅಕಾರದಲ್ಲಿ ಅರ್ಥವಾಗಿಯೂ, ಉಕಾರದಲ್ಲಿ ಶಾಬ್ದವಾಗಿಯೇ ತೋರಿಬರುತ್ತದೆಂದು ಸ್ಥಾಪಿತವು. ಆದುದರಿಂದ ಈ ಆತ್ಮ ಹವಿಸ್ಸಮರ್ಪಣೆಗೆ ಇಬ್ಬರೂ ಉದ್ದೇಶ್ಯರೆಂದು ಹೇಳಿದಂತಾಯಿತು. ಶ್ರೀ ಯತಿವರ್ಯರೂ ಸಹ, ಪ್ರಪದನವನ್ನೂ ಮೊದಲು ಲಕ್ಷ್ಮಿಯಲ್ಲೂ ಅನಂತರ ನಾರಾಯಣನಲ್ಲೂ ಅನುಷ್ಠಿಸಿರುವದರಿಂದ ಸತ್ಸಂಪ್ರದಾಯವೂ ಹಾಗೆ ಎಂದೇ ಒಪ್ಪತಕ್ಕದ್ದಾಗಿರುತ್ತದೆ. ಆದುದರಿಂದ ಉಪಾಯೋಪೇಯತ್ವವೆರಡರಲ್ಲೂ ಇಬ್ಬರಿಗೂ ಅನ್ವಯವೆಂಬುದು ಸ್ಥಾಪಿತವು.

ಅಗ್ನೀಷೋಮೀಯಾದಿಗಳಿಲ್ ಪೋಲೆ ಆತ್ಮಹವಿರುದ್ದೇಶ್ಯ ದೇವತಾತ್ವಮಿರುವರುಕ್ಕುಮ್ ಕೊಡನೆನ್ರು ತೋಱ್ಱುಗೈಕ್ಕಾಗ ಶೇಷಿಗಳಿರುವರಾಯಿರುಕ್ಕ ಶೇಷಿತ್ವಮೇಕಮೆನ್ನಿಗ್ಗಿರದು. ಮಧ್ಯಮಾಕ್ಷರತ್ತೈ ಲಕ್ಷ್ಮೀವಾಚಕಮಾಗ ಚೊಲ್ಲುಗಿರ ಕಠಶ್ರುತಿವಾಕ್ಯತ್ತೈ ಪರಾಮರ್ಶಿತ್ತಾಲ್, ಇರುವರ್ಕ್ಕೈಯುಮ್ ಪಱ್ಱ ವಿವ್ವಾತ್ಮಾಶ್ರೀಷಮೆನ್ರು ಮಿಡಂ ಶಾಬ್ದಮ್.

---

ಈ ಕಠಶ್ರುತಿಯ ಪ್ರಕಾರ ಮಕಾರವಾಚ್ಯ ಜೀವಾತ್ಮನು ವಿಷ್ಣುವಿಗೂ ಲಕ್ಷ್ಮಿಗೂ ಸಹ ದಾಸನಾದನಂತರ, ಉಭಯಾಧಿಷ್ಠಾನಂ ಎಂದು ಒಪ್ಪಿಕೊಂಡು ಏಕ ಶೇಷಿತ್ವಂ ಎಂಬ ಪ್ರಯೋಗವು ಹೇಗೆ ಸಮಂಜಸವೆಂದಾಕ್ಷೇಪಿಸಿದರೆ, ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಅಗ್ನೀ ಷೋಮೀಯಾದಿಗಳಿಲ್ ಪೋಲೆ-ಅಗ್ನೀಷೋಮೀಯವೇ ಮೊದಲಾದ ಯಾಗಗಳಲ್ಲಿ ಅಗ್ನಿಯಿಲ್ಲದೆ ಸೋಮನಿಗೂ ಸೋಮನಿಲ್ಲದೆ ಅಗ್ನಿಗೂ ಹೇಗೆ ಈ ಹವಿಸ್ಸಮರ್ಪಣೆ ಇಲ್ಲವೋ ಹಾಗೆಯೇ, ಆತ್ಮಾಹವಿರುದ್ದೇಶ್ಯ ದೇವತಾತ್ವಂ-ಆತ್ಮ ಹವಿಸ್ಸಿಗೆ ಉದ್ದಿಶ್ಯವಾಗಿರುವ ದೇವತೆಯಾಗಿರೋಣವು, ಇರುವರುಕ್ಕುಂ ಕೊಡನೆನ್ರು - ಲಕ್ಷ್ಮೀನಾರಾಯಣರಿಬ್ಬರಿಗೂ ಎಂದು, ತೋಱ್ಱುಗೈಕ್ಕಾಗ-ತೋರುವದಕ್ಕಾಗಿ, ಶೇಷಿಗಳು, ಇರುವರಾಯಿರಕ್ಕ-ಲಕ್ಷ್ಮೀನಾರಾಯಣರಿಬ್ಬರೂ ಆದರೂ, ಶೇಷಿತ್ವಮೇಕಮೆನ್ನಿಗ್ಗರದು - ಜೀವನಿಗೆ ಶೇಷಿಯಾಗಿರುವ ಭಾವವಾದರೋ ಇಬ್ಬರೂ ಸೇರಿಯೇ ಒಂದು ಎಂದು ಹೇಳುವದಾಗಿರುತ್ತದೆ. ಅಗ್ನೀಷೋಮ ಯಾಗದಲ್ಲಿ ಅಗ್ನಿಸೋಮರು ಇಬ್ಬರೂಸೇರಿ ಹವಿಸ್ಸಮರ್ಪಣೆಗೆ ಹೇಗೆ ಉದ್ದೇಶ್ಯರೋ ,ಹಾಗೆಯೇ ಆತ್ಮಹವಿಸ್ಸಮರ್ಪಣೆಗೆ ಲಕ್ಷ್ಮೀನಾರಾಯಣರಿಬ್ಬರೂ ಉದ್ದೇಶ್ಯವು. ಒಬ್ಬೊಬ್ಬರೇ ಉದ್ದೇಶ್ಯರಲ್ಲವು. ಆದುದರಿಂದ ಇಬ್ಬರೂ ಉದ್ದೇಶ್ಯರಾದರೂ ಇಬ್ಬರೂಸೇರಿ ಒಂದೇ ಪರತತ್ವವಾಗಿ ಏಕ ಶೇಷಿತ್ವವೇ ಎಂದು ಉಪದೇಶಿಸಿರುತ್ತಾರೆ. ಆದುದರಿಂದ ಉಭಯಾಧಿಷ್ಠಾನಂ ಚೈಕ ಶೇಷಿತ್ವಂ-ಎಂಬ ಪ್ರಯೋಗವು ಸಾತ್ವತಾಭಿಪ್ರಾಯವನ್ನನುಸರಿಸಿದುದಾಗಿ ಸಮಂಜಸವೆಂಬ ಭಾವವು. ಮಧ್ಯಮಾಕ್ಷರತ್ತೈ-ಪ್ರಣವದ ಮಧ್ಯಮಾಕ್ಷರವಾದ ಉಕಾರವನ್ನು ಲಕ್ಷ್ಮೀವಾಚಕಮಾಗಚೊಲ್ಲುಗಿರ - ಲಕ್ಷ್ಮೀವಾಚಕವೆಂದು ಹೇಳುವ, ಕಠಶ್ರುತಿವಾಕ್ಯತ್ತೈ - "ಉದ್ಧೃತಾ ವಿಷ್ಣುನಾಲಕ್ಷ್ಮೀ ರುಕಾರೇಣೋಚ್ಯತೇ ತಥಾ" ಎಂಬ ಕಠಶ್ರುತಿವಾಕ್ಯವನ್ನು, ಪರಾಮರ್ಶಿತ್ತಾಲ್-ಚನ್ನಾಗಿ ವಿಚಾರಮಾಡಿದರೆ, ಇರುವರ್ಕ್ಕೈಯುಮ್ ಪಱ್ಱವಿವ್ವಾತ್ಮಾ ಶೇಷನೆನ್ರುಮಿಡಮ್ - "ಮಕಾರಸ್ತು ತಯೋರ್ದಾಸ ಇತಿ ಪ್ರಣವಲಕ್ಷಣಮ್" ಎಂದು ಮುಂದಿನ ವಾಕ್ಯವಾದುದರಿಂದ, ಇಬ್ಬರನ್ನೂ ಕುರಿತು ಈ ಮಕಾರ ವಾಚ್ಯನಾದ ನಮ್ಮ ಆತ್ಮಾ ಶೇಷನು ಎಂಬ ಪ್ರಕರಣವು, ಶಾಬ್ದಮ್- ಶಾಬ್ದವಾಗಿಯೇ ಇರುತ್ತದೆ.

**ಶೇಷತ್ವಾರ್ಥ ವಿವರಣಮ್. ಪ್ರಣವಸ್ಯ ಉಕಾರಾರ್ಥಃ.**

**ಶೇಷತ್ವಮಾವದು? ತನಕ್ಕೊರು ಉಪಕಾರತ್ತೈ ಪ್ರಧಾನಮಾಗ ಪ್ಪತ್ತವನ್ರಿಕ್ಕೆ ಪರೋಪಕಾರಾರ್ಹಮಾಗೈ. ಇತ್ತೈ (೧) "ಪರಗತಾತಿಶಯಾಧಾನೇಚ್ಛಯೋಪಾದೇಯತ್ವಮೇವ ಯಸ್ಯಸ್ವರೂಪಂ ಸಶೇಷಃ, ಪರಶ್ಶೇಷೀ" ಎನ್ರು ಭಾಷ್ಯಕಾರರಳುಳಿಚ್ಚೆಯ್‌ದಾರ್.**

---

**ಶೇಷತ್ವ ಶಬ್ದಾರ್ಥದ ವಿವರಣವು. ಪ್ರಣವದ ಉಕಾರದ ಅರ್ಥವು.**

ಸ್ವರಕ್ಷಣೆಗಾಗಿ ಮಾಡುವ ಭರನ್ಯಾಸದಲ್ಲಿ ದಿವ್ಯದಂಪತಿಗಳಿಬ್ಬರಿಗೂ ತಾನು ಶೇಷಭೂತನೆಂಬ ಜ್ಞಾನವೇ ಪ್ರಾಧಾನ್ಯವೆಂದು ಹೇಳಲ್ಪಟ್ಟಿತು. ಸ್ವಪ್ರಯೋಜನಾಪೇಕ್ಷೆಯಿಂದ ಮಾಡಿದ ಆತ್ಮ ಸಮರ್ಪಣೆಯಲ್ಲಿ, ಶೇಷತ್ವಭಾವವೇ ಕೂಡುವದಿಲ್ಲವಲ್ಲಾ! ಏಕೆಂದರೆ ಶ್ರೀ ಭಾಷ್ಯಕಾರರ ಅಭಿಪ್ರಾಯದಪ್ರಕಾರ ಶೇಷತ್ವಕ್ಕೆ ಪರಗತಾತಿಶಯಾಧಾನೇಚ್ಛೆಯೇ ಮುಖ್ಯವಾಗಿರತಕ್ಕದ್ದು ಎಂದು ಹೇಳಿರುತ್ತಾರೆ, ಹಾಗಾದರೆ ಶೇಷತ್ವ ಶಬ್ದಕ್ಕೆ ಅರ್ಥವೇನೆಂದರೆ ಸರಿಯಾದ ಅಭಿಪ್ರಾಯವನ್ನು ತಿಳಿಸಿ, ಶ್ರೀ ಯತಿವರ್ಯರ ಅಭಿಪ್ರಾಯಕ್ಕೇನೂ ಇದು ವಿರೋಧವಿಲ್ಲವೆಂದು ತಿಳಿಸುತ್ತಾರೆ. **ಶೇಷತ್ವಮಾವದು?** - ಶೇಷತ್ವನೆಂದರೇನು ? **ತನಕ್ಕು** - ತನಗೆ, **ಉಪಕಾರತ್ತೈಪ್ರಧಾನಮಾಗಪ್ಪತ್ತವನ್ರಿಕ್ಕೇ** - ಉಪಕಾರವೇ ಮುಖ್ಯೋದ್ದೇಶ್ಯವಾಗಿ ಭಾವಿಸದೇ, **ಪರೋಪಕಾರಾರ್ಹಮಾಗೈ** - ಇತರನಿಗೆ ಉಪಕಾರಕ್ಕಾಗಿಯೇ ಯೋಗ್ಯವಾಗುವದು ; ಇಲ್ಲಿ ಪರ ಶಬ್ದವು ಪರಮಾತ್ಮನನ್ನು ಬೋಧಿಸಬಹುದಾದುದರಿಂದ ಪರಮಾತ್ಮನ ಪ್ರಯೋಜನಕ್ಕಾಗಿಯೇ ತಾನು ಅರ್ಹನೆಂದು ಭಾವಿಸೋಣವು. ತನ್ನ ಪ್ರಯೋಜನವನ್ನು ಮುಖ್ಯವೆಂದು ಭಾವಿಸದೆ ತಾನು ಪರಮಾತ್ಮನ ಪ್ರಯೋಜನಕ್ಕಾಗಿಯೇ ಇರುವನೆಂದು ಭಾವಿಸೋಣವೇ ಶೇಷತ್ವವೆಂಬ ಭಾವವು. **ಇತ್ತೈ** - ಇಂತಹ ಶೇಷತ್ವವನ್ನು (೧) **"ಪರಗತಾತಿಶಯಾಧಾನೇಚ್ಛಯಾ** - ಸರ್ವೇಶ್ವರನನ್ನು ಹೊಂದಿರುವ ಅತಿಶಯವನ್ನು ಪ್ರದರ್ಶಿಸುವ ಅಪೇಕ್ಷೆಯಿಂದ, **ಉಪಾದೇಯತ್ವಮೇವ ಯಸ್ಯ ಸ್ವರೂಪಂ, ಸಶೇಷಃ** - ಆತನನ್ನು ಸ್ವಾಮಿ ಎಂದು ಅಂಗೀಕರಿಸೋಣವೇ ಯಾವನಿಗೆ ಸ್ವರೂಪವೋ, ಅಂತಹ ಜೀವಾತ್ಮನೇ ಶೇಷನು, **ಪರಶ್ಶೇಷೀ** - ಅತಿಶಯ ಹೊಂದಿದ ಸ್ವಾಮಿಯಾದ ಸರ್ವೇಶ್ವರನೇ ಶೇಷಿಯು, **ಎನ್ರು** - ಎಂಬದಾಗಿ, **ಭಾಷ್ಯಕಾರರು, ಅರುಳಿಚ್ಚೆಯ್‌ದಾರ್** - ಅನುಗ್ರಹಿಸಿರುತ್ತಾರೆ. ತನ್ನ ರಕ್ಷಣಾರೂಪ ಪ್ರಾರ್ಥ

---

(೧) ವೇದಾರ್ಥ ಸಙ್ಗ್ರಹೇ.

ನೆಯು ಹಾಗಿರಲಿ, ಸರ್ವೇಶ್ವರನೇ ತನಗೆ ನಿರುಪಾಧಿಕ ಸ್ವಾಮಿಯು, **ತಾನು** ಆತನಿಗೇನೆ ಸಹಜನಾದ ನಿರುಪಾಧಿಕನಾದ ದಾಸನು,ಎಂಬ ಜ್ಞಾನವು ಯಾವಾಗಉಂಟಾಯಿತೋ, ಆಗ ತಾನಿರುವದು ಸ್ವಾಮಿಗೆ ತನ್ನ ಕೈಙ್ಕರ್ಯದ ಮೂಲಕ **ಅತಿಶಯ** ವನ್ನುಂಟುಮಾಡುವದೇ ತನಗೆ ಸ್ವರೂಪವು ಎಂಬುದು ಏರ್ಪಟ್ಟಿತು ಎಂಬಭಾವವು. ಶ್ರೀ ಭಾಷ್ಯಕಾರರು ಶೇಷಶಬ್ದಕ್ಕೆ ಕೊಟ್ಟಿರುವ ಲಕ್ಷಣದಿಂದ **ಪರಗತಾತಿಶಯಾಧಾನವೇ ಯಸ್ಯಸ್ವರೂಪಂ** ಎಂದು ಹೇಳಿರುವದರಿಂದ **ಈ** ಲೋಕದಲ್ಲಿರುವ ಸ್ವಾಮಿ ಭೃತ್ಯ ನ್ಯಾಯಗಳೆಲ್ಲಾ ಈ ಲಕ್ಷಣ ಉಳ್ಳದಲ್ಲವಾಗಿ ಸ್ವರೂಪತಃ ಬಂದವಲ್ಲವಾದುದರಿಂದ ಅವುಗಳೆಲ್ಲಾ ವ್ಯಾವರ್ತಿಸಲ್ಪಟ್ಟವೆಂದು ಭಾವಿಸತಕ್ಕದ್ದು. **ಈ** ಲಕ್ಷಣದಿಂದ ಮೋಕ್ಷಾರ್ಥಿಗೆ ಸ್ವಪ್ರಯೋಜನವಿದ್ದರೂ, ಅದು ಪ್ರಧಾನವಲ್ಲದುದಾಗಿ, ಸ್ವಾಮಿಗೆ ಅತಿಶಯವನ್ನುಂಟುಮಾಡುವದೇ ಈತನಿಗೆ ಪ್ರಧಾನ ಪ್ರಯೋಜನವಾದುದರಿಂದ, ಏನೊಂದೂ ವಿರೋಧವಿಲ್ಲವೆಂಬ ಭಾವವು. **ಶ್ರೀ ಭಾಷ್ಯಕಾ** ರರ ಅಭಿಪ್ರಾಯವು ಇದೇ ಎಂಬ **ತಾತ್ಪರ್ಯವು.** ಶೇಷಿಯನ್ನು ಹೊಂದಿದ **ಅತಿ** ಶಯವನ್ನು ಪ್ರಕಟಿಸುವದರಲ್ಲೇ ಅಭಿಲಾಷೆಯುಳ್ಳೋಣವೇ ಶೇಷತ್ವವೆಂಬ ಭಾವವು. ಲಕ್ಷ್ಮಣನು, ತಾನು ಶ್ರೀರಾಮನೊಂದಿಗೆ ಯಾವಾಗಲೂ ಇದ್ದುಕೊಂಡು ಆತನಿಗೆ ಅತಿಶಯವನ್ನುಂಟುಮಾಡುವ ಇಚ್ಛೆಯಿಂದ, **"ಅಹಂ ಸರ್ವಂ ಕರಿಷ್ಯಾಮಿ"** ಎಂದು ಹೇಳಿ, ಅದೇ ತನಗೆ ಸ್ವರೂಪವೆಂದು ಭಾವಿಸಿದನಾದುದರಿಂದ **"ಶೇಷ"** ಶಬ್ದಕ್ಕೆ ಪರಮೋತ್ಕೃಷ್ಟವಾದ ನಿದರ್ಶನವು ಎಂದು ಭಾವಿಸತಕ್ಕದ್ದು. ಕಮಲಪುಷ್ಪವನ್ನುಸೊಂಡಲಿನಲ್ಲಿತೆಗೆದು ಶ್ರೀಮನ್ನಾರಾಯಣನಿಗೆ ಅರ್ಪಿಸತಕ್ಕದ್ದೇ ಪ್ರಾಧಾನ್ಯವಾಗಿ ಗಜೇಂದ್ರನು ಭಾವಿಸಿದನು, ನಕ್ರಬಾಧೆಯ ನಿವೃತ್ತಿಯು ಆತನಿಗೆ ಅಷ್ಟುಮುಖ್ಯವಲ್ಲವು. ಆದುದರಿಂದ ಗಜೇಂದ್ರನೂ ಸಹ **ಶೇಷ**ನೆಂದು ಭಾವಿಸಲ್ಪಟ್ಟನು. ಈ ಶೇಷತ್ವವು ಹೇಗೆ ಸರ್ವೇಶ್ವರನಿಗೆ ಅತಿಶಯಾಧಾನವೆಂಬುದು ಬಹು ಸ್ಪಷ್ಟವಾಗಿ ಪುರುಷಾರ್ಥಕಾಷ್ಠಾಧಿಕಾರದಲ್ಲಿ ಉಪಪಾದಿತವು. ೧೩೫೪-೫೫ನೆಯ ಪುಟಗಳನ್ನೂ ೧೪೦೭ನೆಯ ಪುಟವನ್ನೂ ಪರಾಂಬರಿಸಿ. ಈ ವಿಷಯವು ಶ್ರೀ ಭಾಷ್ಯದಲ್ಲೂ ಉಪಪಾದಿತವು. ಹಾಗೆಯೇ, ಗರುಡ, ಆಂಜನೇಯಾದಿಗಳೆಲ್ಲರೂ ಸಹ ಶೇಷತ್ವ ನಿದರ್ಶನ ಗೋಷ್ಠಿಯಲ್ಲೇ ಸೇರಿದವರು.

ಹೀಗೆ ಅಕಾರವು ವಿಷ್ಣುವಾಚಕವಾಗಿಯೂ, ಉಕಾರವು ಲಕ್ಷ್ಮೀವಾಚಕವಾಗಿಯೂ ಭಾವಿಸಲ್ಪಟ್ಟರೆ, ಶೇಷತ್ವಬೋಧಕವಿಭಕ್ತಿಯೇ ಇಲ್ಲವೇ? ಎಂದರೆ, ಶ್ರುತಿಯು **"ಮಕಾರಸ್ತು ತಯೋರ್ದಾಸಃ"** ಎಂದು ವ್ಯಕ್ತವಾಗಿ ಹೇಳಿರುವಾಗ ಉಕಾರಾಂತ್ಯದಲ್ಲೂ ಸಂಬಂಧ ಸಾಮಾನ್ಯ ಷಷ್ಠೀ ದ್ವಿವಚನ ಲುಪ್ತವೆಂದು ಭಾವಿಸುವದು ನ್ಯಾಯವೆಂದು ಹೇಳುತ್ತಾರೆ. ಅಕಾರವೂ ಲುಪ್ತ ಚತುರ್ಥಿ ಎಂದೂ ಉಕಾರವೂ ಲುಪ್ತ ಚತುರ್ಥಿ ಎಂದೂ ಏಕೆ ಭಾವಿಸಕೂಡದು? ಎಂದರೆ ದ್ವ್ಯಾಚಸದೇಕ **ಶೇಷೀ**

**ಇನ್ನಿಡತ್ತಿಲ್ ಶ್ರುತಿಯಿಲ್ ತೋತ್ತಿನ ಷಷ್ಠೀದ್ವಿವಚನಮ್ ಲುಪ್ತಮ್. ಇಜ್ಜು ಸಂಬಂಧ ಸಾಮಾನ್ಯತ್ತಿಲೇ ಪ್ರವೃತ್ತೈಯಾನ ಷಷ್ಠಿಯಾನದು ಪ್ರಮಾಣಸಿದ್ಧಮಾಯ್ ಅಪೇಕ್ಷಿತಮಾನ ವಿಶೇಷತ್ತಿಲೇ ವಿಶ್ರಮಿಕ್ಕಕ್ಕಡವದು. ತಾದರ್ಥ್ಯಮಾಗಿರ ಉಪಯುಕ್ತಮಾನ ಸಂಬಂಧ ವಿಶೇಷಮ್.**

---

ಎಂಬರ್ಥವುಂಟಾಗದೆ, ಇಬ್ಬರೂ ಬೇರೆಬೇರೆಯಾಗಿ ಶೇಷೀಎಂಬರ್ಥ ಉಂಟಾದೀತೆಂಬ ಭಾವದಿಂದ ಷಷ್ಠೀ ದ್ವಿವಚನ ಲೋಪವೆಂಬ ಭಾವನೆಯೇ ಆಗ ಯುಕ್ತವೆಂಬಭಿಪ್ರಾಯದಿಂದ ಹೇಳುತ್ತಾರೆ. ಇನ್ನಿಡತ್ತಿಲ್ - ಈ ಪ್ರಣವದ ಅಕಾರ ಉಕಾರಗಳಲ್ಲಿ, ಶ್ರುತಿಯಿಲ್ ತೋತ್ತಿನ - "ಮಕಾರಸ್ತು ತಯೋರ್ದಾಸಃ" ಎಂದು ಕಠಶ್ರುತಿಯಲ್ಲಿ ತೋರಿಬರುವ, ಷಷ್ಠೀ ದ್ವಿವಚನಮ್ - ಷಷ್ಠೀ ದ್ವಿವಚನವು, ಲುಪ್ತಮ್ - ಲೋಪಿಸಿರುತ್ತದೆ. ಹೇಗೆಂದರೆ ಅಶ್ಚ ಉಶ್ಚ ಅವೌ, ತಯೋಃ ಅವೋಃ ಎಂಬುದು ವಿಗ್ರಹವು ; ಅವೋಃ ಎಂಬಲ್ಲಿರುವ ಷಷ್ಠೀ ದ್ವಿವಚನವು ಲೋಪಿಸಿರುತ್ತದೆಂಬ ಭಾವವು ಹೀಗೆ ವಿಗ್ರಹಕ್ಕೂ, ಷಷ್ಠೀ ದ್ವಿವಚನಲೋಪವೆಂಬ ಭಾವನೆಗೂ, ಆಧಾರವು ಯಾವುದು? ಎಂದರೆ ಶ್ರುತಿಯ ತಯೋರ್ದಾಸಃ ಎಂಬ ಉಪಬೃಹ್ಮಣವೇ ಎಂಬ ಭಾವವು. ಮುಂದಿನ ವಾಕ್ಯದಿಂದ ಈ ಷಷ್ಠೀ ದ್ವಿವಚನದಿಂದ ಬೋಧಿತಾರ್ಥವು ಯಾವುದು ? ಷಷ್ಠಿಗೆ ಅನೇಕಾರ್ಥಗಳುಂಟು, ಆದರೆ ಈ ಶ್ರುತಿ ಬಲದಿಂದ ಯಾವ ಷಷ್ಠೀ ಎಂದು ಭಾವಿಸತಕ್ಕದ್ದೆಂದರೆ, ತಯೋರ್ದಾಸಃ ಎಂದು ಶ್ರುತಿಯು ಪ್ರತಿಪಾದಿಸಿರುವದರಿಂದ ತಾದರ್ಥ್ಯ (ಶೇಷತ್ವ)ವನ್ನು ಬೋಧಿಸುವ ಸಂಬಂಧ ಸಾಮಾನ್ಯ ಷಷ್ಠಿಯೇ ಎಂದು ಹೇಳಿ, ದಿವ್ಯ ದಂಪತಿಗಳಿಗೂ ಜೀವಾತ್ಮನಿಗೂ ಇರುವ ಶೇಷಿ ಶೇಷ ಸಂಬಂಧವನ್ನು ಬೋಧಿಸುತ್ತದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—ಇಜ್ಜು - ಈ ಸ್ಥಳದಲ್ಲಿ ಎಂದರೆ ಈ ಪ್ರಣವದ ಉಕಾರಾಂತ್ಯದಲ್ಲಿ, ಸಂಬಂಧ ಸಾಮಾನ್ಯತ್ತಿಲೇ – ಸಂಬಂಧ ಸಾಮಾನ್ಯದಲ್ಲಿ, ಪ್ರವೃತ್ತೈಯಾನ - ಪ್ರವೃತ್ತಿಯುಳ್ಳ, ಎಂದರೆ ಸಂಬಂಧ ಸಾಮಾನ್ಯವನ್ನು ಬೋಧಿಸುವ, ಆ ಸಂಬಂಧವು ಈ ಪ್ರಕರಣದಲ್ಲಿ ಯಾವುದು ? ಎಂದರೆ ಶೇಷ ಶೇಷೀ ಸಂಬಂಧವು, ಷಷ್ಠಿಯಾನದು - ಷಷ್ಠೀ ವಿಭಕ್ತಿಯಾಗಿರುವದು, ಪ್ರಮಾಣಸಿದ್ಧಮಾಯ್ - ಶ್ರುತಿಪ್ರಮಾಣವಾದ ತಯೋರ್ದಾಸಃ ಎಂಬುದರಿಂದ ಸ್ಥಾಪಿತವಾದುದಾಗಿ, ಅಪೇಕ್ಷಿತಮಾನ - ಮುಖ್ಯವಾಗಿ ಬೇಕಾದ, ವಿಶೇಷತ್ತಿಲೇ - ವಿಶೇಷವಾದ ಸಂಬಂಧದಲ್ಲಿ ಅದು ಯಾವುದು ಎಂದರೆ ಶೇಷ ಶೇಷಿ ಸಂಬಂಧದಲ್ಲಿ, ವಿಶ್ರಮಿಕ್ಕಕ್ಕಡವದು - ಪರ್ಯವಸಾನವನ್ನು ಹೊಂದತಕ್ಕದ್ದಾಗಿರುತ್ತದೆ. ತಾದರ್ಥ್ಯಮಾಗಿರ - ಆ ದಿವ್ಯ ದಂಪತಿಗಳ ಪ್ರಯೋಜನಕ್ಕಾಗಿಯೇ ಎಂಬರ್ಥವಾಗಿರುವ, ಉಪಯುಕ್ತಮಾನ ಸಂಬಂಧವಿಶೇಷಮ್–

ವ್ಯಕ್ತಮಾಗೈಕ್ಕಾಗ ಚತುರ್ಥೀ ದ್ವಿವಚನ ಮೇರಿ ಲೋಪಿತ್ತು ಕಿಡಕ್ಕಿರದಾಕ ವುಮಾಮ್ - ಅಪ್ಪೋದು ಲುಪ್ತಮಾನ ಚತುರ್ಥೀದ್ವಿವಚನತ್ತಿನುಡೈಯ ವಿವರಣಮಾಗಿರದು ಇರುವರುಕ್ಕುಮ್ ದಾಸನೆನ್ಗಿರ ಶ್ರುತಿ. ಇಪ್ಪಡಿ ಹವಿರುದ್ದೇಶ್ಯದೇವತಾ ದ್ವಂದ್ವತ್ತಿಲ್ ಹವಿಸ್ಸುಪೋಲೆ ಇರುವರ್ಕ್ಕೈಯುಮ್ ಪತ್ತ

---

ಉಪಯೋಗವಾದ ಶೇಷಿ ಶೇಷ ಸಂಬಂಧವು, ವ್ಯಕ್ತಮಾಗೈಕ್ಕಾಗ - ವ್ಯಕ್ತವಾಗುವದಕ್ಕಾಗಿ, ಚತುರ್ಥೀದ್ವಿವಚನಮ್ - ಚತುರ್ಥೀ ದ್ವಿವಚನವು, ಏರಿ - ಆರೋಪಿಸಲ್ಪಟ್ಟು, ಲೋಪಿತ್ತುಕಿಡಕ್ಕಿರದಾಗವುಮಾಮ್ – ಲೋಪವಾಗಿರುತ್ತದೆಂದೇ ಹೇಳಬೇಕಾಗುತ್ತದೆ, ಅಪ್ಪೋದು - ಆ ಸಂದರ್ಭದಲ್ಲಿ, ಇರುವರುಕ್ಕುಮ್ - ಲೋಕ ದಂಪತಿಗಳಿಬ್ಬರಿಗೂ, ದಾಸನೆನ್ಗಿರಶ್ರುತಿ - ಮಕಾರಸ್ತು ತಯೋರ್ದಾಸಃ ಎಂದು ಹೇಳುವ ಕಠಶ್ರುತಿಯು, ಲುಪ್ತಮಾನಚತುರ್ಥೀದ್ವಿವಚನತ್ತಿನುಡೈಯ - ಉಕಾರದಮೇಲೆ ಲೋಪಹೊಂದಿದ ಚತುರ್ಥೀ ದ್ವಿವಚನದ, ವಿವರಣಮಾಗಿರದು - ಉಪಪಾದನೆಯಾಗುತ್ತದೆ.

ಹೀಗೆ ಅಉ ಎಂಬ ಎರಡು ಅಕ್ಷರಗಳಿಂದ ವಿಷ್ಣುವೂ ಲಕ್ಷ್ಮಿಯೂ ಹೇಳಲ್ಪಟ್ಟು ತಯೋರ್ದಾಸಃ ಎಂಬ ಶ್ರುತಿ ಬಲದಿಂದ, ಷಷ್ಠೀ ದ್ವಿವಚನವು ಲೋಪಿಸಿರುತ್ತದೆಂದು ಭಾವಿಸಿ, ಷಷ್ಠಿಯು ಸಂಬಂಧ ಸಾಮಾನ್ಯಷಷ್ಠಿಯಾಗಿ ತಾದರ್ಥ್ಯವನ್ನು ಬೋಧಿಸುವದರಿಂದ ದಿವ್ಯ ದಂಪತಿಗಳಿಬ್ಬರಿಗೂ ಸೇರಿದ ಏಕ ಶೇಷಿತ್ವವು ಹೇಳಲ್ಪಟ್ಟಿತೆಂದು ಭಾವಿಸಿದರೂ, ಅವಧಾರಣಾರ್ಥವು ತಪ್ಪಿಹೋಯಿತಲ್ಲವೇ? ಈತನು ಅನನ್ಯ ಶೇಷನೆಂಬ ಅನೋರ್ಘಾರ್ಥವು ಬಿಟ್ಟುಹೋಯಿತಲ್ಲವೇ ? ಎಂದಾಕ್ಷೇಪ ತಂದರೆ, ಅನನ್ಯ ಶೇಷನೆಂಬ ಅರ್ಥವು ಅರ್ಥವಾಗಿ ತೋರಿಬರುತ್ತದೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ. ಹಾಗೆ ಹೇಳುವಾಗ ಇನ್ನೊಂದು ಪೂರ್ವಪಕ್ಷಕ್ಕು ಸಮಾಧಾನವನ್ನು ಹೇಳುತ್ತಾರೆ—ಏನೆಂದರೆ, ಈ ಆತ್ಮಾವಾದ ಒಂದೇ ಹವಿಸ್ಸನ್ನು ಇಬ್ಬರಾದ ಲಕ್ಷ್ಮೀನಾರಾಯಣರಿಗೆ ಸಮರ್ಪಿಸುವದು ಸಮಂಜಸವೋ? ಎಂದರೆ ಅನೇಕ ಸಂದರ್ಭಗಳಲ್ಲಿ ಒಂದೇ ಹವಿಸ್ಸನ್ನು ಎರಡು ದೇವತೆಗಳಿಗೆ ಸಮರ್ಪಿಸುವ ಪದ್ಧತಿಯುಂಟು; ಅದರ ಹಾಗೆಯೇ ಇಲ್ಲಿಯೂ ಎಂದು ಹೇಳುತ್ತಾರೆ. ಇಪ್ಪಡಿ - ಶ್ರುತಿಯಲ್ಲಿ ಉಪಪಾದಿಸಿರುವ ರೀತಿಯಲ್ಲಿ, ಈ ಮಕಾರವಾಚ್ಯ ಜೀವನು ವಿಷ್ಣು ಲಕ್ಷ್ಮೀ ಇಬ್ಬರಿಗೂ ಶೇಷಭೂತನೆಂದು ಉಪಪಾದಿಸಿದ ರೀತಿಯಲ್ಲಿ, ಹವಿರುದ್ದೇಶ್ಯದೇವತಾದ್ವಂದ್ವತ್ತಿಲ್ - ಹವಿಸ್ಸಿಗೆ ಉದ್ದೇಶ್ಯವಾಗಿ ಎರಡು ದೇವತೆಗಳಲ್ಲಿ, ಹವಿಸ್ಸುಪೋಲೇ . ಹವಿಸ್ಸಮರ್ಪಣೆಯು ಶಾಸ್ತ್ರಗಳಲ್ಲಿ ಇಬ್ಬರಿಗೂ ಒಂದೇ ಹವಿಸ್ಸು ಆಗಬಹುದೆಂದು ಹೇಳಿರುವಹಾಗೆ, ಇರುವರೆಯುಮ್ಪತ್ತ - ಅಕಾರವಾಚ್ಯನಾದ ವಿಷ್ಣು, ಉಕಾರವಾಚ್ಯಳಾದ ಲಕ್ಷ್ಮೀ, ಹೀಗೆ ಈ ಇಬ್ಬರನ್ನೂ ಉದ್ದೇಶಿಸಿ,

**ಇವ್ವಾತ್ಮಾ ಶೇಷಮೆನ್ನುಮ್ಪೋದು ಇಜ್ಙ ಅವಧಾರಣಮ್ ಅರ್ಥಮ್. ಇವರ್‌ಗಳಿರುವರುಕ್ಕುಮ್ ಇವ್ವಾತ್ಮಾ ಅನನ್ಯಾರ್ಹ ನಿರುಪಾಧಿಕ ಶೇಷಮೆನ್ರದಾಯಿತ್ತು.**

---

**ಇವ್ವಾತ್ಮಾ**-ಈ ಜೀವಾತ್ಮನು, **ಶೇಷ ಮೆನ್ರುಮ್ಪೋದು**-ಪರಮಾತ್ಮನಿಗೆ ಶೇಷನೆಂದು ಹೇಳುವಾಗ, **ಇಜ್ಙ**-ಈ ಸಂದರ್ಭದಲ್ಲಿ, **ಅವಧಾರಣಂ ಅರ್ಥಮ್** - ಇವರಿಬ್ಬರಿಗೆ ಮಾತ್ರವೇ ಶೇಷಭೂತನೇ ವಿನಾ ಅನ್ಯದೇವತೆಗಳಿಗೆ ಅಲ್ಲವೆಂಬ ಏವಕಾರಾರ್ಥವು ಶಾಬ್ದವಾಗಿಲ್ಲದಿದ್ದರೂ ಅರ್ಥವಾಗಿ ತೋರಿಬರುತ್ತದೆ. ಸರ್ವವಾಕ್ಯವೂ ಸಾವಧಾರಣವಾಗಿ ಇಲ್ಲಿ ಮುಖ್ಯವಾಗಿ ಹೇಳಬೇಕಾದುದು ಇವರಿಬ್ಬರಿಗೇ ತಾದರ್ಥ್ಯದಿಂದ ಶೇಷತ್ವವು ಉಪಪಾದಿತವಾಗಿರುವದರಿಂದ, ಅವಧಾರಣವು ಸ್ವತಃ ಅರ್ಥವಾಗಿ ವ್ಯಕ್ತವೆಂಬ ಭಾವವು. ಒಂದು ಹವಿಸ್ಸು ಎರಡು ದೇವತೆಗಳಿಗೆ ಸಮರ್ಪಿಸುವದು ಶಾಸ್ತ್ರವಿಹಿತವೆಂದೂ ಹೇಳಲ್ಪಟ್ಟಿತು. ಇದಕ್ಕೆ ನಿದರ್ಶನವಾಗಿ ಅನಾಜ್ಞಾತಾದಿ ಹೋಮದಲ್ಲಿ "ಅಗ್ನಿವರುಣಾಭ್ಯಾಂ ಇದಂ ನಮಮ" ಎಂದು ಹೇಳಿ ಹೋಮ ಮಾಡುವದುಂಟು. ಅದರ ಹಾಗೆಯೇ ಈ ಆತ್ಮಾ ಎಂಬ ಏಕ ಹವಿಸ್ಸು ಈ ದಿವ್ಯ ದಂಪತಿಗಳಿಬ್ಬರಿಗೂ ಉದ್ದೇಶ್ಯವೆಂದು ತೋರ್ಪಡಿಸಿರುತ್ತಾರೆ.

ಈ ಆತ್ಮಹವಿಸ್ಸಮರ್ಪಣೆಗೆ ಲಕ್ಷ್ಮಿಯೂ ಪರಮಾತ್ಮನೊಂದಿಗೆ ಉದ್ದೇಶ್ಯಳೆಂದು ಇಷ್ಟುದೂರ ಎರಡು ವಿಧವಾಗಿ ಉಪಪಾದಿಸಿದುದನ್ನು ಮುಂದಿನ ವಾಕ್ಯದಿಂದ ನಿಗಮನಮಾಡಿ ಹೇಳುತ್ತಾರೆ,—**ಇವರ್‌ಗಳಿರುವರುಕ್ಕುಮ್** – ಈ ಲಕ್ಷ್ಮೀನಾರಾಯಣರಿಬ್ಬರಿಗೂ, **ಇವ್ವಾತ್ಮಾ**- ಈ ನಮ್ಮ ಜೀವಾತ್ಮನು, **ಅನನ್ಯಾರ್ಹ** - ಇನ್ನು ಯಾರಿಗೂ ಯೋಗ್ಯವಲ್ಲದೆ ಇವರಿಬ್ಬರುಗಳಿಗೆ ಮಾತ್ರವೇ, **ನಿರುಪಾಧಿಕ** - ಈ ಲೋಕದ ಸೋಪಾಧಿಕ ಶೇಷಭಾವದ ಹಾಗೆ ಅಲ್ಲದೆ ಎನೊಂದೂ ಉಪಾಧಿಯಿಂದಲ್ಲದೆ ಸಹಜವಾಗಿ, **ಶೇಷಮೆನ್ರದಾಯಿತ್ತು** - ಶೇಷಭೂತನೆಂಬುದು ಸ್ಥಾಪಿತವಾಯಿತು. **ಪತ್ನೀವಿಶಿಷ್ಟನಾಗಿಯೇ ಸದಾ ಇರುವದರಿಂದ,** ಪತ್ನಿಗೂ ತನಗೂ, ಯಾವಾಗಲೂ ಈ ಆತ್ಮನು ಶೇಷಭೂತನೆಂಬ ಮಹತ್ತಾದ ತತ್ತ್ವಾರ್ಥವನ್ನು ಎರಡು ವಿಧವಾಗಿ ಗ್ರಹಿಸಬಹುದೆಂದು ಹೇಳಲ್ಪಟ್ಟಿತು. (೧) ಅಕಾರದ ನಾಲ್ಕು ಅರ್ಥಗಳಿಂದ ಲಕ್ಷ್ಮೀವಿಶಿಷ್ಟತೆಯು ಅರ್ಥವಾಗಿ ತೋರುವದರಿಂದ ಲಕ್ಷ್ಮಿಗೂ ಶೇಷಭೂತನೆಂದು ಮೊದಲು ಉಪಪಾದಿಸಿದರು (೨) ಉಕಾರವು ಲಕ್ಷ್ಮೀವಾಚಕವೆಂದೂ, ಮಕಾರಸ್ತು ತಯೋರ್ದಾಸಃ ಎಂದೂ ಹೇಳಿರುವದರಿಂದಲೂ, ಶಾಬ್ದವಾಗಿಯೂ ಶೇಷಭೂತನೆಂದೂ ಸ್ಥಾಪಿಸಿದರು.

**ಉಕಾರಕ್ಕೆ ಇನ್ನೊಂದರ್ಥವನ್ನು ಉಪಪಾದಿಸುತ್ತಾರೆ.**

---

ಹೀಗೆ ಉಕಾರಕ್ಕೆ ಶ್ರುತಿಯನ್ನನುಸರಿಸಿ ಲಕ್ಷ್ಮೀ ಎಂದು ಅರ್ಥಮಾಡಿ

## ಉಕಾರಸ್ಯ ಅರ್ಥಾನ್ತರ ಮುಪದಿಶತಿ.

**ಇಮ್ಮಧ್ಯಮಾಕ್ಷರಮ್ ಶ್ರೌತಪ್ರಯೋಗತ್ತಾಲೇ ಅವಧಾರಣಪರ ಮಾನಪ್ಪೋದು ಇದ್ದಂಪತಿಗಳ್ಳೈಯೊಳಿನ್ದಾರ್ಕ್ಕು ನಿರುಪಾಧಿಕ ಶೇಷಮೆನ್ನು ಶಙ್ಕೈಯಾನ್ನೈಕ್ಕಾಗ ಅನ್ಯಯೋಗ ವ್ಯವಚ್ಛೇದ ಮಿಙ್ಗೇ ಶಾಬ್ದಮ್.**

---

ಇಬ್ಬರಿಗೂ ಈ ಜೀವಾತ್ಮನು ನಿರುಪಾಧಿಕ ಅನನ್ಯಾರ್ಹಶೇಷನೆಂದು ಹೇಳಿದರು. ಮುಂದೆ ಉಕಾರಕ್ಕೆ ಶ್ರುತಿಯಲ್ಲಿ ಅವಧಾರಣಾರ್ಥವೂ ತೋರಿಬರುವುದರಿಂದ, ಅವಧಾರಣಾರ್ಥವನ್ನು ಹೇಳಿ, ಅನ್ಯಯೋಗವ್ಯವಚ್ಛೇದವು ಶಾಬ್ದವಾಗಿಯೇ ತೋರಿಬರುತ್ತದೆಂದು ಹೇಳುತ್ತಾರೆ. ಮಕಾರವಾಚ್ಯನಾದ ಜೀವನು ಅಕಾರವಾಚ್ಯನಾದ ಲಕ್ಷ್ಮೀವಿಶಿಷ್ಟ ಮಹಾ ವಿಷ್ಣುವಿಗೇನೇ ಶೇಷಭೂತನೆಂಬ ಅರ್ಥವು ತೋರಿ ಬರುವದರಿಂದ ಇನ್ಯಾರಿಗೂ ಅಲ್ಲವೆಂಬ ವ್ಯವಚ್ಛೇದವು ಶಾಬ್ದವಾಗಿಯೇ ತೋರಿ ಬರುತ್ತದೆಂದು **ಉಪದೇಶಿಸುತ್ತಾರೆ—ಇಮ್ಮಧ್ಯಮಾಕ್ಷರಂ** - ಈ ಪ್ರಣವದ ಮಧ್ಯಮಾಕ್ಷರವಾದ **ಉಕಾರವು, ಶ್ರೌತಪ್ರಯೋಗತ್ತಾಲೇ** - ಶ್ರುತಿ ಸಂಬಂಧವಾದ ಪ್ರಯೋಗದಿಂದ, ಅಂತಹ ಪ್ರಯೋಗವು ಯಾವುದೆಂದರೆ **"ತದೇವಾಗ್ನಿಸ್ತದ್ವಾಯುಸ್ತತ್ಸೂರ್ಯಸ್ತದುಚಂದ್ರಮಾಃ" "ತದುಹವಾಏತೇ ಬ್ರಹ್ಮವಾದಿನಃ" "ತದುಸತ್ಯಮಾಹುಃ"** ಎಂಬುವು, ಆ ಪರಮಾತ್ಮನೇ ಅಗ್ನಿ, ವಾಯು ಸೂರ್ಯ, ಚಂದ್ರ ಶರೀರಕನು; ಇಲ್ಲಿ **ಚಂದ್ರಮಾಃ** ಎಂಬಲ್ಲಿ, **ತತ್ ಉ** ಎಂಬದಾಗಿ ಭೇದವು, **ಉ** ಎಂದರೆ ಏವ ಎಂಬರ್ಥವು; ಇಂತಹ ಪ್ರಯೋಗದಿಂದ, **ಅವಧಾರಣ ಪರಮಾನಪ್ಪೋದು** - ಅವಧಾರಣವಾದ ಏವ ಎಂಬ ಅರ್ಥವಾದಾಗ, **ಇದ್ದಂಪತಿಗಳ್ಳೈ ಯೊಳ್ಳಿನ್ದಾರ್ಕ್ಕು** - ಈ ದಂಪತಿಗಳಿಗಲ್ಲದೆ ಇತರರಿಗೆ, **ನಿರುಪಾಧಿಕ ಶೇಷಮೆನ್ನು** - ನಿರುಪಾಧಿಕ ಶೇಷನು ಈ ಜೀವಾತ್ಮನು ಎಂದು, **ಶಙ್ಕೈಯಾನ್ನೈಕ್ಕಾಗ** - ಸಂದೇಹ ಪಡದಿರುವದಕ್ಕಾಗಿ, **ಅನ್ಯಯೋಗವ್ಯವಚ್ಛೇದಮ್** - ಇತರರಿಗೆ ಶೇಷಭೂತನಲ್ಲವೆಂದು ಅನ್ಯರನ್ನೆಲ್ಲಾ ವ್ಯವಚ್ಛೇದ ಮಾಡುವ ಅರ್ಥವುಳ್ಳದು, ಎಂಬುದು, **ಇಙ್ಗೇ ಶಾಬ್ದಮ್** - ಇಲ್ಲಿ ಶಾಬ್ದವಾಗಿ (ಉಕಾರದಿಂದಲೇ) ತೋರಿ ಬರುತ್ತದೆಂಬ ಭಾವವು. ಹಿಂದೆ ಉಕಾರವು ಲುಪ್ತಚತುರ್ಥೀದ್ವಿವಚನವೆಂದು ಹೇಳಿ ಅರ್ಥವಾಗಿ ಅವಧಾರಣಾಭಿಪ್ರಾಯವೂ ಅನ್ಯಯೋಗವ್ಯವಚ್ಛೇದವೂ ತೋರಿಬರುತ್ತದೆಂದು ಹೇಳಿದರು. ಈಗಲಾದರೋ ಶ್ರುತಿಯಲ್ಲೇ ಉಕಾರಕ್ಕೆ ಅವಧಾರಣಾರ್ಥದಲ್ಲೇ ಪ್ರಯೋಗಗಳಿರುವದರಿಂದ ನಿರುಪಾಧಿಕ ಅನನ್ಯಾರ್ಹ ಶೇಷತ್ವವೂ ದ್ಯೋತಿತವಾಗಿ ಅನ್ಯಯೋಗ ವ್ಯವಚ್ಛೇದಾರ್ಥ ಉಂಟಾಗುತ್ತದೆಂದು ಉಪದೇಶಿಸಿರುತ್ತಾರೆ. ಅನ್ಯಯೋಗ ವ್ಯವಚ್ಛೇದವೆಂಬುದರ ಅರ್ಥಕ್ಕೆ ೪೪ನೆಯ

**ಇತ್ತಾಲೇ ಅನ್ಯರ್ಕ್ಕಪ್ಪತ್ತ ಶೇಷತ್ವಮ್ ಸ್ವರೂಪಪ್ರಾಪ್ತಮನ್ರೆನ್ನು ಮಿಡತ್ತಿ್ಯ ಚೊಲ್ಲ ಗೈಯಾಲೇ ಯಥಾವಸ್ಥಿತಾತ್ಮಜ್ಞಾನ ಮುಡೈಯವನುಕ್ಕು ತದೀಯ ಪರ್ಯನ್ತಮಾಗ ದೇವತಾನ್ತರ ಸ್ಪರ್ಶಂ ನಿವೃತ್ತಮಾಯ್‌ತ್ತು.**

ಪುಟವನ್ನು ನೋಡಿ. ತಾನು ಪರಮಾತ್ಮನಿಗೆ ನಿರುಪಾಧಿಕ ಶೇಷನು ಎಂಬುದು ಶಾಸ್ತ್ರಮುಖೇನ ಜೀವಾತ್ಮ ಪರಮಾತ್ಮ ಸ್ವರೂಪ ವೈಲಕ್ಷಣ್ಯವನ್ನು ತಿಳಿದವನಿಗೆ, ಆ ವಿಷಯದಲ್ಲಿ ಶಙ್ಕೆಯಿರುವದಿಲ್ಲವು. ಅಂತಹ ಶಾಸ್ತ್ರಜ್ಞಾನವಿಲ್ಲದವರೇ ಅನೇಕರು; ಇವರೆಲ್ಲಾ ಲೋಕದಲ್ಲಿ ಸ್ವಾಮಿಭೃತ್ಯನ್ಯಾಯವನ್ನೇ ಕಂಡಿರುವದರಿಂದ ಅನ್ಯಶೇಷತ್ವವೂ ಇದೆಯಲ್ಲಾ ಎಂದು ಸಂದೇಹ ಪಡುವರು. ಇದು ಸ್ವರೂಪತಃ ಪ್ರಾಪ್ತವಾದುದಲ್ಲವು; ತನ್ನ ಕರ್ಮಮೂಲಕವಾದುದು ಎಂದು ಈ ಪ್ರಣವದ ಉಕಾರವು ಉದ್ಘೋಷಿಸಿ ಹೇಳುತ್ತದೆ ಎಂಬರ್ಥವು. ಲೋಕದ ಶೇಷತ್ವವು ಕರ್ಮಮೂಲಕ ಉಂಟಾದುದು. ಇಂತಹ ಶೇಷತ್ವವನ್ನು ಪ್ರಾಜ್ಞರೆಲ್ಲರೂ ನಿಂದಿಸಿರುತ್ತಾರೆ. **"ನಾಥೇನಃ ಪುರುಷೋತ್ತಮೇ"** ಎಂಬ ಮುಕುಂದ ಮಾಲಾಸ್ತೋತ್ರವು ಅನುಸಂಧೇಯವು. ಹಾಗೆಯೇ ಸೀತೆಯೂಸಹ **"ಧಿಗಸ್ತು ಖಲು ಮಾನುಷ್ಯಂ ಧಿಗಸ್ತು ಪರವಶ್ಯತಾಂ** ಎಂದು ನಿಂದಿಸಿರುತ್ತಾಳೆ. ಆದುದರಿಂದ ತನಗೆ ನಿರುಪಾಧಿಕ ಶೇಷತ್ವವು ದಿವ್ಯದಂಪತಿಗಳಲ್ಲಿ ಮಾತ್ರವೇ, ಅನ್ಯರಲ್ಲಿಲ್ಲವೆಂದು ನಿಸ್ಸಂದೇಹವಾಗಿ ಈ ಮಧ್ಯಮಾಕ್ಷರವು ವ್ಯಕ್ತಪಡಿಸುತ್ತದೆಂಬ ತಾತ್ಪರ್ಯವು.

ಈ ಅನ್ಯಯೋಗ ವ್ಯವಚ್ಛೇದದಿಂದ 'ಇತರ ದೇವತೆಗಳಿಗೆ ಶೇಷತ್ವ ಸಂಬಂಧದ ವ್ಯಾವೃತ್ತಿಯಿಂದ ತೋರಿಬರುವ ಅರ್ಥವನ್ನು ಮುಂದಿನ ವಾಕ್ಯದಿಂದ ವ್ಯಕ್ತಪಡಿಸಿರುತ್ತಾರೆ.—**ಇತ್ತಾಲೇ** - ಪ್ರಣವದ ಉಕಾರವು ಅವಧಾರಣಾರ್ಥವನ್ನು ಬೋಧಿಸುತ್ತದೆ ಎಂಬುದರಿಂದ, **ಅನ್ಯರ್ಕ್ಕಪ್ಪತ್ತ**-ಅನ್ಯದೇವತೆಯನ್ನುದ್ದೇಶಿಸಿದ, **ಶೇಷತ್ವಂ**-ಶೇಷತ್ವವು, **ಸ್ವರೂಪಪ್ರಾಪ್ತಮನ್ರೆನ್ನುಮಿಡತ್ತಿ್ಯ ಚೊಲ್ಲುಗೈಯಾಲೇ**-ಸ್ವರೂಪತಃ ಬಂದುದಲ್ಲವೆಂಬ ಸಂದರ್ಭವನ್ನು ಹೇಳಿರುವದರಿಂದ, **ಯಥಾವಸ್ಥಿತಾತ್ಮಜ್ಞಾನಮುಡೈಯವನುಕ್ಕು**-ಯಥಾವತ್ತಾಗಿರುವ ಜೀವಾತ್ಮಸ್ವರೂಪ ಜ್ಞಾನವಿರುವವನಿಗೆ, **ದೇವತಾಂತರಸ್ಪರ್ಶಂ**-ಅನ್ಯದೇವತಾ ಸಂಬಂಧವು, **ತದೀಯ ಪರ್ಯನ್ತಮಾಗ** - ಆ ಅನ್ಯದೇವತೆಗೆ ಸಂಬಂಧಪಟ್ಟ ಆ ಅನ್ಯದೇವತಾ ಭಕ್ತಪರ್ಯನ್ತವಾಗಿ, **ನಿವೃತ್ತಮಾಯ್‌ತ್ತು** - ನಿವರ್ತಿಸಿ ಹೋಗಿರುತ್ತದೆ. ಈ ಅನ್ಯಯೋಗವ್ಯವಚ್ಛೇದದಿಂದ ಅನ್ಯರ ವಿಷಯವಾಗಿ ತೋರುವ ಶೇಷತ್ವವು ಸ್ವರೂಪತಃ ಅಲ್ಲವೆಂಬುದು ಆತ್ಮ ಯಾಥಾತ್ಮ್ಯಜ್ಞಾನ ವುಳ್ಳವರಿಗೆ ವ್ಯಕ್ತವೆಂದು ತಿಳಿಸಿದರು. ಇದರಿಂದ ಅನ್ಯದೇವತಾ ಸಂಬಂಧವೂ, ಅಂತಹ ಅನ್ಯದೇವತಾ ಭಕ್ತರ ಸಂಬಂಧವೂ ಕೂಡ ಸಲ್ಲದು ಸಮುಚಿತವಲ್ಲವೆಂದು ತೋರಿ, ಅನ್ಯ ದೇವತಾರಾಧನೆ ಮೊದಲಾದವುಗಳೆಲ್ಲಾ ನಿವೃತ್ತ

**ಭಗವದಭಿಮತಮಾನ ಭಾಗವತಶೇಷತ್ವತ್ತಾಲೇ ಅನ್ಯಶೇಷತ್ವ ದೋಷಂ**

ವಾಗುತ್ತವೆ. ಈ ಸಂದರ್ಭದಲ್ಲಿ ಈ ಪ್ರಮಾಣಗಳು ಅನುಸಂಧೇಯಗಳು.—

**"ನಾನ್ಯಂ ದೇವಂ ನಮಸ್ಕುರ್ಯಾಂ ನಾನ್ಯಂ ದೇವಂ ನಿರೀಕ್ಷಯೇತ್ ।**
**ನಾನ್ಯಂ ಪ್ರಾಸಾದಮಾರೋಹೇತ್ ನಾನ್ಯದಾಯತನಂ ವಿಶೇತ್ ॥"**

**"ಅಶುದ್ಧಾಸ್ತೇಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ॥"** ವಿ.ಪು.೬-೭-೭೭

**"ಯೇಽಪ್ಯನ್ಯದೇವತಾ ಭಕ್ತಾಃ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವಕೌನ್ತೇಯ ಯಜನ್ತ್ಯ ವಿಧಿಪೂರ್ವಕಮ್ ।** (ಗೀ.೯-೨೩)
**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾಚ ಪ್ರಭು ರೇವ ಚ ।**
**ನ ತು ಮಾ ಮಭಿಜಾನಂತಿ ತತ್ವೇನಾ ತ ಶ್ಚ್ಯವನ್ತಿ ತೇ ॥"** (ಗೀ. ೯.೨೪)

ಹಿಂದೆ ಅನ್ಯ ಶೇಷತ್ವವು ಮುಮುಕ್ಷುವಿಗೆ ಇಲ್ಲವೆಂದು ಸ್ಥಾಪಿತವಾದನಂತರ, ಭಾಗವತ ಶೇಷತ್ವವು ವ್ಯವಚ್ಛೇದಿಸಲ್ಪಟ್ಟಿತೇ? ಭಾಗವತಶೇಷತ್ವಕ್ಕೆ ತ ಂಬಾಮಹಿಮೆಯನ್ನು ಪುರುಷಾರ್ಥಕಾಷ್ಠಾಧಿಕಾರದಲ್ಲಿ ಹೇಳಿದುದು ಹೇಗೆ? ಎಂದರೆ ಹೇಳುತ್ತಾರೆ.— **ತದೀಯಪರ್ಯನ್ತಮಾಗ ದೇವತಾನ್ತರ ಸ್ಪರ್ಶಂ ನಿವೃತ್ತಮಾಯ್‌ತ್ತು** ಎಂದು ಯಾವಾಗ ಹೇಳಲ್ಪಟ್ಟಿತೋ, ಆಗ ತದೀಯಪರ್ಯನ್ತಮಾಗ ಪರದೇವತಾ ಸ್ಪರ್ಶಂ ನಿವೃತ್ತವಾಗಲಿಲ್ಲವೆಂಬುದು ಅರ್ಥವಾಗಿ ತೋರಿಬರುತ್ತದೆ. ಆದುದರಿಂದ ಭಗವಚ್ಛೇಷತ್ವವು ಯಾವಾಗ ಪ್ರಣವದಲ್ಲಿ ಸ್ಥಾಪಿತವೋ, ಆವಾಗ ತದೀಯರಾದ ಭಾಗವತ ಶೇಷತ್ವವೂ ಉಂಟೆಂದೇ ಹೇಳಿದಂತಾಯಿತು. ಇದನ್ನೇ ಮುಂದಿನ ವಾಕ್ಯದಲ್ಲಿ ವ್ಯಕ್ತಪಡಿಸುತ್ತಾರೆ. ಅನನ್ಯಾರ್ಹ ಶೇಷತ್ವವು ಬೋಧಿಸಲ್ಪಟ್ಟನಂತರ, ತದೀಯರಿಗೆ ಶೇಷತ್ವವೂ ಹೇಗೆ ಸಾಧುವು? ಎಂದರೆ ತದೀಯರಾಗಿ ಭಗವದಾಜ್ಞಾ ನಿರ್ವಾಹಕರಾಗಿರುವದರಿಂದ ಅಂತವರಿಗೆ ಶೇಷತ್ವವು ಎಂದಿಗೂ ದೋಷಾವಹವಲ್ಲವೆಂದೂ, ಭಗವಂತನಿಗೆ ಅಭಿಮತವಾದುದೆಂದೂ, ಹೇಳಿ, ಇದನ್ನೇ ಹಿಂದೆ ಪುರುಷಾರ್ಥಕಾಷ್ಠಾಧಿಕಾರದಲ್ಲಿ ಉಪದೇಶಿಸಿರುತ್ತೇವೆ ಎಂದು ತಿಳಿಸುತ್ತಾರೆ— **ಭಗವದಭಿಮತಮಾನ ಭಾಗವತ ಶೇಷತ್ವತ್ತಾಲೇ**-ಭಗವಂತನಿಗೆ ಇಷ್ಟವಾದ ಭಾಗವತ ಶೇಷತ್ವದಿಂದ, **ಅನ್ಯಶೇಷತ್ವ ದೋಷಂ** - ಇತರರಿಗೆ ಶೇಷಭೂತನಾಗಿರುವ ದೋಷವು, **ವಾರಾದೆನ್ನುಮಿಡಮ್** - ಬರುವದಿಲ್ಲವೆಂಬ ಸಂದರ್ಭವನ್ನು, ಪುರುಷಾರ್ಥಕಾಷ್ಠಾಧಿಕಾರದಲ್ಲಿ, **ಶೊನ್ನೋಮ್** – ಹೇಳಿದೆವು (೧೩೭೬ನೇ ಪುಟದಿಂದ ೧೩೮೦ನೆಯ ಪುಟದವರೆಗೂ ಉಪಪಾದಿತವು) ಭಗವಚ್ಛೇಷತ್ವಕ್ಕೆ ವಿರೋಧಿಯಾದ ಅನ್ಯದೇವತಾ ಶೇಷತ್ವವು ಯಾವಾಗ ನಿಷಿದ್ಧವಾಯಿತೋ, ಅಂತಹ ನಿಷಿದ್ಧಕ್ಕೆ ಸಂಬಂಧಪಟ್ಟ ಆ ಭಕ್ತರ ಶೇಷತ್ವವೂ ನಿಂದ್ಯವು. ಯಾವಾಗ ಭಗವಚ್ಛೇಷತ್ವವು ಏರ್ಪಟ್ಟಿತೋ, ತದೀಯ ಶೇಷತ್ವವೂ ಅದಕ್ಕೆ ವಿರುದ್ಧವಲ್ಲದೆ ಭಗವದಭಿಮತಕ್ಕನು

ವಾರಾದೆನ್ನಿಡಂ ಪುರುಷಾರ್ಥಕಾಷ್ಠೈಯಿಲೇ ಶೊನ್ನೋಮ್. ಇಪ್ಪಡಿ ಅನ್ಯಯೋಗ ವ್ಯವಚ್ಛೇದಮ್ ಶಾಬ್ದಮಾಗ ಪೆತ್ತಾಲ್ ಅಯೋಗವ್ಯವಚ್ಛೇದಮುಮ್ ಕಾಲಸಂಕೋಚಮಿಲ್ಲಾಮೈಯಾಲೇ ಸಿದ್ಧಮ್. ಇಶ್ಶೇಷತ್ವಾ

---

ಗುಣವಾಗಿರುವದರಿಂದ ಭಾಗವತ ಶೇಷತ್ವವೂ ಪರಮುಗ್ರಾಹ್ಯವೇ; ಆದು ಹೇಗೆ ಎಂಬುದು ಪುರುಷಾರ್ಥಕಾಷ್ಠಾಧಿಕರದಲ್ಲಿ ಉಪಪಾದಿತವೆಂಬ ಭಾವವು.

ಪರಮಾತ್ಮನಿಗೆ ಜೀವಾತ್ಮನು ಶೇಷಭೂತನು ಎಂಬಲ್ಲಿ ಏವ ಕಾರವನ್ನು ಪರಮಾತ್ಮನಿಗೇನೇ ಶೇಷಭೂತನು ಎಂದು ವಿಶೇಷ್ಯಕ್ಕೆ ಸಂಬಂಧಿಸಿದರೆ, ಅನ್ಯಯೋಗ ವ್ಯವಚ್ಛೇದಾರ್ಥವಾಗಿ, ಇನ್ನು ಯಾರಿಗೂ ಶೇಷಭೂತನಲ್ಲವೆಂಬರ್ಥವು ತೋರಿ ಬರುತ್ತದೆ. ಆದರೆ ಏವಕಾರವನ್ನು ಶೇಷಭೂತನು ಎಂಬ ವಿಶೇಷಣಕ್ಕೆ ಸೇರಿಸಿ ಹೇಳಿದರೆ, ಪರಮಾತ್ಮನಿಗೆ ಜೀವಾತ್ಮನು ಶೇಷಭೂತನೇ ಸರಿ ಎಂಬರ್ಥ ಉಂಟಾಗಿ ಸರ್ವಕಾಲದಲ್ಲೂ ಶೇಷಭೂತನೆಂಬ ಅರ್ಥ ಉಂಟಾಗುತ್ತದೆ; ಇದು ಆಯೋಗ ವ್ಯವಚ್ಛೇದಾರ್ಥವು. ಅದೂ ಕೂಡ ತೋರಿಬರುತ್ತದೆಂದು ಈ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ—ಇಪ್ಪಡಿ - ಈಗ ಉಪಪಾದಿಸಿದ ರೀತಿಯಲ್ಲಿ ಉಕಾರವು ಏವ ಎಂಬರ್ಥವುಳ್ಳದ್ದಾಗಿ, ಅನ್ಯಯೋಗವ್ಯವಚ್ಛೇದಮ್-ಪರಮ ಪುರುಷನಿಗಲ್ಲದೆ ಇನ್ನು ಯಾರಿಗೂ ಶೇಷಭೂತನಲ್ಲವು ಎಂದು ವ್ಯವಚ್ಛೇದಿಸಿ ಹೇಳುವ ಅರ್ಥವು, ಶಾಬ್ದಮಾಗಪ್ಪೆತ್ತಾಲ್ - ಶಾಬ್ದವಾಗಿಯೇ ಪ್ರಾಪ್ತವಾದರೆ, ಅಯೋಗವ್ಯವಚ್ಛೇದಮುಮ್ - ಶೇಷಭೂತನೇ ಸರಿಯಾವಾಗಲೂ ಎಂದು ಶೇಷಭೂತಾಕಾರವಲ್ಲದೆ ಇತರಾಕಾರಗಳನ್ನು ವ್ಯವಚ್ಛೇದಿಸಿ ಹೇಳುವ ಸಾರ್ವಕಾಲಿಕ ಶೇಷತ್ವವೂ, ಕಾಲಸಂಕೋಚಮಿಲ್ಲಾಮೈಯಾಲೇ - ಕಾಲಸಂಕೋಚವು ಹೇಳಲ್ಪಡದೇ ಇರುವದರಿಂದ, ಸಿದ್ಧಮ್ - ಸ್ಥಾಪಿತವು, ಈ ಅಯೋಗವ್ಯವಚ್ಛೇದವೂ ಅರ್ಥವಾಗಿ ತೋರಿಬರುತ್ತದೆಂಬ ತಾತ್ಪರ್ಯ. ಅಕಾರವು ಲುಪ್ತ ಚತುರ್ಥಿಯಾಗಿ ಶೇಷತ್ವವನ್ನು ಬೋಧಿಸಿ. ಉಕಾರವು ಅವಧಾರಣವನ್ನು ಯಾವಾಗ ಬೋಧಿಸಿತೋ, ಆಗ ಮಕಾರವಾಚ್ಯಜೀವನು, ಆಯ ಏವ ಎಂದಾಗುವದರಿಂದ ಶೇಷತ್ವವೇ ಈ ಜೀವನಿಗೆ ಸದಾ ಸ್ವಾಭಾವಿಕವಾದುದು ಎಂಬರ್ಥವು ಏರ್ಪಡುತ್ತದೆ. ಆದುದರಿಂದ ಈ ಅಯೋಗ ವ್ಯವಚ್ಛೇದವೂ ಅರ್ಥವಾಗಿಯೇ ವ್ಯಕ್ತವೆಂಬ ಭಾವವು.

ಮುಂದೆ, ಈ ಆಯೋಗ ವ್ಯವಚ್ಛೇದಾರ್ಥದಿಂದ ಆಗುವ ಪ್ರಯೋಜನವೇನೆಂಬುದನ್ನು ಉಪಪಾದಿಸಿ ಹೇಳುತ್ತಾರೆ. ಚಿದಚಿದೆಲ್ಲವೂ ಭಗವಚ್ಛರೀರವಾಗಿ ಭಗವಂತನಿಗೆ ಅಪೃಥಕ್ಸಿದ್ಧ ವಿಶೇಷಣವೆಂದು ಪ್ರಧಾನ ಪ್ರತಿತನ್ತ್ರಾಧಿಕಾರದಲ್ಲಿ ಹೇಳಿದ ನಮ್ಮ ಸಿದ್ಧಾನ್ತಕ್ಕೆ ಮುಖ್ಯ ತಳಹದಿಯಾಗಿರುವ ಅರ್ಥವು ಲಭಿಸುದೆಂದು ಹೇಳುತ್ತಾರೆ.—ಇಶ್ಶೇಷತ್ವಾಯೋಗವ್ಯವಚ್ಛೇದತ್ತಾಲೇ- ಈಮೇಲೆಉಪ

**ಯೋಗವ್ಯವಚ್ಛೇದತ್ತಾಲೇ ಈಶ್ವರನುಕ್ಕು ಪೃಥಕ್ಸಿದ್ಧ್ಯನರ್ಹ ವಿಶೇಷಣ ಮಾಯ್ ತ್ತೋತ್ತಿನ ಚೇತನ ದ್ರವ್ಯತ್ತುಕ್ಕುಮ್ ಅಚಿತ್ತುಕ್ಕುಪ್ಪೋಲೇ ಶರೀರತ್ವಂ ಪ್ರಕಾಶಿತಮ್.**

---

ಪಾದಿಸಿದ ರೀತಿಯಲ್ಲಿ ಉಂಟಾಗುವ ಶೇಷತ್ವದ ಅಯೋಗವ್ಯವಚ್ಛೇದದಿಂದ, ಎಂದರೆ ಶೇಷತ್ವವು ಸಾರ್ವಕಾಲಿಕವಾದುದು ಎಂಬುದರಿಂದ, **ಈಶ್ವರನುಕ್ಕು** - ಸರ್ವೇಶ್ವರ ನಿಗೆ, **ಪೃಥಕ್ಸಿದ್ಧ್ಯನರ್ಹವಿಶೇಷಣಮಾಯ್** - ಶೇಷತ್ವವು ಸದಾ ಇರುವದರಿಂದ ಎಂದಿಗೂ ಬೇರೆಯಾಗಿರಲು ಸಾಧ್ಯವಿಲ್ಲದ ವಿಶೇಷಣವಾಗಿ, ಎಂದರೆ ಸರ್ವದಾ ಅಪೃಥ ಕ್ಸಿದ್ಧವಿಶೇಷಣವಾಗಿ, **ತೋತ್ತಿನಚೇತನ ದ್ರವ್ಯತ್ತುಕ್ಕುಮ್**-ತೋರಿಬರುವ ಚೇತನ ದ್ರವ್ಯಕ್ಕೂ, **ಅಚಿತ್ತುಕ್ಕುಪ್ಪೋಲೆ**-ಅಚಿತ್ತು ಹೇಗೆ ಅಪೃಥಕ್ಸಿದ್ಧ ವಿಶೇಷಣವಾಗಿ ನಮಗೆ ಶರೀರವೋ ಹಾಗೆ, ಅಥವಾ ಪರಮಾತ್ಮನಿಗೆ ಶರೀರವೋ ಹಾಗೆ **ಶರೀರತ್ವಂ**- ಪರಮಾತ್ಮನಿಗೆಶರೀರವಾಗಿರುವ ಭಾವವು, **ಪ್ರಕಾಶಿತಮ್**- ಮೂಲಮನ್ತ್ರದ ಉಕಾರಾ ರ್ಥದಿಂದ ಪ್ರಕಾಶಿಸಲ್ಪಟ್ಟಿತು. ಮೂಲಮನ್ತ್ರದ ಪ್ರಣವದಲ್ಲಿ ಶರೀರಶರೀರಿಭಾವವು ವ್ಯಕ್ತವೆಂದು ಹಿಂದೆಯೇ ಪ್ರಧಾನ ಪ್ರತಿತಂತ್ರಾಧಿಕಾರದ ಆದಿ ಶ್ಲೋಕದಲ್ಲಿ **ಆದಿ ಕರ್ತೃವಿನ ಶರೀರವು ಈ ವಿಶ್ವವೆಲ್ಲಾ** ಎಂಬುದು **ವ್ಯಾಪಕಾದರ್ಶದೃಷ್ಟೇಭಗವತಿ** ಎಂಬಲ್ಲಿತೋರಿಬರುತ್ತದೆಂದುಉಪದೇಶಿಸಿರುತ್ತಾರೆ. ಜೀವನಿಗೆಶೇಷತ್ವವಿರುವುದರಿಂದ ಅಪೃಥಗ್ವಿಶೇಷಣತ್ವವೂ ಶರೀರತ್ವವೂ ಪ್ರಾಪ್ತವಾಗುತ್ತದೆಂದು ಶ್ರೀ ಯತಿವರ್ಯರೂ **"ಯಸ್ಯಚೇತನಸ್ಯ ಯದ್ದ್ರವ್ಯಂಶೇಷತೈಕರೂಪಂ, ತತ್ತಸ್ಯಶರೀರಮ್"** ಎಂಬಲ್ಲಿ ಉಪಪಾದಿಸಿರುತ್ತಾರೆ. ೨೫೪-೫ ನೆಯ ಪುಟವನ್ನು ನೋಡಿ. ಈ ಅಯೋಗ ವ್ಯವಚ್ಛೇದದಿಂದ ತೋರಿಬರುವ ಅರ್ಥವು ತಾನು ಪರಮಾತ್ಮನಿಗೆ ಶೇಷನು ಎಂಬ ಸಂಬಂಧವು ಎಂದಿಗೂ ತಪ್ಪದಿರುವ ಸಂಬಂಧವೆಂಬ ಭಾವವು. ಆದುದರಿಂದ ಅಪೃಥಕ್ಸಿದ್ಧ ವಿಶೇಷಣವಾಗಿ ಪರಮಾತ್ಮನಿಗೆ ತಾನು ಶರೀರವೆಂಬ ಭಾವವು ಏರ್ಪಟ್ಟಿತೆಂಬ ಭಾವವು. **ಅಪೃಥಕ್ಸಿದ್ಧ ವಿಶೇಷಣಮಾನ ಚೇತನ ದ್ರವ್ಯತ್ತುಕ್ಕು** ಎಂಬಲ್ಲಿ ದ್ರವ್ಯತ್ತುಕ್ಕು ಎಂದು ಹೇಳಿರುವದಕ್ಕೆ ಕಾರಣವೇನೆಂದರೆ ಪರಮ ಪುರುಷನಿಗೆ ಅಪೃಥಕ್ಸಿದ್ಧಗಳಾದ ಕಲ್ಯಾಣಗುಣಗಳಿವೆ, ಅವು ದ್ರವ್ಯವಲ್ಲದೆ ಅದ್ರವ್ಯವಾದುದರಿಂದ ದ್ರವ್ಯತ್ತುಕ್ಕು ಎಂಬ ಪ್ರಯೋಗವು.

### ಮಕಾರಾರ್ಥವನ್ನು ಹೇಳುತ್ತಾರೆ

ಹಿಂದೆ ಅ, ಉಕಾರಗಳ ಅರ್ಥವನ್ನು ಉಪಪಾದಿಸಿ ಹೇಳಿದರು; ಈಗ **ಮಕಾ** ರದ ಅರ್ಥವನ್ನು ಹೇಳುತ್ತಾರೆ.—**ತೃತೀಯಾಕ್ಷರಂ** - ಮೂರನೆಯ ಅಕ್ಷರವಾದ ಮಕಾರವು, **ಇಜ್ಜು** - ಈ ಪ್ರಕರಣವಾದ ಪ್ರಣವಾರ್ಥ ನಿರ್ಣಯದಲ್ಲಿ, **ಅವ ಶ್ಯಾನುಸಂಧೇಯಮಾನ** - ಮುಖ್ಯವಾಗಿ ಅನುಸಂಧಾನ ಮಾಡಬೇಕಾದ,

## ಮಕಾರಾರ್ಥವಿಚಾರ.

**ತೃತೀಯಾಕ್ಷರ ವಿಙ್ಙು ಅವಶ್ಯಾನುಸಂಧೇಯ. ಸಾನ ಜೀವನೈ ಮುನ್ನಿಟ್ಟು (ಮುನ್ನಾಗ) ಕ್ಕೊಂಡು ಉಕ್ತಮಾನ ಶೇಷತ್ವತ್ತುಕ್ಕು ಆಶ್ರಿತಮಾನ ಸರ್ವತ್ತೈಯುಮುಪಲಕ್ಷಿಕ್ಕಿರದು.**

---

**ಜೀವನೈಮುನ್ನಿಟ್ಟುಕೊಂಡು** - ಜೀವಾತ್ಮನನ್ನು ಮುಖ್ಯವಾಗಿ ಉದ್ದೇಶಿಸಿ, **ಉಕ್ತಮಾನ** - ಲುಪ್ತಚತುರ್ಥಿಯಿಂದ ಹೇಳಲ್ಪಟ್ಟ, **ಶೇಷತ್ವತ್ತುಕ್ಕು** - ಶೇಷಭಾವಕ್ಕೆ, **ಆಶ್ರಿತಮಾನ** - ಸಂಬಂಧಿಸಿದ, **ಸರ್ವತ್ತೈಯುಮ್** - ಸಮಸ್ತಚೇತನಾ ಚೇತನ ವರ್ಗವನ್ನೆಲ್ಲಾ, **ಉಪಲಕ್ಷಿಗಿರದು** – ಉಪಲಕ್ಷಣವಾಗಿ ಹೇಳುತ್ತದೆ. ಆಯ ಎಂಬುದರಿಂದ ಶೇಷತ್ವವು ವ್ಯಕ್ತವು. ಯಾವಾಗ ಶೇಷತ್ವವು ಹೇಳಲ್ಪಟ್ಟಿತೋ, ಶೇಷಭೂತವಾಗಿರುವ ಪರಾಪ್ರಕೃತಿಯಾದ ಚೇತನ ವರ್ಗವೆಲ್ಲವೂ ಹೇಳಲ್ಪಟ್ಟಿತು ; ಮತ್ತು ಅದರೊಂದಿಗೆ ಸೇರಿರುವ ಅಪರಾಪ್ರಕೃತಿಯಾದ ಅಚೇತನ ವರ್ಗವೂ ಸಹ ಉಪಲಕ್ಷಣರೂಪದಲ್ಲಿ ಹೇಳಲ್ಪಟ್ಟಿತೆಂಬ ತಾತ್ಪರ್ಯವು. ಪರಮಾತ್ಮನಿಗೆ ಶೇಷಭೂತವಾಗಿ ಆತನಿಗೆ ಅಪೃಥಕ್ಸಿದ್ಧ ವಿಶೇಷಣ ರೂಪವಾಗಿರುವ ಸಮಸ್ತ ಚಿದಚಿದ್ವರ್ಗವೆಲ್ಲಾ ಈ ಮಕಾರಶಬ್ದದಿಂದ ಹೇಳಲ್ಪಟ್ಟವೆಂಬ ತಾತ್ಪರ್ಯವು; ಚೇತನ ವರ್ಗವೂ ಶಾಬ್ದವಾಗಿ ಹೇಳಲ್ಪಟ್ಟದುದರಿಂದ ಉಪಲಕ್ಷಣವಾಗಿ ಚೇತನ ವರ್ಗದೊಂದಿಗೆ ಸೇರಿರುವ ಅಚೇತನ ವರ್ಗವೂ ಅರ್ಥವಾಗಿ ಬೋಧಿತವೆಂಬ ಭಾವವು. ಅಚಿತ್ತಿಗೂ ಕೂಡ ಉಪಲಕ್ಷಣವೆಂದು ಹೇಳಲು ಕಾರಣವೇನೆಂದರೆ ಗೀತಾ ೭ನೆಯ ಅಧ್ಯಾಯದ ೪-೫ನೆಯ ಶ್ಲೋಕಗಳಲ್ಲಿನ ಅಭಿಪ್ರಾಯಗಳನ್ನನುಸರಿಸಿ ಹೇಳಿರುತ್ತಾರೆ—“ಭೂಮಿ ರಾಪೋ ನಲೋ ವಾಯುಃ ಖಂ ಮನೋ ಬುದ್ಧಿ ರೇವ ಚ । ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿ ರಷ್ಟಧಾ.”

ಎಂಬುದರಿಂದ ೨೪ ತತ್ವಗಳನ್ನೂ ಎಂಟಾಗಿ ವಿಂಗಡಿಸಿ ಹೇಳಿ,

“ಅಪರೇ ಯಮಿತ ಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ । ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥

ಹೀಗೆ ಜೀವವರ್ಗಕ್ಕೆ ಅಚಿತ್ಸಂಸರ್ಗ ಉಂಟೆಂದು ಹೇಳಿ ಅನಂತರ ಮುಂದೆ ಮಯಿ ಸರ್ವ ಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ”(ಗೀ. ೭. ೭)ಎಂದು ಇವೆರಡೂ ಪರಮ ಪುರುಷನಾದ ನನಗೆ ಅಪೃಥಕ್ಸಿದ್ಧ ವಿಶೇಷಣವಾಗಿ, ಶರೀರವಾಗಿರುವದರಿಂದ ಶೇಷತ್ವವು ಚನ್ನಾಗಿ ಉಪಪಾದಿಸಲ್ಪಟ್ಟಿರುತ್ತದೆ. ಇವುಗಳು ಈ ಸಂದರ್ಭದಲ್ಲಿ ಅನುಸಂಧೇಯಗಳು. ಮುಂದೆ, ಮಕಾರವು ಧಾತುವ್ಯುತ್ಪತ್ತಿಯ ಮೂಲಕ ಜ್ಞಾತಾವಾದ ಜೀವಾತ್ಮನನ್ನು ಬೋಧಿಸುತ್ತದೆಂದು ಹೇಳುತ್ತಿರುವುದರಿಂದ ಜೀವನೈಮುನ್ನಿಟ್ಟುಕೊಂಡು ಎಂಬ ಪ್ರಯೋಗವು. ಚೇತನವರ್ಗವು

## ಮಕಾರಸ್ಯ ಜೀವವಾಚಕತ್ವೇ ಪ್ರಮಾಣಾನಿ.

ಇದು ಜೀವಾತ್ಮವಾಚಕವೆನ್ನುವಿಡವ್ (೧) "ಮಕಾರಂ ಜೀವಭೂತಂ

---

ಹೇಳಲ್ಪಟ್ಟರೆ ಜೀವನಿಗೆ ಶೇಷಭೂತವಾದ ಅಚೇತನವರ್ಗವೂ ಉಪಲಕ್ಷಣವಾಗಿ ಹೇಳಲ್ಪಡಬೇಕೆಂಬುದೇನು? ಪರಮಾತ್ಮನ ಕಲ್ಯಾಣಗುಣಗಳೂ ಪರಮಾತ್ಮನಿಗೆ ಶೇಷಭೂತವು; ಹಾಗಾದರೆ ಅವು ಇಲ್ಲಿ ಹೇಳಲ್ಪಟ್ಟವೇ? ಲಕ್ಷ್ಮಿಯೂ ಶೇಷಭೂತಳು; ಲಕ್ಷ್ಮಿಯು ಇಲ್ಲಿ ಹೇಳಲ್ಪಟ್ಟಳೇ? ಎಂದರೆ ಹಾಗಲ್ಲವು, **ಯಯೇದಂ ಧಾರ್ಯತೇ ಜಗತ್" ಎಂಬಲ್ಲೂ "ನಿತ್ಯಂ ಸರ್ವಗತಃ"** (ಗೀ. ೨. ೨೪) ಎಂಬಲ್ಲೂ ಹೇಳಿರುವ ಹಾಗೆ, ಚಿದಚಿತ್ತುಗಳು ಒಟ್ಟಿಗೇ ಇರುವದರಿಂದ, ಜೀವವರ್ಗವು ಶೇಷಭೂತವೆಂದು ಯಾವಾಗ ಹೇಳಲ್ಪಟ್ಟಿತೋ, ಅದರೊಂದಿಗಿರುವ ಅಚೇತನ ವರ್ಗವೂ ಹೇಳಲ್ಪಟ್ಟಿತೆಂದು ತಿಳಿಸುವುದಕ್ಕಾಗಿಯೇ, **ಸರ್ವತ್ರೈಯು ಮುಪಲಕ್ಷಕಿರದು** ಎಂಬ ಪ್ರಯೋಗವು. ಹೀಗೆ ಉಪಲಕ್ಷಣವಾಗಿರುವದಕ್ಕೆ ಒಂದು ನ್ಯಾಯವನ್ನು ಶಾಸ್ತ್ರಜ್ಞರು ಹೇಳುತ್ತಾರೆ. ಅದಕ್ಕೆ ಛತ್ರಿನ್ಯಾಯವೆಂದು ಹೆಸರು; ಎಂದರೆ ಛತ್ರಿಯವರು ಹೋಗುತ್ತಾರೆಂದು ಒಬ್ಬನು ಛತ್ರಿಯನ್ನು ಹಿಡಿದಿದ್ದರೂ ಹೇಳುವದುಂಟು. ಇಲ್ಲಿ ಛತ್ರಿ ಹಿಡಿಯದೇ ಇದ್ದವರೂ ಕೂಡ ಉಪಲಕ್ಷಣ ರೀತ್ಯಾ ಹೇಗೆ ಉದ್ದೇಶ್ಯರೋ, ಹಾಗೆಯೇ, ಮಕಾರದಿಂದ ಮನ ಜ್ಞಾನೇ ಎಂಬ ಧಾತುವಿನ ಮೂಲಕ ಜ್ಞಾನವಿರುವ ಚೇತನ ವರ್ಗಮಾತ್ರವೇ ಬೋಧಿತವಾದರೂ ಅದರೊಂದಿಗೆ ಜ್ಞಾನವಿಲ್ಲದ ಅಚಿದ್ವರ್ಗವೂ ಉಪಲಕ್ಷಣವಾಗಿ ಬೋಧಿತವು. ಹಾಗೆಯೇ ಪರಮಾತ್ಮನಿಗೆ ಶೇಷಭೂತರಾಗಿರುವ ಲಕ್ಷ್ಮಿಯೂ ಕಲ್ಯಾಣ ಗುಣಗಳೂ ಇಲ್ಲಿ ಏಕೆ ಬೋಧಿತವಲ್ಲವೆಂದರೆ ಇವೆಲ್ಲವೂ ಜೀವಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣಗಳಲ್ಲವು. ಆದುದರಿಂದ **ಸರ್ವತ್ರೈಯುಮ್ ಉಪಲಕ್ಷಿಗಿರದು** ಎಂಬ ಪ್ರಯೋಗದಲ್ಲಿ ಸರ್ವಶಬ್ದವು ಜೀವಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣವಾದ ಸರ್ವವೆಂದು ಸಂಕೋಚಮಾಡಿ ಹೇಳತಕ್ಕದ್ದು.

### ಮಕಾರವು ಜೀವಾತ್ಮನನ್ನು ಬೋಧಿಸುತ್ತದೆಂಬುದಕ್ಕೆ ಪ್ರಮಾಣಗಳು.

ಹಿಂದೆಯೇ "ಮಕಾರಸ್ತು ತಯೋರ್ದಾಸಃ" ಎಂಬ ಶ್ರುತಿಪ್ರಮಾಣವನ್ನೇ ಉದಾಹರಿಸಿದರು. ಇನ್ನೂ ಇತರ ಪ್ರಮಾಣಗಳೂ ಉಂಟೆಂದು ಉದಾಹರಿಸುತ್ತಾರೆ.—ಇದು ಈ ಮಕಾರವು, ಜೀವಾತ್ಮವಾಚಕ ವೆನ್ನುವಿಡವ್ - ಜೀವಾತ್ಮನನ್ನು ಬೋಧಿಸುತ್ತದೆ ಎಂಬ ಸಂದರ್ಭವು (೧) ಜೀವಭೂತಾಂ -

**ತು ಶರೀರೇ ವ್ಯಾಪಕಂ ನ್ಯಸೇತ್" ಎನ್ನುವ್, (೨) "ಪಂಚಾರ್ಣಾನಾಂ ತು ಪಂಚಾನಾಂ ವರ್ಗಾಣಾಂ ಪರಮೇಶ್ವರಃ । ಸಂಸ್ಥಿತಃ ಕಾದಿಮಾಂತಾನಾಂ ತತ್ತ್ವಾತ್ಮತ್ವೇನ ಸರ್ವದಾ" ಎನ್ನುವ್, (೩) ಭೂತಾನಿಚ ಕವರ್ಗೇಣ ಚವರ್ಗೇಣೇನ್ದ್ರಿಯಾಣಿಚ । ಟವರ್ಗೇಣ ತವರ್ಗೇಣ ಜ್ಞಾನಗಂಧಾದಯಸ್ತಥಾ । ಮನಃಪಕಾರೇಣೈವೋಕ್ತಂಫಕಾರೇಣ ತ್ವಹಂಕೃತಿಃ । ಬಕಾರೇಣ ಭಕಾರೇಣ ಮಹಾನ್ ಪ್ರಕೃತಿ ರುಚ್ಯತೇ । ಆತ್ಮಾತು ಸಮಕಾ (ರೇಣ)**

---

ಜೀವವಾಚಕನಾದ, **ಮಕಾರಂತು** – ಮಕಾರವನ್ನಾದರೋ, **ಶರೀರೇ** - ಶರೀರದಲ್ಲಿ **ವ್ಯಾಪಕಂ ನ್ಯಸೇತ್** – ಅಙ್ಗನ್ಯಾಸಾದಿಗಳಲ್ಲಿ - ವ್ಯಾಪಕ ನ್ಯಾಸವನ್ನು ಮಾಡತಕ್ಕದ್ದು" ಎನ್ನುವ್ - ಎಂದೂ, "**ಪಂಚಾರ್ಣಾನಾಂ** - ಐದು ಅಕ್ಷರಗಳುಳ್ಳ, **ಕಾದಿಮಾಂತಾನಾಂ** - ಕಕಾರ ಮೊದಲುಗೊಂಡು ಮಕಾರಾಂತದವರೆಗೂ ಇರುವ ೨೫ ಅಕ್ಷರಗಳುಳ್ಳ, **ಪಂಚಾನಾಂವರ್ಗಾಣಾಂ** - ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗಗಳೆಂಬ ಐದು ವರ್ಗಗಳಿಗೂ, **ತತ್ತ್ವಾತ್ಮತ್ವೇನ** – ಈ ಇಪ್ಪತ್ತೈದು ವರ್ಣಗಳಿಂದ ಬೋಧಿಸಲ್ಪಟ್ಟ ಇಪ್ಪತ್ತೈದು ತತ್ವಗಳಿಗೂ ಆತ್ಮನಾಗಿ, **ಸರ್ವದಾ** - ಯಾವಾಗಲೂ, **ಪರಮೇಶ್ವರಃ** – ಸರ್ವ ಶ್ರೇಷ್ಠನಾದ ಸರ್ವೇಶ್ವರನು, **ಸಂಸ್ಥಿತಃ** - ಪ್ರತಿಷ್ಠಿತನಾಗಿರುತ್ತಾನೆ. ಇಲ್ಲಿ **ಕಕಾರದಿಂದ ಮಕಾರದವರೆಗೂ** ೨೫ ಅಕ್ಷರಗಳಿವೆ; ಇವು ಇಪ್ಪತ್ತೈದು, ಇಪ್ಪತ್ತೈದು ತತ್ವಗಳನ್ನೂ ಬೋಧಿಸುತ್ತವೆ; ಇವೆಲ್ಲವೂ ಸರ್ವೇಶ್ವರನಿಗೆ ಶರೀರವು; ಇವಕ್ಕೆಲ್ಲಾ ಆತನು ಆತ್ಮ ಎಂದು ಹೇಳಲ್ಪಟ್ಟಿತು. ಇವುಗಳಲ್ಲಿ ೨೪ ತತ್ವಗಳೆಲ್ಲಾ ಅಚಿತ್ತತ್ವಗಳು ; ಪ್ರಕೃತಿಯೂ ಅದರ ವಿಕೃತಿಗಳೂ; ೨೫ನೆಯ ಅಕ್ಷರವಾದ ಮಕಾರವು ೨೫ನೆಯ ತತ್ತ್ವವಾದ ಜೀವಾತ್ಮನನ್ನು ಬೋಧಿಸುತ್ತದೆಂಬುದು ಶ್ಲೋಕ ತಾತ್ಪರ್ಯವು" ಎನ್ನುವ್ - ಎಂಬದಾಗಿಯೂ, **ಕವರ್ಗೇಣ** - ಕವರ್ಗದ ಐದು ಅಕ್ಷರಗಳಿಂದ, **ಭೂತಾನಿಚ** - ಪೃಥಿವಿ, ಅಪ್ಪುಮೊದಲಾದ ಪಂಚಭೂತಗಳು, **ಚವರ್ಗೇಣ** - ಚವರ್ಗದ ಐದು ಅಕ್ಷರಗಳಿಂದ, **ಇನ್ದ್ರಿಯಾಣಿಚ**-ವಾಕ್‌ಪಾಣಿ ಪಾದ ಪಾಯೂಪಸ್ಥಗಳಾದ ಐದು ಕರ್ಮೇಂದ್ರಿಯಗಳು, **ಟವರ್ಗೇಣ ತವರ್ಗೇಣ** - ಟವರ್ಗ ತವರ್ಗಗಳಿಂದ, **ಜ್ಞಾನಗಂಧಾದಯಸ್ತಥಾ** - ಜ್ಞಾನ ಎಂದರೆ ಪಂಚ ಜ್ಞಾನೇಂದ್ರಿಯಗಳು ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವಾಘ್ರಾಣಗಳು, ಶಬ್ದ ಗಂಧ ರಸಾದಿಗಳು, **ಪಕಾರೇಣ ಮನಃ** – ಪಕಾರದಿಂದ ಮನಸ್ಸು, **ಫಕಾರೇಣಾಹಂಕೃತಿಃ** – ಫಕಾರದಿಂದ ಅಹಂಕಾರತತ್ವವೂ, **ಬಕಾರೇಣ ಭಕಾರೇಣ** - ಬಕಾರ ಭಕಾರಗಳಿಂದ, **ಮಹಾನ್ ಪ್ರಕೃತಿ ರುಚ್ಯತೇ** - ಮಹತ್ತಾದ ಪ್ರಕೃತಿಯೂ ಹೇಳ

---

(೨) ತತ್ವಸಂಹಿತೆ. (೩) ಪಾದ್ಮೋತ್ತರ. ೪. ೨೫-೨೭.

**ರೋಽಯಂ ಪಂಚವಿಂಶಃ ಪ್ರಕೀರ್ತಿತಃ" ಎನ್ರುಮ್ ತತ್ವಸಾಗರ ಸಂಹಿತಾದಿಗಳಿಲೇ ಪಂಚವಿಂಶತಿ ತತ್ವಙ್ಗಳುಕ್ಕುಮ್ ಕಕಾರಂ ಮುದಲಾನ ಇರುಪತ್ತೈನ್ದು ಅಕ್ಷರಙ್ಗಳುಮ್ ವಾಚಕಙ್ಗಳಾಗ ವಗುತ್ತು ಚೊಲ್ಲುಗೈಯಾಲೇ ಸಿದ್ಧಮ್.**

---

ಲ್ಪಡುವುವು. ಆತ್ಮಾಸು - ಆ ಜೀವಾತ್ಮನಾದರೋ, **ಮಕಾರೇಣ** - ಮಕಾರದಿಂದ, **ಪಂಚವಿಂಶಃ** - ಇಪ್ಪತ್ತೈದನೆಯ ತತ್ವವೆಂದು ಹೊಗಳಲ್ಪಟ್ಟಿರುತ್ತಾನೆ" **ಎನ್ರುಮ್** - ಎಂಬದಾಗಿಯೂ, ತತ್ವಸಾಗರ ಸಂಹಿತಾದಿಗಳಲ್ಲಿ, **ಪಂಚವಿಂಶತಿ ತತ್ತ್ವಙ್ಗಳುಕ್ಕುಮ್** - ೨೫ ತತ್ತ್ವಗಳಿಗೂ, **ಕಕಾರ ಮುದಲಾನ** - ಕಕಾರ ಮೊದಲುಗೊಂಡು, **ಇರುಪತ್ತೈನ್ದು ಅಕ್ಷರಙ್ಗಳುಮ್** - ಮಕಾರವೂ ಸೇರಿ ೨೫ ಅಕ್ಷರಗಳೂ, **ವಾಚಕಙ್ಗಳಾಗ** - ಬೋಧಕಗಳಾಗಿ, **ವಗುತ್ತು ಚೊಲ್ಲುಗೈಯಾಲೇ** - ವಿಭಾಗಿಸಿ ಹೇಳಿರುವದರಿಂದ, **ಸಿದ್ಧಮ್** - ಸ್ಥಾಪಿತವು; ಇದಕ್ಕೆ ಕರ್ತೃಪದವು, ಅದಿಯಲ್ಲಿ ಇದು ಜೀವಾತ್ಮವಾಚಕ ಮೆನ್ನುಮಿಡಮ್ ಎಂದು ಇದೆ. ಆದುದರಿಂದ ಮಕಾರವು ೨೫ನೆಯ ತತ್ವವಾದ ಜೀವಾತ್ಮನನ್ನು ಬೋಧಿಸುತ್ತದೆಂಬುದು ತಾತ್ಪರ್ಯವು. ಕವರ್ಗದ ಐದು ಅಕ್ಷರಗಳೂ ಕ ಖ ಗ ಘ ಙ ಎಂಬವು ಪಂಚಭೂತಗಳನ್ನೂ, ಹಾಗೆಯೇ ಚವರ್ಗದ ಐದು ಅಕ್ಷರಗಳೂ ಪಂಚ ಕರ್ಮೇಂದ್ರಿಯಗಳನ್ನೂ, ಟವರ್ಗದ ಐದು ಅಕ್ಷರಗಳು ಪಂಚಜ್ಞಾನೇಂದ್ರಿಯಗಳನ್ನೂ, ತವರ್ಗದ ಐದು ಅಕ್ಷರಗಳೂ ರೂಪರಸಗಂಧ ಸ್ಪರ್ಶಶಬ್ದಗಳಾದ ಪಂಚತನ್ಮಾತ್ರೆಗಳನ್ನೂ, ಪಕಾರವು ಮನಸ್ಸನ್ನೂ, ಫಕಾರವು ಅಹಂಕಾರವನ್ನೂ ಬಕಾರವು ಮಹತ್ತತ್ವವನ್ನೂ, ಭಕಾರವು ಪ್ರಕೃತಿಯನ್ನೂ, ಹೀಗೆ ೨೪ ಅಚಿತ್ತತ್ವಗಳನ್ನು ಬೋಧಿಸುತ್ತವೆ. ೨೫ನೆಯ ಅಕ್ಷರವಾದ ಮಕಾರವು ಜೀವ ತತ್ವವನ್ನು ಬೋಧಿಸುತ್ತದೆ. ಈ ೨೫ ತತ್ವಗಳೂ ತತ್ವತ್ರಯಾಧಿಕಾರದಲ್ಲಿ ನಿರೂಪಿಸಲ್ಪಟ್ಟವೆ. ೫೩ನೆಯ ಪುಟವನ್ನು ಪರಾಂಬರಿಸಿ. ಶ್ರೀ ವೇದವ್ಯಾಸರು ಜೀವನನ್ನು ಪಂಚವಿಂಶಕ ತತ್ವವೆಂದೂ ಪರಮಾತ್ಮ ತತ್ವವನ್ನು ಷಡ್ವಿಂಶವೆಂದೂ ಹೇಳಿರುತ್ತಾರೆ. ಹೀಗೆ ತತ್ವತ್ರಯದಲ್ಲಿ ಸೇರಿರುವದು ೨೬ ತತ್ವಗಳು.

ಹೀಗೆ ಅಚಿತ್ತತ್ವಗಳು ಕಕಾರದಿಂದ ಹಿಡಿದು ಭಕಾರಾಂತ್ಯದವರಿಗೂ ಹೇಳಲ್ಪಟ್ಟು ೨೫ನೆಯ ಅಕ್ಷರವಾದ ಮಕಾರದಿಂದ ೨೫ನೆಯ ತತ್ವವಾದ ಜೀವಾತ್ಮನು ಪೃಥಕ್ಕಾಗಿ ಹೇಳಿರುವದರಿಂದ, ಮಕಾರ ವಾಚ್ಯನು ಅಚಿತ್ತತ್ವಕ್ಕಿಂತ ವಿಲಕ್ಷಣನೆಂದೂ, ಹೇಳಲ್ಪಟ್ಟಿರುತ್ತದೆ.

ಹೀಗೆ ಮಕಾರವಾಚ್ಯನು ಜೀವನೆಂಬುದು ಸ್ಥಾಪಿತವಾದನಂತರ, ಆದರಿಂದ ಜೀವಾತ್ಮನು, ಪ್ರಕೃತಿಗಿಂತ ವಿಲಕ್ಷಣನೆಂಬುದೂ, ಪರಮಾತ್ಮನಿಗಿಂತ ಬೇರೆಯಾದವನೆಂಬುದೂ ಸಿದ್ಧವೆಂದು ಹೇಳುತ್ತಾರೆ. **ಇತ್ತಾಲ್** - ಹೀಗೆ ಮಕಾರವಾಚ್ಯನು

**ಇತ್ತಾಲ್ ಜಡತ್ವಾಚೇತನತ್ವಾದಿ ದೋಷಾಶ್ರಯಙ್ಗಳಾನ ಇರಪತ್ತು ನಾಲು ತತ್ತ್ವಙ್ಗಳೈ ಕಾಟ್ಟಿಲುಮ್, ಸರ್ವಕಾರಣನುಮಾಗವುಮ್, ಸರ್ವರಕ್ಷಕನಾಗವುಮ್, ಸರ್ವಶೇಷಿಯಾಗವುಮ್ ಪ್ರಥಮಾಕ್ಷರತ್ತಿಲ್ ತೋತ್ತಿನ ಷಡ್ವಿಂಶನಿಲ್ ಕಾಟ್ಟಿಲುಮ್ ಜೀವಾತ್ಮಾವುಕ್ಕು ವೇರುಪಾಡು ಸಿದ್ಧಿತ್ತದು.**

---

ಜೀವಾತ್ಮನೆಂದಾದನಂತರ, **ಜಡತ್ವಾಚೇತನತ್ವಾದಿ ದೋಷಾಶ್ರಯಙ್ಗಳಾನ** - ಜಡತ್ವವೆಂದರೆ ಜ್ಞಾನಸ್ವರೂಪವಿಲ್ಲದಿರೋಣವು, ಅಚೇತನತ್ವವೆಂದರೆ ಜ್ಞಾನಾಶ್ರಯತ್ವವಿಲ್ಲದಿರುವಿಕೆಯು, ಆದಿಶಬ್ದದಿಂದ ಸ್ವರೂಪಸ್ವಭಾವಗಳ ವಿಕಾರವೂ, ಇಂತಹ ದೋಷಗಳಿಗೆ ಆಶ್ರಯಗಳಾದ, **ಇರಪತ್ತುನಾಲ್ಕು ತತ್ತ್ವಙ್ಗಳೈ ಕಾಟ್ಟಿಲುಮ್** - ಇಪ್ಪತ್ತುನಾಲ್ಕುವಿಧ ಅಚಿತ್ತತ್ತ್ವಗಳಿಗಿಂತಲೂ, ಇಪ್ಪತ್ತುನಾಲ್ಕು ಅಚಿತ್ತತ್ತ್ವಗಳು ಯಾವುವೆಂಬುದಕ್ಕೆ ೫೩ನೆಯ ಪುಟವನ್ನು ನೋಡಿ. **ಜೀವಾತ್ಮಾವುಕ್ಕು** - ಜೀವಾತ್ಮನಿಗೆ, **ವೇರುಪಾಡು** - ಪ್ರತ್ಯಕ್ತ್ವ, ಚೇತನತ್ವ, ಸ್ವರೂಪನಿತ್ಯತ್ವಗಳಿರುವದರಿಂದ ಅಚಿತ್ತಿಗಿಂತ ವಿಲಕ್ಷಣನಾಗಿರುವದು, **ಸಿದ್ಧಿತ್ತದು** - ಸಿದ್ಧವಾಯಿತು ; ಮತ್ತು **ಸರ್ವಕಾರಣನುಮಾಗವುಮ್** - ಸಮಸ್ತಕ್ಕೂ ಸರ್ವವಿಧಕಾರಣನಾಗಿಯೂ ಸರ್ವರಕ್ಷಕನಾಗಿಯೂ, ಸರ್ವಶೇಷಿಯಾಗಿರುವ, **ಪ್ರಥಮಾಕ್ಷರತ್ತಿಲ್** - ಮೊದಲಿನ ಅಕ್ಷರವಾದ ಅಕಾರದಲ್ಲಿ ಕಾಣಬರುವ, **ಷಡ್ವಿಂಶನಿಲ್ ಕಾಟ್ಟಿಲ್** - ೨೬ನೆಯ ತತ್ತ್ವವೆಂದು ವ್ಯಾಸಮಹರ್ಷಿಯೇ ಮೊದಲಾದವರುಗಳಿಂದ ಹೇಳಲ್ಪಟ್ಟ ಪರಮಾತ್ಮನಿಗಿಂತಲೂ, **ಜೀವಾತ್ಮಾವುಕ್ಕು ವೇರುಪಾಡು**- ಜೀವಾತ್ಮನಿಗೆ ವ್ಯತ್ಯಸ್ತವಾಗಿರೋಣವು ಎಂದರೆ ಸರ್ವಕಾರಣತ್ವ ಸರ್ವರಕ್ಷಕತ್ವ ಸರ್ವಶೇಷಿತ್ವಾದಿಗಳು ಜೀವಾತ್ಮನಿಗೆ ಇಲ್ಲದುದರಿಂದ ಸರ್ವೇಶ್ವರನಿಗಿಂತ ಬೇರೆಯಾಗಿರೋಣವು, **ಸಿದ್ಧಿತ್ತದು** - ಸ್ಥಾಪಿತವಾಯಿತು. ಜೀವಾತ್ಮನು ಜ್ಞಾನಸ್ವರೂಪನಾಗಿ ಜ್ಞಾನಕ್ಕೆ ಆಶ್ರಯನಾಗಿರುವದರಿಂದ ಅಚಿತ್ತತ್ತ್ವಕ್ಕಿಂತ ವಿಲಕ್ಷಣನಾದವನು. ಹಾಗೆಯೇ ಸರ್ವೇಶ್ವರನಹಾಗೆ ಸರ್ವಕಾರಣತ್ವ, ಸರ್ವರಕ್ಷಕತ್ವ. ಸರ್ವಶೇಷಿತ್ವಗಳಾದ ಅಕಾರದಲ್ಲಿ ತೋರುವ ಅರ್ಥಗಳು ಈ ಜೀವಾತ್ಮನಲ್ಲಿಲ್ಲದುದರಿಂದ ಆತನಿಗಿಂತಲೂ ಬೇರೆಯಾದವನು. ಆದುದರಿಂದ ಈ ೨೫ನೆಯ ತತ್ತ್ವವು ೨೪ ತತ್ತ್ವಗಳಿಗಿಂತಲೂ ಮತ್ತು ೨೬ನೆಯ ತತ್ತ್ವಕ್ಕಿಂತಲೂ ಬೇರೆ ಎಂಬುದು ಸ್ಥಾಪಿತವು. ಇಲ್ಲಿ ೨೫ನೆಯ ತತ್ತ್ವವು ಜೀವಾತ್ಮನೆಂದೂ ೨೬ನೆಯ ತತ್ತ್ವವು ಪರಮಾತ್ಮನೆಂಬುದಕ್ಕೆ ಪ್ರಮಾಣವಾಗಿ "**ಅನ್ಯಶ್ಚ ರಾಜನ್ ಸ ಪರಸ್ತಥಾನ್ಯಃ ಪಂಚವಿಂಶಕಃ । ತಂ ಷಡ್ವಿಂಶಕ ಮಿತ್ಯಾಹುಃ**" ಇತ್ಯಾದಿ ಅಭಿಪ್ರೇತವು.

ಆದರೆ ಮಕಾರ ವಾಚ್ಯನಾದ ಜೀವಾತ್ಮನು ಪರಮಾತ್ಮನಿಗೆ ಶರೀರವೆಂದೂ, ಶರೀರವಾಚಕ ಪದವು ಶರೀರಿಯಾದ ಪರಮಾತ್ಮನನ್ನೂ ಬೋಧಿಸುತ್ತದೆ ಎಂದೂ

**ಇತ್ತಿರುಮನ್ತ್ರತ್ತಿಲ್ (ಇದಿಲ್) ಮಕಾರಙ್ಗಳುಮ್, ನಾರಶಬ್ದಮುಮ್, ನಿಷ್ಕರ್ಷ ವಿವಕ್ಷೈಯಾಲೇ ವಿಶೇಷಣಮಾತ್ರಪರಙ್ಗಳ್.**

---

ಹೇಳಲ್ಪಟ್ಟಿತು. ಈಗಲಾದರೆ ಈ ಮಕಾರವಾಚ್ಯನಾದ ಜೀವಾತ್ಮನು ಪರಮಾತ್ಮನಿಗಿಂತ ಬೇರೆಯಾಗಿ ಆತನಿಗೆ ಶೇಷಭೂತನೆಂದು ಉಪದೇಶಿಸಲ್ಪಟ್ಟಿತು. ಇದು ಪರಸ್ಪರ ವಿರುದ್ಧವಲ್ಲವೋ? ಮಕಾರವಾಚ್ಯನು ತಚ್ಛರೀರಕ ಪರಮಾತ್ಮನೇ ಆದರೆ, ಮಕಾರವಾಚ್ಯನು ಅಕಾರವಾಚ್ಯನಿಗೆ ಶೇಷಭೂತನು ಹೇಗೆ? ಎಂದರೆ ಸಮಾಧಾನವನ್ನು ಹೇಳುತ್ತಾರೆ— ಇತ್ತಿರುಮನ್ತ್ರತ್ತಿಲ್ - ಈ ಮೂಲ ಮನ್ತ್ರದಲ್ಲಿ ಮಕಾರಙ್ಗಳುಮ್ - ಪ್ರಣವದ ಮಕಾರವೂ, ಬಹುವಚನವಿರುವದರಿಂದ ಸಖಂಡ ನಮಸ್ಸಿನ ಮಕಾರವೂ ಸಹ, ನಾರಶಬ್ದಮುಮ್ - ನಾರಾಯಣ ಶಬ್ದದಲ್ಲಿರುವ ನಾರಶಬ್ದವೂ ಸಹ, ನಿಷ್ಕರ್ಷವಿವಕ್ಷೈಯಾಲೇ - ನಿಷ್ಕರ್ಷ ಪದಗಳನ್ನು ಬೋಧಿಸುತ್ತವೆ ಎಂದು ಭಾವಿಸಿ, ವಿಶೇಷಣಮಾತ್ರಪರಙ್ಗಳ್ - ಪರಮಾತ್ಮನಿಗೆ ವಿಶೇಷಗಳಾದ ಜೀವಾತ್ಮವರ್ಗವನ್ನೂ, ನಿತ್ಯವಸ್ತುಗಳನ್ನೂ ಮಾತ್ರ ಕ್ರಮವಾಗಿ ಹೇಳುವ ಅರ್ಥವುಳ್ಳವುಗಳು; ಇದರಿಂದ ವಿಶೇಷ್ಯನಾದ ಪರಮಾತ್ಮನನ್ನು ಬೋಧಿಸುತ್ತವೆ ಎಂದು ಭಾವಿಸತಕ್ಕದ್ದಲ್ಲವು. ಮೇಲೆ ಹೇಳಿದ ಪೂರ್ವಪಕ್ಷವು ಈ ಪದಗಳು ತಚ್ಛರೀರಕನಾಗಿ ವಿಶೇಷ್ಯನಾದ ಪರಮಾತ್ಮನನ್ನೂ ಅನಿಷ್ಕರ್ಷೆಯಿಂದ ಬೋಧಿಸುತ್ತವೆ ಎಂದು ಭಾವಿಸಿದರೆ ಉಂಟಾಗುತ್ತದೆ. ಹಾಗಲ್ಲದೆ ಪರಮಾತ್ಮನಿಗೆ ವಿಶೇಷಣಗಳಾಗಿರುವ ಭಾವವನ್ನು ಬೋಧಿಸುತ್ತವೆ ಎಂದರೆ ಇಂತಹ ಆಕ್ಷೇಪಕ್ಕೆ ಕಾರಣವಿಲ್ಲವಾಗುವದರಿಂದ ಮಕಾರಗಳೂ ನಾರಶಬ್ದವೂ ವಿಶೇಷಣವಾಗಿರುವ ಭಾವವನ್ನು ಬೋಧಿಸುತ್ತವೆ ಎಂಬುದು ತಾತ್ಪರ್ಯವು. ಶಬ್ದಗಳು ನಿಷ್ಕರ್ಷಕಗಳೆಂದೂ ಅನಿಷ್ಕರ್ಷಕಗಳೆಂದೂ ಎರಡು ವಿಧವು. ವಿಶೇಷಣವನ್ನು ಮಾತ್ರ ಬೋಧಿಸುವ ಗೋತ್ವಾದಿ ಶಬ್ದಗಳು ನಿಷ್ಕರ್ಷಕಗಳು. ವಿಶೇಷ್ಯಪರ್ಯಂತವಾಗಿ ಬೋಧಿಸುವ ಗೋ ಮೊದಲಾದ ಶಬ್ದಗಳು ಅನಿಷ್ಕರ್ಷಕಗಳು. ಏಕೆಂದರೆ ಈ ಗೋ ಶಬ್ದವು, ಗೋತ್ವವನ್ನೂ, ಗೋ ಶರೀರವನ್ನೂ, ಅದರಲ್ಲಿರುವ ಜೀವಾತ್ಮವನ್ನೂ ಇವೆಲ್ಲಕ್ಕೂ ಅಂತರ್ಯಾಮಿಯಾದ ಪರಮಾತ್ಮನನ್ನೂ ಬೋಧಿಸುವದರಿಂದ, ಅನಿಷ್ಕರ್ಷವು. ನಿಷ್ಕರ್ಷಕ ಪದಗಳು ನಿಯತ ನಿಷ್ಕರ್ಷಕಗಳೆಂದೂ ವೈವಕ್ಷಿಕ ನಿಷ್ಕರ್ಷಕಗಳೆಂದೂ ಎರಡು ವಿಧವು, ಹೇಗೆಂದರೆ? ನಿಯತನಿಷ್ಕರ್ಷಕಕ್ಕೆ ಉದಾಹರಣೆ ಗೋತ್ವವು, ಮನುಷ್ಯತ್ವವು; ಈ ಪದಗಳು ಯಾವಾಗಲೂ ನಿಯತವಾಗಿ ವಿಶೇಷಣವನ್ನೇ ಬೋಧಿಸುತ್ತದೆಯಾದುದರಿಂದ ನಿಯತ ನಿಷ್ಕರ್ಷಕವೆಂದು ಹೇಳಲ್ಪಟ್ಟಿತು. ವಿವಕ್ಷೆ ಇದ್ದಾಗ ನಿಷ್ಕರ್ಷಕಗಳಾಗಿ ಅನ್ಯಥಾ ಹಾಗಲ್ಲದೆ ಇರುವುವು. ವೈವಕ್ಷಿಕ ನಿಷ್ಕರ್ಷಕವು, ಹೇಗೆಂದರೆ ಶುಕ್ಲ ಶಬ್ದದಹಾಗೆ, ಪಟಸ್ಯಶುಕ್ಲಃ

## ಮಕಾರವಾಚ್ಯ ಜೀವಸ್ಯ ಜ್ಞಾನತ್ವಾನಂದತ್ವಾಮಲತ್ವ ಸಮರ್ಥನಮ್

**ಇನ್ವಕ್ಷರಮ್ ವ್ಯಾಕರಣ ಪ್ರಕ್ರಿಯೆಯೈ ಸ್ಪಾರ್‌ತಾಲ್ "ಮನಜ್ಞಾನೇ" ಇತ್ಯಾದಿ ಧಾತುಕ್ಕಳಿಲೇ ನಿಷ್ಪನ್ನಮಾನ ಪದಮಾಗೈಯಾಲೇ (೧) "ಜ್ಞೋತ**

ಎಂದರೆ ಆಗ ನೈಮಿತ್ತಿಕ ನಿಷ್ಕರ್ಷಕವು ; **ಶುಕ್ಲಃಪಟಃ** ಎಂಬಲ್ಲಿ ವಿಶೇಷಣಮಾತ್ರ ವನ್ನು ಬೋಧಿಸದೆ ವಿಶೇಷ್ಯವಾದ ಪಟದವರೆಗೂ ಅರ್ಥವುಳ್ಳದುದಾಮುದರಿಂದ ನಿಷ್ಕರ್ಷಕವಲ್ಲವು. ಇಲ್ಲಿ ಮಕಾರಗಳೂ ನಾರಶಬ್ದವೂ ಮೂಲಮಂತ್ರದಲ್ಲಿ ವಿಶೇಷಣಭಾವವನ್ನು ಬೋಧಿಸುತ್ತವೇ ವಿನಾ ವಿಶೇಷ್ಯಭಾವಪದವಲ್ಲವೆಂದು ತಾತ್ಪರ್ಯವು. ಆದುದರಿಂದಲೇ **ನಿಷ್ಕರ್ಷವಿವಕ್ಷೈಯಾಲೇ ವಿಶೇಷಣಮಾತ್ರ ಪರಙ್ಗಳ್** ಎಂದು ಹೇಳಲ್ಪಟ್ಟಿತು.

### ಜೀವಾತ್ಮನಿಗೆ ಜ್ಞಾನತ್ವ, ಆನಂದತ್ವ, ಅಮಲತ್ವಗಳ ಸಮರ್ಥನೆಯು.

ಮುಂದಿನ ವಾಕ್ಯದಿಂದ, **ವಿಶೇಷಣಮಾತ್ರಪರ** ವೆಂದು ಹೇಳಿದುದನ್ನು ವ್ಯುತ್ಪತ್ತಿಮೂಲಕವಾಗಿ ಉಪಪಾದಿಸಿ ಹೇಳುತ್ತಾರೆ- ಹಾಗೆಯೇ ಅಚೇತನಕ್ಕಿಂತ ಇದು ಹೇಗೆ ವಿಲಕ್ಷಣವೆಂಬ ಭಾವವನ್ನೂ, ಪರಮಾತ್ಮನಿಗಿಂತ ಇದು ಬೇರೆಯಾದ ಸ್ವರೂಪ ಉಳ್ಳದು ಎಂಬುದನ್ನೂ, ವ್ಯಕ್ತಪಡಿಸುತ್ತಾರೆ. ಅದಕ್ಕಾಗಿ ಜೀವ ಸ್ವರೂಪವನ್ನು ನಿರೂಪಣೆ ಮಾಡುವದಕ್ಕಾಗಿ, ಪ್ರಥಮತಃ ಅತನು ಜ್ಞಾನಸ್ವರೂಪನು, ಜ್ಞಾನ ಗುಣಕನು ಎಂದು ಹೇಳಿ, ಜ್ಞಾನತ್ವವನ್ನು ಮಕಾರದ ಧಾತ್ವರ್ಥದ ಮೂಲಕ ಸ್ಥಾಪಿಸುತ್ತಾರೆ.—**ಇನ್ವಕ್ಷರಮ್** - ಈ ಮಕಾರವು, **ವ್ಯಾಕರಣ ಪ್ರಕ್ರಿಯೈಯೈಪಾರ್ತ್ತಾಲ್** - ಅದು ವ್ಯಾಕರಣರೀತ್ಯಾ ಹೇಗೆ ನಿಷ್ಪನ್ನವಾಯಿತು ಎಂದು ವಿಚಾರಿಸಿದರೆ, **"ಮನಜ್ಞಾನೇ" ಇತ್ಯಾದಿಧಾತುಕ್ಕಳಿಲೇ** - ಎಂಬವೇ ಮೊದಲಾದ ಧಾತುಗಳಿಂದ, **ನಿಷ್ಪನ್ನಮಾನ** - ಉಂಟಾದ, **ಪದಮಾಗೈಯಾಲೇ** - ಪದವಾದುದರಿಂದ, "ಜ್ಞೋತ ಏವ" ಎಂದರೆ ಅತಃ - ಆಕಾರಣದಿಂದಲೇ ಎಂದರೆ **"ಅಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ"** ಇತ್ಯಾದ್ಯನೇಕ ಶ್ರುತಿಗಳಲ್ಲಿ ಹೇಳಿರುವದರಿಂದ ಹಿಂದಿನ ಸೂತ್ರವಾದ **"ನಾತ್ಮಶ್ರುತೇಃ"** ಎಂಬಲ್ಲಿರುವ ಆತ್ಮಾ ಎಂಬ ಶಬ್ದವನ್ನಿಟ್ಟುಕೊಂಡು **ಆತ್ಮಾ** - ಈ ಜೀವಾತ್ಮನು ಬರೀ ಜ್ಞಾನಮಾತ್ರ ಸ್ವರೂಪನು ಮಾತ್ರವೇ ಅಲ್ಲವು, ಮತ್ತೇನೆಂದರೆ **ಜ್ಞ ಏವ** ಜ್ಞಾತಾವಾಗಿಯೂ ಇರುತ್ತಾನೆ; ಎಂದರೆ ಜ್ಞಾನಕ್ಕೂ ಆಶ್ರಯನು ಎಂಬ ಭಾವವು. ಹಾಗೆಯೇ **ಏಷ ಹಿ ದ್ರಷ್ಟಾ ಶ್ರೋತಾ, ಘ್ರಾತಾ, ರಸಯಿತಾ, ಮನ್ತಾ, ಬೋದ್ಧಾ ಕರ್ತಾ, ವಿಜ್ಞಾನಾತ್ಮಾಪುರುಷಃ"** ಎಂಬ ಪ್ರಶ್ನೋಪನಿಷ

(೧) ಶಾರೀ. ಸೂ. ೨ ೩.೧೯.

ವಿನ್" ಎಜ್ಞ್ಗರ ವಧಿಕರಣತ್ತಿರ್ಪಡಿಯೇ ಜ್ಞಾನಸ್ವರೂಪನುಮಾಯ್, ಜ್ಞಾನ ಗುಣಕನುಮಾಯ್, ಅಣುವಾನ ಜೀವಾತ್ಮಾವೈ ಶೊಲ್ಲುಗಿರದು.

ಜ್ಞಾನಸ್ವರೂಪನಾಗಪ್ಪೊದುವಿಲೇ ಶೊನ್ನಾಲುಮ್, ಇವರ್ಗಸ್ವರೂಪಮ್

---

ದ್ವಾಕ್ಯವೂ (೪. ೯) ಜ್ಞಾತಾ ಎಂಬುದನ್ನೇ ಸಮರ್ಥಿಸುತ್ತದೆ. ಎಜ್ಞ್ಗರ ಅಧಿಕರಣತ್ತಿರ್ಪಡಿಯೇ - ಎಂದು ಹೇಳಿರುವ ಅಧಿಕರಣದಲ್ಲಿ ಉಪಪಾದಿತವಾದಹಾಗೆ ಜ್ಞಾನಸ್ವರೂಪನಾಗಿ, ಜ್ಞಾನಗುಣಕನುಮಾಯ್ - ಜ್ಞಾನ ಧರ್ಮವನ್ನೂ ಹೊಂದಿದವನಾಗಿ, ಅಣುವಾನ - ಅಣುವಾಗಿರುವ, ಜೀವಾತ್ಮವನ್ನು, ಶೊಲ್ಲುಗಿರದು - ಹೇಳುತ್ತದೆ. ಪರಮಾತ್ಮನನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಅಣುವಾನ ಎಂಬ ಪದವು. "ಏಷೋಽಣುರಾತ್ಮಾ" "ವಾಲಾಗ್ರ ಶತಭಾಗಸ್ಯ" ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವಹಾಗೆ ಅಣುವು. ಜ್ಞೋತ ಏವ - ಎಂಬ ಸೂತ್ರದ ಮುಂದಿನ ಸೂತ್ರವಾದ "ಉತ್ಕ್ರಾನ್ತಿ ಗತ್ಯಾಗತೀನಾಂ" ಎಂಬಲ್ಲಿ "ಅಣುಸ್ವರೂಪೋಽಜೀವಃ ತೇನ ಪ್ರದ್ಯೋತೇನ ಏಷಆತ್ಮಾ ನಿಷ್ಕ್ರಾಮತಿ" ಎಂಬ ಶ್ರುತಿಯನ್ನು ಮನಸ್ಸಿನಲ್ಲಿಟ್ಟು ದೇಹದಿಂದ ಉತ್ಕ್ರಾನ್ತಿಯು ಹೇಳಲ್ಪಟ್ಟಿರುತ್ತದೆ. ಪರಮಾತ್ಮನ ಹಾಗೆ ವಿಭುವಾಗಿದ್ದರೆ ಉತ್ಕ್ರಾನ್ತಿ, ಗತಿ, ಆಗತಿ, ಶಬ್ದಗಳೇ ಕೂಡುವದಿಲ್ಲವು. ಇದನ್ನು ಮನಸ್ಸಿನಲ್ಲಿಟ್ಟು, ಅಣುವಾನ ಜೀವಾತ್ಮಾವೈಶೊಲ್ಲುಗಿರದು ಎಂಬ ಪ್ರಯೋಗವು. ಮನಜ್ಞಾನೇ ಇತ್ಯಾದಿ ಎಂಬಲ್ಲಿನ ಆದಿ ಪದದಿಂದ, "ಮನ್ ಅವಬೋಧನೇ", "ಮಸ ಪರಿಮಾಣೇ" ಎಂಬ ಧಾತುಗಳು ಹೇಳಲ್ಪಟ್ಟವು; ಈ ಅರ್ಥಗಳಿಂದ ಜೀವಾತ್ಮನು ಜ್ಞಾನಗುಣಕನು ಮತ್ತೂ ಅಣುಪರಿಮಾಣನು ಎಂಬರ್ಥಗಳು ಉಂಟಾಗುತ್ತವೆ, ಆದುದರಿಂದಲೇ ಆದಿ, ಪದ ಪ್ರಯೋಗವು ಇಲ್ಲಿ ಜ್ಞಾನಸ್ವರೂಪನೆಂದೂ, ಜ್ಞಾನ ಗುಣಕನೆಂದೂ, ಹೇಳಿರುವದರಿಂದ ಜ್ಞಾನವು ಸ್ವರೂಪವೂ, ವಿಶೇಷಣವೂ, ಎರಡೂ ಆಯಿತು ಎಂದು ಹೇಳಿದಂತಾಯಿತು. ಜ್ಞಾನಗುಣವೆಂದು ಹೇಳಿರುವದರಿಂದ ಈ ವಿಶೇಷಣ ರೂಪ ಜ್ಞಾನವು ಅದ್ರವ್ಯವೆಂದು ಭಾವಿಸತಕ್ಕದ್ದಲ್ಲವು. ನಮ್ಮ ಸಿದ್ಧಾನ್ತರೀತ್ಯ ಇದೂ ದ್ರವ್ಯವೇ. ವಿಶೇಷಣವೂ ದ್ರವ್ಯವಾಗಿರಬಹುದಷ್ಟೇ.

"ಜ್ಞಾನಾನಂದ ಮಯಸ್ತ್ವಾತ್ಮಾ" ಎಂಬ ಪ್ರಮಾಣಾನುಸಾರವಾಗಿ ಯಾವಾಗ ಆತ್ಮನು ಜ್ಞಾನಸ್ವರೂಪನೂ, ಜ್ಞಾನಗುಣಕನೂ, ಎಂದು ಹೇಳಲ್ಪಟ್ಟಿತೋ, ಆಗ ಆನಂದಸ್ವರೂಪತ್ವವು ಸಿದ್ಧಿಸುತ್ತದೆ ಎಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—ಅನುಕೂಲಜ್ಞಾನ ರೂಪವೇ ಸುಖವಾದುದರಿಂದ ಜ್ಞಾನ ಸ್ವರೂಪದಿಂದ ಸುಖರೂಪವಾದ ಆನಂದತ್ವವು ಹೇಳಿದಂತಾಯಿತೆಂದು ಉಪದೇಶಿಸುತ್ತಾರೆ—ಜ್ಞಾನ ಸ್ವರೂಪನಾಗ - ಈ ಮಕಾರವಾಚ್ಯ ಜೀವಾತ್ಮನು

**ಅನುಕೂಲಮಾಗ ಪ್ರಮಾಣಸಿದ್ಧಮಾಗೈಯಾಲೇ ಆನಂದರೂಪಮಾನ ವಿಶೇಷಮುಮ್ ಸಿದ್ಧಿಕ್ಕುಮ್- ಜ್ಞಾನಗುಣಕನೆನ್ನು ಮಿಡಮ್ ಶೊನ್ನಾಲ್ ಪ್ರಮಾಣಾನುಸಾರತ್ತಾಲೇ ಮುಕ್ತದಶೈಯಿಲ್ ನಿರುಪಾಧಿಕ ಪ್ರಸರಣಮಾಯ್, ಸಂಕೋಚರಹಿತಮಾನ ಜ್ಞಾನಂ ಗುಣಮಾನವೈತೋತ್ತುಮ್.**

---

**ಜ್ಞಾನ ಸ್ವರೂಪನೆಂದು,ಪೊದುವಿಲೇಶೊನ್ನಾಲುಮ್**-ಸಾಮಾನ್ಯವಾಗಿ ಹೇಳಿದರೂ, **ಇವರ್ಗಸ್ವರೂಪಮ್** - ಈ ಜೀವಾತ್ಮನ ಸ್ವರೂಪವು, **ಅನುಕೂಲಮಾಗ** - ಅನುಕೂಲ ರೂಪ ಜ್ಞಾನವಾಗಿದೆ ಎಂಬುದು, **ಪ್ರಮಾಣಸಿದ್ಧಮಾಗೈಯಾಲೇ** - ಪ್ರತ್ಯಕ್ಷ ಪ್ರಮಾಣ ಮತ್ತು "ಜ್ಞಾನಾನಂದ ಮಯಸ್ತ್ವಾತ್ಮಾ ಶೇಷೋಹಿ ಪರಮಾತ್ಮನಃ" ಮತ್ತು "ವಿಜ್ಞಾನಂ ಯಜ್ಞಂ ತನುತೇ" (ತೈ. ಉ.) ಎಂಬಲ್ಲಿ ಹೇಳಿರುವ ಶಬ್ದ ಪ್ರಮಾಣದಿಂದಲೂ ಸಿದ್ಧವಾದುರಿಂದ, **ಆನಂದ ರೂಪಮಾನ ವಿಶೇಷಮುಮ್**-ಅನುಕೂಲ ರೂಪಜ್ಞಾನವೇ ಸುಖ ಆನಂದ ಶಬ್ದಗಳಿಂದ ಹೇಳಲ್ಪಡುವದರಿಂದ ಆನಂದ ರೂಪವಾದ ವಿಶೇಷ ಸ್ವರೂಪವೂ, **ಸಿದ್ಧಿಕ್ಕುಮ್** - ಸಿದ್ಧಿಸುತ್ತದೆ; ಮಕಾರದಲ್ಲಿ ಅರ್ಥವಾಗಿ ತೋರಿಬರುತ್ತದೆಂಬ ಭಾವವು.

ಮಕಾರವಾಚ್ಯನು ಜ್ಞಾನಸ್ವರೂಪನು, ಮತ್ತು ಜ್ಞಾನ ಗುಣಕನೆಂದು ಹೇಳಿದರೆ, ಆನಂದ ಸ್ವರೂಪನು, ಆನಂದ ಗುಣಕನೆಂದೂ ಹೇಳಿದಂತಾಯಿತು. ಮುಂದೆ ಅಮಲತ್ವವು ಜೀವಾತ್ಮನ ಸ್ವರೂಪನಿರೂಪಕ ಧರ್ಮವೆಂದು ಹೇಳುತ್ತಾರೆ- **ಜ್ಞಾನಗುಣಕನೆನ್ನು ಮಿಡಮ್** - ವಿಭುವಾದ ಧರ್ಮಭೂತವಾದ ಜ್ಞಾನವನ್ನು ಈ ಜೀವಾತ್ಮನು ಹೊಂದಿರುವನು ಎಂಬ ಸಂದರ್ಭವನ್ನು, **ಶೊನ್ನಾಲ್** - ಹೇಳಿದರೆ, **ಪ್ರಮಾಣಾನುಸಾರತ್ತಾಲೇ**-"ಸಚಾನನ್ತ್ಯಾಯ ಕಲ್ಪತೇ" (ಶ್ವೇ. ೯. ೫.) "ಸರ್ವಂ ಹ ಪಶ್ಯಃ ಪಶ್ಯತಿ ಸರ್ವ ಮಾಪ್ನೋತಿ ಸರ್ವಶಃ" (ಛಾಂ. ೭-೨೬.೨) ಇತ್ಯಾದಿ ಶ್ರುತಿ ಮತ್ತು "ಯಥಾನಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾನ್ಮಣೇಃ । ಪ್ರಕಾಶ್ಯನ್ತೇ ನ ಜನ್ಯನ್ತೇ ನಿತ್ಯಾ ಏವಾತ್ಮನೋ ಹಿ ತೇ" (ವಿಷ್ಣು ಧರ್ಮ ೧೦೪. ೫೬) ಇತ್ಯಾದಿ ಪ್ರಮಾಣಗಳಿಗೆ ಅನುಸಾರವಾಗಿ, ಮುಕ್ತದಶೆಯಲ್ಲಿ **ನಿರುಪಾಧಿಕ ಪ್ರಸರಣಮಾಯ್** - ಕರ್ಮೋಪಾಧಿಯು ಇಲ್ಲದಿರುವದರಿಂದ ನಿರುಪಾಧಿಕವಾಗಿ, ವಿಭುವಾಗಿ ಪ್ರಸರಿಸುವಂಥಾದ್ದಾಗಿ, ಅಥವಾ ಬದ್ಧದಶೆಯಲ್ಲಿನಹಾಗೆ ಇಂದ್ರಿಯರೂಪ ಉಪಾಧಿ ಬೇಕಿಲ್ಲದೆ ಪ್ರಸರಿಸುವ, **ಸಂಕೋಚ ರಹಿತಮಾನ**-ಬದ್ಧ ದಶೆಯಲ್ಲಿದ್ದಹಾಗೆ ಸಂಕೋಚವು ಇಲ್ಲದ, **ಜ್ಞಾನಂ ಗುಣ ಮಾನವೈ** - ಸ್ವಯಂ ಪ್ರಕಾಶವಾಗಿ ವಿಭುವಾಗಿರುವ ಜ್ಞಾನ ಗುಣವು, **ತೋತ್ತುಮ್** - ತೋರಿಬರುತ್ತದೆ. ಕರ್ಮೋಪಾಧಿಯಿಂದ, ಸಹಜವಾಗಿ ಸ್ವಯಂಪ್ರಕಾಶವಾಗಿ ವಿಭುವಾಗಿರುವ ಈ ಧರ್ಮರೂಪವಾದ ಜ್ಞಾನವು ಸಙ್ಕುಚಿತವಾದ ಸ್ಥಿತಿಯಲ್ಲಿರು

ತ್ತದೆ. ಮುಕ್ತದಶೆಯಲ್ಲಿ ಯಾವಾಗ ಈ ಕರ್ಮೋಪಾಧಿಯು ತೊಲಗಿತೋ ಆಗ ಅದು ಸ್ವಯಂಪ್ರಕಾಶವಾದ ವಿಭುವಾದ ನೈಜಸ್ವಭಾವದಿಂದ ಕಂಗೊಳಿಸುತ್ತದೆ. ಶ್ರುತಿಯು "**ಸ್ವೇನರೂಪೇಣಾ ಭಿನಿಷ್ಪದ್ಯತೇ**" (ಛಾಂ. ೮. ೧೨. ೨) ತನ್ನ ನೈಜ ಸ್ವರೂಪ ಸ್ವಭಾವಗಳಿಂದ ಕಂಗೊಳಿಸುತ್ತದೆ ; ಎಂದರೆ ಗುಣಾಷ್ಟಕಗಳಾದ ಸರ್ವಜ್ಞತ್ವ ಸತ್ಯ ಸಙ್ಕಲ್ಪತ್ವ, ಅಪಹತ ಪಾಪ್ಮತ್ವಾದಿಗಳಿಂದ ಪ್ರಕಾಶಿಸುತ್ತದೆ ಎಂಬ ತಾತ್ಪರ್ಯವು. ಅಂತಹ ಪ್ರಕೃತಿ ವಿಯುಕ್ತ ದಶೆಯಲ್ಲಿ ಆತ್ಮನು ಮುಕ್ತನಾಗಿ ಬ್ರಹ್ಮ ಶಬ್ದದಿಂದ ಹೇಳಲ್ಪಡುವನು. ಆದರೆ ಪರಬ್ರಹ್ಮನಲ್ಲವು. ಪರಬ್ರಹ್ಮನಿಗೆ ಸ್ವರೂಪ ಸ್ವಭಾವಗಳೆರಡರಲ್ಲೂ ಬೃಹತ್ವವಿರುವದರಿಂದ ಪರಬ್ರಹ್ಮವು. ಜೀವಾತ್ಮನಾದರೋ ಸ್ವರೂಪ ಬೃಹತ್ವವಿಲ್ಲದೆ ಸ್ವಭಾವ ಬೃಹತ್ವಮಾತ್ರವೇ ಇರುವದರಿಂದ ಬರೀ ಬ್ರಹ್ಮಶಬ್ದವಾಚ್ಯನು. ಆದುದರಿಂದ ಬ್ರಹ್ಮ ಶಬ್ದವು ಈ ಮುಕ್ತಾತ್ಮನಿಗೆ ಅನೇಕ ಕಡೆಗಳಲ್ಲಿ ಗೀತೆಯಲ್ಲೂ ಇತರ ಸ್ಥಲಗಳಲ್ಲೂ ಪ್ರಯೋಗಉಂಟು. "**ಬ್ರಹ್ಮಭೂತಃ ಪ್ರಸನ್ನಾತ್ಮಾ ನಶೋಚತಿ ನಕಾಂಕ್ಷತಿ**" (ಗೀ.೧೮-೫೪) ಎಂಬಲ್ಲಿ ಪರಾಂಬರಿಸಬಹುದು. ಶ್ರೀ ಯತಿವರ್ಯರು "**ಸರ್ವತ್ರ ಪ್ರಸಿದ್ಧೋಪದೇಶಾತ್**" (ಬಹ್ಮಸೂತ್ರ, ೧. ೨. ೧) ಎಂಬುದರ ಭಾಷ್ಯದಲ್ಲಿ "**ಪ್ರತ್ಯಗಾತ್ಮನಶ್ಚ ನಿರ್ಮುಕ್ತೋಪಾಧೇಃ ಬೃಹತ್ವಂಚ ವಿದ್ಯತೇ**" ಎಂದು ಅಪ್ಪಣೆ ಕೊಡಿಸಿರುತ್ತಾರೆ. ಆದುದರಿಂದ ಹೀಗೆ ಈತನ ಗುಣರೂಪವಾದ ಜ್ಞಾನವು ಸ್ವಯಂಪ್ರಕಾಶವಾಗಿ ವಿಭುವಾಗಿರುವದರಿಂದ, ಶ್ರುತಿಯು "**ಸಚಾನನ್ತ್ಯಾಯ ಕಲ್ಪತೇ**" ಎಂದೂ ಹೇಳಿರುತ್ತದೆ. ಮೇಲೆ ಉದಾಹರಿಸಿರುವ ವಿಷ್ಣುಧರ್ಮ ಶ್ಲೋಕವೂ ಸಹ ಇದೇ ಅಭಿಪ್ರಾಯವುಳ್ಳದ್ದು. "**ಅವಿದ್ಯಾಕರ್ಮಸಂಜ್ಞಾನ್ಯಾ ತೃತೀಯಾಶಕ್ತಿರಿಷ್ಯತೇ । ಯಯಾಕ್ಷೇತ್ರಜ್ಞ ಶಕ್ತಿಸ್ಸಾನೇಷ್ಟಿತಾನೃಪಸರ್ವಗಾ । ಸಂಸಾರತಾಪಾನಖಿಲಾ ನವಾಪ್ನೋತ್ಯತಿಸಂತತಾರ್**" । ಈ ಅವಿದ್ಯಾರೂಪ ಕರ್ಮದಿಂದ ಈ ಜ್ಞಾನವು ಮರೆಸಲ್ಪಟ್ಟು ಸಮಸ್ತ ಸಂಸಾರ ತಾಪಗಳನ್ನೆಲ್ಲಾ ಈ ಕ್ಷೇತ್ರಜ್ಞನು ಅನುಭವಿಸುವನೆಂದು ಹೇಳಿರುತ್ತದೆ. ಅನಂತರ ಮುಕ್ತದಶೆಯಲ್ಲಾದರೋ, ಹೇಗೆ ರತ್ನವನ್ನು ತೊಳೆಯುವದರಿಂದ, ಹೊಸದಾಗಿ ಯಾವ ಪ್ರಕಾಶವು ಉತ್ಪನ್ನವಾಗದೆ, ಅದರಲ್ಲಿ ಮರೆಸಿ ಹೋಗಿದ್ದ ಹಿಂದಿನ ಪ್ರಕಾಶವೇ ನಿರ್ಮಲವಾಗಿ ಪ್ರಕಾಶಿಸುತ್ತದೋ, ಹಾಗೆಯೇ ಈ ಆತ್ಮನಿಗೆ ಶರೀರ ಸಂಬಂಧದಿಂದುಂಟಾದ ಹೇಯಗುಣಗಳೆಲ್ಲಾ ಧ್ವಂಸವಾಗುವದರಿಂದ ಸರ್ವಜ್ಞತ್ವ, ಸತ್ಯಸಙ್ಕಲ್ಪತ್ವ, ಅಮಲತ್ವಾದಿಗಳು ತಾನಾಗಿಯೇ ಪ್ರಕಾಶಿಸುತ್ತವೆ. ವಜ್ರವು ಕೆಸರಿನಲ್ಲಿ ಬಿದ್ದುದರಿಂದ ಅದರ ತೇಜಸ್ಸು ಮರೆಸಿ ಹೋಗಿತ್ತು. ಹಾಗೆಯೇ ದೇಹವೆಂಬ ಕೆಸರು ಯಾವಾಗ ತೊಳೆದು ಹೋಯಿತೋ, ಸ್ವಯಂ ಜ್ಯೋತಿಸ್ಸಾದ ಈ ಆತ್ಮವು ವಿಭುವಾಗಿ ಪ್ರಕಾಶಿಸುತ್ತದೆಂಬ ಭಾವವು. ಹೀಗೆ ಜ್ಞಾನಕ್ಕೆ ನಿರುಪಾಧಿಕ ಪ್ರಸರಣವು ಮರೆಸಿ ಹೋಗಿದ್ದುದು ಯಾವಾಗ ಉಂಟಾಯಿತೋ ಆಗ ಮಲವೆಲ್ಲಾ ಕಳೆದು

**ಇಪ್ಪಡಿ ಪರಿಶುದ್ಧಮಾನ ಸ್ವಾಭಾವಿಕ ಸ್ವರೂಪತ್ತೈಪ್ಪಾರ್ತಾಲ್ ಅಚೇತನಙ್ಗಳಿಲುಳ್ಳ ಜಡತ್ವಾದಿಗಳುಮ್ ಕಳಿನ್ದು ಸಂಸಾರದಶೈಯಿಲುಳ್ಳ ಕ್ಲೇಶಾದಿಗಳುಮ್ ಕಳಿನ್ದು ನಿರ್ಕ್ಕೈಯಾಲೇ ಸ್ವರೂಪಧರ್ಮಙ್ಗಳಿರಂಡಿಲುಮುಳ್ಳ ನಿರ್ಮಲತ್ವಮ್ ಅನುಸಂಹಿತಮಾಯಿತ್ತು.**

---

ಹೋಗಿ ಅಮಲತ್ವವು ಸ್ಥಾಪಿತವಾಯಿತು ಎಂಬ ಭಾವವು. **"ಸರ್ವಂಹ ಪಶ್ಯಃ ಪಶ್ಯತಿ"** ಎಂಬ ಶ್ರುತಿಯ ಅರ್ಥವೇನೆಂದರೆ, **ಪಶ್ಯಃ** - ಬ್ರಹ್ಮದರ್ಶಿಯು, ಪರಮಾತ್ಮೋಪಾಸನೆಯನ್ನು ಮಾಡಿ ಆತನನ್ನು ಸಾಕ್ಷಾತ್ಕರಿಸಿದವನು, ಸಮಸ್ತವನ್ನೂ ಸಾಕ್ಷಾತ್ಕರಿಸುವ ಶಕ್ತಿಯುಳ್ಳ ಸರ್ವಜ್ಞನಾಗಿ, **"ಸರ್ವಮಾಪ್ನೋತಿ ಸರ್ವಶಃ"** ಸಙ್ಕಲ್ಪಮಾತ್ರದಿಂದ ಬೇಕಾದ ಪ್ರಯೋಜನಗಳನ್ನೆಲ್ಲಾ ಸಮಸ್ತಕಾಲದಲ್ಲೂ ಹೊಂದುವನು" ಎಂಬುದು.

ಆದುದರಿಂದ ಪರಿಶುದ್ಧ ಜೀವಾತ್ಮಸ್ವರೂಪಸ್ವಭಾವಗಳೆರಡೂ ಅಮಲವಾದುವೆಂದು ಹೇಳುತ್ತಾರೆ.—**ಇಪ್ಪಡಿ ಪರಿಶುದ್ಧಮಾನ**-ಹೀಗೆಮುಕ್ತದಶೆಯಲ್ಲಿ ದೇಹೋಪಾಧಿಯು ಕಳೆದು ಪರಿಶುದ್ಧವಾದ, **ಸ್ವಾಭಾವಿಕಸ್ವರೂಪತ್ತೈ ಪಾರ್ತ್ತಾಲ್**- ಈ ಜೀವಾತ್ಮನ ನೈಜವಾದ ಸ್ವರೂಪವನ್ನು ಪರಿಶೀಲಿಸಿ ನೋಡಿದರೆ, **ಅಚೇತನಙ್ಗಳಿಲುಳ್ಳ** - ಅಚೇತನಗಳಲ್ಲಿರುವ, **ಜಡತ್ವಾದಿಗಳುಮ್** - ಜ್ಞಾನಸ್ವರೂಪವಿಲ್ಲದಿರುವಿಕೆಯೂ, ಆದಿ ಪದದಿಂದ ಜ್ಞಾನಕ್ಕೆ ಆಶ್ರಯವಲ್ಲದೆ ಇರುವಿಕೆಯೂ ಸಹ, **ಕಳಿನ್ದು** - ತೊಲಗಿ, **ಸಂಸಾರ ದಶೈಯಿಲುಳ್ಳ** - ಬದ್ಧದಶೆಯಲ್ಲಿರುವ, **ಕ್ಲೇಶಾದಿಗಳುಮ್** - ದುಃಖಗಳೂ ಸಹ, **ಕಳಿನ್ದು ನಿರ್ಕ್ಕೈಯಾಲೇ** - ತೊಲಗಿರುವ ಸ್ಥಿತಿಯುಂಟಾದುದರಿಂದ, **ಸ್ವರೂಪ ಧರ್ಮಙ್ಗಳಿರಂಡಿಲುಮುಳ್ಳ** - ಜೀವಾತ್ಮನ ಸ್ವರೂಪ ಧರ್ಮವೆರಡರಲ್ಲೂ ಇರುವ, **ನಿರ್ಮಲತ್ವಮ್** - ಅಮಲತ್ವವು, ಹೇಯ ರಾಹಿತ್ಯವು, **ಅನುಸಂಹಿತಮಾಯಿತ್ತು** - ಅನುಸಂಧಾನಮಾಡತಕ್ಕದ್ದಾಗಿರುತ್ತದೆ. ಅನುಸಂಧೇಯವೆಂಬ ತಾತ್ಪರ್ಯವು. **ಜಡತ್ವಾದಿ** ಎಂಬಲ್ಲಿರುವ ಆದಿಪದದಿಂದ ಅಪಕ್ಷಯಾದಿ ಷಡ್ಭಾವ ವಿಕಾರಗಳು ಹೇಳಲ್ಪಟ್ಟವೆಂದೂ, **ಕ್ಲೇಶಾದಿಗಳುಮ್** ಎಂಬಲ್ಲಿನ ಆದಿಪದದಿಂದ ಅವಿದ್ಯಾ ಅಸ್ಮಿತಾ ರಾಗದ್ವೇಷಾದಿಗಳು ಹೇಳಲ್ಪಟ್ಟವೆಂದು ಸಾರಸಂಗ್ರಹ ವ್ಯಾಖ್ಯಾತೃವು ಬರೆದಿರುತ್ತಾರೆ. ಛಾಂದೋಗ್ಯದ ಪ್ರಜಾಪತಿ ವಾಕ್ಯದಲ್ಲಿ ಮುಕ್ತದಶೆಯಲ್ಲಿ ಈ ಜೀವಾತ್ಮನು **"ಅಪಹತ ಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕೋ ವಿಜಿಘತ್ಸೋಽಪಿಪಾಸುಸ್ಸತ್ಯಕಾಮಸ್ಸತ್ಯಸಙ್ಕಲ್ಪಃ"** (ಛಾಂ. ೮-೭-೧) ಎಂದು ಎಲ್ಲಾ ವಿಧ ಹೇಯಗಳನ್ನೂ ಕಳೆದುಕೊಂಡು ನಿರ್ಮಲನಾಗುವನೆಂದು ಹೇಳುತ್ತದೆ. ಅದನ್ನು ಈ ವಾಕ್ಯದಿಂದ ಉಪಪಾದಿಸಿರುತ್ತಾರೆ. ಅಚೇತನದ ಜಡತ್ವಾದಿಗಳೂ [illegible]ವು, ಬದ್ಧ ದಶೆಯಲ್ಲಿನ ಕ್ಲೇಶಗಳೂ

## ಪ್ರಣವೋಪದಿಷ್ಟಾತ್ಮಸ್ವರೂಪಮೇವಾನುಸಂಧೇಯ ಮಿತಿ ಸೂತ್ರೇಪಿ ಪ್ರೋಕ್ತಮ್

**ಇನ್ದ ಪರಶೇಷತ್ವೈಕರಸ ಪರಿಶುದ್ಧ ಸ್ವರೂಪಮೇ ಮುಮುಕ್ಷುದಶೈಯಿಲೇ ಯನುಸಂಧೇಯಮೆನ್ನುಮಿಡಮ್ (೧) "ವ್ಯತಿರೇಕ ಸ್ತದ್ಭಾವ ಭಾವಿತ್ವಾನ್ನತೂಪಲಬ್ಧಿವತ್" ಎಙ್ಗರ ಸೂತ್ರತ್ತಿಲೇ ಸಿದ್ಧಮ್.**

ಇಲ್ಲವು, ಆದಿ ಪದದಿಂದ ಭ್ರಮ, ಅಜ್ಞಾನಾದಿಗಳೂ ಇಲ್ಲವು, ಆದುದರಿಂದ ಈತನು ಆಗಸ್ವರೂಪತಃ ಸ್ವಭಾವತಃ ಮಹತ್ತಾದ ಪರಿಶುದ್ಧನು, ಜ್ಞಾನ ಸ್ವರೂಪನಾಗಿಯೂ ವಿಭುವಾದ ಜ್ಞಾನಗುಣಕನಾಗಿಯೂ, ಹೀಗೆ ಜೀವಾತ್ಮನು **"ನಿರ್ವಾಣಮಯ ಏವಾಯಮಾತ್ಮಾ ಜ್ಞಾನಮಯೋಽಮಲಃ"** ಎಂದು ಹೇಳಿರುವಹಾಗೆ ಸ್ವರೂಪತಃ ಮತ್ತು ಸ್ವಭಾವತಃ ಜ್ಞಾನಾನಂದಾಪ್ತುಲನು ಎಂದು ಹೇಳಲ್ಪಟ್ಟಿತು. **"ಪ್ರಕೃತಿಸ್ಥೋಽಪಿ ಪುರುಷೋ ನಾಜ್ಯತೇ ಪ್ರಾಕೃತೈರ್ಗುಣೈಃ"** ಎಂದು ಭಾಗವತದಲ್ಲಿ ಹೇಳಲ್ಪಟ್ಟಿರುತ್ತದೆ. ಇಂತಹ ಸ್ವರೂಪ ಸ್ವಭಾವವುಳ್ಳವನೇ ಮಕಾರವಾಚ್ಯ ಜೀವಾತ್ಮನು ಎಂದೂ, ಇಂತವನೇ ಲಕ್ಷ್ಮೀನಾರಾಯಣರಿಬ್ಬರಿಗೇನೇ ಶೇಷಭೂತನು ಎಂಬುದು ಪ್ರಣವಾರ್ಥವೆಂದೂ, ಸ್ಥಾಪಿಸಿದರು. ಈ ಅಭಿಪ್ರಾಯವೇ ಶಾರೀರಕಸೂತ್ರದಲ್ಲೂ ಉಪಪಾದಿತವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.

**ಪ್ರಣವದಲ್ಲಿ ಹೀಗೆ ಉಪದೇಶಿಸಲ್ಪಟ್ಟ ಆತ್ಮಸ್ವರೂಪವೇ ಚಿನ್ತಿಸತಕ್ಕದ್ದೆಂದೇ ಬ್ರಹ್ಮಸೂತ್ರದಲ್ಲೂ ಹೇಳಿರುವದು.**

ಬದ್ಧ ದಶೆಯಲ್ಲಿ ಈ ಆತ್ಮಸ್ವರೂಪವು ಹೀಗಿದೆ ಎಂದು ಚಿಂತಿಸತಕ್ಕದ್ದೇ? ಅಥವಾ ಪ್ರಾಪ್ಯದಶೆಯಲ್ಲಿ ಆತ್ಮಸ್ವರೂಪವು ಹೀಗಿದೆ ಎಂದು ಚಿಂತಿಸತಕ್ಕದ್ದೇ? ಎಂದು ವಿಕಲ್ಪಿಸಿದರೆ ಮೋಕ್ಷಾರ್ಥಿಗೆ ಮುಂದೆ ಮುಕ್ತದಶೆಯಲ್ಲಿ ತನಗೆ ಪ್ರಾಪ್ಯವಾದ ಪರಿಶುದ್ಧಾತ್ಮಸ್ಥಿತಿಯೇ ಧ್ಯಾನಾರ್ಹವೇ ವಿನಾ ಈ ಹೇಯವಾಗಿರುವ ಸ್ಥಿತಿಯಲ್ಲವೆಂದು ತಿಳಿಸುವ ಬ್ರಹ್ಮಸೂತ್ರವನ್ನು ಉದಾಹರಿಸುತ್ತಾರೆ. ಇನ್ದ - ಈಗ ಪ್ರಣವದ ಮೂರು ಅಕ್ಷರಗಳಿಂದಲೂ ತೋರಿಬರುವ, **ಪರಶೇಷತ್ವೈಕರಸ ಪರಿಶುದ್ಧ ಸ್ವರೂಪಮೇ** - ಪರಮಾತ್ಮನಿಗೆ ಶೇಷಭೂತನಾಗಿರುವಿಕೆಯೇ ಮುಖ್ಯಾನಂದವಾಗಿಯೂ ಹೇಯಸಂಬಂಧವಿಲ್ಲದೆ ಪರಿಶುದ್ಧವಾಗಿಯೂ ಇರುವ ಆತ್ಮಸ್ವರೂಪವೇ, **ಮುಮುಕ್ಷು ದಶೈಯಿಲೇ** - ಮೋಕ್ಷಾರ್ಥಿಯಾಗಿರುವ ದಶೆಯಲ್ಲಿ **ಅನುಸಂಧೇಯ** ವೆಂಬುವ ಸಂದರ್ಭವು **"ವ್ಯತಿರೇಕಸ್ತದ್ಭಾವ ಭಾವಿತ್ವಾನ್ನತೂ**

(೧) ಶಾ. ಸೂ. ೩.೩.೫೩.

---

ಪಲಬ್ಧಿವತ್” ಎಜ್ಞ್ರಸೂತ್ರತ್ತಿಲೇ ಎಂಬುವ ಶಾರೀರಕ ಸೂತ್ರದಲ್ಲಿ, ಸಿದ್ಧವ್- ಸ್ಥಾಪಿತವು, ಈ ಸೂತ್ರಾಭಿಪ್ರಾಯುವು ಏನೆಂದರೆ ನ - ಬದ್ಧನಾದ ಜೀವಾತ್ಮನ ಸ್ವರೂಪವು ಚಿನ್ತನೀಯವೆಂದು ಹೇಳಿದುದು ಸರಿಯಲ್ಲವು, ತು - ಅಪಿತು,ಮತ್ತ್ಯಾ ಪದು ಚಿನ್ತನೀಯ:ವು ಎಂದರೆ ಬದ್ಧಜೀವನಕ್ಕಿಂತಲೂ ಅಪಹತ ಪಾಪ್ಮತ್ವಾದಿ ರೂಪವಾದ ಯಾವ ವ್ಯತಿರೇಕವೆಂದರೆ ವೈಲಕ್ಷಣ್ಯವುಂಟೋ, ಅಂತಹ ವೈಲಕ್ಷಣ್ಯ ದಿಂದ ಕೂಡಿದ ಪರಿಶುದ್ಧವಾದ ಜೀವಸ್ವರೂಪವೇ ಭಗವಂತನಿಗೆ ಶರೀರವೆಂದು ಉಪಾಸನೆಯನ್ನು ಮಾಡತಕ್ಕದ್ದು, ಏತಕ್ಕೆಂದರೆ ತದ್ಭಾವಭಾವಿತ್ವಾತ್, ತದ್ಭಾ ವಸ್ಯ - ಅಪಹತ ಪಾಪ್ಮತ್ವಾದಿ ಸ್ವರೂಪವುಳ್ಳ ಮುಕ್ತಾತ್ಮಸ್ವರೂಪಕ್ಕೆ, ಭಾವಿ ತ್ವಾತ್ - ಪ್ರಾಪ್ಯತ್ವವಿರುವದರಿಂದ, **ಯಥಾಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯಭವತಿ** - ಯಾವ ಭಗವದುಪಾಸಕನು ಈ ಲೋಕದಲ್ಲಿ ಹೇಗೆ ಉಪಾಸಿಸುತ್ತಾನೋ,ಅನಂತರ ಈಸಂಸಾರವನ್ನು ಬಿಟ್ಟು ದೇಹಾವಸಾನವನ್ನು ಹೊಂದಿ, ತಾನು ಚಿಂತಿಸಿದ ಆತ್ಮಸ್ವರೂಪಾನುಗುಣವಾದ ಸ್ವರೂಪವನ್ನು ಹೊಂದು ವನು. ಈ ತತ್ಕ್ರತು ನ್ಯಾಯಕ್ಕೆ ಒಂದು ದೃಷ್ಟಾಂತವನ್ನು ಕೊಡುತ್ತಾರೆ ; ಹೇಗೆಂ ದರೆ **ಉಪಲಬ್ಧಿವತ್**-ಪರಮ ಪುರುಷನ ದಿವ್ಯ ಮಙ್ಗಳವಿಗ್ರಹದ ಉಪಾಸನೆಯು, ಅಂತಹ ಪ್ರಾಪ್ಯವನ್ನು ಹೇಗೆ ಉಂಟುಮಾಡುತ್ತದೋ, ಹಾಗೆಯೇ, ಪರಿಶುದ್ಧಾತ್ಮ ಸ್ವರೂಪಧ್ಯಾನದಿಂದ ಪರಿಶುದ್ಧಾತ್ಮಸ್ವರೂಪವು ಪ್ರಾಪ್ಯವಾಗುತ್ತದೆ. ಯಥಾವಸ್ಥಿತ ಪರಮಪುರುಷಪ್ರಾಪ್ತಿಗಾಗಿ ಅಂತಹ ಪರಮಪುರುಷನನ್ನೇ ಹೇಗೆ ಉಪಾಸಿಸತಕ್ಕ ದ್ದೋ, ಹಾಗೆಯೇ ಯಥಾವಸ್ಥಿತ ಪರಶೇಷತ್ವೈಕರಸ ಪರಿಶುದ್ಧಾತ್ಮ ಸ್ವರೂಪ ಪ್ರಾಪ್ತಿಗಾಗಿ, ಅಂತಹ ಆತ್ಮಾವೆಂದೇ ಅನುಸಂಧಾನವೆಂದರೆ ಧ್ಯಾನಮಾಡತಕ್ಕ ದ್ದೆಂಬ ತಾತ್ಪರ್ಯವು. ಆದುದರಿಂದ “ಪರಶೇಷತ್ವೈಕರಸ ಪರಿಶುದ್ಧಾತ್ಮಸ್ವರೂ ಪವನ್ನೇ ಧ್ಯಾನಿಸತಕ್ಕದ್ದು. ಅಂತಹ ಪ್ರಾಪ್ಯವೇ ಸಿದ್ಧಿಸಬೇಕಾದುದರಿಂದ ತತ್ಕ್ರತುನ್ಯಾಯದ ಪ್ರಕಾರ ಅಂತಹ ಪ್ರಾಪ್ಯವನ್ನೇ ಉಪಾಸಿಸತಕ್ಕದ್ದು. ಭಕ್ತ್ಯು ಪಾಯಾನುಷ್ಠಾತೃವಿಗೆ ಈಚಿನ್ತನವೂ ಆವಶ್ಯಕವಾದುದರಿಂದ ಇದುಗೀತಾ ೬ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿತು. ಪ್ರಪತ್ತ್ಯುಪಾಯಾನುಷ್ಠಾತೃವಿಗೂ ಅಂತಹ ಪರಶೇಷತ್ವೈಕರಸಪರಿಶುದ್ಧಾತ್ಮಸ್ವರೂಪವು ಅನುಸಂಧೇಯವೆಂಬುದು ತಾತ್ಪರ್ಯವು.

ಮುಂದಿನ ವಾಕ್ಯದಿಂದ ಯಥಾವಸ್ಥಿತ ಆತ್ಮಪ್ರಾಪ್ತಿಗಾಗಿ ಅಂತಹ ಅನು ಸಂಧಾನವು ಭರನ್ಯಾಸನಿಷ್ಠನಿಗೂ ಆವಶ್ಯಕವೆಂದು ಹೇಳಿ,“**ಚತುರ್ವಿಧಾ ಭಜನ್ತೇ ಮಾಂ**” ಎಂಬಲ್ಲಿ, ಕೋರುವ ಫಲಬೇಧದಿಂದ ಉಪಾಸಕರು ನಾಲ್ಕು ವಿಧವಾಗಿ, ಅವರ ಉಪಾಸನ ಪ್ರಕಾರ ಬೇಧವು ಹೇಗೆ ವ್ಯತ್ಯಸ್ತವೋ, ಹಾಗೆಯೇ ಭರನ್ಯಾಸ ದಲ್ಲೂ ಫಲಭೇದದಿಂದ ಆತ್ಮಾನುಸಂಧಾನದಲ್ಲಿ ವ್ಯತ್ಯಾಸ ಉಂಟೆಂದು ಹೇಳು ತ್ತಾರೆ—**ಇವನುಕ್ಕು** - ಈ ಪ್ರಪತ್ತಿ ನಿಷ್ಠನಿಗೂ, **ಮುಮುಕ್ಷುದೆಶೆಯಿಲ್** -

**ಇವನುಕ್ಕು ಮುಮುಕ್ಷು ದಶೈಯಿಲ್ ಫಲದಶಾನುಸಂಧಾನಮ್ ಫಲಾಪೇಕ್ಷೈಕ್ಕುರುಪ್ಪಾಮ್. ಪುರುಷಾರ್ಥ ಭೇದಙ್ಗಳುಕ್ಕೀಡಾಗ ವನುಸನ್ಧೇಯಾಕಾರಙ್ಗಳ್ ವೇರುಪಟ್ಟಿರುಕ್ಕು ಮೆನ್ನುಮಿಡಮ್ ಶ್ರೀಗೀತೈಯಿಲ್ ಅಷ್ಟಮಾಧ್ಯಾಯತ್ತಿಲುಮ್ ಭಾಷ್ಯಾದಿಗಳಿಲುಮ್ ಸುವ್ಯಕ್ತಮ್.**

---

ಮೋಕ್ಷಾಪೇಕ್ಷೆಯುಳ್ಳ ದೆಶೆಯಲ್ಲಿ **ಫಲದಶಾನುಸಂಧಾನಮ್** - ಫಲದೆಶೆಯಲ್ಲಿ ಪ್ರಾಪ್ತವಾಗುವ ಸ್ವರೂಪಾನುಸಂಧಾನವು, **ಫಲಾಪೇಕ್ಷೈಕ್ಕು** - ಫಲಕಾಮನೆಗೆ **ಉರುಪ್ಪಾಮ್** - ಅನುಗುಣವಾದುದಾಗಿ ಸಂಬಂಧಿಸಿಕೊಂಡಿರುತ್ತದೆ. ಆದರೆ ಮೋಕ್ಷಾರ್ಥಿಯಲ್ಲದೆ ಮೋಕ್ಷೇತರ ಫಲಕಾಮನೆಯಿಂದ ಭರನ್ಯಾಸವನ್ನು ಮಾಡಿದ್ದುದಾದರೆ, ಆಗ ಅನುಸಂಧಾನದಲ್ಲೂ ವ್ಯತ್ಯಾಸ ಉಂಟೆಂಬುದಕ್ಕೆ, ಉಪಾಸನಾ ರೂಪೋಪಾಯದಲ್ಲೂ ಫಲಕಾಮನಾಭೇದದಿಂದ ಉಪಾಸನೆಯ ಪ್ರಕಾರದಲ್ಲಿ ಭೇದ ಹೇಗೋ,ಹಾಗೆಯೇ ಇಲ್ಲಿಯೂ ಎಂದು ಹೇಳುತ್ತಾರೆ,—**ಪುರುಷಾರ್ಥಭೇದಙ್ಗಳುಕ್ಕೀಡಾಗ** - ಐಶ್ವರ್ಯ ಕೈವಲ್ಯ, ಪರಬ್ರಹ್ಮಾನುಭವರೂಪಪುರುಷಾರ್ಥಗಳಲ್ಲಿರುವ ಭೇದಗಳಿಗನುಸಾರವಾಗಿ, **ಅನುಸಂಧೇಯಾಕಾರಙ್ಗಳ್** ಅನುಸಂಧಾನ ಪ್ರಕಾರಗಳು, **ವೇರುಪಟ್ಟಿರುಕ್ಕುಮ್** - ಬೇರೆಬೇರೆಯಾಗಿವೆ , **ಎನ್ನುಮಿಡಮ್** - ಎಂಬುವ ಸಂದರ್ಭವು, ಪ್ರಕರಣವು, ಶ್ರೀ ಗೀತೆಯಲ್ಲಿ ಅಷ್ಟಮಾಧ್ಯಾಯದಲ್ಲೂ, ಶ್ರೀ ಭಾಷ್ಯವೇ ಮೊದಲಾದವುಗಳಲ್ಲೂ, **ಸುವ್ಯಕ್ತಮ್** - ಸುಸ್ಪಷ್ಟವು. ಈ ವಾಕ್ಯವು ಶ್ರೀ ಯಾಮುನಮುನಿಗಳ ಗೀತಾರ್ಥ ಸಙ್ಗ್ರಹದ "**ಐಶ್ವರ್ಯಾಕ್ಷರಯಾಥಾತ್ಮ್ಯಭಗವಚ್ಚರಣಾರ್ಥಿನಾಮ್ । ವೇದ್ಯೋಪಾದೇಯ ಭಾವಾನಾಮಷ್ಟಮೇ ಭೇದ ಉಚ್ಯತೇ**" ಎಂಬುದನ್ನು ಸ್ಮರಿಸುತ್ತದೆ. ಈ ಸಂದರ್ಭದಲ್ಲಿ ಗೀತೆಯಲ್ಲಿ ಹೇಳಿರುವದೇನೆಂದರೆ—**ಚತುರ್ವಿಧಾ ಭಜನ್ತೇ ಮಾಂ ಜನಾಸ್ಸುಕೃತಿನೋಽರ್ಜುನ । ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚ ಭರತರ್ಷಭ**" (ಗೀ. ೭-೧೬)ಎಂಬ ಶ್ಲೋಕದಲ್ಲಿ ನಾಲ್ಕು ವಿಧ ಪರಮಾತ್ಮೋಪಾಸಕರಾದ ಭಕ್ತರು ಹೇಳಲ್ಪಟ್ಟರು. ಅವರಲ್ಲಿ ಆರ್ತನು ಐಹಿಕವಾಗಿ ಇದ್ದುದನ್ನು ಹೋಗಲಾಡಿಸಿಕೊಂಡು ಅದೇ ಪುನಃ ಬೇಕೆಂದು ದೈನ್ಯದಿಂದ ಪ್ರಾರ್ಥಿಸುವವನು; ಅರ್ಥಾರ್ಥಿಯು ಇಲ್ಲದಿರುವ ಇಲ್ಲಿನ ಅಥವಾ ಸ್ವರ್ಗಾದಿ ಐಶ್ವರ್ಯಗಳನ್ನು ಪ್ರಾರ್ಥಿಸುವನು. ಇವರಿಬ್ಬರೂ ಒಂದೇ ತರಗತಿಗೆ ಸೇರಿದವರಾಗಿ ಐಶ್ವರ್ಯವನ್ನು ಅಪೇಕ್ಷಿಸುವರಾದ ಪ್ರಯುಕ್ತ ಐಶ್ವರ್ಯಾರ್ಥಿಗಳೆಂದು ಹೇಳಲ್ಪಟ್ಟರು. ಜಿಜ್ಞಾಸುವು ಪರಿಶುದ್ಧಾತ್ಮಸ್ವರೂಪವನ್ನು ಪ್ರಾರ್ಥಿಸಿ ಕೈವಲ್ಯವನ್ನುಹೊಂದಿ ಮೋಕ್ಷವನ್ನು ಹೊಂದುವವನು. ಜ್ಞಾನಿಯು,ಭಗವತ್ಪ್ರಾಪ್ತಿಯನ್ನಪೇಕ್ಷಿಸಿ ದಿವ್ಯ ವೈಕುಂಠವನ್ನು ಸೇರುವವನು. ಹೀಗೆ ನಾಲ್ವರನ್ನು ಮೂರಾಗಿ ಭಾವಿಸಿ "**ತ್ರಯಾಣಾಂ ಉಪಾಸನ ಪ್ರಕಾರ ಭೇದಂ**

ವಕ್ತುಮುಪಕ್ರಮತೇ" ಎಂದು ಶ್ರೀ ಯತಿವರ್ಯರು ೮ನೆಯ ಅಧ್ಯಾಯದ ಅಭ್ಯಾಸಯೋಗಯುಕ್ತೇನ" (ಗೀ. ೮-೮) ಎಂಬ ಶ್ಲೋಕಕ್ಕೆ ಅವತಾರಿಕೆಯನ್ನು ಕೊಟ್ಟಿರುತ್ತಾರೆ. ಈ ಶ್ಲೋಕ ಮತ್ತು "ಕವಿಂಪುರಾಣಂ" "ಪ್ರಯಾಣಕಾಲೇ" (ಗೀ.೮-೯,೧೦)ಎಂಬೀ ಮೂರು ಶ್ಲೋಕಗಳಿಂದ ಐಶ್ವರ್ಯಾರ್ಥಿಗೆ ತನ್ನಲ್ಲಿ ಭೋಕ್ತೃತ್ವಾವಸ್ಥೆಯೇ ಪ್ರಾಪ್ಯತಯಾ ಅನುಸಂಧೇಯವಾದುದು ; ಜಿಜ್ಞಾಸುವಿಗಾದರೋ "ಯದಕ್ಷರಂ ವೇದವಿದಃ" (ಗೀ. ೮-೧೧) "ಸರ್ವದ್ವಾರಾಣಿ ಸಂಯಮ್ಯ" ಗೀ.೮-೧೨) ಓಮಿತ್ಯೇಕಾಕ್ಷರಂ ಬ್ರಹ್ಮ"(ಗೀ.೮-೧೩)ಎಂಬೀ ಶ್ಲೋಕಗಳಿಂದ ಕೈವಲ್ಯಾರ್ಥಿಗೆ ಪ್ರಕೃತಿವಿಯುಕ್ತಾತ್ಮಸ್ವರೂಪವು ಹೇಳಲ್ಪಟ್ಟಿತು ; ಅನಂತರ "ಅನನ್ಯಚೇತಾಸ್ಸತತಂ"ಎಂಬುದರಿಂದ ಜ್ಞಾನಿಗೆ ಪರಮಾತ್ಮಪ್ರಾಪ್ತಿಯೂ ಹೇಳಲ್ಪಟ್ಟಿತು; ಮತ್ತು "ಅಧಿಯಜ್ಞೋಽಹಮೇವಾತ್ರ" (ಗೀ. ೮-೪) ಎಂಬಲ್ಲಿ ಇವರೆಲ್ಲರಿಗೂ ಯಜ್ಞಾದಿಗಳಲ್ಲಿ ಇಂದ್ರಾದಿ ದೇವತೆಗಳಿಗೆ ಶರೀರವಾಗಿ ಪರಮಪುರುಷನು ಉಪಾಸ್ಯನೆಂದು ಹೇಳಲ್ಪಟ್ಟಿತು. ಹೀಗೆ ಉಪಾಸನದಲ್ಲಿ ಆಕಾರ ಭೇದವು ಹೇಗೋ, ಹಾಗೆಯೇ ಈ ಭರನ್ಯಾಸದಲ್ಲೂ ಐಶ್ವರ್ಯವು ಫಲವಾಗಿ ಪ್ರಾರ್ಥಿಸಲ್ಪಟ್ಟರೆ ಆತ್ಮನಿಗೆ ಭೋಕ್ತೃತ್ವಾವಸ್ಥೆಯು ಅನುಸಂಧೇಯವು; ಕೈವಲ್ಯಾರ್ಥಿಯಾದರೆ ಪ್ರಕೃತಿವಿಯುಕ್ತ ಶುದ್ಧಾತ್ಮಸ್ವರೂಪವು ಅನುಸಂಧೇಯವು ; ಪರಮಪುರುಷ ಪ್ರಾಪ್ತಿಯನ್ನು ಅಪೇಕ್ಷಿಸುವ ಜ್ಞಾನಿಗೆ ಪರಶೇಷತೈಕರಸರೂಪ ಪರಿಶುದ್ಧಾತ್ಮಸ್ವರೂಪವು ಅನುಸಂಧೇಯವು. ಗೀತೆಯಲ್ಲಿ ೭ ೧೫ ರಲ್ಲಿ ನಾಲ್ವರು ನನ್ನನ್ನು "ನ ಪ್ರಪದ್ಯನ್ತೇ" ಎಂದು ಹೇಳಿ ಮುಂದಿನ ಶ್ಲೋಕದಲ್ಲಿ "ಚತುರ್ವಿಧಾ ಭಜನ್ತೇ" ಎಂದು ಹೇಳಿರುವದರಿಂದಲೂ ಪ್ರಪದನಭಜನ ಶಬ್ದಗಳು ಸಮಾನಾರ್ಥಕಗಳಾಗಿ ಪ್ರಯೋಗಿಸಿರುವದರಿಂದ ಶರಣಾಗತಿಯು ಎರಡು ಉಪಾಯಗಳಿಗೂ ಬೇಕಾಗಿರುವದರಿಂದಲೂ, ಈ ಶ್ಲೋಕಗಳಲ್ಲಿ ಎರಡು ಉಪಾಯಗಳೂ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಶ್ರೀ ಭಗವದ್ಗೀತೆಯಲ್ಲಿ ಮಾತ್ರವೇ ಅಲ್ಲದೆ ಭಾಷ್ಯಾದಿಗಳಲ್ಲೂ ಇವುಹೇಳಲ್ಪಟ್ಟಿವೆ ಎಂದು ತಿಳಿಸುತ್ತಾರೆ.—ಭೂಮವಿದ್ಯೆಯಲ್ಲಿ "ಬ್ರಹ್ಮದೃಷ್ಟಿ ರುತ್ಕರ್ಷಾತ್" ಎಂಬಲ್ಲಿ ಭೋಕ್ತೃತ್ವಾಕಾರವನ್ನು ಚಿನ್ತಿಸಿ ಉಪಾಸನೆಯನ್ನು ಮಾಡುವದರಿಂದ ಐಹಿಕಾಮುಷ್ಮಿಕ ಅಭ್ಯುದಯಗಳು ಸಿದ್ಧಿಸುತ್ತವೆ. ಪಂಚಾಗ್ನಿವಿದ್ಯೆಯಲ್ಲಿ ಸ್ವಾತ್ಮಪ್ರಾಪ್ತಿಗೂ, ಬ್ರಹ್ಮಾನ್ತರ್ಯಾಮಿಯಾದ ಸ್ವಾತ್ಮಾವಿನ ಧ್ಯಾನವು ಹೇಳಲ್ಪಟ್ಟಿರುತ್ತದೆ. ಬ್ರಾಹ್ಮಾಧಿಕರಣದಲ್ಲಿ ಪರಮಾತ್ಮಪ್ರಾಪ್ತಿಗಾಗಿ ಅಪಹತ ಪಾಪ್ಮತ್ವಾದಿ ವಿಶಿಷ್ಟ ಜ್ಞಾನಾತ್ಮಕ ಸ್ವಾನುಭವವು ಅನುಸಂಧೇಯವಾಗಿರುವದರಿಂದ ಮೇಲೆ ಹೇಳಿದ ಪರಶೇಷತೈಕರಸ ಪರಿಶುದ್ಧಾತ್ಮಾನುಸಂಧಾನವು ಹೇಳಲ್ಪಟ್ಟಿರುತ್ತದೆ. ಹೀಗೆ ಅನುಸಂಧೇಯ ಆಕಾರಗಳಲ್ಲಿ ವ್ಯತ್ಯಾಸವು ಶ್ರೀ ಭಾಷ್ಯದಲ್ಲೂ ಉಪಪಾದಿತವು. ಭಾಷ್ಯಾದಿಗಳಿಲುಮ್ ಎಂಬಲ್ಲಿನ ಆದಿ ಶಬ್ದದಿಂದ ಇತರ ಅಧ್ಯಾತ್ಮ ಶಾಸ್ತ್ರ

**ಶೇಷತ್ವಜ್ಞಾನತ್ವಾನಂದತ್ವಾಮಲತ್ವಾದಿಕಂ ಸರ್ವಾತ್ಮ ಸಾಧಾರಣಮಿತ್ಯಾಹ.**

**ಜೀವಭೇದಮ್ ಪ್ರಾಮಾಣಿಕಮಾಗೈಯಾಲ್, ಇತ್ತೃತೀಯಾಕ್ಷರಂ (೧) "ನಾತ್ಮಾಶ್ರುತೇಃ" ಇತ್ಯಾದಿಗಳಿಲ್ ಪೋಲೇ ಜಾತ್ಯೈಕತ್ವಪರಮ್.**

---

ಗಳಾದ ವಿಷ್ಣು ಪುರಾಣ ಭಾಗವತ ಮೊದಲಾದವುಗಳು ಸಂಗ್ರಹಿಸಲ್ಪಟ್ಟವು. ಈಗ ಉಪಪಾದಿಸಿದ ಶೇಷತ್ವ, ಜ್ಞಾನತ್ವ, ಆನಂದತ್ವ ಅಮಲತ್ವಗಳು ಎಲ್ಲಾ ಜೀವಾತ್ಮರುಗಳಿಗೂ ಸಾಧಾರಣವಾದುವು.

---

ಮಕಾರವಾಚ್ಯನಾದ ಜೀವಾತ್ಮನು ಪರಮಾತ್ಮನಿಗೆ ಶೇಷಭೂತನು ಜ್ಞಾನಾನಂದಾಮಲತ್ವಗಳುಳ್ಳ ಸ್ವರೂಪ ಸ್ವಭಾವಗಳುಳ್ಳವನು, ಅಣುಸ್ವರೂಪನು,ಎಂದು ಉಪಪಾದಿಸಲ್ಪಟ್ಟಿದುದೇನೋ ಸರಿಯೇ. ಆದರೆ ಮಕಾರವು ಏಕವಚನಾಂತವಾಗಿರುತ್ತದೆ. "ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ" ಎಂಬ ಶ್ರುತಿಯು ಜೀವಾತ್ಮರು ಅನೇಕರೆಂದು ಹೇಳಿದೆಯಲ್ಲಾ? ಮೇಲಿನ ಉಪಪಾದನೆಯಪ್ರಕಾರ ಎಲ್ಲಾ ಜೀವಾತ್ಮರು ಒಂದೆಯೇ? ಅಥವಾ ಎಲ್ಲಾ ಬೇರೆಬೇರೆಯಾಗಿದ್ದರೂ ಸ್ವರೂಪ ಸ್ವಭಾವತಃ ಎಲ್ಲಾ ಒಂದೆಯೇ ಎಂಬ ಸಂದೇಹದಲ್ಲಿ, ಮಕಾರದ ಏಕವಚನವು ಜಾತ್ಯೇಕವಚನವೆಂದೂ, ಹಾಗೆಯೇ ಸೂತ್ರದಲ್ಲೂ ಪ್ರಯೋಗ ಉಂಟೆಂದೂ, ಐಕ್ಯಾಭಿಪ್ರಾಯವು ಶ್ರುತಿ ಸ್ಮೃತಿ ವಿರುದ್ಧಾಭಿಪ್ರಾಯವೆಂದೂ, ತಿಳಿಸುತ್ತಾರೆ. ಜೀವಭೇದಮ್-ಜೀವಾತ್ಮರುಗಳಿಗೆ ಪರಸ್ಪರ ಭೇದವು, ಪ್ರಾಮಾಣಿಕಮಾಗೈಯಾಲೇ - ಶ್ರುತಿ ಸ್ಮೃತ್ಯಾದಿ ಪ್ರಮಾಣಗಳ ಮೂಲಕ ಸ್ಥಾಪಿತವಾಗಿರುವದರಿಂದ, ಇತ್ತೃತೀಯಾಕ್ಷರಂ - ಪ್ರಣವದ ಈ ಮೂರನೆಯ ಅಕ್ಷರವಾದ ಮಕಾರವು "ನಾತ್ಮಾಶ್ರುತೇಃ" ಇತ್ಯಾದಿಗಳಿಲ್ ಪೋಲೆ - ಎಂಬ ಶಾರೀರಕ ಸೂತ್ರವೇ ಮೊದಲಾದವುಗಳಲ್ಲಿ ತೋರಿಬರುವಹಾಗೆ. ಜಾತ್ಯೈಕತ್ವಪರಮ್ - ಜಾತ್ಯೇಕವಚನವನ್ನು ಬೋಧಿಸುತ್ತದೆಂದು ಗ್ರಹಿಸತಕ್ಕದ್ದು. ಈ ನಾತ್ಮಶ್ರುತೇಃ" ಎಂಬ ಸೂತ್ರಾರ್ಥವೇನೆಂದರೆ.—ಹಿಂದಿನ ಅಧಿಕರಣದಲ್ಲಿ ಅಚಿತ್ತಿಗೆ ಸ್ವರೂಪವೇ ಬೇರೆಯಾಗುವ ಪರಬ್ರಹ್ಮ ಕಾರ್ಯತ್ವವುಂಟೆಂದು ಉಪಪಾದಿಸಿ, ಈ ಆತ್ಮಾಧಿಕರಣದಲ್ಲಿ ಚಿತ್ತಾದ ಜೀವಾತ್ಮನಿಗೆ ಸ್ವರೂಪವಿಕಾರವಿಲ್ಲದಿದ್ದರೂ, ಸ್ವಭಾವ ವಿಕಾರರೂಪ ಪರಬ್ರಹ್ಮ ಕಾರ್ಯತ್ವ ಉಂಟೆಂದು ಹೇಳುವ ಪ್ರಕರಣದಲ್ಲಿ, ಈ "ನಾತ್ಮಾಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ" ಎಂಬ ಸೂತ್ರವು ಹೇಳಲ್ಪಟ್ಟಿರುತ್ತದೆ. ನಾತ್ಮಾ - ಆತ್ಮನಿಗೇನು ಉತ್ಪತ್ತಿ ಯುಂಟೇ ಇಲ್ಲವೇ ಎಂಬ ಸಂದರ್ಭದಲ್ಲಿ,

---

(೧) ಶಾ. ಸೂ. ೨. ೩. ೧೮.

ನಾತ್ಮಾ - ಆತ್ಮಾವಿಗೆ ಉತ್ಪತ್ತಿ ಮೊದಲಾದವು ಇಲ್ಲವು; ಏಕೆಂದರೆ ಶ್ರುತೇಃ - "ನಜಾಯತೇ ಮ್ರಿಯತೇವಾ ವಿಪಶ್ಚಿತ್" ಜೀವಾತ್ಮನು ಹುಟ್ಟುವದೂ ಸಾಯುವದೂ ಇಲ್ಲವೆಂದು ಶ್ರುತಿಯಲ್ಲಿ ಹೇಳಿರುವದರಿಂದ; (ಕಠ. ೨-೧೮) ತಾಭ್ಯಃ ನಿತ್ಯತ್ವಾಚ್ಚ - "ಅಜೋಃನಿತ್ಯಃ" "ನಿತ್ಯೋಃನಿತ್ಯಾನಾಂ" ಇತ್ಯಾದಿ ಶ್ರುತಿಗಳ ಮೂಲಕ ಜೀವಾತ್ಮರುಗಳಿಗೆ ನಿತ್ಯತ್ವವು ಹೇಳಲ್ಪಟ್ಟಿರುವದರಿಂದಲೂ, ಸಹ. ಈ ವಾಕ್ಯದಲ್ಲಿ ಜೀವಭೇದಂ ಪ್ರಾಮಾಣಿಕಮಾಗ್ನೈಯಾಲೇ ಎಂದು ಹೇಳಿರುತ್ತಾರೆ; ಹೇಗೆ ಪ್ರಾಮಾಣಿಕವೆಂದರೆ "ನಿತ್ಯಾನಾಂಬಹೂನಾಂ ಚೇತನಾನಾಂ ನಿತ್ಯಃ ಏಕಶ್ಚೇತನಃ ಕಾಮಾನ್ವಿದಧಾತಿ" ಎಂಬ ಶ್ರುತಿಯಲ್ಲಿ ಚೇತನರು ಬಹುವಾದವರೆಂದು ಸ್ಪಷ್ಟವಾಗಿ ಹೇಳಿರುವದರಿಂದ ಪ್ರಾಮಾಣಿಕವು. ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯನ್ತಿ ಸೂರಯಃ ಎಂಬಲ್ಲಿ ಬದ್ಧವ್ಯತಿರಿಕ್ತದೆಶೆಯಲ್ಲೂ,ಸೂರಯಃ ಎಂಬ ಬಹುವಚನವಿರುದರಿಂದಲೂ ಪ್ರಾಮಾಣಿಕವು. ಸ್ಮೃತಿ ವಾಕ್ಯವು ಹಾಗೆಯೇ ಇರುತ್ತದೆ."ತೋ ಯೇನ ಜೀವಾನ್ವ್ಯಸಸರ್ಜ ಭೂಮ್ಯಾಂ"(ಮನು,) ಹಾಗೆಯೇ ಗೀತೆಯಲ್ಲೂ ಯಥಾರ್ಥಜ್ಞಾನವನ್ನು ಪ್ರಾರ್ಥಿಸಿ ಶರಣಾಗತಿಯನ್ನನುಷ್ಠಿಸಿದ ಅರ್ಜುನನಿಗೆ ಪ್ರತಿಜ್ಞಾ ವಾಕ್ಯರೂಪದಲ್ಲಿ "ನತ್ವೇವಾ ಹಂ ಜಾತು ನಾಸಂ ನತ್ವಂ ನೇ ಮೇ ಜನಾಧಿಪಾಃ"ಎಂಬಲ್ಲಿ ಅಹಂ,ತ್ವಂ,ಇಮೇ ಎಂಬ ಪ್ರಯೋಗಗಳಿಂದ ಜೀವಾತ್ಮ ಪರಮಾತ್ಮ ಭೇದವನ್ನೂ, ಜೀವಾತ್ಮರ ಪರಸ್ಪರ ಭೇದವನ್ನೂ ಜೀವಾತ್ಮರುಗಳ ಬಹುತ್ವವನ್ನೂ ಉಪದೇಶಿಸಿರುತ್ತಾರೆ. ಹಾಗೆಯೇ ಇನ್ನೊಂದು ಕಡೆಯಲ್ಲೂ "ಇದಂಜ್ಞಾನ ಮುಪಾಶ್ರಿತ್ಯ ಮಮಸಾಧರ್ಮ್ಯಮಾಗತಾಃ। ಸರ್ಗೇಪಿ ನೋಪಜಾಯನ್ತೇ"ಪ್ರಳಯೇ ನವ್ಯಥನ್ತಿಚ"ಎಂದು ಮುಕ್ತದೆಶೆಯಲ್ಲೂ ಬಹುವಚನವಿರುವದರಿಂದ, ಹೀಗೆಲ್ಲಾ ಅನೇಕ ಪ್ರಮಾಣಗಳಿರುವದರಿಂದಲೇ ಜೀವಭೇದಂ ಪ್ರಾಮಾಣಿಕಮಾಗ್ನೈಯಾಲೇ" ಎಂಬ ಪ್ರಯೋಗವೆಂದು ಭಾವಿಸತಕ್ಕದ್ದು.

ಮಕಾರವು ಜೀವವಾಚಕವಾದರೂ ತಾನು ಶೇಷಭೂತನು ಎಂಬ ಅನುಸಂಧಾನವು ಎರಡು ವಿಧವಾಗಿ ಸಿದ್ಧಿಸುತ್ತದೆಂದು ಹೇಳುತ್ತಾರೆ.

---

ಮೇಲಿನ ಪ್ರಣವದ ಉಪಪಾದನೆಯಿಂದ ಜ್ಞಾನತ್ವ, ಆನಂದತ್ವ, ಅಮಲತ್ವಾದಿಗಳಿಂದ ಪರಿಶುದ್ಧನಾದ ಮಕಾರವಾಚ್ಯನಾದ ಜೀವನು ಅಕಾರವಾಚ್ಯನಾದ ಶ್ರಿಯಃಪತಿಗೇನೆ ಶೇಷಭೂತನು ಎಂದು ಹೀಗೆ ಸಾಮಾನ್ಯವಾಗಿ ಹೇಳಲ್ಪಟ್ಟಿತೇ ವಿನಾ, ಅಂತಹ ಅನುಸಂಧಾನವನ್ನು ಪ್ರಣವವು ಬೋಧಿಸಲಿಲ್ಲವಲ್ಲಾ? ಅಂತಹ ಅನುಸಂಧಾನವು ಅವಶ್ಯಕವಲ್ಲವೇ? ಮಕಾರವಾಚ್ಯನಾದ ಅಹಂ ಎಂದು ಇಟ್ಟುಕೊಂಡರೆ, ಈ ಅನುಸಂಧಾನವು ಸಿದ್ಧಿಸುತ್ತದೆಂದು ಹೇಳುತ್ತಾರೆ. ಹಾಗೆ ಇಲ್ಲದಿ

**ಮಕಾರಸ್ಯ ಜೀವಪರತ್ವೇ ಸ್ವಶೇಷತ್ವಾನುಸಂಧಾನಂ ದ್ವಿವಿಧೇನ ಸಿದ್ಧ್ಯತೀತ್ಯಾಹ.**

**ಇಪ್ಪಡಿ ಜೀವತತ್ವತ್ತೈಯೆಲ್ಲಾಮ್ ಇಜ್ಙ್ (೧) "ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ" ಎಂಗಿರಪಡಿಯೇ ಸಾಮಾನ್ಯೇನ ಭಗವಚ್ಛೇಷಮಾಗಚ್ಚೊನ್ನಾಲುಮ್ ಅದಿಲೇ ತಾನುಮ್ ಅಂತರ್ಗತನಾಗೈಯಾಲೇ "ಅತೋಽಹಮಪಿತೇದಾಸಃ" ಎನ್ನುಮ್ ಅನುಸಂಧಾನಮ್ ಸಿದ್ಧಿಕ್ಕಿರದು.**

---

ರುವ ಪದವನ್ನು ಇಟ್ಟುಕೊಳ್ಳುವದು ನ್ಯಾಯವೋ? ಎಂದರೆ ಈಶ್ವರಸಂಹಿತೆಯಲ್ಲಿನ ಕ್ರಮವೇ ಇಲ್ಲಿಗೂ ಅನ್ವಯಿಸುತ್ತದೆಂದು ಹೇಳಿರುತ್ತಾರೆ. ಅಲ್ಲಿ ರುದ್ರನು ಸಾಮಾನ್ಯವಾಗಿ ಪರಮಾತ್ಮನಿಗೆ ಜೀವಾತ್ಮರೆಲ್ಲಾ ದಾಸಭೂತರೆಂದು ಹೇಳಿ, "ಆದುದರಿಂದ ನಾನೂ ಸಹ ನಿನಗೆ ದಾಸನು" ಎಂದು ಪರಮ ಪುರುಷನನ್ನು ಕುರಿತು ಹೇಳುವದರಿಂದ, ಈ ಅನುಸಂಧಾನವು ಅರ್ಥವಾಗಿ ತೋರಿಬರುತ್ತದೆಂದೂ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—**ಇಪ್ಪಡಿ** - ಈಗನಾವು ಉಪಪಾದಿಸಿ ಹೇಳಿದರೀತಿಯಲ್ಲಿ, **ಜೀವತತ್ವತ್ತೈ ಎಲ್ಲಾಮ್** - ಜೀವವರ್ಗವನ್ನೆಲ್ಲಾ, **ಇಜ್ಙ್** - ಈ ಪ್ರಣವದ ಮಕಾರಾರ್ಥ ಬೋಧದಲ್ಲಿ, **"ದಾಸಭೂತಾಃ"** ಇತ್ಯಾದಿ, **ಸರ್ವೇಹ್ಯಾತ್ಮಾನಃ**- ಸಮಸ್ತರಾದ ಜೀವಾತ್ಮರೂ, **ಸ್ವತಃ** - ನಿರುಪಾಧಿಕವಾಗಿ ತಾವಾಗಿಯೇ, **ದಾಸಭೂತಾಃ** - ಶೇಷ ಭೂತರು" **ಎಙ್ಗಿರ ಪಡಿಯೇ** - ಎಂದು ಹೇಳಿರುವಹಾಗೆ, **ಸಾಮಾನ್ಯೇನ ಭಗವಚ್ಛೇಷಮಾಗಚ್ಚೊನ್ನಾಲುಮ್** - ಸಾಮಾನ್ಯವಾಗಿ ಭಗವಂತನಿಗೆ ಶೇಷಭೂತರೆಂದು ಹೇಳಿದರೂ, **ಅದಿಲೇ** - ಆ ಜೀವವರ್ಗದಲ್ಲೇ, ಆ ಆತ್ಮರಲ್ಲೇ, **ತಾನುಮ್ ಅಂತರ್ಭೂತನಾಗೈಯಾಲೇ**-ತಾನೂ ಸೇರಿದವನಾದುದರಿಂದ, ಮುಂದೆ **"ಅತೋ ಹ ಮಪಿ ತೇ ದಾಸ ಇತಿ ಮತ್ವಾ ನಮಾಮ್ಯಹಮ್"** ಎಂದು ಉತ್ತರಾರ್ಧವಿರುವದರಿಂದ, ಆಕಾರಣದಿಂದಲೇ ನಾನೂ ಸಹ ನಿನಗೆ ದಾಸಭೂತನೆಂದು ತಿಳಿದವನಾಗಿ ನಿನಗೆ ನಮಸ್ಕರಿಸುತ್ತೇನೆಂಬುದು ರುದ್ರವಾಕ್ಯದಲ್ಲಿರುವ, **ಅನುಸಂಧಾನಂ ಸಿದ್ಧಿಕ್ಕಿರದು** - ಅನುಸಂಧಾನವು ಸಿದ್ಧಿಸುತ್ತದೆ. **"ದಾಸಭೂತಾಃ"** ಎಂಬಲ್ಲಿ ಸಾಮಾನ್ಯವಾಗಿ ಎಲ್ಲರೂ ದಾಸಭೂತರೆಂದು ಹೇಳಿ ಮುಂದೆ **"ಅತೋಽಹಮಪಿತೇ ದಾಸಃ"** ಆದುದರಿಂದ ನಾನೂ ಕೂಡ ನಿನಗೆ ದಾಸನೆಂಬ ಅರ್ಥವು ಹೇಗೆ ತೋರಿಬಂದು ಉಪಪಾದಿಸಲ್ಪಟ್ಟಿತೋ, ಹಾಗೆಯೇ ಇಲ್ಲಿ ಪ್ರಣವದ ಮಕಾರಾರ್ಥವು ಸಾಮಾನ್ಯವಾಗಿ ಜೀವವರ್ಗವೆಲ್ಲಾ ಅಕಾರವಾಚ್ಯನಿಗೆ ಶೇಷಭೂತನೆಂದು ಅರ್ಥವಾದರೂ, ಅರ್ಥವಾಗಿ ಮ...

---

(೧) ಈಶ್ವರ ಸಂಹಿತೆ.

ಇಙ್ಗು ಶೇಷತ್ವಜ್ಞಾನಮುಮ್, ಸ್ವಸ್ವಾತಂತ್ರ್ಯಾಭಿಮಾನ ನಿವೃತ್ತ್ಯಾದಿಗಳುಮ್, ಉಪಾಯ ವಿಶೇಷಪರಿಗ್ರಹಮುಮ್, ಫಲಭೂತಶೇಷವೃತ್ತಿ ಪ್ರಾರ್ಥನೈಯುಮ್, ತನಕ್ಕೆಪ್ಪಿರಕ್ಕಿರದಾಗೈಯಾಲೇ ತನ್ನೈಪ್ರಧಾನಮಾಗ ಕಾಟ್ಟವೇಣ್ಡುಗೈಯಾಲ್ ತೃತೀಯಾಕ್ಷರತ್ತುಕ್ಕು ವಿಶೇಷ್ಯಪದಮಾಗ

---

ವಾಚ್ಯನಾದ ನಾನೂ ಅಕಾರವಾಚ್ಯನಿಗೆ ಶೇಷಭೂತನೆಂದು ತೋರಿಬರುತ್ತದೆ ಎಂದು ಉಪದೇಶಿಸಿರುತ್ತಾರೆ. ಈ ಮೇಲಿನ ರುಪ್ರವಾಕ್ಯದಲ್ಲಿ ದಾಸ ಶಬ್ದದಿಂದ ಶೇಷತ್ವವೇ ಹೇಳಲ್ಪಟ್ಟಿತು. "ದಾಸತ್ವಂ ಖಲುಶೇಷತ್ವ ಜ್ಞಾನಾರ್ಹತ್ವಂ ನಿಗದ್ಯತೇ" ಎಂಬುದರ ಪ್ರಕಾರ ದಾಸತ್ವವೆಂದರೆ ಶೇಷತ್ವಜ್ಞಾನದ ಅರ್ಹತಯೇ ; ಇದು ಹಿಂದೆಯೂ ಉಪಪಾದಿತವು ೩೦೫ನೆಯ ಪುಟವನ್ನು ನೋಡಿ. ಶಾಬ್ದವಾಗಿ ತೋರಬೇಕೆಂಬ ಅಪೇಕ್ಷೆಯಲ್ಲಿ ಅಹಂ ಎಂಬ ಪದವನ್ನು ಅಧ್ಯಾಹಾರಮಾಡಿಕೊಂಡರೆ ಅದೂ ತೋರಿಬಂದು ಅನುಸಂಧಾನವು ದೊರೆಯುತ್ತದೆಂದು ಮುಂದಿನವಾಕ್ಯದಿಂದ ಹೇಳುತ್ತಾರೆ. ಇಂತಹ ಅನುಸಂಧಾನವು ಅತ್ಯಾವಶ್ಯಕವೆಂಬುದಕ್ಕೆ ನಾಲ್ಕು ಹೇತುಗಳನ್ನು ತಿಳಿಸುತ್ತಾರೆ. ಹೀಗೆ ಪ್ರಯೋಜನಾಂಶಗಳಿರುವದರಿಂದಲೇ ಅನುಸಂಧಾನದ ಪ್ರಾಧಾನ್ಯವು ಎಂದು ಹೇಳುತ್ತಾರೆ.— ಇಙ್ಗು-ಈ ಪ್ರಣವದಲ್ಲಿ, (೧) ಶೇಷತ್ವಜ್ಞಾನಮುಮ್ – ತಾನು ಪರಮ ಪುರುಷನಿಗೆ ಮಾತ್ರವೇ ಶೇಷಭೂತನೆಂದು ಪ್ರಣವದಿಂದುಂಟಾಗುವ ಜ್ಞಾನವೂ, (೨) ಸ್ವಸ್ವಾತಂತ್ರ್ಯಾಭಿಮಾನ ನಿವೃತ್ತ್ಯಾದಿಗಳುಮ್ - ಯಾವಾಗ ತಾನು ಸದಾ ಸಹಜವಾದ ಶೇಷಭೂತನು ಭಗವಂತನಿಗೆ ಎಂಬ ಜ್ಞಾನವು ಉಂಟಾಯಿತೋ, ಆಗ ತನಗೆ ಸ್ವಾತಂತ್ರ್ಯ ಉಂಟೆಂಬ ಅಭಿಮಾನ ನಿವೃತ್ತಿಯೇ ಮೊದಲಾದವುಗಳೂ, ಇಲ್ಲಿ ಆದಿ ಪದದಿಂದ ಇತರ ಶೇಷತ್ವಾಭಿಮಾನದ ನಿವೃತ್ತಿಯೂ, ಹೇಳಲ್ಪಟ್ಟಿತು. ಮುಂದೆ ನಮಃ ಎಂಬ ಶಬ್ದದಲ್ಲಿ ಮಃ ನ ಎಂಬ ಸಖಂಡ ನಮಸ್ಸಿನ ಅರ್ಥದಲ್ಲಾದರೂ ಸ್ವಸ್ವಾತಂತ್ರ್ಯಾಭಿಮಾನಪನಿವೃತ್ತಿಯು ತೋರಿಬರುತ್ತದೆ; ಅದನ್ನು ಈ ಪ್ರಣವದಲ್ಲೇ ಅರ್ಥವಾಗಿ ಗ್ರಹಿಸಬಹುದೆಂಬ ಭಾವವು. ಹಾಗೆಯೇ (೩) ಉಪಾಯ ವಿಶೇಷ ಪರಿಗ್ರಹಮುಮ್ - ಉಪಾಯ ವಿಶೇಷವಾದ ಪ್ರಪದನಾನುಷ್ಠಾನವನ್ನು ಸ್ವೀಕರಿಸೋಣವು, ಇದು ಮುಂದೆ ಸಖಂಡ ನಮಸ್ಸಿನಿಂದ ತೋರಿಬರುತ್ತದೆ, (೪) ಫಲಭೂತಶೇಷವೃತ್ತಿ ಪ್ರಾರ್ಥನೈಯುಮ್ - ನಾರಾಯಣಾಯ ಎಂಬಲ್ಲಿನ ಚತುರ್ಥಿಯಿಂದಲಾಗಲಿ, ಅಕಾರದ ಲುಪ್ತಚತುರ್ಥಿಯಿಂದಲಾಗಲಿ ತೋರಿಬರುವ ಶೇಷಭೂತನಿಗೆ ಫಲರೂಪವಾದ ಶೇಷವೃತ್ತಿ ಎಂದರೆ ಕೈಙ್ಕರ್ಯವನ್ನು ಮಾಡುವೆನೆಂಬ ಪ್ರಾರ್ಥನೆಯೂ, [illegible] ತನಕ್ಕೆಪ್ಪಿರಕ್ಕಿರದಾಗೈಯಾಲ್-ತನಗೆ [illegible]

"ಅಹಂ" ಶಬ್ದತ್ತೈ ಅಧ್ಯಾಹರಿತ್ತನ್ವಯನಾಗಿರದೆನ್ರುವರ್ ಶಿಲ ಆಚಾರ್ಯರ್‌ಗಳ್ ಶೊಲ್ಲುವರ್‌ಗಳ್.

ಅಪ್ಪೋದುವರ್ ಪ್ರಣವವಿವರಣಮಾನ (೧)"ಮಮನಾಥಯದಸ್ತಿಯೋಸ್ಮ್ಯಹಂ" ಸಕಲಂ ತದ್ಧಿತನ್ವೈವಮಾಧವ।" ಇತ್ಯಾದಿಗಳಿರ್‌ಪಡಿಯೇ ಗುಣ

---

**ಪ್ರಧಾನಮಾಗಕಾಟ್ಟ ವೇಣ್ಡುಗೈಯಾಲೇ** - ಅನುಸಂಧಾನಮಾಡುವ ತನ್ನನ್ನು ಮುಖ್ಯವಾಗಿ ತೋರಿಸಬೇಕಾಗಿರುವದರಿಂದ, **ತ್ರಿತೀಯಾಕ್ಷರತ್ತುಕ್ಕು** - ಮೂರನೆಯ ಅಕ್ಷರವಾದ ಮಕಾರಕ್ಕೆ; **ವಿಶೇಷ್ಯಪದಮಾಗ** - ವಿಶೇಷ್ಯ ಪದವಾಗಿ, **ಅಹಂ ಶಬ್ದತ್ತೈ ಅಧ್ಯಾಹರಿತ್ತು** - ಅಹಂ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡರೆ, **ಅನ್ವಯಮಾಗಿರದೆನ್ರು** – ಸಮಂಜಸವಾದ ಅನ್ವಯವಾಗುತ್ತದೆಂದು **ಶಿಲ ಆಚಾರ್ಯರ್‌ಗಳ್** - ಕೆಲವು ಆಚಾರ್ಯರುಗಳು, **ಶೊಲ್ಲುವರ್‌ಗಳ್**-ಹೇಳುವರು. ಮಕಾರವಾಚ್ಯನಾದ ಅಹಂ - ನಾನು ಅಕಾರವಾಚ್ಯನಿಗೇನೆ ಶೇಷಿಯು ಎಂದು ಅಹಂ ಎಂಬುದನ್ನು ಅಧ್ಯಾಹಾರ ಮಾಡಿಕೊಂಡರೆ ಅನುಸಂಧಾನಕ್ಕೆ ಸರಿಹೋಗುತ್ತದೆ ಎಂಬ ಭಾವವು. ಮಕಾರವನ್ನು ವಿಶೇಷಣವನ್ನಾಗಿಯೂ ಅಹಂ ಎಂಬುದನ್ನು ವಿಶೇಷ್ಯವಾಗಿಯೂ ಭಾವಿಸತಕ್ಕದ್ದೆಂಬ ಭಾವವು. ಆಗ ಮಕಾರಕ್ಕೆ ಅರ್ಥ ಹೇಗೆಂದರೆ ಜ್ಞಾನಸ್ವರೂಪನಾಗಿ ಜ್ಞಾನಧರ್ಮಯುಕ್ತನಾದ **ಅಹಂ**-ನಾನು ಎಂಬದಾಗಿ.

ಹಿಂದೆ ಮಕಾರಾರ್ಥವನ್ನು ವ್ಯಕ್ತಪಡಿಸುವಾಗಲೇ "**ಜೀವನೈ ಮುನ್ನಿಟ್ಟುಕ್ಕೊಂಡು ಉತ್ತಮಾನ ಶೇಷತ್ವತ್ತುಕ್ಕು ಆಶ್ರಿತಮಾನ ಸರ್ವತ್ತೈಯುಮ್ ಉಪಲಕ್ಷಿಕ್ಕಿರದು**" ಮಕಾರವು ಜೀವನನ್ನು ಬೋಧಿಸುವಾಗಲೇ ಉಪಲಕ್ಷಣರೂಪದಲ್ಲಿ ಸಮಸ್ತ ಶೇಷಭೂತವಾದ ಅಚಿತ್ತು ಮೊದಲಾದವುಗಳನ್ನು ಬೋಧಿಸುತ್ತದೆಂದು ಹೇಳಿದ್ದರು. ಈಗ ಮಕಾರವನ್ನು ಅಹಂ ಎಂಬುದಕ್ಕೆ ವಿಶೇಷಣವಾಗಿಯೂ ಕೆಲವರು ಭಾವಿಸುತ್ತಾರೆಂದು ಹೇಳಿದುದರಿಂದ ಈ ಜೀವಾತ್ಮನಿಗೇನೇ ಸೇರಿದ ವಿಶೇಷಣಗಳಾಗಿ ಶೇಷಭೂತವಾಗಿರುವುವೂ ಕೂಡ, ಉಪಲಕ್ಷಣರೀತಿಯಲ್ಲಿ ಈ ಮಕಾರದಲ್ಲಿ ತೋರಿಬರುತ್ತವೆಂದು ಉಪದೇಶಿಸುತ್ತಾರೆ. ಹಾಗೆ ಉಪದೇಶಿಸುವಾಗ ಒಂದು ನಿದರ್ಶನಮೂಲಕ ತಿಳಿಸುತ್ತಾರೆ.—**ಅಪ್ಪೋದು** – ಯಾವಾಗ ಮಕಾರವು ಜ್ಞಾನಸ್ವರೂಪನು ಎಂಬ ಅರ್ಥವಾಗಿ **ಅಹಂ** ಎಂಬ ಪದವನ್ನು ವಿಶೇಷಿಸುತ್ತದೆಂದು ಭಾವಿಸಲ್ಪಟ್ಟಿತೋ ಆಗ, **ಪ್ರಣವ ವಿವರಣವಾದ** "ಮಮನಾಥಯದಸ್ತಿಯೋಸ್ಮ್ಯಹಂ" ಎಂದು, **ಇತ್ಯಾದಿಗಳಿರ್ ಪಡಿಯೇ**-ಇವೇ ಮೊದಲಾದವುಗಳಲ್ಲಿ ಹೇಳಿರುವ ಹಾಗೆ, ಎಂದರೆ ಈ ಜೀವಾತ್ಮನು ಪರಮಾತ್ಮನಿಗೆ

---

(೧) ಆಳ. ಸ್ತೋ. ೫೩.

**ಙ್ಗಳ್ ಪ್ರಧಾನಾನುವರ್ತಿಗಳೆನ್ಗಿರನ್ಯಾಯತ್ತಾಲೇ, ತನಕ್ಕು ಶೇಷಮಾನ ಗುಣಾದಿಗಳುಮ್ ಉಪಲಕ್ಷಿತಙ್ಗಳ್.**

---

ಶೇಷಭೂತನೆಂದು ಈ ಶ್ಲೋಕದಲ್ಲಿ ಹೇಳಿರುವದರಿಂದ ಉಪಲಕ್ಷಣವಾಗಿ ಈತನಿಗೆ ಸೇರಿದವೆಲ್ಲವೂ ಪರಮಾತ್ಮನಿಗೆ ಹೇಗೆ ಶೇಷಭೂತವೋ,ಅದೇ ರೀತಿಯಲ್ಲೇ,"**ಗುಣಙ್ಗಳ್ ಪ್ರಧಾನುವರ್ತಿಗಳ್**" - "ವಿಶೇಷಣಗಳು ಮುಖ್ಯವಾದ ವಿಶೇಷ್ಯವನ್ನು ಹಿಂಬಾಲಿಸಿಯೇ ಇರುವುವು", **ಎಙ್ಗಿರ ನ್ಯಾಯತ್ತಾಲೆ** - ಎಂಬುವ ನ್ಯಾಯದ ಪ್ರಕಾರ, **ತನಕ್ಕು ಶೇಷಮಾನ** - ತನಗೆ ಶೇಷವಾದ, **ಗುಣಾದಿಗಳುಂ** - ವಿಶೇಷಣಗಳೂ ಸಹ, **ಉಪಲಕ್ಷಿತಙ್ಗಳ್** - ಶೇಷಭೂತಗಳೆಂದು ಭಾವಿಸಬಹುದು. ಯಾವಾಗ ತಾನು ಶೇಷಭೂತನೋ ಹಾಗೆಯೇ ತನಗೆ ಸೇರಿದವೆಲ್ಲವೂ ಪರಮಾತ್ಮನಿಗೆ ಶೇಷಭೂತವೆಂದು ಉಪಲಕ್ಷಣ ರೀತ್ಯಾ ಭಾವಿಸಬಹುದೆಂಬ ಭಾವವು. ಈ "**ಮಮನಾಥ ಯದಸ್ತಿಯೋಽಸ್ಮ್ಯಹಂ**" ಎಂಬ ಶ್ಲೋಕಕ್ಕೆ ವಿಸ್ತಾರವಾಗಿ ಹಿಂದೆ ಸಾಙ್ಗಪ್ರಪದನಾಧಿಕಾರದಲ್ಲಿ ಬರೆಯಲ್ಪಟ್ಟಿರುತ್ತದೆ. ೧೦೮೩-೧೦೮೫ನೆಯ ಪುಟಗಳನ್ನು ಪರಾಂಬರಿಸಿ. **ಮಮ ನಾಥ** ಎಂಬ ಪದಗಳಲ್ಲೇ ತಾನು ಶೇಷಭೂತನೆಂಬ ಅರ್ಥವು ಸುವ್ಯಕ್ತವು. **ಯದಸ್ತಿ** ಎಂಬುದರಿಂದ ತನಗೆ ಶೇಷಭೂತಗಳಾದ ಗುಣವಿಗ್ರಹಾದಿಗಳೆಲ್ಲಾ ಸಙ್ಗ್ರಹವು. ದೇಹಾದಿಗಳಿಂದ ಸೇರಿದ್ದರೂ ಅವುಗಳಿಗಿಂತ ವಿಲಕ್ಷಣನೆಂದು **ಯೋಽಸ್ಮ್ಯಹಂ** ಎಂಬುದರಿಂದ ಹೇಳಲ್ಪಟ್ಟಿತು. **ತವೈವ ಮಾಧವ** ಎಂಬಲ್ಲಿ ಅಕಾರ ಉಕಾರಾರ್ಥಗಳು ಹೇಳಲ್ಪಟ್ಟವು. ಹೇಗೆಂದರೆ **ತವ** ಎಂಬುದರಿಂದ ಸರ್ವಕಾರಣಭೂತನಾಗಿ, ಸರ್ವಶೇಷಿಯಾಗಿ ಸರ್ವರಕ್ಷಕನಾಗಿ ಲಕ್ಷ್ಮೀಪತಿಯಾಗಿರುವ ಅಕಾರಾರ್ಥವು ಬೋಧಿತವು, **ಮಾಧವ** ಶಬ್ದದಿಂದ ಅಕಾರದಲ್ಲಿ ಅರ್ಥವಾಗಿ ತೋರುವ ಲಕ್ಷ್ಮೀಪತಿತ್ವವು ವ್ಯಕ್ತಪಡಿಸಲ್ಪಟ್ಟಿತು. ಆದುದರಿಂದಲೇ ಈ ಶ್ಲೋಕವು ಪ್ರಣವವಿವರಣ ವೆಂದು ಹೇಳಿರುತ್ತಾರೆ. **ಯದಸ್ತಿಯೋಽಸ್ಮ್ಯಹಂ** ಎಂಬ ಪ್ರಯೋಗಗಳಿಂದ ಆತ್ಮಾ ಆತ್ಮೀಯ ಎಲ್ಲವೂ ಆತನಿಗೇ ಶೇಷಭೂತವೆಂದು ಇಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಎಲ್ಲವೂ ಆತನ ಸ್ವಂ; ಆದುದರಿಂದ ನಮ್ಮ ಎಲ್ಲಕ್ಕೂ ಆತನು ಸ್ವಾಮಿಯು. ಯಾವಾಗ ಆತ್ಮನು ಶೇಷಭೂತನೆಂಬುದು ಸ್ಥಾಪಿತವೋ, ಆತನಿಗೆ ಶೇಷಭೂತವಾದ ವೆಲ್ಲವೂ ಶೇಷಭೂತಗಳೇ, ಇದು "ಗುಣಗಳು ಪ್ರಧಾನವನ್ನು ಅನುವರ್ತಿಸಿವೆ" ಎಂಬ ನ್ಯಾಯದ ಪ್ರಕಾರ ಸಿದ್ಧವೆಂದು ಉಪಪಾದಿಸಿರುತ್ತಾರೆ.

ಹೀಗೆ **ಅಹಂ** ಎಂಬ ಇಲ್ಲದ ಪದವನ್ನು ಅಧ್ಯಾಹಾರಮಾಡಿಕೊಂಡು ತಾನೂ ತನಗೆ ಸೇರಿದವೆಲ್ಲವೂ ಆತನಿಗೆ ಶೇಷಭೂತವೆಂಬ ಅನುಸಂಧಾನಕ್ಕಿಂತ, ಇಲ್ಲದ ಪದವನ್ನು ಅಧ್ಯಾಹಾರಮಾಡಿಕೊಳ್ಳದ ಹಾಗೆ, ಮಕಾರಕ್ಕೇನೇ ಅಹ

**ವೇರೇ ಶಿಲವಾಚಾರ್ಯರ್ಗಳ್ ಅಸ್ಮಚ್ಛಬ್ದತ್ತಿಲ್ ವ್ಯಂಜನಮಾತ್ರಮಾನ ಮಕಾರತ್ತೈ ಎಡುತ್ತು ಛಾಂದಸಪ್ರಕ್ರಿಯೈಯಾಲೇ ಪೂರ್ವೋತ್ತರಭಾಗಙ್ಗಳ್ ಲೋಪಿತ್ತು ನಿರ್ಕಿರದಾಯ್ ತೃತೀಯಾಕ್ಷರಂ ತಾನೇ ಅಹಮರ್ಥತ್ತೈ ಕಾಟ್ಟುಗಿರದೆನ್ರು ಪರ್ ಯೋಜಿಪ್ಪಾರ್ಗಳ್.**

**ಪರಮಾತ್ಮಾವುಕ್ಕು ಆತ್ಮಹವಿಸ್ಸೈ ಸಮರ್ಪಿಕ್ಕ ವಿಧಿಕ್ಕಿರ ನ್ಯಾಸವಿದ್ಯೈಯಿಲೇ ಪ್ರಣವತ್ತೈ ಮನ್ತ್ರಮಾಗ ವೋದುಗೈಯಾಲೇ ಇದು ಅನುಷ್ಠೇ**

---

ಮರ್ಥವೂ ಸೇರಿದುದಾಗಿ, ಶಪ್ಪಟ್ಟು ವ್ಯಾಕರಣ ರೀತ್ಯಾ ಉಪಪಾದಿಸಬಹುದು ಎಂದು ಮುಂದಿನ ವಾಕ್ಯದಿಂದ ತಿಳಿಸಿ, ಹೀಗೆ ಕೆಲವು ಆಚಾರ್ಯರುಗಳ ಅಭಿಪ್ರಾಯವೆಂದು ಹೇಳುತ್ತಾರೆ—**ವೇರೇ ಶಿಲ ಆಚಾರ್ಯರ್ಗಳ್** - ಬೇರೇ ಕೆಲವು ಆಚಾರ್ಯರುಗಳು, "**ಅಸ್ಮ" ಚ್ಛಬ್ದತ್ತಿಲ್** - ಅಸ್ಮತ್ ಎಂಬ ಶಬ್ದದಲ್ಲಿ, **ವ್ಯಂಜನ ಮಾತ್ರಮಾನ** - ಮಧ್ಯದಲ್ಲಿರುವ ವ್ಯಂಜನಮಾತ್ರವಾದ **ಮಕಾರವನ್ನು, ಎಡುತ್ತು** - ನಿಲ್ಲಿಸಿಕೊಂಡು, ಅಜ್ಞೀಕರಿಸಿ, **ಛಾಂದಸಪ್ರಕ್ರಿಯೈಯಾಲೇ ಪೂರ್ವೋತ್ತರಭಾಗಙ್ಗಳೈಲೋಪಿತ್ತು** - ಬಹುಳಂ ಛಾಂದಸೀ ಎಂಬ ಸೂತ್ರವನ್ನು ಅನುಸರಿಸಿ ಪೂರ್ವಭಾಗ ಮತ್ತು ಉತ್ತರಭಾಗಗಳನ್ನು ಲೋಪಿಸಿ, **ನಿರ್ಕಿರದಾಯ್** - ನಿಲ್ಲುತ್ತದೆಯಾದುದರಿಂದ, **ಈ ತೃತೀಯಾಕ್ಷರಂತಾನೇ** - ಹೀಗೆ ಈ ಮೂರನೆಯ ಅಕ್ಷರವಾದ ಮಕಾರವೇ, **ಅಹಮರ್ಥತ್ತೈ** - ಅಸ್ಮಚ್ಛಬ್ದದಿಂದ ಬಂದ ರೂಪವಾದುದರಿಂದ ಅಹಂ ನಾನು ಎಂಬರ್ಥವನ್ನು, **ಕಾಟ್ಟುಗಿರದು** - ಪ್ರದರ್ಶಿಸುತ್ತದೆಂದೇ, **ಯೋಜಿಪ್ಪರ್ಗಳ್** - ವ್ಯುತ್ಪತ್ತಿಯನ್ನುಂಟುಮಾಡಿ ಹೇಳುವರು. ಛಾಂದಸ ಪ್ರಕ್ರಿಯೆಯಿಂದ ಪೂರ್ವೋತ್ತರಾಂಶಗಳು **ಅಸ್ಮತ್** ಎಂಬ ಪದದಲ್ಲಿ ಹೇಗೆ ಲೋಪಿಸುತ್ತವೆ ಎಂಬುದನ್ನು ತಿಳಿಯಬೇಕಾದರೆ ಸಾರವಿವರಣೆಯವರ ವ್ಯಾಖ್ಯಾನವನ್ನು ಅವಲೋಕಿಸಬಹುದು. ಹೀಗೆ ಅಸ್ಮಚ್ಛಬ್ದದಿಂದ ಬಂದುದು **ಈ ಮಕಾರವು** ಎಂದು ಭಾವಿಸಿದರೆ, ಶೇಷತ್ವವೇನೋ ಕೂಡುತ್ತದೆ.

ಆದರೆ ಜೀವಾತ್ಮನಿಗೆ ಸಂಬಂಧಿಸಿದ ಜ್ಞಾನತ್ವ, ಆನಂದತ್ವ, ಅಮಲತ್ವ, ಮೊದಲಾದ ಅರ್ಥಗಳೆಲ್ಲಾ ಸಿದ್ಧಿಸುತ್ತವೋ ? ಎಂದರೆ ತನ್ನ ಆತ್ಮಾವಿಗೆ ಸಸ್ಮೈಭಾಸಮಾನತ್ವ ರೂಪ ಪ್ರತ್ಯಕ್ತ್ವ ಮೊದಲಾದವುಗಳೆಲ್ಲಾ ಉಂಟೆಂಬುದು ಅರ್ಥವಾಗಿ ತೋರುತ್ತದೆಂದು ಹೇಳಿ, ಹೀಗೆ ಈ ಎರಡುವಿಧ ಯೋಜನೆಗಳಲ್ಲಿ ಎರಡನೆಯ ಸಲದ ಯೋಜನೆಯೇ ಉತ್ತಮವಾದುದೆಂದು ತಿಳಿಸುತ್ತಾರೆ. **ಪರಮಾತ್ಮಾವುಕ್ಕು** - ಪರಮಾತ್ಮನಿಗೆ, **ಆತ್ಮಹವಿಸ್ಸೈಸಮರ್ಪಿಕ್ಕ ವಿಧಿಕ್ಕಿರ ನ್ಯಾಸವಿದ್ಯೈಯಿಲೇ** - ಆತ್ಮಾವೆಂಬ ಹವಿಸ್ಸನ್ನು ಸಮರ್ಪಿಸತಕ್ಕದ್ದೆಂದು ವಿಧಿಸಿರುವ ನ್ಯಾಸವಿದ್ಯೆಯಲ್ಲಿ, ಇದು ಎಲ್ಲಿ ? ಎಂದರೆ "**ಓ ಮಿತ್ಯಾತ್ಮಾನಂ ಯುಂಜೀತ, ಏತ**

ಯಥಾರ್ಥ ಪ್ರಕಾಶಕಮಾಗೈಕ್ಕಾಗ ಇದಿಲೇ ಪರಾವರಾತ್ಮ ವಿಷಯಮಾನ ವಾಚಕಾಂಶ ಮಪೇಕ್ಷಿತಮಾನಾಲ್, ಪ್ರಮಾಣಾನುಸಾರತ್ತಾಲೇ ಪ್ರಥಮಾಕ್ಷರ ಮುದ್ದೇಶ್ಯಕಾರಕತ್ತೈ ಚ್ಚೊಲ್ಲುಗೈಯಾಲುಮ್, ಮಧ್ಯಮಾಕ್ಷರಂ ಅನ್ಯಾರ್ಥಮಾಗೈಯಾಲುಮ್, ಪಾರಿಶೇಷ್ಯತ್ತಾಲೇ ತೃತೀಯಾಕ್ಷರಂ ಸಮರ್ಪಣೀಯಮಾನ ಪ್ರತ್ಯಗಾತ್ಮ ಹವಿಸ್ಸೈಕ್ಕಾಟ್ಟವೇಣ್ಡಿಯದಾಲ್, ಇವ್ವಕ್ಷರತ್ತುಕ್ಕು "ಅಹಂ" ಎನ್ರು ಪೊರುಳಾಗೈ ಮಿಗವುಮುಚಿತಮ್.

---

ದ್ವೈಮಹೋಪನಿಷದಂ, ದೇವಾನಾಂ ಗುಹ್ಯಂ, ಯ ಏವಂ ವೇದ, ಬ್ರಹ್ಮಣೋ ಮಹಿಮಾನಮಾಪ್ನೋತಿ" ಎಂದು ತೈತ್ತರೀಯದಲ್ಲಿ ಹೇಳಿರುವ ನ್ಯಾಸವಿದ್ಯೆಯಲ್ಲಿ, **ಪ್ರಣವತ್ತೈ ಮನ್ತ್ರಮಾಹ ಓದುಗೈಯಾಲೇ** - ಪ್ರಣವವನ್ನೇ ಆತ್ಮ ಹವಿಸ್ಸಮರ್ಪಣರೂಪ ಮಂತ್ರವನ್ನಾಗಿ ಶ್ರುತಿಯು ಉಪದೇಶಿಸಿರುವದರಿಂದಲೂ, **ಇದು** - ಈ ಪ್ರಣವ ಮಂತ್ರವು, **ಅನುಷ್ಠೇಯಾರ್ಥ ಪ್ರಕಾಶಕ ಮಾಗೈಕ್ಕಾಗ** - ಪ್ರಣವದಿಂದ ನಮಗೆ ತೋರುವ ಅರ್ಥವು ಬರೀ ಶೇಷತ್ವ ಜ್ಞಾನಮಾತ್ರವೇ ಎಂದಲ್ಲದೆ, ಅದು ಅನುಷ್ಠಾನಾರ್ಥವನ್ನೂ, ಅದು ಯಾವುದೆಂದರೆ ಈ ಜೀವಾತ್ಮರೂಪ ಹವಿಸ್ಸಮರ್ಪಣರೂಪ ಅನುಷ್ಠಾನವನ್ನೂ ಪ್ರಕಾಶಪಡಿಸುವದಕ್ಕಾಗಿ, **ಇದಿಲೇ** - ಈ ಪ್ರಣವದಲ್ಲಿ, **ಪರಾವರಾತ್ಮ ವಿಷಯಮಾನವಾಚಕಾಂಶಂ** - ಪರಾತ್ಮನಾದ ಪರಮಪುರುಷನೂ, **ಅವರಾತ್ಮ** - ಆತನಿಗೆ ಶೇಷಭೂತನಾದ ಜೀವಾತ್ಮನನ್ನು ಬೋಧಿಸುವ ಅಂಶಗಳು; **ಅಪೇಕ್ಷಿತಮಾನಾಲ್** - ಅವಶ್ಯಕವಾಗಿದ್ದಪಕ್ಷದಲ್ಲಿ, **ಪ್ರಮಾಣಾನುಸಾರತ್ತಾಲೇ** - ಈ ಮೂರು ಅಕ್ಷರಗಳು ಯಾವ ಯಾವುವನ್ನು ಬೋಧಿಸುತ್ತವೆ ಎಂಬ ಪ್ರಮಾಣವನ್ನನುಸರಿಸಿ, **ಪ್ರಥಮಾಕ್ಷರಂ** - ಮೊದಲನೆಯ ಅಕ್ಷರವಾದ ಅಕಾರವು, **ಉದ್ದೇಶ್ಯಕಾರಕತ್ತೈ** - ಆತ್ಮ ಹವಿಸ್ಸಮರ್ಪಣವು ಯಾರ ಉದ್ದೇಶ್ಯವಾಗಿ ಎಂದರೆ ಪರತತ್ವವಾದ ವಿಷ್ಣುವನ್ನು ಬೋಧಿಸುವ ಪದವನ್ನು, **ಚ್ಚೊಲ್ಲುಗೈಯಾಲ್** - ಹೇಳುವದರಿಂದಲೂ, **ಮಧ್ಯಮಾಕ್ಷರಂ ಅನ್ಯಾರ್ಥಮಾಗೈಯಾಲುಮ್** - ಈ ಮಧ್ಯಮಾಕ್ಷರವು ಈ ಪರತತ್ವವನ್ನಾಗಲಿ ಅವರ ತತ್ವವನ್ನಾಗಿ ಬೋಧಿಸದೆ ಅವಧಾರಣಾರ್ಥದಿಂದ ಅನ್ಯಯೋಗವ್ಯವಚ್ಛೇದವನ್ನು ಬೋಧಿಸುವ ಅರ್ಥವುಳ್ಳದ್ದಾಗಿರುವದರಿಂದಲೂ, **ಪಾರಿಶೇಷತ್ತಾಲೆ** - ಹೀಗೆ ಅಕಾರ ಉಕಾರ ಬೇರೆ ಅರ್ಥಗಳುಳ್ಳವಾಗಿ, ಮಿಕ್ಕಿದ್ದು ಮಕಾರವಾದುದರಿಂದ, **ತೃತೀಯಾಕ್ಷರಂ** - ಈ ಮೂರನೆಯ ಅಕ್ಷರವು, **ಸಮರ್ಪಣೀಯಮಾನ ಪ್ರತ್ಯಗಾತ್ಮ ಹವಿಸ್ಸೈ** - ಸಮರ್ಪಿಸಲು ಯೋಗ್ಯವಾದ ಜೀವಾತ್ಮ ಹವಿಸ್ಸನ್ನು, **ಕಾಟ್ಟವೇಣ್ಡಿಯತಾಲ್** - ತೋರಿಸಬೇಕಾಗಿರುವದರಿಂದ, **ಇವ್ವಕ್ಷರತ್ತುಕ್ಕು** - ಈ ಮಕಾರಕ್ಕೆ, **ಅಹನ್ ಎನ್ರು ಪೊರುಳಾಗೈ** - ಅಹಂ ಎಂಬ

**ಆಗೈಯಯಾಲೇ ಯಿರೇ ಭಟ್ಟರ್ ಇಜ್ಙ್ಗತ್ತ ಪ್ರಣವತ್ತುಕ್ಕು (೧)"ಅಕಾರಾರ್ಥಾಯ್ಯೈವ ಸ್ವಮುಹಮ್" ಎನ್ರು ವ್ಯಾಖ್ಯಾನಮ್ ಪಣ್ಣಿತ್ತು.**

ಅರ್ಥವೆಂದು ಎರಡನೆಯ ಸಲ ಹೇಳಿದ ಆಚಾರ್ಯರುಗಳ ಅರ್ಥವೇ, ಮಿಗವುಮುಚಿತಮ್ - ತುಂಬಾ ಯೋಗ್ಯವಾದುದು. ಈ ವಾಕ್ಯದ ತಾತ್ಪರ್ಯವು ಇಷ್ಟೇ-ತೈತ್ತಿರೀಯ ಶ್ರುತಿಯು "ಓಮಿತ್ಯಾತ್ಮಾನಂ ಯುಂಜೀತ" ಎಂದು ವಿಧಿಸಿರುವದರಿಂದ, ಓಂ ಎಂಬ ಪ್ರಣವವು ಮಕಾರವಾಚ್ಯ ಜೀವನು ಅಕಾರ ವಾಚ್ಯನಾದ ಶ್ರೀಮನ್ನಾರಾಯಣನಿಗೆ ಶೇಷಭೂತನು ಎಂಬ ಜ್ಞಾನಬೋಧಕ ಮಂತ್ರ ಮಾತ್ರವೇ ಅಲ್ಲವು. "ಓಮಿತ್ಯಾತ್ಮಾನಂ ಯುಂಜೀತ" ಎಂದಿರುವದರಿಂದ ಓಂ ಎಂಬುದು ಶೇಷಭೂತವಾದ ಜೀವಾತ್ಮನೆಂಬ ಹವಿಸ್ಸನ್ನು ಶೇಷಿಯಾದ ಪರಮಾತ್ಮನಲ್ಲಿ ಸಮರ್ಪಿಸುವ ಮಂತ್ರವೂ ಎಂದೇ ಒಪ್ಪಿಕೊಳ್ಳತಕ್ಕದ್ದಾಗಿರುತ್ತದೆ. ಅದುದರಿಂದ ಈ ಮಂತ್ರದಲ್ಲಿ ಉದ್ದೇಶ್ಯ ದೇವತೆಯಾದ ಪರಮಾತ್ಮಾವೂ, ಸಮರ್ಪಣೆಗೆ ಅರ್ಹವಾದ ಜೀವಾತ್ಮ ಹವಿಸ್ಸಾದ ತಾನೂ, ಹೀಗೆ ಎರಡೂ, ಓಂ ಎಂಬ ಪ್ರಣವದಲ್ಲಿರಬೇಕು. ಅಕಾರವು ಉದ್ದೇಶ್ಯ ದೇವತಾ ವಾಚಕವಾದ ಪದವು; ಉಕಾರವು ಈ ಎರಡ ಅರ್ಥವೂ ಅಲ್ಲದೆ ಅನ್ಯಯೋಗವ್ಯವಚ್ಛೇದವನ್ನು ಬೋಧಿಸುವ ಅವಧಾರಣವಾಯಿತು; ಇನ್ನು ಮಿಕ್ಕದುದು ಮಕಾರವು ಒಂದೇ. ಅದು ಪ್ರತ್ಯಗಾತ್ಮವಾದ ತನ್ನನ್ನೇ ಅವಶ್ಯ ಬೋಧಿಸಲೇ ಬೇಕೆಂದು ಭಾವಿಸಿ, ಅಹಂ ಎಂಬ ಅರ್ಥವುಳ್ಳದು, ಎಂದು ತೀರ್ಮಾನಿಸುವದೇ ತುಂಬಾ ಉಚಿತವಾದಅರ್ಥವೆಂಬಭಾವವು. "ಓಂ" ಇತ್ಯಾತ್ಮಾನಂ ಯುಂಜೀತ - ನೀನು ನಿನ್ನ ಆತ್ಮಾವನ್ನು ಓಂ ಎಂದು ಹೇಳಿ ಪರಮಾತ್ಮನಲ್ಲಿ ಸಮರ್ಪಿಸತಕ್ಕದ್ದು, ಎಂಬುದು ಮಂತ್ರವಾದುದರಿಂದ ಓಂ ಎಂಬುದರ ಅರ್ಥವು "ನಾನು ಅಕಾರ ವಾಚ್ಯನಾದ ನಿನಗೇ ಶೇಷಭೂತನಾದುದರಿಂದ ನಿನಗೇನೇ ಸಮರ್ಪಿಸಿರುತ್ತೇನೆ" ಎಂದೇ ಆಗಬೇಕೆಂಬ ತಾತ್ಪರ್ಯವು.

ಮುಂದೆ ಇದು ವಾದಮೂಲಕ ಕಲ್ಪಿಸಿದ ಅರ್ಥವಲ್ಲವು. ಹಿರಿಯರಾಗಿ ಅಭಿಯುಕ್ತರಾದ ಶ್ರೀಪರಾಶರ ಭಟ್ಟರ ಅರ್ಥವಾದುದರಿಂದ ಸಾಂಪ್ರದಾಯಿಕವಾಗಿ ಬಂದುದು. ಆದುದರಿಂದ ಈ ಅರ್ಥವು ಪರಮಗ್ರಾಹ್ಯವೆಂದು ಅವರ ದಿವ್ಯಸೂಕ್ತಿಯನ್ನು ಉದಾಹರಿಸುತ್ತಾರೆ—ಆಗೈಯಯಾಲೇಯಿರೆ - ಹೀಗೆ ಪಾಕರಕ್ಕೆ ಸಮರ್ಪಣೀಯ ಹವಿಸ್ಸಿನ ರೂಪದಲ್ಲಿ ಅಹಂ ಎಂಬರ್ಥವೇ ತುಂಬಾ ಉಚಿತವಾದುದರಿಂದಲ್ಲವೇ, ಭಟ್ಟರ್ - ಶ್ರೀ ಪರಾಶರ ಭಟ್ಟರು, ಇಜ್ಙ್ಗತ್ತಪ್ರಣವತ್ತುಕ್ಕು – ಈ ಮೂಲಮನ್ತ್ರದ ಪ್ರಣವಕ್ಕೆ, ಅಕಾರಾರ್ಥಾಯ್ಯೈವ ಸ್ವಮುಹಮ್, ಅಹಂ - ನಾನು ಅಕಾರಾರ್ಥಾಯ್ಯೈವ - ಅಕಾರ ವಾಚ್ಯನಾದ ಶ್ರೀ ಮಹಾ ವಿಷ್ಣುವಿಗೇನೇ, ಸ್ವಂ –

(೧) ಅಷ್ಟಶ್ಲೋಕೀ. ೩.

ಶೇಷಭೂತನು, ಆತನ ಸ್ವತ್ತು ಎಂಬ ಭಾವವು" ಎನ್ರು - ಎಂದು, ವ್ಯಾಖ್ಯಾನಂ ಪಣ್ಣಿತ್ತು - ವ್ಯಾಖ್ಯಾನವು ಮಾಡಲ್ಪಟ್ಟಿದುದು. ಈ ಪೂರಾ ಶ್ಲೋಕವು ಯಾವು ದೆಂದರೆ.—"**ಅಕಾರಾರ್ಥಾಯೈವ ಸ್ವಮಹ ಮಥಮಹ್ಯಂ ನ ನಿವಹಾ ನರಾಣಾಂ ನಿತ್ಯಾನಾ ಮಯನಮಿತಿ ನಾರಾಯಣಪದಮ್ | ಯಮ್ಮೈಹಾಸ್ಮೈ ಕಾಲಂ ಸಕಲಮಪಿ ಸರ್ವತ್ರ ಸಕಲಾಸ್ವವಸ್ಥಾ ಸ್ವಾವಿಶ್ಯುರ್ಮಮ ಸಹಜ ಕೈಙ್ಕರ್ಯ ವಿಧಯಃ ||**" ಈ ಅಷ್ಟಶ್ಲೋಕಿಯ ಪ್ರಥಮ ಶ್ಲೋಕದ ಉತ್ತರಾರ್ಧ ವಾದ "**ಉಕಾರೋಽನನ್ಯಾರ್ಹಂ ನಿಯಮಯತಿ ಸಂಬಂಧ ಮನಯೋಸ್ತ್ರ ಯೀಸಾರಸ್ತ್ಯಾತ್ಮಾ ಪ್ರಣವಮಿಮ ಮರ್ಥಂ ಸಮದಿಶತ್**" ಎಂಬುದರಿಂದ ಮಕಾರವಾಚ್ಯನು ಅಕಾರ ವಾಚ್ಯನಿಗೇ ಶೇಷಭೂತನೆಂದು ಉಪದೇಶಿಸಿರುತ್ತಾರೆ. ಆದರೆ ಈ ಶ್ಲೋಕದಲ್ಲಿ "ಅಹಂ ಎಂಬರ್ಥವು ಬೋಧಿತವಾಗುವದರಿಂದ ಈ ನಾರಾ ಯಣ ಶಬ್ದಾರ್ಥವನ್ನು ಉಪದೇಶಿಸುವ ಈ ಶ್ಲೋಕವನ್ನು ಇಲ್ಲಿ ಶ್ರೀ ದೇಶಿಕರವರು ಉದಾಹರಿಸಿರುತ್ತಾರೆ. ಇದರ ಅರ್ಥವೇನೆಂದರೆ—**ಅಹಂ** - ಮಕಾರವಾಚ್ಯ ನಾದ ನಾನು, **ಅಕಾರಾರ್ಥಾಯೈವ**-ಅಕಾರವಾಚ್ಯನಾದ ಶ್ರಿಯಃ ಪತಿಗೇನೇ ಅನ ನ್ಯಾರ್ಹ ಶೇಷಭೂತನು. ಇದೇ ಪ್ರಣವಾರ್ಥದ ಅನುವಾದವು, ಇಲ್ಲಿ ಕೆಲವು ಆಚಾರ್ಯರುಗಳು, ಈ ಅಹಂ - ಶಬ್ದವು ಅಸ್ಮಚ್ಛಬ್ಧದ ಮುಖ್ಯ ವ್ಯಂಜನವಾದ ಮ ಕಾರದಿಂದ ಶಾಬ್ದವಾಗಿಯೇ ತೋರಿಬರುತ್ತದೆಂಬುದಕ್ಕಾಗಿ ಉದಾಹೃತವು, **ಅಹಂ ಮಹ್ಯಂನ** - ನನಗೆ ಶೇಷಭೂತನು ನಾನಲ್ಲವು, ಇದು ನಮಃ ಎಂಬ ಸಖಂಡ ನಮಸ್ಸಿನಾರ್ಥವು. ಮುಂದೆ ನಾರಾಯಣಾಯ ಎಂಬ ಪದದ ಅರ್ಥವನ್ನು ಬೋಧಿ ಸುತ್ತಾರೆ, ಇದು ಪ್ರಕೃತಕ್ಕೆ ಬೇಕಾಗಿಲ್ಲವು, ಮುಂದೆ ಬೇಕಾಗುತ್ತದೆ.

**ಮುಂದೆ ನಮಶ್ಶಬ್ದಾರ್ಥವು ಉಪದೇಶಿಸಲ್ಪಡುತ್ತದೆ; ನಮಶ್ಶಬ್ದದಿಂದ ತಾನು ತನಗೆ ಶೇಷಭೂತನಲ್ಲವು, ಪರಮಾತ್ಮನಿಗೇನೇ ಶೇಷನು.**

---

ಇದುವರೆಗೂ ಪ್ರಣವಾರ್ಥವು ಸಮಗ್ರವಾಗಿ ಉಪದೇಶಿಸಲ್ಪಟ್ಟಿತು. ಮುಂದಕ್ಕೆ ಮೂಲಮನ್ತ್ರದ ಎರಡನೆಯ ಪದವಾದ **ನಮ** ಶ್ಶಬ್ದಕ್ಕೆ ಅರ್ಥವನ್ನು ಬರೆಯುತ್ತಾರೆ.—**ನಮಃ** ಎಂಬ ಶಬ್ದವನ್ನು ಅಖಂಡವಾಗಿಯೂ **ಸಖಂಡವಾ** ಗಿಯೂ ಭಾವಿಸಬಹುದು. ಸಖಂಡವಾದಾಗ ನ, ಮಃ ಎಂಬದಾಗಿ ಮಃ ನ ಎಂದರ್ಥ ಹೇಳಬಹುದು. ಆ ಸಂದರ್ಭದಲ್ಲೂ, ಮ ಕಾರವು ಜೀವಾತ್ಮ ಪರ ವೆಂದೂ,ಮಃ ಎಂಬ ಪದವು. ಷಷ್ಠ್ಯೈಕ ವಚನವೆಂದು ಭಾವಿಸಿದರೆ ಮಮ ಎಂದಾ ಗುತ್ತದೆ, **ನಮಃ** ಎಂಬುದರಿಂದ **ನಮಮ** ಎಂದರ್ಥವಾಗಿ, ನನ್ನದಲ್ಲವು ಎಂಬರ್ಥ ಉಂಟಾಗುತ್ತದೆಂದು ಉಪದೇಶಿಸುತ್ತಾರೆ, ಹೀಗೆ ಅರ್ಥಮಾಡುವದರಿಂದ ಓಂ **ನಮಃ** ಎಂಬೀ ಎರಡು ಪದಗಳಿಂದ ತೋರುವ ಅರ್ಥವೇನೆಂದರೆ—"ಜ್ಞಾನ

## ಅಥ ನಮಶ್ಶಬ್ದಾರ್ಥಃ; ನಮಸಾ ಸ್ವಶೇಷತ್ವನಿಷೇಧಃ.

**ಇಪ್ಪಡಿಯೇ ನಮಸ್ಸಿಲ್ ಮಕಾರಂ ಮೂನ್ರತ್ತೊರು ಪ್ರಕಾರತ್ತಾಲೇ ಪ್ರತ್ಯಗಾತ್ಮಾವೈ ಚ್ಚೊಲ್ಲುಗಿರದು. ಇದು ಷಷ್ಠ್ಯೇವಿಭಕ್ತ್ಯಂತಮಾಗ್ಯೈಯಾಲುಮ್, ನಕಾರಮ್ ನಿಷೇಧತ್ತೈ ಚ್ಚೊಲ್ಲುಗೈಯಾಲುಮ್, "ನಮಮ" ಎನ್ರದಾಯಿತ್ತು.**

---

ತ್ಮಾನಂದತತ್ವಾಮಲತತ್ವಗಳಿಂದ ಪರಿಶುದ್ಧನಾಗಿರುವ ಸಹಜಶೇಷನಾದ ನಾನು ಲಕ್ಷ್ಮೀ ವಿಶಿಷ್ಟನಾಗಿ, ಜಗತ್ಕಾರಣನಾಗಿ ಜಗದ್ರಕ್ಷಕನಾಗಿ ಸರ್ವಶೇಷಿಯಾಗಿರುವ ಪರಮಾತ್ಮನಿಗೇನೇ ಸಮರ್ಪಣೀಯನೇ ವಿನಾ, ನಾನು ನನಗಲ್ಲವು" ಎಂಬರ್ಥವೆಂದು ಮುಂದೆ ಉಪದೇಶಿಸುತ್ತಾರೆ.—**ಇಪ್ಪಡಿಯೇ** - ಪ್ರಣವದ ಮಕಾರವು ಹೇಗೆ ಅಹಮರ್ಥವುಳ್ಳ ಪ್ರತ್ಯಗಾತ್ಮನನ್ನು ಬೋಧಿಸುತ್ತದೋ ಹಾಗೆಯೇ, **ನಮಸ್ಸಿಲ್** - ಮೂಲಮಂತ್ರದ ಎರಡನೆಯ ಪದವಾದ ನಮಶ್ಶಬ್ದದಲ್ಲಿ, **ಮೂನ್ರತ್ತೊರು ಪ್ರಕಾರತ್ತಾಲೇ** - ಹಿಂದೆ ನಾವು ಉಪಪಾದಿಸಿ ಹೇಳಿದಮೂರು ಪ್ರಕಾರಗಳಲ್ಲಿ ಯಾವುದಾದರೂ ಒಂದು ವಿಧದಿಂದ, **ಪ್ರತ್ಯಗಾತ್ಮಾವೈ** - ಅಹಂ ಎಂದು ತನಗೆ ತಾನೇ ತೋರುವ ಶಕ್ತಿಯುಳ್ಳ ಜೀವಾತ್ಮನನ್ನು, **ಚೊಲ್ಲುಗಿರದು** - ಬೋಧಿಸುತ್ತದೆ. ಮೇಲೆ ಹೇಳಿದ ಮೂರು ಪ್ರಕಾರಗಳು ಯಾವುವೆಂಬುದನ್ನು ಜ್ಞಾಪಿಸುವೆವು.—(೧) ಮಕಾರವು ಜಾತ್ಯೇಕವಚನವೆಂದು ಅದರಲ್ಲಿ ತಾನೂ ಅಂತರ್ಗತನೆಂದು ಭಾವಿಸೋಣವು, (೨) ಅಹಂ ಶಬ್ದ ಅಧ್ಯಾಹಾರದಿಂದ ಮಕಾರವನ್ನು ಅಹಂ ಎಂಬುದಕ್ಕೆ ವಿಶೇಷಣವೆಂದು ಭಾವಿಸೋಣವು, (೩) ಅಸ್ಮತ್ ಶಬ್ದದ ಪೂರ್ವಾಪರ ಲೋಪಗಳಿಂದ ಮ್ ಎಂಬ ವ್ಯಂಜನವು ನಿಂತಿತೆಂದು ಭಾವಿಸೋಣವು, ಹೀಗೆ **ಮೂನ್ರತ್ತೊರು ಪ್ರಕಾರತ್ತಾಲೇ**–ಈ ಮೂರುವಿಧ ಯೋಜನೆಯಲ್ಲಿ ಯಾವುದಾದರೂ ಒಂದನ್ನು ಅಙ್ಗೀಕರಿಸಿದರೂ ಪ್ರತ್ಯಗಾತ್ಮವೇ ಹೇಳಲ್ಪಟ್ಟನೆಂಬುದು ಸಿದ್ಧಿಸುತ್ತದೆಂಬ ಭಾವವು. ಹೀಗಾದನಂತರ, ನಮಃ ಎಂಬುದನ್ನು ಸಹಿತ ನಮಸ್ಸಾಗಿ ಭಾವಿಸಿ ಎರಡು ಪದಗಳಾದರೆ ನ, ಮಃ ಎಂದಾಯಿತು. ಮ್ ಎಂಬ ಪದವು ಪ್ರತ್ಯಗಾತ್ಮನನ್ನು ಬೋಧಿಸುವ ಪ್ರಥಮಾಂತಪದವು, ಇದರ ಷಷ್ಠಿಯು ಮಃ ಎಂದಾಗುತ್ತದೆ. ಇದು ಅಸ್ಮಚ್ಛಬ್ದದ ಷಷ್ಠ್ಯರ್ಥವುಳ್ಳದಾದುದರಿಂದ ನನಗೆ ಎಂದರ್ಥವುಳ್ಳದ್ದಾಯಿತು. ಆಗ ಅರ್ಥವೇನೆಂದರೆ—ಈ ಶೇಷಭೂತನಾದ ನಾನು ಅಕಾರವಾಚ್ಯನಾದ ಶೇಷಿಗೆ ವಿನಾ, ನನಗಲ್ಲವು ಎಂಬರ್ಥವು ತೋರಿಬರುತ್ತದೆ ಎಂದು ಮುಂದಿನವಾಕ್ಯದಿಂದ ತಿಳಿಸುತ್ತಾರೆ. **ಇದು** - ಈ **ನಮಃ** ಎಂಬಲ್ಲಿರುವ ಮಃ ಎಂಬ ಪದವು, ಷಷ್ಠೀ ವಿಭಕ್ತ್ಯಂತಮಾಗ್ಯೈಯಾಲುಮ್ - ಷಷ್ಠೀವಿಭಕ್ತಿ ಪ್ರತ್ಯಯವನ್ನು ಹೊಂದಿರುವದರಿಂದಲೂ, **ನಕಾರಮ್ ನಿಷೇಧತ್ತೈಚ್ಚೊಲ್ಲುಗ್ಯೈ**

**ನಿಷೇಧತ್ತಿಲ್ ಆದರಾತಿಶಯಂ ತೋತ್ತ್ರುಗೈಕ್ಕಾಗ "ನಜ್" ಮುನ್ನೇ ಕಿಡಕ್ಕಿರದು ; ಇದು (೧) "ದೃಷ್ಟಾ ಸೀತಾ" ಎನ್ನುಮಾಪ್ಪೋಲೇ ಯಿರುಕ್ಕಿರದು.**

**ಯಾಲುಮ್** - ನಕಾರವು ನಿಷೇಧಾರ್ಥವನ್ನು ಹೇಳುವದರಿಂದಲೂ, **ನಮಃ** ಎಂದರೆ **ನಮಮ** ಎನ್ರುದಾಯಿತ್ತು - ನನಗೆ ಸಂಬಂಧಿಸಿದುದಲ್ಲವೆಂದು ಹೇಳಿದಂತಾಯಿತು. ಶ್ರೀ ಯಾಮುನಮುನಿಗಳು "**ಮಮ ನಾಥಯದಸ್ತಿಯೋಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ**" (ಸ್ತೋ. ೫೩) ಎಂಬಲ್ಲಿ ಹೇಳಿರುವಹಾಗೆ ನನ್ನ ಆತ್ಮವೂ ನಿನ್ನದೇ ವಿನಾ ನನಗೆ ಸಂಬಂಧಿಸಿದುದಲ್ಲವು, ನಿನಗೇನೇ ಶೇಷಭೂತವಾದುದು ಎಂಬ ಭಾವವು. ಶ್ರೀ ನಮ್ಮಾಳ್ವಾರ್ರುವರೂ "**ಎನದಾವಿಯುಮುನದೇ**"ಎಂದು ಹಾಗೆಯೇ ಹೇಳಿರುತ್ತಾರೆ

ಆಗಲಿ, ಈ ಜೀವಾತ್ಮಾ ತನ್ನದಲ್ಲವು, ಎಂಬ ಅಭಿಪ್ರಾಯ ಉಂಟಾಗಬೇಕಾದರೆ **ಮಮನ** ಎಂದು ಅರ್ಥ ಬರುವದಕ್ಕಾಗಿ **ಮಃನ** ಎಂದಲ್ಲವೇ ಮಂತ್ರವು ಹೇಳತಕ್ಕದ್ದು, ನಮಃ ಎಂದು ಹೇಳಲು ಕಾರಣವೇನೆಂದರೆ, ಇದಕ್ಕೆ ಉತ್ತರವನ್ನು ಒಂದು ದೃಷ್ಟಾಂತಮುಖೇನ ತಿಳಿಸುತ್ತಾರೆ.—**ನಿಷೇಧತ್ತಿಲ್** - ಪರಮಾತ್ಮನ ಸ್ವತ್ತಾದ ಈ ಜೀವಾತ್ಮನು ತನ್ನ ಸ್ವತ್ತಲ್ಲವೆಂದು ನಿಷೇಧಿಸಿ ಹೇಳುವದರಲ್ಲಿ, **ಆದರಾತಿಶಯಂತೋತ್ತುಗೈಕ್ಕಾಗ**-ಆದರಾತಿಶಯವನ್ನು ವ್ಯಕ್ತಪಡಿಸುವದಕ್ಕಾಗಿ, **ನಜ್**-ನ ಎಂಬ ಪದವು, **ಮುನ್ನೇ ಕಿಡಕ್ಕಿರದು** - ಮಃ ಎಂಬುದಕ್ಕೆ ಮುಂದೆ ಇರುತ್ತದೆ. **ಇದು** - ಹೀಗೆ ಹೇಳಿರುವದು, "**ದೃಷ್ಟಾ ಸೀತಾ**" **ಎನ್ನುಮಾಪ್ಪೋಲೆ** - **ಕಾಣಲ್ಪಟ್ಟಳು ಸೀತೆಯು**, ಎಂದು ಆಂಜನೇಯನು ಹೇಗೆ ಆದರಾತಿಶಯದಿಂದ ಶ್ರೀರಾಮನಿಗೆ ಅರಿಕೆ ಮಾಡಿಕೊಂಡರೋ ಹಾಗೆ, **ಇರುಕ್ಕಿರದು**-ಇರುತ್ತದೆ. ಪ್ರಾಜ್ಞನಾದ ಆಂಜನೇಯನು ಸೀತಾದೃಷ್ಟಾ ಎಂದು ಹೇಳದೆ, **ದೃಷ್ಟಾಸೀತಾ** ಎಂಬು ಹೇಗೆ ಆದರಾತಿಶಯದಿಂದ ಖೇದವನ್ನು ಹೊಂದಿರುವ ಶ್ರೀರಾಮನಿಗೆ ತಿಳಿಸಿದನೋ, ಹಾಗೆಯೇ ಪ್ರಾಜ್ಞನಾದ ಪ್ರಸನ್ನನಿಗೆ ಈ ಆತ್ಮವು ತನ್ನದಲ್ಲವೆಂದು ನಿಷೇಧಿಸಿ ಹೇಳುವದು ಮುಖ್ಯವಾಗಿ ನ ಎಂಬ ಪದವನ್ನು ಮೊದಲು ಹೇಳಿ, ಅನಂತರ ಮಃ ಎಂಬ ಪದವನ್ನು ಹೇಳಿತು ಎಂಬ ಭಾವವು. ಸೀತಾ ದೃಷ್ಟಾ ಎಂದು ಹೇಳಲುಪಕ್ರಮಿಸಿ, ಸೀತಾ ಎಂದು ಹೇಳಿದರೆ, ಸೀತೆಯು ಏನಾದಳೋ ಎಂಬ ಕಾತರವು ಪೂರಾ ಕೇಳುವವರಿಗೂ ಉಂಟಾಗಬಹುದು. ಹಾಗೆಯೇ ಇಲ್ಲಿಯೂ ಕೂಡ ಮಃ ಎಂದರೆ ಮಮ ಎಂದು ಮೊದಲು ಹೇಳಿದರೆ, ಈ ಆತ್ಮಾನನ್ನದೇ ಎಂದೇನಾದರೂ ಹೇಳಲ್ಪಡುತ್ತದೋ ಎಂಬ ಸಂದೇಹಬಾರದಿರುವದಕ್ಕಾಗಿ ಎಂದಾದರೂ ಆಗಬಹುದು. ಈ ಅರ್ಥಕ್ಕಿಂತ ಆಂಜನೇಯನು ಹೇಗೆ

(೧) ರಾಮಾ. ಬಾ. ೧. ೨೮ ಮತ್ತು ಸುಂದರ.

**ಇವ್ವಿಕಾರತ್ತಿಲ್ ಷಷ್ಠಿಯಾನದು ಸಂಬಂಧಸಾಮಾನ್ಯಮುಖತ್ತಾಲೇ ಉಚಿತ ಸಂಬಂಧ ವಿಶೇಷತ್ತೈ ವಿವಕ್ಷಿಕ್ಕಿರದು.**

**ಇವ್ವಭಿಪ್ರಾಯತ್ತಾಲೇಯಿರೇ ಭಟ್ಟರುಮ್, (೨) ಅಥಮಹ್ಯಂನ"**

---

ತನ್ನ ಆದರಾತಿಶಯ ಪ್ರದರ್ಶನಕ್ಕಾಗಿ ಹೇಗೆ ದೃಷ್ಟಾ ಸೀತಾ ಎಂದು ಹೇಳಿದನೋ, ಹಾಗೆಯೇ ಇಲ್ಲಿಯೂ ಆತ್ಮಸಮರ್ಪಣೆಯನ್ನು ಮಾಡುವ ಕ್ಷೇತ್ರಜ್ಞನ ಆದರಾತಿಶಯವನ್ನು ಪ್ರದರ್ಶಿಸುತ್ತದೆಂದು ಭಾವಿಸುವದೇ ಯುಕ್ತವಾದುದು. ಏಕೆಂದರೆ ಸರ್ವಜ್ಞನಾದ ಸರ್ವೇಶ್ವರನಿಗೆ ಭಯವಾಗಲಿ ಶಙ್ಕೆಯಾಗಲಿ ಉಂಟಾಗುವದಕ್ಕೆ ಕಾರಣವಿಲ್ಲವಷ್ಟೇ.

ಹಿಂದೆ ನಮಃ ಎಂಬಲ್ಲಿನ ಮಃ ಎಂಬುದು ಷಷ್ಠೀ ವಿಭಕ್ತಿ ಎಂದು ಹೇಳಿದರು ಎಂತಹ ಷಷ್ಠೀ ವಿಭಕ್ತಿ ಯೆಂಬುದನ್ನು ಈ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—**ಇವ್ವಿಕಾರತ್ತಿಲ್** - ಈ ಮಕಾರದ, **ಷಷ್ಠಿಯಾನದು** —ಷಷ್ಠಿಯಾದುದು, **ಸಂಬಂಧ ಸಾಮಾನ್ಯ ಮುಖತ್ತಾಲೇ** - ಸಂಬಂಧ ಸಾಮಾನ್ಯ ಷಷ್ಠಿಯ ಮೂಲಕ, **ಉಚಿತ ಸಂಬಂಧ ವಿಶೇಷತ್ತೈ** - ತನಗೆ ಯೋಗ್ಯವಾದ ಸಂಬಂಧವನ್ನು, **ವಿವಕ್ಷಿಕ್ಕಿರದು** - ಉಪದೇಶಿಸುತ್ತದೆ. ಯಾವ ಸಂಬಂಧವನ್ನು ಉಪದೇಶಿಸುತ್ತದೆ ? ಎಂದರೆ, ತಾನು ಪರಮಾತ್ಮನಿಗೆ ಶೇಷಭೂತನೆಂಬ ಶೇಷಿ ಶೇಷ ಸಂಬಂಧವನ್ನು ಬೋಧಿಸುತ್ತದೆ ಎಂಬ ಭಾವವು. ಇದರಿಂದ ಪರಮಾತ್ಮನೇ ತನಗೆ ಸ್ವಾಮಿಯು, ತಾನು ಆತನ ಸ್ವಂ, ಹೀಗೆ ಸ್ವಸ್ವಾಮಿಭಾವ ಸಂಬಂಧವು. **"ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿಸ್ಥಿತಮ್"** ಎಂಬುದು ಇಲ್ಲಿ ಅನುಸಂಧೇಯವು; ಇದರಿಂದ ಆತನೇ ತನಗೆ ರಕ್ಷಕನು, ತಾನು ರಕ್ಷ್ಯವಸ್ತುವು ಎಂಬ ರಕ್ಷಕ ರಕ್ಷ್ಯ ಸಂಬಂಧವು ಇಲ್ಲಿ ತೋರಿಬರುತ್ತದೆ.

ಮುಂದೆ ಈ ಸಂಬಂಧವನ್ನೇ ಮನಸ್ಸಿನಲ್ಲಿಟ್ಟು ಶ್ರೀ ಪರಾಶರ ಭಟ್ಟರು ಈ ನಮಃ ಎಂಬುದರ ಅರ್ಥವಾಗಿ "ಅಥ ಮಹ್ಯಂ ನ"ಎಂದು ಹೇಳಿರುತ್ತಾರೆಂದು ತಿಳಿಸುತ್ತಾರೆ.—**ಇವ್ವಭಿಪ್ರಾಯತ್ತಾಲೆಯಿರೇ** – **ನಮಃ** ಎಂಬ ಪದವು ನ, ಮಃ ಎಂದಾಗಿ ನಮಮ ಎಂಬರ್ಥವುಳ್ಳದು ಎಂಬುವ ಅಭಿಪ್ರಾಯದಿಂದಲೇ, **ಭಟ್ಟರುಮ್** – ಶ್ರೀ ಪರಾಶರ ಭಟ್ಟರೂ, **ಅಥ** – ಅನಂತರ, **ಅಕಾರಾರ್ಥಾಯೈವ ಸ್ವಮಹಂ** ಎಂದು ಪ್ರಣವಾರ್ಥವನ್ನು ಬೋಧಿಸಿದ ನಂತರ, **ಮಹ್ಯಂನ** – ನನಗೋಸ್ಕರ ನಾನಲ್ಲವೆಂಬು, ನಮಃ ಎಂಬುದರ ಅರ್ಥವಾಗಿ, ಎನ್ರದು - ಎಂದು ಹೇಳಿದುದು. ಈ ಅಷ್ಟಶ್ಲೋಕಿಯ ೩ನೆಯ ಶ್ಲೋಕವು ಯಾವುದೆಂದರೆ—

---

(೨) ಅಷ್ಟಶ್ಲೋಕಿ ೩.

"ಅಕಾರಾರ್ಥಾಯೈವ ಸ್ವಮಹ ಮಥಮಹ್ಯಂ ನ ನಿವಹಾ।
ನರಾಣಾಂ ನಿತ್ಯಾನಾ ಮಯನ ಮಿತಿ ನಾರಾಯಣಪದಮ್ ।
ಯ ಮಾಹಾಸ್ಮೈ ಕಾಲಂ ಸಕಲ ಮಪಿ ಸರ್ವತ್ರ ಸಕಲಾ।
ಸ್ವವಸ್ಥಾ ಸ್ವಾವಿಸ್ಯುರ್ಮಮ ಸಹಜಕೈಙ್ಕರ್ಯ ವಿಧಯಃ ॥ ೩ ॥

ಅಹಂ – ಸಹಜದಾಸಭೂತನಾದ ನಾನು, ಅಕಾರಾರ್ಥಾಯೈವ - ಅಕಾರ ವಾಚ್ಯನಾದ ಶ್ರೀಯಃಪತಿಗೇನೇ; (ಇದು ಪ್ರಣವಾರ್ಥವು) ಅಥ – ಅನಂತರ, ಅಹಂ- ಅಂತಹ ಶೇಷಭೂತನಾದ ನಾನು, ಮಹ್ಯಂನ – ನನಗಲ್ಲವು, ಆದುದರಿಂದ ಶೇಷಿಗಾಗಿ ಅವನಿಗೆ ಕೈಙ್ಕರ್ಯವಮಾಡುವದಕ್ಕಾಗಿಯೇ ಇರುವದು ಎಂಬ ಭಾವವು (ಸಖಂಡ ನಮಃಶ್ಶಬ್ದಾರ್ಥವು) ಮುಂದೆ ನಾರಾಯಣ ಪದಾರ್ಥ ವನ್ನು ಹೇಳುತ್ತಾರೆ.—ನರಾಣಾಂ ಎಂದರೆ ನಾಶರಹಿತನಾಗಿ ನಿತ್ಯವಾಗಿರುವ ಜ್ಞಾನಾನಂದಾಮಲತ್ವ ಶಕ್ತ್ಯಾದಿಗಳು, ವಾತ್ಸಲ್ಯ ಸೌಶೀಲ್ಯಾದಿ ಎಲ್ಲಾ ಕಲ್ಯಾಣ ಗುಣಗಳೂ, ದಿವ್ಯಮಙ್ಗಳ ವಿಗ್ರಹವೂ, ಕಾನ್ತಿಸೌಕುಮಾರ್ಯಾದಿಗಳೂ, ದಿವ್ಯ ಭೂಷಣ ದಿವ್ಯಾಯುಧಗಳೂ, ದಿವ್ಯ ಮಹಿಷಿಗಳೂ, ಛತ್ರ ಚಾಮರಾದಿ ಭೋಗೋಪಕರಣಗಳೂ, ದ್ವಾರಪಾಲಕಾದಿಗಣಗಳೂ, ನಿತ್ಯರೂ, ಮುಕ್ತರಾದಿ ಯಾಗಿ ಬದ್ಧಜೀವಾತ್ಮರೂ, ಮೂಲ ಪ್ರಕೃತಿ, ಕಾಲ ಇವೆಲ್ಲಾ ನಿತ್ಯವಾದವು ಗಳು, ಇಂತಹ ಸಮೂಹಕ್ಕೆಲ್ಲಾ ಅಯನಂ ಎಂದರೆ ಪ್ರಾಪ್ಯ, ಪ್ರಾಪಕ ಆಧಾರನು (ನಾರಾಯಣ ಶಬ್ದಕ್ಕೆ ತತ್ಪುರುಷ ಸಮಾಸದಿಂದ ಬರುವ ಅರ್ಥವು) ಅಥವಾ ಈ ನಾರಗಳೆಲ್ಲಾ ಯಾರಿಗೆ ಆಧಾರವೋ ಆತನು. (ಇದು ಬಹುವ್ರೀಹಿ ಅರ್ಥವು; ಇದರಿಂದ ಅಂತರ್ಯಾಮಿತ್ವ ಸೌಲಭ್ಯಗಳು ಹೇಳಲ್ಪಟ್ಟವು. ಅಸ್ಮೈ - ಇಂತಹ ನಾರಾಯಣನಿಗೆ, ಸಕಲಂಕಾಲಂ - ಎಲ್ಲಾ ಕಾಲದಲ್ಲೂ, ಸರ್ವತ್ರ - ಎಲ್ಲಾ ಕಾಲವಲ್ಲೂ, ಸಕಲಾಸು ಅವಸ್ಥಾಸು - ಸಮಸ್ತ ಅವಸ್ಥೆಗಳಲ್ಲೂ, ಮಮ - ಸ್ವರೂಪ ಜ್ಞಾನವನ್ನು ಹೊಂದಿದ ನನ್ನ, ಸಹಜಕೈಂಕರ್ಯ ವಿಧಯಃ-ಸಹಜವಾಗಿ ದಾಸಭೂತನಾದ ಕಿಂಕರನು ಮಾಡತಕ್ಕ ಕೈಂಕರ್ಯಾನುಷ್ಠಾನಗಳು, ಆವಿಸ್ಯುಃ- ಅವಿದ್ಯಾಕರ್ಮಾದಿ ಸಪ್ರಕೃತಿಸಂಬಂಧಕಗಳೂ ತೊಲಗುವದರಮೂಲಕ ಆವಿರ್ಭವಿಸು ವುವು. ಇದು ನಾರಾಯಣಾಯ ಎಂಬಲ್ಲಿರುವ ಚತುರ್ಥೀ ವಿಭಕ್ತಿಯ ಅರ್ಥವು.

ಯಾವಾಗ ಪರಮಾತ್ಮನಿಗೆ ಈತನು ಶೇಷಭೂತನೇ ವಿನಾ ಇನ್ನು ಯಾರಿಗೂ ಇಲ್ಲವೆಂಬುದು ಪ್ರಣವದ ಉಕಾರದಿಂದಲೇ ದ್ಯೋತಿತವೋ, ಆ ಅರ್ಥವೇ ಇಲ್ಲಿ ಈ ನಮಶ್ಶಬ್ದದ ಮೂಲಕವೂ ದ್ಯೋತಿತವು. ಹೇಗೆಂದರೆ, ಮಃನ ನನಗೂ ಕೂಡ ನಾನಲ್ಲವು ಎಂದು ಯಾವಾಗ ಆಯಿತೋ, ನನ್ನ ಹಾಗೆ ಇರುವ ಇತರರಿಗಲ್ಲ ವೆಂಬುದು ಹೇಳಿದಂತೇಯಾಯಿತು.

ಮುಂದೆ ಪ್ರಣವವೇ ಮೂರುವೇದದ ಸಾರ ಭಾಗವು, ಅಂತಹ ಪ್ರಣವದಲ್ಲೂ

ಎನ್ರದು. ವಾಕ್ಯಙ್ಗಳುಕ್ಕವಧಾರಣತ್ತಿಲೇ ತಾತ್ಪರ್ಯಂ ಕೊಳ್ಳುಗೈ ಉಚಿತನಾಗೈಯಾಲೇ ಇಪ್ಪ್ರಣವತ್ತಿಲ್ ಮಧ್ಯಮಾಕ್ಷರಸಿದ್ಧಮಾನ ತಾತ್ಪರ್ಯಾರ್ಥತ್ತೋಡೆ ಉರುಪ್ಪಾಯಿರುಕ್ಕಿರ ಇನ್ನಮಸ್ಸಿಲ್ ಪೊರುಳೇ ಸರ್ವತ್ತಿಲುಮ್ ಸಾರಮೆನ್ನುಮಿಡಮ್ (೩) ದ್ವ್ಯಕ್ಷರಸ್ತು ಭವೇನ್ಮೃತ್ಯು ಸ್ತ್ರ್ಯಕ್ಷರಂ ಬ್ರಹ್ಮಶಾಶ್ವತಮ್ । ಮಮೇತಿ ದ್ವ್ಯಕ್ಷರಂ ಮೃತ್ಯು ರ್ನ ಮಮೇತಿ ಚ ಶಾಶ್ವತಮ್" ಇತ್ಯಾದಿಗಳಿಲೇ ಶೊಲ್ಲಪ್ಪಟ್ಟದು. (೪) "ಸರ್ವಂ ಜಿಹ್ಮಂ ಮೃತ್ಯು

---

ಸಾರತಮವಾದುದು, ಪ್ರಣವದ ಮಧ್ಯಮಾಕ್ಷರವು ಎಂದು ಹೇಳುತ್ತಾರೆ; ಏಕೆಂದರೆ ಈ ಉಕಾರವು ಅನ್ಯಶೇಷತ್ವವನ್ನು ನಿಷೇಧಿಸಿ ಹೇಳುವದರಿಂದ, ಸಾರತಮವೆಂದು ಹೇಳಿಸಿಕೊಳ್ಳಲು ಅಭ್ಯನ್ತರವಿಲ್ಲವೆಂಬ ಭಾವವು. **ವಾಕ್ಯಂಗಳುಕ್ಕು** - ವಾಕ್ಯಗಳಿಗೆ, **ಅವಧಾರಣತ್ತಿಲೇ ತಾತ್ಪರ್ಯಂಕೊಳ್ಳುಗೈ** - ಸರ್ವ ವಾಕ್ಯವೂ ಸಾವಧಾರಣವು ಎಂಬಲ್ಲಿ ಹೇಳಿರುವಹಾಗೆ, ಅವಧಾರಣದ ಮೂಲಕ, ತಾತ್ಪರ್ಯವನ್ನು ಅಙ್ಗೀಕರಿಸುವದು, **ಉಚಿತಮಾಗೈಯಾಲೇ** - ಯೋಗ್ಯವಾದುದರಿಂದ, **ಇಪ್ಪ್ರಣವತ್ತಿಲೇ** - ಈ ಪ್ರಣವದಲ್ಲಿ, **ಮಧ್ಯಮಾಕ್ಷರಸಿದ್ಧಮಾನ** - ಮಧ್ಯಮಾಕ್ಷರವಾದ ಉಕಾರದಿಂದ ತೋರಿಬರುವ, **ತಾತ್ಪರ್ಯತ್ತೋಡೆ** - ಇತರರಿಗೆ ಶೇಷಭೂತನಲ್ಲವೆಂಬ ಅನ್ಯಯೋಗ ವ್ಯವಚ್ಛೇದರೂಪ ತಾತ್ಪರ್ಯಾರ್ಥದೊಂದಿಗೆ, **ಉರುಪ್ಪಾಯಿರುಕ್ಕಿರ** - ಅದಕ್ಕನುಸಾರವಾದ ಶೇಷತ್ವ ಸಂಬಂಧವನ್ನು ತೋರಿಸುವ, **ಇನ್ನಮಸ್ಸಿಲ್** - ಈ ನಮಸ್ಸೆಂಬ ಪದದಲ್ಲಿ ತೋರುವ, **ಪೊರುಳೇ** - ವಿಶೇಷಾರ್ಥವೇ, **ಸರ್ವತ್ತಿಲುಮ್ ಸಾರಮೆನ್ನುಮಿಡಮ್** - ಎಲ್ಲಾದಕ್ಕಿಂತ ಸಾರಭೂತವಾದುದು ಎಂದರೆ ಸಾರತಮವಾದುದು ಎಂಬುದಕ್ಕೆ ಪ್ರಮಾಣವಾಗಿ, (೩) "**ದ್ವ್ಯಕ್ಷರಸ್ತು** - ಎರಡಕ್ಷರವಾದರೋ, **ಮೃತ್ಯುಃ** - ಜರಾ ಮರಣಗಳನ್ನುಂಟುಮಾಡುವ ಸಂಸಾರ ಬಂಧವು; **ತ್ರ್ಯಕ್ಷರಂ** - ಮೂರು ಅಕ್ಷರವಾದರೋ, **ಬ್ರಹ್ಮಶಾಶ್ವತಮ್** - ಶಾಶ್ವತವಾದ ಪರಬ್ರಹ್ಮ ಪ್ರಾಪ್ತಿಯನ್ನುಂಟುಮಾಡತಕ್ಕದ್ದು. ಎರಡಕ್ಷರ ಮೂರಕ್ಷರಗಳು ಯಾವುವೆಂದರೆ ಹೇಳುತ್ತಾರೆ—**ಮಮೇತಿದ್ವ್ಯಕ್ಷರೋಮೃತ್ಯುಃ**- "**ಮಮ**" ಎಂಬೆರಡಕ್ಷರವು ಸಂಸಾರ ಬಂಧವನ್ನುಂಟುಮಾಡುವಂತಾದ್ದು; **ನಮಮೇತಿ ಚ ಶಾಶ್ವತಮ್** - ನಮಮ ಎಂದರೆ ನನ್ನದಲ್ಲವು ಎಂಬ ಮೂರಕ್ಷರವು, ಎಲ್ಲಾ ಪರಮಾತ್ಮನದೇ ಎಂದು ಹೇಳುವ "ನಮಮ" ಅಹಂಕಾರ ಮಮಕಾರಗಳನ್ನು ದೂರೀಕರಿಸುವ ಮೂರು ಅಕ್ಷರವು, **ಶಾಶ್ವತಮ್** - ಶಾಶ್ವತ ಪದವನ್ನುಂಟುಮಾಡುವಂಥಾದ್ದು," ಇದು ಸಹದೇವನು ತಮ್ಮ ಅಣ್ಣನಾದ ಯುಧಿಷ್ಠಿರನಿಗೆ ಹೇಳುವ ವಾಕ್ಯವು. ಹಾಗೆಯೇ ಗೀತೆಯಲ್ಲೂ "**ಅಹಂ**

---

(೩) ಭಾರ. ಶಾನ್ತಿ ೧೩. ೪.

ಪದ ಮಾರ್ಜವಂ ಬ್ರಹ್ಮಣಃ ಪದಮ್ । ಏತಾವಾನ್ ಜ್ಞಾನವಿಷಯಃ ಕಿಂ ಪ್ರಲಾಪಃ ಕರಿಷ್ಯತಿ । ” ಎಙ್ಗಿರ ಶ್ಲೋಕತ್ತುಕ್ಕುಮ್ ಇನ್ನಮುನಸ್ಸಿಲ್ ಪೊರುಳಿಲೇ ಪ್ರಾಧಾನ್ಯೇನ ತಾತ್ಪರ್ಯಮ್.

ಇಙ್ಗು ನಮಮ ಎಙ್ಗಿರದು ಎದೈ ಎನ್ನಿಲ್ ? ಪ್ರಣವತ್ತಿಲ್ ತೃತೀ

---

ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ । ವಿಮುಚ್ಯ ನಿರ್ಮಮ ಶ್ಶಾಂತೋ ಬ್ರಹ್ಮಭೂಯಾಯ ಕಲ್ಪತೇ” ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. (ಗೀ ೧೮. ೫೩) ಇತ್ಯಾದಿಗಳಿಲೇ - ಇವೇ ಮೊದಲಾದ ಪ್ರಮಾಣಗಳಲ್ಲಿ, ಶೊಲ್ಲಪಟ್ಟದು - ಹೇಳಲ್ಪಟ್ಟಿತು. ಇಲ್ಲಿ ಆದಿ ಪದವು ಈ ಅಭಿಪ್ರಾಯವುಳ್ಳ ಇತರ ಪ್ರಮಾಣಗಳನ್ನು ಬೋಧಿಸುತ್ತದೆ. ಅಂತಹ ಇನ್ನೊಂದು ಪ್ರಮಾಣವನ್ನೇ ತಾವೇ ಉದಾಹರಿಸುತ್ತಾರೆ—(೪) “ಇದು ಭೀಷ್ಮರು ಯುಧಿಷ್ಠಿರನಿಗೆ ಹೇಳುವ ವಾಕ್ಯವು, “ಸರ್ವಂ ಜಿಹ್ಮಂ - ಜಿಹ್ಮಂ ಎಂಬುದು ಆರ್ಜವ ವಲ್ಲದುದು, ಆದುದರಿಂದ ಅಹಂಕಾರ ಮಮಕಾರದಿಂದ ಪ್ರಾಪ್ತವಾಗುವ ಸಮಸ್ತವಾದ ಕೌಟಿಲ್ಯವೂ, ಮೃತ್ಯುಪದಂ - ಸಂಸಾರ ಪ್ರಾಪ್ತಿಗೆ ಕಾರಣವು, ಆರ್ಜವಂ - ಅಹಂಕಾರ ಮಮಕಾರ ನಿವೃತ್ತಿಯು, ಬ್ರಹ್ಮಣಃ ಪದಮ್ - ಪರಬ್ರಹ್ಮಪ್ರಾಪ್ತಿಗೆ ಸಾಧನ ಭೂತವಾದುದು, ಜ್ಞಾನವಿಷಯಃ - ಪ್ರಾಜ್ಞನು ಮುಖ್ಯವಾಗಿ ತಿಳಿಯತಕ್ಕ ವಿಷಯವು, ಏತಾವಾನ್ - ಇಷ್ಟು ಮಾತ್ರವೇ ; ಪ್ರಲಾಪಃ - ಮಿಕ್ಕ ಹರಟೆ ಎಲ್ಲಾ, ಕಿಂಕರಿಷ್ಯತಿ - ಏನನ್ನು ಸಾಧಿಸಿ ಕೊಟ್ಟೀತು ? ಬರೀ ನಿಷ್ಫಲವಾದುದು ಎಂಬ ಭಾವವು.” ಎಙ್ಗಿರಶ್ಲೋಕತ್ತುಕ್ಕುಮ್ - ಎಂಬ ಶ್ಲೋಕಕ್ಕೂ ಸಹ, ಇನ್ನಮುಸ್ಸಿಲ್ಪೊರುಳಿಲೇ - ಈಗ ನಾವು ಹೇಳಿದ ನಮಸ್ಸಿನಲ್ಲಿರುವ ಅರ್ಥವೇ ಪ್ರಾಧಾನ್ಯೇನತಾತ್ಪರ್ಯಮ್ - ಮುಖ್ಯವಾದ ತಾತ್ಪರ್ಯವು ; ಮಿಕ್ಕ ಅರ್ಥಗಳನ್ನುಳ್ಳದ್ದಾಗಿಯೂ ಉಪಪಾದಿಸಿ ಹೇಳಬಹುದು. ಪ್ರಧಾನವಾದ ಅರ್ಥವು, ಅನ್ಯಶೇಷಿತ್ವವನ್ನು ನಿರಾಕರಿಸಿ ಪರಮಾತ್ಮ ಶೇಷಿತ್ವವನ್ನು ಸಾಧಿಸುವ ಅರ್ಥವೇ ಎಂಬ ಭಾವವು.

ನಮಃ ಎಂದರೆ ನಮಮ ಎಂಬರ್ಥವೇನೋ ಉಂಟಾಗುವದು ಸಹಜವೇ ಸರಿ. ಆದರೆ ಯಾವುದು ನಮಮ? ಎಂಬುದಕ್ಕೆ ಕರ್ತೃಪದವೇ ಇಲ್ಲವೇ ಎಂದರೆ ಪ್ರಣವದಲ್ಲಿರುವ ಮಕಾರದ ಅನುಷಂಗವಿರುವದರಿಂದ ಎಂದರೆ ಹತ್ತಿರ ಸಂಬಂಧವಿರುವದರಿಂದ, ಆ ಪದವಾದ ಪ್ರತ್ಯಗಾತ್ಮನನ್ನೇ ಅನುಷಂಗಿಕವಾಗಿ ಇಟ್ಟುಕೊಳ್ಳತಕ್ಕದ್ದು ಎಂದು ಸಮಾಧಾನವನ್ನು ಹೇಳುತ್ತಾರೆ—ಇಙ್ಗು ಈ ಸ್ಥಳವಲ್ಲಿ, ನಮಮ - ನನ್ನದಲ್ಲವು, ಎಙ್ಗಿರದು-ಎಂದು ಹೇಳಲ್ಪಟ್ಟಿದು. ಎದೈಎನ್ನಿಲ್ - ಯಾವುದನ್ನು

---

(೪) ಭಾರ. ಶಾನ್ತಿ. ೭೯. ೨೧.

**ಯಾಕ್ಷರತ್ತೈ ಅನುಷಂಗಿತ್ತು ನಾನೆನಕ್ಕುರಿಯೇ ನಲ್ಲೇನೆನ್ರದಾಯಿತ್ತು. ಅಧ್ಯಾಹಾರತ್ತಿರಾಕ್ಕಟ್ಟಲ್ ಅನುಷಂಗ ಮುಚಿತ ಮೆನ್ರುಮಿಡಪ್ ಅನುಷಂಗಾಧಿಕರಣ ಸಿದ್ಧಮ್.**

---

ಎಂದರೆ ? **ಪ್ರಣವತ್ತಿಲ್** - ಪ್ರಣವದಲ್ಲಿರುವ, **ತೃತೀಯಾಕ್ಷರತ್ತೈ**-ಮೂರನೆಯ ಅಕ್ಷರವಾದ ಮಕಾರವನ್ನೇ, **ಅನುಷಂಗಿತ್ತು** - ಹತ್ತಿರವಿರುವ ಪದವಾದುದರಿಂದ ಅದನ್ನು ಸಂಬಂಧಿಸಿಕೊಂಡು, ಎಂದರೆ ಅದನ್ನು ಆಕರ್ಷಿಸಿ, **ನಾನೆನಕ್ಕುರಿಯ ನಲ್ಲೇ ನೆನ್ರದಾಯಿತ್ತು, ನಾನೆನಕ್ಕು** - ನಾನು ನನಗೆ, **ಉರಿಯೇನ್** - ಅಂತರಂಗನು ಎಂದರೆ ಶೇಷಭೂತನು, **ಅಲ್ಲೇನೆನದ್ರಾಯಿತ್ತು** - ಅಲ್ಲವು ಎಂದು ಹೇಳಿದಂತಾಯಿತು.

ಹಿಂದೆ ಪ್ರಣವಾರ್ಥವನ್ನು ವಿವರಿಸುವಾಗ ಮಕಾರಕ್ಕೆ ಸ್ವಾತ್ಮಸಮರ್ಪಣಾರ್ಥವು ಉಂಟಾಗುವದಕ್ಕಾಗಿ ಅಹಂ ಎಂಬ ಪದವನ್ನು ಕೆಲವು ಆಚಾರ್ಯರು ಅಧ್ಯಾಹಾರಮಾಡಿ ಆಹಮರ್ಥವನ್ನು ಬೋಧಿಸಿದರು ಎಂದು ಹೇಳಲ್ಪಟ್ಟಿತಲ್ಲಾ; ಹಾಗೆಯೇ ಇಲ್ಲಿಯೂ ಸಹ, ಅಹಂ ನಮಃ ಎಂದರ್ಥಮಾಡಬಹುದಲ್ಲಾ, ಎಂದರೆ ಅನುಷಙ್ಗದಿಂದಲೇ ಆ ಅರ್ಥವು ಉಂಟಾಗುವಾಗ, ಅಧ್ಯಾಹಾರವು ಬೇಕಾಗಿಲ್ಲವೆಂದು ಹೇಳಲು ಹೊರಟು, ಅನುಷಂಗಾಧಿ ಕರಣದಲ್ಲಿ ಅಧ್ಯಾಹಾರಕ್ಕಿಂತ ಅನುಷಂಗವೇ ಉಚಿತವು ಎಂದು ಹೇಳುವದರಿಂದ, ಅನುಷಂಗದಿಂದ ಹಿಂದೆ ಅಥವಾ ಮುಂದೆ ಹತ್ತಿರದಲ್ಲೇ ಪ್ರಯೋಗಿಸಿರುವ ಪದವನ್ನು ಸೇರಿಸಿ ಕೊಂಡು ಅರ್ಥ ಮಾಡುವ ಈ ಎರಡನೆಯ ಕ್ರಮವೇ ಸಾಧುವಾದುದು ಎಂದು ಹೇಳುತ್ತಾರೆ.— **ಅಧ್ಯಾಹಾರತ್ತಿರಾಕ್ಕಟ್ಟಿಲ್** - ಅಧ್ಯಾಹಾರಮಾಡಿ ಅರ್ಥಮಾಡುವದಕ್ಕಿಂತ, **ಅನುಷಂಗಂ** – ಹತ್ತಿರ ಪ್ರಯೋಗಿಸಿರುವ ಪದವನ್ನಿಟ್ಟುಕೊಂಡು ಅರ್ಥಮಾಡುವದು, **ಉಚಿತಮೆನ್ರುಮಿಡಪ್** - ಸಾಧುವಾದುದು ಎಂಬುವ ಸಂದರ್ಭವು, **ಅನುಷಂಗಾಧಿಕರಣಸಿದ್ಧಮ್** - ಪೂರ್ವಮೀಮಾಂಸೆಯ ಅನುಷಂಗಾಧಿಕರಣದಲ್ಲಿ ಸ್ಥಾಪಿತವು. ಇವಕ್ಕೆ ನಿದರ್ಶನವು ಹೇಗೆಂದರೆ—"**ಚಿತ್ಪತಿಸ್ತ್ವಾ ಪುನಾತು ; ವಾಕ್ಪತಿಸ್ತ್ವಾ ಪುನಾತು ; ದೇವಸ್ತ್ವಾ ಪುನಾತ್ವಚ್ಛಿದ್ರೇಣಪವಿತ್ರೇಣ**" ಎಂಬಲ್ಲಿ **ಅಚ್ಛಿದ್ರೇಣ ಪವಿತ್ರೇಣ** ಎಂಬುದು, ಮೂರನೆಯ ವಾಕ್ಯದಲ್ಲಿ ಅನುಷಂಗವಿರುವದರಿಂದ ಮೊದಲು ಎರಡು ವಾಕ್ಯಗಳಲ್ಲೂ ಇಟ್ಟುಕೊಳ್ಳತಕ್ಕದ್ದು ಹೇಗೋ, ಹಾಗೆಯೇ ಇಲ್ಲಿಯೂ ಎಂಬ ಭಾವವು; ಇನ್ನೊಂದು ಉದಾಹರಣೆಯನ್ನು ಸಾರವಿವರಣೆಯುವರು ಕೊಟ್ಟಿರುತ್ತಾರೆ; ಪರಾಂಬರಿಸಬಹುದು.

**ಪ್ರಣವದಲ್ಲೇ** ಮಕಾರಕ್ಕೆ ಮೂರನೆಯ ಯೋಜನೆಯಲ್ಲಿ **ಅಸ್ಮತ್** ಎಂಬ ಶಬ್ದದ ಪೂರ್ವಾಪರ ಲೋಪದಿಂದ ಪ್ರಾಪ್ತವಾಗುವ **ಮ್** ಎಂಬುದರಿಂದ, ಅಕಾರ

'ಇಜ್ಗು "ನಮಮಾಹಂ" ಎನ್ರು ವಿಶೇಷಿಕ್ಕೈಯಾಲೇ ಕೀಳ್‌ಅನ್ಯಶೇಷ ತ್ವತ್ತೈಕ್ಕಳಿಕ್ಕಿರ ಮಧ್ಯಮಾಕ್ಷರಂ ಗೋಬಲೀವರ್ದನ್ಯಾಯತ್ತಾಲೇ ಸ್ವವ್ಯತಿರಿಕ್ತ ವಿಷಯಮ್,

---

ವಾಚ್ಯನಾದ ಶ್ರೀಯಃ ಪತಿಯಾಗಿ ಜಗತ್ಕಾರಣವಾಗಿ ಸರ್ವರಕ್ಷಕನಾಗಿ ಸರ್ವಶೇಷಿ ಯಾಗಿರುವವನಿಗೇನೇ ಮಕಾರವಾಚ್ಯನಾಗಿ ಜ್ಞಾನತ್ವಾನಂದ ತ್ವಾಮಲತ್ವಗಳುಳ್ಳವ ನಾಗಿ ಸಹಜ ಶೇಷಭೂತನಾದ ನಾನು ಎಂಬರ್ಥವು ತೋರಿಬರುವಾಗ, ಆ ಅರ್ಥ ವನ್ನೇ ಪುನಃ ನಮ ಶ್ಯಬ್ದದಿಂದಲೂ ಹೇಳಿದರೆ ಪುನರುಕ್ತಿ ದೋಷ ಉಂಟಾಗುವ ದಿಲ್ಲವೇ ? ಎಂದರೆ ಪ್ರಣವದಲ್ಲಿ ಸ್ವವ್ಯತಿರಿಕ್ತ ಅನ್ಯಶೇಷತ್ವ ನಿಷೇಧ ಮಾತ್ರ ವೆಂದೂ, ನಮಃ ಎಂಬಲ್ಲಿ ಸ್ವಶೇಷತ್ವ ನಿಷೇಧ ವೆಂದೂ, ಗೋಬಲಿವರ್ದ ನ್ಯಾಯ ದಿಂದ ಹೇಳಿ ಪುನರುಕ್ತಿ ದೋಷ ನಿವಾರಣೆಯನ್ನು ಮಾಡಬಹುದೆಂದು ಹೇಳು ತ್ತಾರೆ.—ಇಜ್ಗು - ಈ ನಮಃ ಎಂಬ ಶಬ್ದಾರ್ಥದಲ್ಲಿ, "ನಮಮಾಹಂ" ಎನ್ರು ವಿಶೇಷಿಕ್ಕೈಯಾಲೇ - ಪ್ರಣವ ಮಕಾರದ ಅನುಷಜ್ಗದಿಂದ ಉಂಟಾಗುವ "ನಾನು ನನಗಾಗಿ ಅಲ್ಲವು" ಎಂದು ವಿಶೇಷಾರ್ಥವನ್ನು ಹೇಳುವದರಿಂದ, ಕೀಳ್ - ಹಿಂದೆ, ಅನ್ಯಶೇಷತ್ವತ್ತೈಕಳಿಕ್ಕಿರ ಮಧ್ಯಮಾಕ್ಷರಮ್ - ಇತರರಿಗೆ ಶೇಷಭೂತನಲ್ಲವೆಂದು ನಿಷೇಧಿಸಿ ಹೇಳುವ ಅವಧಾರಣಾರ್ಥವುಳ್ಳದ್ದಾಗಿ ಅನ್ಯ ಯೋಗಾವಚ್ಛೇದಕವಾದ ಉ ಎಂಬ ಪ್ರಣವದಮಧ್ಯಮಾಕ್ಷರವು, ಗೋಬಲೀವರ್ದ ನ್ಯಾಯತ್ತಾಲೇ-ಗೋಬಲೀವರ್ದನ್ಯಾಯದಿಂದ, ಸ್ವವ್ಯತಿರಿಕ್ತ ವಿಷಯಮ್-ತನಗ ಲ್ಲದೆ ಇತರರಿಗೆ ಶೇಷತ್ವ ವಿಷಯವಾದುದೆಂದು ಭಾವಿಸಬಹುದು. ಗೋಬಲೀ ವರ್ದ ನ್ಯಾಯದಲ್ಲಿ ಗೋ ಶಬ್ದವು ಗೋ ಜಾತಿಯನ್ನು ಬೋಧಿಸುವದರಿಂದ ಗೋವು ಮತ್ತು ಎತ್ತು ಎರಡೂ ಗೋ ಶಬ್ದದಲ್ಲಿ ಅಂತರ್ಗತವು; ಬಲೀವರ್ದ ವೆಂದರೆ ಎತ್ತಿಗೆ ಹೆಸರು ಗಾಮಾನಯ ಬಲೀವರ್ದಮಾನಯ, ಎಂದರೆ ಗೋವನ್ನು ತೆಗೆದು ಕೊಂಡು ಬಾ, ಎತ್ತನ್ನೂ ತೆಗೆದುಕೊಂಡು ಬಾ ಎಂಬ ಉಕ್ತಿಯಲ್ಲಿ ಗೋ ಶಬ್ದವು ಗೋವಿಗೂ ಎತ್ತಿಗೂ ಎರಡಕ್ಕೂ ಅರ್ಥವಾದರೂ, ಬಲೀವರ್ದಮಾನಯ ಎತ್ತನ್ನು ತೆಗದುಕೊಂಡು ಬಾ ಎಂದು ವಿಶೇಷಿಸಿ ಹೇಳಿರುವದರಿಂದ, ಗೋ ಶಬ್ದಕ್ಕೆ ಆಕಳೆಂದು ಮಾತ್ರವೇ ಅರ್ಥ ಹೇಳತಕ್ಕದ್ದಾಗಿರುತ್ತದೆ. ಇದಕ್ಕೆ ಗೋಬಲೀ ವರ್ದನ್ಯಾಯವೆಂಬ ಹೆಸರು. ಹಾಗೆಯೇ ಇಲ್ಲಿಯೂ ಪ್ರಣವದ ಮಕಾರ ವಾಚ್ಯನು ಅಕಾರವಾಚ್ಯನಿಗೇನೇ ಎಂದು ಮಧ್ಯಮಾಕ್ಷರವು ವ್ಯವಚ್ಛೇದಿಸಿ ಹೇಳು ವಾಗ ಸರ್ವಜೀವಾತ್ಮರೂ, ಹಾಗೆಯೇ ತಾನೂ ಸಹ, ಅಕಾರ ವಾಚ್ಯನಿಗೆ ಶೇಷ ಭೂತರು, ಇತರರಿಗೆ ಅಲ್ಲವೆಂಬರ್ಥ ಉಂಟಾದರೂ, ನಮಶ್ಯಬ್ದಾರ್ಥವು ನಮ ಮಾಹಂ ಎಂಬುದರಿಂದ ತಾನು ತನಗೆ ಶೇಷನಲ್ಲವು ಪರಮಾತ್ಮನಿಗೇನೇ ಎಂದು

**ನನುಸಃ ಸ್ವಶೇಷತ್ವ ನಿಷೇಧಾತ್ ಸ್ವಶೇಷಿತ್ವ ನಿಷೇಧೋಪಿ ಸಿದ್ಧ್ಯತೇ.**

**"ಅಹಂ ನನುಮ" ಎನ್ಗಿರ ವಾಕ್ಯತ್ತಾಲೇ ತನ್ ಸ್ವರೂಪಮುಮ್ ತನಕ್ಕುರಿತ್ತಲ್ಲಾಮೈಯಾಲೇ, ಗುಣಂಗಳ್ ಪ್ರಧಾನಾನುವರ್ತಿಗಳೆನ್ಗಿರ ಪಡಿಯೇ**

ವಿಶೇಷಿಸಿ ಹೇಳಿರುವದರಿಂದ, ಹಿಂದಿನ ಪ್ರಣವದ **ಉ** ಕಾರದಿಂದ ತನ್ನಹಾಗೆ ಇತರ ಜೀವಾತ್ಮರೂ ಪರಮಾತ್ಮನಿಗೇ ಶೇಷಭೂತರೇ ವಿನಾ ಇತರರಿಗೆ ಅಲ್ಲವೆಂದೇ ಅರ್ಥ ಮಾಡತಕ್ಕದ್ದೆಂಬ ತಾತ್ಪರ್ಯವು. ಮೊದಲಿನ ಪ್ರಣವಾರ್ಥದಲ್ಲಿ ಇತರ ಜೀವಾತ್ಮರೂ ತಾನೂ ಇಬ್ಬರು ಹೇಳಲ್ಪಟ್ಟಿದ್ದರೂ, ನಮಃ ಎಂಬಲ್ಲಿ ತಾನು ಮಾತ್ರ ವಿಶೇಷಿಸಿ ಹೇಳಲ್ಪಟ್ಟಿರುವದರಿಂದ, ಪ್ರಣವದಲ್ಲಿ ತಾನಲ್ಲದೆ ಇತರರು ಮಾತ್ರ ಹೇಳಲ್ಪಟ್ಟರೆಂದು ಭಾವಿಸತಕ್ಕದ್ದೆಂಬ ಭಾವವು. **ನಮಃ** ಎಂಬುವದರಿಂದ,ತನಗೆ ತಾನು ಶೇಷಭೂತನಲ್ಲವೆಂದು ಇಷ್ಟುಮಾತ್ರ ವ್ಯವಚ್ಛೇದಿಸಿ ಹೇಳಿತೆಂದು ಭಾವಿಸತಕ್ಕದ್ದೆಂಬ ತಾತ್ಪರ್ಯವು. ನಮುಸ್ಸಿಗೆ ಸ್ವಶೇಷತ್ವ ನಿಷೇಧಿಸುವ ಅರ್ಥವಿರುವದರಿಂದ ಸ್ವಶೇಷಿತ್ವ ನಿಷೇಧವೂ ಉಂಟಾಗುತ್ತದೆ.

ಆಗಲಿ ಈ ಎರಡು ಅರ್ಥಗಳು ಪ್ರಣವದಲ್ಲೇ ಸಿದ್ಧಿಸುವಾಗ ಗೋಬಲೀವರ್ದ ನ್ಯಾಯವನ್ನನುಸರಿಸಿ ನಮಃ ಎಂಬಲ್ಲಿ **ನಮಮಾ ಹಂ** ಎಂಬ ವಿಶೇಷಾರ್ಥವು ತೋರಿಬರುತ್ತದೆ ಎಂದು ಉಪಪಾದಿಸಿ ಏಕೆ ಹೇಳಬೇಕು? ಅದರಿಂದಾಗತಕ್ಕ ಪ್ರಯೋಜನವೇನು? ಎಂದರೆ ಮಹತ್ತಾದ ಪ್ರಯೋಜನಉಂಟೆಂದು ಹೇಳುತ್ತಾರೆ. ಅಹಂಕಾರ ಮಮಕಾರಗಳು ತೊಲಗುವದಕ್ಕೆ ಸಾಧನಭೂತವೆಂದು ಉಪದೇಶಿಸುತ್ತಾರೆ; ಯಾವಾಗ ತನಗೆ ತಾನು ಶೇಷಭೂತನಲ್ಲವು, ಪರಮಾತ್ಮನಿಗೆ ಶೇಷಭೂತನು ಎಂದಾಯಿತೋ, ತನಗೆ ಶೇಷಭೂತವಾಗಿರುವ ದೇಹವೂ, ತನ್ನ ಗುಣಗಳೂ ತನಗೆ ಸೇರಿದ ಕಳತ್ರ ಸುತ ಕ್ಷೇತ್ರಾದಿ ಸಮಸ್ತಗಳೂ ಸಹ ಸ್ವಾಮಿ ನಿಯಮನಾನುಸಾರ ತನಗೆ ಕೆಲವುಕಾಲ ಶೇಷಭೂತವಾಗಿದ್ದರೂ, ಅವೆಲ್ಲವೂ ಸರ್ವಸ್ವಾಮಿಗೇ ಶೇಷಭೂತವೇ ವಿನಾ, ತನಗೆ ಸೇರಿದವು ಯಾವುವೂ ಇಲ್ಲವು ಎಂಬ ಅನುಸಂಧಾನವು ಉಂಟಾಗುತ್ತದೆ. ಅಹ ಕಾರ ಮಮಕಾರಗಳು ಅದರಿಂದ ತೊಲಗುತ್ತವೆ. ಇದು ಮಹತ್ತಾದ ಪ್ರಯೋಜನವೆಂದು ಹೇಳುತ್ತಾರೆ—**"ಅಹಂ ನನುಮ"ಎನ್ಗಿರ ವಾಕ್ಯತ್ತಾಲೇ** - "ನಾನು ನನ್ನವನಲ್ಲವು" ಎಂಬುವ ವಾಕ್ಯದಿಂದ, **ತನ್ ಸ್ವರೂಪಮುಮ್** - ತನ್ನ ಸ್ವರೂಪವೂ ಸಹ, ತನಕ್ಕುರಿತ್ತಲ್ಲಾಮೈಯಾಲೇ – ತನಗೆ ಸಂಬಂಧಿಸಿದ್ದಲ್ಲವಾದುದರಿಂದ,**ಗುಣಂಗಳ್ ಪ್ರಧಾನಾನುವರ್ತಿಗಳೆನ್ಗಿರಪಡಿಯೇ**-ವಿಶೇಷಣಗಳು ವಿಶೇಷ್ಯವನ್ನು ಅನುವರ್ತಿಸಿ ಕೊಂಡಿರುವುವು ಎಂದು ಹೇಳಿರುವ ಹಾಗೆ, **ವೇರೆನ್ನೊನ್ರೈಯುಮ್ ಪತ್ತ** - ಬೇರೆ ಒಂದನ್ನೂ ಕುರಿತು, **ತನಕ್ಕು**-ತನಗೆ, **ನಿರುಪಾಧಿಕ ಸ್ವಾಮಿತ್ವಮಿಲ್ಲೈ** - ನಿರುಪಾಧಿಕವಾಗಿ ಸ್ವಾಮಿತ್ವವು

---

**ವೇರೊನ್ರೊನ್ರುಕ್ಕುಯುಮ್ ಪತ್ತತ್ತನುಕ್ಕು ನಿರುಪಾಧಿಕ ಸ್ವಾಮಿತ್ವಮಿಲ್ಲೈ ಯೆನ್ರು ವಿಶೇಷಿತ್ತನುಸಂಧಾನಮ್ ಫಲಿತ್ತದು. ಇದು ವಿಶೇಷ ನಿರ್ದೇಶತ್ತುಕ್ಕು**

---

ಇಲ್ಲವು, ತನಗೆ ಸ್ವಾಮಿತ್ವವೇನಾದರೂ ಯಾವುಗಳ ವಿಷಯದಲ್ಲಿ ಉಂಟಾಗಿದ್ದರೂ ಅದು ಸೋಪಾಧಿಕವಾಗಿ ಕರ್ಮಾನುಭವಕ್ಕಾಗಿ ಸರ್ವೇಶ್ವರನಿಂದ ಅಲ್ಪಕಾಲ ಕೊಡಲ್ಪಟ್ಟ ಸ್ವಾಮಿತ್ವವೇ ವಿನಾ, ನಿರುಪಾಧಿಕ ಸ್ವಾಮಿತ್ವವು ಯಾವುದರಲ್ಲೂ ತನಗಿಲ್ಲವು, ಎನ್ರು ವಿಶೇಷಿತ್ತ - ಎಂದು ವಿಶೇಷಿಸಲ್ಪಟ್ಟ, **ಅನುಸಂಧಾನವು, ಫಲಿತ್ತದು** - ಉಂಟಾಯಿತು, **ಇದು ವಿಶೇಷ ನಿರ್ದೇಶತ್ತುಕ್ಕು ಪ್ರಯೋಜನಮ್** - ಹೀಗೆ **"ನಮಮಾಹಮ್"** ಎಂದು ವಿಶೇಷಿಸಿ ಹೇಳಿದುದರ ಪ್ರಯೋಜನವು; ಈ ಪ್ರಯೋಜನವು ಮಹತ್ತಾದುದು. ಸ್ವಾಮಿಯು ನಮ್ಮ ಹಿಂದಿನ ಸುಕೃತ ದುಷ್ಕೃತರೂಪ ಕರ್ಮಗಳನುಭವಕ್ಕಾಗಿ ನಮ್ಮನ್ನು ಸೋಪಾಧಿಕ ಸ್ವಾಮಿಯನ್ನಾಗಿ ಮಾಡಿ, ನಮಗೆ ಗೃಹಕ್ಷೇತ್ರಾರಾಮಾದಿಗಳನ್ನೂ, ಸುತ ಸೋದರ ಕಳತ್ರಾದಿಗಳನ್ನೂ ಕೊಟ್ಟಿರುತ್ತಾನೆ. ಈ ಲೋಕದ ಚಿದಚಿದ್ವಸ್ತುಗಳೆಲ್ಲವೂ ಅಪೃಥಕ್ಸಿದ್ಧ ವಿಶೇಷಣಗಳಾಗಿ ಪ್ರಧಾನನಾದ ಸರ್ವೇಶ್ವರನೊಂದಿಗೆ ಸೇರಿಕೊಂಡಿರುವದರಿಂದ, **ಗುಣಂಗಳ್ ಪ್ರಧಾನಾನುವರ್ತಿಗಳ್** ಎಂಬ ಪ್ರಯೋಗವು. ಸ್ವಾದುತ್ವವು ಸಕ್ಕರೆಯನ್ನೂ, ಪರಿಮಳವು ಪುಷ್ಪವನ್ನೂ, ಹೇಗೆ ಅನುಸರಿಸಿರುತ್ತದೆಯೋ, ಹಾಗೆ ಸಮಸ್ತ ಚಿದಚಿದ್ವಸ್ತುಗಳೂ ಅವನೊಂದಿಗೆ ಸೇರಿದವು. ನಮ್ಮ ಕರ್ಮಾನುಸಾರ ಸುಖದುಃಖರೂಪ ಭೋಗಗಳಿಗಾಗಿ ಕೆಲವು ಕಾಲ ಆತನ ಈ ಚಿದಚಿದ್ವಸ್ತುಗಳಲ್ಲಿ ಕೆಲವನ್ನು ಸೋಪಾಧಿಕವಾಗಿ ನಮಗೆ ಅಧೀನಮಾಡಿದ್ದಾನೆ. ಎಲ್ಲವೂ ನಿರುಪಾಧಿಕವಾಗಿ ಅವನದೇ. ಇದನ್ನೇ ಯಾಮುನಮುನಿಗಳು **"ಮಮನಾಥ ಯದಸ್ತಿ ಯೋಽಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ"** ಎಂಬ ಅಮೋಘ ಶ್ಲೋಕದಲ್ಲಿ ವ್ಯಕ್ತಪಡಿಸಿರುತ್ತಾರೆ. ಹಾಗೆಯೇ ಶ್ರೀ ನಮ್ಮಾಳ್ವಾರ್ರವರೂ **"ಅರಿನಕ್ಕು ನಿನ್ಪಾದಮೇ ಶರಣಾಗ ತಂದೊಳಿಂದಾಯ್ ಉನಕ್ಕೋರ್ಕೈ। ಮಾರು ನಾನೊನ್ರಿಲೇನ್ ಎನದಾವಿಯುಂ ಉನದೇ॥"** ನಿನ್ನ ದಿವ್ಯ ಪಾದಕಮಲವನ್ನೇ ಉಪಾಯೋಪೇಯನಾಗಿ ನನಗೆ ಅನುಗ್ರಹಿಸಿ ಮಹೋಪಕಾರವನ್ನು ಎಸಗಿದ ನಿನಗೆ ನಾನು ಯಾವ ಪ್ರತ್ಯುಪಕಾರವನ್ನು ಮಾಡಲಿ? ಏನನ್ನಾದರೂ ಸಮರ್ಪಿಸೋಣವೆಂದರೆ ಎಲ್ಲವೂ ನಿನ್ನದೇಯಾಗಿರುತ್ತದೆ. ಈ ಆತ್ಮವೂ ನಿನ್ನದೇ ಎಂಬುದರಿಂದ ಸಮಸ್ತವೂ ಸರ್ವೇಶ್ವರನದಾಗಿ ಆತನನ್ನು ಅನುಸರಿಸಿವೆ ಎಂಬುದು ಹೇಳಲ್ಪಟ್ಟಿತು. ಇಂತಹ ಅಮೋಘ ಶ್ಲೋಕಕ್ಕೆ ಕೆಲವರು ಆತ್ಮಾವೂ ಅವನದೇ ಯಾದುದರಿಂದ ಅವನ ಪದಾರ್ಥವನ್ನು ಅವನಿಗೆ ಸಮರ್ಪಿಸುವದು ಕೂಡ ಸರಿಯಲ್ಲವೆಂದೂ, ನಿತ್ಯನೈಮಿತ್ತಿಕಗಳನ್ನು ಅಂತವರು ಅನುಷ್ಠಿಸಿದರೆ ಉಪಾ

**ಪ್ಪ್ರಯೋಜನಮ್. ಇಪ್ಪಡಿ ಯನುಷಂಗಿಯಾದ ಪಕ್ಷತ್ತಿಲ್ ಪೊದುವಿಲೇ ತನ್ನೋಡ ತುವಕ್ಕುಂಡಾಯ್ ತೋತ್ತುಗಿರನತ್ತೈಯೆಲ್ಲಾಮ್ ಎನ್ನದನ್ರೆನ್ರು ತ್ಗ ತುವಕ್ಕರುಕ್ಕಿರದು.**

---

ಯಾನ್ತರ ಸ್ವೀಕಾರವಾಗಿ, **ಉಪಪಾದಮೇ** ಎಂಬಲ್ಲಿರುವ ಅವಧಾರಣಕ್ಕೆ ವಿರುದ್ಧವಾಗುತ್ತದೆಂದು ಅಭಿಪ್ರಾಯಪಡುವರು, ತಮ್ಮ ಅಭಿಪ್ರಾಯದ ಅನುಸಂಧಾನಕ್ಕಾಗಿ "**ಹೃದಾಕಾಶೇ ಚಿದಾದಿತ್ಯೋ ಸದಾ ಭಾತಿ ನಿರಂತರಮ್ । ನಾಸ್ತಮೇತಿ ಸ ಚೋದೇತಿ ಕಥಂ ಸನ್ಧ್ಯಾ ಮುಪಾಸ್ಮಹೇ**"ಎಂದು ಉದಾಹರಿಸಿರುವದನ್ನು ನೋಡಿದರೆ,ಎಂತಹ ಜ್ಞಾನನಿಷ್ಠನೂ ಕೂಡ ಎಷ್ಟರಮಟ್ಟಿಗೆ ಮುಗ್ಗರಿಸಬಹುದೆಂದು ತೋರಿಬರುತ್ತದೆ. ಮೇಲಿನ ಶ್ಲೋಕಾರ್ಥವೇನೆಂದರೆ ಹೃದಯವೆಂಬ ಆಕಾಶದಲ್ಲಿ ಚೇತನನೆಂಬ ಸೂರ್ಯನು ಯಾವಾಗಲೂ ಪ್ರಕಾಶಿಸುತ್ತಾ ಇದ್ದಾನೆ; ಆತನು ಅಸ್ತಮಿಸುವದೂ ಇಲ್ಲವು, ಉದಯಿಸುವದೂ ಇಲ್ಲವು; ಹೀಗಿರುವಾಗ ಸಂಧ್ಯಾವಂದನೆ ಮೊದಲಾದವುಗಳನ್ನು ಅನುಷ್ಠಿಸಲು ಸಂಧ್ಯಾಕಾಲವೇ ಇಲ್ಲವಲ್ಲಾ ಎಂಬರ್ಥವು. ಇಂತಹ ದುರಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು ನಿತ್ಯ ಕರ್ಮಾದಿಗಳ ತ್ಯಾಗವು ಪರಮ ಶೋಚನೀಯವು. ಇಂತಹ ಅರ್ಥಗಳೆಲ್ಲಾ ಸರಿಯಲ್ಲವೆಂದು ಸಾಜ್ಞ ಪ್ರಪದನಾಧಿಕಾರದಲ್ಲಿ ಉಪಪಾದಿತವು. ಇಂತಹ ಸ್ವಾಮಿತ್ವವು ನಮಗೆ ಶಾಶ್ವತವಾದುದಲ್ಲವು. ನಾಲ್ಕು ದಿನಗಳ ಸೋಪಾಧಿಕ ಸ್ವಾಮಿತ್ವವು. ಆದುದರಿಂದ ಇವುಗಳಲ್ಲಿ ತನಗೆ ನಿರುಪಾಧಿಕ ಸ್ವಾಮಿತ್ವವು ಸ್ವಲ್ಪವೂ ಇಲ್ಲವೆಂಬ ಭಾವವು ತೋರಿಬರುವದರಿಂದ, **ನಮಮ ಕಿಂಚಿತ್ಸ್ಯಾತ್** ಎಂಬರ್ಥಕ್ಕಾಗಿ **ಕಿಂಚಿತ್** ಎಂಬ ಪದವನ್ನು ಅಧ್ಯಾಹಾರ ಮಾಡಬೇಕಾಗುತ್ತದೆ ಎಂದು ಮುಂದೆ ಹೇಳುತ್ತಾರೆ. ಹೀಗೆ ಅಧ್ಯಾಹಾರ ಮಾಡಿಕೊಂಡರೆ ಹಿಂದೆ ಉಪಪಾದಿಸಿದ ಅನುಷಙ್ಗಾರ್ಥವು ಆಗ ಅವಶ್ಯಕವಲ್ಲವೆಂದು ಮುಂದಿನ ವಾಕ್ಯವಾದ "**ಇಪ್ಪಡಿ ಅನುಷಂಗಿಯಾದ**" ಎಂಬುದರಿಂದ ಹೇಳುತ್ತಾರೆ.

**ಇಪ್ಪಡಿ ಅನುಷಂಗಿಯಾದ ಪಕ್ಷತ್ತಿಲ್** - ಹಿಂದೆ ಉಪಪಾದಿಸಿ ಹೇಳಿದರೀತಿಯಲ್ಲಿ ಪ್ರಣವದ ಮಕಾರವನ್ನು ಆಕರ್ಷಿಸಿ ಈ ನಮಸ್ಸಿನೊಂದಿಗೆ ಸಂಬಂಧಿಸಿ ಅನ್ವಯಿಸದೇ ಇದ್ದಪಕ್ಷದಲ್ಲಿ, **ಪೊದುವಿಲೇ** – ಸಾಮಾನ್ಯವಾಗಿ, **ತುವಕ್ಕುಂಡಾಯ್ ತೋತ್ತುಗಿರವತ್ತೈಯೆಲ್ಲಾಮ್** - ಸಂಬಂಧವಿರುವಹಾಗೆ ತೋರುವದೆಲ್ಲವನ್ನೂ, **ಎನ್ನದನ್ರೆನ್ರು** - ನನ್ನದಲ್ಲವು ಎಂದು, **ತ್ಗ ತುವಕ್ಕರುಕ್ಕಿರದು** - ತನ್ನ ಸಂಬಂಧವನ್ನು ಛೇದಿಸಿ ಬಿಡುತ್ತದೆ. ಹಿಂದೆ ಅನುಷಂಗ ಮಾಡಿಕೊಂಡು ಅರ್ಥವನ್ನು ಹೇಳಿದುದು ಆಯಿತು. ಈಗ ಆ ಅನುಷಂಗಾರ್ಥವನ್ನು ಬಿಟ್ಟು ಅರ್ಥಮಾಡಿದರೆ ಇನ್ನೊಂದು ವಿಶೇಷಾರ್ಥವು ಲಭಿಸು

ನಮಶ್ಶಬ್ದಾರ್ಥಾನುಸಂಧಾನೇನ ಅಹಂಕಾರಮಮಕಾರ ನಿವೃತ್ತಿಃ.

ಇತ್ತಾಲ್ ತನ್ನೈಯುಮ್ ತನ್ನುಡೈಯ ಗುಣವಿಗ್ರಹಾದಿಗಳೈಯುಂ ಪತ್ತ, ತ್ತ ಅಭಿಮಾನ ವಿಶೇಷಙ್ಗಳೈ ಕಳಿಕ್ಕೈಯಾಲೇ ವಿಪರೀತಾಹಂಕಾರ ಮಮಕಾರಙ್ಗಳಾಗಿರ ಸಂಸಾರಮೂಲಙ್ಗಳ್ ಛೇದಿಕ್ಕಪಟ್ಟನ.

---

ತ್ತದೆ ಅದೇನೆಂದರೆ.—ನಮಮ ಎಂದಾಗುವದರಿಂದ ನಮಮ ಕಿಂಚಿತ್ಸ್ಯಮ್ ಯಾವದೊಂದೂ ನನ್ನದಲ್ಲವು ಎಂದು ಸರ್ವ ಐಹಿಕ ಪದಾರ್ಥಗಳ ಸಂಬಂಧವು ಸ್ವಲ್ಪವೂ ತನಗಿಲ್ಲವೆಂಬ ವಿಶೇಷಾನುಸಂಧಾನವು ಫಲಿಸುತ್ತದೆ ಎಂಬ ಭಾವವು.

ನಮಶ್ಶಬ್ದದ ಅರ್ಥಾನುಸಂಧಾನದಿಂದ ಅಹಂಕಾರ ಮಮಕಾರ
ಗಳು ನಿವರ್ತಿಸುವುವು.

ಮುಂದೆ ಈ ಅನುಸಂಧಾನದಿಂದುಂಟಾಗುವ ಮಹತ್ತಾದ ಪ್ರಯೋಜನ ವೇನೆಂದರೆ?ಅಹಂಕಾರ ಮಮಕಾರಗಳು ತೊಲಗುತ್ತವೆ ಎನ್ನುತ್ತಾರೆ—ಇತ್ತಾಲ್- ನಮಶ್ಶಬ್ದದ ಈ ಅರ್ಥಾನುಸಂಧಾನದಿಂದ, ತನ್ನೈಯುಮ್ - ತನ್ನನ್ನೂ, ತನ್ನುಡೈಯ ಗುಣವಿಗ್ರಹಾದಿಗಳೈಯುಮ್ - ತನಗೆ ಸಂಬಂಧಿಸಿಕೊಂಡಿರುವ ಗುಣಗಳೂ ಶರೀರವೂ, ಆದಿ ಶಬ್ದದಿಂದ ಅಪೃಥಕ್ಸಿದ್ಧ ವಿಶೇಷಣಗಳಲ್ಲದ ಇತರ ವಸ್ತುಗಳು, ಗೃಹಾರಾಮ ಸುತ ದುಹಿತೃ ಕಳತ್ರ ಮೊದಲಾದವರೆಲ್ಲಾ ಹೇಳಲ್ಪಟ್ಟರು, ಇವುಗಳನ್ನೆಲ್ಲಾ ಪತ್ತ - ಕುರಿತ, ತ್ತ ಅಭಿಮಾನ ವಿಶೇಷಙ್ಗಳೈ - ತನ್ನದು, ತನ್ನವರು ಎಂಬ ಅಭಿಮಾನ ವಿಶೇಷಣಗಳನ್ನು, ಕಳಿಕ್ಕೈಯಾಲೇ- ಹೋಗಲಾಡಿಸುವದರಿಂದ, ವಿಪರೀತಾಹಂಕಾರ ಮಮಕಾರಙ್ಗಳಾಗಿರ – ವಿಪರೀತವಾಗಿ ಎಂದರೆ ಈತನ ಶ್ರೇಯಃಪ್ರಾಪ್ತಿಗೆ ಕುಂದಕಗಳಾಗಿರುವ ಅಹಂಕಾರ ಮಮಕಾರಗಳಾಗಿರುವ, ಸಂಸಾರ ಮೂಲಙ್ಗಳ್ - ಪುನಃ ಬಂಧಕ್ಕೆ ಕಾರಣ ಭೂತಗಳಾಗಿರುವುವು, ಛೇದಿಕ್ಕಪ್ಪಟ್ಟನ - ಕತ್ತರಿಸಲ್ಪಟ್ಟವು. ನಮಮ ಕಿಂಚಿತ್ ಎಂಬುದರಿಂದ ನನ್ನದು ಯಾವದೊಂದೂ ಇಲ್ಲವು ಎಂದಾದನಂತರ ಸರ್ವ ಪದಾರ್ಥಗಳು ಸರ್ವೇಶ್ವರನಿಗೆ ಸೇರಿದವೇ ವಿನಾ ನನ್ನದಲ್ಲವು; ಕೆಲವೇನೋ ನನಗೆ ಕರ್ಮಾನುಭವಕ್ಕಾಗಿ ಏರ್ಪಟ್ಟವು. ನನ್ನ ದೇಹವೂ, ನನ್ನ ಗುಣಗಳೂ ಮತ್ತು ಇತರ ವಸ್ತುಗಳೂ, ನನಗೆ ಶೇಷಭೂತವಾಗಿ ತೋರಿದರೂ, ಸರ್ವೇಶ್ವರನಿಂದ ಹಾಗೆ ಏರ್ಪಟ್ಟವೇ ವಿನಾ, ನನ್ನದು ಯಾವುವೂ ಅಲ್ಲವು ಎಂಬ ಅನುಸಂಧಾನವುಂಟಾಗುವದರಿಂದ, ಬಂಧಕವಾಗಿ ವಿಪರೀತಗಳಾಗಿರುವ ಅಹಂಕಾರ ಮಮಕಾರಗಳೆಲ್ಲಾ ಕಳೆದು ಹೋಗುತ್ತವೆಂದು ಉಪದೇಶಿಸಿದರು. ಇಲ್ಲಿ ವಿಪರೀತಗಳಾದ ಅಹಂಕಾರ ಮಮಕಾರಗಳು ತೊಲಗುತ್ತವೆ ಎಂದು ಹೇಳಿದುದರಿಂದ, ವಿಪರೀತಗಳಲ್ಲದೆಬಂಧಕ

**ಇಙ್ಗು ಕಳಿಕ್ಕಿರ ವಹಂಕಾರಮ್ ಭ್ರಮರೂಪಮಾನ ಬುದ್ಧಿ ವಿಶೇಷಮ್; ಮತ್ತುಮ್ ತತ್ತ್ವಙ್ಗಳಿಲ್ ಎಣ್ಣಿನ ವಹಂಕಾರಮ್ ವಿವೇಕಮಾತ್ರ**

---

ಗಳಲ್ಲದ ಕೆಲವು ಅಹಂಕಾರ ಮಮಕಾರಗಳೂ ಉಂಟು ಎಂದು ಹೇಳಿದಂತಾಯಿತು; ಹೀಗೆ ಅಹಂಕಾರ ಮಮಕಾರಗಳು ಎರಡು ವಿಧಗಳು. (೧) ವಿಪರೀತವಾಗಿ ಬಂಧಕವು. (೨) ವಿಪರೀತವಲ್ಲದೆ ಬಂಧಕವಲ್ಲದಿರುವುವು. ವಿಪರೀತಾಹಂಕಾರ ಮಮಕಾರಗಳು ಯಾವುವು? ಎಂದರೆ ಈ ದೇಹವು ನನ್ನದು, ಈ ಗುಣಗಳೂ ನನ್ನವೇ, ಈ ಗೃಹ ಸುತ ಮೊದಲಾದವೆಲ್ಲಾ ನನ್ನದೇ, ನಾನು ಸ್ವತಂತ್ರನು ಇತ್ಯಾದಿ ಭ್ರಮ ಭಾವದಿಂದುಂಟಾಗುವ ಅಹಂಕಾರ ಮಮಕಾರಗಳು ವಿಪರೀತವಾದವು. ಇವುಗಳೀಗ ಕಳೆಯತಕ್ಕವು. ವಿಪರೀತವಲ್ಲದ ಅಹಂಕಾರ ಮಮಕಾರಗಳು ಭ್ರಮರೂಪವಲ್ಲದವು, ಅವು ಯಾವುವೆಂದರೆ, ನಾನು ದೇಹಾದ್ವಿಲಕ್ಷಣನು, ಜ್ಞಾನತ್ವಾನಂದತ್ವಾಮಲತ್ವಗಳಿಂದ ಮಹಾಪರಿಶುದ್ಧನು, ಪರಮಾತ್ಮನಿಗೆ ನಾನು ಶೇಷಭೂತನು; ಪರಮ ಕರುಣಾಳುವಾಗಿ ನನಗೆ ಸರ್ವಶ್ರೇಯಸ್ಸನ್ನುಂಟುಮಾಡುವ ಶ್ರೀಯಃ ಪತಿಗೆ ನಾನು ಶೇಷಭೂತನು ಇತ್ಯಾದಿಗಳು. ಇವು ಬಂಧಕವಲ್ಲವು. ಈ ಭಾವವನ್ನು ಮನಸ್ಸಿನಲ್ಲಿಟ್ಟು ಇವುಗಳನ್ನು ವ್ಯವಚ್ಛೇದಿಸಿಕೊಳಬೇಕೆಂಬ ಭಾವನೆಯಿಂದ ವಿಪರೀತಾಹಂಕಾರಮಮಕಾರಂಗಳಾಗಿರಸಂಸಾರಮೂಲಙ್ಗಳ್ ಎಂಬ ಪ್ರಯೋಗವು.

ಈ ಅಹಂಕಾರ ಶಬ್ದವು ಶಾಸ್ತ್ರಗಳಲ್ಲಿ ಎರಡರ್ಥದಲ್ಲಿ ಪ್ರಯೋಗಿಸುವದುಂಟು:—(೧) ತಾನು ತನ್ನದು ಎಂಬ ಅಹಂಭಾವ ಅಥವಾ ಅಭಿಮಾನವೆಂಬರ್ಥವು (೨) ಅಹಂಕಾರ ತತ್ತ್ವವೆಂದು ಹೇಳಿಸಿಕೊಳ್ಳುವ ವಿಕಾರ ಹೊಂದಿದ ಪ್ರಕೃತಿ ತತ್ತ್ವವು; ಇವೆರಡರಲ್ಲಿ ಮೊದಲನೆಯ ಅರ್ಥವು ಇಲ್ಲಿ ಹೇಳಲ್ಪಟ್ಟಿದುದೇ ವಿನಾ ಎರಡನೆಯ ಅರ್ಥವಲ್ಲವು. ತನ್ನದು ಎಂಬ ಅಹಂಕಾರವನ್ನು ದೂರೀಕರಿಸಬಹುದು, ಅಹಂಕಾರತತ್ತ್ವವು ಶರೀರದೊಂದಿಗೆ ಸೇರಿರುವದರಿಂದ ಸಾಯುವತನಕ ಹೋಗಲಾಡಿಸಲು ಸಾಧ್ಯವಿಲ್ಲವು. ಇದನ್ನೇ ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ. ಇಙ್ಗು - ಈ ಸಂದರ್ಭದಲ್ಲಿ, ಕಳಿಕ್ಕಿರ ಅಹಂಕಾರಮ್-ಹೋಗಲಾಡಿಸಬೇಕಾದ ಅಹಂಕಾರವು, ಭ್ರಮರೂಪಮಾನ ಬುದ್ಧಿ ವಿಶೇಷಮ್-ತಾನು ಸ್ವತಂತ್ರನು, ತನಗೆ ಸೇರಿದಹಾಗೆ ತೋರುವವೆಲ್ಲಾ ತನ್ನದೇ ಎಂಬ ಭ್ರಮರೂಪವಾದ ಜ್ಞಾನವಿಶೇಷವು. ತನ್ನವು ಯಾವುವೂ ಇಲ್ಲದಿರುವಾಗ ತನ್ನದೆಂಬುದೇ ಭ್ರಮಜ್ಞಾನವೆಂಬ ಭಾವವು. ಮತ್ತುಮ್ - ಮೇಲೆ ಹೇಳಿದುದು ಅಲ್ಲವೆ ಬೇರೆ, ತತ್ತ್ವಙ್ಗಳಿಲ್ - ಪ್ರಕೃತಿಯ ಪರಿಣಾಮಗಳಾಗಿ ಹೇಳಲ್ಪಟ್ಟ ೨೪ ತತ್ತ್ವಗಳಲ್ಲಿ, ಎಣ್ಣಿನ ! ಅಹಂಕಾರಮ್ - ಗಣನೆಮಾಡಲ್ಪಟ್ಟ ಅಹಂಕಾರತತ್ತ್ವವು,

ತ್ತಾಲ್ ಕಳಿಸದೊನ್ರನ್ರು, ಸೂಕ್ಷ್ಮಶರೀರಮ್ ವಿಡುಮಳವುಮ್ ಇವನ್ಯೈ ತೋತ್ತಿಕ್ಕಿಡಕ್ಕುಮ್.

ಇವ್ವಚಿತ್ಸಂಬಂಧಮ್ ಇವನುಕ್ಕು ಕ್ಕಳಿಯಾದಿರುಕ್ಕೆ ಇದಿನ್ ಕಾರ್ಯಜ್ಞ

---

ವಿವೇಕ ಮಾತ್ರತ್ತಾಲ್ - ಎಲ್ಲವೂ ತನ್ನದಲ್ಲವು, ಪರಮಾತ್ಮನವೇ ಎಂಬ ವಿವೇಕ ಜ್ಞಾನಮಾತ್ರದಿಂದ, ಕಳಿವ ದೊನ್ರನ್ರು - ಗತಿಸಿ ಹೋಗತಕ್ಕದಲ್ಲವು. ಸೂಕ್ಷ್ಮ ಶರೀರಮ್ ವಿಡುಮಳವುಮ್ - ಉಪಾಯಾನುಷ್ಠಾನವನ್ನು ಮಾಡಿ ಮುಕ್ತಿ ಹೊಂದಲು ಯೋಗ್ಯನಾಗಿ ದೇಹಾವಸಾನವನ್ನು ಹೊಂದಿ ಅರ್ಚಿರಾದಿ ಮಾರ್ಗದಲ್ಲಿ ಸೂಕ್ಷ್ಮ ಶರೀರವು ಬಿಟ್ಟು ಹೋಗುವತನಕವೂ, ಇವನ್ಯೈ - ಈ ದೇಹಿಯನ್ನು, ತೋತ್ತಿಕಿಡಕ್ಕುಮ್ - ಬಿಡದೇ ಸಂಬಂಧಿಸಿಕೊಂಡೇ ಇರುತ್ತದೆ. ಅಹಂಕಾರ ಶಬ್ದದಿಂದ ಇಲ್ಲಿ ನಾವು ಅಹಂಕಾರವೆಂದು ಹೇಳುವ ಅಚಿದ್ದ್ರವ್ಯವನ್ನು ಹೇಳಲಿಲ್ಲವು. ಇದು ಮೋಕ್ಷಾರ್ಹನಿಗೆ ಕೂಡ ದೇಹಾವಸಾನದವರೆಗೂ ಇದ್ದುಕೊಂಡು, ಅನಂತರವೂ ಸೂಕ್ಷ್ಮದೇಹ ರೂಪದಲ್ಲಿ ಅರ್ಚಿರಾದಿಗತಿಯಲ್ಲೂ ಅಮಾನವ ಕರಸ್ಪರ್ಶದವರೆಗೂ ಅನುಸರಿಸಿಕೊಂಡು ಬಿಡದೇ ಇರುತ್ತದೆ. ಇದು ವಿವೇಕ ಜ್ಞಾನದಿಂದ ಬಿಟ್ಟು ಹೋಗತಕ್ಕದ್ದಲ್ಲವು. ಬಿಟ್ಟುಹೋಗತಕ್ಕ ಅಹಂಕಾರವು ಯಾವುದೆಂದರೆ ಭ್ರಮರೂಪ ಜ್ಞಾನವಾದ ಅಹಂಕಾರವು. ಭಗವದ್ಗೀತೆಯಲ್ಲಿ ಅಹಂಕಾರ ಶಬ್ದವು ಇವೆರಡರ್ಥಗಳಲ್ಲೂ ಪ್ರಯೋಗಿಸಲ್ಪಟ್ಟಿರುತ್ತದೆ, "ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್। ವಿಮುಚ್ಯ ನಿರ್ಮಮಶ್ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ"(ಗೀ.೧೮. ೫೩)ಎಂಬಲ್ಲಿ ಅಹಂಕಾರಂ ವಿಮುಚ್ಯ ಎಂಬುದರಿಂದ ದೇಹಾತ್ಮ ಭ್ರಮ ಮೊದಲಾದ ಭ್ರಮಜ್ಞಾನವನ್ನು ಬಿಡತಕ್ಕದ್ದೆಂದು ಹೇಳಲ್ಪಟ್ಟಿತು. "ಭೂಮಿ ರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ। ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ" (ಗೀ. ೭-೪) ಎಂಬಲ್ಲಿ ಪ್ರಕೃತಿಯ ವಿಕಾರಗಳನ್ನು ಹೇಳುವಾಗ ಅಹಂಕಾರತತ್ವವು ಹೇಳಲ್ಪಟ್ಟಿರುತ್ತದೆ, ಇದೀಗ ಮುಕ್ತ ದೆಶೆಯಲ್ಲಿ ಪ್ರಕೃತಿ ಸಂಬಂಧವು ಸಂಪೂರ್ಣವಾಗಿ ತೊಲಗುವವರೆಗೂ ಆತ್ಮನಿಗೆ ಸಂಬಂಧಿಸಿರುವದು; ಈ ಲೋಕದಲ್ಲಿ ಬಿಟ್ಟು ಹೋಗುವದಿಲ್ಲವು.

ಹೀಗೆ ಅಹಂಕಾರ ತತ್ವದಿಂದ ಅಹಂಕಾರ ಮಮಕಾರಗಳಾದ ಭ್ರಮಜ್ಞಾನವು ಉಂಟಾಗುತ್ತವೆ; ಅಹಂಕಾರ ತತ್ವವು ದೇಹವಿರುವವರೆಗೂ ಇರುತ್ತದೆ. ಹೀಗಿರುವಾಗ ಅಹಂಕಾರ ಮಮಕಾರ ಭ್ರಮಜ್ಞಾನವನ್ನು ಕಳೆದುಕೊಳ್ಳಬೇಕೆಂದು ಹೇಳಲ್ಪಟ್ಟಿತಲ್ಲಾ ಅದು ಸಾಧ್ಯವೋ? ಎಂದರೆ ನಮಶ್ಶಬ್ದಾರ್ಥಾನುಸಂಧಾನದಿಂದುಂಟಾಗುವ ವಿವೇಕ ಜ್ಞಾನದಿಂದ ಸಾಧ್ಯವೆಂದು ಹೇಳುತ್ತಾರೆ—ಇವ್ವಚಿತ್ಸಂ

**ಳಾಯ್ ಭ್ರಮರೂಪಙ್ಗಳಾನ ಅಹಂಕಾರಾದಿ ವ್ಯಾಧಿಗಳ್ ಮೂಲಮನ್ತ್ರಾದಿ ಗಳಾಲೇ ಸಿದ್ಧಮಾನ ವಿವೇಕಮಾಗಿರ ಭೇಷಜ ವಿಶೇಷತ್ತಾಲೇ ಕಳಿಗಿನ್ರನ**

---

**ಬಂಧಮ್**-ಈ ಅಚಿದ್ರೂಪವಾದ ಅಹಂಕಾರತತ್ವವಿರುವ ಶರೀರ ಸಂಬಂಧವು, **ಇವನುಕ್ಕು ಕಳಿಯಾದಿರ್ಕ**-ಈ ಜೀವಾತ್ಮನಿಗೆ ಇಲ್ಲಿ ಸ್ಥೂಲ ದೆಶೆಯುಲ್ಲೂ, ದೇಹಾವಸಾನಾನಂತರ ಸೂಕ್ಷ್ಮದೆಶೆಯಲ್ಲೂ, ಸಂಬಂಧಿಸಿಕೊಂಡುಬಿಟ್ಟು ಹೋಗದೇ ಇದ್ದರೂ, **ಇದಿನ್ ಕಾರ್ಯಙ್ಗಳಾಯ್** - ಈ ಅಹಂಕಾರತತ್ವದ ಕಾರ್ಯಗಳಾಗಿ, **ಭ್ರಮರೂಪಙ್ಗಳಾನ** - ಶರೀರಾತ್ಮಭ್ರಮ ಸ್ವತಂತ್ರಾತ್ಮಭ್ರಮರೂಪಗಳಾದ, ತನ್ನದಲ್ಲದ್ದನ್ನು ತನ್ನದು ಎಂಬುದೇ ಮುಖ್ಯವಾದ ಭ್ರಮೆಯು, ಇಂತಹ **ಅಹಂಕಾರಾದಿ ರೋಗಗಳು, ಮೂಲಮನ್ತ್ರಾದಿಗಳಾಲೇ ಸಿದ್ಧಮಾನ ವಿವೇಕಮಾಗಿರ ಭೇಷಜ ವಿಶೇಷತ್ತಾಲೇ** – ಮೂಲ ಮನ್ತ್ರವೇ ಮೊದಲಾದವುಗಳ ಅರ್ಥಗ್ರಹಣದಿಂದ ಪ್ರಾಪ್ತವಾದ ವಿವೇಕವೆಂಬ ಸಿದ್ಧೌಷಧ ವಿಶೇಷದಿಂದ, **ಕಳಿಗಿನ್ರನ** – ನಿವರ್ತಿಸಿ ಹೋಗುವುವು, ಬಿಟ್ಟು ಹೋಗುವುವು. ಇಲ್ಲಿ ಆದಿಶಬ್ದದಿಂದ ದ್ವಯಚರಮಶ್ಲೋಕಗಳ ಅರ್ಥಗ್ರಹಣವೂ ಬೋಧಿಸಲ್ಪಟ್ಟಿತು. ವ್ಯಾಧಿಗಳಲ್ಲಿ ಕೆಲವು ಪ್ರಬಲವಾದವುಗಳು, ಅವುಗಳು ಸಾಧಾರಣ ಚಿಕಿತ್ಸೆಯಿಂದ ಹೋಗುವವಲ್ಲವು; ಅಂತಹ ವ್ಯಾಧಿಗಳಲ್ಲಿ ಸೇರಿದವು ಭ್ರಮರೂಪಙ್ಗಳಾನವಾದ ಅಹಂಕಾರ ಮಮಕಾರಗಳು; ಇವುಗಳನ್ನು ನಿವರ್ತಿಸುವದಕ್ಕೆ ಕುಪ್ಪಿಮಾತ್ರೆ ಎಂದು ಹೇಳಿಸಿಕೊಳ್ಳುವ ಸಿದ್ಧೌಷಧಿಯು ಬೇಕು. ಅಂತಹ ಸಿದ್ಧೌಷಧವು ಯಾವುದೆಂದರೆ ಮೂಲಮನ್ತ್ರಾದಿಗಳ ಅರ್ಥಬೋಧದಿಂದುಂಟಾಗುವ ವಿವೇಕ ಜ್ಞಾನವು; ಅದು ಯಾವುದೆಂದರೆ ತಾನೂ, ತನಗೆ ಸಂಬಂಧಿಸಿದ ಹಾಗೆ ತೋರುವ ಎಲ್ಲವೂ, ತನ್ನದಲ್ಲವು, ಪರಮಾತ್ಮನಿಗೆ ಶೇಷಭೂತವಾದುವು ಎಂಬುದು; ಇದೇ ಸಿದ್ಧೌಷಧವೆಂದು ಹೇಳುವದಕ್ಕಾಗಿ **"ಮೂಲಮನ್ತ್ರಾದಿ ಗಳಾಲೇ ಸಿದ್ಧಮಾನ ಭೇಷಜಮ್"** ಎಂದು ಪ್ರಯೋಗಿಸಿರುತ್ತಾರೆ. ಅಹಂಕಾರ ತತ್ವವು ದೇಹದಲ್ಲಿದ್ದೂ ಕೂಡ ಅದರ ಕಾರ್ಯವಾದ ಅಹಂಕಾರ ಮಮಕಾರಗಳು ಎಲ್ಲಿಯಾದರೂ ಗತಿಸಿ ಹೋಗುವುವೋ? ಎಂದರೆ ಅಪಥ್ಯಕ್ಕೆ ಕಾರಣವಿದ್ದರೂ ಸಿದ್ಧೌಷಧ ಮಹಿಮೆಯಿಂದ ಅಹಂಕಾರ ತತ್ವದ ಕಾರ್ಯವಾದ ಭ್ರಮಜ್ಞಾನಗಳು ತೊಲಗುವದರಲ್ಲಿ ಸಂದೇಹವಿಲ್ಲವು. ಹೇಗೆಂದರೆ ದೇಹದಲ್ಲಿ ರಾಜಸತಾಮಸ ಗುಣಗಳೊಂದಿಗೆ ಸಾತ್ವಿಕ ಗುಣವು ಸಂಬಂಧಿಸಿಕೊಂಡಿದ್ದರೂ ಸತ್ವವೃದ್ಧಿಯಲ್ಲಿ ರಾಜಸತಾಮಸಗುಣಗಳು ಹೇಗೆ ದುರ್ಬಲಗಳಾಗುವುವೋ, ಹಾಗೆ ಅಹಂಕಾರತತ್ವವೂ ಯಾವ ಅನರ್ಥವನ್ನೂ ಉಂಟುಮಾಡಲಾರದು ಎಂಬ ಭಾವವು.

ಹಿಂದೆ ಪ್ರಣವದಲ್ಲಿರುವ ಉಕಾರದ ಅವಧಾರಣಾರ್ಥದಿಂದ ಅನ್ಯಯೋಗ ವ್ಯವಚ್ಛೇದಮೂಲಕ ಪರಮಾತ್ಮನಿಗಲ್ಲದೆ ಅನ್ಯ ಶೇಷತ್ವವೂ ಜೀವಾತ್ಮನಿಗೆ ಇಲ್ಲ

## ನಮಸಾ ಸ್ವಶೇಷಿತ್ವ ನಿವೃತ್ತಿಃ.

**ತನಕ್ಕು ಅನ್ಯಶೇಷತ್ವಮ್ ಪ್ರಣವತ್ತಿಲ್ ಮಧ್ಯಮಾಕ್ಷರತ್ತಿಲೇ ಕಳಿಕ್ಕೈಯಾಲೇ ಅನ್ಯನಾನ ಪತ್ತತ್ತನಕ್ಕು ಶೇಷತ್ವಮಿಲ್ಲೈಯೆನ್ರು ಪಿರಿತ್ತು**

ವೆಂಬುದರಿಂದಲೇ, ತಾನು ತನಗೂ ಶೇಷಭೂತನಲ್ಲವುಎಂಬ ಅನುಸಂಧಾನವುಉಂಟಾಗುವದರಿಂದ, ಇಲ್ಲಿ ನಮಶ್ಶಬ್ದಾರ್ಥದಿಂದ ಉಂಟಾಗತಕ್ಕ ವಿಶೇಷಾಭಿಪ್ರಾಯಗಳ್ಳ ಎರಡು ಎಂದು ಹೇಳಲುಉಪಕ್ರಮಿಸುತ್ತಾರೆ.—(೧) **ಸ್ವಶೇಷಿತ್ವ ನಿವೃತ್ತಿಯು**—ತಾನು ಯಾವುದಕ್ಕೂ ಸ್ವಾಮಿಯಲ್ಲವು ಎಂಬುದು ಒಂದನೇಯದು. (೨) **ಸ್ವಸ್ವಾತಂತ್ರ್ಯ ನಿವೃತ್ತಿಯು**—ತಾನು ಸ್ವತಂತ್ರನೂ ಅಲ್ಲವು ಎಂಬುದು ಎರಡನೇಯದು. ಈ ಎರಡರ ನಿವೃತ್ತಿಯೂ ಹೇಗೆ ಉಂಟಾಗಬಹುದೆಂಬುದನ್ನು ಸುಲಭವಾಗಿ ಅಧ್ಯಾಹಾರಪ್ರಕ್ರಿಯೆಯಿಂದ ಗ್ರಹಿಸಬಹುದು ; ಹೇಗೆಂದರೆ, **ನಮಃ** ಎಂದರೆ ನನುಮ, ನನ್ನದಲ್ಲವು ಎಂದಾಯಿತು. ಯಾವುನು ಎಂದರೆ **ನಮಮ ಶೇಷಿತ್ವಂ, ನನುನು ಸ್ವಾತಂತ್ರ್ಯಮ್** ಎಂದು **ಶೇಷಿತ್ವಂ ಸ್ವಾತಂತ್ರ್ಯಮ್** ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಂಡು ಅರ್ಥಮಾಡಬಹುದು. ಇದರಿಂದ ಪರಮಾತ್ಮನೇ ಎಲ್ಲಾದಕ್ಕೂ ಶೇಷಿಯು, ತಾನಲ್ಲವು, ಪರಮಾತ್ಮನೇ ಸರ್ವಸ್ವತಂತ್ರನೇ ವಿನಾ ತಾನು ಅವನಿಗೆ ಪರತಂತ್ರನು ಎಂಬೀ ಎರಡು ಜ್ಞಾನಗಳು ನಮಶ್ಶಬ್ದದಿಂದ ಉಂಟಾಗುತ್ತವೆ ಎಂದುಹೇಳಲು ಹೊರಟು ಪ್ರಥಮತಃ ಸ್ವಶೇಷಿತ್ವನಿವೃತ್ತಿಯನ್ನು ಉಪಪಾದಿಸುತ್ತಾರೆ.—

### ನಮಶ್ಶಬ್ದದಿಂದ ಸ್ವಶೇಷಿತ್ವನಿವೃತ್ತಿಯು.

**ತನಕ್ಕು**-ತನಗೆ, **ಅನ್ಯಶೇಷತ್ವಮ್**-ಇತರರಿಗೆ ದಾಸಭೂತನು ಎಂಬಭಾವವು, **ಪ್ರಣವದ ಮಧ್ಯಮಾಕ್ಷರವಾದ ಉಕಾರದಲ್ಲಿ,ಕಳಿಕ್ಕೈಯಾಲೇ** - ನಿವೃತ್ತಿಸುವದರಿಂದ, ಅದು ಹೇಗೆ ಉಕಾರದಿಂದಲೇ ತನಗೆ ಅನ್ಯಶೇಷತ್ವವು ನಿವೃತ್ತಿಸುತ್ತದೆ ಎಂಬುದನ್ನು ಉಪಪಾದಿಸಿ ಹೇಳುತ್ತಾರೆ—**ಅನ್ಯನಾನಪತ್ತತನಕ್ಕು** – ಅನ್ಯರಲ್ಲೇ ಅಂತರ್ಗತನಾದ ತನಗೂ ಸಹ, **ಶೇಷತ್ವಮಿಲ್ಲೈ ಎನ್ರು**-ತಾನು ಶೇಷಭೂತನಲ್ಲವು ಎಂದು, **ಪಿರಿತ್ತುಚ್ಚೊಲ್ಲವೇಣ್ಡಾಮೈಯಾಲೇ** - ಪ್ರತ್ಯೇಕಿಸಿ ಹೇಳಬೇಕಾದುದು ಅನಾವಶ್ಯಕವಾದುದರಿಂದ, ತನಗೆ ತಾನು ಶೇಷಭೂತನಲ್ಲವೆಂಬರ್ಥವು ಪ್ರಣವದ ಉಕಾರದಿಂದಲೇ ಸಿದ್ಧವಾದುದರಿಂದ, ವಾಕ್ಯಶೇಷದಿಂದ ಈ ನಮಶ್ಶಬ್ದದಿಂದ ಬೋಧಿತವಾದ ಮುಖ್ಯಾರ್ಥವು ಯಾವುದೆಂದರೆ ಹೇಳುತ್ತಾರೆ–ಹಿಂದೆಹೇಳಲ್ಪಟ್ಟತನಗೆ ಶೇಷಭೂತಗಳಾಗಿ ತೋರಿಬರುವ ವಸ್ತುಗಳಿಗೆ ತಾನು ಸ್ವಾಮಿಯು, ಶೇಷಿಯು, ಎಂಬ ಭಾವವು ಮುಖ್ಯವಾಗಿ ಈ ನಮಶ್ಶಬ್ದದಿಂದ ನಿವೃತ್ತಿಸುತ್ತದೆ ಎಂದು ಇಟ್ಟುಕೊಳ್ಳ

**ಚ್ಚೊಲ್ಲನೇಣ್ಡಾವ್ಯೈಯಾಲ್, ಅನ್ಯಶೇಷಿಯಾಯ್ ತೋೀತ್ತಿನ ತನಕ್ಕಿಙ್ಗೇ ದೇನುವೊನ್ರೈಯುಮ್‌ಪ್ಪತ್ತ ನಿರುಪಾಧಿಕ ಸ್ವಾಮಿತ್ವಂ ಕಳಿಕ್ಕೈಯಿಲೇ ತಾತ್ಪರ್ಯಮಾಗುವುನಾವ್.**

ಬಹುದು ಎಂದು ಮುಂದಿನ ವಾಕ್ಯಶೇಷದಿಂದ ಉಪದೇಶಿಸುತ್ತಾರೆ—**ಅನ್ಯಶೇಷಿಯಾಯ್‌ತೋೀತ್ತಿನ ತನಕ್ಕು** - ಕೆಲವು ಗುಣಗಳಿಗೂ ವಸ್ತುಗಳಿಗೂ ಸ್ವಾಮಿಯಾಗಿ ತೋರಿಬರುವ ತನಗೆ, **ಇಙ್ಗೇ** - ಇಲ್ಲಿ, ಈ ಲೀಲಾ ವಿಭೂತಿಯಲ್ಲಿ, **ಏದೇನುವೊನ್ರೈಯುಮ್‌ಪ್ಪತ್ತ** - ಯಾವುದೊಂದನ್ನೂ ಕುರಿತು, **ನಿರುಪಾಧಿಕ ಸ್ವಾಮಿತ್ವಂ** - ಸೋಪಾಧಿಕವಾದ ಶೇಷಿಯೇ ವಿನಾ ನಿರುಪಾಧಿಕ ಶೇಷಿ ಎಂಬ ಭಾವವು, **ಕಳಿಕ್ಕೈಯಿಲೇ**-ನಿವೃತ್ತಿಸುವದರಲ್ಲಿ, **ತಾತ್ಪರ್ಯಮಾಗುವುನಾವ್**- ಈ ನಮಶ್ಶಬ್ದಕ್ಕೆ ತಾತ್ಪರ್ಯವೆಂದು ತಿಳಿಯಬಹುದು. ಇಲ್ಲಿ ನಿರುಪಾಧಿಕ ಸ್ವಾಮಿತ್ವಂ ಕಳಿಕ್ಕೈಯಿಲೇ ತಾತ್ಪರ್ಯಂ ಎಂದು ಹೇಳಿರುವದರಿಂದ ನಿರುಪಾಧಿಕ ಸ್ವಾಮಿತ್ವವು ನಿವರ್ತಿಸುತ್ತದೆಂದು ಹೇಳಿದಂತಾಯಿತು. ಸೋಪಾಧಿಕ ಸ್ವಾಮಿತ್ವವೆಂದರೆ ಕರ್ಮವಶಾತ್ ಪ್ರಾಪ್ತವಾದ ಕೆಲವು ಗುಣಗಳಿಗೂ ವಸ್ತುಗಳಿಗೂ ಸ್ವಾಮಿಯಾಗಿರೋಣವು ; ಇದರಿಂದ ಆ ಸ್ವಾಮಿತ್ವವು ಸುಖದುಃಖೋಪಭೋಗಗಳಿಗಾಗಿ ಕರ್ಮೋಪಾಧಿಯಿಂದ ಉಂಟಾದುದು. ನಿರುಪಾಧಿಕಸ್ವಾಮಿತ್ವವೆಂದರೆ ಅಂತಹ ಉಪಾಧಿಗಳು ಯಾವುವೂ ಇಲ್ಲದೆ ಸ್ವೇಚ್ಛೆಯಿಂಪಲೇ ಪ್ರಾಪ್ತವಾದುದು ; ಇಂತಹ ಸ್ವಾಮಿತ್ವವು ಪರಮಾತ್ಮನೊಬ್ಬನಿಗೇ ಸಲ್ಲುತ್ತದೇ ವಿನಾ ಇತರರಿಗಿಲ್ಲವು.

ಪ್ರಣವದ ಮಧ್ಯಮಾಕ್ಷರದಿಂದುಂಟಾಗುವ ತಾತ್ಪರ್ಯವು ಯಾವುದೆಂದರೆ—**ಮಕಾರವಾಚ್ಯನಾದ ಜೀವನು ಅಕಾರವಾಚ್ಯನಿಗೇ** ಎಂಬುದು; ಇದರಿಂದ ಎಲ್ಲಾ ಜೀವವರ್ಗವೂ ಪರಮಾತ್ಮನಿಗೆ ಶೇಷಭೂತರು, ಇತರರಿಗೆ ಅಲ್ಲವು ಎಂದಾಯಿತು. ಇತರರಿಗೆ ಶೇಷಭೂತನಲ್ಲವು ಎಂಬರ್ಥವು ಉಕಾರದಿಂದುಂಟಾಗುತ್ತದೆ. ಇತರರಲ್ಲೇ ತಾನೂ ಸೇರಿದವನಾದುದರಿಂದ, ತಾನೂ ತನಗೆ ಶೇಷಭೂತನಲ್ಲವು ಎಂದರ್ಥವು ಉಂಟಾಗುತ್ತದೆ ; ಇದನ್ನೇ ಅನ್ಯನಾನ ತನ್ನೈಪ್ಪತ್ತ ತನಕ್ಕು ಶೇಷತ್ವಮಿಲ್ಲೈ ಎನ್ರು ಪಿರಿತ್ತು ಚ್ಚೊಲ್ಲವೇಣ್ಡಾವ್ಯೈಯಾಲೇ ಎಂಬುದರಿಂದ ತಿಳಿಸಿರುತ್ತಾರೆ. ಯಾವಾಗ ಇತರರಿಗೆ ಶೇಷಭೂತನಲ್ಲವೆಂಬರ್ಥವಾಯಿತೋ, ಆಗ ಇತರರಲ್ಲಿ ತಾನೂ ಸೇರಿದವನಾದುದರಿಂದ ತಾನು ತನಗೆ ಶೇಷಭೂತನಲ್ಲವೆಂದು ಪೃಥಕ್ಕಾಗಿ ಹೇಳಬೇಕಾದುದಿಲ್ಲವೆಂಬ ಭಾವವು. ಆದುದರಿಂದ ನಮಶ್ಶಬ್ದಾರ್ಥಕ್ಕೆ ಯಾವುದರಲ್ಲಿ ಮುಖ್ಯ ತಾತ್ಪರ್ಯವು? ಎಂದರೆ ತಾನೂ ಕರ್ಮೋಪಾಧಿಯಿಂದ ಕೆಲವಕ್ಕೆ ಸ್ವಾಮಿಯಾಗಿ ಎಂದರೆ ಶೇಷಿಯಾಗಿ ತೋರಿಬರಬಹುದು. ಅವೆಲ್ಲವೂ ವಿಚಾರಿಸಿ ನೋಡಿದರೆ ತನ್ನದಲ್ಲವು ; ನಿರುಪಾಧಿಕ ಸ್ವಾಮಿತ್ವವು ತನಗೆ ಯಾವುದರ ವಿಷಯದಲ್ಲೂ ಇಲ್ಲವೆಂಬುದು ಈ ನಮಶ್ಶಬ್ದದ ತಾತ್ಪರ್ಯವು ಎಂದು ಉಪದೇಶಿಸಿದರು.

**ಜೀವನುಕ್ಕು ಶೇಷಮಾನವೈಯೆಲ್ಲಾಮ್ ನಿರುಪಾಧಿಕ ಸರ್ವಶೇಷಿಯಾನ ಸರ್ವೇಶ್ವರ್ ಸ್ವಾರ್ಥಮಾಗ ಕೊಡುತ್ತವೈಯಿರೇ.**

---

ಆವರೆ ಈ ವಸ್ತುಗಳಿಗೆಲ್ಲಾ ತಾನು ಸ್ವಾಮಿಯಾಗಿ ತೋರಿಬರುತ್ತದೆಯಲ್ಲಾ? ಈ ಗೃಹವೂ, ಕ್ಷೇತ್ರವೂ ನನ್ನದು, ಇವರು ನನ್ನ ಮಕ್ಕಳು. ಇವರು ನನ್ನ ಸಂಬಂಧಿಗಳು ಇತ್ಯಾದಿ ಜ್ಞಾನವು ಪ್ರತ್ಯಕ್ಷ ಸಿದ್ಧವಾಗಿರುವಾಗ, ಅವು ನನ್ನದಲ್ಲವೆಂದು ಭಾವಿಸುವದು ಹೇಗೆ ಎಂದರೆ ಹೇಳುತ್ತಾರೆ— **ಜೀವನುಕ್ಕು** - ಪ್ರತಿಯೊಬ್ಬ ಜೀವಾತ್ಮನಿಗೂ, **ಶೇಷ ಭೂತಮಾನವೈಯೆಲ್ಲಾಮ್** – ಉಪಯೋಗಕ್ಕಾಗಿ ಆತನಿಗೆ ಅಧೀನವಾಗಿರುವ ಎಲ್ಲವೂ, **ನಿರುಪಾಧಿಕ ಸರ್ವಶೇಷಿಯಾನ**-ಇವುಗಳೆಲ್ಲಕ್ಕೂ ತನಗೂ ಮತ್ತು ಜಗತ್ತುಗಳ ಇತರ ವಸ್ತುಗಳಿಗೂ ಹೀಗೆ ಸರ್ವಕ್ಕೂ ನಿರುಪಾಧಿಕ ಸ್ವಾಮಿಯಾದ, **ಸರ್ವೇಶ್ವರನ್**-ಸಮಸ್ತಕ್ಕೂ ನಿಯಾಮಕನಾಗಿರುವ ಪರಮ ಪುರುಷನು, **ಸ್ವಾರ್ಥಮಾಗ**-ತನ್ನ ಲೀಲಾರಸಾನುಭವಕ್ಕಾಗಿ, ಅಥವಾ ಆ ಜೀವಾತ್ಮರ ಕರ್ಮಾನುಗುಣವಾಗಿರುವ ಉಪಭೋಗಕ್ಕಾಗಿ, **ಕೊಡುತ್ತವೈಯಿರೈ** - ಅನುಗ್ರಹಿಸಿಕೊಟ್ಟಿರುವುವು ಆಗಿರುತ್ತವೆ. ಲೋಕದಲ್ಲೂ ಕೂಡ ಈ ನ್ಯಾಯವನ್ನೇ ಕಂಡಿರುವೆವು, ಹೇಗೆಂದರೆ; ತಂದೆಗೆ ಸೇರಿದವುಗಳಾಗಿ ಆತನಿಂದ ಸಂಪಾದಿಸಲ್ಪಟ್ಟ ಪದಾರ್ಥಗಳನ್ನೇ ಮಗನ ಉಪಭೋಗಕ್ಕಾಗಿ ಅವುಗಳಲ್ಲಿ ಕೆಲವನ್ನು ಆತನು ಹೇಗೆ ಮಗನ ವಶಮಾಡಿರುತ್ತಾನೋ, ಹಾಗೆಯೇ ಸರ್ವೇಶ್ವರನೂ ಸಹ. ಆತನು ಲೋಕ ಪಿತಾನಾದುದರಿಂದ ತನಗೆ ಶೇಷಭೂತವಾದುವೇ ಸಮಸ್ತ ವಸ್ತುವು. ತಂದೆಯು ತನ್ನ ವಸ್ತುಗಳಲ್ಲಿ ಕೆಲವನ್ನು ಮಗನ ವಶಕ್ಕೆ ಕೊಟ್ಟಿರುವದು ಎರಡು ವಿಷಯಕ್ಕಾಗಿ; ತನ್ನ ಮಗನು ಅನುಭವಿಸುವದರಿಂದ ತನಗೆ ಲೀಲಾರಸ ಉಂಟಾಗುವುದಕ್ಕಾಗಿಯೂ, ಮತ್ತು ಮಗನು ಅವುಗಳನ್ನು ತನ್ನವೆಂದು ಭಾವಿಸಿ ಉಪಯೋಗಿಸಿಕೊಳ್ಳಲಿ ಎಂಬುದಕ್ಕಾಗಿಯೂ, ಹೀಗೆ ಎಂದು ಭಾವನೆಗಳಿಂದಲೂ ಕೊಡಲ್ಪಟ್ಟಿವೆ ಎಂಬ ತಾತ್ಪರ್ಯವು. ಇಲ್ಲಿ **ಸ್ವಾರ್ಥಮಾಗ** ಎಂಬುದಕ್ಕೆ ಸ್ವ ಎಂಬುದನ್ನು ಹತ್ತಿರವಿರುವ ಪದವಾದ **ಈಶ್ವರ್** ಎಂಬುದರೊಂದಿಗೆ ಅನ್ವಯಿಸಿದರೆ ಸರ್ವೇಶ್ವರನ ಲೀಲಾರಸಾನುಭವಕ್ಕಾಗಿ ಎಂಬರ್ಥವಾಗುತ್ತದೆ. ಹಾಗೆಯೇ ಸ್ವಾರ್ಥಮಾಗ **ಕೊಡುತ್ತಮ್** ಎಂಬುದರೊಂದಿಗೆ ಅನ್ವಯಿಸಿದರೆ ಜೀವಾತ್ಮನ ಕರ್ಮಾನುಗುಣಾನುಭವ ಪ್ರಯೋಜನಕ್ಕಾಗಿ, ಎಂಬರ್ಥವು ತೋರಿಬರುತ್ತದೆ. ಎರಡು ವಿಧವಾಗಿಯೂ ಹೀಗೆ ಅನ್ವಯಿಸಬಹುದು. ಈ ಎರಡು ಅರ್ಥಗಳನ್ನೂ ಶ್ರೀ ದೇಶಿಕರವರು ತಾವೇ ಉಪಪಾದಿಸುತ್ತಾರೆ. ಅವುಗಳಲ್ಲಿ ಕೆಲವನ್ನು. ಈ ಜೀವಾತ್ಮನಿಗೆ ಈತನ ಕರ್ಮಾನುಗುಣವಾಗಿ ಉಪಯೋಗಕ್ಕಾಗಿಯೂ, ತನ್ಮೂಲಕ ತನ್ನ ಲೀಲಾರಸಾನುಭವಕ್ಕಾಗಿಯೂ ಈತನ ವಶಮಾಡಿರುತ್ತಾನೆ. ಆದುದರಿಂದ ಈತನಿಗೆ ಅವುಗಳ ವಿಷಯ

**ಜೀವರ್ಗಳುಡೈಯ ನಿತ್ಯಜ್ಞಳಾನ ಗುಣಾದಿಗಳ್ ಈಶ್ವರನುಡೈಯ ನಿತ್ಯೇಚ್ಛಾಸಿದ್ಧಜ್ಞಳ್. ಅಶುದ್ಧ ದಶೈಯಿಲುಮ್ ಶುದ್ಧ ದಶೈಯಿಲುಮ್**

ದಲ್ಲಿ ಸ್ವಾಮಿತ್ವವುಸೋಪಾಧಿಕವಾಗಿ ಸರ್ವೇಶ್ವರನಿಂದ ದತ್ತವಾದುದು. ಸರ್ವೇಶ್ವರನೇ ಸರ್ವಕ್ಕೂ ನಿರುಪಾಧಿಕ ಶೇಷಿಯೇವಿನಾ,ವಿಚಾರಮಾಡಿ ನೋಡಿದರೆ ತಾನು ಯಾವುದಕ್ಕೂ ಶೇಷಿಯಲ್ಲವು. ಇಂತಹ ಅಹಂಕಾರ ಮಮಕಾರಗಳನ್ನು ದೂರೀಕರಿಸುವ ಅಮೋಘಾನುಸಂಧಾನವು ನಮಶ್ಶಬ್ದದಿಂದ ಉಂಟಾಗುತ್ತದೆಂಬ ಭಾವವು. ಇತರ ಸಜ್ಕಲ್ಪ ಮೂಲಕ ಉಂಟಾಗುವ ವಸ್ತುಗಳ ಸ್ವಾಮಿತ್ವವು, ಸೋಪಾಧಿಕ ಸ್ವಾಮಿತ್ವವೆಂದು ಹೇಳಿಸಿ ಕೊಳ್ಳುತ್ತದೆ. ಸ್ವಾಮಿ ಸಜ್ಕಲ್ಪದಿಂದ ನಮಗೆ ಕಳತ್ರ ಪುತ್ರ ದಾಸದಾಸೀಜನಗಳ ವಿಷಯದಲ್ಲೂ, ಧನಗೇಹಾದಿಗಳ ವಿಷಯದಲ್ಲೂ ಉಂಟಾಗಿರುವ ಸ್ವಾಮಿತ್ವವು ಸೋಪಾಧಿಕ ಸ್ವಾಮಿತ್ವವು; ಸಹಜವಾಗಿ ಸ್ವತಂತ್ರೇಚ್ಛಾಸಿದ್ಧವಾಗಿ ಬಂದುದಲ್ಲವು; ಪರಮಾತ್ಮನಿಗಾದರೋ ತನ್ನ ಸ್ವತಂತ್ರೇಚ್ಛಾ ಸಿದವಾಗಿರುವ ವಸ್ತುಗಳ ಸ್ವಾಮಿತ್ವವು; ಆದುದರಿಂದ ನಿರುಪಾಧಿಕ ಸ್ವಾಮಿತ್ವವೆಂದ್ದು ತಿಳಿಯತಕ್ಕದ್ದು.

ಆಗಲಿ, ನಮಗೆ ಸಂಬಂಧಿಸಿದ ವಸ್ತುಗಳಿಗೇನೋ ಸರ್ವೇಶ್ವರನೇ ನಿರುಪಾಧಿಕ ಶೇಷಿ ಎಂಬುದನ್ನೇನೋ ಒಪ್ಪಬಹುದು. ನಿತ್ಯಗಳಾಗಿ ನಮಗೇನೇ ಸಂಬಂಧಿಸಿಕೊಂಡಿರುವ ಜ್ಞಾನತ್ವಾನಂದತ್ವ ಅಮಲತ್ವ ಸತ್ಯಸಜ್ಕಲ್ಪತ್ವಾದಿ ಗುಣಗಳೆಲ್ಲಾ ಪರಮಾತ್ಮನಿಗೆ ಶೇಷಭೂತವಾದವು ಹೇಗೆ? ಅವುಗಳಿಗಾಗಲಿ ಈ ಚೇತನನು ಶೇಷಿಯಲ್ಲವೋ? ಹಾಗೆಯೇ ಕರ್ಮಾನುಗುಣವಾಗಿ ಪ್ರಾಪ್ತವಾಗುವ ಶರೀರಕ್ಕೆ ತಾನು ಶೇಷಿಯಲ್ಲವೋ? ತನ್ನ ಉಪಾಯಾನುಷ್ಠಾನದ ಮೂಲಕ ಮುಕ್ತ ದಶೆಯಲ್ಲಿ ಪ್ರಾಪ್ತವಾಗುವ ದಿವ್ಯಮಜ್ಗಳ ವಿಗ್ರಹಕ್ಕೆ ತಾನು ಶೇಷಿಯಲ್ಲವೋ? ಎಂದರೆ ಇವು ಯಾವುದಕ್ಕೂ ತಾನು ಶೇಷಿಯಲ್ಲವು; ಪರಮಾತ್ಮನೇ ಸರ್ವಶೇಷಿ ಎಂದು ಮುಂದೆ ಉಪಪಾದಿಸುತ್ತಾರೆ. ಸರ್ವೇಶ್ವರನ ಲೀಲಾರಸಾನುಭವಕ್ಕಾಗಿಯೇ ಅವು ಕೂಡ ಚೇತನನಿಗೆ ಕೊಡಲ್ಪಟ್ಟವು; ಕೆಲವು ತನ್ನ ನಿತ್ಯೇಚ್ಛಾ ಮೂಲಕ ನಿತ್ಯವಾಗಿ ಸಿದ್ಧವಾದವು; ಇನ್ನು ಕೆಲವು ಅನಿತ್ಯೇಚ್ಛೆಯಿಂದ ಅನಿತ್ಯಗಳಾಗಿರಲಿ ಎಂದು ಹೇಳಿ, ಕೊಡಲ್ಪಟ್ಟವೆಂದು ಹೇಳುತ್ತಾರೆ—**ಜೀವರ್ಗಳುಡೈಯ** - ಜೀವಾತ್ಮರ, **ನಿತ್ಯಜ್ಞಳಾನ** - ಶಾಶ್ವತವಾದ, **ಗುಣಾದಿಗಳ್** - ಸ್ವರೂಪ ನಿರೂಪಕ ಧರ್ಮಗಳಾದ ಜ್ಞಾನತ್ವ, ಆನಂದತ್ವ ಅಮಲತ್ವಗಳು ಮತ್ತು ಆದಿ ಶಬ್ದದಿಂದ ಧರ್ಮಭೂತಜ್ಞಾನ, ಅಪಹತ ಪಾಪ್ಮತ್ವ, ಸತ್ಯಕಾಮತ್ವ, ಸತ್ಯಸಜ್ಕಲ್ಪತ್ವಾದಿಗಳು ಹೇಳಲ್ಪಟ್ಟವು; ಇವೆಲ್ಲವೂ, **ಈಶ್ವರನುಡೈಯ** - ಸರ್ವೇಶ್ವರನ, **ನಿತ್ಯೇಚ್ಛಾಸಿದ್ಧಜ್ಞಳ್** - ಯಾವಾಗಲೂ ನಿತ್ಯವಾಗಿರಲಿ ಎಂಬ ಸರ್ವೇಶ್ವರನ ಸತ್ಯಸಜ್ಕಲ್ಪದಿಂದ ಸಿದ್ಧವಾದವು.

**ಉಂಡಾನ ಅನಿತ್ಯ ವಿಗ್ರಹಾದಿಗಳ್ ಇವರ್‌ಗಳುಡೈಯ ಕರ್ಮಜನ್ಯ ಮಾಯುಮ್, ಕರ್ಮನಿರಪೇಕ್ಷಮಾಯುಮುಳ್ಳ ಅನಿತ್ಯೇಚ್ಛಾ ಸಿದ್ಧಙ್ಗಳ್.**

**ಅಶುದ್ಧ ದಶೈಯಿಲುಮ್**-ದೇಹ ಸಂಬಂಧದಿಂದ ಬದ್ಧರಾಗಿ ಅಶುದ್ಧರಾಗಿರುವ ಅವಸ್ಥೆಯಲ್ಲೂ ಮತ್ತು **ಶುದ್ಧ ದಶೈಯಿಲುಮ್**-ಪ್ರಕೃತಿ ಸಂಬಂಧವು ತೊಲಗಿ ಪರಿಶುದ್ಧವಾದಮುಕ್ತಾವಸ್ಥೆಯಲ್ಲೂ ಸಹ **ಉಂಡಾನ**-ಪ್ರಾಪ್ತವಾದ. **ಅನಿತ್ಯವಾದ ವಿಗ್ರಹಾದಿಗಳ್** - ಅನಿತ್ಯವಾದ ಶರೀರಗಳು, ಬದ್ಧ ದೆಶೆಯಲ್ಲಿ ಉಂಟಾಗುವ ದೇವ ಮನುಷ್ಯಾದಿ ಶರೀರಗಳು, ಮುಕ್ತ ದೆಶೆಯಲ್ಲಿ ಉಂಟಾಗುವ ವಿಗ್ರಹಗಳೂ, **ಇವರ್‌ಗಳುಡೈಯ**- ಇವರುಗಳ, **ಕರ್ಮಜನ್ಯಮಾಯುಮ್** - ಬದ್ಧದೆಶೆಯಲ್ಲಿ ಕರ್ಮ ಮೂಲಕ ಉತ್ಪನ್ನವಾಗಿ. **ಕರ್ಮನಿರಪೇಕ್ಷಮಾಯುಮುಳ್ಳ** - ಮುಕ್ತ ದೆಶೆಯಲ್ಲಿ ಅಕರ್ಮವಶ್ಯನಾಗುವವರಿಂದ ಕರ್ಮದ ಸಾಪೇಕ್ಷತ್ವವಿಲ್ಲದೆಯೂ ಇರುವ, **ಅನಿತ್ಯೇಚ್ಛಾಸಿದ್ಧಙ್ಗಳ್**-ಅನಿತ್ಯವಾಗಿರಲೆಂದು ಸರ್ವೇಶ್ವರನ ಸಙ್ಕಲ್ಪದಿಂದ ಉತ್ಪನ್ನವಾದವುಗಳು. ಕೆಲವು ಆತ್ಮಗುಣಗಳೇ ಮೊದಲಾದವು ನಿತ್ಯವಾಗಿರಲೆಂದೂ, ಇನ್ನು ಕೆಲವು ಶರೀರಾದಿಗಳು ಅನಿತ್ಯವಾಗಿರಲೆಂದೂ ಸ್ವಾಮಿಯು ಸಙ್ಕಲ್ಪಿಸಿದುದರಿಂದ ಹಾಗೆ ನಿತ್ಯವಾಗಿಯೂ ಅನಿತ್ಯವಾಗಿಯೂ ಇವೆ ಯಾದುದರಿಂದ ಅವೂ ಸರ್ವೇಶ್ವರನಿಗೇನೇ ಶೇಷಭೂತಗಳು ಎಂಬ ಭಾವವು. ಮುಕ್ತದೆಶೆಯಲ್ಲಿ ಉಂಟಾಗುವ ಶರೀರಗಳು ಅನಿತ್ಯವಾದವು ಹೇಗೆ ಎಂದರೆ **"ಸ ಏಕಧಾ ಭವತಿ, ತ್ರಿಧಾ ಭವತಿ"** ಇತ್ಯಾದಿ ಶ್ರುತ್ಯನುಸಾರ ಆತನು ತನ್ನಿಷ್ಟಾನುಸಾರ ಶರೀರವನ್ನು ಹೊಂದುವಹಾಗೆ ಪರಮ ಪುರುಷನು ಅನುಗ್ರಹಿಸುವನು. ಪ್ರಾಕೃತ ದೇಹ ಸಂಬಂಧವಿರುವಾಗ ಈ ಜೀವರುಗಳು ಕೆಸರಿನಲ್ಲಿ ಬಿದ್ದವಜ್ರದ ಹಾಗೆ ಅಶುದ್ಧರೆಂಬುದಕ್ಕೆ **"ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ"**(ವಿ. ಪು- ೬.೭.೭೭)ದೇವ ಮನುಷ್ಯಾದಿ ಕರ್ಮಮೂಲಕ ಜನ್ಮವೆತ್ತಿದ ಸಮಸ್ತರೂ ಅಶುದ್ಧರೆಂಬ ಮತ್ತು **"ಕರ್ಮಣಾಂ ಪರಿಪಾಕತ್ವಾ ದಾವಿರಿಂಚಾದ ಮಙ್ಗಳಮ್"** (ಭಾಗ. ೧೧. ೧೯. ೧೮) ಚತುರ್ಮುಖ ಮೊದಲುಗೊಂಡು ಸಮಸ್ತ ಜೀವವರ್ಗವೆಲ್ಲಾ ಕರ್ಮಪರಿಪಾಕಕ್ಕೆ ವಶ್ಯರಾದುದರಿಂದ ಅಮಂಗಳವಾದುವು, ಇತ್ಯಾದಿ ಮಹರ್ಷಿಗಳ ಸೂಕ್ತಿಯು ಅನುಸಂಧೇಯವು (ಹಿಂದೆ ೬೬೦-೧) ನೆಯ ಪುಟಗಳನ್ನು ಪರಾಂಬರಿಸಿ. ನಿತ್ಯವಾದುವು ಈಶ್ವರನ ನಿತ್ಯೇಚ್ಛಾ ಸಿದ್ಧಙ್ಗಗಳೆಂದೂ,ಅನಿತ್ಯವಾದುವು ಅನಿತ್ಯೇಚ್ಛೆಯಿಂದ ಉತ್ಪನ್ನಗಳೆಂದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ. ೨೬೩ನೆಯ ಪುಟವನ್ನು ನೋಡಿ.

## (೨) ನಮಶ್ಶಬ್ದದಿಂದ ತನಗೆ ಸ್ವಾತಂತ್ರ್ಯನಿವೃತ್ತಿಯು.

ಪ್ರಣವದಲ್ಲೇ ಸ್ವಶೇಷತ್ವ ನಿವೃತ್ತಿ ಎಂದರೆ ತಾನು ಇನ್ಯಾರಿಗೂ ನಿರುಪಾಧಿಕಶೇಷನಲ್ಲವೆಂಬ ಸುಸಂಧಾನವು ಹೇಗೋ,ಹಾಗೆಯೇ ತಾನು ಯಾವದಕ್ಕೂ ನಿರು

## (೨) ನಮಸಾ ಸ್ವಸ್ವಾತಂತ್ರ್ಯ ನಿವೃತ್ತಿಃ.

ಪ್ರಣವತ್ತಿಲೇ ಅನ್ಯಶೇಷತ್ವಂ ಕಳಿಗೈಯಾಲೇ, ಪರಮಾತ್ಮಾವಿರ್ಯಾಕ್ಟೈಲ್ ಅನ್ಯನಾನ ತನಕ್ಕುತ್ತಾಙ್ ಶೇಷನಲ್ಲನೆನ್ನುಮಿಡಮ್ ಸಿದ್ಧಿಕ್ಕೈಯಾಲುಮ್, ತಾಙ್ ವೇರೊರುತ್ತರುಕ್ಕುಮ್ ಶೇಷಮಲ್ಲಾದಾಪ್ಪೋಲೆ ವೇರೊನ್ರುಮ್ ತನ್ನೈಪ್ಪತ್ತ ನಿರುಪಾಧಿಕ ಶೇಷಮನ್ರೆನ್ನುಮಿಡಮುಮ್ ಇಜ್ಞೇವರುಗೈಯಾಲುಮ್, ಪ್ರಣವತ್ತಿಲ್ ತೋತ್ತಾದ ಸ್ವಸ್ವಾತಂತ್ರ್ಯನಿವೃತ್ತಿ

---

ಪಾಧಿಕ ಶೇಷಿಯೂ ಅಲ್ಲನೆಂಬ ಸ್ವಶೇಷಿತ್ವ ನಿವೃತ್ತಿಯು ಉಂಟಾಗುತ್ತದೆಂದು ಹೇಳಲ್ಪಟ್ಟಿತು; ಹೇಗೆಂದರೆ ಮಕಾರವಾಚ್ಯನು ಅಕಾರ ವಾಚ್ಯನಿಗೆ ಶೇಷಭೂತನೆಂಬರ್ಥ ಉಂಟಾಗುವದರಿಂದ, ಆ ಮಕಾರನೊಂದಿಗೇನೇ ಯಾವಾಗಲೂ ಸೇರಿಕೊಂಡಿರುವ ಸಮಸ್ತ ಅಚಿದ್ದ್ರವ್ಯವೂ ಅಕಾರ ವಾಚ್ಯನಿಗೇ ಶೇಷಭೂತನೆಂಬರ್ಥವು ಉಪಲಕ್ಷಣ ರೂಪದಲ್ಲಿ ಲಭಿಸುತ್ತದೆಂದು ಹಿಂದೆ ಉಪಪಾದಿಸಲ್ಪಟ್ಟಿತು. ಆದುದರಿಂದ ನಮಶ್ಶಬ್ದವು ಸ್ವಶೇಷಿತ್ವ ನಿವೃತ್ತಿಯನ್ನು ಬೋಧಿಸುತ್ತದೆಂದು ಹೇಳಲ್ಪಟ್ಟಿತು. ಈಗ ಹೊಸದಾಗಿ ಹೇಳುವದೇನು? ಎಂದರೆ, ಹಿಂದೆ ಉಪದಿಷ್ಟನಾಗದಿರುವ ಅರ್ಥವನ್ನು ಹೇಳಬೇಕಲ್ಲವೇ? ಶಾಸ್ತ್ರವು ಹಿಂದೆ ಹೇಳಿದುದನ್ನು ಹೇಳತಕ್ಕದ್ದಲ್ಲವು; ಹೊಸದಾದುದನ್ನಲ್ಲವೇ ಅದು ತಿಳಿಸತಕ್ಕದ್ದು ? ಪ್ರಣವದಿಂದ ಸಿದ್ಧವಾಗದ ಬೇರೇ ಹೊಸ ಅರ್ಥವನ್ನಲ್ಲವೇ ಹೇಳತಕ್ಕದ್ದು ? ಎಂದರೆ, ಸ್ವಸ್ವಾತಂತ್ರ್ಯ ನಿವೃತ್ತಿಯನ್ನು ಬೋಧಿಸುತ್ತದೆಂದು ಇಟ್ಟುಕೊಳ್ಳಬಹುದು ಎಂದು, ನಮಶ್ಶಬ್ದದ ಎರಡನೆಯ ಅರ್ಥವನ್ನು ಉಪಪಾದಿಸುತ್ತಾರೆ.—**ಪ್ರಣವತ್ತಿಲೇ** - ಪ್ರಣವದಲ್ಲಿ, **ಅನ್ಯಶೇಷತ್ವಂ** - ತಾನು ಪರಮಾತ್ಮನಿಗಲ್ಲದೆ ಇನ್ನು ಯಾರಿಗೂ ಶೇಷಭೂತನಲ್ಲವೆಂಬುದು, **ಕಳಿಗೈಯಾಲೇ** – ನಿವೃತ್ತಿಸಿ ಹೋಗುವದರಿಂದ, **ಪರಮಾತ್ಮಾ ವಿರ್ಯಾಕ್ಟೈಲ್ ಅನ್ಯನಾನ** - ಪರಮಾತ್ಮನಿಗಿಂತ ಬೇರೆಯಾದ, **ತನಕ್ಕು** – ತನಗೆ, **ತಾಙ್ ಶೇಷನಲ್ಲನೆನ್ನುಮಿಡಮ್**-ತಾನು ಶೇಷನಲ್ಲನೆಂಬ ಅರ್ಥವು, **ಸಿದ್ಧಿಕ್ಕೈಯಾಲುಮ್**-ಉಕಾರದ ಅನ್ಯಯೋಗ ವ್ಯವಚ್ಛೇದದಿಂದಲೂ, ಆ ಅನ್ಯರಲ್ಲಿ ತಾನೂ ಸೇರಿದವನಾದುದರಿಂದ ಸಿದ್ಧಿಸುವದರಿಂದಲೂ, ಅಥವಾ ಅಸ್ಮಚ್ಛಬ್ದದ ಪೂರ್ವಾಪರ ಲೋಪದಿಂದ ಮಕಾರ ಉಂಟಾಗುವದರಿಂದಲೂ, ತಾನು ತನಗೇ ಶೇಷಭೂತನಲ್ಲವೆಂಬ ಸ್ವಶೇಷ ನಿವೃತ್ತಿಯು ಪ್ರಣವದಿಂದಲೇ ತೋರಿಬರುವದರಿಂದಲೂ ಎಂಬರ್ಥವು. **ತಾಙ್ ವೇರೊರುತ್ತರುಕ್ಕುಮ್ ಶೇಷಮಲ್ಲಾದಪ್ಪೋಲೇ** - ಹೀಗೆ ತಾನು ಇನ್ನು ಯಾರಿಗೂ ಶೇಷನಲ್ಲವೆಂಬರ್ಥವು, ಉಕಾರದಿಂದ ತೋರಿಬಂದಹಾಗೆಯೇ, **ವೇರೊನ್ರುಮ್ ತನ್ನೈಪ್ಪತ್ತ ನಿರುಪಾಧಿಕ ಶೇಷಮನ್ರೆನ್ನುಮಿಡಮುಮ್ ಇಜ್ಞೇವರುಗೈಯಾಲುಮ್** - ಯಾವಾಗ ತಾನೇ ತನಗೆ ಶೇಷನಲ್ಲವೋ ಆಗ ಇನ್ನು

**ಯಿಲೇ ನಮಸ್ಸುಕ್ಕು ತಾತ್ಪರ್ಯಮಾಗವುಮಾಮ್. ಅಪ್ಪೋದು ಪೂರ್ವ ಪ್ರಯುಕ್ತ ಮಕಾರತ್ತೈ ಅನುಷಙ್ಗಿತ್ತು ನಾನೆನಕ್ಕು ನಿರ್ವಾಹಕನಲ್ಲೆನೆನ್ರು ಕೊಳ್ಳಿತ್ತಾಯತ್ತು. ಸ್ವಾತಂತ್ರ್ಯಪದ ಮಾತ್ರತ್ತೈ ಅಧ್ಯಾಹರಿತ್ತು ನಮಮ ಸ್ವಾತಂತ್ರ್ಯಮ್ ಎನ್ರುದಾಗವುಮಾಮ್.**

---

ಯಾವದೊಂದೂ ತನ್ನನ್ನು ಕುರಿತು ನಿರುಪಾಧಿಕಶೇಷವಾದುವಲ್ಲವೆಂಬರ್ಥವೂ ಕೂಡಾ ಅಲ್ಲೇ ಪ್ರಣವದಲ್ಲೇ ತೋರಿಬರುವದರಿಂದ, ತಾನೇ ಯಾವಾಗ ತನಗೆ ಶೇಷ ಭೂತನಲ್ಲವೋ, ಆಗ ತನ್ನೊಂದಿಗೆ ಸೇರಿರುವ ಸಮಸ್ತ ವಸ್ತು ತನಗೆ ನಿರುಪಾಧಿಕ ವಾಗಿ ಶೇಷಭೂತವಾದವಲ್ಲವು ; ಆದುದರಿಂದ ತನಗೆ ಯಾವುದರ ವಿಷಯದಲ್ಲೂ ಶೇಷಿತ್ವವಿಲ್ಲವೆಂಬುದು ಪ್ರಣವದಿಂದಲೇ ವ್ಯಕ್ತವಾಗುವದರಿಂದಲೂ, **ಪ್ರಣವ ತ್ತಿಲ್** - ಪ್ರಣವದಲ್ಲಿ, **ತೋತ್ತಾದ** - ತೋರಿಬಾರದ ಹೊಸ ಅರ್ಥವಾದ, **ಸ್ವ ಸ್ವಾತಂತ್ರ್ಯ ನಿವೃತ್ತಿಯಿಲೇ** – ತನಗೆ ಸ್ವಾತಂತ್ರ್ಯವು ಇಲ್ಲವೆಂಬುದರಲ್ಲಿ, **ನಮಸ್ಸು ಕ್ಕು** - ನಮಸ್ಸಿಗೆ, **ತಾತ್ಪರ್ಯಮಾಗವುಮಾಮ್** - ತಾತ್ಪರ್ಯವಾಗಬಹುದು. ತಾನು ತನಗೆ ಶೇಷನಲ್ಲವು, ತಾನು ಯಾವುದಕ್ಕೂ ನಿರುಪಾಧಿಕ ಶೇಷಿಯಲ್ಲವು. ಇವೆರಡರ್ಥಗಳೂ ಪ್ರಣವದಿಂದಲೇ ತೋರಿಬರುವದರಿಂದ, ಅಪ್ರಾಪ್ತವಾದ ವಿಷಯ ದಲ್ಲೇ ಶಾಸ್ತ್ರಾರ್ಥವಾದುದರಿಂದ,ಹಿಂದೆ ಪ್ರಣವದಿಂದ ತೋರಿಬರದೇ ಇರುವ ಅರ್ಥ ವನ್ನು ಹೇಳತಕ್ಕದ್ದು ನ್ಯಾಯವಾದುದರಿಂದ, “ನನಗೆ ಸ್ವಾತಂತ್ರ್ಯವಿಲ್ಲ” ವೆಂಬರ್ಥ ವನ್ನು ನಮಶ್ಶಬ್ದವು ಬೋಧಿಸುತ್ತದೆ ಎಂದು ಭಾವಿಸಬಹುದು. ಈ ಅರ್ಥವು ಹೇಗೆ ಉಂಟಾಗುತ್ತದೆ ಎಂದರೆ ಎರಡುವಿಧವಾಗಿ ಭಾವಿಸಬಹುದು ಎಂದುಹೇಳುತ್ತಾರೆ.— (೧) ಅನುಷಙ್ಗರೂಪದಲ್ಲಿ ಹಿಂದಿನ ಮಕಾರವನ್ನು ಆಕರ್ಷಿಸಿ, ಅಹಂ ನಮಮ- ನಾನು ನನಗೆ ನಿರ್ವಾಹಕನಲ್ಲವು. ಏಕೆಂದರೆ ಪರಮಾತ್ಮನಿಗೆ ನಾನು ಅಧೀನನು ಎಂದಾದರೂ ಆಗಬಹುದು. ಅಥವಾ (೨) ಅಧ್ಯಾಹಾರರೂಪದಲ್ಲಿ,ನಮಮಸ್ವಾತಂ ತ್ರ್ಯಮ್ ಎಂದು ಸ್ವಾತಂತ್ರ್ಯಮ್ ಎಂಬ ಪದವನ್ನು ಇಟ್ಟುಕೊಳ್ಳತಕ್ಕದ್ದು, ಎಂದು ಮುಂದಿನ ಎರಡು ವಾಕ್ಯಗಳಿಂದ ತಿಳಿಸುತ್ತಾರೆ — **ಅಪ್ಪೋದು** - ಹಾಗೆ ಸ್ವಸ್ವಾತಂತ್ರ್ಯ ನಿವೃತ್ತಿಯ ಅರ್ಥ ಉಂಟಾಗಬೇಕಾದರೆ, **ಪೂರ್ವ ಪ್ರಯುಕ್ತ** - ಹಿಂದೆ ಉಪದೇಶಿಸಿ ಹೇಳಿದ, **ಮಕಾರತ್ತೈ ಅನುಷಙ್ಗಿತ್ತು** - ಪ್ರಣವದ ಮಕಾ ರವನ್ನು ಆಕರ್ಷಿಸಿಕೊಂಡು, “**ನಾನೆನಕ್ಕು ನಿರ್ವಾಹಕನಲ್ಲೆನ್**” - ನಾನು ನನಗೆ ನಿರ್ವಾಹಕನಲ್ಲನು, ಹಾಗಾದರೆ ಇನ್ನು ಯಾರು ತನಗೆ ನಿರ್ವಾಹಕರೆಂದರೆ ಪರಮಾ ತ್ಮನು ಎಂಬ ಭಾವವು, **ಎನ್ರುಕೊಳ್ಳಿತ್ತಾಯಿತ್ತು** - ಎಂದು ಹೇಳಿದಂತಾಯಿತು. ಇದರಿಂದ ತಾನು ಸ್ವತಂತ್ರನಲ್ಲವೆಂಬ ಭಾವವು. ಅಥವಾ ಇನ್ನೊಂದು ವಿಧವಾ ಗಿಯೂ ಅರ್ಥವನ್ನು ಉಪಪಾದಿಸಬಹುದೆಂದು ಹೇಳುತ್ತಾರೆ. ಸ್ವಾತಂತ್ರ್ಯ

## ಸ್ವಸ್ವಾತಂತ್ರ್ಯ ನಿವೃತ್ತೇಃ ತಾತ್ಪರ್ಯ ನಿರೂಪಣಮ್.

**ಇಚ್ಚೇತನನುಕ್ಕು ಸ್ವಸ್ವಾತಂತ್ರ್ಯ ನಿವೃತ್ತಿಯಾವುದು ? ನಿರಪೇಕ್ಷ**

---

**ಪದ ಮಾತ್ರತ್ತೈ** - ಸ್ವಾತಂತ್ರ್ಯವೆಂಬ ಪದವನ್ನು ಮಾತ್ರ, **ಅಧ್ಯಾಹರಿತ್ತು** ಅಧ್ಯಾಹಾರಮಾಡಿಕೊಂಡು "ನಮಮ ಸ್ವಾತಂತ್ರಮ್", ಎನ್ರುದಾಗವುಮಾಮ್"– ಎಂದಾಗಲಿ ಆಗಬಹುದು. "ಅಹಂ ಮಮನಿರ್ವಾಹಕಃ ನ" ಎಂದಾಗಲಿ, ಅಥವಾ "ನಮಮ ಸ್ವಾತಂತ್ರ್ಯಮ್" ಎಂದಾಗಲಿ, ಅರ್ಥಮಾಡಿದರೆ, ಸ್ವಸ್ವಾತಂತ್ರ್ಯ ನಿವೃತ್ತಿಯುಂಟಾಗುತ್ತದೆಂದು ಹೇಳಿರುತ್ತಾರೆ. ಮೊದಲಿನ ಸಂದರ್ಭದಲ್ಲಿ ಮಕಾರದನುಷಜ್ಗಬೇಕು. ಎರಡನೆಯ ಸಂದರ್ಭದಲ್ಲಿ ಸ್ವಾತಂತ್ರ್ಯಮ್ ಎಂಬ ಪದವನ್ನು ಅಧ್ಯಾಹಾರವಮಾಡಿಕೊಳ್ಳಬೇಕೆಂಬ ತಾತ್ಪರ್ಯವು.

"ಸ್ವಸ್ವಾತಂತ್ರ್ಯ ನಿವೃತ್ತಿ" ಎಂಬುದರ ತಾತ್ಪರ್ಯವು.

---

ಸ್ವಸ್ವಾತಂತ್ರ್ಯ ನಿವೃತ್ತಿ ಎಂಬುದರ ಸರಿಯಾದ ತಾತ್ಪರ್ಯವನ್ನು ತಿಳಿಸುತ್ತಾರೆ. ಏಕೆಂದರೆ "ಕರ್ತಾ ಶಾಸ್ತ್ರಾರ್ಥವತ್ವಾತ್" (ಶಾ. ಸೂ. ೨.೩.೩೩.) ಎಂಬ ಶಾರೀರಕ ಸೂತ್ರವು ಈ ಚೇತನನಿಗೆ ಕರ್ತೃತ್ವ ಉಂಟೆಂಬುದನ್ನು ಸ್ಥಾಪಿಸುತ್ತದೆ. ಹೀಗಿದ್ದರೂ ಸ್ವಾತಂತ್ರ್ಯ ನಿಲ್ಲವೆಂಬುದು ಹೇಗೆ? ಹಾಗೆ ಸ್ವಾತಂತ್ರ್ಯವಿಲ್ಲವೆಂದರೆ ದೇಹವೇ ಎಲ್ಲವನ್ನೂ ಮಾಡುತ್ತದೆ ಎಂಬ ಸಾಂಖ್ಯಮತದಲ್ಲಿ ತೋರಿಬರುವ ಅಪಾರ್ಥವು ಉಂಟಾಗುವದಿಲ್ಲವೇ ? ಹಾಗಾದರೆ ಪರಮಾತ್ಮನಿಗೇ ಸರ್ವಕರ್ತೃತ್ವವು ಎಂದರೆ ಕರ್ತೃತ್ವವು ಸುಕೃತ ದುಷ್ಕೃತ ರೂಪವಾಗುವದರಿಂದ ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯ ದೋಷಗಳನ್ನು ಹೇಳಬೇಕಾಗುತ್ತದೆ. ಆದುದರಿಂದ ಇಂತಹ ಶಙ್ಕೆಗಳು ಉಂಟಾಗಬಹುದೆಂದು ಯೋಚಿಸಿ, ಸ್ವಸ್ವಾತಂತ್ರ್ಯ ನಿವೃತ್ತಿ ಎಂಬುದರ ಸರಿಯಾದ ಅಭಿಪ್ರಾಯವೇನೆಂಬುದನ್ನು ಉಪದೇಶಿಸುತ್ತಾರೆ—**ಇಚ್ಚೇತನನುಕ್ಕು ಸ್ವಸ್ವಾತಂತ್ರ್ಯ ನಿವೃತ್ತಿಯಾವುದು ?** ಈ ಚೇತನನಿಗೆ ಸ್ವಾತಂತ್ರ್ಯ ನಿವೃತ್ತಿಯು ನಮ ಶಬ್ದದಿಂದ ಉಂಟಾಗುತ್ತದೆಂದು ಹೇಳಲ್ಪಟ್ಟಿತಲ್ಲಾ, ಅದು ಯಾವುದು? ಎಂದರೆ ಅದಕ್ಕೆ ಉತ್ತರವು :—**ನಿರಪೇಕ್ಷಕರ್ತೃತ್ವಾನರ್ಹತ್ತೈ** - ಇನ್ನೊಂದರ ಅಪೇಕ್ಷೆಯಿಲ್ಲದ ಹಾಗಿರುವ ಕರ್ತೃತ್ವಕ್ಕೆ ಅನರ್ಹನಾಗಿರುವಿಕೆಯು, ತಾನು ಮಾಡುವ ಲೌಕಿಕ ವೈದಿಕ ಕರ್ಮಗಳು ತನಗೆ ಮಾತ್ರವೇ ಸ್ವಾಧೀನವಾಗಿರದೆ ಪರಮಾತ್ಮ ಸಙ್ಕಲ್ಪಕ್ಕೂ ಅಧೀನವಾಗಿರೋಣವು. ಹೀಗೆ ಸ್ವತಂತ್ರವಾದ ಕರ್ತೃತ್ವವಿಲ್ಲದಿರೋಣವು; ಹೀಗೆ **ನಿರಪೇಕ್ಷಕರ್ತೃತ್ವವಿಲ್ಲೈ** ಎಂದರೆ ಸಾಪೇಕ್ಷ ಕರ್ತೃತ್ವವು ಚೇತನನಿಗೆ ಉಂಟೆಂಬ ಅಭಿಪ್ರಾಯವಿರುವದರಿಂದ "**ಕರ್ತಾ ಶಾಸ್ತ್ರಾರ್ಥವತ್ವಾತ್**"

**ಕರ್ತೃತ್ವಾನರ್ಹತೈ. ಇದಕ್ಕಡಿ, ಬದ್ಧಾವಸ್ಥೈಯಿಲುಮ್, ಮುಕ್ತಾವಸ್ಥೈಯಿಲುಮ್, ಬುದ್ಧಿಪೂರ್ವಪ್ರವೃತ್ತಿ ಪ್ಪಣ್ಣಾ ನಿನ್ರಾಲುಮ್ ಈಶ್ವರರ್**

---

ಎಂಬ ವ್ಯಾಸ ಸೂತ್ರಕ್ಕೆ ವಿರೋಧ ಪರಿಹಾರವು. ಹಾಗಾದರೆ ಯಾವುದರ ಸಾಪೇಕ್ಷವು ಉಂಟು? ಎಂದರೆ **ಪರಮಾತ್ಮಸಾಪೇಕ್ಷಕರ್ತೃತ್ವವುಂಟು** ಎಂಬ ಭಾವವು. ಹೀಗೆ ಸಾಪೇಕ್ಷಕರ್ತೃತ್ವ ಉಂಟೆಂದು ಹೇಳಿದುದರಿಂದ, ಚೇತನನಿಗೆ ಚೇತನತ್ವವು ರಕ್ಷಿಸಲ್ಪಟ್ಟು, ಸಾಂಖ್ಯವಾದದ ದೋಷವು ದೂರೀಕೃತವಾಯಿತು. ಪರಮಾತ್ಮನೇ ಸಂಪೂರ್ಣವಾಗಿ ಚೇತನನು ಮಾಡುವದನ್ನು ನಡೆಸಿದರೀಗ ವೈಷಮ್ಯ ನೈರ್ಘೃಣ್ಯ ದೋಷವುಂಟಾಗುತ್ತದೆ; ಹಾಗಲ್ಲದೆ ಬದ್ಧದೆಶೆಯಲ್ಲಿ, ಚೇತನನು ಬುದ್ಧಿಪೂರ್ವಕ ಪ್ರವರ್ತಿಸಿ ಕೆಲಸಮಾಡಿದರೂ, ಈ ಚೇತನನು ಹಿಂದೆ ಮಾಡಿದ ಸುಕೃತ ದುಷ್ಕೃತಗಳಿಗನುಸಾರವಾಗಿ ಉಂಟಾದ ಬುದ್ಧಿಯೋಗದ ಮೂಲಕವೂ ಮತ್ತು ಸರ್ವೇಶ್ವರನು ದಯಪಾಲಿಸಿರುವ ಕರಣಕಳೇಬರದ ಮೂಲಕವೂ ಪ್ರೇರಿಸಿ ನಡೆಸಿದರೆ ಆಗ ಪರಮಾತ್ಮನು ದೋಷಿಯಾಗುವದಿಲ್ಲವು. ಮುಕ್ತದೆಶೆಯಲ್ಲಾದರೋ ಅವನು ನಿತ್ಯವಾಗಿರುವಹಾಗೆ ದಯಪಾಲಿಸಿರುವ ಗುಣಾಷ್ಟಕಗಳ ಮೂಲಕವಾಗಿಯೇ ಆಗಲೂ ಕರ್ತೃತ್ವವಿರುವದರಿಂದ, ಈಶ್ವರನು ಪ್ರೇರಕನಾಗಿಯೇ ಸರ್ವವೂ ನಡೆಯುತ್ತದೆ. ಇಂತಹ ಅನು ಸಂಧಾನವೀಗ ಸ್ವಸ್ವಾತಂತ್ರ್ಯನಿವೃತ್ತಿಯು. "ಇಚ್ಚೇತನನುಕ್ಕು ಸ್ವಸ್ವಾತಂತ್ರ್ಯ ನಿವೃತ್ತಿಯಾವದು" ಎಂಬ ಪ್ರಶ್ನೆಯಲ್ಲಿ ಇಚ್ಚೇತನನಕ್ಕು ಎಂಬ ಪ್ರಯೋಗವು ಸಾಭಿಪ್ರಾಯವಾದುದಾಗಿರುತ್ತದೆ. ಸ್ವಾತಂತ್ರ್ಯ ನಿವೃತ್ತಿಯುಂಟು ಎಂವರೆ ಅಚೇತನದಹಾಗೆ ಎಂಬ ಅಭಿಪ್ರಾಯ ಬರುತ್ತದೆ. ಚೈತನ್ಯವಿದ್ದೂ ಸ್ವಾತಂತ್ರ್ಯ ನಿವೃತ್ತಿ ಹೇಗೆ? ಎಂಬುದು ಭಾವವು. ತನಗುಂಟಾಗಿರುವ ಸತ್ತಾಸ್ಥಿತಿಗಳೆಲ್ಲಾ ಹೀಗೆ ಬದ್ಧದೆಶೆಯಲ್ಲಾಗಲಿ ಮುಕ್ತದೆಶೆಯಲ್ಲಾಗಲಿ ಸರ್ವೇಶ್ವರನನಿಯಮನದಿಂದಲೇ ಎಂಬ ಅನುಸಂಧಾನವೀಗ ಸ್ವಸ್ವಾತಂತ್ರ್ಯನಿವೃತ್ತಿ ಎಂದು ಹೇಳಿಸಿಕೊಳ್ಳುತ್ತದೆ ಎಂಬದಾಗಿ ಮುಂದೆ "ಇದುಕ್ಕಡಿ" ಎಂದಾರಂಭಿಸಿ ಹೇಳುತ್ತಾರೆ.—'ಇದುಕ್ಕಡಿ-ಹೀಗೆ ನಿರಪೇಕ್ಷ ಕರ್ತೃತ್ವವಿಲ್ಲವೆಂಬುದೇ ಸ್ವಸ್ವಾತಂತ್ರ್ಯ ನಿವೃತ್ತಿ ಶಬ್ದಕ್ಕೆ ಅರ್ಥವೆಂದು ಹೇಳಲು ಕಾರಣವು, ಯಾವುದೆಂದರೆ ಹೇಳುತ್ತಾರೆ—ಬದ್ಧಾವಸ್ಥೆಯಲ್ಲೂ, ಮತ್ತು ಮುಕ್ತಾವಸ್ಥೆಯಲ್ಲೂ, **ಬುದ್ಧಿಪೂರ್ವ ಪ್ರವೃತ್ತಿಪಣ್ಣಾ ನಿನ್ರಾಲುಮ್**-ಬುದ್ಧಿಪೂರ್ವಕವಾಗಿ ಪ್ರವೃತ್ತಿಯನ್ನು ಮಾಡುತ್ತಿದ್ದರೂ, ಎಂದರೆ ಹೀಗೆ ಬುದ್ಧಿಪೂರ್ವಕವಾಗಿ ಮಾಡುವದರಿಂದ ಸರ್ವ ಸ್ವಾತಂತ್ರ್ಯವೇನಾದರೂ ಉಂಟೋ ಎಂಬ ಸಂದೇಹವು ತೋರುವಹಾಗಿದ್ದರೂ, ಸಂದೇಹಕ್ಕೆ ಕಾರಣವಿಲ್ಲವೆಂದು ಹೇಳುತ್ತಾರೆ—**ಈಶ್ವರರ್ ಕೊಡುತ್ತ** - ಸರ್ವೇಶ್ವರನು ಕೊಟ್ಟ **ಕರಣಾದಿಗಳೈ ಕ್ಕೊಂಡು** -

**ಕೊಡುತ್ತ ಕರಣಾದಿಗಳೈಕ್ಕೊಂಡು ಅವರ್ಗ ಪ್ರೇರಕನುಮಾಯ್ ಸಹಕಾರಿಯುಮಾಗ ಪ್ಪ್ರವರ್ತ್ತಿಕ್ಕವೇಣ್ಡುಗೈ.**

---

ಇಂದ್ರಿಯಗಳು, ಆದಿಶಬ್ದದಿಂದ ಶರೀರ ಬುದ್ಧಿಗಳು ಸಙ್ಗ್ರಹಿಸಲ್ಪಟ್ಟವು, ಇವುಗಳ ಮೂಲಕವಾಗಿ, **ಅವರ್ಗ ಪ್ರೇರಕನಾಯ್** – ಅವನು ಪ್ರೇರಕನಾಗಿ, ಬದ್ಧದಶೆಯಲ್ಲಿ ಪೂರ್ವಕರ್ಮಾನುಗುಣ ಪ್ರೇರಕನಾಗಿ, **ಮುಕ್ತದಶೆಯಲ್ಲಿ** - ತಾನು ಅನುಗ್ರಹಿಸಿದ ಬಂಧನಿವೃತ್ತಿಯಿಂದುಂಟಾದ ಗುಣಾಷ್ಟಕಪ್ರಾಪ್ತಿಮೂಲಕ ಪ್ರೇರಕನಾಗಿ ಎಂಬ ಭಾವವು, **ಸಹಕಾರಿಯುಮಾಗ** – ಹೀಗೆ ಎರಡು ದೆಶೆಯಲ್ಲೂ ಸರ್ವೇಶ್ವರನು ಸಕಲ ಪ್ರವೃತ್ತಿಯಲ್ಲೂ ಸಹಾಯಭೂತನಾಗಿ, **ಪ್ರವರ್ತ್ತಿಕ್ಕವೇಣ್ಡುಗೈ**–ಪ್ರವರ್ತ್ತಿಸತಕ್ಕ ಸ್ವಭಾವವು ; ಈ ಸ್ವಭಾವವು ಸ್ವಸ್ವಾತಂತ್ರ್ಯ ನಿವೃತ್ತಿಗೆ ಕಾರಣವೆಂಬ ಭಾವವು. ಅಥವಾ **ವೇಣ್ಡುಗೈ** ಎಂಬುದರಿಂದ ಆಶಯವೆಂಬ ಭಾವವಾಗಲಿ, **ವೇಣ್ಡುಗೈ** ಎಂದು ಇರುವದರಿಂದ ಸ್ವಾರಸ್ಯವಾಗಿ ಸರ್ವೇಶ್ವರನೇ ಪ್ರೇರಕನಾಗಿಯೂ ಸಹಕಾರಿಯಾಗಿಯೂ ಇರಬೇಕೆಂಬ ಅನುಸಂಧಾನವಾಗಲಿ, ಅಪೇಕ್ಷೆಯಾಗಲಿ ದ್ಯೋತಿತವು.

ಆದರೆ ಈ ರೀತಿಯಲ್ಲಿ ಸ್ವಾತಂತ್ರ್ಯ ನಿವೃತ್ತಿ ಎಂದು ಭಾವಿಸತಕ್ಕದ್ದೇ ವಿನಾ ಈ ಜೇತನನಿಗೆ ಯಾವ ವಿಧವಾದ ಸ್ವಾಧೀನ ಕರ್ತೃತ್ವವೇ ಇಲ್ಲವೆಂದು ಸಾಂಖ್ಯಮತರೀತ್ಯಾ ಭಾವಿಸಿ ಬಿಟ್ಟರೆ, ಮುಕ್ತಿಯನ್ನು ಸ್ವಾಮಿಯೇ ಸಙ್ಕಲ್ಪಿಸಿ ಕೊಟ್ಟರೇ ಉಂಟು, ಇಲ್ಲದಿದ್ದರೆ ಇಲ್ಲ ವೆಂದಾಗಿ, ಆಗ ಎಲ್ಲರಿಗೂ ಸ್ವಾಮಿಯೇ ಸಙ್ಕಲ್ಪಿಸಿ ಏಕೆ, ಮುಕ್ತಿ ಕೊಡಕೂಡದು? ಎಂಬ ಆಕ್ಷೇಪಕ್ಕೆ ಕಾರಣವಾಗಿ, ವೈಷಮ್ಯ ನೈರ್ಘೃಣ್ಯಾದಿಗಳನ್ನು ಸರ್ವೇಶ್ವರನಿಗೆ ಆರೋಪಿಸಿದಂತೆ ಆಗುತ್ತದೆ. ಆದುದರಿಂದ ಈತನು ಉಪಾಯಾನುಷ್ಠಾನವನ್ನು ಮಾಡಿಯೇ ತೀರಬೇಕು. ಅದನ್ನು ಸ್ವಾಮಿದತ್ತ ಕರಣ ಕಳೇಬರಾದಿಗಳ ಮೂಲಕವಾಗಿಯೂ, ಆತನನ್ನು ಪ್ರಾರ್ಥಿಸುವದರಿಂದುಂಟಾಗುವ ಪ್ರೇರಣೆಯ ಮೂಲಕವಾಗಿಯೂ ಯಾವಾಗ ಅದು ಉಂಟಾಯಿತೋ, ಆಗ ಸ್ವಸ್ವಾತಂತ್ರ್ಯನಿವೃತ್ತಿರೂಪವಾದ ಅನುಸಂಧಾನವುಂಟಾಯಿತೆಂಬ ಭಾವವು. ಆತನು ಏನನ್ನು ಮಾಡಿದರೂ, "ಓ ಸರ್ವೇಶ್ವರನೇ ನನಗೆ ವಿಹಿತವಾದ ಮಾರ್ಗವನ್ನು ನೀನೇ ತೋರಿಸು" ಎಂದು ಹೇಳಿ ಪ್ರವರ್ತ್ತಿಸುವನು. **"ಯದ್ಧಿತಂ ಮಮ ದೇವೇಶ ತದಾಜ್ಞಾಪಯಮಾಧವ"** ಎಂದು ಹೇಳಿ ಮಾಡುವನು; **"ಆನೇನ ಕರ್ಮಣಾ ಭಗವಾನ್ ಪ್ರಿಯತಾಂ ವಾಸುದೇವಃ"** ಎಂದೂ **"ಸ್ವಯಮೇವ ಕಾರಿತವಾನ್"** ಎಂದೂ ಹೇಳಿ, ಆತನಲ್ಲೇ ಸಮರ್ಪಿಸುವನು ಎಂಬ ಭಾವವೂ ದ್ಯೋತಿತವು. ಕರ್ತೃತ್ವವೇನೋ ಉಂಟು, ಆದು ಸರ್ವೇಶ್ವರ ಸಹಾಯ ಸಾಪೇಕ್ಷ ಕರ್ತೃತ್ವವು ; ಆದುದರಿಂದಲೇ ಸ್ವಸ್ವಾತಂತ್ರ್ಯ ನಿವೃತ್ತಿಯು.

**ಈಶ್ವರನುಕ್ಕು ಪ್ರಥಮಾಕ್ಷರತ್ತಿಲ್ ಪ್ರಕೃತಿಯಿಲೇ ಚೊನ್ನ ಸರ್ವ ರಕ್ಷಕತ್ವಮ್ ಉಪಾಯಾಧಿಕಾರಿಗಳ್ ಪಕ್ಕಲ್ ಏದೇನುಮೊರು ಉಪಾಯತ್ತಿಲೇ ಪ್ರೇರಿಪ್ಪಿತ್ತುಕ್ಕೊಂಡೇ ವರಕ್ಕಡವದು.**

ಸೇತುವೆಯನ್ನು ಕಟ್ಟುವರೇನೋ ಕೆಲಸಗಾರರೇ, ಸ್ವಬುದ್ಧಿ ಪೂರ್ವಕ ಮಾಡಿದರೂ ಇಂಜನೀಯರ ಪ್ರೇರಣೆ ಸಜ್ಕಲ್ಪಾನುಸಾರಗಳಿಗನುಸಾರವಾಗಿ ಮಾಡುವದರಿಂದ ಅವರಿಗೆ ಹೇಗೆ ಸ್ವಸ್ವಾತಂತ್ರ್ಯ ನಿವೃತ್ತಿಯೋ, ಹಾಗೆಂದು ಭಾವಿಸತಕ್ಕದ್ದು. ಇಂತಹ ಪಾರತಂತ್ರ್ಯವನ್ನು ಶ್ರೀ ಲಕ್ಷ್ಮಣನು ಭಗವಂತನಾದ ಶ್ರೀ ರಾಮನಲ್ಲಿ **"ಪರವಾನಸ್ಮಿ ಕಾಕುತ್ಸ್ಥ ತ್ವಯಿ ವರ್ಷಶತಂ ಸ್ಥಿತೇ । ಸ್ವಯಂ ತು ರುಚಿರೇ ದೇಶೇ ಕ್ರಿಯತಾಂ ಇತಿ ಮಾಂ ವದ"** (ರಾಮಾ. ಅರಣ್ಯ. ೧೫. ೭.) ಎಂದು ಪ್ರಕಟಿಸಿರುತ್ತಾನೆ. ಶ್ರೀ ರಾಮನು, ಲಕ್ಷ್ಮಣನನ್ನು ಕುರಿತು ನಿನಗೆ ಯಾವ ಸ್ಥಳವು ಅನುಕೂಲವೋ, ಅಲ್ಲಿ ಆಶ್ರಮವನ್ನು ರಚಿಸು, ಎಂದು ಸ್ವಾತಂತ್ರವನ್ನು ಕೊಟ್ಟರೂ ಒಪ್ಪದೆ, ತಾನು ಶ್ರೀರಾಮನಿಗೆ ಯಾವಾಗಲೂ ಪರತಂತ್ರನಾದುದರಿಂದ ಇಂತಹ ಸ್ಥಳದಲ್ಲಿ ಆಶ್ರಮವನ್ನು ರಚಿಸು ಎಂದರೆ ರಚಿಸುತ್ತೇನೆ ಎಂದು ತಿಳಿಸುವದಕ್ಕಾಗಿ, **ಪರವಾನ್ ಅಸ್ಮಿ** ಎಂದು ಹೇಳಿಕೊಂಡಿರುತ್ತಾನೆ. ಹಾಗೆಯೇ ಕೈಕೇಯಿಯು ಬಂದು **ರಾಜನ್** ಎಂದು ಸಂಬೋಧಿಸಿದುದನ್ನು ಕೇಳಿ, ಶ್ರೀರಾಮಚಂದ್ರಪ್ರಭುವೇ ರಾಜನಾಗಿ ಭರತನಾದ ತಾನು ಆತನಿಗೆ ದಾಸನಾಗಿರುವಾಗ, ಈ ಅಜ್ಞಾನಿಯಾದ ತಾಯಿಯು ತನ್ನನ್ನು ರಾಜನೆಂದು ಕರೆಯುತ್ತಾಳಲ್ಲಾ ಎಂದು ಭರತನು ನಿಂದಿಸುತ್ತಾನೆ. ಹಾಗೆಯೇ ತನ್ನ ಪುರೋಹಿತರು ನೀನೇ ಸದ್ಯದಲ್ಲಿ ರಾಜನಾಗಿರಲು ಅರ್ಹನು, ಪಟ್ಟಾಭಿಷಕ್ತನಾಗು ಎಂದರೆ ಹೀಗೆ ನಿಯಮಾತಿಕ್ರಮ ಮಾಡಿ ಬುದ್ಧಿವಾದವನ್ನು ಹೇಳಿದವರನ್ನು ತಿದ್ದುವದು ರಹಸ್ಯವಾಗಿ ಮಾಡತಕ್ಕದ್ದೆಂಬ ನಿಯಮವಿದ್ದರೂ, ಶ್ರೀರಾಮನಲ್ಲಿರುವ ತನ್ನ ಪಾರತಂತ್ರ್ಯಕ್ಕೆ ವಿರುದ್ಧವಾಗಿ ಉಪದೇಶಿಸದರಲ್ಲಾ ಎಂಬ ಕೋಪದಿಂದ **"ಸಭಾಮಧ್ಯೇ ಜಗರ್ಹೇ ಚ ಪುರೋಹಿತಮ್"** ಎಂದು ಮಹರ್ಷಿಯು ಹೇಳಿರುತ್ತಾರೆ. ಇಂತಹ ಪಾರತಂತ್ರ್ಯವೇ ಸರ್ವ ರಕ್ಷಕನಿಗೆ ರಕ್ಷ್ಯ ವಸ್ತುವಿನಲ್ಲಿ ಕೃಪೋತ್ಥಂಭಕವು ಎಂದು ತಿಳಿಯತಕ್ಕದ್ದಾಗಿರುತ್ತದೆ.

ಈ ಅರ್ಥವನ್ನೇ ನಮಶ್ಶಬ್ದಾರ್ಥ ನಿಗಮನದಲ್ಲಿ ಹೇಳುವವರಾಗಿ, ಅಕಾರದಿಂದ ದ್ಯೋತಿತವಾದ ಸರ್ವರಕ್ಷಕತ್ವವನ್ನೇ ನಮಃ ಎಂಬ ಶಬ್ದವೂ ಸಮರ್ಥನೆ ಮಾಡುತ್ತದೆಂದು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ.—**ಈಶ್ವರನುಕ್ಕು** - ಸರ್ವೇಶ್ವರನಿಗೆ, **ಪ್ರಥಮಾಕ್ಷರತ್ತಿಲ್** - ಮೊದಲನೆಯ ಅಕ್ಷರದಲ್ಲಿರುವ, **ಪ್ರಕೃತಿಯಿಲೇ** - ಅವರಕ್ಷಣೆ ಎಂಬ ಧಾತುವಿನಿಂದ ಉಂಟಾದ ಮೂಲ ಶಬ್ದದಲ್ಲಿ, **ಚೊನ್ನ** - ಹೇಳಲ್ಪಟ್ಟ, **ಸರ್ವ ರಕ್ಷಕನೆಂಬ** ಭಾವವು, **ಉಪಾಯಾಧಿಕಾರಿಗಳ್ ಪಕ್ಕಲ್** -

ಉಪಾಯಾನುಷ್ಠಾನಕ್ಕೆ ಅಧಿಕಾರಿಗಳ ವಿಷಯದಲ್ಲಿ, ಮೋಕ್ಷೋಪಾಯಾಧಿಕಾರಿಗಳೇನು, ಮತ್ತು ಪ್ರಯೋಜನಾನ್ತರಾಪೇಕ್ಷೆಗಳುಳ್ಳವರೇನು, ಇವರುಗಳ ವಿಯದಲ್ಲಿ ಎಂಬ ಭಾವವು. **ಏದೇನು ಮೊರು ಉಪಾಯತ್ತಿಲೇ** - ಭರನ್ಯಾಸ ಅಥವಾ ಉಪಾಸನ ಇವೆರಡರಲ್ಲಿ ಯಾವುದಾದರೂ ಒಂದು ಉಪಾಯದಲ್ಲಿ, **ಪ್ರೇರಿಪ್ಪಿತ್ತುಕೊಂಡೇ** - ಅನುಷ್ಠಾನ ಉಂಟಾಗುವಹಾಗೆ ಪ್ರೇರಿಸಿಕೊಂಡೇ, **ವರಕ್ಕಡವದು-ಉಂಟಾಗತಕ್ಕದ್ದು.** ಪ್ರಣವದ ಅಕಾರದಿಂದ ಸರ್ವೇಶ್ವರನಿಗೆ ಸರ್ವರಕ್ಷಕತ್ವವುಂಟೆಂದು ಹೇಳಲ್ಪಟ್ಟಿತು. ಹಾಗೆ ಆತನು ಜೀವಾತ್ಮರನ್ನು ರಕ್ಷಿಸುವಾಗ, ಆ ಜೀವಾತ್ಮನ ಕೈಯಲ್ಲಿ ಭಕ್ತಿ ಪ್ರಪತ್ತಿಗಳೆಂಬ ಉಪಾಯುಗಳಲ್ಲಿ ಯಾವುದನ್ನು ಅನುಷ್ಠಿಸಲು ಅರ್ಹತೆಯುಂಟೋ, ಅಂತಾದ್ದನ್ನು ಅನುಷ್ಠಿಸುವಹಾಗೆ ಮಾಡಿ ರಕ್ಷಿಸುವನು. ಹೀಗೆ ರಕ್ಷಣೆಯಲ್ಲೂ ಆತನ ಪ್ರೇರಣೆಯು ಆವಶ್ಯಕವಾದುದರಿಂದಲೇ ನಮಶ್ಶಬ್ದಾರ್ಥವು ದೃಢೀಕರಿಸಲ್ಪಟ್ಟಿತು. ಅದೂ ಅಲ್ಲದೆ, ಮೋಕ್ಷವನ್ನು ಕೊಡುವವನು ಅವನೇಯಾದುದರಿಂದಲೂ ಸ್ವಸ್ವಾತಂತ್ರ್ಯ ನಿವೃತ್ತಿಯು. ಈ ಅಭಿಪ್ರಾಯವನ್ನು ಮುಂದೆ ತಿಳಿಸುತ್ತಾರೆ. ಹಾಗಲ್ಲದೆ ಉಪಾಯಾನುಷ್ಠಾನವನ್ನು ಅನುಷ್ಠಿಸುವವನನ್ನೂ ಅನುಷ್ಠಿಸದವನನ್ನೂ ಹೀಗೆ ಇಬ್ಬರನ್ನೂ ರಕ್ಷಿಸಿಬಿಟ್ಟರೆ ಸರ್ವೇಶ್ವರನಿಗೆ ವೈಷಮ್ಯವನ್ನು ಆರೋಪಿಸಿದಂತಾಗುತ್ತದೆ. ಉಪಾಯಾನುಷ್ಠಾನವಿಲ್ಲದೇನೆ ಎಲ್ಲರೂ ಮುಕ್ತಿಬೇಕು ಎಂದರೆ ಆಗ ಸರ್ವಮುಕ್ತಿ ಪ್ರಸಜ್ಗವುಂಟಾಗುತ್ತದೆಂದು ಹಿಂದೆಯೇ ಹೇಳಿದೆವು. ಆದುದರಿಂದ ಸರ್ವೇಶ್ವರನ ರಕ್ಷಕತ್ವವು ಎರಡುವಿಧವು ಹೇಗೆಂದರೆ? (೧)ಮಹರ್ಷಿಯು, **"ರಕ್ಷಿತಾ ಜೀವಲೋಕಸ್ಯ ಸ್ವಜನಸ್ಯ ಚ ರಕ್ಷಿತಾ"** ಎಂದು ಹೇಳಿರುತ್ತಾರೆ. "ಜೀವಲೋಕಕ್ಕೆಲ್ಲಾ ರಕ್ಷಕನು ಹೇಗೆಂದರೆ? ಕರಣಕಳೇಬರಯೋಗ, ಶಾಸ್ತ್ರದೀಪಪ್ರದಾನ,ವಿವೇಕಜ್ಞಾನ,ಸರ್ವಕಾಲದಲ್ಲೂ ಜ್ಞಾನಿಗಳಿಂದ ಉಪದೇಶ,ಮುಂತಾದವುಗಳನ್ನು ಒದಗಿಸಿಕೊಡೋಣದರಮೂಲಕ ರಕ್ಷಕನು;(೨)ಹಾಗೆಯೇ **ಸ್ವಜನಸ್ಯಚ ರಕ್ಷಿತಾ**,ಸ್ವಜನರು ಯಾರೆಂದರೆ ಸದ್ಗುರುವನ್ನಾಶ್ರಯಿಸಿ ಜ್ಞಾನವನ್ನು ಹೊಂದಿ ವಿಹಿತಕರ್ಮಾನುಷ್ಠಾನದೊಂದಿಗೆ ಉಪಾಯಾನುಷ್ಠಾನವನ್ನು ಮಾಡಿದ ಜ್ಞಾನಿಯು, ಉಪಾಸನೆ ಅಥವಾ ಪ್ರಪದನ ಮೂಲಕ ಆತನನ್ನು ಆಶ್ರಯಿಸಿದವನು, ಇಂತಹ ಜನಸಮೂಹಕ್ಕೆ ವಿಶೇಷ ರಕ್ಷಿತಾ, ಮೋಕ್ಷಾನಂದವನ್ನು ಕೊಟ್ಟು ಕಾಪಾಡುವವನು. ಆದರೆ ಕೆಲವರ ಅಭಿಪ್ರಾಯವು ಹೇಗೆ? ಎಂದರೆ,ನಾವೆಲ್ಲ ಸ್ವಾಮಿಯ ಮಕ್ಕಳು,ನಾವು ಪ್ರಯತ್ನಿಸಿ ಉಪಾಯಾನುಷ್ಠಾನವನ್ನು ಮಾಡಬೇಕೇ ? ಹಾಗೆ ಉಪಾಯಾನುಷ್ಠಾನವನ್ನು ಅಪೇಕ್ಷಿಸುವದು ಆತನ ಮಾಹಾತ್ಮ್ಯೆಗೆ ಕುಂದಕವಲ್ಲವೇ.? ಆದುದರಿಂದ ನಾವೇನೂ ಮಾಡತಕ್ಕದ್ದಿಲ್ಲವು ; ಆತನೇ ನಮ್ಮನ್ನು ಕಾಪಾಡುವನು ಎಂದು ಹೇಳುವರು. ಈ ವಾದದ ಪ್ರಕಾರ ಆತನಿಗೆ ವೈಷಮ್ಯ ನೈರ್ಘೃಣ್ಯವು ಪ್ರಾಪ್ತವಾಗುತ್ತದೆಯಾದುದರಿಂದ ಉಪಾಯಾನುಷ್ಠಾನ ಸಾಪೇಕ್ಷೆಯಿಂದಲೇ, ಆತನ ರಕ್ಷ

**ಜೀವರ್ ಸ್ವರಕ್ಷಣಾರ್ಥಮಾನ ಉಪಾಯಾನುಷ್ಠಾನತ್ತಿಲುಮ್ ಪರಾಧೀನ ಕರ್ತ್ತಾಕ್ಕೈಯಾಲುಮ್, ಇವ್ವುಪಾಯ ಮನುಷ್ಠಿತ್ತಾಲುಮ್, ಫಲ ಪ್ರಧಾನರೂಪ ರಕ್ಷೈಪಣ್ಣುವಾರ್ ಪ್ರಸನ್ನನಾನ ಸರ್ವೇಶ್ವರನಾಗೈಯಾಲುಮ್, ಪ್ರಥಮಾಕ್ಷರತ್ತಿಲ್ ಪ್ರಕೃತಿಯಾಲೇ ಶೊಲ್ಲಪ್ಪಟ್ಟ ಅವನುಡೈಯ ಸರ್ವರಕ್ಷಕತ್ವಮೇ ಇನ್ನಮಶ್ಶಬ್ದತ್ತಾಲುಮ್ ದೃಢೀಕೃತಮ್.**

---

ಕತ್ವವೆಂಬುದನ್ನು ವಿಶದೀಕರಿಸುವದಕ್ಕಾಗಿ ಏದೇನು ಮೊರು ಉಪಾಯತ್ತಿಲೇ ಪ್ರೇರಿಪ್ಪಿತ್ತುಕೊಂಡೇ ವರಕ್ಕಡವದು ಎಂಬ ಪ್ರಯೋಗವು. ಸರ್ವೇಶ್ವರನು ರಕ್ಷಿಸುವದಕ್ಕೆ ಇಂತಹ ವ್ಯಾಜಸಾಪೇಕ್ಷೆಯಿಲ್ಲದೆ ರಕ್ಷಿಸುವದಕ್ಕೆ ಸಾಧ್ಯವೇ ಇಲ್ಲವು. ಏಕೆಂದರೆ ಸಾತ್ವಿಕ ಶಿಖಾಮಣಿಯಾದ ಜ್ಞಾನಿಯೂ ತಮೋಗುಣ ಭೂಯಿಷ್ಠನಾಗಿ ಪಾಪಿಯಾದ ಅಧಮನೂ ಒಂದೇ ವಿಧವಾದ ಅಭಿಮಾನಕ್ಕೆ ಅರ್ಹರಾದರೆ, ಸರ್ವೇಶ್ವರನಿಗೆ ವಿವೇಕ ಜ್ಞಾನ ಶೂನ್ಯತೆಯನ್ನು ಆರೋಪಿಸಬೇಕಾಗುತ್ತದೆ. ಸತ್ಪುರುಷನಿಗೆ ಮನ್ನಣೆಯೂ ಅಪರಾಧಿಗೆ ದಂಡನೆಯೂ ಇಲ್ಲಿನ ರಾಜ್ಯಾಡಳಿತದಲ್ಲೇ ವಿದಿತವು. ಹೀಗಿರುವಾಗ ಸರ್ವೇಶ್ವರನೂ ತನ್ನ ಕಟ್ಟಳೆಗಳಾದ ಶಾಸ್ತ್ರಾನುಗುಣ್ಯವಾಗಿಯೇ ನಡೆಯತಕ್ಕವನೆಂಬುದು ವ್ಯಕ್ತವಲ್ಲವೇ?

ಹಾಗಾದರೆ, ಈಶ್ವರನಿಗೆ ಸರ್ವ ರಕ್ಷಕತ್ವದಲ್ಲಿ ನ್ಯೂನತೆಯೋ? ಎಂದರೆ ಹಾಗಲ್ಲವು. ಪ್ರಪನ್ನನು ಈ ವ್ಯಾಜರೂಪನಾದ ಉಪಾಯಾನುಷ್ಠಾನವನ್ನು ಅನುಷ್ಠಿಸುವಾಗಲೂ ಕೂಡ ಅದು ಪರಾಯತ್ತ ಕರ್ತೃತ್ವವುಳ್ಳದಾದುದರಿಂದಲೂ, ಮತ್ತು ಫಲಪ್ರದಾನವನ್ನು ಮಾಡಿ ರಕ್ಷಿಸುವನೂ ಸರ್ವೇಶ್ವರನೇಯಾದುದರಿಂದಲೂ, ಅಕಾರದಲ್ಲಿ ಹೇಳಲ್ಪಟ್ಟ ಸರ್ವ ರಕ್ಷಕತ್ವವು ಈ ನಮಶ್ಶಬ್ದದಲ್ಲಿ ಸಮರ್ಥಿಸಿ ಹೇಳಲ್ಪಟ್ಟತೆಂದು ತಿಳಿಸುತ್ತಾರೆ.—**ಜೀವರ್** - ಜೀವಾತ್ಮನು, **ಸ್ವರಕ್ಷಣಾರ್ಥಮಾನ** - ತನ್ನ ರಕ್ಷಣೆಯೇ ಪ್ರಯೋಜನವಾಗಿಯುಳ್ಳ, **ಉಪಾಯಾನುಷ್ಠಾನದಲ್ಲೂ ಕೂಡ, ಪರಾಧೀನ ಕರ್ತ್ತಾವಾಗೈಯಾಲುಮ್**-ತನ್ನ ಪೂರ್ವಜನ್ಮಸುಕೃತಾನುಸಾರವಾಗಿ ಸರ್ವೇಶ್ವರನ ಪ್ರೇರಣೆಯಿಂದಲೇ ಉಪಾಯಾನುಷ್ಠಾನವೂ ನಡೆಯುವದರಿಂದ ಪರಾಧೀನ ಕರ್ತಾವಾದುದರಿಂದ, **ಇವ್ವುಪಾಯಮನುಷ್ಠಿತ್ತಾಲುಮ್** - ಈ ಉಪಾಯವನ್ನು ಅನುಷ್ಠಿಸಿದರೂ, **ಫಲರೂಪ ರಕ್ಷೈ ಪಣ್ಣುವಾರ್** - ಕೋರಿದ ಫಲವನ್ನು ಕೊಟ್ಟು ರಕ್ಷಿಸುತವನು, **ಪ್ರಸನ್ನನಾನ** - ಆ ಉಪಾಯಾನುಷ್ಠಾನದಿಂದ ಪ್ರೀತನಾಗಿ ಅನುಗ್ರಹಿಸುವ, **ಸರ್ವೇಶ್ವರನಾಗೈಯಾಲುಮ್** – ಸರ್ವೇಶ್ವರನೇಯಾದುದರಿಂದಲೂ, **ಪ್ರಥಮಾಕ್ಷರತ್ತಿಲ್** - ಪ್ರಣವದ ಮೊದಲನೇ ಅಕ್ಷರವಾದ ಅಕಾರದಲ್ಲಿನ, **ಪ್ರಕೃತಿಯಾಲೇ** - ಅವರಕ್ಷಣೆ ಎಂಬವ್ಯುತ್ಪತ್ತಿ ಮೂಲಕ, **ಶೊಲ್ಲಪ್ಪಟ್ಟವನುಡೈಯ**-ಹೇಳಲ್ಪಟ್ಟವನ, **ಸರ್ವರಕ್ಷಕತ್ವಮೇ ಇನ್ನಮ**

**ಈಶ್ವರಸ್ಯ ನಿರುಪಾಧಿಕ ಶೇಷಿತ್ವಮಪಿ ನಮಶ್ಶಬ್ದೇನ ದೃಢೀಕೃತಮಿತ್ಯಾಹ.**

**ಇಪ್ಪಡಿ ಪ್ರಥಮ ಚತುರ್ಥಿಯಾಲೇ ಪ್ರತಿಪನ್ನಮಾನ ಈಶ್ವರನುಡೈಯ ನಿರುಪಾಧಿಕ ಸರ್ವಶೇಷಿತ್ವಮುಮ್, ಜೀವನುಕ್ಕು ಏದೇನು ಮೊನ್ರು**

---

**ಶ್ಶಬ್ದತ್ತಾಲುಮ್** - ಈ ನಮಶ್ಶಬ್ದದಿಂದಲೂ, **ದೃಢೀಕೃತಮ್** - ಸಮರ್ಥನೆ ಮಾಡಲ್ಪಟ್ಟಿತು. ಈ ನಮಶ್ಶಬ್ದದಿಂದ ತನಗೆ ಶೇಷಿತ್ವವಿಲ್ಲವೆಂಬುವ ಅರ್ಥವು ತೋರಿಬರುವದರಿಂದ, ಪರಮಾತ್ಮ ಪಾರತಂತ್ರ್ಯವು ವ್ಯಕ್ತವಾದುದರಿಂದ, ಆಕಾರ ದಿಂದ, ಹೇಳಲ್ಪಟ್ಟ ಸರ್ವರಕ್ಷಕತ್ವವು, ಈ ನಮಶ್ಶಬ್ದದಲ್ಲಿನ, **ಶೇಷಿತ್ವಂ ನಮಮ** ಎಂಬರ್ಥದಿಂದ ಸಮರ್ಥಿಸಲ್ಪಟ್ಟಿತೆಂಬ ಭಾವವು. **ತನ್ನ** ರಕ್ಷಣೆಯು ಪರಮಾತ್ಮಾ ಧೀನವಾದುದರಿಂದ ತಾನು ರಕ್ಷಣೆಗಾಗಿ ಯತ್ನಿಸಿದರೂ, ಪರಮಾತ್ಮನೇ ತನ್ನನ್ನು ರಕ್ಷಿಸಲು ಶಕ್ತನೇ ವಿನಾ ತಾನಲ್ಲವು. ಬಿ. ಎ. ಡಿಗ್ರಿಗೆ ಯೋಗ್ಯನಾಗಬೇಕೆಂದು ತಾನೇನೋ ಪ್ರಯತ್ನಿಸುವದು ನ್ಯಾಯವು, ಆದರೆ ಆದಕ್ಕಾಗಿ ಓದುವಾಗಲೂ, ಯೂನಿವರ್ಸಿಟಿಯವರು ಏರ್ಪಡಿಸಿರುವ ಉಪದೇಶ ಕಟ್ಟಳೆಗಳಿಗೆ ಅಧೀನವಾಗಿಯೂ ಇದ್ದುಕೊಂಡು, ಆ ಯೂನಿವರ್ಸಿಟಿಯವರೇ ಹೇಗೆ ಫಲಪ್ರದಾನರೂಪ ಡಿಪ್ಲೋಮಾವನ್ನು ಕೊಡಬೇಕೋ, ಹಾಗೆಯೇ ಸರ್ವೇಶ್ವರನೂ ಕೂಡ ಈತನು ಹಿಂದಿನ ಜನ್ಮಗಳಲ್ಲಿ ಮಾಡಿದ ಸುಕೃತ ಪರಿಪಾಕದಿಂದ ಈತನು ಉಪಾಯಾನುಷ್ಠಾನಕ್ಕೆ ಯೋಗ್ಯನೆಂದು ಭಾವಿಸಿ, ಸಿದ್ಧೋಪಾಯನಾಗಿ ನಿಂತು, ಉಪಾಯಾನುಷ್ಠಾನವನ್ನು ಮಾಡಿಸಿ, ಆದರಿಂದ ಪ್ರೀತನಾಗಿ ಆತನನ್ನು ಪೂರ್ಣಮನೋರಥನನ್ನಾಗಿ ಮಾಡುವನು. ಆದುದರಿಂದ ಆಕಾರದಿಂದ ತೋರಿಬಂದ ಪರಮಾತ್ಮನೇ ಸರ್ವ ರಕ್ಷಕನೆಂಬ ಭಾವವು, ಈ ನಮಶ್ಶಬ್ದದಿಂದ ವ್ಯಕ್ತಪಡಿಸಲ್ಪಟ್ಟಿತೆಂಬ ಭಾವವು.

---

**ಈಶ್ವರನ ನಿರುಪಾಧಿಕ ಶೇಷಿತ್ವವೂ ಸಹ ನಮಶ್ಶಬ್ದದಿಂದ ಸಮರ್ಥಿಸಲ್ಪಟ್ಟಿತೆಂದು ಹೇಳುತ್ತಾರೆ.**

ಮುಂದಿನ ವಾಕ್ಯದಿಂದ ಆಕಾರದ ಲುಪ್ತ ಚತುರ್ಥಿಯಿಂದ ತೋರಿಬರುವ ಸರ್ವ ಶೇಷಿತ್ವವೂ ಕೂಡ ಈ ನಮಶ್ಶಬ್ದದಲ್ಲಿ ದೃಢೀಕರಿಸಲ್ಪಟ್ಟಿತೆಂದು ಉಪದೇಶಿಸುತ್ತಾರೆ.—**ಇಪ್ಪಡಿ** - ಇದರಂತೆಯೇ, **ಸರ್ವರಕ್ಷಕತ್ವವು** ಹೇಗೆ ನಮಃಶಬ್ದದಿಂದ ದೃಢೀಕೃತವೋ ಹಾಗೆಯೇ ಸರ್ವ ಶೇಷಿತ್ವವೂ ದೃಢೀಕೃತವೆಂದು ಉಪಪಾದಿಸುತ್ತಾರೆ.—**ಪ್ರಥಮ ಚತುರ್ಥಿಯಾಲೇ** - ಪ್ರಥಮ ಚತುರ್ಥಿಯಿಂದ, ಎಂದರೆ ಆಕಾರದ ಲುಪ್ತ ಚತುರ್ಥಿಯಿಂದ, **ಪ್ರತಿಪನ್ನಮಾನ** - ತೋರಿಬರುವ, **ಈಶ್ವರನುಡೈಯ** - ಸರ್ವೇಶ್ವರನ, **ನಿರುಪಾಧಿಕ ಸರ್ವಶೇಷಿತ್ವಮುಮ್** - ನಿರುಪಾ

**ಯುಮ್ ಪತ್ತ ನಿರುಪಾಧಿಕ ಸರ್ವಶೇಷಿತ್ವಮುಮ್ ಕಳಿತ್ತ ಮುನ್ಬುಱ್ಱ ಯೋಜನೈಯಾಲೇ ದೃಢೀಕೃತಮಾಯಿಱ್ಱು.**

**ಇಜ್ಜೀವನುಕ್ಕುಳ್ಳ ಸ್ವಾತಂತ್ರ್ಯಮುಮ್(೧)"ಪರಾತ್ತು ತಚ್ಛ್ರುತೇಃ"**

ಧಿಕವಾಗಿ ಎಲ್ಲಾ ಜಗತ್ತಿಗೂ ಶೇಷಿಯಾಗಿರುವ ಭಾವವು, **ಜೀವನುಕ್ಕು ಏದೇನುಮೊನ್ರೈಯುಮ್ ಪತ್ತ** - ಜೀವಾತ್ಮನಿಗೆ ಯಾವುದೊಂದನ್ನೂ ಕುರಿತು, **ನಿರುಪಾಧಿಕ ಶೇಷಿತ್ವಮ್ ಕಳಿತ್ತ** - ನಿರುಪಾಧಿಕ ಶೇಷಿತ್ವವು ಇಲ್ಲವೆಂದು ವ್ಯಕ್ತಗೊಳಿಸಿದ, **ಮುನ್ಬುಱ್ಱಯೋಜನೈಯಾಲೇ** - ಹಿಂದೆ ಪ್ರದರ್ಶಿಸಲ್ಪಟ್ಟ ನಮಃಶಬ್ದದ ಯೋಜನೆಯಿಂದ, **ದೃಢೀಕೃತಮಾಯಿಱ್ಱು** - ದೃಢೀಕರಿಸಲ್ಪಟ್ಟಿತು. ಹಿಂದೆ ಅಕಾರದಲ್ಲಿ ಚತುರ್ಥಿಯು ಲುಪ್ತವಾಗಿದೆ ಎಂದು ಹೇಳಿ, ಚತುರ್ಥಿಯು ಶೇಷಿತ್ವವನ್ನು ಪ್ರದರ್ಶಿಸುತ್ತದೆಂದೂ, ಉಕಾರವು ಏವಕಾರಾರ್ಥದಲ್ಲಿಯಾದುದರಿಂದ ಮಕಾರವಾಚ್ಯನಾದ ಜೀವನೂ ಅವನೊಂದಿಗಿರುವ ಅಚಿತ್ತತ್ವವೂ, ಹೀಗೆ ಸರ್ವವೂ ಆಯ ಏವ ಎಂಬುವರಿಂದ ಸರ್ವಶೇಷಿತ್ವವು "ಪತಿಂವಿಶ್ವಸ್ಯ" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ಸರ್ವೇಶ್ವರನಿಗುಂಟೆಂದು ಹೇಳಲ್ಪಟ್ಟಿತು. ಆಮೇಲೆ ನಮಃಶಬ್ದದ ಅರ್ಥ ವಿವರಣೆ ಬಂದಾಗ, ಪ್ರಣವದ ಮಕಾರವು ಅಸ್ಮಚ್ಛಬ್ದದ ಪೂರ್ವೋತ್ತರ ಲೋಪದಿಂದುಂಟಾದುದೆಂದು ಭಾವಿಸಿದರೆ, ಮಕಾರವು ಅಹಂ ವೆಂಬರ್ಥವುಳ್ಳದುದಾಗಿ, ಅಹಂ ನನುಮ ಎಂದಾಗುವದರಿಂದ ತನಗೆ ತಾನು ಶೇಷಿಯಲ್ಲವೆಂದಾಗಿ, ಪರಮಾತ್ಮನೇ ತನಗೂ ನಿರುಪಾಧಿಕ ಶೇಷಿ ಎಂಬರ್ಥವು ಉಪಪಾದಿತವಾಗುತ್ತದೆ; ಅಥವಾ ನಮಮ ಶೇಷಿತ್ವಂ ಎಂದು ಶೇಷಿತ್ವಂ ಎಂಬುದನ್ನು ಅಧ್ಯಾಹಾರ ಮಾಡಿಕೊಂಡರೂ, ತನಗೆ ಯಾವುದರ ನಿರುಪಾಧಿಕ ಶೇಷಿತ್ವವಿಲ್ಲವು ಎಂದಾಗುವದರಿಂದ, ಪರಮಾತ್ಮನಿಗೇನೇ ನಿರುಪಾಧಿಕ ಸರ್ವಶೇಷಿತ್ವವು ಸಲ್ಲತಕ್ಕದ್ದೆಂಬುದು ಸಮರ್ಥಿಸಲ್ಪಟ್ಟಿತೆಂಬ ಭಾವವುಂಟಾಗುತ್ತದೆ. ಔಪಾಧಿಕ ಶೇಷಿತ್ವವೇನೋ ಉಂಟು, ನಿರುಪಾಧಿಕವಾದುದು ಯಾವುದೂ ಇಲ್ಲವೆಂಬ ಭಾವವು.

ಮುಂದಿನ ವಾಕ್ಯದಿಂದ ಈ ಜೀವನಿಗಿರುವ ಸೋಪಾಧಿಕ ಸ್ವಾತಂತ್ರ್ಯವೂ, ಶೇಷಿತ್ವವೂ ಕರ್ಮಾನುಗುಣವಾಗಿ ಈಶ್ವರ ದತ್ತವಾದುದಾಗಿ ಪರಾಯತ್ತವಾದುದು ಎಂದು ಪ್ರಮಾಣಪೂರ್ವಕವಾಗಿ ಮುಂದಿನ ಎರಡು ವಾಕ್ಯಗಳಿಂದ ಪ್ರದರ್ಶಿಸುತ್ತಾರೆ.—**ಇಜ್ಜೀವನುಕ್ಕುಳ್ಳ ಸ್ವಾತಂತ್ರ್ಯಮುಮ್** - ಈ ಜೀವನಿಗಿರುವ ಸ್ವಾತಂತ್ರ್ಯವೂ, **"ಪರಾತ್ತು ತಚ್ಛ್ರುತೇಃ" ಎಙ್ಗಿರನ್ಯಾಯತ್ತಾಲೇ** - ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವ ಪ್ರಕಾರ, ನಿರುಪಾಧಿಕಸ್ವತಂತ್ರನಾಗಿ, **ಸ್ವಾರ್ಥ ಪ್ರವೃತ್ತನಾನ** - ತನ್ನ ಲೀಲಾಭೋಗ ರಸಕ್ಕಾಗಿ ಪ್ರವರ್ತಿಸುವ

(೧) ಶಾರೀರ. ಸೂ. ೨, ೩, ೪೦.

**ಎಂಗಿರನ್ಯಾಯತ್ತಾಲೇ ನಿರುಪಾಧಿಕ ಸ್ವತಂತ್ರನಾಯ್ ಸ್ವಾರ್ಥ ಪ್ರವೃತ್ತ ನಾನ ಪರಮಾತ್ಮಾ ಅಡಿಯಾಗ ವಂದುದು.**

**ಪರಮಾತ್ಮಾ ಅಡಿಯಾಗವಂದುದು** - ಪರಮಾತ್ಮನ ಮೂಲವಾಗಿ ಬಂದುದು. ಸರ್ವೇಶ್ವರನು ತನ್ನ ಲೀಲಾ ಪ್ರಯೋಜನಕ್ಕಾಗಿ ಈ ಜೀವಾತ್ಮನಿಗೆ ಪ್ರಥಮ ಸಙ್ಕಲ್ಪಪ್ರವೃತ್ತಿಯಲ್ಲಿ ಈ ಜೀವಾತ್ಮನ ಪೂರ್ವಕೃತ ಸುಕೃತ ದುಷ್ಕೃತಿಗಳಿಗನು ಗುಣವಾದ ಸುಖದುಃಖಾನುಭವಗಳಿಗನುಗುಣವಾಗಿ, ಸ್ವಾತಂತ್ರ್ಯವನ್ನು ಕೊಟ್ಟಿರುತ್ತಾನೆ; ಅದೂ ಸ್ವಾಮಿದತ್ತವಾದುದೇ; ಆ ಪ್ರಥಮ ಸಙ್ಕಲ್ಪ ಪ್ರಯತ್ನಗಳಾದ ನಂತರ ತಾನೇ ಪ್ರೇರಿಸಿ ಕಾರ್ಯಗಳನ್ನು ಆತನಿಂದ ಮಾಡಿಸುತ್ತಾನೆ. ಆದುದರಿಂದ ಈ ಸ್ವಾಮಿದತ್ತವಾದ ಸ್ವಾತಂತ್ರ್ಯವು ಸೋಪಾಧಿಕವಾದುದೇ ಎಂಬ ಭಾವವು. **ಪರಾತ್ತು ತಚ್ಛ್ರುತೇಃ**-ಎಂಬ ಬ್ರಹ್ಮಸೂತ್ರದ ಅಭಿಪ್ರಾಯವೇನೆಂದರೆ? ಜೀವನ ಕರ್ತೃತ್ವವೇನು ಸ್ವತಂತ್ರವಾದುದೇ? ಅಥವಾ ಈಶ್ವರನಿಗೆ ಅಧೀನವಾದುದೇ? ಎಂಬ ಚರ್ಚೆಯಲ್ಲಿ, ಸ್ವಾತಂತ್ರ್ಯವಿಲ್ಲದಿದ್ದರೆ ಶಾಸ್ತ್ರಗಳ ವಿಧಿ ನಿಷೇಧವಾಕ್ಯಗಳು ನಿರರ್ಥಕಗಳಾಗುವುವು ; ಅದಕ್ಕಾಗಿ ಸ್ವಾತಂತ್ರ್ಯವಿರಬೇಕಲ್ಲವೇ ಎಂಬ ಪೂರ್ವಪಕ್ಷಕ್ಕೆ ಸಮಾಧಾನವನ್ನು **ಪರಾತ್ತುತಚ್ಛ್ರುತೇಃ** ಎಂಬ ಸೂತ್ರದ ಮೂಲಕವೂ, ಅದರ ಮುಂದಿನ ಸೂತ್ರವಾದ **"ಕೃತ ಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧ ವೈಯರ್ಥ್ಯಾದಿಭ್ಯಃ"** ಎಂಬ ಮೂಲಕವೂ, ಹೇಳಲ್ಪಡುತ್ತದೆ. **ತು** ಶಬ್ದವು ಮೇಲಿನ ಆಕ್ಷೇಪಣೆಯನ್ನು ಹೋಗಲಾಡಿಸಿ ಸಮಾಧಾನವನ್ನು ಹೇಳುತ್ತದೆ. **ತತ್**-ಜೀವಾತ್ಮನ ಆ ಕರ್ತೃತ್ವವೆಲ್ಲವೂ, **ಪರಾತ್** - ಪರಮ ಪುರುಷನ ದಶೆಯಿಂದ ಬಂದುದು, ಆತನ ಆಧೀನವು, ಏಕೆಂದರೆ **ಶ್ರುತೇಃ** - ಶ್ರುತಿಯಲ್ಲೂ ಸ್ಮೃತಿಯಲ್ಲೂ ಹಾಗೆ ಹೇಳಿರುವದರಿಂದ; ಎಲ್ಲಿ ಹೇಳಿದೆ ? ಎಂದರೆ **"ಅನ್ತಃ ಪ್ರವಿಷ್ಟಶ್ಶಾಸ್ತಾ ಜನಾನಾಂ"** (ತೈ. ಆರ. ೩. ೧೧. ೨೦) ಜೀವಾತ್ಮರನ್ನು ಅನುಪ್ರವೇಶ ಮಾಡಿ, ಒಳಗಿರುವವನಾಗಿ, ಅವರಿಗೆ ಸರ್ವಪ್ರವೃತ್ತಿಯಲ್ಲೂ ಪ್ರೇರಕನಾಗಿದ್ದಾನೆ ಎಂಬಲ್ಲೂ **"ಯ ಅತ್ಮಾನ ಮನ್ತರೋಯಮಯತಿ"** - ಯಾವ ಪ್ರಸಿದ್ಧನಾದ ಪರಮ ಪುರುಷನು ಆತ್ಮನ ಒಳಗಿರುವನಾಗಿ ಆತನ ಸರ್ವ ಪ್ರವೃತ್ತಿಗಳಲ್ಲೂ ನಿಯಮಿಸುವನೋ ಎಂಬಲ್ಲೂ ಹೇಳಲ್ಪಟ್ಟಿವೆ. ಹಾಗೆಯೇ ಗೀತೆಯಲ್ಲೂ ಸಹ ಹೇಳಿರುತ್ತದೆ. **"ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿ ಜ್ಞಾನಮಪೋಹನಂ ಚ"** (ಗೀ. ೧೫. ೧೫.) **"ಈಶ್ವರ ಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ"** (ಗೀ. ೧೮. ೬೧.) (ದಾಸನು ಬರೆದಿರುವ ಗೀತಾವ್ಯಾಖ್ಯಾನವನ್ನು ಪರಾಂಬರಿಸಿ) ಹೀಗೆ ಜೀವನ ಕರ್ತೃತ್ವವು ಪರಾಯತ್ತವಾದರೆ ವಿಧಿ ನಿಷೇಧಗಳು

**ಅಪ್ಪಡಿಯೇ ವಸ್ತ್ವನ್ತರಙ್ಗಳೈಪ್ಪತ್ತಿ ಇಜ್ಜೀವನುಕ್ಕು ಶೇಷಿತ್ವಮುಮ್ ನಿರುಪಾಧಿಕ ಶೇಷಿಯಾನ ಅವನ್ ಸ್ವಾರ್ಥಮಾಗ ಕ್ಕೊಡುಕ್ಕವನ್ದದು.**

ಹೀಗೆ ಮಾಡು ಹೀಗೆ ಮಾಡಬೇಡವೆಂದು ಹೇಳುವದು ನಿರರ್ಥಕವಾಗುವದಿಲ್ಲವೋ? ಎಂದರೆ ಇಲ್ಲವೆಂದು ಈ ಸೂತ್ರಗಳು ಹೇಳುತ್ತವೆ. ಹೇಗೆಂದರೆ ಪ್ರಥಮ ಸಙ್ಕಲ್ಪ ಪ್ರಯತ್ನಗಳಲ್ಲಿ ಸ್ವಾಮಿದತ್ತವಾದ ಸ್ವಾತಂತ್ರ್ಯವಿರುವದರಿಂದ ವಿಧಿನಿಷೇಧರೂಪ ಶಾಸ್ತ್ರಕ್ಕೆ ವೈಯರ್ಥ್ಯವೂ ಇಲ್ಲವು. ಅದೂ ಸ್ವಾಮಿದತ್ತವಾದುದರಿಂದ, ಪರಾಯತ್ತ ವಾದುದೂ, ಹೌದು.. ತದನಂತರ ಆತನ ಸಙ್ಕಲ್ಪ ಪ್ರಯತ್ನಗಳಿಗೆ ಅನುಗುಣವಾಗಿ ಪ್ರವೃತ್ತಿಗಳಿಗೂ ಆತನೇ ನಿಯೋಜಕನಾಗುವದರಿಂದಲೂ ಪರಮ ಪುರುಷಾಯತ್ತ ವಾದುದು. ಆದುದರಿಂದ ಯಾವ ಆಕ್ಷೇಪಗಳಿಗೂ ಕಾರಣವಿಲ್ಲವು.

ಈ ಜೀವನಿಗಿರುವ ಸ್ವಾತಂತ್ರ್ಯವೂ ಸ್ವಾಮಿದತ್ತವಾಗಿ ಬಂದುದು, ಹಾಗೆಯೇ ಈತನಿಗಿರುವ ಶೇಷಿತ್ವವೂ ಸ್ವಾಮಿದತ್ತವಾದುದು, ಎಂದು ಈ ಮುಂದಿನ ವಾಕ್ಯ ದಿಂದ ಹೇಳುತ್ತಾರೆ.—**ಅಪ್ಪಡಿಯೇ** - ಜೀವಾತ್ಮನ ಪ್ರಥಮ ಸಙ್ಕಲ್ಪದಲ್ಲಿ ಸ್ವಾತಂತ್ರ್ಯವು ಹೇಗೆ ಸ್ವಾಮಿದತ್ತವಾದುದೋ, ಹಾಗೆಯೇ, **ವಸ್ತ್ವನ್ತರಙ್ಗಳೈಪ್ಪತ್ತಿ** - ಇವನಿಗೆ ಸಂಬಂಧಿಸಿಕೊಂಡಿರುವ ಇತರ ವಸ್ತುಗಳನ್ನು ಕುರಿತ, ಅವು ಯಾವುವೆಂದರೆ ಈತನ ಹೆಂಡತಿ ಮಕ್ಕಳು ಅನುಬಂಧಿಗಳು, ಗೃಹಕ್ಷೇತ್ರಾ ರಾಮ ಧನಾದಿಗಳು, ಹೀಗೆ ಇವುಗಳನ್ನು ಕುರಿತ, **ಇಜ್ಜೀವನುಕ್ಕು ಶೇಷಿತ್ವಂ** - ಈ ಜೀವನ ಶೇಷಿತ್ವವು, **ನಿರುಪಾಧಿಕಶೇಷಿಯಾನವನ್** - ನಿರುಪಾಧಿಕಶೇಷಿಯಾದ ಪರಮಾತ್ಮನು, **ಸ್ವಾರ್ಥಮಾಗ** - ತನ್ನ ಲೀಲಾರಸಾನುಭವಕ್ಕಾಗಿಯೇ, **ಕೊಡುಕ್ಕ ವಂದುದು** - ಕೊಟ್ಟಿದುದರಿಂದ ಉಂಟಾದುದು. ಸರ್ವೇಶ್ವರನಿಗೇನೇ ಎಲ್ಲಾ ವಸ್ತು ಗಳ ಶೇಷಿತ್ವವೆಂಬುದು ಅನೇಕ ಸಲ ಹೇಳಲ್ಪಟ್ಟಿರುತ್ತದೆ. ಆವನ ವಸ್ತುಗಳಲ್ಲೇ ಕೆಲವನ್ನು ಸರ್ವಶೇಷಿಯು, ಜೀವಾತ್ಮನಿಗೆ ಆತನ ಕರ್ಮಾನುಭವಕ್ಕಾಗಿಯೂ ತನ್ನ ಲೀಲಾಪ್ರಯೋಜನಕ್ಕಾಗಿಯೂ ಕೊಟ್ಟಿರುತ್ತಾನೆ; ಎಂದರೆ ಆತನ ವಶಮಾಡಿರು ತ್ತಾನೆಂಬ ಭಾವವು. ಹೀಗೆ ಶೇಷಿತ್ವವೂ ಕೂಡ ಜೀವಾತ್ಮನಿಗೆ ಸ್ವಾಮಿದತ್ತವಾಗಿ ಉಂಟಾದುದು; ಆದುದರಿಂದ, ಈ ಜೀವಾತ್ಮನಿಗೆ ಸೋಪಾಧಿಕ ಶೇಷಿತ್ವವೇ. ನಿರುಪಾ ಧಿಕಶೇಷಿತ್ವವಾದರೋ ಪರಮಾತ್ಮನಿಗೇನೇ ಸಲ್ಲತಕ್ಕದ್ದೆಂಬ ಭಾವವು.

**ಮುಂದೆ ಪ್ರಣವ ನಮಸ್ಸುಗಳ ಸಾರಭೂತಾರ್ಥಗಳನ್ನು**
**ಕಾರಿಕೆಗಳ ಮೂಲಕ ಸಙ್ಗ್ರಹಿಸಿ ಹೇಳುತ್ತಾರೆ.**

---

ಪ್ರಣವದ ಅಕಾರದಿಂದ ಸರ್ವ ರಕ್ಷಕನು ವಿಷ್ಣುವು ಎಂಬ ಅರ್ಥಬರುತ್ತದೆಂದು ತಿಳಿಸಿದೆವು; ಅದರ ಲುಪ್ತ ಚತುರ್ಥಿಯಿಂದ ಆತನು ಸರ್ವಶ್ಯಾ ಶೇಷಿಯುಂಬ

**ಅಥ ಪ್ರಣವ ನಮಸೋಃ ಸಾರಭೂತಾರ್ಥೌ ಕಾರಿಕಾಭ್ಯಾಂ ಸಂಗೃಹ್ಣಾತಿ.**

**ಶ್ರೀಮಾನ್ ಸ್ವತಂತ್ರಃ ಸ್ವಾಮೀ ಚ ಸರ್ವತ್ರಾನ್ಯಾ ನಪೇಕ್ಷಯಾ ।**
**ನಿರಪೇಕ್ಷ ಸ್ವತಂತ್ರತ್ವಂ ಸ್ವಾಮ್ಯಂಚಾನ್ಯಸ್ಯ ನ ಕ್ವಚಿತ್ ॥ ೭೦ ॥**

ರ್ಥವು ದ್ಯೋತಿತವೆಂದು ಹೇಳಿದರು. ಅನಂತರ ಉಕಾರವು ಅವಧಾರಣಾರ್ಥ ವೆಂದೂ, ಮಕಾರವು ಜೀವವಾಚಕವೆಂದೂ ತಿಳಿಸಿ, ಮಕಾರನಾದ ಜೀವನು ಪರ ಮಾತ್ಮನಿಗೇ ಶೇಷಿಯೇ ವಿನಾ ಇತರರಿಗೆ ಶೇಷಿಯಲ್ಲವೆಂದು ಹೇಳಲ್ಪಟ್ಟಿತು. ಅನಂತರ ನಮಶ್ಶಬ್ದವನ್ನು ಸಖಂಡವಾಗಿ ನ ಮಃ ಎಂದು ಭಾವಿಸಿ, ಪ್ರಣವದ ಅಕಾರದೊಂದಿಗೆ ಸೇರಿಸಿ ಅರ್ಥಮಾಡಿದರೆ ತಾನು ತನಗೆ ಶೇಷಿಯಲ್ಲವು ; ವಸ್ತ್ವ ನ್ತರಗಳಿಗೂ ಶೇಷಿಯಲ್ಲವು; ಹಾಗೆಯೇ ತಾನು ಸ್ವತನ್ತ್ರನಲ್ಲವು, ಪರಮಾತ್ಮನೇ ಸರ್ವ ಸ್ವತನ್ತ್ರನು, ತಾನು ಆತನಿಗೆ ಪರತನ್ತ್ರನು ಎಂಬ ಅರ್ಥಗಳು ತೋರಿಬರುತ್ತ ವೆಂದು ಉಪಪಾದಿಸಿದರು. ಈ ಅರ್ಥಗಳೆರಡೂ ಸಾರತಮವಾದುದರಿಂದ ಸಿದ್ಧಾನ್ತಾ ರ್ಥವೆಂದು ತಿಳಿದು ಜ್ಞಾಪಕದಲ್ಲಿಡುವದಕ್ಕೆ ಅನುಕೂಲವಾಗಿ ಎರಡುಕಾರಿಕೆಗಳನ್ನು ದಯಪಾಲಿಸುತ್ತಾರೆ.—**ಶ್ರೀಮಾನ್** - ಲಕ್ಷ್ಮೀ ವಿಶಿಷ್ಟನಾದ ನಾರಾಯಣನೇ, **ಸರ್ವತ್ರ** - ಎಲ್ಲೂ, ಸಮಗ್ರವಾಗಿ, **ಅನ್ಯಾನಪೇಕ್ಷಯಾ** - ಬೇರೆ ಯಾವುದರ ಅಥವಾ ಯಾರ ಅಪೇಕ್ಷೆಯೂ ಇಲ್ಲದೆ, ನಿರುಪಾಧಿಕವಾಗಿ ಎಂಬರ್ಥವು, **ಸ್ವತಂತ್ರಃ**- ಸ್ವತಂತ್ರನೂ, **ಸ್ವಾಮೀಚ**-ಎಲ್ಲಾ ಜಗತ್ತೂ ತನ್ನ ವಿಭೂತಿಯಾಗಿ, ಅದಕ್ಕೆ ಸ್ವಾಮಿ ಯಾದುದರಿಂದ ಸರ್ವಶೇಷಿಯೂ ಹೌದು. ಸ್ವತಂತ್ರನೆಂದರೆ ಈಜಗತ್ತಿನ ಚಿದಚಿದ್ವ ಸ್ತುಗಳು ತನ್ನದಾಗಿ ಅವುಗಳನ್ನು ಹೇಗೆ ತನಗೆ ಇಷ್ಟವೋ ಹಾಗೆ ಉಪಯೋಗಿಸಿ ಕೊಳ್ಳುವ ಶಕ್ತಿಯುಳ್ಳವನೆಂಬರ್ಥವು. ಜೀವಾತ್ಮನು ಪರತಂತ್ರನೆಂಬುದರ ಅರ್ಥವೇನೆಂದರೆ? ಪರಮಾತ್ಮನು ಸ್ವಾಮಿಯಾಗಿ, ತಾನು ಆತನ ಸ್ವಂ ಎಂದರೆ ಸ್ವತ್ತು, ಆದುದರಿಂದ ಆತನಿಂದ ಆತನ ಇಷ್ಟಾನುಸಾರವಾಗಿ ವಿನಿಯೋಗಿಸಿಕೊಳ್ಳಲ್ಪಡಲು ಅರ್ಹನು ಎಂಬುದು. ಪರಮಾತ್ಮನು ಸರ್ವ ಶೇಷೀ ಎಂಬುದರ ಅರ್ಥವೇನೆಂದರೆ? ಹಿಂದೆ ಪ್ರಧಾನ ಪ್ರತಿತಂತ್ರಾಧಿಕಾರದಲ್ಲಿ ಶೇಷಿತ್ವಮಾವದು? ಎಂದು ಪ್ರಶ್ನಿಸಿ ಆದಕ್ಕೆ ಉತ್ತರವಾಗಿ "ಉಪಾದತ್ತೇ ಸತ್ತಾಸ್ಥಿತಿ ನಿಯಮನಾದ್ಯೈಃ ಚಿದಚಿದೌ ಸ್ವಮುದ್ದಿಶ್ಯ ಶ್ರೀಮಾನಿತಿ ವಾಗೌಪನಿಷದೀ" ಎಂಬಲ್ಲಿ ಹೇಳಿರುವಹಾಗೆ, ಶ್ರಿಯಃ ಪತಿಯು ತನ್ನೊಂದಿಗೆ ಸಂಬಂಧಿಸಿಕೊಂಡಿರುವ ಚಿದಚಿತ್ತುಗಳಿಗೆ ಪ್ರಯೋ ಜನಗಳನ್ನು ಕಲ್ಪಿಸಿ, ಅದರಿಂದ ತಾನು ಅತಿಶಯವನ್ನು ಹೊಂದಿದಹಾಗೆ ಭಾವಿಸು ವಿಕೆಯೆಂದು ಅಲ್ಲಿ ಹೇಳಲ್ಪಟ್ಟಿರುತ್ತದೆ. "ಯಥೇಷ್ಟವಿನಿಯೋಗಾರ್ಹಃ ಶೇಷ ಶಬ್ದೇನ ಕಥ್ಯತೇ । ಈಶ್ವರೇಣ ಜಗತ್ಸರ್ವಂ ಯಥೇಷ್ಟಂ ವಿನಿಯುಜ್ಯತೇ"

**ತಾರಸ್ಯ ನಮಸಶ್ಚೈವ ಸಾರೌ ದೇಶಿಕದರ್ಶಿತೌ ।**
**ಅನನ್ಯ ಶರಣತ್ವಾದೇ ರಧಿಕಾರಸ್ಯ ಸಿದ್ಧಯೇ ॥ ೨೧ ॥**

ಎಂಬುದು ಇಲ್ಲಿ ಅನುಸಂಧೇಯವು. ಆದುದರಿಂದ ಪರಮಾತ್ಮನಿಗೆ ತಾನು ಶೇಷ ನೆಂದರೆ ಪರಮಾತ್ಮನನ್ನು ಹೊಂದಿದ ಅತಿಶಯದ ಪ್ರಯೋಜನಕ್ಕಾಗಿಯೇ ತಾನಿರು ವದೆಂದು ತಿಳಿಯೋಣವು. ಹೀಗೆ ಶ್ರಿಯಃಪತಿಯೇ ಶೇಷಿಯು, ಸ್ವತಂತ್ರನು ; ಜೀವಾತ್ಮನಾದರೋ ಶೇಷನು, ಪರತಂತ್ರನು; ಪರಮಾತ್ಮನಿಗೆ ಅತಿಶಯ ವನ್ನುಂಟುಮಾಡುವದಕ್ಕೆ ತಾನಿರುವದು, ಆದುದರಿಂದ ತಾನು ಮಾಡುವ ದೆಲ್ಲಾ ಅವನ ಕೈಂಕರ್ಯರೂಪವಾಗಿ ಆತನಿಗೆ ಪ್ರೀತಿಯನ್ನೂ ಅತಿಶಯವನ್ನೂ ಉಂಟುಮಾಡುವದಕ್ಕೆ ಎಂದು ಭಾವಿಸುವನು. ಪರತಂತ್ರನೆಂದರೆ, ಸ್ವತಂತ್ರನಾದ ಸರ್ವೇಶ್ವರನು ತನ್ನ ಹಿತಕ್ಕಾಗಿ ತನ್ನನ್ನು ಯಥೇಷ್ಟವಾಗಿ ಆಜ್ಞಾಪಿಸುವನೆಂಬ ಭಾವನೆಯುಳ್ಳವನು. ಜೀವಾತ್ಮನಿಗೆ ಸ್ವಾಮಿದತ್ತವಾಗಿ ಆತನ ಅನುಗ್ರಹದಿಂದ ಉಂಟಾದ ಸ್ವಾತಂತ್ರ್ಯ ಶೇಷಿತ್ವಗಳುಂಟು; ಇವು ಕರ್ಮಾಧೀನವಾಗಿ ಸೋಪಾಧಿಕ ಗಳು. ನಿರುಪಾಧಿಕ ಸ್ವಾತಂತ್ರ್ಯ ಶೇಷಿತ್ವಗಳು ಸರ್ವೇಶ್ವರನಿಗೊಬ್ಬನಿಗೆ ವಿನಾ ಇನ್ನು ಯಾರಿಗೂ ಇಲ್ಲವು. ಇವುಗಳಿಗೆ ಇನ್ನು ಯಾವುದರ ಅಪೇಕ್ಷೆಯೂ ಇಲ್ಲ ವಾದುದರಿಂದ ಇವೆರಡೂ **ಅನ್ಯಾನಪೇಕ್ಷಯಾ** ಎಂಬ ಪ್ರಯೋಗವು. ಜೀವಾ ತ್ಮನಿಗಾದರೋ ಇಂತಹ ನಿರಪೇಕ್ಷ ಸ್ವಾತಂತ್ರ್ಯ ಶೇಷಿತ್ವಗಳೂ ಸ್ವಲ್ಪವೂ ಇಲ್ಲ ವೆಂದು ಉತ್ತರಾರ್ಧದಿಂದ ಹೇಳುತ್ತಾರೆ. **ನಿರಪೇಕ್ಷವೆಂದರೆ** ನಿರುಪಾಧಿಕವಾದ **ಸ್ವತಂತ್ರತ್ವವೂ, ಸ್ವಾಮ್ಯಂ** - ನಿರುಪಾಧಿಕ ಶೇಷಿತ್ವವೂ, **ಅನ್ಯಸ್ಯ** - ದಿವ್ಯ ದಂಪತಿಗಳಲ್ಲದ ಇತರನಿಗೆ ಎಂದರೆ ಜೀವಾತ್ಮನಿಗೆ, ಅಥವಾ ದಿವ್ಯ ದಂಪತಿಗಳಲ್ಲದೆ ಇನ್ನು ಯಾವ ಇತರ ದೇವತೆಗಳಿಗೂ **ನಕ್ವಚಿತ್**-ಎಲ್ಲಿಯೂ ಸ್ವಲ್ಪವಾಗಲಿಇಲ್ಲವು. ಇದರಿಂದ ನಿರುಪಾಧಿಕ ಸ್ವಾತಂತ್ರ್ಯವೂ ನಿರುಪಾಧಿಕಶೇಷಿತ್ವವೂ ಸರ್ವೇಶ್ವರನಿಗೇಸೇ ವಿನಾ ಜೀವಾತ್ಮರಿಗೆ ಈಷದಪಿ ಇಲ್ಲವೆಂದು ಹೇಳಲ್ಪಟ್ಟಿತು. ಈ ಅರ್ಥಗಳು ಯಾವುದರ ಸಾರಭೂತಾರ್ಥಗಳು ಎಂದರೆ ಹೇಳುತ್ತಾರೆ.— **ತಾರಸ್ಯ** - ಪ್ರಣವದ ಮತ್ತು **ನಮಸಶ್ಚ** - ನಮಶ್ಶಬ್ದದ, **ಇಮೌ ಸಾರೌ** - ಇವೆರಡೂ ಸಾರಭೂತ ವಾದ ಅರ್ಥಗಳು, ಇಷ್ಟು ಮಾತ್ರವೇ ಅಲ್ಲವು. ತಮ್ಮ ಅಭಿಪ್ರಾಯ ಮಾತ್ರ ವಾದರೆ ಅದಕ್ಕೆ ಮಾಹಾತ್ಮ್ಯೆಯು ಅಷ್ಟಿಲ್ಲವು. ತಮ್ಮ ಮುಖ್ಯ ಗುರುಗಳಾದ ವಾದಿಹಂಸಾಂಬುವರ್ಯರು ಉಪದೇಶಿಸಿದುದರಿಂದ, ಸಾಂಪ್ರದಾಯಿಕವಾಗಿ ಉಪದಿಷ್ಟ ವಾದ ಅರ್ಥಗಳಾದುದರಿಂದ ಅವುಗಳಿಗೆ ಮಾಹಾತ್ಮ್ಯೆಯು ವಿಶೇಷವೆಂಬ ಭಾವವು. **ದೇಶಿಕದರ್ಶಿತೌ** - ತಮ್ಮ ಗುರುಗಳಾದ ಕಿಡಾಂಬಿ ಅಪ್ಪುಳ್ಳಾರ್ ಮತ್ತು ಪಡಾದೂರ್ ಅಮ್ಮಾಳ್‌ರವರು ಅನುಗ್ರಹಿಸಿದವುಗಳು. ಆದುದರಿಂದ

ಪರಮಾಪ್ತ ವಾಕ್ಯಗಳಾಗಿ ವಿಶೇಷ ಮಹಿಮೆಯುಳ್ಳ ಅರ್ಥಗಳೆಂಬ ಭಾವವು. ಇಲ್ಲಿ **ದೇಶಿಕದರ್ಶಿತೌ** ಎಂಬುದರಿಂದ ಇಂತಹ ಅಮೋಘಾರ್ಥಗಳನ್ನು ತಮ್ಮ ಆಚಾರ್ಯರು ಪ್ರದರ್ಶಿಸಿದರೆಂಬ ಕೃತಜ್ಞತಾ ಭಾವವು ತೋರಿಬರುವದೂ ಅಲ್ಲದೆ, ಮಂತ್ರಗಳ ರಹಸ್ಯಾರ್ಥಗಳು ಚನ್ನಾಗಿ ಮನಸ್ಸಿನಲ್ಲಿ ನೆಲೆಯಾಗಿ ನಿಲ್ಲಲು ತುಂಬಾ ಜ್ಞಾನಿಯಾದ ಆಚಾರ್ಯರ ಉಪದೇಶವು ಆವಶ್ಯಕವೆಂಬ ಭಾವವೂ ಸೂಚಿತವು. **ದೇಶಿಕದರ್ಶಿತೌ** ಎಂಬುದರಿಂದ ನಾವುಗಳು ಅನ್ವಯಿಸಿಕೊಳ್ಳುವದು ಹೇಗೆ? ಎಂದರೆ ನಿಗಮಾಂತ ದೇಶಿಕರವರು ನಮಗೆ ತೋರಿಸಿಕೊಟ್ಟವು. ಶ್ರೀ ನಿಗಮಾಂತ ದೇಶಿಕರವರಿಗೆ ಅವರ ಗುರುಗಳು ಉಪದೇಶಿಸಿದುದರಿಂದ ಹೇಗೆ ಮಹತ್ತಾದವೋ, ಹಾಗೆಯೇ ಶ್ರೀ ದೇಶಿಕರು ನಮಗೆ ಉಪದೇಶಿಸಿರುವುದರಿಂದ ನಮಗೂ ತುಂಬಾ ಮಹತ್ತಾದವು. ಸಾರಭೂತವಾದುವು ಎಂದು ಶ್ಲಾಘಿಸಲ್ಪಟ್ಟವಲ್ಲಾ, ಅವುಗಳಿಂದಾಗುವ ಪ್ರಯೋಜನವೇನು? ಎಂದರೆ ಹೇಳುತ್ತಾರೆ,—**ಅನನ್ಯ ಶರಣತ್ವಾದೇ ರಧಿಕಾರಸ್ಯಸಿದ್ಧಯೇ** ಎಂದು, ಉಂಟಾಗುವ ಮಹತ್ಪ್ರಯೋಜನವನ್ನು ತಿಳಿಸುತ್ತಾರೆ.—ಅನನ್ಯೋಪಾಯತ್ವ, ಅನನ್ಯ ರಕ್ಷಕತ್ವ, ಅನನ್ಯ ಪ್ರಯೋಜನತ್ವ ರೂಪ ಅಧಿಕಾರವು ಸಿದ್ಧಿಸುತ್ತವೆ; ಆದುದರಿಂದ ಈ ಅರ್ಥಗಳು ಸಾರಭೂತವಾದುವೆಂದು ಹೇಳುತ್ತಾರೆ. **ಅನನ್ಯಶರಣತ್ವಾದೇಃ** - ಅನನ್ಯ ಶರಣತ್ವವೇ ಮೊದಲಾದವುಗಳನ್ನುಳ್ಳ, **ಅಧಿಕಾರಸ್ಯ** - ಅಧಿಕಾರದ, **ಸಿದ್ಧಯೇ** - ಸಿದ್ಧಿಗೋಸ್ಕರ, **ಇಮೌಸಾರೌ** - ಈ ಎರಡು ಅರ್ಥಗಳೂ ಸಾರಭೂತವಾದವು. ಭಗವಂತನಲ್ಲದೆ ಇನ್ನು ಯಾರೂ ತನಗೆ ರಕ್ಷಕರಿಲ್ಲವು ಎಂಬುದು, ತಾನು ಪರಮಾತ್ಮನಿಗೆ ಸಂಪೂರ್ಣ ಪರತಂತ್ರನೆಂಬ ಜ್ಞಾನದಿಂದ ಉಂಟಾಗಿ ಅನ್ಯದೇವತಾಶ್ರಯಣವನ್ನು ಮಾಡುವದಿಲ್ಲವು; ಮತ್ತು ಬೇರೆ ಯಾವ ಉಪಾಯವನ್ನು ಹುಡುಕುವದಿಲ್ಲವು; ತನ್ನ ರಕ್ಷಣವೇ ಮುಖ್ಯ ಪ್ರಯೋಜನವಾದುದರಿಂದ ಬೇರೆ ಯಾವ ಪ್ರಯೋಜನವೂ ತನಗೆ ಬೇಕಿಲ್ಲವು. ಶೇಷಭೂತನಾದ ತನಗೆ ಮುಖ್ಯ ಪ್ರಯೋಜನವು ಯಾವುದು ಎಂದರೆ ತತ್ಸಮಾಗಮವೂ, ಅನವರತ ತತ್ಕೈಂಕರ್ಯ ಪ್ರಾಪ್ತಿಯು. ಇವುಗಳಲ್ಲದೆ ಬೇರೆ ಯಾವುದು ಬೇಕಿಲ್ಲವಾದುದರಿಂದ ಅನನ್ಯ ಪ್ರಯೋಜನತ್ವವು. ಹೀಗೆ ಭರನ್ಯಾಸಕ್ಕೆ ಬೇಕಾದ ಅಧಿಕಾರವು ಲಭಿಸುತ್ತದೆಂಬ ಭಾವವು.

ಪರಮಾತ್ಮನು ನಿರಪೇಕ್ಷ ಸ್ವತಂತ್ರನು ಎಂದು ಹೇಳಲ್ಪಟ್ಟಿತಲ್ಲಾ, "**ಯಸ್ಯಾವೀಕ್ಷ್ಯಮುಖಂ ತದಿಂಗಿತಪರಾಧೀನೋ ವಿಧತ್ತೇಽಖಿಲಂ**" ಲಕ್ಷ್ಮಿಯ ಇಂಗಿತಕ್ಕೆ ಅಧೀನನಾಗಿಯೇ ಸಮಸ್ತಲೋಕ ವ್ಯಾಪಾರಗಳನ್ನೂ ಮಾಡುತ್ತಾನೆಂಬ (ಶ್ರೀಸ್ತವ. ೧) ವಾಕ್ಯವು ನಿರಪೇಕ್ಷ ಸ್ವಾತಂತ್ರ್ಯಕ್ಕೆ ವಿರುದ್ಧವಾದ ಹೇಳಿಕೆಯಲ್ಲವೇ? ಎಂದರೆ ಪತಿಗೆ ಪರಿಪೂರ್ಣ ವಿಧೇಯಳಾಗಿ ಆತನ ಇಂಗಿತವನ್ನೂ ಸರ್ವಜ್ಞಳಾಗಿ ತಿಳಿದು, ಈಕೆಯೂ ಐಕಮತ್ಯದಿಂದ ನಡೆಯುವಳಾಗಿರುವುದರಿಂದ

**ಲೋಕತ್ತಿಲ್ ಸ್ವಾಮಿತ್ವ ಸ್ವಾತಂತ್ರ್ಯಙ್ಗಳ್ ಅಭಿಮತಙ್ಗಳಾಯುಮ್, ದಾಸತ್ವ ಪಾರತಂತ್ರ್ಯಙ್ಗಳ್ ಅನಭಿಮತಙ್ಗಳಾಯುಮ್, ತೋತ್ತ್ರುಗಿರದು ಕರ್ಮೋಪಾಧಿಕಮಾಗವತ್ತ್ರನ್ನೈ. ಇಙ್ಗ ಪ್ರಣವ ನಮಸ್ಸುಕ್ಕಳಿಲೇ ಶೊನ್ನ**

ಏನೊಂದೂ ವಿರೋಧವಿಲ್ಲವು. ಹಾಗೆಯೇ ಅಂಬರೀಷೋಪಾಖ್ಯಾನದಲ್ಲಿ ಸ್ವಾಮಿಯೇ ದೂರ್ವಾಸರಿಗೆ "**ಅಹಂ ಭಕ್ತ ಪರಾಧೀನಃ**" ಎಂದು ಹೇಳಿಕೊಂಡಿರುವುದು ಸ್ವಾತಂತ್ರ್ಯ ಸಂಕೋಚವನ್ನು ಪ್ರದರ್ಶಿಸುವುದಿಲ್ಲವೋ ? ಶ್ರೀ ಭೀಷ್ಮರ ಪ್ರತಿಜ್ಞೆಗೆ ಕಟ್ಟುಬಿದ್ದು, ಆಯುಧವನ್ನು ಹಿಡಿಯುವುದಿಲ್ಲವೆಂಬ ಸ್ವತಂತ್ರ ಪ್ರತಿಜ್ಞೆಗೆ ವಿರೋಧವಾಗಿ ನಡೆಯಬೇಕಾಗಿ ಬರಲಿಲ್ಲವೇ ? ಎಂದರೆ ಭಕ್ತರಲ್ಲಿ ಹೀಗೆ ವಿಶೇಷ ಪ್ರೀತಿಯನ್ನು ತೋರಿಸಿ ನಡೆದಿರುವದರಿಂದ ಅವೂ ಕೂಡ ಹಾಗೆ ನಡೆಯಬೇಕೆಂಬ ಸ್ವಾತಂತ್ರ್ಯವನ್ನು ಪ್ರಕಟಿಸುತ್ತವೆಯೇ ವಿನಾ ಪರಾಧೀನತೆಯನ್ನಲ್ಲವು. ಹಾಗೆಯೇ ಶ್ರೀ ರಾಮಲಕ್ಷ್ಮಣರು "**ಇಮೌ ಸ್ಮಮುನಿಶಾರ್ದೂಲ ಕಿಂಕರೌ ಸಮುಪಸ್ಥಿತಾ ಆಜ್ಞಾಪಯ**" ಎಂದು ವಿಶ್ವಾಮಿತ್ರರಿಗೆ ಅಧೀನವಾಗಿ ಹೇಳಿಕೊಂಡಿರುತ್ತಾರೆ.

ಆದರೆ ಇಲ್ಲಿ ಪರಮಾತ್ಮನಿಗೆ ತಾನು ಪರತಂತ್ರನು ದಾಸಭೂತನು ಎಂಬ ತಿಳುವಳಿಕೆಯು ಅತಿಶಯವಾಗಿ ಕೊಂಡಾಡಲ್ಪಟ್ಟಿರುವದು ಹೇಗೆ ? ಇದು ಲೋಕ ವಿರುದ್ಧವಾದುದಲ್ಲವೇ ? ಇನ್ನೊಬ್ಬರಿಗೆ ಪರತಂತ್ರನಾಗಿರುವದೂ ಕೈಂಕರ್ಯ ಮಾಡುವದೂ ಸಹ ಕ್ಲೇಶಾಧಿಕವಾದುದಲ್ಲವೇ ? ಎಂದರೆ ಇಲ್ಲಿ ಕರ್ಮವಶ್ಯನಾಗಿ ಇತರರಿಗೆ ಪರತಂತ್ರನಾಗಿ ಸೇವೆ ಮಾಡುವದು ಅತ್ಯಂತ ಕ್ಲೇಶಾವಹವೆಂಬುದರಲ್ಲಿ ಈಷದಪಿ ಸಂದೇಹವಿಲ್ಲವು; ಆದರೆ ಸರ್ವಶಕ್ತನಾಗಿ ಮಹಾಕೃಪಾನಿಧಿಯಾಗಿರುವವನಿಗೆ ಕರ್ಮವಶ್ಯನಲ್ಲದೇ ಇರುವ ಸ್ಥಿತಿಯಲ್ಲಿ ಸ್ವೇಚ್ಛೆಯಾಗಿ ಆನಂದವನ್ನನುಭವಿಸುತ್ತಾ ಆತನಿಗೆ ಕೈಂಕರ್ಯ ಮಾಡುವದು ಮಹತ್ತಾದ ಪದವಿಯು ; ಇದರ ಮಾಹಾತ್ಮೆಯನ್ನು ಕರ್ಮವಶ್ಯನಾಗಿರುವವನು ಅರಿಯಲಾರನು ಎಂಬ ಅಭಿಪ್ರಾಯದಿಂದ ಮುದಿನ ವಾಕ್ಯವನ್ನು ಹೇಳುತ್ತಾರೆ.—**ಲೋಕತ್ತಿಲ್**-ಈ ಜಗತ್ತಿನಲ್ಲಿ, **ಸ್ವಾಮಿತ್ವ ಸ್ವಾತಂತ್ರ್ಯ**ಗಳು, **ಅಭಿಮತಙ್ಗಳಾಗಿಯುಮ್** - ಇಷ್ಟವಾದವುಗಳಾಗಿಯೂ, **ದಾಸತ್ವ ಪಾರತಂತ್ರ್ಯಗಳ್ ಅನಭಿಮತಙ್ಗಳಾಯುಮ್** - ಇಷ್ಟವಿಲ್ಲದವುಗಳಾಗಿಯೂ, **ತೋತ್ತ್ರುಗಿರದು** - ತೋರಿಬರುವದು, **ಕರ್ಮೋಪಾಧಿಕಮಾಗವತ್ತ್ರನ್ನೈ** - ಈತನಿಗೆ ಕರ್ಮಮೂಲಕವಾಗಿ ಮಾತ್ರ ಬಂದುದೇ ವಿನಾ ಅನ್ಯಥಾ ಅಲ್ಲವೆಂಬ ಭಾವವು. ದಾಸತ್ವ ಪಾರತಂತ್ರ್ಯವು ಅನಭಿಮತವಾದುವೆಂಬುದಕ್ಕೆ ಲೋಕ ವಿಡಂಬನಾರ್ಥವಾಗಿ ಸೀತೆಯು ರಾವಣನ ವಶಕ್ಕೆ ಸಿಕ್ಕಿ ಅಶೋಕವನದಲ್ಲಿ ಹೇಳಿದ "**ಧಿಗಸ್ತು ಖಲುಮಾನುಷ್ಯಂ ಧಿಗಸ್ತು ಪರವಶ್ಯತಾಂ**" ಎಂಬ ವಾಕ್ಯವು ಅನುಸಂಧೇಯವು. ಹಾಗೆಯೇ "**ಸರ್ವಂ ಪರವಶಂ ದುಃಖಂ**" ಪರವಶವಾದುದೆ

**ದಾಸತ್ವಮುಮ್, ಪಾರತನ್ತ್ರ್ಯಮುಮ್ (೧) "ದಾಸಭೂತಾ ಸ್ವತಸ್ಸರ್ವೇ ಇತ್ಯಾದಿಗಳಿರ್ಪಡಿಯೇ ಸ್ವರೂಪಪ್ರಾಪ್ತಙ್ಗಳಾಗೈಯಾಲೇ ತತ್ವವಿತ್ತುಗಳುಕ್ಕು ಅನುಕೂಲಙ್ಗಳ್.**

ಲ್ಲವೂ ದುಃಖರೂಪವಾದುದೇ ಎಂದೂ ಹೇಳಲ್ಪಟ್ಟಿರುತ್ತದೆ. ಇಂತಹ ದಾಸತ್ವ ಪಾರತಂತ್ರವೂ ಕರ್ಮೋಪಾಧಿಯಿಂದ ಕ್ಲೇಶಾವಹವಾದುದರಿಂದಲೇ ಅನಭಿಮತವು. ಹಾಗೆ ಕ್ಲೇಶಾವಹವಲ್ಲದೆ, ಕರ್ಮೋಪಾಧಿಯ ಗಂಧವೇ ಇಲ್ಲದೆ, ಆನಂದಮಯನ ಸನ್ನಿಧಿಯಲ್ಲಿ ಪಾರತಂತ್ರ್ಯವೂ ಮತ್ತು ಸ್ವೇಚ್ಛೆಯಿಂದ ಮಾಡುವ ಕೈಂಕರ್ಯ ಸಾಮ್ರಾಜಗಳೂ ಅಭಿಮತಗಳೇ ಎಂಬ ಭಾವವು. ಆದುದರಿಂದಲೇ ಈ ಗ್ರಂಥಾದಿಯಲ್ಲಿ ಗ್ರಂಥಕರ್ತರು **ಕಲುಷ ಮತಿಭಿವಿಂದೇ ಕಿಂಕರತ್ವಾಧಿರಾಜ್ಯಂ,** ಕರ್ಮೋಪಾಧಿಯಿಂದ ಕಲುಷಿತ ಬುದ್ಧಿಯುಳ್ಳವನಾಗಿ ಸ್ವಾಮಿಗೆ ನಿತ್ಯ ಕೈಂಕರ್ಯ ಮಾಡುವ ಸಾಮ್ರಾಜ್ಯ ಪದವಿಯ ಮಹಿಮೆಯನ್ನು ತಿಳಿಯದವನಾಗಿದ್ದಾನೆಂದು ಹೇಳಿರುತ್ತಾರೆ. ಲೋಕದಲ್ಲೂ ಕೂಡ ಗುರುಮಾಹಾತ್ಮ್ಯೆಯನ್ನರಿತವರು, ಗುರುವು ಪರಮಪುರುಷನಿಗೆ ಸಮರೆಂದು ಭಾವಿಸಿ, ಅವರಿಗೆ ಶೇಷಭೂತರಾಗಿ ಗುರುಕೈಂಕರ್ಯವನ್ನು ಸಂತೋಷಚಿತ್ತರಾಗಿ ನಡೆಸುತ್ತಾರೆ. ಹಾಗೆಯೇ ಸಾಧ್ವಿಯೂ ಸಹ ತನ್ನ ಪತಿಯನ್ನು ಪರದೇವತೆಯೆಂದು ಭಾವಿಸಿ ಶೇಷಭೂತಳಾಗಿ ಆತನಿಗೆ ಪರಿಚಾರಕರಿದ್ದರೂ ತಾನೇ ಸ್ವೇಚ್ಛೆಯಿಂದ ಕೈಂಕರ್ಯವನ್ನು ಎಸಗುವದನ್ನು ಕಂಡಿರುವೆವು. ಹಾಗೆಯೇ ಸತ್ಪುತ್ರನೂ ತನ್ನ ಪಿತಾವಿನ ವಿಷಯದಲ್ಲಿ ಆತನಿಗೆ ಶೇಷಭೂತನಾಗಿ ಕೈಙ್ಕರ್ಯಗಳನ್ನು ನಡೆಸುವನು. ಹೀಗೆ ಅನೇಕ ನಿದರ್ಶನಗಳುಂಟು. ಇದನ್ನು ಆಚಾರ್ಯರೇ **ಮುಂದೆ** ಉಪಪಾದಿಸುತ್ತಾರೆ.—

**ಕಲುಷಮತಿಯು** ಇದರ ಮಾಹಾತ್ಮ್ಯೆಯನ್ನು ಅರಿಯದೇ ಹೋಗುವನು. ತತ್ವವಿತ್ತಾದರೋ ಕರ್ಮಪ್ರಾಬಲ್ಯವನ್ನು ಕಳಕೊಂಡವನಾದುದರಿಂದಲೂ, ಅದರ ಮಹಿಮೆಯನ್ನು ತಿಳಿದವನಾದುದರಿಂದಲೂ, ಪಾರತಂತ್ರ್ಯ ದಾಸತ್ವಗಳು ತನ್ನ ಸ್ವರೂಪಸಿದ್ಧವಾದುವುಗಳಾದುದರಿಂದ, ತನಗೆ ತುಂಬಾ ಅನುಕೂಲವಾದುವುಗಳನ್ನಾಗಿ ಭಾವಿಸುವನೆಂದು ಮುಂದೆ ಹೇಳುತ್ತಾರೆ.—**ಇಙ್ಗು** - ಈ ಸಂದರ್ಭದಲ್ಲಿ, **ಪ್ರಣವ ನಮಸ್ಸುಗಳಲ್ಲಿ, ಶೊನ್ನ**-ಹೇಳಲ್ಪಟ್ಟ, **ದಾಸತ್ವಮೂ ಪಾರತನ್ತ್ರ್ಯಮೂ,** "**ದಾಸಭೂತಾಸ್ಸ್ವತಸ್ಸರ್ವೇ**" - "ಸಮಸ್ತ ಜೀವಾತ್ಮರೂ ಸ್ವಾಭಾವಿಕವಾಗಿಯೇ ದಾಸಭೂತರು" **ಇತ್ಯಾದಿಗಳಿರ್ಪಡಿಯೇ** - ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವ ಹಾಗೆ, **ಸ್ವರೂಪ ಪ್ರಾಪ್ತಙ್ಗಳಾಗೈಯಾಲೇ** - ಸ್ವರೂಪತಃ ಉಂಟಾದವು ಆದುದರಿಂದ, **ತತ್ವವಿತ್ತುಗಳುಕ್ಕು** - ಜೀವಪರಮಾತ್ಮ ಸ್ವರೂಪಸ್ವಭಾವ

(೧) ರುದ್ರವಾಕ್ಯವು.

**ಏತೇನ ಭಗವಚ್ಛೇಷತ್ವೇ ಸಿದ್ಧೇ ತದೀಯಶೇಷತ್ವ ಮಪಿ ಸಿದ್ಧಮ್.**

**ಇಪ್ಪಡಿ ಅತ್ಯಂತ ಪಾರಾರ್ಥ್ಯ ಪಾರತಂತ್ರ್ಯಙ್ಗಳ್ ಸಿದ್ಧಿಕ್ಕೈಯಾಲೇ**

ಯಾಥಾತ್ಮ್ಯವನ್ನರಿತ ಪ್ರಾಜ್ಞರಿಗೆ, **ಅನುಕೂಲಙ್ಗಳ್** - ಸುಖರೂಪವಾಗಿಯೇ ಭಾವಿಸುವವರು; ದುಃಖರೂಪವಾಗಿ ಭಾವಿಸುವರಲ್ಲವೆಂಬ ತಾತ್ಪರ್ಯವು; ಈ ದಾಸತ್ವ ಪಾರತಂತ್ರ್ಯಗಳು ತನ್ನ ಸ್ವರೂಪತಃ ಉಂಟಾದವು ಎಂಬ ಜ್ಞಾನವು ತತ್ವಯಾಥಾತ್ಮ್ಯ ವೇದಿಗಳಿಗೆ ಉಂಟಾಗುತ್ತದೇವಿನಾ,ಅಜ್ಞಾನಿಗಳಿಗಲ್ಲವು. ಅಂತಹ ಜ್ಞಾನವುಳ್ಳ ಪ್ರಾಜ್ಞನಿಗೆ, ತಾನು ಪರಮಾತ್ಮನಿಗೆ ದಾಸನು ಪರತಂತ್ರನು ಎಂಬ ಭಾವವು ಸುಖರೂಪವಾದುದೇ ಎಂಬುದು ತಾತ್ಪರ್ಯವು. ಹಾಗೆ ಭಾವನೆಯಿದ್ದುದರಿಂದಲೇ ಲಕ್ಷ್ಮಣನೂ ಭರತನೂ ಸಹ ದಾಸತ್ವ ಪಾರತಂತ್ರ್ಯವನ್ನು ಬಯಸಿದರೇ ವಿನಾ ಸ್ವಾಮಿತ್ವ ಶೇಷಿತ್ವಗಳನ್ನು ಬಯಿಸಲಿಲ್ಲವು. ಸ್ವಾಮಿತ್ವ ಶೇಷಿತ್ವಗಳನ್ನೇ ದುಃಖರೂಪವಾಗಿ ಭಾವಿಸಿ ಅವುಗಳನ್ನು ಶ್ರೀರಾಮನು ಕೊಡಲು ಸಿದ್ಧನಾಗಿದ್ದರೂ ಅವುಗಳನ್ನು ಅಙ್ಗೀಕರಿಸಲಿಲ್ಲವು. ಇಲ್ಲಿ ಇತ್ಯಾದಿಗಳಿರ್ **ಪಡಿಯೇ** ಎಂಬಲ್ಲಿರುವ ಆದಿ ಪದದಿಂದ, **"ಪತಿಂ ವಿಶ್ವಸ್ಯ"** (ಪೂ. ಸೂ.) **"ಈಶ್ವರ ಸ್ಸರ್ವಭೂತಾನಾಂ"** (ಗೀ. ೧೮-೬೧) ಇತ್ಯಾದಿ ಪ್ರಮಾಣಗಳು ಹೇಳಲ್ಪಟ್ಟವು. ಇಲ್ಲಿ ಒಂದು ಪೂರ್ವಪಕ್ಷವು ತೋರಬಹುದು. ಏನೆಂದರೆ, ಸರ್ವೇಶ್ವರನೇ ತನಗೆ ನಿರುಪಾಧಿಕ ಶೇಷಿ ಎಂದೂ, ತಾನು ಆತನಿಗೆ ನಿರುಪಾಧಿಕ ಪರತಂತ್ರನೆಂದೂ ಏರ್ಪಟ್ಟ ನಂತರ, ಪುರುಷಾರ್ಥ ಕಾಷ್ಠಾಧಿಕಾರದಲ್ಲಿ ಭಾಗವತ ಶೇಷತ್ವವೇ ಪುರುಷಾರ್ಥ ಕಾಷ್ಠಾವೆಂದು ಶ್ಲಾಘಿಸಿದುದು ಹೇಗೆ? ಭಾಗವತ ಶೇಷಿತ್ವವನ್ನು ಒಂದು ವೇಳೆ ನಿರಾಕರಿಸಿದರೂ ದೋಷವಿಲ್ಲ ತಾನೇ? ಎಂದು ಪೂರ್ವಪಕ್ಷವು ತೋರಬಹುದು. ಇದಕ್ಕೆ ಮುಂದೆ ಸಮಾಧಾನವನ್ನು ಹೇಳುತ್ತಾರೆ.

**ಇದರಿಂದ ಭಗವಚ್ಛೇಷತ್ವವು ಸ್ಥಾಪಿತವಾದರೆ ಭಾಗವತ ಶೇಷತ್ವವೂ ಸಿದ್ಧವು.**

ಯಾವಾಗ "ಯಥೇಷ್ಟ ವಿನಿಯಜ್ಯಮಾನತ್ವಂ" ಎಂದರೆ ಇಷ್ಟಾನುಸಾರ ಆಜ್ಞಾಪಿಸಲ್ಪಡುವದಕ್ಕೆ ಯೋಗ್ಯತೆ ಎಂದೆನಿಸುವ ಪಾರತಂತ್ರ್ಯವೂ, ಮತ್ತು **"ಯಥೇಷ್ಟ ವಿನಿಯೋಗಾರ್ಹತ್ವಂ"** ಎಂದರೆ ಇಷ್ಟಾನುಸಾರ ಉಪಯೋಗಿಸಲ್ಪಡುವದಕ್ಕೆ ಯೋಗ್ಯತೆ ಎಂದೆನಿಸುವ ಶೇಷತ್ವವೂ, ಈ ಪ್ರಣವ ನಮಸ್ಸುಗಳಿಂದ ಏರ್ಪಟ್ಟವೋ, ಆಗ ಭಾಗವತ ಶೇಷತ್ವವೂ ಏರ್ಪಟ್ಟಿತು, ಎಂದು ಆಳ್ವಾರ್ ದಿವ್ಯಸಕ್ತಿಗಳಿಂದ ಸಮರ್ಥಿಸಿ ಹೇಳುತ್ತಾರೆ;—ಇಪ್ಪಡಿ - ಹೀಗೆ ಮೇಲೆ ಉಪಪಾದಿ

**(೨) ಅಡಿಯಾರ್ಕ್ಕೆನ್ನೈ ಯಾಳ್‌ಪಡುತ್ತ ವಿಮಲರ್” ಎಙ್ಗಿರಪಡಿಯೇ ಸ್ವತಂತ್ರನಾನ ಶೇಷಿಕ್ಕು ಇಷ್ಟವಿನಿಯೋಗಾರ್ಹನಾನಪಡಿಯಾಲೇ ತದೀಯ ಶೇಷತ್ವಮುಮ್ ಇಙ್ಗೇ ಸಿದ್ಧಮ್. ಶೇಷಿಯುಮಾಯ್ ಸ್ವತಂತ್ರನುಮಾಗೈಯಾಲೇ, ಈಶ್ವರ‍ರ್ ಇವ್ವಾತ್ಮಾವೈ ತ್ತನಕ್ಕು ನಲ್ಲಾರಾನ ವಡಿಯಾರ್ಕ್ಕುತ್ತೆನ್ನುಕಪ್ಪೋಲೇ ಶೇಷಮಾಕ್ಕಿನಾಲ್ ಇದು (ಅಪ್ರಾಪ್ತಮೆನ್ನ) ಪ್ರಾಪ್ತಮನ್ರೆನ್ರು ವೊಣ್ಣಾದು ; ವಿಲಕ್ಕುಮುಮ್ ಒಣ್ಣಾದು. ಶೇಷಿಯಾಗೈಯಾಲೇ**

---

ಷಿವ ರೀತಿಯಲ್ಲಿ ಪ್ರಣವ ನವಸ್ಸುಗಳ ಮೂಲಕವಾಗಿ, ಅತ್ಯಂತ ಪಾರಾರ್ಥ್ಯ **ಪಾರತಂತ್ರ್ಯಗಳ್** - ಶೇಷತ್ವ ಪಾರತಂತ್ರ್ಯಗಳು, ಸಿದ್ಧಿಕ್ಕೈಯಾಲೇ – ಏರ್ಪಡುವದರಿಂದ, **ಅಡಿಯಾರ್ಕ್ಕೆನ್ನೈ ಆಳ್‌ಪಡುತ್ತ ವಿಮಲರ್”** ಎಂಬ ಪಾಣಾಳ್ವಾರವರ ಪಾಶುರದಲ್ಲಿ, **ಎಙ್ಗಿರಪಡಿಯೇ** ಎಂದು ಹೇಳಿರುವ ಹಾಗೆ, ಸ್ವತಂತ್ರ ಶೇಷಿಯಾದ ಸರ್ವೇಶ್ವರನಿಗೆ **ಇಷ್ಟವಿನಿಯೋಗಾರ್ಹನಾನ ಪಡಿಯಾಲೇ** - ತನ್ನ ಇಷ್ಟಾನುಸಾರ ಉಪಯೋಗಿಸಿಕೊಳ್ಳಲು ಈ ಜೀವನು ಅರ್ಹನಾದುದರಿಂದ, **ತದೀಯಶೇಷತ್ವಮುಮ್** - ತನ್ನನ್ನು ಆಶ್ರಯಿಸಿ ತನ್ನವರಾದ ಭಾಗವತರಿಗೂ ಶೇಷನಾಗಿರುವಿಕೆಯು, **ಇಙ್ಗೇ** – ಈ ಪ್ರಣವ ನಮಸ್ಸುಗಳಲ್ಲಿ, **ಸಿದ್ಧಮ್** - ಅರ್ಥವಾಗಿ ತೋರಿಬರುವದರಿಂದ ಸ್ಥಾಪಿತವು. ತಾನು ಪರಮಪುರುಷನಿಗೆ ಯಾವಾಗ ಶೇಷಭೂತನಾದನೋ, ಆಗ ಆತನು ತನ್ನನ್ನು ಆತನ ಇಷ್ಟಾನುಸಾರ ಉಪಯೋಗಿಸಿಕೊಳ್ಳಬಹುದು. ಪ್ರಪನ್ನರೆಲ್ಲಗೂ ತನ್ನನ್ನು ಆಶ್ರಯಿಸಿರುವುದರಿಂದ ತನಗೆ ವಿಶೇಷವಾಗಿ ಬೇಕಾದವರಾದುದರಿಂದ ಅಂತವರಿಗೂ ಅಧೀನನಾಗಿರತಕ್ಕದ್ದೆಂದು ಸರ್ವೇಶ್ವರನು ಈತನನ್ನು ಉಪಯೋಗಿಸಿಕೊಳ್ಳಲು ಆತನಿಗೆ ಬಾಧ್ಯತೆಯುಂಟು. ಆದುದರಿಂದ ಅಂತಹ ಭಾಗವತ ಶೇಷತ್ವವೂ ಕೂಡ ಈ ಪ್ರಣವ ನಮಸ್ಸುಗಳ ಅರ್ಥಗಳಿಂದ ಸಿದ್ಧವು ಎಂಬ ತಾತ್ಪರ್ಯವು. ಇಂತಹ ಭಾಗವತ ಶೇಷತ್ವವು ಅನುಕೂಲವಾದುದಾಗಿ ಆಳ್ವಾರುಗಳು ಕೊಂಡಾಡಿರುವದರಿಂದ **ಅಮಲನಾದಿ ಪಿರಾ‌ನ್** ಪ್ರಥಮ ಶ್ಲೋಕವನ್ನು ಉದಾಹರಿಸಿರುತ್ತಾರೆ.—ಆ ಪಾಶುರವು ಹಿಂದೆಯೂ ಉದಾಹರಿಸಲ್ಪಟ್ಟಿರುತ್ತದೆ. ೧೩೭ನೆಯ ಪುಟ ನೋಡಿ. ಅದನ್ನೇ ಉಪಪಾದಿಸುತ್ತಾರೆ.-- **ಶೇಷಿಯುಮಾಯ್** - ಶೇಷಿಯಾಗಿಯೂ, **ಸ್ವತಂತ್ರನುಮಾಗೈಯಾಲೇ** - ಸ್ವತಂತ್ರನಾಗಿಯೂ ಇರುವದರಿಂದ, **ಈಶ್ವರ‍ರ್** – ಸರ್ವವನ್ನೂ ನಿಯಮಿಸುವ ಶಕ್ತಿಯುಳ್ಳ ಸರ್ವೇಶ್ವರನು, **ಇವ್ವಾತ್ಮಾವೈ** - ಈ ಜೀವಾತ್ಮನನ್ನು, **ತನಕ್ಕು ನಲ್ಲಾರಾನ** - ತನಗೆ ಉತ್ತಮರಾಗಿ ಅಭಿಮತರಾಗಿರುವ, **ಅಡಿಯಾರ್ಕ್ಕು** – ತನ್ನ ಪಾದ

---

(೨) ಅಮಲನಾದಿ ೧.

**ಇಷ್ಟ ವಿನಿಯೋಗತ್ತುಕ್ಕು ಪ್ರಾಪ್ತರ್. ಸ್ವತನ್ತ್ರನಾಗೈಯಾಲೇ ಇದುಕ್ಕು ಸಮರ್ಥನ್. (೩) "ಮತ್ತು ವೋರ್ ದೆಯ್ವ ಮುಳದೆನ್ರಿರುಪ್ಪಾರೋಡು**

ವನ್ನಾಶ್ರಯಿಸಿದ ಭಾಗವತರುಗಳಿಗೆ, **ತನ್ನುಕೆಪ್ಪೋಲೇ** - ತನ್ನ ಪ್ರೀತ್ಯನುಸಾರವಾಗಿ, **ಶೇಷಮಾಕ್ಕಿನಾಲ್** - ಶೇಷನನ್ನಾಗಿ ಮಾಡಿದರೆ, **ಇದು** - ಈ ಭಾಗವತ ಪಾರತಂತ್ರ್ಯವು, **ಪ್ರಾಪ್ತಮನ್ರೆನ್ರು ವೊಣ್ಣಾದು** - ಯೋಗ್ಯವಾದುದಲ್ಲವೆಂದು ಭಾವಿಸತಕ್ಕದ್ದಲ್ಲವು. **ವಿಲಕ್ಕೆಮುಮ್ ಒಣ್ಣಾದು** - ಪರತಂತ್ರನಾದುದರಿಂದ ಬೇಡವೆಂದು ತ್ಯಾಗಮಾಡಲೂ ಸಾಧ್ಯವಿಲ್ಲವು. ಪರಮಾತ್ಮನಿಗೆ ಪರತಂತ್ರನಾದುದರಿಂದ, ಆತನು ಭಾಗವತನಿಗೆ ಶೇಷಭೂತನಾಗಿರಬೇಕೆಂದು ಸಙ್ಕಲ್ಪಿಸಿದ ನಂತರ, ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವು; ಆತನ ಆಜ್ಞಾನುಸಾರವಾಗಿ ತಾನು ದಾಸಭೂತನಾದುದರಿಂದ ನಡೆಯಬೇಕಷ್ಟೇ. ಆಗಲಿ, ಭಗವಂತನಾದ ತನಗೆ ದಾಸಭೂತನಾಗಿ ಬಂದಿರುವನನ್ನು ಅನ್ಯಶೇಷನಾಗಿ ನಿಯಮಿಸಬಹುದೋ? ಎಂದರೆ **ಶೇಷಿಯಾಗೈಯಾಲೇ** - ತಾನು ಶೇಷಿಯಾಗಿರುವದರಿಂದ, ಹಿತವನ್ನು ಮಾಡುವದರಲ್ಲೇ ಅಭಿಪ್ರಾಯವುಳ್ಳವನು ಶೇಷಿಯು, ಆದುದರಿಂದ, **ಇಷ್ಟವಿನಿಯೋಗತ್ತುಕ್ಕು** - ತನ್ನ ಇಷ್ಟಾನುಸಾರ ಸ್ವತಂತ್ರಿಸಿ ಉಪಯೋಗಿಸಿಕೊಳ್ಳುವದಕ್ಕೆ, **ಪ್ರಾಪ್ತರ್** - ಅರ್ಹತೆ ಇರುವವನು; **ಸ್ವತಂತ್ರನಾಗೈಯಾಲೇ** - ಸ್ವತಂತ್ರನಾದುದರಿಂದ, **ಇದುಕ್ಕು ಸಮರ್ಥನ್**-ಹೀಗೆ ಭಾಗವತ ಶೇಷನಾಗಿರುವ ಹಾಗೆ ಮಾಡುವುದಕ್ಕೂ ಸಾಮರ್ಥ್ಯವುಳ್ಳವನು.ಹೀಗೆ ಸಾಮರ್ಥ್ಯವುಳ್ಳವನಾದುದರಿಂದ ಅಯೋಗ್ಯರ ವಶಮಾಡಿ ಕ್ಲೇಶಪಡಿಸುವ ಸಾಮರ್ಥ್ಯವುಳ್ಳವನೆಂದು ಭಾವಿಸತಕ್ಕದ್ದಲ್ಲವು. ತನ್ನನ್ನು ಆಶ್ರಯಿಸಿದವನನ್ನು ಹೀಗೆ ಎಂದಿಗೂ ನೋಯಿಸತಕ್ಕವನಲ್ಲವು; ಈ ಸಾಮರ್ಥ್ಯವು ಹಿತವನ್ನುಂಟುಮಾಡುವದರಲ್ಲೇ ಪ್ರವರ್ತಿಸತಕ್ಕದ್ದೇ ವಿನಾ, ಮನ ಬಂದಂತೆ ಪ್ರಾತಿಕೂಲ್ಯತೆಯನ್ನುಂಟುಮಾಡುವದರಲ್ಲಿಲ್ಲವು. ಒಬ್ಬನಿಗೆ ಹಿತವನ್ನೂ ಇನ್ನೊಬ್ಬನಿಗೆ ಅಹಿತವನ್ನೂ ತನ್ನ ಸ್ವಾತಂತ್ರ್ಯದಿಂದ ಉಂಟುಮಾಡಿದರೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳಿಗೆ ಗುರಿಯಾಗುವನು. ಇಂತಹ ದೋಷಕ್ಕೆ ಅವಕಾಶವಿಲ್ಲದಂತೆ ನಡೆಯುವ ಸ್ವಾತಂತ್ರ್ಯ ಸಾಮರ್ಥ್ಯಗಳನ್ನುಳ್ಳವನೆಂದು ಭಾವಿಸತಕ್ಕದ್ದು. ಪ್ರಪನ್ನನನ್ನು ಕಾಪಾಡುವದರಲ್ಲೇ ತನ್ನ ಸ್ವಾತಂತ್ರ್ಯ ಸಾಮರ್ಥ್ಯಗಳನ್ನು ಉಪಯೋಗಿಸುವನೇ ವಿನಾ ಅನ್ಯಥಾ ಇಲ್ಲವೆಂಬ ತಾತ್ಪರ್ಯವು. ಆದುದರಿಂದಲೇ ಇದುಕ್ಕೊ ಸಮರ್ಥನ್ ಎಂಬ ಪ್ರಯೋಗವು. ಆಶ್ರಯಿಸಿದವನನ್ನು ಕೈ ಬಿಡಲು ಪೂರಾ ಅಸಮರ್ಥನೇ? ಏಕೆಂದರೆ ಪ್ರಪನ್ನನನ್ನು "ನತ್ಯಜೇಯಂ ಕಥಂಚನ" (ರಾ. ಯುದ್ಧ, ೧೮-೩) ಎಂದು ಹೇಳಿದ ಕರುಣಾಸಾಗರನು ಆತನು.

**ತ್ತಿಲೇನುತ್ತದು ಮುನ್ನಡಿಯಾರ್ಕಡಿನ್ಮೈ" ಎಜ್ಗಿರ ಪಾಟ್ಟಿಲುಮ್ ಇನ್ನರ್ಥಮ್ ಕಂಡುಕೊಳ್ವದು.**

---

ಮುಂದೆ ಶ್ರೀ ತಿರುಮಂಗೈಯಾಳ್ವಾರ್ರವರ ಪಾಶುರವನ್ನು ಈ ಅರ್ಥದಲ್ಲೇ ಉದಾಹರಿಸುತ್ತಾರೆ. ಈ ಪಾಶುರವು ಹಿಂದೆ ಎರಡು ಸಲ ಪರದೇವತಾ ಪಾರಮಾರ್ಥ್ಯಾಧಿಕಾರದಲ್ಲೂ, ಪುರುಷಾರ್ಥ ಕಾಷ್ಠಾಧಿಕಾರದಲ್ಲೂ ಉದಾಹರಿಸಲ್ಪಟ್ಟಿರುತ್ತದೆ. ೭೨೭ ಮತ್ತು ೧೩೬೯ನೆಯ ಪುಟಗಳನ್ನು ಪರಾಂಬರಿಸಿ, **"ಮತ್ತುಮೋರ್ ದೆಯ್ವಮ್" ಎಜ್ಗುರೆಪಾಟ್ಟಿಲುಮ್** - ಎಂಬ ಪಾಶುರದಲ್ಲೂ, **ಇನ್ನರ್ಥಮ್** - ಭಗವಚ್ಛೇಷತ್ವವು ಭಾಗವತ ಶೇಷತ್ವದವರೆಗೂ ಉಂಟೆಂಬುದು, **ಕಂಡುಕೊಳ್ವದು** - ತಿಳಿದುಕೊಳ್ಳತಕ್ಕದ್ದು. ಭಗವಚ್ಛೇಷಭೂತನಾಗಿರುವದರಿಂದ ಭಗವಂತನಿಗೆ ಭಾಗವತಶೇಷಭೂತನಾಗಿರುವದು ತುಂಬಾ ಇಷ್ಟವೆಂಬುದಕ್ಕೆ ಹಿಂದೆ ಪುರುಷಾರ್ಥಕಾಷ್ಠಾಧಿಕಾರದಲ್ಲಿ ಕೆಲವು ಪ್ರಮಾಣಗಳನ್ನು ಉದಾಹರಿಸಿರುತ್ತಾರೆ.—ಅವುಗಳು ಇಲ್ಲಿ ಅನುಸಂಧೇಯಗಳು.

**"ಆರಾಧನಾನಾಂ ಸರ್ವೇಷಾಂ ವಿಷ್ಣೋರಾರಾಧನಂ ಪರಮ್ ।**
**ತಸ್ಮಾತ್ಪರತರಂಪ್ರೋಕ್ತಂ ತದೀಯಾರಾಧನಂ ಪರಮ್"** (ಪಾದ್ಮೋ.೨೯.೮೧)

"ಮಮ ಮದ್ಭಕ್ತ ಭಕ್ತೇಷು ಪ್ರೀತಿರಭ್ಯಧಿಕಾ ಭವೇತ್ ।
ತಸ್ಮಾನ್ಮದ್ಭಕ್ತ ಭಕ್ತಾಶ್ಚ ಪೂಜನೀಯಾ ವಿಶೇಷತಃ" (ಭಾರತ)

**"ಮದ್ಭಕ್ತ ಜನವಾತ್ಸಲ್ಯಂ ಪೂಜಾಯಾಂ ಚಾನುಮೋದನಮ್"** ಅವು ೮ ವಿಧ ಭಕ್ತಿಗಳಲ್ಲಿ ಸೇರಿಸಲ್ಪಟ್ಟಿವೆ." **"ಶ್ರೀಮದ್ಭಾಗವತಾರ್ಚನಂ ಭಗವತಃ ಪೂಜಾವಿಧೇರುತ್ತಮಮ್"** ಇತ್ಯಾದಿಗಳು. ಭಾಗವತ ಶೇಷತ್ವದ ಮಾಹಾತ್ಮ್ಯೆಯನ್ನು ಶತ್ರುಘ್ನ ಪ್ರವೃತ್ತಿಯಿಂದ ತಿಳಿಯಬಹುದು. ಶ್ರೀ ರಾಮಚಂದ್ರನೇ, ವಿಶ್ವಾಮಿತ್ರ ಭಾರದ್ವಾಜ ಅಗಸ್ತ್ಯಾದಿ ಮಹರ್ಷಿಗಳಲ್ಲಿ ತೋರಿದ ಶೇಷಭಾವವೇ ಭಾಗವತ ಶೇಷತ್ವದ ಮಹಿಮೆಯನ್ನು ಪ್ರಕಟಿಸುತ್ತದೆ. ಶ್ರೀಕೃಷ್ಣನು ತಮ್ಮ ಆಚಾರ್ಯರಾದ ಸಾಂದೀಪನಿಯವರಲ್ಲಿ ಮಾಡಿದ ಗುರುಕುಲವಾಸದಿಂದಲೂ, ಮಹಾಭಾಗವತೋತ್ತಮರಾದ ಕುಚೇಲರಿಗೆ ಮಾಡಿದ ಕೈಙ್ಕರ್ಯದಿಂದಲೂ, ಧರ್ಮರಾಜನ ರಾಜಸೂಯಯಾಗಕಾಲದಲ್ಲಿ ಮಾಡಿದ ಕೈಙ್ಕರ್ಯದಿಂದಲೂ ಭಾಗವತ ಶೇಷಿತ್ವವು ಪ್ರಕಟಿತವು. ರುಕ್ಮಿಣಿಯು ಪತ್ರ ಬರೆದು ಕಳುಹಿಸಿಕೊಟ್ಟ ಬ್ರಾಹ್ಮಣನಿಗೆ ಶ್ರೀ ಕೃಷ್ಣನು ಕಾಲನ್ನು ಒತ್ತಿದರೆಂಬ **"ಪಾಣಿನಾಭಿಸ್ಪೃಶ್ಯ ಪಾದೌ"** (ಭಾಗ ೧೦.೫೨.೨೯) ಪ್ರಯೋಗವಿರುತ್ತದೆ. ಹೀಗೆ ತಾನೇ ಭಾಗವತ ಶೇಷಿತ್ವವನ್ನು ಪ್ರಕಟಿಸಿದ ನಂತರ ನಾವೂ ಹಾಗೆಯೇ ನಡೆಯತಕ್ಕದ್ದೆಂಬುದು ಕೈಮುತಿಕ ನ್ಯಾಯಸಿದ್ಧವು. ತಾನೇ **"ಅಹಂ ಭಕ್ತ ಪರಾಧೀನಃ"** ಎಂದು ಹೇಳಿ

ಕಾ. ಸ್ವೇಚ್ಛಯೈವ ಪರೇಶಸ್ಯ ತಾದಧೀನ್ಯ ಬಲಾತ್ತು ನಃ ।
ಭಗವದ್ಭಕ್ತಶೇಷತ್ವಂ ಸ್ವೇಚ್ಛಯಾಪಿ ಕ್ವಚಿದ್ಭವೇತ್ ॥ ೭೧ ॥
ಗುಣಾಧಿಕೇ ಹಿ ವಿಷಯೇ ಗುಣಸಾರಸ್ಯ ವೇದಿನಃ ।
ರಾಮೇ ರಾಮಾನುಜಸ್ಯೇವ ದಾಸ್ಯಂ ಗುಣಕೃತಂ ಭವೇತ್ ॥ ೭೨ ॥

---

ಕೊಂಡ ನಂತರ ನಾವೂ ಭಕ್ತಪರಾಧೀನರೆಂದು ಹೇಳಿಕೊಳ್ಳುವದು ಕೈಮುತಿಕ ನ್ಯಾಯ ಸಿದ್ಧವು.

ಹಿಂದೆ ಪ್ರಣವ ನಮಸ್ಸುಗಳ ಮೂಲಕ ಈ ಚೇತನನಿಗೆ ಭಗವಚ್ಛೇಷತ್ವವೂ ಪಾರತಂತ್ರ್ಯವೂ ಸ್ಥಾಪಿಸಲ್ಪಟ್ಟವು. ಆದರಿಂದ ಭಾಗವತಶೇಷತ್ವವೂ ಪಾರತಂತ್ರ್ಯವೂ ಅರ್ಥವಾಗಿ ಸ್ಥಾಪಿತವೆಂದು ಪ್ರತಿಪಾದಿಸಲ್ಪಟ್ಟಿತು. ಈ ಭಾಗವತಶೇಷತ್ವಪಾರತಂತ್ರ್ಯಗಳು ಭಗವಂತನ ಸ್ವಾತಂತ್ರ್ಯ ಮೂಲಕವಾಗಿ ತನಗೆ ಶೇಷಭೂತನಾದವನನ್ನು ತನ್ನಿಷ್ಟಾನುಸಾರ ಭಗವಂತನು ನಿಯಮಿಸಲು ಅರ್ಹನಾದುದರಿಂದ ಉಂಟಾದವೆಂದೂ ಹೇಳಲ್ಪಟ್ಟವು. ಅನಂತರ ಭಗವಂತನೇ ಸ್ವೇಚ್ಛೆಯಿಂದ ಭಾಗವತ ಪಾರತಂತ್ರ್ಯವನ್ನು ಪ್ರಕಟಿಸದನಂತರ ಈಚೇತನನಿಗೆ ಅದು ಕೈಮುತಿಕನ್ಯಾಯಸಿದ್ಧವೆಂದೂ ಹೇಳಲ್ಪಟ್ಟಿತು. ಆದುದರಿಂದ ಭಾಗವತರುಗಳು ಪರಸ್ಪರ ಶೇಷ ಶೇಷಿಭಾವವುಳ್ಳವರಾಗುತ್ತಾರೆ. ಇದರಿಂದ ತಾರ್ಕಿಕರ ಅನ್ಯೋನ್ಯಾಶ್ರಯ ದೋಷವೇನೂ ಇಲ್ಲವು. ಈ ಅರ್ಥಗಳನ್ನೆಲ್ಲಾ ಮುಂದೆ ಕಾರಿಕೆಗಳ ಮೂಲಕವಾಗಿ ಸದೃಷ್ಟಾನ್ತವಾಗಿ ತಿಳಿಯಪಡಿಸುತ್ತಾರೆ. **ಪರೇಶಸ್ಯ** - ಬ್ರಹ್ಮರುದ್ರೇಂದ್ರ ಲೋಕಪಾಲಕರಿಗೂ ಕೂಡ ಸ್ವಾಮಿಯಾಗಿ ನಿಯಾಮಕನಾಗಿರುವ ಭಗವಂತನ, **ಸ್ವೇಚ್ಛಯೈವ** - ಸ್ವಕೀಯವಾದ ಇಷ್ಟದಿಂದಲೇ, **ನಃ ತು** - ನಮಗಾದರೋ, - **ಭಗವದ್ಭಕ್ತಶೇಷತ್ವಂ** - ಭಾಗವತ ಶೇಷತ್ವವು, **ತಾದಧೀನ್ಯ ಬಲಾತ್** - ಭಗವಂತನಿಗೆ ಪರತಂತ್ರರಾಗಿರುವವರ ಬಲದಿಂದಲೇ, **ಭವೇತ್** - ಉಂಟಾಗುತ್ತದೆ, **ಕ್ವಚಿತ್** - ಕೆಲವರಿಗಾದರೋ, **ಸ್ವೇಚ್ಛಯಾ** - ಆ ಭಾಗವತರಲ್ಲಿ ತೋರಿಬಂದ, ಗುಣಾಧಿಕ್ಯ ಮಹಿಮೆಯ ಮೂಲಕವಾಗಿ, ಪ್ರಸನ್ನರ ಸ್ವಂತವಾದ ಇಷ್ಟಾನುಸಾರವಾಗಿಯೂ ಉಂಟಾಗಬಹುದು. ಅಭಿಪ್ರಾಯವೇನೆಂದರೆ— ನಾವು ಭಗವಂತನಿಗೆ ಸಂಪೂರ್ಣ ಪಾರತಂತ್ರ್ಯವುಳ್ಳವರು; ತನಗೆ ಶೇಷಭೂತರಾಗಿರುವರು ತನ್ನವರಾದ ಭಾಗವತರಿಗೂ ಶೇಷಭೂತರೆಂದು ಆತನೇ ಸಙ್ಕಲ್ಪಿಸಿರುವದರಿಂದ ಆ ಬಲದಿಂದಲೇ ಭಾಗವತ ಶೇಷತ್ವವುಂಟೆಂದು ನಾವಾದರೋ ಭಾವಿಸುತ್ತೇವೆ; ಇದರಿಂದ ಅತ್ಯನ್ತ ಭಗವತ್ಪಾರತಂತ್ರ್ಯ ಮೂಲಕವಾಗಿ ಬಂದುದು ಎಂಬ ಭಾವವು. ಇನ್ನು ಕೆಲವರು ಮಹಾಭಾಗವತರುಗಳಲ್ಲಿ ಗುಣಗಳ ಮಹಿಮೆಯನ್ನು ಕಂಡು ಪರವಶರಾಗಿ ತಮ್ಮ ಇಚ್ಛೆಯಿಂದಲೇ ಭಾಗವತ ಶೇಷತ್ವವನ್ನು ಸ್ವೀಕರಿಸಿರುತ್ತಾರೆಂಬ ಭಾವವು.

ಇದನ್ನೇ ಮುಂದಿನ ಕಾರಿಕೆಯಲ್ಲಿ ವಿಶದೀಕರಿಸುತ್ತಾರೆ.—ಹೇಗೆಂದರೆ—ಹಿ - ಯಾವ ಕಾರಣದಿಂದ, **ಗುಣಾಧಿಕೇವಿಷಯೇ** - ವಿಶೇಷ ಗುಣಗಳನ್ನು ಹೊಂದಿದ ಭಾಗವತನ ವಿಷಯದಲ್ಲಿ, **ಗುಣಸಾರಸ್ಯ ವೇದಿನಃ** - ಗುಣದ ಮಹಿಮೆಯನ್ನು ಅರಿತವನ, **ದಾಸ್ಯಂ** - ಶೇಷತ್ವವು, **ಗುಣಕೃತಂ** - ಕಲ್ಯಾಣಗುಣಗಳ ಮೂಲಕ ವಾದುದು, **ಭವೇತ್**-ಆಗುತ್ತದೋ, ಹಾಗೆ, ತನ್ನ ಇಷ್ಟಾನುಸಾರ ಅಂತಹ ಭಾಗವತನಿಗೆ ಶೇಷತ್ವವು ಉಂಟಾಗುತ್ತದೆಂಬ ಭಾವವು. ಇದಕ್ಕೆ ಒಂದು ಸಮೀಚೀನವಾದ ದೃಷ್ಟಾಂತವನ್ನು ಕೊಟ್ಟು ಉಪಪಾದಿಸುತ್ತಾರೆ.—**ರಾಮೇ** - ಶ್ರೀರಾಮನ ವಿಷಯದಲ್ಲಿ, **ರಾಮಾನುಜಸ್ಯೇವ** - ಆತನ ತಮ್ಮನಾದ ಲಕ್ಷ್ಮಣನಿಗೆ ಹೇಗೆ ಪಾರತಂತ್ರ್ಯಾದಿಗಳು ಪ್ರಾಪ್ತವಾಯಿತೋ ಹಾಗೆ ಎಂಬ ಭಾವವು. ಭಾಗವತ ಶೇಷತ್ವವು (೧) ಪರಮಾತ್ಮನಿಗೆ ತಾನು ಅತ್ಯಂತ ಪರತಂತ್ರನು ಎಂಬ ಜ್ಞಾನದ ಮೂಲಕ ಪರಮಾತ್ಮ ಸಂಕಲ್ಪಾಯತ್ತವಾದುದೆಂಬ ಭಾವನೆಯು, ಅಥವಾ (೨) ಭಾಗವತನಲ್ಲಿಯೇ ತಾನು ಗುಣವಿಶೇಷ ಮಹಿಮೆಯನ್ನು ಕಂಡು ಸ್ವಸಙ್ಕಲ್ಪ ಮೂಲಕವಾಗಿ ಉಂಟಾಗೋಣವು. ಈ ಎರಡನೆಯ ಸ್ವಸಙ್ಕಲ್ಪವೂ ಸಹ ಭಗವದಧೀನವೆಂದು "**ಪರಾತ್ತು ತಚ್ಛ್ರುತೇಃ**" ಎಂಬಲ್ಲಿ ಹೇಳಲ್ಪಡಲಿಲ್ಲವೇ ಎಂದರೆ, ಅಲ್ಲಿ ಹೇಳಿದ ಸಮಾಧಾನವನ್ನು ಇಲ್ಲಿಯೂ ಜ್ಞಾಪಿಸುವೆವು; ಪ್ರಥಮ ಸಙ್ಕಲ್ಪದಲ್ಲಿ ಎಲ್ಲಾ ಪ್ರವೃತ್ತಿಗಳಲ್ಲೂ ಭಗವಂತನು ಈ ಚೇತನನನ್ನು ಸ್ವತಂತ್ರನಾಗಿ ಬಿಟ್ಟುಬಿಡುವದರಿಂದ ಏನೊಂದೂ ವಿರೋಧವಿಲ್ಲವು. ಇದನ್ನು ಮನಸ್ಸಿನಲ್ಲಿಟ್ಟೇ ಶ್ರೀನಿಗಮಾನ್ತ ದೇಶಿಕರವರು **ಸ್ವೇಚ್ಛಯಾಪಿ ಕ್ವಚಿದ್ಭವೇತ್**, ಎಂದು ಹೇಳಿದರು. ಹೀಗೆ ಭಾಗವತ ಶೇಷತ್ವವು ಎರಡು ವಿಧವಾಗಿ ಪ್ರಾಪ್ತವಾಗಬಹುದು. ಈ ಎರಡು ವಿಧ ಭಾಗವತ ಶೇಷತ್ವವೂ, ಲಕ್ಷ್ಮಣನು ಶ್ರೀ ರಾಮನಲ್ಲಿ ತೋರಿಸಿದ ಶೇಷತ್ವದಲ್ಲಿ ತೋರಿಬರುತ್ತದೆಂಬುದು ಲಕ್ಷ್ಮಣೋಕ್ತಿಯಿಂದಲೇ ವ್ಯಕ್ತವು. ಅದು ಯಾವುದೆಂದರೆ—"**ಅಹ ಮಸ್ಯಾವರೋ ಭ್ರಾತಾ ಗುಣೈ ರ್ದಾಸ್ಯ ಮುಪಾಗತಃ**"(ರಾ. ) ನಾನು ಶ್ರೀ ರಾಮನಿಗೆ ಸ್ವಾಮಿಸಙ್ಕಲ್ಪಾಯತ್ತವಾಗಿ ತಮ್ಮನಾಗಿ ಜನಿಸಿರುವದರಿಂದ ಸ್ವಾಮಿಸಙ್ಕಲ್ಪಾಯತ್ತವಾಗಿಯೇ ದಾಸ್ಯವು ಎಂದರೆ ಭಾಗವತ ಶೇಷತ್ವ ಉಂಟಾಯಿತು; "**ಜ್ಯೇಷ್ಠಭ್ರಾತಾ ಪಿತೃಸಮಃ**" ಎಂದು ಅಣ್ಣನನ್ನು ಶೇಷಿಯಾಗಿ ಭಾವಿಸಿ ತಾನು ಶೇಷನಾಗಿರುವದು ಈಶ್ವರ ಸಙ್ಕಲ್ಪಾಯತ್ತವಾದುದು. ಇಷ್ಟೇ ಅಲ್ಲವು. ಆತನಲ್ಲಿ ಅನೋಘಗಳಾದ ಕಲ್ಯಾಣ ಗುಣಗಳು "**ಬಹವೋ ನೃಪಕಲ್ಯಾಣಗುಣಾಃ ಪುತ್ರಸ್ಯ ಸನ್ತಿ ತೇ**" (ರಾ. ಅಯೋಧ್ಯಾ.೨.೨೬) ಎಂಬಲ್ಲೂ "**ಗುಣೈರ್ವಿರುರುಚೇರಾಮಃ**" (ರಾ. ಅಯೋಧ್ಯಾ ೨. ೪೩) ಎಂಬಲ್ಲೂ ಹೇಳಿರುವ ಹಾಗೆ, ಇರುವದನ್ನು ಕಂಡು, **ಗುಣೈಃ ದಾಸ್ಯಮುಪಾಗತಃ** - ಅಂತಹ ಗುಣಗಳಿಗೆ ಪರವಶನಾಗಿ ದಾಸ್ಯವನ್ನು ಕೈಕೊಂಡಿರುತ್ತೇನೆಂದು ಹೇಳಿಕೊಂಡಿರು

೮೨. ದಾಸ್ಯಮೈಶ್ವರ್ಯ ಯೋಗೇನ ಜ್ಞಾತೀನಾಂಚ ಕರೋಮ್ಯಹಮ್ ।
ಅರ್ಧಭೋಕ್ತಾಚ ಭೋಕ್ತೃನಾಂ ವಾಗ್ದುರುಕ್ತಾನಿ ಚ ಕ್ಷಮೇ ॥೭೪॥
ಇತಿ ಸ್ವೋಕ್ತಿ ನಯಾದೇವ ಸ್ವಭಕ್ತ ವಿಷಯೇ ವಿಭುಃ ।
ಆತ್ಮಾತ್ಮೀಯಸ್ಯ ಸರ್ವಸ್ಯ ಸಙ್ಕಲ್ಪಯತಿ ಶೇಷತಾಮ್ ॥ ೭೫ ॥

---

ತ್ತಾನೆ. ಆದುದರಿಂದ ಲಕ್ಷ್ಮಣನು ಈ ಎರಡು ವಿಧವಾಗಿಯೂ ಭಾಗವತ ಶೇಷತ್ವವನ್ನು ತಾನು ಅಙ್ಗೀಕರಿಸಿರುತ್ತೇನೆಂದು ಹೇಳಿಕೊಂಡಿರುತ್ತಾನೆಂಬುದು ಮಹರ್ಷಿವಾಕ್ಯದಿಂದ ತೋರಿಬರುತ್ತದೆ. ಶ್ರೀ ರಾಮಚಂದ್ರ ಪ್ರಭುವು ಪರತತ್ವವಾಗಿರುವಾಗ ಭಗವಚ್ಛೇಷತ್ವಕ್ಕೆ ಉದಾಹರಣೆಯಾಯಿತು; ಭಾಗವತ ಶೇಷತ್ವಕ್ಕೆ ಉದಾಹರಣೆಯು ಹೇಗೆ? ಎಂದಾಕ್ಷೇಪಿಸಿದರೆ ಲೋಕವಿಡಂಬನಾರ್ಥವಾಗಿ ಮಾನುಷಾವತಾರಿಯಾದುದರಿಂದ ಭಾಗವತ ಭಾವನೆಯು ಕೂಡುತ್ತದೆ. ನಿದರ್ಶನಾಕಾಙ್ಕ್ಷೆಗಲ್ಲವೇ ಲಕ್ಷ್ಮಣ ವೃತ್ತಾಂತವು. ಶ್ರೀಮದ್ರಾಮಾಯಣದಲ್ಲಿ ಅದಕ್ಕೂ ಉದಾಹರಣೆಯುಂಟೆಂಬುದನ್ನು ಶತ್ರುಘ್ನ ವೃತ್ತಾಂತದಿಂದ ತಿಳಿಯಬಹುದು. ಹಿಂದೆ ಭಗವಂತನೇ ಭಾಗವತನಿಗೆ ಪರತನ್ತ್ರನೆಂದು "ಅಹಂಭಕ್ತಪರಾಧೀನಃ" "ಶಾಸನಂ ಕರವಾವಕಿಮ್" ಇತ್ಯಾದಿ ಸ್ವೋಕ್ತಿಗಳಿಂದಲೇ ಸಿದ್ಧವಾಗಿರುವಾಗ, ಮನುಷ್ಯನಾದ ಚೇತನನಿಗೆ ಭಾಗವತ ಶೇಷತ್ವವು ಕೈಮುತಿಕನ್ಯಾಯಸಿದ್ಧವೆಂದು ಹಿಂದೆ ಹೇಳಲ್ಪಟ್ಟ ಅಭಿಪ್ರಾಯಕ್ಕೆ ಶ್ರೀ ಕೃಷ್ಣ ಭಗವಾನ್‌ರವರ ವಾಕ್ಯವನ್ನುದಾಹರಿಸಿ ಮುಂದಿನ ಕಾರಿಕೆಗಳ ಮೂಲಕ ಉಪಪಾದಿಸುತ್ತಾರೆ.—

**ಐಶ್ವರ್ಯಯೋಗೇನ** - ನಾನು ಈಶ್ವರನಾಗಿರುವ ಭಾವದ ಸಂಬಂಧದಿಂದ ಎಂದರೆ ಸ್ವಾತಂತ್ರ್ಯದಿಂದ, ಸ್ವಾತಂತ್ರ್ಯವು ಈಶ್ವರನ ಭಾವವು, ಅದರ ಯೋಗದಿಂದ ಎಂದರೆ ಸ್ವಾತಂತ್ರ್ಯದಿಂದ, **ಅಹಮ್** - ಸ್ವಜನರಾದ ಬಂಧುಗಳ ಮತ್ತು ಭಕ್ತಪ್ರಪನ್ನರ ವಿಷಯದಲ್ಲಿ ದಯಾರ್ದ್ರ ಹೃದಯನಾದ ನಾನು, **ಜ್ಞಾತೀನಾಂಚ** - ಸಾಧಾರಣರಾದ ಬಂಧುಗಳಿಗೂ ಕೂಡ, **ದಾಸ್ಯಂ** - ದಾಸವೃತ್ತಿಯನ್ನು, **ಕರೋಮಿ** - ಮಾಡುವೆನು; ಚಕಾರ ಸ್ವಾರಸ್ಯದಿಂದ ಕೇವಲ ಬಂಧುಗಳಿಗೇನೇ ಮಾಡುವೆನು ಎಂದು ಹೇಳಿರುವದರಿಂದ ಇನ್ನು ಭಕ್ತ ಪ್ರಪನ್ನರ ವಿಷಯದಲ್ಲಿ ದಾಸ್ಯವನ್ನು ಮಾಡುತ್ತೇನೆಂಬುದು ಕೈಮುತಿಕ ನ್ಯಾಯಸಿದ್ಧವು. **ಸ್ವಜನಸ್ಯಚರಕ್ಷತಾ** ಎಂದು ಹೇಳಿರುವ ಹಾಗೆ ಆ **ದಾಸ್ಯಂ** ಎಂತಾದ್ದು ಎಂದರೆ ಸ್ವಜನರಕ್ಷಣೋಪಯುಕ್ತವಾದುದೇ; ಸ್ವಜನರು ಯಾರು ಎಂದರೆ ಅವತಾರ ಕಾಲದಲ್ಲಿ ಬಂಧುಗಳಾದವರು; ಆದರೆ ಅವರು ಸಾಧುಕಾರಿಗಳಾಗಿಬೇಕು; ಪಾಂಡವರೂ, ಉಗ್ರಸೇನನೂ, ವಿದುರನೂ, ಉದ್ಧವರೂ, ಇವರೆಲ್ಲರೂ ಸ್ವಜನರಾಗಿ ರಕ್ಷಿಸಲ್ಪಟ್ಟವರು: ಹಾಗೆಯೇ ದಶರಥ, ಗುಹ, ಜಟಾಯುಗಳಿಗೂ ಹಿತಕರಣರೂಪ ದಾಸ್ಯವನ್ನು ಎಸಗಿರುತ್ತಾರೆ. ಆದರೆ

ಕಂಸ, ದುರ್ಯೋಧನಾದಿಗಳು ಪಾಪಕಾರಿಗಳಾದುದರಿಂದ ಬಂಧುಗಳಾಗಿದ್ದರೂ ಅವರ ವಿಷಯದಲ್ಲಿ ದಾಸ್ಯವಿಲ್ಲವು. ರಾಮಾವತಾರದ ಋಷಿಗಳೆಲ್ಲಾ ಪ್ರಪನ್ನರಾಗಿ ಸ್ವಜನರೇ. ಆದುದರಿಂದ ಅವರೆಲ್ಲರೂ "ಗರ್ಭಭೂತಾಸ್ತಪೋಧನಾಃ". ಎಂದು ಹೇಳಲ್ಪಟ್ಟಿತು. ವಿಶ್ವಾಮಿತ್ರಮಹರ್ಷಿಯನ್ನು ಕುರಿತು, ಇಮೌಸ್ಮಮುನಿಶಾರ್ದೂಲ ಕಿಂಕರೌಸಮುಪಸ್ಥಿತೌ । ಆಜ್ಞಾಪಯ ಯಥೇಷ್ಟಂವೈಶಾಸನಂ ಕರವಾವ ಕಿಮ್. (ಬಾಲ. ) ಎಂದು ಶ್ರೀರಾಮಚಂದ್ರ ಪ್ರಭುವು ಹೇಳಿರುತ್ತಾರೆ; ಅವರು ಮುನಿಶ್ರೇಷ್ಠರಾಗಿ ಸ್ವಜನವರ್ಗಕ್ಕೆ ಸೇರಿದವರಾದುದರಿಂದಲೇ ಅವರನ್ನು ಗುರುವಾಗಿ ಭಾವಿಸಿ ಆಜ್ಞಾಪ್ರತೀಕ್ಷೆಯಲ್ಲಿರುವ ಹಾಗೆ ಭಾವಿಸಿರುತ್ತಾರೆ, ಕಿಂಕರೌ ಎಂದು ಹೇಳಿಕೊಂಡಿರುವದರಿಂದ ಭಕ್ತಪ್ರಪನ್ನರಿಗೆ ಅಧೀನನಾಗಿ ದಾಸ್ಯಮಾಡುವದಕ್ಕಾಗಿಯೇ ರಾಮಲಕ್ಷ್ಮಣರಾದ ತಾವು ಇರುವದು ಎಂದು ಹೇಳಿಕೊಂಡಿರುತ್ತಾರೆ ; ಸಮುಪಸ್ಥಿತೌ - ಅಂತಹ ಪ್ರಪನ್ನರು ಎಲ್ಲಿ ಅಪೇಕ್ಷಿಸುತ್ತಾರೋ ಅವರಿಗೆ ಅಭಿಮುಖವಾಗಿಯೇ ಬಂದು ನಿಲ್ಲತಕ್ಕವರು; ಇದಕ್ಕೆ ಧ್ರುವಗಜೇಂದ್ರರ ವೃತ್ತಾಂತಗಳೇ ನಿದರ್ಶನಗಳು. ಹಾಗೆಯೇ ದ್ರೌಪದಿಯು ಕಷ್ಟಕ್ಕೆ ಸಿಲುಕಿ "ಹಾ ಕೃಷ್ಣ ದ್ವಾರಕಾವಾಸ" ಎಂದು ಕೂಗಿದಾಗ ದೂರವಾಸಿಯಾಗಿದ್ದುಬಿಟ್ಟೆನೇ ಎಂದು ಪರಿತಾಪಪಟ್ಟು ಆಕೆಯ ದುಃಖವನ್ನು ಶ್ರೀಕೃಷ್ಣಭಗವಾನರು ಹೋಗಲಾಡಿಸಿರುತ್ತಾರೆ. ಶ್ರೀಭೀಷ್ಮರು "ಶರತಲ್ಪಗತೋ ಭೀಷ್ಮಶ್ಶಾಮ್ಯನ್ನಿವ ಹುತಾಶನಃ। ಮಾಂ ಧ್ಯಾತಿ ಪುರುಷವ್ಯಾಘ್ರ ಸ್ತತೋ ಮೇತದ್ಗತಂಮನಃ" ಶರತಲ್ಪದಲ್ಲಿದ್ದು ಭೀಷ್ಮರು ನನ್ನನ್ನು ಜ್ಞಾಪಿಸಿಕೊಂಡರೆಂದು ಸ್ವಾಮಿಯು ಎದುರಿಗೆಸೇವೆಯನ್ನಿತ್ತರು. ಶ್ರೀಭರತಾಳ್ವಾರ್ರವರೂ ೧೪ ವರುಷ ವನವಾಸವು ಕಳೆಯುತ್ತಾಬಂತೇ, ಶ್ರೀರಾಮಚಂದ್ರ ಪ್ರಭುವು ಬರಲಿಲ್ಲವೇ ಎಂದು ಎಲ್ಲಿ ಖೇದವನ್ನು ಹೊಂದುತ್ತಾರೋ ಎಂದು ಭಾವಿಸಿ, "ಶಿರಸಾ ಯಾಚಿತ ಸ್ತಸ್ಯ ವಚನಂ ನಕೃತಂ ಮಯಾ" ತಲೆಬಗ್ಗಿ ನಮಸ್ಕರಿಸಿದ ಭಕ್ತಾಗ್ರೇಸರನಾದ ಭರತನ ಪ್ರಾರ್ಥನೆಯನ್ನು ನಡೆಸಿಕೊಡಲಿಲ್ಲವೇ ಎಂದು ಶ್ರೀರಾಮನು ಹೇಳಿ, ವಿಭೀಷಣನು ಒಂದು ದಿನ ಲಂಕೆಯಲ್ಲಿದ್ದು ವಿಶ್ರಮಿಸಿಕೊಂಡು ಹೋಗಬೇಕೆಂದು ವಿಶೇಷ ಪ್ರಾರ್ಥಿಸಿದರೂ ಕೇಳದೆ, ತ್ವರೆಯಿಂದ ಪುಷ್ಪಕವಿಮಾನವನ್ನೇರಿ ನಂದಿಗ್ರಾಮಕ್ಕೆ ಹೊರಟುಹೋಗಿರುತ್ತಾರೆ. ಹೀಗೆ ಇವರಿಗೆಲ್ಲಾ ತಮ್ಮ ಶೇಷಭಾವವನ್ನು ಪ್ರದರ್ಶಿಸಿರುತ್ತಾರೆ. ಇಂತಹ ಕೃಪಾಸಾಗರನು ಮುಂದೆ ಹೇಳುತ್ತಾನೆ.—ನಾವಿಬ್ಬರೂ ಎದುರಿಗೆ ಬಂದು ದಾಸ್ಯಮಾಡುವದಕ್ಕಾಗಿ ನಿಂತಿದ್ದೇವೆ ಏನು ಅಪ್ಪಣೆ ಎಂದು ಕೇಳುತ್ತಾರೆ; ಯಾವಾಗ ಪ್ರಪನ್ನನು ತನ್ನ ಆಜ್ಞೆಗಳಾದ ಶಾಸ್ತ್ರಗಳನ್ನು ಅಭಿಮಾನಿಸಿ ತನ್ನನ್ನು ಆಶ್ರಯಿಸಿದನೋ, ಅಂತಹ ಪ್ರಪನ್ನನ ಕೋರಿಕೆಗಳೆಲ್ಲಾ ತನಗೆ ಆಜ್ಞಾಕೈಂಕರ್ಯಗಳಾಗಿ ಅವುಗಳನ್ನು ನಡೆಸಿಕೊಡುವೆನು ಎಂದು ಆಜ್ಞಾಪಯ ಎಂದು ಹೇಳಿರುತ್ತಾರೆ. ಯಥೇಷ್ಟಂ ವೈ - ಶಾಸ್ತ್ರೀತ್ಯಾ

ಯಾವಾಗ ನನ್ನ ಇಷ್ಟಾನುಸಾರ ಆಜ್ಞಾನುಜ್ಞಾ ಕೈಂಕರ್ಯಗಳನ್ನು ಮಾಡುತ್ತಾ ನನ್ನನ್ನು ಆಶ್ರಯಿಸಿಬಿಟ್ಟನೋ, ತದನಂತರ, ಅಂತಹ ಪ್ರಪನ್ನನ ಇಷ್ಟಾನುಸಾರವೇ ನಾನು ನಡೆಯುವನಾದುದರಿಂದ ಆಜ್ಞಾಪಿಸಬಹುದೆಂದು ಕೇಳಿಕೊಂಡರು. **ಶಾಸನಂ ಕರವಾವ ಕಿಂ** - ಅಂತಹ ಪ್ರಪನ್ನನ ಪ್ರಾರ್ಥನೆಯು ಕೇವಲ ಪ್ರಾರ್ಥನೆಯುಳ್ಳವು; ಅದನ್ನು ಶಾಸನವೆಂದು ಭಾವಿಸಿ ತನಗೆ ಅವುಗಳು ಆಜ್ಞಾನುಜ್ಞಾ ಕೈಂಕರ್ಯಗಳೆಂದು ಭಾವಿಸಿ ನಡೆಯುಲುಳ್ಳನನು ಎಂಬ ಭಾವವು; ಆದುದರಿಂದ ದಾಸ್ಯವನ್ನು ಮಾಡಲು ಸಿದ್ಧನಾಗಿರುವೆವು, ಅಪ್ಪಣೆ ಏನು ಎಂದು ಪ್ರಾರ್ಥಿಸಿರುತ್ತಾರೆ. ಹಾಗೆಯೇ **"ಪ್ರಿಯೋಹಿ ಜ್ಞಾನಿನೋತ್ಯರ್ಥಂ ಅಹಂ ಸಚಮಮ ಪ್ರಿಯಃ"** (ಗೀ. ೭.) ಎಂದು ಇನ್ನೊಂದು ಕಡೆ ಹೇಳಿಕೊಂಡಿರುತ್ತಾರೆ. **"ಭಕ್ತಿಕ್ರೀತೋಜನಾರ್ದನಃ"** ಎಂದು ಹೇಳಿರುವ ಹಾಗೆ, ಭಕ್ತಿಗೆ ತನ್ನನ್ನೇ ಮಾರಿಕೊಂಡವನು ಎಂಬ ಭಾವವು. ಇದು ಈ ಶ್ಲೋಕದ ಪೂರ್ವಾರ್ಧದ ಅಭಿಪ್ರಾಯವು. ಉತ್ತರಾರ್ಧದ ಅಭಿಪ್ರಾಯವೇನೆಂದರೆ.—ಹೀಗೆ ಜ್ಞಾತಿಗಳೂ ಸಹ ಸಾಧುಗಳಾಗಿರುವದರಿಂದ ಗುಣಕೃತವಾದ ಈ ದಾಸ್ಯವಾದುದರಿಂದ, **ಭೋಗಾನಾಂ ಚ ಅರ್ಧಭೋಕ್ತಾ** - ಅಂತಹ ಜ್ಞಾತಿಗಳಿಗೆ ಅರ್ಧಭೋಗಗಳನ್ನು ಕೊಡುವದರಿಂದ ನಾನು ಅರ್ಧಭೋಗಗಳಿಗೆ ಮಾತ್ರವೇ ಭೋಕ್ತಾ ಎಂದು ಹೇಳಲ್ಪಟ್ಟಿತು. ಪ್ರಪನ್ನರಾದ ಜ್ಞಾತಿಗಳ ಭೋಗಗಳೂ ತನ್ನ ಭೋಗಗಳೂ ಸಹ ಸಮವಾಗುವ ಹಾಗೆ ಮಾಡಿಕೊಳ್ಳಲುಳ್ಳವನೆಂಬುದು ತಾತ್ಪರ್ಯವು. **"ತಸ್ಮಾತ್ ಕ್ಷಿಪ್ರಂ ಸಹಾಸ್ಮಾಭಿ ಸ್ತುಲ್ಯೋ ಭವತು ರಾಘವ। ವಿಭೀಷಣೋ ಮಹಾಪ್ರಾಜ್ಞಸ್ಸಖಿತ್ವಂ ಚಾ ಭ್ಯುಪೈತುನಃ"** (ರಾ. ಯುದ್ಧ. ೧೮.೩೮) ಎಂಬಲ್ಲಿ ಸಹ ಹೇಳಿರುವ ಹಾಗೆ ಭೋಗವು ತುಲ್ಯವು; ಇವರಿಂದ ಸಾಮ್ಯ ಶ್ರುತ್ಯಭಿಪ್ರಾಯವು ಪ್ರಕಟಿಸಲ್ಪಟ್ಟಿತು; ಮತ್ತು **ವಾಗ್ದುರುಕ್ತಾನಿ** - ಅವರುಗಳು ತನ್ನ ಮಾಹಾತ್ಮ್ಯೆಯನ್ನು ತಿಳಿದುಕೊಳ್ಳದೆ ಅಚಾತುರ್ಯದಿಂದ ಹೇಳಿದ **ವಾಗ್ದುರುಕ್ತಾನಿ** - ನಿಂದಾರೂಪ ಕ್ರೂರ ವಾಕ್ಕುಗಳನ್ನೂ ಸಹ, **ಕ್ಷಮೇ** - ಸಹಿಸಿಕೊಳ್ಳುತ್ತೇನೆ. ಇದನ್ನೇ ಮಹರ್ಷಿಯು **"ಉಚ್ಯಮಾನೋಽಪಿ ಪರುಷಂ ನೋತ್ತರಂ ಪ್ರತಿಪದ್ಯತೇ"** (ರಾ. ಅ. ೧.೧೦) ಕ್ರೂರವಾಕ್ಕಿನಿಂದ ಮಾತಾಡಿಸಲ್ಪಟ್ಟರೂ ಶ್ರೀರಾಮಪ್ರಭುವು ಅದನ್ನು ಸಹಿಸಿಕೊಂಡು ಆದಕ್ಕೆ ಪ್ರತಿಯಾಗಿ ಏನೂ ಹೇಳುವದಿಲ್ಲನೆಂದು ಕೊಂಡಾಡಿರುತ್ತಾರೆ. ಹೀಗೆ ಸಾಧುಕಾರಿಗಳಾದ ಜ್ಞಾತಿಗಳೆಂಬ ಸಾಮಾನ್ಯ ಸಂಬಂಧದಿಂದಲೇ ಅವರ ವಿಷಯದಲ್ಲಿ ದಾಸವತ್ಪಾರತಂತ್ರ್ಯವೂ, ಅರ್ಧರಾಜ್ಯಪ್ರದಾನದಹಾಗೆ, ಸಮಭೋಗಪ್ರಧಾನವೂ, ಅವರುಗಳ ಪರುಷ ವಾಕ್ಕಿನ ಸಹನೆಯೂ ಎಂದು ಹೇಳಿಕೊಂಡ ಕರುಣಾಸಾಗರನು ತನಗೆ ಅತ್ಯರ್ಥ ಪ್ರಿಯರಾದ ಭಕ್ತಪ್ರಪನ್ನರ ವಿಷಯದಲ್ಲಿ ಹಾಗಿರುವನೆಂದು ಹೇಳತಕ್ಕದ್ದೇನಿರುತ್ತದೆಂಬ ಭಾವವು. ॥೭೪॥ ಈಗ ಅರ್ಥವಾಗಿ ತೋ

ಬರುವ. ಈ ಅಭಿಪ್ರಾಯುವನ್ನೇ "**ಇತಿಸ್ವೋಕ್ತಿನಯಾತ್**" ಎಂಬಶ್ಲೋಕದಮೂಲಕ ಉಪಪಾದಿಸುತ್ತಾರೆ.—**ಇತಿ**-ಈಗ ಮೇಲೆ ಹೇಳಿದ ರೀತಿಯಲ್ಲಿ, **ಸ್ವೋಕ್ತಿನಯಾ ದೇವ** - ತನ್ನ ದಿವ್ಯಸೂಕ್ತಿಯ ನ್ಯಾಯಾನುಸಾರವಾಗಿಯೇ, **ಪ್ರಭುಃ** - ಸ್ವತಂತ್ರನಾಗಿ ಸಮರ್ಥನಾಗಿರುವ ಸರ್ವೇಶ್ವರನು, **ಸ್ವಭಕ್ತೇ ವಿಷಯೇ** - ಭಕ್ತಿ ಪ್ರಪತ್ತಿಗಳಲ್ಲೊಂದರ ಉಪಾಯಾನುಷ್ಠಾನ ಮಾಡಿ ತನ್ನನ್ನು ಭಕ್ತಿಯಿಂದ ಕಾಣುವವನ ವಿಷಯದಲ್ಲಿ, **ಆತ್ಮಾತ್ಮೀಯಸ್ಯ ಸರ್ವಸ್ಯ** - ತಾನು ಮತ್ತು ತನಗೆ ಸಂಬಂಧಿಸಿಕೊಂಡಿರುವ ವಸ್ತುಗಳ, **ಶೇಷತಾಂ** - ಶೇಷಭಾವವನ್ನು ಎಂದರೆ ಅಂತಹ ಭಕ್ತಪ್ರಪನ್ನರ ಪ್ರಯೋಜನಕ್ಕಾಗಿಯೇ **ಸಙ್ಕಲ್ಪಯತಿ** – ಅನುಕೂಲಿಸುವ ಹಾಗೆ ಸಙ್ಕಲ್ಪಿಸುತ್ತಾನೆ.—ಅಂತಹ ಭಕ್ತನಿಗೆ ತಾನೂ ಶೇಷಭೂತನೆಂದೂ, ತನ್ನವೆಲ್ಲವೂ ಶೇಷಭೂತವೆಂದೂ ಸಙ್ಕಲ್ಪಿಸುವನೆಂಬ ಭಾವವು ; ತನಗೆ ಸೇರಿದವೆಲ್ಲವೂ ಯಾರು ಎಂದರೆ ತನ್ನ ಪರಿಜನವೂ, ಭೂಷಣಾಯುಧಗಳೂ, ತನ್ನ ಕಲ್ಯಾಣಗುಣಗಳೂ, ತನ್ನ ಸ್ಥಾನವಾದ ವೈಕುಂಠವೂ, ಅಲ್ಲಿನ ಭೋಗಗಳೂ ಎಲ್ಲವೂ, ತನ್ನನ್ನು ಉಪಾಯದ ಮೂಲಕ ಆಶ್ರಯಿಸಿದ ಭಕ್ತನ ಪ್ರಯೋಜನಕ್ಕಾಗಿಯೇ ಎಂದು ಸಙ್ಕಲ್ಪಿಸುವನೆಂಬ ತಾತ್ಪರ್ಯವು "**ಪರಿಜನ ಪರಿಬರ್ಹಾ ಭೂಷಣಾನ್ಯಾಯುಧಾನಿ । ಪ್ರವರ ಗುಣಗಣಾಶ್ಚ ಜ್ಞಾನಶಕ್ತ್ಯಾದಯಸ್ತೇ । ಪರಮಪದ ಮಥಾಂಡಾನ್ಯಾತ್ಮದೇಹಸ್ತಥಾತ್ಮಾ । ವರದ ಸಕಲ ಮೇತತ್ಸಂಶ್ರಿತಾರ್ಥಂ ಚಕರ್ಥ**" ಎಂಬ ಶ್ರೀ ವರದರಾಜಸ್ತವ ಶ್ಲೋಕವು ಈ ಸಂದರ್ಭದಲ್ಲಿ ಅನುಸಂಧೇಯವು. **ಆತ್ಮಾತ್ಮೀಯ ಸರ್ವಸ್ಯ** ಎಂಬುದರ ವಿವರಣವೇ **ಪರಿಜನ** ವೆಂದಾರಂಭಿಸಿ **ಸಕಲ ಮೇತತ್** ಎಂಬುದರವರೆಗೂ ಹೇಳಿಸುವದು ; ಇವೆಲ್ಲವೂ **ಸಂಶ್ರಿತಾರ್ಥಂ ಚಕರ್ಥ**-ನಿನ್ನನ್ನಾಶ್ರಯಿಸಿರುವ ಭಕ್ತರ ಪ್ರಯೋಜನಕ್ಕಾಗಿಯೇ ಓ ವರದನೇ ಮಾಡಿರುತ್ತೀಯೇ ಎಂಬರ್ಥವು. ಇದರಿಂದ **ಸಙ್ಕಲ್ಪಯತಿ ಶೇಷತಾಂ** ಎಂಬುದು ವ್ಯಾಖ್ಯಾನ ಮಾಡಲ್ಪಟ್ಟಿತು. ಇವಕ್ಕೆ ನಿದರ್ಶನಗಳುಂಟೋ ಎಂದರೆ—ಪರಮ ಭಾಗವತೋತ್ತಮನಾದ ಅಂಬರೀಷನ ಸಹಾಯಕ್ಕಾಗಿ ತನ್ನ ಚಕ್ರಾಯುಧವನ್ನು ನಿಯಮಿಸಿದನು;ಮುಚುಕುಂದನಿಗೆ ತನ್ನ ದಿವ್ಯಮಙ್ಗಳವಿಗ್ರಹ ದರ್ಶನವೇ ಉತ್ತಾರಕವನ್ನಾಗಿ ಮಾಡಿದನು ; ವಸುದೇವ ದೇವಕಿಯರ ಕ್ಲೇಶನಿವಾರಣೆಗಾಗಿ ತಾನೇ ನಿಂತನು. ಪಾಂಡವರ ಸಂರಕ್ಷಣಾರ್ಥವಾಗಿ ಎಲ್ಲವನ್ನೂ ಉಪಯೋಗಿಸಿದನು. ಅಶ್ವತ್ಥಾಮರ ಅಪಾಂಡವಾಸ್ತ್ರ ನಿವಾರಣಕ್ಕಾಗಿ, ಉತ್ತರೆಯ ಗರ್ಭರಕ್ಷಣೆಗಾಗಿಯೂ, ಚಕ್ರವನ್ನು ಉಪಯೋಗಿಸಿದನು. ಹಾಗೆಯೇ ಅರ್ಜುನ ಶಪಥವಾದ ಸೂರ್ಯಾಸ್ತಮಯದೊಳಗೆ ಸೈಂಧವನ ಶಿರಸ್ಸನ್ನು ಕತ್ತರಿಸುವನೆಂಬುದನ್ನು ಕಾಪಾಡುವದಕ್ಕಾಗಿ ಚಕ್ರವನ್ನು ಸೂರ್ಯನಿಗೆ ಅಡ್ಡಲಾಗಿ ಹಿಡಿದು ಕತ್ತಲಾಯಿತೆಂದು ಅಜಾಗರೂಕತೆಯಿಂದಿರುವಾಗ ಅರ್ಜುನನ ಶಪಥವನ್ನು ಕಾಪಾಡಿದನು, ಹೀಗೆ ಇನ್ನೂ ಅನೇಕ ಸಂದರ್ಭ

**ಅನ್ಯೋನ್ಯಶೇಷಭಾವೋಽಪಿ ಪರಸ್ವಾತಂತ್ರ್ಯಸಂಭವಃ ।**
**ತತ್ತದಾಕಾರಭೇದೇನ ಯುಕ್ತ ಇತ್ಯುಪಪಾದಿತಮ್ ॥ ೭೬ ॥**

ಗಳನ್ನು ಅರಿಸಿಹೇಳಬಹುದು. ॥೭೫॥

ಹಿಂದಿನ ಕಾರಿಕೆಯಲ್ಲಿ ತಾನೂ ತನಗೆ ಸೇರಿದವರೂ ಸಹ ಈ ಭಕ್ತನಿಗೆ ಶೇಷ ಭೂತರು ಎಂದು ಹೇಳಲ್ಪಟ್ಟಿರುವದರಿಂದ, ತನಗೆ ಸೇರಿದವರೇ ಎಲ್ಲಾ ಪ್ರಪನ್ನರೂ; ಆದುದರಿಂದ, ಎಲ್ಲಾ ಪ್ರಪನ್ನರೂ ಪರಸ್ಪರ ಶೇಷಭೂತರೆಂದು ಏರ್ಪಡುತ್ತದೆ. ಹೀಗೆ ಹೇಳುವದು ವಿರುದ್ಧವಾಗುವುದಿಲ್ಲವೋ ? ಹೇಗೆಂದರೆ ಒಬ್ಬ ಭಾಗವತನು ಇನ್ನೊಬ್ಬನಿಗೆ ಶೇಷಭೂತನಾದರೆ, ಆ ಇನ್ನೊಬ್ಬನು ಶೇಷಿಯಾಯಿತು. ಪರಸ್ಪರ ಶೇಷಿಭಾವ ಹೇಗೆ ? ಎಂದಾಕ್ಷೇಪ ಬಂದರೆ, ಈ ವಿರೋಧವನ್ನು ವಾರಣಮಾಡಿ ಹಿಂದೆಯೇ ಪುರುಷಾರ್ಥಕಾಷ್ಠಾಧಿಕಾರದಲ್ಲಿ ಉಪಪಾದಿಸಲ್ಪಟ್ಟಿದೆ; ಅದನ್ನು ಪರಾಂಬರಿಸಬಹುದೆಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ.—**ಅನ್ಯೋನ್ಯ ಶೇಷ ಭಾವೋಽಪಿ** - ಯಾವಾಗ ಪ್ರಪನ್ನಂಗೆ ಪರಮಾತ್ಮನೂ, ಪರಮಾತ್ಮನಿಗೆ ಆತ್ಮೀಯ ರಾದ ಇತರ ಪ್ರಪನ್ನರೂ ಸಹ ಶೇಷಭೂತರೆಂಬುದು ಸ್ಥಾಪಿತವೋ, ಆಗ ಅದ ರಿಂದ ತೋರಿಬರುವ ಈ ಪ್ರಪನ್ನರ ಪರಸ್ಪರ ಶೇಷಭಾವವೂ ಕೂಡ, **ಪರಸ್ವಾತಂತ್ರ್ಯ ಸಂಭವಃ** - ಮೇಲೆ ಉಪಪಾದಿಸಿದ ರೀತಿಯಲ್ಲಿ ಪರಮಾತ್ಮನ ಸಙ್ಕಲ್ಪರೂಪ ಸ್ವಾತಂತ್ರ್ಯದಿಂದುಂಟಾದುದು ; ಭಕ್ತನಿಗೂ ಎಲ್ಲಾ ಶೇಷರೂಪವಾಗಿರಲಿ ಎಂಬುದು ಸ್ವಾಮಿಸಙ್ಕಲ್ಪದಿಂದುಂಟಾದುದು. ಇಲ್ಲಿ ಅಪಿ ಶಬ್ದವಿರುವದರಿಂದ ಶೇಷಭಾವ ಮಾತ್ರವಲ್ಲದೆ ಶೇಷಿ ಭಾವವು ಪರಸ್ಪರ ಕೂಡುತ್ತದೆ ಎಂಬ ಅರ್ಥವು, ಅರ್ಥವಾಗಿ ತೋರಿಬರುತ್ತದೆ. **ತತ್ತದಾಕಾರಭೇದೇನ** - ಇನ್ನೊಬ್ಬ ಭಾಗವತನಿಗೆ ಅತಿಶಯ ವನ್ನುಂಟುಮಾಡುವ ಅಥವಾ ತಾನೇ ಆತನಿಂದ ಅತಿಶಯವನ್ನು ಹೊಂದುವ ಆಕಾರ ಭೇದದಿಂದ, **ಯುಕ್ತ ಇತಿ** - ಪರಸ್ಪರ ಶೇಷಿತ್ವ ಶೇಷತ್ವಭಾವವು ಸಮಂ ಜಸವೆಂದು, **ಉಪಪಾದಿತಮ್** - ಹಿಂದೆಯೇ ಪುರುಷಾರ್ಥಕಾಷ್ಠಾಧಿಕಾರದಲ್ಲಿ ಉಪಪಾದಿಸಲ್ಪಟ್ಟಿತು. ಅಲ್ಲಿ ಪರಸ್ಪರ ಕ್ರಯ ವಿಕ್ರಯಾರ್ಹರೆಂದು ಉಪಪಾದಿಸ ಲ್ಪಟ್ಟಿತೆಂಬ ತಾತ್ಪರ್ಯವು. ೧೮೦೩-೭ ನೆಯ ಪುಟಗಳನ್ನು ಪರಾಂಬರಿಸಿ. ಪರ ಮಾತ್ಮ ಸಙ್ಕಲ್ಪಾಯತ್ತವಾಗಿ ಪ್ರಪನ್ನರಿಗೆ ಪರಸ್ಪರ ಶೇಷತ್ವವು ಸರಿಯು; ಪರಸ್ಪರ ಶೇಷಿತ್ವವು ಹೇಗೆ ಎಂದರೆ ಉಪಕಾರಭಾವನೆಯಿಂದಾಗಲಿ, ಭಾಗವತನೆಂಬ ಮಹಿಮೆ ಯಿಂದಾಗಲಿ ಪರಮಾತ್ಮನಿಗೆ ತುಂಬಾ ಬೇಕಾದವರಾದುದಿಂದಲಾಗಲಿ, ಅಥವಾ ಪರಮಾತ್ಮನಿಗೆ ಭಾಗವತ ಶೇಷತ್ವವು ತುಂಬಾ ಇಷ್ಟವಾದುದರಿಂದಲಾಗಲಿ, ಆತ ನಿಗೆ ಅತಿಶಯವನ್ನುಂಟುಮಾಡುವದಕ್ಕಾಗಿ ಕೈಙ್ಕರ್ಯಾದಿಗಳನ್ನೆಸಗುವದರಿಂದ ಔಪಾ ಧಿಕ ಶೇಷಿತ್ವವೂ ಅನ್ವಯಿಸುತ್ತದೆ ಎಂದು ಉಪಪಾದಿಸಲ್ಪಟ್ಟಿರುತ್ತದೆಂಬ ಭಾವವು.

**ಅಥ ಅಖಂಡ ನಮಸಃ ಸಾಧ್ಯೋಪಾಯಪರತ್ವಂ ವಕ್ತು ಮಾರಭತೇ.**

**ಇಪ್ಪಡಿ ಸ್ವತಂತ್ರನಾನ ಶೇಷಿ ಯಿಟ್ಟವಳಕ್ಕಾಯ್ ಅಕಿಂಚನನಾಯಿರುಕ್ಕಿರ ಇವನುಕ್ಕು ಅವನಾಲೇ ಪುರುಷಾರ್ಥಮ್ ಪೆರವೇಣ್ಡುಗೈಯಾಲೇ ಅವನುಡೈಯ ವಶೀಕರಣಾರ್ಥಮಾಗ ದ್ವಯತ್ತಿಲುಮ್ ಚರಮಶ್ಲೋಕತ್ತಿಲುಮ್ ವಿಶದಮಾಗ ಚೊಲ್ಲುಗಿರ ಶರಣವರಣ ಮಿಜ್ಗೇ ಸೂಚಿತಮ್.**

---

ಯಾವಾಗ ಕುಚೇಲೋಪಾಖ್ಯಾನರೀತ್ಯಾ ಭಾಗವತ ಶೇಷಿತ್ವವೇ ಭಗವಂತನಿಗೆ ತುಂಬಾ ಇಷ್ಟವಾದ ನಂತರ ತನ್ನ ಪತ್ನಿಯಾದ ಲಕ್ಷ್ಮಿಗೆ ಶೇಷಿತ್ವವು ಪರಮ ಹಿತವೆಂಬುದು ಕೈಮುತಿಕ ನಾಯಸಿದ್ಧವು. ಆದರೆ ಭಾಗವತ ಶೇಷತ್ವಕ್ಕೂ ಲಕ್ಷ್ಮೀ ಶೇಷತ್ವಕ್ಕೂ ಸ್ವಲ್ಪ ವೈಲಕ್ಷಣ್ಯ ಉಂಟು. ಭಾಗವತ ಶೇಷತ್ವವಾದರೋ ಸೋಪಾಧಿಕವು; ಲಕ್ಷ್ಮೀ ಶೇಷತ್ವವಾದರೋ ನಿರುಪಾಧಿಕವಾಗಿ ಸ್ವತಃ ಪ್ರಾಪ್ತವಾದುದು. ಮುಂದೆ ಅಖಂಡ **ನಮುಸ್ಸಿನ ಸಾಧ್ಯೋಪಾಯಾರ್ಥವನ್ನು** ಉಪಪಾದಿಸುತ್ತಾರೆ.

---

ಹಿಂದೆ ಸಖಂಡ ನಮಸ್ಸಿನಿಂದ ತನಗೆ ನಿರುಪಾಧಿಕ ಸ್ವಾತಂತ್ರ್ಯವೂ ಶೇಷಿತ್ವವೂ ಇಲ್ಲವೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿತು. ಹೀಗೆ ಅತ್ಯಂತ ಪಾರತಂತ್ರ್ಯವಿರುವಾಗ ಭಗವತ್ಪ್ರಾಪ್ತಿಗಾಗಿ ಈತನೇನಾದರೂ ಪ್ರಯತ್ನಿಸಬೇಕೇ ? ಈತನು ಸಾಧ್ಯೋಪಾಯವನ್ನೇನಾದರೂ ಅನುಷ್ಠಿಸಬೇಕೇ ? ಸಾಧ್ಯೋಪಾಯವಿಲ್ಲದೇನೇ ಶ್ರೀಮುಕುಂದನು ಅನುಗ್ರಹಿಸಲಾರನೋ ? ಎಂದರೆ, ಹಿಂದೆಯೇ **"ರಕ್ಷಾಪೇಕ್ಷಾಂ ಪ್ರತೀಕ್ಷತೇ"** ಎಂದೂ, ಅದಕ್ಕಾಗಿ ಶಾಸ್ತ್ರವಿಹಿತ ಕರ್ಮವಾದ **"ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ"** ಎಂಬಲ್ಲಿ ಹೇಳಿರುವ ಹಾಗೆ, ಶರಣಾಗತಿ ಎನಿಸುವ ಆತ್ಮಸಮರ್ಪಣರೂಪ ಶರಣವರಣವೂ, ಆವಶ್ಯಕವು. ಇದು ಅಖಂಡ ನಮಸ್ಸಿನಿಂದ ಹೇಳಲ್ಪಟ್ಟವೆಂದು ಉಪದೇಶಿಸುತ್ತಾರೆ —**ಇಪ್ಪಡಿ** - ಮೇಲೆ ಉಪಪಾದಿಸಿದ ರೀತಿಯಲ್ಲಿ, **ಸ್ವತಂತ್ರನಾದ ಶೇಷಿಯು, ಯಿಟ್ಟವಳಕ್ಕಾಯ್** - ಶೇಷಿಯು ದಯಪಾಲಿಸಿದ ರೀತಿಯಲ್ಲಿ ಇರುವ, **ಅಕಿಂಚನ ನಾಯಿರುಕ್ಕಿರ** - ಪ್ರಕೃತಿ ಬಂಧದಿಂದ ದೀನದೆಶೆಯನ್ನು ಹೊಂದಿರುವ, **ಇವನುಕ್ಕು** - ಈ ಬದ್ಧ ಚೇತನನಿಗೆ, **ಅವನಾಲೇ** - ಭಗವಂತನಿಂದ, **ಪುರುಷಾರ್ಥಮುಮ್** - ಅಭೀಷ್ಟವನ್ನು, **ಪೆರವೇಣ್ಡುಗೈಯಾಲೇ** – ಹೊಂದಬೇಕಾಗಿರುವದರಿಂದ, **ಅವನುಡೈಯ ವಶೀಕರಣಾರ್ಥಮಾಗ** - ಅವನ ಪ್ರೀತಿಗೆ ಪಾತ್ರನಾಗುವ ಹಾಗೆ ವಶಮಾಡಿಕೊಳ್ಳುವದಕ್ಕಾಗಿ, **ದ್ವಯದಲ್ಲೂ, ಚರಮಶ್ಲೋಕದಲ್ಲೂ, ವಿಶದಮಾಗಚೊಲ್ಲುಗಿರ**-ವ್ಯಕ್ತವಾಗಿ

ಹೇಳುವ **ಶರಣವರಣವನ್** - ಸಿದ್ಧೋಪಾಯನನ್ನಾಗಿ ವರಿಸೋಣವು, **ಇಹ್ನೋ ಸೂಚಿತಮ್** - ಈ ಅಖಂಡ ನಮಸ್ಸಿನಲ್ಲಿ ಸೂಚಿತವು. ದ್ವಯದಲ್ಲಿ **ಶರಣಂ ಪ್ರಪದ್ಯೇ** ಎಂಬಲ್ಲೂ, ಚರಮಶ್ಲೋಕದಲ್ಲಿ "**ಮಾಮೇಕಂ ಶರಣಂ ವ್ರಜ**" ಎಂಬ ವಿಧ್ಯುಕ್ತಿಯಲ್ಲೂ, ಶರಣ ವರಣವು ವ್ಯಕ್ತವು. **ಈ ಮೂಲ** ಮನ್ತ್ರದಲ್ಲಾದರೋ ಅಷ್ಟು ವ್ಯಕ್ತವಲ್ಲದೇ ಇದ್ದರೂ, **ಅಖಂಡ** ನಮಸ್ಸು ಪ್ರಹ್ವೀಭಾವರೂಪವಾದ **ಸರ್ವೇಶ್ವರನ** ಪಾದಾರವಿಂದದಲ್ಲಿ ನಮಸ್ಕಾರವನ್ನು ಬೋಧಿಸುವದರಿಂದ **ಶರಣವರಣವು ಸೂಚಿತವು** ಎಂದು ಹೇಳಿದರು. **ಪರಮ** ಪುರುಷಾರ್ಥವು ಮೋಕ್ಷವು; ಆದನ್ನು ಹೊಂದುವದಕ್ಕಾಗಿ ಮುಕುಂದನನ್ನು ವಶ ಮಾಡಿಕೊಳ್ಳುವದು ಆವಶ್ಯಕವು. ಇದಕ್ಕಾಗಿ ತನ್ನ ಆಕಿಂಚನ್ಯವನ್ನು ಪ್ರದ ರ್ಶಿಸಿ, "**ತಸ್ಯಚ ವಶೀಕರಣಂ ತಚ್ಛರಣಾಗತಿರೇವ**" ಎಂದು ಹೇಳಿ, **ಏವ ಕಾರ** ದಿಂದ ಬೇರೆ ಮಾರ್ಗವೇ ಇಲ್ಲವೆಂದು ತೋರಿಬರುವದರಿಂದ, **ಆತನ** ಪಾದಾರ ವಿಂದದಲ್ಲಿ ಮಾಡುವ ಪ್ರಣಾಮವೇ ಶರಣವರಣವು. ಇದು **ನಮಶ್ಶಬ್ದ**ದಲ್ಲಿ ಸೂಚಿತವೆಂಬ ಭಾವವು. ಇದು ಲೋಕದೃಷ್ಟಿಯಿಂದಲೂ ವ್ಯಕ್ತವು. ನೀಚ ಭಾವದಲ್ಲಿರುವವನು ತನ್ನ ಕೋರಿಕೆಯನ್ನು ಉತ್ಕೃಷ್ಟ ಪದವಿಯಲ್ಲಿರುವವನಿಂದ ಹೊಂದಬೇಕಾಗಿ ಅಪೇಕ್ಷೆಯಿರುವವನಾದರೆ, ಆತನ ಪಾದಕ್ಕೆರಗಿ ಇಷ್ಟಾರ್ಥವನ್ನು ಹೊಂದಿರುವದನ್ನು ಸಾಧಾರಣವಾಗಿ ಕಂಡಿರುವೆವು. ಹಾಗೆಯೇ **ಈ ನಮಸ್ಕಾ** ರವು ಭಗವಂತನ ವಶೀಕರಣ ಮೂಲಕ ತನ್ನ ಇಷ್ಟಾರ್ಥಸಿದ್ಧಿಗೆ ಹೇತುವು. ಮುಂದೆ **ನಾರಾಯಣಾಯ** ಎಂಬ ಚತುರ್ಥ್ಯಂತ ಪದವಿರುವದರಿಂದ, **ಮೋಕ್ಷ** ಪ್ರಾಪ್ತಿಯಿಂದ ಭಗವಂತನಿಗೆ ನಿತ್ಯಕೈಙ್ಕರ್ಯಾಪೇಕ್ಷೆಯು ಸಿದ್ಧವಾದುದರಿಂದ **ಈ** ನಮಸ್ಸಿನಲ್ಲಿ ಆಕಿಂಚನ್ಯದ್ಯೋತಿತ ಪ್ರಹ್ವೀಭಾವವು ಪ್ರದರ್ಶಿಸಲ್ಪಟ್ಟಿದುದರಿಂದ, ಉಪಾಸನಕ್ಕೆ ಶಕ್ತಿ ಇಲ್ಲದೇ ಇರುವದೇ ಆಕಿಂಚನ್ಯವಾದುದರಿಂದ,ಆ **ಉಪಾಸನ** ಸ್ಥಾನದಲ್ಲಿ ಸಿದ್ಧೋಪಾಯನು ತಾನೇ ನಿಂತು, ಇಷ್ಟೋಪಾಯವನ್ನು ಸಾಧಿಸಿ ಕೊಟ್ಟು, ತತ್ಫಲವನ್ನೂ ಕೊಡುವನು ಎಂಬ ಭಾವವು. ಹಿಂದೆ ಶರಣವರಣ ವೆಂದರೇನು ಎಂಬುದು ಉಪಪಾದಿಸಲ್ಪಟ್ಟಿತು; "**ತ್ವಮೇವೋಪಾಯ ಭೂತೋ ಮೇ ಭವ**" ಎಂಬ ಪ್ರಾರ್ಥನೆಯು.

ಆದರೆ ಶರಣಾಗತಿಗೆ ಆತ್ಮಸಮರ್ಪಣೆಯಲ್ಲವೇ ಅಂಗಿಯು? **ಈ ನಮಶ್ಶಬ್ದ** ದಿಂದ ಅದು ಹೇಳಲ್ಪಟ್ಟಿತೋ? ಶರಣವರಣವಾದರೋ ನೀನೇ ಉಪಾಯನಾಗು ಎಂಬ ಪ್ರಾರ್ಥನೆಯು; ಇದು ಸ್ವರೂಪ ಭರಸಮರ್ಪಣವಾದ ಆತ್ಮಸಮರ್ಪಣವು ಹೇಗಾದೀತು? ಎಂದರೆ ಆತ್ಮಸಮರ್ಪಣೆಯೂ ಶರಣವರಣವೂ ಎರಡೂ ಒಟ್ಟಿಗೇ ಇರುವದರಿಂದ ಒಂದನ್ನು ಹೇಳಿದರೆ ಇನ್ನೊಂದೂ **ಸೂಚಿತವಾಗಿ** ಎರಡೂ ಹೇಳಲ್ಪಟ್ಟವೆಂದೇ ಭಾವಿಸತಕ್ಕದ್ದೆಂದು ಹೇಳುತ್ತಾರೆ. ಶರಣಾಗತಿಯನ್ನು ಅನು

ಆತ್ಮಸಮರ್ಪಣಮುಮ್ ಶರಣವರಣಮುಮ್ ಅನ್ಯೋನ್ಯಂ ಪಿರಿಯಾವ್ವೈಯಾಲೇ ಓರೊನ್ರೈಚ್ಚೊಲ್ಲುಮ್ ಶಬ್ದಙ್ಗಳಿಲಿರಣ್ಡುಮ್ ವಿವಕ್ಷಿತಮ್.

ಅತ್ರ ನಮಃ ಸಾಙ್ಗಭರಸಮರ್ಪಣಪರಃ

(೧) "ಯಸ್ಸದೇವೋ ಮಯಾದೃಷ್ಟಃ ಪುರಾ ಪದ್ಮಾಯತೇಕ್ಷಣಃ।

ಷ್ಟಿಸುವಾಗ ಆತ್ಮಸಮರ್ಪಣವೂ, ಶರಣವರಣವೂ ಅನ್ಯೋನ್ಯಂ ಪಿರಿಯಾವ್ವೈಯಾಲೇ - ಶರಣಾಗತ್ಯನುಷ್ಠಾನದ ಸಂದರ್ಭದಲ್ಲಿ ಪರಸ್ಪರ ಅಙ್ಗಿ ಅಙ್ಗಗಳಾಗಿ ಬಿಟ್ಟಿರುವದಿಲ್ಲವಾದುದರಿಂದ, ಓರೊನ್ರೈ ಚ್ಚೊಲ್ಲುಮ್ ಶಬ್ದಙ್ಗಳಿಲುಮ್ - ಒಂದನ್ನು ಹೇಳುವ ಶಬ್ದಗಳಿಂದ, ಇರಣ್ಡುಮ್ - ಆತ್ಮಸಮರ್ಪಣ ಶರಣವರಣವೆರಡೂ, ವಿವಕ್ಷಿತಮ್ - ಹೇಳಲ್ಪಟ್ಟವೆಂಬ ಭಾವನೆಯು. ಶರಣವರಣದಲ್ಲಿ ನೀನು ಸಿದ್ಧೋಪಾಯನಾಗಿರು ಎಂಬ ಪ್ರಾರ್ಥನೆಯು. ಆತ್ಮಸಮರ್ಪಣೆಯು ಸಾಧ್ಯೋಪಾಯಾನುಷ್ಠಾನವು; ಉಪಾಸನಸ್ಥಾನದಲ್ಲಿ ನೀನೇ ನಿಂತು ನಡೆಸಿಕೊಡು ಎಂದು ಯಾವಾಗ ನಮಸ್ಕರಿಸಿದನೋ, ಆಗ ಅದು ಸಾಧ್ಯೋಪಾಯವಾದ ಭರಸಮರ್ಪಣವೇ ಅನುಷ್ಠಿಸಲ್ಪಡುವದರಿಂದ, ಅನ್ಯೋನ್ಯಂ ಪಿರಿಯಾವ್ವೈಯಾಲೇ ಎಂಬ ಪ್ರಯೋಗವು. ಆದುದರಿಂದ ಒಂದನ್ನು ಹೇಳಿದರೆ ಎರಡೂ ಹೇಳಲ್ಪಟ್ಟವೆಂದು ತಿಳಿಸಿರುತ್ತಾರೆ.

ನಮಸ್ಸು ಸಾಙ್ಗವಾದ ಭರಸಮರ್ಪಣಪರವು.

ಆದುದರಿಂದ ಇಲ್ಲಿ ನಮಶ್ಶಬ್ದದಿಂದ ಶಾಬ್ದವಾಗಿ ಶರಣವರಣವೂ, ಆರ್ಥವಾಗಿ ಆತ್ಮಸಮರ್ಪಣೆಯೂ ಬೋಧಿಸಲ್ಪಟ್ಟವೆಂದು ಉಪಪಾದಿಸಲ್ಪಟ್ಟಿತು. ಮುಂದಿನ ವಾಕ್ಯದಿಂದ ನಮಶ್ಶಬ್ದವೂ ಶಾಬ್ದವಾಗಿಯೇ ಶರಣಾಗತಿಯಾದ ಆತ್ಮಸಮರ್ಪಣಪರವೆಂದೇ ಹೇಳಿ, ಎರಡು ಪ್ರಮಾಣಗಳ ಮೂಲಕ ಸ್ಥಾಪಿಸುತ್ತಾರೆ. ಮೊದಲು ಭಾರತ ವನಪರ್ವ ಪ್ರಮಾಣವನ್ನು ಉದಾಹರಿಸುತ್ತಾರೆ. ಇದು ಪಾಂಡವರು ವನವಾಸ ತೀರ್ಥಯಾತ್ರೆಯನ್ನು ಮಾಡುವಾಗ ಮಾರ್ಕಂಡೇಯ ಮಹರ್ಷಿಯು ವನವಾಸದಿಂದ ಖಿನ್ನರಾದ ಯುಧಿಷ್ಠಿರಾದಿಗಳನ್ನು ಕುರಿತು, ತನಗೆ ಸರ್ವೇಶ್ವರನು ಪ್ರಳಯದಲ್ಲಿ ವಟಪತ್ರಶಾಯಿಯಾಗಿ ಬಾಲನಾಗಿ ದಿವ್ಯಸೇವೆಯನ್ನು ಅನುಗ್ರಹಿಸಿದ ವೃತ್ತಾಂತವನ್ನು ಹೇಳುವ ಪ್ರಕರಣವು. (೧) ಪುರಾ - ಹಿಂದೆ ಪ್ರಳಯಕಾಲದಲ್ಲಿ ಏಕಾರ್ಣವವಾದಾಗ, ಯಃ ಸಃ ದೇವಃ - ಯಾವ ಪ್ರಸಿದ್ಧನಾದ ಲೀಲಾಜಗತ್ಪತಿಯು, ಪದ್ಮಾಯತೇಕ್ಷಣಃ - "ತಸ್ಯ ಯಥಾ ಕಪ್ಯಾಸಂ

(೧) ಭಾರತ. ವನ. ೧೯೨. ೫೧.

ಸ ಏಷ ಪುರುಷವ್ಯಾಘ್ರ ಸ್ಸಂಬಂಧೀ ತೇ ಜನಾರ್ದನಃ"(೨)"ಸರ್ವೇಷಾಮೇವ ಲೋಕಾನಾಂ ಪಿತಾ ಮಾತಾ ಚ ಮಾಧವಃ। ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ॥" ಎನ್ನುಪದೇಶಿಕ್ಕ. (೩) "ಏವ ಮುಕ್ತಾ ಸ್ತ್ರಯಃ ಪಾರ್ಥಾ

---

ಪುಂಡರೀಕಮೇವ ಮಕ್ಷಣೀ" (ಛಾಂ. ೧.೬.೬) ಎಂಬ ಶ್ರುತಿಯ ಅರ್ಥವಾಗಿ "ಗಂಭೀರಾಂಭ ಸ್ಸಮುದ್ಭೂತ ಸುಮೃಷ್ಟನಾಳ ರವಿಕರವಿಕಸಿತ ಪುಂಡರೀಕ ದಳಾಮಲಾಯತೇ ಕ್ಷಣಃ" ಎಂಬ ಅಮೋಘ ವ್ಯಾಖ್ಯಾನುಸಾರವಾಗಿ, ಆಳವಾದ ನೀರಿನಲ್ಲಿ ಚನ್ನಾಗಿ ಬೆಳೆದ ನಾಳದಿಂದ ಸೇರಿ ಪ್ರಾತಃಕಾಲ ಸೂರ್ಯನ ಕಿರಣದಿಂದ ವಿಕಸಿತವಾದ ಪದ್ಮದಳದೋಪಾದಿಯಲ್ಲಿ ವಿಶಾಲವಾದ ಕಣ್ಣುಳ್ಳವನೆಂದು ಹೇಳಿರುವ ಹಾಗೆ, ಪದ್ಮಪತ್ರದ ಹಾಗೆ ವಿಶಾಲವಾಗ ಕಣ್ಣಿನ ಸೊಬಗನ್ನುಳ್ಳವನನ್ನಾಗಿ, ಮಯಾದೃಷ್ಟಃ - ನನ್ನಿಂದ ಕಾಣಲ್ಪಟ್ಟನೋ, ಹೇ ಪುರುಷವ್ಯಾಘ್ರ-ಓ ಪುರುಷ ಶ್ರೇಷ್ಠನಾದ ಯುಧಿಷ್ಠಿರನೇ, ಸಃ ಜನಾರ್ದನಃ - ಆ ಜನಾರ್ದನನೇ, ಏಷಃ - ಈ, ತೇ - ನಿನ್ನ, ಸಂಬಂಧೀ - ಕೃಷ್ಣನಾಗಿ ನಿನಗೆ ಬಂಧುವಾಗಿ ಅವತರಿಸಿರುತ್ತಾನೆ; ಅದೇನು ಅಷ್ಟು ನಿಸ್ಸಂದೇಹವಾಗಿ ಹೇಳುತ್ತೀರಿ ಎನ್ನುತ್ತೀಯೋ? ಆಗ ವಟಪತ್ರ ಶಾಯಿಯಾಗಿ ಬಾಲನಾಗಿರುವಾಗ ಪ್ರತ್ಯಕ್ಷವಾಗಿ ನೋಡಿದ ಕಣ್ಣಿನ ಸೊಬಗೂ,ಈಗ ಶ್ರೀಕೃಷ್ಣನಾಗಿರುವವನ ಕಣ್ಣಿನ ಸೊಬಗೂ,ಒಂದೇ ವಿಧವಾಗಿರುವದೇ ಸಾಕ್ಷಿಯು ಎಂಬ ಭಾವವು;ಮಹರ್ಷಿಯಾದ ನನಗೆ ಈ ವಿಷಯದಲ್ಲಿ ನಿಸ್ಸಂದೇಹವು. ಆದುದರಿಂದ ಪರಮ ಹಿತೋಪದೇಶವನ್ನು ಮಾಡುವೆನು ಕೇಳು ಎಂಬ ಭಾವವು, ಅದೇನೆಂದರೆ, ಸರ್ವೇಷಾಂ ಲೋಕಾನಾಂ - ಸಮಸ್ತ ಲೋಕಗಳಿಗೂ ಎಂದರೆ ಸಮಸ್ತ ಲೋಕದ ಜನರಿಗೂ, ಮಾಧವ ಏವ-ಶ್ರಿಯಃಪತಿಯೇ, ಪಿತಾ-ತಂದೆಯು, ಎಂದರೆ ತಂದೆಯು ಹೇಗೆ ಹಿತಪ್ರವರ್ತಕನೋ ಹಾಗೆಯೇ ಈತನೂ ಹಿತಪ್ರವರ್ತಕನು, ಮಾತಾ ಚ - ತಾಯಿಯೂ, ತಾಯಿಯು ಹೇಗೆ ಪೋಷಿಸಿ ರಕ್ಷಿಸುವಳೋ ಹಾಗೆಯೇ ಶ್ರಿಯಃಪತಿಯಾದ ಶ್ರೀ ಕೃಷ್ಣನೂ ಎಂಬ ಭಾವವು. ಇಲ್ಲಿ "ಪಿತಾ ಮಾತಾ ಚ ಮಾಧವಃ" ಲಕ್ಷ್ಮೀಪತಿಯೇ ತಂದೆ ತಾಯಿ ಸಿದ್ಧೋಪಾಯನೆಂದು ಹೇಳಿರುವದರಿಂದ, ಲಕ್ಷ್ಮಿಗೂ ಉಪಾಯತ್ವದಲ್ಲಿ ಅನ್ವಯವು ಉಂಟೆಂಬುದು ತೋರಿಬರುತ್ತದೆ. ಹೇ ಪುರುಷರ್ಷಭಾಃ - ಓ ಪುರುಷ ಶ್ರೇಷ್ಠರಾದ ಪಾಂಡವರುಗಳಿರಾ, ಶರಣ್ಯಂ - ಸರ್ವಲೋಕಕ್ಕೂ ಆಶ್ರಯಭೂತನಾಗಿರಲು ಅರ್ಹನಾದ ಅಥವಾ ಸರ್ವಲೋಕರಕ್ಷಣೆಯಲ್ಲಿ ಬದ್ಧಾದರನಾದ, ಏನಂ - ಈ ಶ್ರೀ ಕೃಷ್ಣಭಗವಾನರನ್ನು, ಶರಣಂ-ಪರಮೋಪಾಯವನ್ನಾಗಿ, ಗಚ್ಛಧ್ವಂ-ಹೊಂದಿರಿ, ಎನ್ನು - ಎಂಬದಾಗಿ, ಉಪದೇಶಿಕ್ಕ - ಹಿತೋಪದೇಶವನ್ನು ಮಾಡಲಾಗಿ,

---

(೨) ಭಾರತೆ. ವನ. ೧೮೩. ೫೫. ೫೬

ಯಮೌ ಚ ಭರತರ್ಷಭಾಃ । ದ್ರೌಪದ್ಯಾ ಸಹಿತಾಸ್ಸರ್ವೇ ನಮಶ್ಚಕ್ರು ರ್ಜನಾರ್ದನಮ್" ಎನ್ರು ಶೊಲ್ಲುಗೈಯಾಲುಮ್, ದಮಯಂತೀ ವೃತ್ತಾಂತ ತ್ತಿಲೇ (೪) "ಶರಣಂ ಪ್ರತಿದೇವಾನಾಂ ಪ್ರಾಪ್ತಕಾಲ ಮಮನ್ಯತ" ಎನ್ರುಪ

(೨) "ಏವಂ - ಈ ಪರಿಯಲ್ಲಿ, **ಉಕ್ತಾಃ** - ಉಪದೇಶಿಸಲ್ಪಟ್ಟವರಾಗಿ, **ತ್ರಯಃ ಪಾರ್ಥಾಃ** - ಮೂವರಾದ ಕುಂತೀ ಪುತ್ರರಾದ ಯುಧಿಷ್ಠಿರ ಭೀಮಾರ್ಜುನರೂ, **ಯಮೌ ಚ** - ಅವಳಿ ಮಕ್ಕಳಾದ ನಕುಲ ಸಹದೇವರೂ ಆದ, **ಭರತರ್ಷಭಾಃ**- ಭರತವಂಶ ಶ್ರೇಷ್ಠರೂ, **ದ್ರೌಪದ್ಯಾ ಸಹಿತಾಃ** - ದ್ರೌಪದಿಯಿಂದ ಸೇರಿದವ ರಾಗಿ, **ಸರ್ವೇ** - ಇವರೆಲ್ಲರೂ, **ಜನಾರ್ದನಮ್** - ಈ ಜನಾರ್ದನ ರೂಪಿಯಾದ ಶ್ರೀ ಕೃಷ್ಣಭಗವಾನರನ್ನು, **ನಮಶ್ಚಕ್ರುಃ** - ಶರಣ ಹೊಂದಿದರು ಎಂದರೆ ಆತನ ಪಾದದಲ್ಲಿ ಶರಣಾಗತಿಯನ್ನು ಪ್ರಣಾಮಪೂರ್ವಕವಾಗಿ ಅನುಷ್ಠಿಸಿದರು" ಎಂದು ಹೇಳಿರು ವದರಿಂದಲೂ, ನಮಶ್ಶಬ್ದದಿಂದ ಶರಣಾಗತಿರೂಪ ಭರನ್ಯಾಸವು ಅನುಷ್ಠಿಸಲ್ಪಟ್ಟ ತೆಂಬ ಭಾವವು. ಮುಂದೆ ನಮಶ್ಶಬ್ದಕ್ಕೆ ಶರಣಾಗತಿಯೆಂದೇ ಅರ್ಥಹೇಳಬೇಕಾದ ಇನ್ನೊಂದು ಪ್ರಮಾಣವನ್ನು ಉದಾಹರಿಸುತ್ತಾರೆ.—ದಮಯನ್ತೀ ವೃತ್ತಾಂತ ವೇನೆಂದರೆ.—ದಮಯಂತೀ ಸ್ವಯಂವರವೆಂಬ ವೃತ್ತಾಂತವನ್ನು ನಾರದ ಮುಖೇನ ಇಂದ್ರ ಅಗ್ನಿ ಯಮ ವರುಣರುತಿಳಿದು ದಮಯಂತಿಯ ಅತಿಶಯಿತ ಲಾವಣ್ಯವನ್ನು ಕಂಡು ಮೋಹಿತರಾಗಿ, ಅದಕ್ಕಾಗಿ ಹೊರಟು ಮಾರ್ಗದಲ್ಲಿ ನಳಮಹಾರಾಯನನ್ನು ಕಂಡು,ಆತನನ್ನೇ ದಮಯಂತಿಯು ವರಿಸುವಳೆಂದು ತಿಳಿದು, ಈ ನಾಲ್ವರೂ ನಳನ ಹಾಗೆಯೇ ರೂಪವನ್ನು ತಳೆದುದರಿಂದ ಹೀಗೆ ಐದುಮಂದಿಯೂ ನಳ ರೂಪದಲ್ಲಿ ಸ್ವಯಂವರ ಮಂಟಪದಲ್ಲಿದ್ದರು. ಆಗ ನಳನು ಯಾರೆಂಬುದು ತಿಳಿಯದೆ ದಮ ಯಂತಿಯು ಚಿಂತಿಸುತ್ತಾ ಉಪಾಯವು ಯಾವುದೂ ತೋಚದೆ ದೇವತೆಗಳನ್ನು ಕುರಿತು ಶರಣ ಹೊಂದುತ್ತಾಳೆ. ಈ ಇತಿಹಾಸವನ್ನು ಬೃಹದಶ್ವರು ಯುಧಿಷ್ಠಿರನಿಗೆ ವನದಲ್ಲಿರುವಾಗ ಹೇಳುತ್ತಾರೆ.—ದಮಯಂತೀವೃತ್ತಾಂತತ್ತಿಲೇ-ದಮಯಂತೀ ವೃತ್ತಾಂತದಲ್ಲೂ(೩) ದೇವಾನಾಂ ಪ್ರತಿ- ದೇವತೆಗಳನ್ನು ಕುರಿತು, ಶರಣಂ ಪ್ರಾಪ್ತ ಕಾಲಂ - ಶರಣು ಹೊಂದಲು ಯುಕ್ತವಾದ ಕಾಲವೆಂಬದಾಗಿ, **ಅಮನ್ಯತ** - ದಮ ಯಂತಿಯು ತಿಳಿದಳು. ಈಗ ಐದು ಜನ ಒಂದೇ ರೂಪದಲ್ಲಿರುವಾಗ ಇದರಲ್ಲಿ ಸರಿ ಯಾದ ನಳಮಹಾರಾಯನು ಯಾರು ಎಂದು ತಿಳಿಯಲು, ಸಾಧ್ಯವಿಲ್ಲವೇ? ದೇವತೆ ಗಳಲ್ಲಿ ಶರಣಾಗತಿಯನ್ನನುಷ್ಠಿಸಿದರೆ ಈ ಕಷ್ಟವು ಪರಿಹಾರವಾದೀತು ಎಂದು ಭಾವಿಸಿ, ಹಾಗೆ ಶರಣಾಗತಿಯನ್ನು ಮಾಡುವದಕ್ಕೆ ಇದೀಗ ಸಮಯವು, ಎನ್ರುಪ ಕ್ರಮಿತ್ತು-ಎಂದಾರಂಭಿಸಿ, "ವಾಚಾ ಮನಸಾಚೈವ ನಮಸ್ಕಾರಂ ಪ್ರಯುಜ್ಯ

(೪) ಭಾರತ, ವನ. ೫೭. ೧೬.

ಕ್ಕನಿತ್ತು (೫) "ವಾಚಾ ಚ ಮನಸಾ ಚೈವ ನಮಸ್ಕಾರಂ ಪ್ರಯುಜ್ಯಸಾ" ಎನ್ಗೈಯಾಲುಮ್ ನಮಶ್ಶಬ್ದಂ ತಾನೇ ಶರಣಾಗತಿ ಶಬ್ದಸ್ಥಾನತ್ತಿಲೇ ಪಠಿತಮಾಗೈಯಾಲೇ ಇದು ತನ್ನೋಡು (೯೬) ತುವಕ್ಕರುತ್ತು ಕೊಣ್ಡು ಸಪರಿಕರಮಾನ ಸ್ವರಕ್ಷಾಭರಸಮರ್ಪಣತ್ತಿಲೇ ತತ್ಪರವಾಗವುಮಾಮ್.

---

ಸಾ" ಈ ದಮಯಂತಿಯು ವಾಕ್ಕಿನಿಂದಲೂ ಮನಸ್ಸಿನಿಂದಲೂ ನಮಸ್ಕಾರವನ್ನು ಮಾಡಿ "ದೇವೇಭ್ಯಃ ಪ್ರಾಂಜಲಿ ರ್ಭೂತ್ವಾ ವೇಪಮಾನೇದಮಬವ್ರೀತ್" ಎಂದು ಮುಂದೆ ಇದೆ. ದೇವತೆಗಳಿಗೋಸ್ಕರ ಅಂಜಲಿಯನ್ನು ಮಾಡಿ ದುಃಖದಿಂದ ನಡಗುವವಳಾಗಿ ಹೇಳುತ್ತಾಳೇನೆಂದರೆ—ಹಂಸಗಳ ಮಾತನ್ನು ಕೇಳಿ ನಳನನ್ನು ಪತಿಯಾಗಿವರಿಸಿದೆನು; ನೀವು ನನಗೆ ಪ್ರಸನ್ನರಾಗಿ ನಳನು ಯಾರೆಂಬದಾಗಿ ತಿಳಿಸಬೇಕೆಂದು ಪ್ರಾರ್ಥಿಸುವ ಪ್ರಕರಣವು. ಈ ನಾಲ್ಕು ದೇವತೆಗಳೂ ಭೂಮಿಯನ್ನು ಸ್ಪರ್ಶಿಸದೆ, ರೆಪ್ಪೆಯನ್ನಲ್ಲಾಡಿಸದೇ ಇದ್ದುದರಿಂದ,ಇವೇ ಮೊದಲಾದ ಲಕ್ಷಣಗಳಿಂದ ಅವರನ್ನು ತ್ಯಜಿಸಿ. ಭೂಮಿಯ ಸಂಬಂಧ ಮತ್ತು ರೆಪ್ಪೆಗಳನ್ನಲ್ಲಾಡಿಸೋಣ ಮೊದಲಾದ ಲಕ್ಷಣಗಳನ್ನುಳ್ಳ ಯಥಾರ್ಥನಾದ ನಳಮಹಾರಾಯನನ್ನು ಈ ಶರಣಾಗತಿಯ ಮಾಹಾತ್ಮ್ಯಯಿಂದ ಕಂಡು ಹಿಡಿದು, ಆತನ ಕುತ್ತಿಗೆಗೆ ಹಾರವನ್ನು ಹಾಕಿ ವರಿಸಿದಳೆಂಬ ವೃತ್ತಾಂತವು ಮುಂದೆ ಇರುತ್ತದೆ. **ಎನ್ಗೈಯಾಲುಮ್**-ಇಲ್ಲಿ **ನಮಸ್ಕಾರಂ ಪ್ರಯುಜ್ಯ** ಎಂದು ಶರಣಾಗತಿಯು ಹೇಳಲ್ಪಟ್ಟಿರುವದರಿಂದಲೂ **ನಮಶ್ಶಬ್ದಂ ತಾನೇ** - ನಮಶ್ಶಬ್ದವೇ, **ಶರಣಾಗತಿ ಸ್ಥಾನತ್ತಿಲೇ ಪಠಿತಮಾಗೈಯಾಲೇ** - ಶರಣಾಗತಿ ಎಂದು ಹೇಳುವ ಸ್ಥಳದಲ್ಲಿ ಪ್ರಯೋಗಿಸಲ್ಪಟ್ಟಿರುವದರಿಂದ, **ಇದು** - ಈ ನಮಶ್ಶಬ್ದದಿಂದ ಬೋಧಿತವಾದ ಪ್ರಣಾಮವು, **ತನ್ನೋಡು ತುವಕ್ಕರತ್ತುಕೊಂಡು** - ತನ್ನ ರಕ್ಷಣೆಯ ಉಪಾಯದಲ್ಲಿ ತನಗೆ ಸಂಬಂಧವನ್ನು ಛೇದಿಸಿ ಎಂದರೆ ನಿವೃತ್ತಿಸಿ, **ಸಪರಿಕರಮಾನ** - ಆನುಕೂಲ್ಯ ಸಂಕಲ್ಪಾದಿ ಪಂಚಪರಿಕರಗಳೊಂದಿಗೆ ಸೇರಿದ, **ಸ್ವರಕ್ಷಾಭರಸಮರ್ಪಣತ್ತಿಲೇ** - ತನ್ನ ರಕ್ಷಣೆಯ ಶಕ್ತಿ ತನಗಿಲ್ಲವು, ಸರ್ವೇಶ್ವರನಾದ ನಿನಗೆ ಸೇರಿದುದು ಎಂಬ ಭಾವನೆಯಿಂದ ಮಾಡುವ ಆತ್ಮಸಮರ್ಪಣದಲ್ಲಿ, **ತತ್ಪರವಾಗವುಮಾಮ್** - ತಾತ್ಪರ್ಯವುಳ್ಳದ್ದು ಆಗುತ್ತದೆ. ಮೇಲೆ ಹೇಳಿದ ಎರಡು ಪ್ರಕರಣಗಳಲ್ಲೂ ಶರಣಾಗತಿ ಎಂಬ ಅರ್ಥದಲ್ಲೇ ನಮಶ್ಶಬ್ದಪ್ರಯೋಗವೆಂಬುದು ಸುವ್ಯಕ್ತವು-ಮೇಲೆ ಹೇಳಿದ ಎರಡು ಸಂದರ್ಭದಲ್ಲೂ ಶರಣಾಗತಿಯು ಮೋಕ್ಷಪ್ರಾಪ್ತಿರೂಪ ರಕ್ಷಣೆಗಾಗಿ ಅಲ್ಲವು ಮೊದಲಿನ ಸಂದರ್ಭದಲ್ಲಿ ವನವಾಸರೂಪ ಕಷ್ಟ ನಿವಾರಣೆಗಾಗಿ ಎಂದು ಭಾವಿಸತಕ್ಕದ್ದು. ಮೋಕ್ಷರೂಪ ಶರಣಾಗತಿಗಾಗಿಯೇ ಎಂದು ಏಕೆ ಭಾವಿಸಕೂಡದು? ಎಂದರೆ, ಶರಣಾಗತಿಯು ಸಕೃದನುಷ್ಠೇಯವಾಗಿ ನಿಸ್ಸಂಶಯ

ವಾಗಿ ಮೋಕ್ಷವನ್ನು ಕೊಡುವಾಗ ಪುನಃ ಯಾವ ಉಪಾಯಾನುಷ್ಠಾನವೂ ಕೂಡದು. ಆದರೆ ಯುದ್ಧರಂಗದಲ್ಲಿ ಕರ್ಮಜ್ಞಾನಾಙ್ಗಕವಾದ ಉಪಾಸನರೂಪೋಪಾಯವನ್ನು ಉಪದೇಶಿಸಿರುವದರಿಂದ, ಈ ಮಾರ್ಕಂಡೇಯರಿಂದ ಉಪದೇಶಿಸಲ್ಪಟ್ಟವರಾಗಿ ಪಾಂಡವರೆಲ್ಲರೂ ಅನುಷ್ಠಿಸಿದ ಶರಣಾಗತಿಯು ರಾಜ್ಯಭ್ರಷ್ಟತೆ ವನವಾಸ ಮೊದಲಾದ ಕ್ಲೇಶಗಳ ನಿವಾರಣೆಗಾಗಿ ಎಂದೇ ಭಾವಿಸತಕ್ಕದ್ದು. ಈ ಶರಣಾಗತಿಯ ಫಲವಾಗಿಯೇ ಶತ್ರುಗಳ ನಾಶವೂ ರಾಜ್ಯಪ್ರಾಪ್ತಿಯೂ ಲಭಿಸುತ್ತವೆ. ದಮಯನ್ತೀ ವೃತ್ತಾಂತದಲ್ಲಿ ಆ ಶರಣಾಗತಿಯ ಫಲವು, ನಿಜವಾದ ನಳನನ್ನು ವರಿಸೋಣವು. ಆದರೆ ಈ ಮೂಲಮನ್ತ್ರದಲ್ಲಾದರೋ ನಮಸ್ಸು ಸಾಙ್ಗಸ್ವರಕ್ಷಾಭರಸಮರ್ಪಣಪರವೆಂದು ಹೇಳಲೇನೂ ಅಭ್ಯಂತರವಿರುವದಿಲ್ಲವು. ಆದುದರಿಂದ ಆ ಎರಡು ಸಂದರ್ಭಗಳಲ್ಲೂ "**ನಮಶ್ಶಬ್ದಮ್ ತಾನೇ ಶರಣಾಗತಿಶಬ್ದಸ್ಥಾನತ್ತಿಲೇಪಠಿತಮ್**" ಎಂದು ಇಷ್ಟು ಮಾತ್ರವೇ ಹೇಳಿರುತ್ತಾರೆ. ಇದಕ್ಕೆ ಮುಂದೆ ಉಪಪಾದಿಸಿರುವದೆಲ್ಲಾ ಮೂಲಮನ್ತ್ರದಲ್ಲಿ ಪಠಿತವಾದ ನಮಶ್ಶಬ್ದದ ವಿವರಣವು. ಹೀಗೆ ವೈಲಕ್ಷಣ್ಯವನ್ನು ಗ್ರಹಿಸತಕ್ಕದ್ದು. ಆದರೆ ಇಲ್ಲಿ "**ತ್ತ ತುವಕ್ಕೆರುತ್ತುಕೊಂಡು ಸ್ವರಕ್ಷಾಭರಸಮರ್ಪಣತ್ತಿಲ್** ನಮಶ್ಶಬ್ದಕ್ಕೆ **ತಾತ್ಪರ್ಯಂ** ಎಂದು ಬರೆದುದು **ಹೇಗೆ?** ಎಂದರೆ ಯಾವಾಗ ಸಮಸ್ತ ಸ್ವರಕ್ಷಾಭರಸಮರ್ಪಣೆಯನ್ನು ಶ್ರಿಯಃಪತಿಯಲ್ಲಿ ಮಾಡಿದನೋ, ಆಗ ಸ್ವರಕ್ಷಣೆಯಲ್ಲಿ ತಾನು ಅಶಕ್ತನೆಂಬ ಆಕಿಂಚನ್ಯವು ಸ್ವತಸ್ಸಿದ್ಧವು. ಅಥವಾ ಇನ್ನೊಂದು ವಿಧವಾಗಿಯೂ ನಮಶ್ಶಬ್ದದಲ್ಲೇ ಶಾಬ್ದವಾಗಿಯೇ ತೋರಿಬರುತ್ತದೆಂದು ಭಾವಿಸಬಹುದು. ಹಿಂದಿನ ಸಖಂಡ ನಮಸ್ಸಿನ ಯೋಜನೆಯಲ್ಲಿ **ನ, ಮಃ** ಎಂಬುದರಿಂದ, **ಮಮನ** ಎಂದಾಗುವದರಿಂದ ಸ್ವರಕ್ಷಣೆಯ ಸಂಬಂಧವು ನನಗಿಲ್ಲವು ಎಂದಾಗುತ್ತದೆಂದು ಭಾವಿಸಿ, ಅದಕ್ಕಾಗಿ ಅಖಂಡನಮಸ್ಸಿನ ಪೂರ್ವಕ ಶರಣಾಗತಿಯು ಎಂದು ಭಾವಿಸಬಹುದು. ನಮಸ್ಕಾರರೂಪ ಅನುಷ್ಠಾನ ಕಾಲದಲ್ಲಿ **ನಮೋನಮಃ** ಎಂದು ಒಂದು ಸಲ ಹೇಳಿದರೆ, ಮೊದಲಿನ ನಮಸ್ಸಿನಿಂದ ಸ್ವರಕ್ಷಣ ಸಂಬಂಧ ನಿವೃತ್ತಿಯೂ, ಎರಡನೆಯ ನಮಸ್ಸಿನಿಂದ ಆತ್ಮರಕ್ಷಾಭರಸಮರ್ಪಣರೂಪ ಶರಣಾಗತಿಯೂ ಬೋಧಿತವೆಂದು ಭಾವಿಸಬಹುದು. ಆದುದರಿಂದ ನಮಸ್ಕಾರವು ಯುಗ್ಮರೂಪದಲ್ಲಿರುವದಕ್ಕೆ ಇದೂ ಒಂದು ಕಾರಣವೆಂದು ಭಾವಿಸಬಹುದು. ಈ ಅಭಿಪ್ರಾಯವು ಶ್ರೀ ಪರಾಶರ ಭಟ್ಟರ ಅಷ್ಟಶ್ಲೋಕಿಯ ಎರಡನೆಯ ಶ್ಲೋಕದಲ್ಲಿ ವ್ಯಕ್ತವು. "**ಗತಿರ್ಗಮ್ಯಂ ಶಿಕ್ಷಿತ ವಿೂಕ್ಷಿತೇನ ಪುರತಃ ಪಶ್ಚಾದಪಿ ಸ್ಥಾನತಃ**"**ಸ್ಥಾನತಃ - ಸ್ವಸ್ಥಾನೇ, ಈಕ್ಷಿತೇನ**-ಅನ್ವಿತೇನ ಅಖಂಡನಮೋನ್ವಿತೇನ, **ನಮಸಾ**-ಸಖಂಡ ನಮಸಾ, **ಗತಿಃ**-ಶರಣಾಗತಿ ರೂಪೋಪಾಯಃ ಶಿಕ್ಷಿತಾ ; ಅದು ಹೇಗೆಂದರೆ ಮಃ ನ, **ಮಮನ** - ಸ್ವರಕ್ಷಣೆಯಲ್ಲಿ ನನಗೆ ಅನ್ವಯವಿಲ್ಲವು. ಆದುದರಿಂದ ಪರಮಾತ್ಮನಲ್ಲೇ (ಅನ್ವಯವು). **ನಮಃ - ಆತ್ಮ**

## ನಮಸಃ ಆತ್ಮಸಮರ್ಪಣ ಪರತ್ವೇಪಿ ಪ್ರಮಾಣಮಾಹ

ನಮಸ್ಸು ಆತ್ಮ ಸಮರ್ಪಣ ಪರಮಾಯಿರುಕ್ಕು ಮೆನ್ನುಮಿಡಮ್ (೧) ಸಮಿತ್ಸಾಧನಕಾದೀನಾಂ ಯಜ್ಞಾನಾಂ ನ್ಯಾಸ ಮಾತ್ಮನಃ। ನಮಸಾ ಯೋ

---

ರಕ್ಷಾಭರಸಮರ್ಪಣವೇ ನನಗೆ ಉಪಾಯವು ಎಂದು ಶರಣಾಗತಿಯು ಹೇಳಲ್ಪಟ್ಟಿತೆಂಬ ಭಾವವು. "ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿತೇ" "ತ್ವಾಮೇವ ಶರಣಂ ಪ್ರಾಪ್ಯ ನಿಸ್ತರಂತಿ ಮನೀಷಿಣಃ" ಇತ್ಯಾದಿಗಳು ಅನುಸಂಧೇಯಗಳು.

### ನಮಸ್ಸು ಆತ್ಮ ಸಮರ್ಪಣ ಪರವೆಂಬುದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ.

ಮುಂದೆ ಎರಡು ಪ್ರಮಾಣಗಳ ಮೂಲಕವಾಗಿ ನಮಶ್ಶಬ್ದವು ಆತ್ಮಸಮರ್ಪಣೆಯನ್ನೇ ಬೋಧಿಸುತ್ತದೆಂದು ತಿಳಿಸುತ್ತಾರೆ.—**ನಮಸ್ಸು** - ನಮಶ್ಶಬ್ದವು, **ಆತ್ಮಸಮರ್ಪಣ ಪರಮಾಯಿರುಕ್ಕು ಮೆನ್ನುಮಿಡಮ್** - ಆತ್ಮ ಸಮರ್ಪಣೆಯನ್ನು ಬೋಧಿಸುವಂತಹದ್ದಾಗಿರುತ್ತದೆಂಬ ಸಂದರ್ಭವು "(೧) **ಸಮಿತ್ಸಾಧನಕಾದೀನಾಂ** - ಸಮಿತ್ತು, ಆಜ್ಯ, ಪುರೋಡಾಶ ಆತ್ಮಹವಿಸ್ಸೇ ಮೊದಲಾದವುಗಳನ್ನೇ ಸಾಧನವಾಗಿವುಳ್ಳ, **ಯಜ್ಞಾನಾಂ** - ಯಜ್ಞಗಳಲ್ಲಿ ಷಷ್ಠಿಗೆ ಸಪ್ತಮ್ಯರ್ಥವು, ಅಥವಾ ಅಂತಹ ಯಜ್ಞಗಳ ಮಧ್ಯದಲ್ಲಿ, ಮಧ್ಯೇ ಎಂದು ಇಟ್ಟುಕೊಳ್ಳತಕ್ಕದ್ದು. **ಯಃ** - ಯಾವ ಪುರುಷನು. **ದೇವೇ** - ಲೀಲಾಪರನಾದ ಪರಮಾತ್ಮನಲ್ಲಿ, **ಆತ್ಮನಃ ನ್ಯಾಸಂ** - ತನ್ನ ಆತ್ಮವಿಷಯಕ ರಕ್ಷಾಭರಸಮರ್ಪಣೆಯನ್ನು, **ನಮಸಾ**- ನಮಶ್ಶಬ್ದದ ಮೂಲಕವಾಗಿ, **ಯೋ ಕರೋತ್** - ಯಾವನು, ಅನುಷ್ಠಿಸುವನೋ **ಸಃ** - ಅವನು, **ಸ್ವಧ್ವರಃ** - ಸಮೀಚೀನವಾದ ಯಜ್ಞಾನುಷ್ಠಾತೃವೆಂದು, **ಇತೀರಿತಃ** - ಎಂದು **ಹೇಳಲ್ಪಡುತ್ತಾನೆ**" (೨೩೩೧ನೆಯ ಪುಟವನ್ನು ನೋಡಿ) ತೈತ್ತರೀಯದಲ್ಲೂ ಇದು ವ್ಯಕ್ತವು. "**ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತ ಮಾಹುಃ**"ಎಂದು ಸ್ಥಾಪಿಸಿ, ಆ ನ್ಯಾಸವು ಯಾವುದು ಎಂದರೆ **ವಸುರಣ್ಯೋ ವಿಭೂರಸಿ**" ಎಂಬ ಮುಂದಿನ ಮಂತ್ರದಿಂದ ತಿಳಿಸಿ, **ಉಪಯಾಮ ಗೃಹೀತೋಸಿ**" ಎಂದು ನಮಶ್ಶಬ್ದಾರ್ಥವನ್ನು ಬೋಧಿಸಿ, **ಓಮಿತ್ಯಾತ್ಮಾನಂ ಯುಂಜೀತ**" ಎಂದು ಆತ್ಮ ಸಮರ್ಪಣೆಯೂ ಬೋಧಿಸಲ್ಪಟ್ಟಿರುತ್ತದೆ. ಮುಂದಿನ ಅನುವಾಕವಾದ "**ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ**" ಎಂಬಲ್ಲೂ ಇದು ವ್ಯಕ್ತವು. ಈ ಅಹಿರ್ಬುಧ್ನ್ಯ ಸಂಹಿತಾವಾಕ್ಯಕ್ಕೆ ಪ್ರಮಾಣ

---

(೧) ಅಹಿರ್ಬುಧ್ನ್ಯ. ೩೭. ೩೭.

**ಕೆರೋದ್ದೇವೇ ಸ ಸ್ವಧ್ವರ ಇತೀರಿತಃ" (೨) "ನಮಸ್ಕಾರಾತ್ಮಕಂ ಯಸ್ಮೈ ವಿಧಾಯಾತ್ಮನಿವೇದನಮ್" ಇತ್ಯಾದಿಗಳಾಲುಮ್ ಪ್ರಸಿದ್ಧಮ್.**

**(ಪ್ರಣವ ಮೊರಕ್ಷರ ಮಾಯಿರುಪ್ಪದೊರು ಪದಮಾಯಿರುಕ್ಕ ವಕ್ಷರ ತ್ರಯಮಾಕ್ಕಿ, ಇವ್ವಕ್ಷರಙ್ಗಳೈ ತನಿತ್ತನಿಯೇ ಪದಙ್ಗಳಾಗಕ್ಕೊಂಡು ಒರು**

---

ಶ್ರುತಿಯು ಯಾವುದೆಂದರೆ.— **ಯಸ್ಸಮಿಧಾಯ ಆಹುತೀಯೋ ವೇದೇನದದಾಶಮರ್ತಃ ಅಗ್ನಯೇಯೋ ನಮಸಾ ಸ್ವಧ್ವರಃ"** ಎಂಬುದು (೨)"**ಯಸ್ಮೈ**-ಯಾವ ಪ್ರಸಿದ್ಧನಾದ ಪರಮಪುರುಷನಿಗೆ, **ನಮಸ್ಕಾರಾತ್ಮಕಂ** - ನಮಸ್ಕಾರ ರೂಪವಾದ, **ಆತ್ಮನಿವೇದನಮ್** - ಆತ್ಮರಕ್ಷಣ ಭರಸಮರ್ಪಣವನ್ನು, **ವಿಧಾಯ**-ಅನುಷ್ಠಿಸಿ ಮುಂದೆ "**ಮುಕ್ತದುಃಖೋಽಖಿಲಾನ್ಕಾಮಾ ನಶ್ನುತೇ ತನ್ನಮಾಮ್ಯಹಮ್"** ಎಂದಿರುತ್ತದೆ; ದುಃಖಗಳಿಂದ ಬಿಡಲ್ಪಟ್ಟವನಾಗಿ ಸಮಸ್ತಾಭೀಷ್ಟಗಳನ್ನೂ ಹೊಂದುವನೋ, ಅಂತಹ ಪರಮಪುರುಷನನ್ನು ಕುರಿತು ನಮಸ್ಕರಿಸುವೆನು" ಇತ್ಯಾದಿಗಳಾಲುಮ್ - ಇಂತಹ ಪ್ರಮಾಣಗಳಿಂದಲೂ, **ಪ್ರಸಿದ್ಧವು.** ಹೀಗೆ ಈ ಎರಡೂ ಪ್ರಮಾಣಗಳೂ ನಮಃಶ್ಶಬ್ದಕ್ಕೆ ಆತ್ಮರಕ್ಷಾಭರ ಸಮರ್ಪಣವೇ ಅರ್ಥವೆಂದು ಬೋಧಿಸುತ್ತವೆ.

ಪ್ರಣವವು ಓಮಿತ್ಯೇಕಾಕ್ಷರಂ ಎಂದು ಹೇಳಿರುವ ಹಾಗೆ, ಒತ್ತೆಳತ್ತು ಒಂದಕ್ಷರವು, ನಮಃ ಎಂಬುದು "**ನಮ ಇತಿ ದ್ವೇ ಅಕ್ಷರೇ"** ಎಂದು ಹೇಳಿರುವ ಹಾಗೆ ಎರಡು ಅಕ್ಷರಗಳಿಂದ ಕೂಡಿದ ಅವ್ಯಯವು ; ಇವೆರಡೂ ಸೇರಿ ಒಂದು ವಾಕ್ಯವಾಗಿ ಅನ್ವಯಿಸುವದು ನ್ಯಾಯವು; ಏಕೆಂದರೆ "**ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದಸ್ತುನೇಷ್ಯತೇ"** ಎಂಬ ನ್ಯಾಯದ ಪ್ರಕಾರ, ಒಂದೇ ವಾಕ್ಯವಾಗುವಾಗ ಅದನ್ನು ಬಿಟ್ಟು ಹೆಚ್ಚು ವಾಕ್ಯಗಳನ್ನಾಗಿ ಭಾವಿಸಿ, ಅತಿಶಯ ಕಲ್ಪನೆಯು ಅತಿವಾದವಲ್ಲವೋ? ಎಂದು ಆಕ್ಷೇಪ ತಂದರೆ, ಮುಂದಿನ ವಾಕ್ಯದಿಂದ ಇಲ್ಲದ ಪ್ರಶಂಸೆಯನ್ನೇನೂ ಮಾಡಲಿಲ್ಲವು. ಈಗ ಮಾಡಿರುವ ವಾಕ್ಯಾರ್ಥಗಳೆಲ್ಲಾ ನಿರುಕ್ತಿಯ ಬಲದಿಂದಲೇ ಉಂಟಾದುದಾದುದರಿಂದ ಪರಮಗ್ರಾಹ್ಯವೆಂದು ಸಮಾಧಾನವನ್ನು ಹೇಳುತ್ತಾರೆ. ಮೊದಲು ಪೂರ್ವಪಕ್ಷವನ್ನುಪಪಾದಿಸಿ, ಆನಂತರ ಪರಿಹಾರವನ್ನು ತಿಳಿಸುತ್ತಾರೆ.—

"**ಪ್ರಣವಮೋರಕ್ಷರಂ"** ಎಂದಾರಂಭಿಸಿ **ಕೊಳ್ಳೈಗೈಯುಮ್"** ಎಂಬುದರವರೆಗೂ ಪೂರ್ವಪಕ್ಷವು, "**ನಿರುಕ್ತಿಬಲತ್ತಾಲೇ ಪೆತ್ತದು"** ಎಂಬುದು ಸಮಾಧಾನವು. **ಪ್ರಣವಂ** - ಪ್ರಣವವು, **ಓರಕ್ಷರಮಾಯಿರುಪ್ಪದೊರುಪದಮಾಯಿರುಕ್ಕೆ** - ಓಂ ಎಂಬ ಒಂದಕ್ಷರವಾಗಿರುವ ಒಂದು ಪದವಾಗಿರುವಾಗ,

---

(೨) ಮನ್ತ್ರರಾಜಪದಸ್ತೋತ್ರಮ್.

**ವಾಕ್ಯಾರ್ಥಮನುಸನ್ಧಿಕ್ಕೈಯುಮ್, ನಮಸ್ಸೆನ್ರು ಪ್ರಣಾಮವಾಚಿಯಾಯಿ ರುಪ್ಪದೊರು ಅವ್ಯಯಮಾಯಿರುಕ್ಕ, ಇತ್ತೈ ವಿಭಜಿತ್ತು ವಾಕ್ಯಾರ್ಥಮ್ ಕೊಳ್ಳುಗೈಯುಮ್, ನಿರುಕ್ತ ಬಲತ್ತಾಲೇ ಪೆತ್ತದು.)**

---

**ಅಕ್ಷರತ್ರಯಮಾಕ್ಕಿ** – ಅದು ಮೂರು ಅಕ್ಷರವುಳ್ಳದ್ದೆಂದು ಭಾವಿಸಿ, **ಇವ್ವಕ್ಷರ ಙ್ಗಳೈ** – ಈ ಅಕಾರ ಉಕಾರ ಮಕಾರಗಳನ್ನು, **ತನಿತ್ತನಿಯೇಪದಙ್ಗಳಾಗ ಕ್ಕೊಂಡು**-ಬೇರೆ ಬೇರೆ ಪದಗಳೆಂದು ಭಾವಿಸಿ, ಒಂದು ಪದವಾಗಿರುವಾಗ ಅದನ್ನು ಬಿಟ್ಟು ಮೂರು ಬೇರೆ ಪದಗಳೆಂದು ಭಾವಿಸಿ ಎಂಬ ಅರ್ಥವು, **ಒರುವಾಕ್ಯಾರ್ಥ ಮನುಸ್ಸಂಧಿಕ್ಕೈಯುಮ್** - ಹೀಗೆ ಆ ಒಂದೊಂದು ಪದಗಳೂ ವಿಶೇಷಾರ್ಥ ವುಳ್ಳವೆಂದು ಅನುಸಂಧಾನ ಮಾಡುವದೂ, ಮತ್ತು **ನಮಸ್ಸೆನ್ರು ಪ್ರಣಾಮವಾಚಿ ಯಿರುಪ್ಪದೊರು ಅವ್ಯಯಮಾಯಿರುಕ್ಕ** - ನಮಸ್ಸೆಂಬುದು ಪ್ರಣಾಮವನ್ನು ಬೋಧಿಸುವ ಒಂದು ಅವ್ಯಯವಾಗಿರುವಾಗ, **ಇತ್ತೈ. ವಿಭಜಿತ್ತು** – ಈ ನಮ ಸ್ಸೆಂಬ ಪದವನ್ನು ನ, ಮಃ ಎಂದು ವಿಭಾಗಿಸಿ, **ವಾಕ್ಯಾರ್ಥಮ್‌ಕೊಳ್ಳುಗೈ ಯುಮ್**-ಅದರಿಂದ ವಿಶೇಷಾರ್ಥವುಂಟೆಂದು ಅಂಗೀಕರಿಸೋಣವೂ ನ್ಯಾಯವೋ? ಎಂದರೆ **ನಿರುಕ್ತ ಬಲತ್ತಾಲೇ ಪೆತ್ತದು** - ವೇದಾಂಗವಾದ ನಿರುಕ್ತದ ಬಲದಿಂದ ಉಂಟಾದವು, ಅಂತಹ ವಾಕ್ಯಾರ್ಥಗಳಾದುದರಿಂದ ಪರಮಗ್ರಾಹ್ಯಗಳೇ ಎಂಬ ಭಾವವು. ನಿರುಕ್ತವೆಂದರೆ ವರ್ಣಾಗಮವರ್ಣವಿಪರ್ಯಯಾದಿಗಳ ಮೂಲಕ ನಿಶ್ಚಯದಿಂದ ಹೇಳಲ್ಪಟ್ಟದುದು ನಿರುಕ್ತವು. ಈ ನಿರುಕ್ತಬಲದಿಂದಲೇ **"ಸಚ್ಚಿ ದಾನಂದಂ ಬ್ರಹ್ಮಪುರುಷಂ ಪ್ರಣವಸ್ವರೂಪಂ ಅಕಾರ ಉಕಾರ ಮಕಾ ರ ಇತಿ"** ಎಂದು ಶ್ರುತಿಯೇ ವಿಭಾಗಿಸಿರುತ್ತದೆ. ಹಾಗೆಯೇ **"ಅಕಾರೇಣೋಚ್ಯ ತೇ ವಿಷ್ಣುಸ್ಸರ್ವಲೋಕೇಶ್ವರೋ ಹರಿಃ । ಉದ್ಧೃತಾ ವಿಷ್ಣುನಾ ಲಕ್ಷ್ಮೀ ರುಕಾರೇಣೋಚ್ಯತೇ ತಥಾ । ಮಕಾರಸ್ತು ತಯೋರ್ದಾಸ ಇತಿ ಪ್ರಣವ ಲಕ್ಷಣಂ"** ಇತ್ಯಾದಿ ಪ್ರಣವದ ನಿರುಕ್ತಿಯಿಂದುಂಟಾಗುವ ಅರ್ಥವು. ನಮಸ್ಸಿ ಗಾದರೋ **"ಅಹಮಪಿ ನಮಮ ಭಗವತ ಏವಾಹ ಮಸ್ಮಿ ಯಾಶ್ಚಶ್ಚನಕಾ ಕೃತಯೋ ಮಮಭವಂತಿ, ಮಮಮಮತಾನಾಸ್ತಿ ತಾಸು, ಭಗವತ ಏವ ತಾಃ, ಅಮಮೋಽಹಂ ಭಗವತಿ, ಅಹಮಪಿ ನಮಮ, ಭಗವತ ಏವಾಹ ಮಸ್ಮೀತ್ಯೇವಂ ಮಮತಾಂ ಯೋ ಜಯತ್ಯಸೌ ನಮಃ"** ಎಂಬ ಇವು ನಮ ಶ್ಶಬ್ದನಿರುಕ್ತಿಯಿಂದ ಸಿದ್ಧವಾದ ಅರ್ಥಗಳೆಂಬ ಭಾವವು. ಈ ಮೂಲದ ವಾಕ್ಯವು ಕೆಲವು ಕೋಶಗಳಲ್ಲಿಲ್ಲವು. ಸಾರದೀಪಿಕೆಯವರು ಮಾತ್ರ ಈ ವಾಕ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವದಿಲ್ಲವು. ಮಿಕ್ಕ ನಾಲ್ಕು ವ್ಯಾಖ್ಯಾತೃಗಳೂ ಈ ವಾಕ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವದರಿಂದ ಈ ವಾಕ್ಯವೂ ಪರಿಗ್ರಾಹ್ಯವೇ. ಮುಂದಿನ

**ನಮಃಶಬ್ದಾರ್ಥಾ ನಿರುಕ್ತೇ ಸ್ಪಷ್ಟಮಿತ್ಯಾಹ.**

**"ನಾನುಮೆನಕ್ಕುರಿಯೇನಲ್ಲೇನ್, ಎನ್ನುಡೈಯದಾನ ವ್ಯಾಪಾರಾದಿಗಳುಮ್ ಎನಕ್ಕು ಶೇಷಮನ್ರು, ಇವೈಯೆಲ್ಲಾಮ್ ಸರ್ವೇಶ್ವರನುಕ್ಕೇ ಶೇಷಮ್," ಎನ್ರಿವೈ ಮುದಲಾನ ವರ್ಥಙ್ಗಳೆಲ್ಲಾಮ್ ನಮಶ್ಶಬ್ದತ್ತಿಲೇ ವಿವಕ್ಷಿತಮೆನ್ನುಮಿಡಮ್ ನಿರುಕ್ತತ್ತಿಲ್ ನಮಸ್ಕಾರ ಪ್ರಕರಣತ್ತಿಲೇ ಓದಪ್ಪಟ್ಟತು.**

---

ವಾಕ್ಯಕ್ಕೂ ಇದಕ್ಕೂ ಸಙ್ಗತಿಯೂ ಇರುವದರಿಂದಲೂ ಇದು ಶ್ರೀ ದೇಶಿಕರವರ ಅನುಗ್ರಹಿಸಿದ ವಾಕ್ಯವೆಂಬುದರಲ್ಲಿ ಸಂದೇಹವಿಲ್ಲವು. ೧

ಮುಂದಿನ ವಾಕ್ಯದಿಂದ ನಮಶ್ಶಬ್ದದ ನಿರುಕ್ತಿಯಿಂದ ಉಂಟಾದ ವಿಶೇಷಾರ್ಥಗಳು ಯಾವುವೆಂಬುದನ್ನು ಉಪಪಾದಿಸಿ ಹೇಳುತ್ತಾರೆ. ಪ್ರಣವಕ್ಕೆ ನಿರುಕ್ತ ಬಲದಿಂದ ಹೇಗೆ ಅರ್ಥಗಳುಂಟೋ, ಹಾಗೆಯೇ ನಮಶ್ಶಬ್ದಕ್ಕೂ ಉಂಟೆಂದು ಹೇಳಲು ಉಪಕ್ರಮಿಸಿ, ಮೊದಲು ಪ್ರತಿಜ್ಞಾವಾಕ್ಯವನ್ನು ದಯಪಾಲಿಸುತ್ತಾರೆ. **ಹಿಂದೆ ಹೇಳಿದ ನಮಶ್ಶಬ್ದಾರ್ಥಗಳು ನಿರುಕ್ತದಲ್ಲಿ ಸ್ಪಷ್ಟವೆಂದುಹೇಳುತ್ತಾರೆ.**

---

ನಮಸ್ಸಿನಿಂದ, ತನಗೆ ತಾನು ಶೇಷಭೂತನಲ್ಲವು, ತನಗೆ ಶೇಷಿತ್ವವೂ ಇಲ್ಲವು, ತನಗೆ ಸ್ವಾತಂತ್ರ್ಯವೂ ಇಲ್ಲವು, ಇತ್ಯಾದಿ ಹೇಳಲ್ಪಟ್ಟ ಅರ್ಥಗಳನ್ನೆಲ್ಲಾ ನಿರುಕ್ತದಲ್ಲಿ ನಮಸ್ಕಾರ ಪ್ರಕರಣದಲ್ಲಿ ಸಿದ್ಧಗಳೆಂದು ಹೇಳುತ್ತಾರೆ. **ನಾನು ಮೆನಕ್ಕುರಿಯೇನಲ್ಲೇನ್** - ಇದು ಮೇಲೆ ಉದಾಹರಿಸಿರುವ ನಿರುಕ್ತವಾಕ್ಯದ **ಅಹಂ ನಮಮ** ಎಂಬುದರ ವ್ಯಾಖ್ಯಾನವು, ನಾನು ನನಗೆ ಸಂಬಂಧಿಸಿದನಲ್ಲವು, **ಎನ್ನುಡೈಯದಾನ ವ್ಯಾಪಾರಾದಿಗಳುಮ್ ಎನಕ್ಕು ಶೇಷಮನ್ರು** - ಇದು **"ಯಾಶ್ಚ ಕಾಶ್ಚ ಸ ಕೃತಯೋ ಮಮ ಭವನ್ತಿ, ನ ತು ಮಮತಾ ನಾಸ್ತಿ ತಾಸು,** ಎಂಬುದರ ವ್ಯಾಖ್ಯಾನವು ; ನನ್ನ ವ್ಯಾಪಾರಗಳೂ ನನಗಾಗಿ ಅಲ್ಲವು ; **ಇವೈಯೆಲ್ಲಾಮ್ ಸರ್ವೇಶ್ವರನುಕ್ಕೇ ಶೇಷಮ್** – ಇದು **"ಭಗವತ ಏವತಾಃ"** ಎಂಬುದರ ವ್ಯಾಖ್ಯಾನವು, ಇವೆಲ್ಲವೂ ಭಗವಂತನ ಪ್ರಯೋಜನಕ್ಕಾಗಿಯೇ, ಭಗವಂತನ ಮುಖೋಲ್ಲಾಸಕ್ಕಾಗಿಯೇ, **ಎನ್ರಿವೈ ಮೊದಲಾನ** - ಎಂಬಿವೇ ಮೊದಲಾದ ಅರ್ಥಗಳೆಲ್ಲವೂ, ಈ ಆದಿ ಪದದಿಂದ ಮೇಲ್ಕೆ ಉದಾಹರಿಸಿರುವ ನಿರುಕ್ತದ ಇತರ ವಾಕ್ಯಗಳು ಬೋಧಿತವು, **ನಮಶ್ಶಬ್ದತ್ತಿಲೇ ವಿವಕ್ಷಿತ ಮೆನ್ನುಮಿಡಮ್** – ನಮಶ್ಶಬ್ದದಿಂದ ತೋರಿಬರುತ್ತದೆಂಬುದು, **ನಿರುಕ್ತತ್ತಿಲ್**–ವೇದಾಂಗವಾದ ನಿರುಕ್ತದಲ್ಲಿ, ನಮಸ್ಕಾರ ಪ್ರಕರಣದಲ್ಲಿ, ಓದಪ್ಪಟ್ಟದು - ಪಠಿತವಾಗಿರುತ್ತದೆ, ಶ್ರುತಿಯ ಅಙ್ಗವಾದುದರಿಂದ ಓದಪ್ಪಟ್ಟದು ಶ್ರುತವಾಗಿರುತ್ತದೆಂಬ

**ನಮಸಃ ನಿರುಕ್ತಬಲಾತ್ ಅಹಿರ್ಬುಧ್ನ್ಯೋಕ್ತಸ್ಥೂಲಸೂಕ್ಷ್ಮಾದಿ ಯೋಜನಾತ್ರಯಮಾಹ.**

**ಇನ್ನಮಶ್ಶಬ್ದತ್ತುಕ್ಕು ಸ್ಥೂಲಸೂಕ್ಷ್ಮ ಪರಙ್ಗಳೆನ್ರು ಮೂನ್ರರ್ಥಙ್ಗಳೈವಕುತ್ತು ಅಹಿರ್ಬುಧ್ನ್ಯರ್ ವ್ಯಾಖ್ಯಾನಂ ಪಣ್ಣಿನಾರ್. (೧) ಪ್ರೇಕ್ಷಾವತಃ ಪ್ರವೃತ್ತಿರ್ಯಾ ಪ್ರಹ್ವೀಭಾವಾತ್ಮಿಕಾ ಸ್ವತಃ।ಉತ್ಕೃಷ್ಟಂ ಪರಮುದ್ದಿಶ್ಯ**

---

ಪ್ರಯೋಗವು. ಹಿಂದೆ ಈ ಅರ್ಥಗಳೆಲ್ಲಾ ಹೇಗೆ ಉಂಟಾಯಿತೆಂದು ಉಪಪಾದಿಸಿರುವದು ತಮ್ಮ ಮನಬಂದಂತೆ ಸ್ವಾರಸ್ಯ ಕಲ್ಪನೆಗಾಗಿ ಹೇಳಿದ ಅರ್ಥವಲ್ಲವು; ನಿರುಕ್ತದಲ್ಲಿ ಹೇಳಿರುವ ವಾಕ್ಯಗಳನ್ನು ಮನಸ್ಸಿನಲ್ಲಿಟ್ಟೇ, ಆ ಅರ್ಥಗಳೆಲ್ಲಾ ಹೇಗೆ ಉಂಟಾಗುತ್ತೆಂದು ತೋರಿಸಿದೆವೆಂಬ ಭಾವವು. ನಿರುಕ್ತವು ವೇದಕ್ಕೇ ಸೇರಿದುದಾದುದರಿಂದ ಆ ವಾಕ್ಯಗಳನ್ನು ಸಾಕ್ಷಾತ್ತಾಗಿ ಉದಾಹರಿಸದೆ ಅದರ ಅರ್ಥಗಳನ್ನು ಮಾತ್ರ ಈ ವಾಕ್ಯದಲ್ಲಿ ತೋರಿಸಿರುತ್ತಾರೆ. ಈ ಪ್ರಣವ ನಮಸ್ಸುಗಳ ನಿರುಕ್ತಾರ್ಥಗಳನ್ನೆಲ್ಲಾ ನಮ್ಮ ಆಳ್ವಾರುಗಳೂ ಸಹ ತಮ್ಮ ಪಾಶುರಗಳಲ್ಲಿ ವ್ಯಕ್ತಪಡಿಸಿರುತ್ತಾರೆ.

**ನಿರುಕ್ತಿಬಲದಿಂದ ನಮಸ್ಸಿಗೆ ಅಹಿರ್ಬುಧ್ನ್ಯರಿಂದ ಹೇಳಲ್ಪಟ್ಟ ಸ್ಥೂಲ, ಸೂಕ್ಷ್ಮ, ಪರವೆಂಬ ಮೂರು ಯೋಜನೆಗಳನ್ನು ತಿಳಿಸುತ್ತಾರೆ.**

ಇನ್ನಮಶಬ್ದತ್ತುಕ್ಕು – ಈ ನಮಶ್ಶಬ್ದಕ್ಕೆ, ಸ್ಥೂಲ, ಸೂಕ್ಷ್ಮ, ಪರ, ವೆಂಬದಾಗಿ **ಮೂನ್ರರ್ಥಙ್ಗಳೈ** – ಮೂರು ಅರ್ಥಗಳನ್ನು, **ಅಹಿರ್ಬುಧ್ನ್ಯರು** ಅವರು ಬರೆದ ಸಂಹಿತೆಯಲ್ಲಿ, **ವ್ಯಾಖ್ಯಾನಂ ಪಣ್ಣಿನಾನ್** - ವ್ಯಾಖ್ಯಾನವನ್ನು ಮಾಡಿದರು. ಪ್ರಥಮದಲ್ಲಿ ಸಂಹಿತಾ ವಾಕ್ಯಗಳಿಂದ ಸ್ಥೂಲ ಯೋಜನೆಯ ಅರ್ಥವನ್ನು ತಿಳಿಸುತ್ತಾರೆ.— **ಇನ್ನಮಶ್ಶಬ್ದತ್ತುಕ್ಕು** - ಈ ಮೂಲಮನ್ತ್ರದ ನಮಶ್ಶಬ್ದಕ್ಕೆ, **ಸ್ಥೂಲ, ಸೂಕ್ಷ್ಮ ಪರವೆಂದು, ಮೂನ್ರರ್ಥಂಗಳೈ** - ಮೂರು ಅರ್ಥಗಳನ್ನು, **ವಕುತ್ತು, ಅಹಿರ್ಬುಧ್ನ್ಯರು, ವ್ಯಾಖ್ಯಾನಂಪಣ್ಣಿನಾರ್**–ವ್ಯಾಖ್ಯಾನವನ್ನು ಮಾಡಿದರು, ಹೇಗೆಂದರೆ—(೧) "**ಪ್ರೇಕ್ಷಾವತಃ** - ಪ್ರಾಜ್ಞನಿಗೆ, **ಉತ್ಕೃಷ್ಟಂ** - ಶ್ರೇಷ್ಠನಾದ, **ಪರಮುದ್ದಿಶ್ಯ**-ಹೆಚ್ಚಾದ ಮಹಿಮೆಯುಳ್ಳವನನ್ನು ಕುರಿತು, **ಸ್ವತಃ**-ತಾನೇ, **ಪ್ರಹ್ವೀಭಾವಾತ್ಮಿಕಾ**-ಅಷ್ಟಾಂಗದಿಂದ ಬಗ್ಗಿ ಮಾಡುವ, **ಯಾಪ್ರವೃತ್ತಿಃ** - ಯಾವ ಪ್ರಣಾಮರೂಪ ಪ್ರವೃತ್ತಿಯುಂಟೋ, **ತತ್**-ಅದು, **ನಮಃ** - ನಮಸ್ಕಾರವೆಂದು, **ಪರಿಗೀಯತೇ** - ಹೊಗಳಲ್ಪಟ್ಟಿರುತ್ತದೆ" **ಲೋಕೇ** - ಈ ಲೋಕದಲ್ಲಿ, ಅಥವಾ ಸ್ಮೃತಿಯಲ್ಲಿ **ಅಯಂ** - ಈ, **ಚೇತನವರ್ಗಸ್ತು** - ಚೇತನ ಸಮುದಾಯ

---

(೧) ಅಹಿ. ಸಂ. ೫೨-೨-೩೩.

ತನ್ಮನಃ ಪರಿಗೀಯತೇ ॥ ಲೋಕೇ ಚೇತನವರ್ಗಸ್ತು ದ್ವಿಧೈವ ಪರಿಕೀರ್ತ್ಯತೇ। ಜ್ಯಾಯಾಂಶ್ಚೈವ ತಥಾಜ್ಯಾಯಾನ್ನೈವಾಭ್ಯಾಂ ವಿದ್ಯತೇ ಪರಃ। ಕಾಲತೋ ಗುಣತಶ್ಚೈವ ಪ್ರಕರ್ಷೋ ಯತ್ರ ತಿಷ್ಠತಿ। ಶಬ್ದಸ್ತಂ ಮುಖ್ಯಯಾ ವೃತ್ತ್ಯಾ ಜ್ಯಾಯಾನಿತ್ಯವಲಂಬತೇ " ಅತ ಶ್ಚೇತನವರ್ಗೋ ನ್ಯಃಸ್ಮೃತಃ ಪ್ರತ್ಯವರೋ ಬುಧೈಃ। ಅಜ್ಯಾಯಾಂಶ್ಚ ಸಂತೋ ರ್ಯೋಗ ಶ್ಶೇಷಶೇಷಿತಯೇಷ್ಯತೇ ॥ ಅಜ್ಯಾಯಾಂ ಸೋಪರೇ ಸರ್ವೇ ಜ್ಯಾಯಾ ನೇಕೋ ಮತಃ

---

ವಾದರೋ, ಜ್ಯಾಯಾನ್ - ಶ್ರೇಷ್ಠವಾದುದೆಂದೂ ತಥಾ - ಹಾಗೆಯೇ, ಅಜ್ಯಾಯಾಂಶ್ಚೈವ - ನಿಕೃಷ್ಟವಾದುದೆಂದೂ, ದ್ವಿಧೈವ ಪರಿಕೀರ್ತ್ಯತೇ - ಎರಡು ವಿಧವಾದುದೆಂದು ಹೇಳಲ್ಪಡುತ್ತದೆ. ಆಭ್ಯಾಂ - ಈ ಎರಡು ವಿಧಕ್ಕಿಂತಲೂ, ಪರಃ - ಬೇರೆಯಾದ ಆತ್ಮನು, ನ ವಿದ್ಯತೇ - ಇರುವದಿಲ್ಲವು" ಯತ್ರ - ಯಾವನಲ್ಲಿ, ಕಾಲತೋ ಗುಣಶ್ಚೈವ - ಕಾಲಸ್ಥಿತಿಯಿಂದಲೂ, ಗುಣದ ಮೂಲಕವಾಗಿಯೂ ಸಹ, ಪ್ರಕರ್ಷಃ - ಉತ್ಕೃಷ್ಟತೆಯು, ತಿಷ್ಠತಿ - ಇರುತ್ತದೆಯೋ ಮುಖ್ಯಯಾ ವೃತ್ತ್ಯಾ - ಮುಖ್ಯ ವೃತ್ತಿಯಿಂದಲೇ, ಶಬ್ದಃ - ಶಬ್ದವು, ತಂ - ಅಂತವನನ್ನು, ಜ್ಯಾಯಾನ್ ಇತಿ - ಶ್ರೇಷ್ಠನೆಂಬದಾಗಿ, ಅವಲಂಬತೇ - ಹೊಂದುತ್ತದೆ ಎಂದರೆ ಹೇಳುತ್ತದೆ ಎಂಬ ಭಾವವು. ಕಾಲತಃ ಉತ್ಕರ್ಷವೆಂದರೆ, ಉತ್ಕರ್ಷವು ನಿತ್ಯವಾಗಿ ಎಲ್ಲಾ ಕಾಲದಲ್ಲಿರೋಣವು, ಇದು ದೇಶಕ್ಕೂ ಉಪಲಕ್ಷಣವು, ಎಲ್ಲೆಲ್ಲಿ ಇದ್ದರೂ ಅಲ್ಲೆಲ್ಲಾ ಉತ್ಕರ್ಷವಿರೋಣವು ದೇಶತಃ ಉತ್ಕರ್ಷವು ; ಗುಣತಃ ಉತ್ಕರ್ಷವು - ಶಾಸ್ತ್ರಾನುಗುಣನಾಗಿ ಸದಾಚಾರಯುಕ್ತನಾಗಿ ಭೂತದಯೆಯೇ ಮೊದಲಾದ ಸರ್ವೋತ್ಕೃಷ್ಟ ಗುಣಗಳಿಂದ ಉತ್ಕರ್ಷವು ; ಇಂತಹ ಉತ್ಕರ್ಷವುಳ್ಳವನು ಶ್ರೇಷ್ಠನೆಂದು ಮುಖ್ಯವೃತ್ತಿಯಿಂದಲೇ ಹೇಳಿಸಿಕೊಳ್ಳುವನೆಂಬ ಭಾವವು. ಅತಃ - ಮೇಲೆ ಹೇಳಿದವನಿಗಿಂತ, ಅನ್ಯಃ ಚೇತನವರ್ಗಃ - ಹೀಗಲ್ಲದೆ ಬೇರೆಯಾದ ಚೇತನ ವರ್ಗವು, ಬುಧೈಃ - ಪ್ರಾಜ್ಞರಿಂದ, ಪ್ರತ್ಯವರಃ - ನಿಕೃಷ್ಟನಾಗಿ, ಅಜ್ಯಾಯಾಂಶ್ಚ - ಶ್ರೇಷ್ಠವಲ್ಲವೆಂದು, ಸ್ಮೃತಃ - ಸ್ಮೃತಿಯಲ್ಲಿ ಹೇಳಲ್ಪಟ್ಟಿತು. ಮುಂದೆ ಈ ಎರಡು ವಿಧ ಆತ್ಮವರ್ಗಕ್ಕೂ ಸಂಬಂಧ ಉಂಟೆಂದು ಹೇಳುತ್ತಾರೆ. ಅನಯೋಃ - ಈ ಶ್ರೇಷ್ಠ ನಿಕೃಷ್ಟ ಆತ್ಮರುಗಳಿಗೆ, ಯೋಗಃ - ಸಂಬಂಧವು, ಶೇಷಶೇಷಿತಯಾ - ಶ್ರೇಷ್ಠವಾದುದು ಶೇಷಿಯೆಂದೂ, ನಿಕೃಷ್ಟವಾದುದು ಶೇಷವೆಂದೂ ಹೀಗೆ ಶೇಷಿ ಶೇಷ ಭಾವದಿಂದ, ಇಷ್ಯತೇ - ಒಪ್ಪಿಕೊಳ್ಳತಕ್ಕದ್ದಾಗಿರುತ್ತದೆ. ಈ ಎರಡು ವಿಧ ಆತ್ಮವರ್ಗಗಳಲ್ಲಿ, ಜ್ಯಾಯಾನ್ ಎಂದು ಹೇಳುವ ತರಗತಿಯಲ್ಲಿರುವವನು ಶ್ರಿಯಃಪತಿಯು ; ಮಿಕ್ಕ ಈ ಆತ್ಮವರ್ಗವೆಲ್ಲಾ ಅಜ್ಯಾಯಾನ್ ತರಗತಿಗೆ ಸೇರಿದುದು ಎಂದು ಮುಂದೆ ಹೇಳು

**ಪರಃ । ನಂತೃ ನಂತವ್ಯ ಭಾವೇನ ತೇಷಾಂ ತೇನ ಸಮನ್ವಯಃ ॥ ನಂತವ್ಯಃ ಪರಮ ಶ್ಶೇಷೀ ಶೇಷಾ ನಂತಾರ ಈರಿತಾಃ । ನಂತೃ ನಂತವ್ಯ ಭಾವೋಯಂ ನ ಪ್ರಯೋಜನ ಪೂರ್ವಕಃ।ನೀಚೋಚ್ಚ ಯೋಃ ಸ್ವಭಾವೋ ಯಂ ನಂತೃ ನಂತವ್ಯತಾತ್ಮಕಃ । ಉಪಾಧಿರಹಿತೇನಾಯಂ ಯೇನ ಭಾವೇನ ಚೇತನಃ ॥**

---

ತ್ತಾರೆ. **ಏಕಃ** - ಒಬ್ಬನಾದ ಪರಮಾತ್ಮನೇ, **ಪರಃ** - ಸರ್ವ ಶ್ರೇಷ್ಠನಾಗಿರುವದರಿಂದ, **ಜ್ಯಾಯಾರ್** ಎಂದು ಹೇಳಿಸಿ ಕೊಳ್ಳುವನೆಂಬುದು, **ಮತಃ** - ಅಭಿಪ್ರಾಯವು, ಹಾಗೆಯೇ **ಅಪರೇ ಸರ್ವೇ** - ಮಿಕ್ಕವರೆಲ್ಲರೂ **ಅಜ್ಯಾಯಾಂಸಃ "ಆಶುದ್ಧಾಸ್ತೇ ಸಮಸ್ತಾಸ್ತು"** ಎಂದು ಹೇಳಿರುವ ಹಾಗೆ ನಿಕೃಷ್ಟರಾಗಿ ಅಜ್ಯಾಯ ತರಗತಿಗೆ ಸೇರಿದವರು ಎಂಬುದೂ, **ಮತಃ**- ಅಭಿಪ್ರಾಯವು. ಅವರಿಬ್ಬರಿಗೂ ಎಂದರೆ ಪರಮಾತ್ಮನಿಗೂ ಮತ್ತು ಜೀವಾತ್ಮ ವರ್ಗಕ್ಕೂ ಸಂಬಂಧವುಂಟು ಎಂದು ಹೇಳಲ್ಪಟ್ಟಿತಲ್ಲಾ, ಆ ಸಂಬಂಧವೆಂತಾದ್ದೆಂದು ಈಗ ವಿವರಿಸಿ ಹೇಳುತ್ತಾರೆ—**ತೇನ** - ಆ ಉತ್ಕೃಷ್ಟನಾದ ಪರಮಾತ್ಮನೊಂದಿಗೆ. **ತೇಷಾಂ** - ಆ ನಿಕೃಷ್ಟರಾದ ಜೀವಾತ್ಮರ, **ಸಮನ್ವಯಃ** - ಸಂಬಂಧವು, ಹೇಗೆ ? ಎಂದರೆ **ನಂತೃ ನಂತವ್ಯಭಾವೇನ** - ಸೇವಿಸುವ ಎಂದರೆ ನಮಸ್ಕರಿಸುವ ಮತ್ತು ನಮಸ್ಕರಿಸಲ್ಪಡಲು ಯೋಗ್ಯವಾದ ಭಾವದಿಂದ ಸಂಬಂಧವೆಂಬ ಭಾವವು, ಈಗ **ನಂತವ್ಯಃ** - ನಮಸ್ಕರಿಸಲ್ಪಡಲು ಯೋಗ್ಯನು ಯಾರು ಎಂದರೆ, **ಪರಮಶ್ಶೇಷೀ** - ಸರ್ವೋತ್ಕೃಷ್ಟನಾಗಿ ಶೇಷಿಯಾದ ಪರಮ ಪುರುಷನೇ, **ನಂತಾರಃ** - ನಮಸ್ಕರಿಸುವವರು ಯಾರು ಎಂಡರೆ **ಶೇಷಾಃ** - ಇತರರಾದ ಸಮಸ್ತ ಜೀವಾತ್ಮರೆಂದು, **ಈರಿತಾಃ** - ಹೇಳಲ್ಪಟ್ಟಿರುತ್ತಾರೆ. ಹೀಗೆ ಸ್ವತಃ ಏರ್ಪಟ್ಟಿರುವ ನಂತೃ ನಂತವ್ಯ ಭಾವವು ಏನಾದರೂ ಪರಸ್ಪರ ಪ್ರಯೋಜನಕ್ಕಾಗಿಯೇ? ಎಂದರೆ, ಯಾವ ಪ್ರಯೋಜನಪೂರ್ವಕವಾಗಿಯೂ ಏರ್ಪಟ್ಟಿದುದು ಅಲ್ಲವೆಂದು ಹೇಳುತ್ತಾರೆ.—**ಅಯಂ ನಂತೃ ನಂತವ್ಯ ಭಾವಃ** - ಈ ಮೇಲೆ ಉಪಪಾದಿಸಿದ ಎಲ್ಲರೂ ನಮಸ್ಕರಿಸುವವರು, ಪರಮ ಪುರುಷನು ನಮಸ್ಕರಿಸಲ್ಪಡುವವನು ಎಂಬೀ ಸಂಬಂಧವು, **ನಪ್ರಯೋಜನ ಪೂರ್ವಕಃ** - ಪ್ರಯೋಜನ ಪೂರ್ವಕವಾಗಿ ಉಂಟಾದುದಲ್ಲವು, ಉಪಾಧಿ ಪೂರ್ವಕವಲ್ಲವು, ನಿರುಪಾಧಿಕವಾದದ್ದು ಎಂಬ ಭಾವವು. ಈ ಲೋಕದಲ್ಲಿ ಒಬ್ಬ ಉತ್ತಮ ಪದವಿಯಲ್ಲಿರುವವನಿಗೆ ನೀಚಪದವಿಯಲ್ಲಿರುವವನು ನಮಸ್ಕರಿಸುವದು ಸೋಪಾಧಿಕವಾದುದು. ಹಾಗಲ್ಲವು ಇಲ್ಲಿ ನಿರುಪಾಧಿಕವಾಗಿಯೇ ಪ್ರಾಪ್ತವಾದುದು ಎಂಬ ಭಾವವು. ಅದು ಹೇಗೆ ಎಂದರೆ ವ್ಯಕ್ತಪಡಿಸುತ್ತಾರೆ. **ನೀಚೋಚ್ಚಯೋಃ** - ನಿಕೃಷ್ಟನಾಗಿಯೂ ಸರ್ವೋತ್ಕೃಷ್ಟನಾಗಿಯೂ ಇರುವೆರಡರ, **ಸ್ವಭಾವಃ** - ಸ್ವಭಾವ ಮೂಲಕವಾಗಿಯೇ ಉಂಟಾದುದು, **ಅಯಂ ನಂತೃನಂತವ್ಯತಾ**

**ನನುತಿ ಜ್ಯಾಯಸೇ ತಸ್ಮೈ ತದ್ವಾನಮನ ಮುಚ್ಯತೇ। ಭಗವಾನ್ ಮೇ ಪರೋ ನಿತ್ಯ ಮಹಂ ಪ್ರತ್ಯವರ ಸ್ಸದಾ ॥ ಇತಿ ಭಾವೋ ನಮಃ ಪ್ರೋಕ್ತೋ ನಮಸಃ ಕಾರಣಂ ಹಿ ಸಃ। ನಾಮಯತ್ಯಪಿ ವಾ ದೇವಂ ಪ್ರಹ್ವೀಭಾವಯತಿ ಧ್ರುವಮ್॥**

ತ್ಮಕೇಃ- ಈ ನಮಸ್ಕರಿಸುವ ಮತ್ತು ನಮಸ್ಕರಿಸಲ್ಪಡತಕ್ಕ ರೂಪ ಸಂಬಂಧವು, ನಮಸ್ಕಾರವು, ಶಾರೀರ ಮಾನಸ ವಾಚಕ ರೂಪದಲ್ಲಿ ಮೂರು ವಿಧವು. ಇದುವರೆಗೂ ಶಾರೀರ ನಮಸ್ಕಾರವು ಹೇಳಲ್ಪಟ್ಟಿತು. ಮುಂದೆ ಮಾನಸರೂಪವಾದುದು ಹೇಳಲ್ಪಡುತ್ತದೆ.—**ಅಯಂ ಚೇತನಃ** - ಈ ಜೀವಾತ್ಮನು, **ಉಪಾಧಿ ರಹಿತೇನ**- ಸ್ವಾಭಾವಿಕವಾದ ಎಂದರೆ ಇನ್ನು ಯಾವಕಾರಣದಿಂದಲೇ ಆಗಲಿ, ಆಥವಾ ಪ್ರಯೋಜನದ ಆಶೆಯಿಂದಲೇ ಆಗಲಿ ಅಲ್ಲದೆ ಸ್ವಾಭಾವಿಕವಾದ, **ಯೇನ ಭಾವೇನ** - ಯಾವ ಅನುಸಂಧಾನದಿಂದ, **ಜ್ಯಾಯಸೇ ತಸ್ಮೈ** - ಸರ್ವ ಶ್ರೇಷ್ಠನಾದ ಆ ಪರಮ ಪುರುಷನಿಗೆ, **ನನುತಿ** - ನಮಸ್ಕರಿಸುತ್ತಾನೋ, **ತದ್ವಾ** - ಅದೂ ಸಹ, **ನಮನಂ** - ನಾಮಸ್ಕಾರವೇ ಎಂದು, **ಉಚ್ಯತೇ** ಹೇಳಲ್ಪಡುತ್ತದೆ. ಇಲ್ಲಿ ನಮನ ಶಬ್ದಕ್ಕೆ ವ್ಯುತ್ಪತ್ತಿಯು, **ಯೇನ ನಮತಿ ತನ್ನಮನಂ** ಯಾವ ಅನುಸಂಧಾನದಿಂದ ನಮಸ್ಕಾರವೋ ಅದು ನಮನವೆನಿಸುತ್ತದೆ ಎಂಬದಾಗಿ. ಹಿಂದಿನ ಯೋಜನೆಯಲ್ಲಾದರೋ **ನಮನಂ ನಮಃ** ಎಂಬುದಾಗಿ ಭಾವಿಸತಕ್ಕದ್ದು. **ಭಗವಾನ್** - ಹೇಯ ಪ್ರತ್ಯನೀಕನಾಗಿ ಷಾಡ್ಗುಣ್ಯ ಪರಿಪೂರ್ಣನಾದ ಭಗವಂತನು, **ಮೇ**-ನನಗೆ, **ನಿತ್ಯಂ** - ಶಾಶ್ವತವಾದ, **ಪರಃ** - ಶ್ರೇಷ್ಠನಾಗಿ ಸರ್ವಾಭೀಷ್ಟಪ್ರದನಾದ ಪರತತ್ವವು, **ಅಹಂ** - ನಾನು, **ಸದಾ** - ಯಾವಾಗಲೂ, **ಪ್ರತ್ಯವರಃ** - ಆತನಿಗೆ ದಾಸನಾದುದರಿಂದ ಅವನಿಗಿಂತ ಕೀಳಾದವನು, **ಇತಿ** ಎಂಬ, **ಭಾವಃ** - ಭಾವವು, **ನಮಃ ಪ್ರೋಕ್ತಃ** - ನಮಸ್ಕಾರವೆಂದು ಹೇಳಲ್ಪಟ್ಟಿತು, **ಸಃ** - ಭಗವಂತನು ಸರ್ವಶ್ರೇಷ್ಠನು ತನಗೆ ಶೇಷಿಯು, ತಾನು ಆತನಿಗೆ ದಾಸನು ಎಂಬ ಅಂತಹ ಮನಸ್ಸಿನ ಭಾವನೆಯೇ **ನಮಸಃ ಕಾರಣಂ ಹಿ** - ಶರೀರ ಮೂಲಕವಾಗಿ ಪ್ರಣಾಮವನ್ನು ಮಾಡಿದ ನಮಸ್ಕಾರವಷ್ಟೇ. ಇದರಿಂದ ಕರಣ ವ್ಯುತ್ಪತ್ತಿಯ ಮೂಲಕವಾಗಿ ನಮಶ್ಶಬ್ದವು ಉಪಪಾದಿಸಲ್ಪಟ್ಟಿತು. ಭಗವಂತನು ಸರ್ವ ಶ್ರೇಷ್ಠನಾಗಿ, ನಮಗೆ ಸರ್ವ ವಿಧ ಶ್ರೇಯಸ್ಸನ್ನು ಕೊಡುವವನಾಗಿ, ಚೇತನನು ಆತನಿಗೆ ನಿತ್ಯ ದಾಸನಾಗಿದ್ದಾನೆಂಬ ಮನಸ್ಸಿನಲ್ಲಿ ಅನುಸಂಧಾನವೇ ಈ ಪ್ರಹ್ವೀಭಾವವಾದ ಪ್ರಣಾಮಕ್ಕೆ ಕಾರಣವಾದುದರಿಂದ, ನಮಸ್ಸು ಅಂತಹ ಅನುಸಂಧಾನವನ್ನೂ ಬೋಧಿಸುತ್ತದೆಂಬ ಭಾವವು. **ಅಪಿವಾ** - ಇಷ್ಟುಮಾತ್ರವೇ ಅಲ್ಲವು, ನಮಶ್ಶಬ್ದದ ಅರ್ಥವು ಇನ್ನೂ ಉಂಟೆಂಬ ಭಾವವು, ಆದುದರಿಂದ ಅಥವಾ ಎಂಬರ್ಥವಾಗಬಹುದು. **ದೇವಂ** - ಲೀಲಾ ಜಗತ್ಪತಿಯನ್ನು, **ನಾಮಯತಿ** - ಶರಣಾ

**ಪ್ರಹ್ವೀಭವತಿ ನೀಚೇ ಹಿ ಪರೋ ನೈಚ್ಯಂ ವಿಲೋಕಯನ್ । ಅತೋ ನಾ ನಮ ಉದ್ದಿಷ್ಟಂ ಯತ್ತನ್ನಾಮಯತಿ ಸ್ವಯಮ್ ॥ ನಾಚಾ ನಮ ಇತಿ**

---

ಗತನನ್ನು ಅನುಗ್ರಹಿಸಬೇಕೆಂಬ ಸಙ್ಕಲ್ಪಯುಕ್ತನನ್ನಾಗಿ ಭಕ್ತನನ್ನು ಬಗ್ಗುವ ಹಾಗೆ ಮಾಡುತ್ತದೆ, **ಧ್ರುವಂ** - ನಿಶ್ಚಯವಾಗಿಯೂ **ಪ್ರಹ್ವೀ ಭಾವಯತಿ**. "**ಅಜ್ಞಾಪಯ ಯಥೇಷ್ಟಂ ವೈ ಶಾಸನಂ ಕರವಾವ ಕಿಮ್**" ಎಂದು ಶ್ರೀ ರಾಮ ಲಕ್ಷ್ಮಣರು ವಿಶ್ವಾಮಿತ್ರರಲ್ಲಿ ನಮ್ರ ಭಾವದಿಂದ ವಿಜ್ಞಾಪಿಸಿಕೊಂಡಹಾಗೆ, ಭಕ್ತನ ಕೋರಿಕೆಯನ್ನು ಸಲ್ಲಿಸುವದಕ್ಕಾಗಿ ನಮ್ರೀಭೂತನಾಗಿ ಮಾಡುತ್ತದೆ. ಇದನ್ನೇ ಮುಂದಿನವಾಕ್ಯದಿಂದ ಉಪಪಾದಿಸಿ ಹೇಳುತ್ತಾರೆ. **ಪರಃ** . ಪರಮಾತ್ಮನು ಸರ್ವಶ್ರೇಷ್ಠನಾದುದರಿಂದಲೇ, **ನೀಚೇ** - ನಿಕೃಷ್ಟನಾದ ಈ ಜೀವಾತ್ಮನಲ್ಲಿ, **ನೈಚ್ಯಂ ವಿಲೋಕಯನ್** - ನಿಕೃಷ್ಟಭಾವವನ್ನು, ದೈನ್ಯವನ್ನು ಕಂಡು ಕರುಣಾಸಾಗರನು, **ಪ್ರಹ್ವೀ ಭವತಿಹಿ** - ಆತನಿಗೆ ಶ್ರೇಯಸ್ಸನ್ನುಂಟುಮಾಡುವದಕ್ಕಾಗಿ, ನಮ್ರನಾಗುವದು ನ್ಯಾಯವಷ್ಟೇ. ಅಧಿಕಾರದಿಂದ ಶ್ರೇಷ್ಠನಾಗಿರುವವನು, ಈ ಲೋಕದಲ್ಲಿ ತನ್ನ ಕೈಕೆಳಗೆ ಇರುವವನನ್ನು ಕಂಡು ಹೀಗೆ ಮರುಗಲಾರನು; ಸರ್ವೇಶ್ವರನು ಪರನಾಗಿ ಪರಮ ಕರುಣಾಳುವಾಗಿರುವದರಿಂದ ತನಗಿಂತ ಹೀನಸ್ಥಿತಿಯಲ್ಲಿರುವ ಭಕ್ತರ ವಿಷಯದಲ್ಲಿ ವಿಶೇಷ ನಮ್ರತೆಯನ್ನು ತೋರಿ, ಅವರುಗಳ ಇಷ್ಟಾರ್ಥವನ್ನು ಸಲ್ಲಿಸುವನು ಎಂಬ ಭಾವವು. ಆದುದರಿಂದ **ಪರಂ ನಾಮಯತಿ** ಎಂಬ ವ್ಯುತ್ಪತ್ತಿಯ ಮೂಲಕವಾಗಿಯೂ ನಮಶ್ಶಬ್ದಕ್ಕೆ ಅರ್ಥವನ್ನು ಹೇಳಬಹುದೆಂದು ಮುಂದೆ ಹೇಳುತ್ತಾರೆ. **ಅತೋ ನಾ** - ಆ ಕಾರಣದಿಂದಲೇ, **ಯತ್** - ಯಾವುದು, **ಸ್ವಯಮ್** - ತಾನಾಗಿಯೇ, **ನಾಮಯತಿ** – ಸರ್ವ ಶ್ರೇಷ್ಠನನ್ನೂ ಕೂಡ, ನಮಸ್ಕರಿಸುವನನ್ನು ಕುರಿತು ನಮ್ರನಾಗುವಹಾಗೆ ಮಾಡುತ್ತದೋ; **ತತ್** - ಅದು, **ನಮ ಉದ್ದಿಷ್ಟಮ್** - ನಮಸ್ಸೆಂದು ಹೇಳಲ್ಪಟ್ಟಿತು. ಲೋಕದಲ್ಲೂ ಕೂಡ ಒಬ್ಬ ಶ್ರೇಷ್ಠನಿಗೆ ನಮಸ್ಕಾರ ಮಾಡಿದರೆ, ಆ ಶ್ರೇಷ್ಠನೂ ಕೂಡ ಸಲ್ಪ ಬಗ್ಗಿದವನಾಗಿ ಆ ನಮಸ್ಕಾರವನ್ನು ಅಂಗೀಕರಿಸುತ್ತಾನೆ. ಹೀಗಿರುವಾಗ ಪರಮ ಪುರುಷನನ್ನು ಕುರಿತು, ಈ ಶರಣಾಗತಿರೂಪ ನಮಸ್ಕಾರವನ್ನು ಭಕ್ತನು ಮಾಡಿದರೆ, ಅಂತಹ ನಮಸ್ಕಾರವು ಪರಮ ಪುರುಷನನ್ನೂ ಇವನ ಕಡೆಗೆ ಅನುಗ್ರಹ ಮಾಡುವದಕ್ಕಾಗಿ ಬಗ್ಗಿಸುತ್ತದೆಂಬುದೇನೂ ಅತಿಶಯವಾದುದಲ್ಲವು. ಆತನ ಸಹಜ ಕರುಣೆಯೇ ಹಾಗೆ ಎಂದು ಹೇಳುವದಕ್ಕಾಗಿ ಇಲ್ಲಿ **ಸ್ವಯಮ್** ಎಂಬ ಪ್ರಯೋಗವು. ಶರಣಾಗತ್ಯರ್ಥವನ್ನು ನಮಶ್ಶಬ್ದವು ಬೋಧಿಸಬೇಕೆಂದರೆ ಅದಕ್ಕೆ ಪೂರ್ಣತೆಯು ಆವಶ್ಯಕವು. ಮೇಲೆ ಹೇಳಿದ ರೀತಿಯಲ್ಲಿ ಮನಸ್ಸಿನಿಂದ ಅನುಸಂಧಾನವೂ, ವಾಕ್ಕಿನಿಂದ ನಮಃ ಎಂದು ಹೇಳೋಣವೂ,

**ಪ್ರೋಚ್ಯ ನಮಸಾ ವಪುಷಾ ಚ ಯತ್ । ತನ್ನಮಃ ಪೂರ್ಣ ಮುದ್ದಿಷ್ಟ ಮತೋಽನ್ಯನ್ನ್ಯೂನ ಮುಚ್ಯತೇ॥ಇಯಂ ಕರಣಪೂರ್ತಿಸ್ಸ್ಯಾ ದಂಗಪೂರ್ತಿ**

ಶರೀರದಿಂದ ಅಷ್ಟಾಂಗ ಪ್ರಣಾಮವೂ ಕೂಡಿ,ಇಂತ ಅಙ್ಗಗಳಿಂದ ಕೂಡಿದರೆ ಆಗ **ನಮಃ** ಎಂಬುದು ಪೂರ್ಣ ಶರಣಾಗತಿಯಾಗುತ್ತದೆಂದೂ, ಇವುಗಳಲ್ಲಿ ಯಾವುದ ರಲ್ಲಾದರೂ ನ್ಯೂನತೆ ಇದ್ದರೆ ಶರಣಾಗತಿಯಾಗುವದಿಲ್ಲವೆಂದೂ ಮುಂದೆ ಉಪ ದೇಶಿಸಲ್ಪಡುತ್ತದೆ. **ವಾಚಾ** - ವಾಕ್ಕಿನಿಂದ, **ನಮ** ।ಇತಿ - "**ನಮಃ**" ಎಂಬ ದಾಗಿ ಮುಖ್ಯ ಕರಣಮನ್ತ್ರವಾದ ದ್ವಯದ ಕೊನೆಯಲ್ಲಿರುವ ।ನಮಶ್ಶಬ್ದಃ ಎಂಬದಾಗಿ, **ಪ್ರೋಚ್ಯ** - ಚನ್ನಾಗಿ ಉಚ್ಚರಿಸಿ ಮನಸ್ಸಿನ ಅನುಸಂಧಾನದೊಂದಿಗೆ ಹೇಳಿ, ಅದನ್ನೇ ವಿವರಿಸಿ ಹೇಳುತ್ತಾರೆ.—**ಮನಸಾ ವಪುಷಾಚ**-ಹಿಂದೆ ಉಪಪಾದಿ ಸಿದ ರೀತಿಯಲ್ಲಿ ಮನಸ್ಸಿನಲ್ಲಿ ಅನುಸಂಧಾನದಿಂದಲೂ, ಶರೀರದ ಮೂಲಕಅಷ್ಟಾಙ್ಗ ಪ್ರಣಾಮದಿಂದಲೂ ಸಹ, **ಯತ್** - ಅನುಷ್ಠಿಸಲ್ಪಟ್ಟದುದು ಯಾವುದೋ, **ತತ್**- ಅಂತಹ, **ನಮಃ** - ನಮಶ್ಶಬ್ದವಾಚ್ಯವಾದುದು, **ಪೂರ್ಣಮುದ್ದಿಷ್ಟಮ್** – ಸಂಪೂರ್ಣ ಶರಣಾಗತಿ ಎಂದು ಹೇಳಲ್ಪಟ್ಟಿತು. **ಅತಃ ಅನ್ಯತ್** - ಅದಕ್ಕಿಂ ತಲೂ ಬೇರೆಯಾದ ನಮಸ್ಸು, **ನ್ಯೂನಂ ಉಚ್ಯತೇ** - ಶರಣಾಗತಿಯಾಗದೆ ನ್ಯೂನ ವಾದುದು ಎಂದು ಹೇಳಲ್ಪಡುತ್ತದೆ. **ವಾಚಾ ಮನಸಾ ವಪುಷಾ** ಯುಕ್ತವಾದ ನಮಸ್ಸು ಪೂರ್ಣ ಶರಣಾಗತಿ ಎಂದು ಹೇಳಲ್ಪಟ್ಟಿತಲ್ಲಾ, ಅವರಲ್ಲಿ ಎಲ್ಲಾಙ್ಗ ಗಳೂ ಇವೆಯೇ ಎಂದರೆ ಉಂಟೆಂದು ಮುಂದೆ ಉಪಪಾದಿಸುತ್ತಾರೆ.—**ಇಯಂ**- ಇಂತಹ ವಾಚಾ ಮನಸಾ ಕರ್ಮಣಾ ಯುಕ್ತವಾದ ನಮಸ್ಕಾರವೇ, **ಕರಣ ಪೂರ್ತಿಸ್ಸ್ಯಾತ್** - ಕರಣಮಂತ್ರದುಚ್ಚಾರಣರೂಪ ಅನುಷ್ಠಾನದ ಪೂರ್ತಿಯುಂ ಟಾಗುವದು, ಹೀಗೆ ಅಂಗಿಯ ಅನುಷ್ಠಾನದ ಕ್ರಮದ ಪೂರ್ತಿಯುಂಟಾಗುತ್ತದೆಂಬ ಭಾವವು. ಆಗಲಿ ಅಙ್ಗಗಳಿಲ್ಲದೆ ಅಂಗಿ ನಿಷ್ಪತ್ತಿಯಿಲ್ಲವಲ್ಲಾ? ಅಙ್ಗಾಂಗಿಗಳ ಸಮುಚ್ಚಯವು ಆವಶ್ಯಕವಲ್ಲವೋ? ಅಙ್ಗಗಳ ಪೂರ್ಣತೆಯೂ ಉಂಟೋ? ಎಂದರೆ ಉಂಟೆಂದು ಮುಂದೆ ಹೇಳುತ್ತಾರೆ.—**ಇಮಾಂ** - ಈ, **ಅಙ್ಗಪೂರ್ತಿಂ**- ಅಙ್ಗಗಳಿಂದ ಅಂತಹ ನಮಸ್ಕಾರವು ಸೇರಿ ಪೂರ್ಣತೆಯನ್ನು ಹೊಂದಿರುವಿಕೆ ಯನ್ನು, **ಶೃಣು** - ಹೇಳುತ್ತೇನೆ ಸಾವಧಾನದಿಂದ ಕೇಳು.—ಪ್ರಥಮತಃ ಸಾತ್ವಿಕ ತ್ಯಾಗವು ಎಲ್ಲಾ ಮೋಕ್ಷಾರ್ಥಿಯ ಅನುಷ್ಠಾನಕ್ಕೂ ಆವಶ್ಯಕವಾಗಿ ಅದನ್ನು ಮೊದಲನೆಯ ಅಙ್ಗವಾಗಿ ಹೇಳುತ್ತಾರೆ. ಇದು ಪಂಚಾಂಗಗಳಲ್ಲಿ ಸೇರಲಿಲ್ಲ ವೆಂದೂ, ಇದು ಆತ್ಮನಿಕ್ಷೇಪದಲ್ಲೇ ಸೇರಿದುದು ಎಂದೂ, ಹಿಂದೆ ಪರಿಕರ ವಿಭಾಗಾ ಧಿಕಾರದಲ್ಲಿ ಹೇಳಿರುತ್ತಾರೆ. ಅಲ್ಲಿ ಹೇಳಿರುವದೇನೆಂದರೆ. **"ಇತ್ಯಂಗಮುದಿತಂ ಶ್ರೇಷ್ಠಂ ಫಲೇಪ್ಸಾತದ್ವಿರೋಧಿನೀ"** ಎನ್ನು ಅಹಿರ್ಬುಧ್ನ್ಯೋಕ್ತವಾದ

ಮಿನಾಂ ಶೃಣು। ಶಾಶ್ವತೀ ಮಮ ಸಂಸಿದ್ಧಿರಿಯಂ ಪ್ರಹ್ವೀಭವಾಮಿ ಯತ್॥
ಪುರುಷಂ ಪರಮುದ್ದಿಶ್ಯ ನ ಮೇ ಸಿದ್ಧಿರಿತೋಽನ್ಯಥಾ। ಇತ್ಯಂಗಮುದಿತಂ
ಶ್ರೇಷ್ಠಂ ಫಲೇಪ್ಸಾ ತದ್ವಿರೋಧಿನೀ ॥ ಅನಾದಿವಾಸನಾರೋಹಾದನೈಶ್ವ
ರ್ಯಾತ್ಸ್ವಭಾವಜಾತ್ । ಮಲಾವಕುಂಠಿತತ್ವಾಚ್ಚ ದೃಕ್ಕ್ರಿಯಾ ವಿಹತಿ
ರ್ಯಾ॥ ತತ್ಕಾರ್ಪಣ್ಯಂ ತದುದ್ಬೋಧೋ ದ್ವಿತೀಯಂ ಹ್ಯಂಗಮೀದೃಶಂ ।

---

ಫಲತ್ಯಾಗರೂಪಾಂಗಾಂತರೇಣ ಮೋಕ್ಷಾರ್ಥಿನಾ ಆತ್ಮನಿಕ್ಷೇಪಃ ಕರ್ತವ್ಯ ಇತಿ ನಿಯತವ್" ಎಂಬದಾಗಿ. (ಪರಿಕರ ವಿಭಾಗಾಧಿಕಾರ. ೮೫೫-೭ನೆಯ ಪುಟಗಳನ್ನು ಪರಾಂಬರಿಸಿ,) ಅಲ್ಲಿ ಚೆನ್ನಾಗಿ ಇದು ಅಂಗಿಯಲ್ಲೇ ಸೇರಿದುದೆಂಬುದು ಉಪಪಾದಿಸಲ್ಪಟ್ಟಿರುತ್ತದೆ. **ಪರಂ ಪುರುಷಂ** - ಪುರುಷೋತ್ತಮನಾದ ಶ್ರಿಯಃಪತಿಯನ್ನು, **ಉದ್ದಿಶ್ಯ** - ಕುರಿತು, **ಪ್ರಹ್ವೀಭವಾಮಿ ಯತ್** - ಮನಸಾ ವಾಚಾ ಕಾಯೇನ ನಮಸ್ಕರಿಸಿ ಯಾವ ಫಲಾಕಾಂಕ್ಷೆಯೂ ಇಲ್ಲದೆ, ಶರಣಾಗತಿಯನ್ನನುಷ್ಠಿಸುತ್ತೇನೆಂಬುದು ಯಾವುದೋ, **ಇಯಂ** - ಇದೇ, **ಮಮ** - ನನಗೆ, **ಶಾಶ್ವತೀ ಸಂಸಿದ್ಧಿಃ** - ಶಾಶ್ವತವಾದ ಶ್ರೇಯಸ್ಸು, **ಇತ್ಯಂಗಂ** - ಎಂಬೀ ಅಂಗವು **ಶ್ರೇಷ್ಠಮುದಿತಂ** - ತುಂಬಾ ಶ್ರೇಷ್ಠವಾದುದೆಂದು ಹೇಳಲ್ಪಟ್ಟಿತು. **ಫಲೇಪ್ಸಾ** - ಫಲಗಳಲ್ಲಿ ಅಪೇಕ್ಷೆಯಾದರೋ, **ತದ್ವಿರೋಧಿನೀ** - ಆ ಶಾಶ್ವತ ಫಲಕ್ಕೆ ವಿರೋಧವು. ಮುಂದೆ ಎರಡನೆಯ ಅಂಗವಾದ **ಕಾರ್ಪಣ್ಯವು** ಯಾವದೆಂಬುದು ಹೇಳಲ್ಪಡುತ್ತದೆ. **ಅನಾದಿವಾಸನಾರೋಹಾತ್** - ಅನಾದಿ ಕರ್ಮವಾಸನೆಯ ಸಂಬಂಧವಿರುವದರಿಂದಲೂ, **ಅನೈಶ್ವರ್ಯಾತ್** - ಸಂಪೂರ್ಣ ಪಾರತಂತ್ರ್ಯದಿಂದಲೂ, **ಮಲಾವಕುಂಠಿತತ್ವಾಚ್ಚ** - ಮನಸ್ಸಿಗೆ ಮಲಗಳ ಲೇಪವಿರುವದರಿಂದಲೂ, ಕಾಮಾದಿಗಳ ಸಂಬಂಧವಿರುವದೇ ಮನಸ್ಸಿಗೆ ಮಾಲಿನ್ಯವು, **ದೃಕ್ಕ್ರಿಯಾ ವಿಹತಿಃ**-ಕರ್ಮಯೋಗಾದಿಗಳನುಷ್ಠಾನಕ್ಕೆ ಬೇಕಾದ ಜ್ಞಾನಶಕ್ತಿಗಳ ನಾಶವು, **ಯಾ** - ಯಾವುದುಂಟೋ, **ತತ್** - ಅಂತಹ ಅನುಸಂಧಾನವು, **ಕಾರ್ಪಣ್ಯಂ**-ಆಕಿಂಚನ್ಯವು; **ತದುದ್ಬೋಧಃ**-ಅಂತಹ ಅನುಸಂಧಾನವು, **ದ್ವಿತೀಯಮಙ್ಗಂ**-ಎರಡನೆಯ ಅಙ್ಗವು, **ಈದೃಶಂ** - ಇಂತಾದ್ದು, **ಇಷ್ಯತೇ** -(ಪಾ) ಹೇಳಲ್ಪಡುತ್ತದೆ. ಅನಾದಿ ಕರ್ಮವಾಸನೆಯ ಪ್ರಾಬಲ್ಯದಿಂದಲೂ, ಸಂಪೂರ್ಣ ಪಾರತಂತ್ರ್ಯದಿಂದಲೂ, ಮನಸ್ಸು ನೈರ್ಮಲ್ಯವನ್ನು ಹೊಂದದೇ ಇರುವದರಿಂದಲೂ, ಉಪಾಸನೆಗೆ ಬೇಕಾದ ಕರ್ಮಯೋಗಾನುಷ್ಠಾನಕ್ಕೆ ಬೇಕಾದ ಜ್ಞಾನಶಕ್ತಿಗಳಿಲ್ಲದಿರುವದರಿಂದ ಭಕ್ತಿಯೋಗಕ್ಕೆ ಅಧಿಕಾರವಿಲ್ಲವೇ ಎಂಬ ಆಕಿಂಚನ್ಯವೇ ಕಾರ್ಪಣ್ಯವೆನಿಸುತ್ತದೆ. ಇಂತಹ ಕಾರ್ಪಣ್ಯವನ್ನೇ "ನ ಧರ್ಮನಿಷ್ಠೋಽಸ್ಮಿ ನ ಚಾತ್ಮವೇದೀ" ಎಂಬ ಶ್ಲೋಕದಲ್ಲಿ ಅನುಸಂಧಾನಮಾಡಿ ಶ್ರೀ ಯಾಮುನ ಮುನಿಗಳು

**ಸ್ವಸ್ಯಾತಂತ್ರ್ಯಾವಬೋಧಸ್ತು ತದ್ವಿರೋಧ ಉದೀರ್ಯತೇ । ಪರತ್ವೇಸತಿ ದೇವೋಽಯಂ ಭೂತಾನಾ ಮನುಕಂಪನಃ । ಅನುಗ್ರಹೈಕಧೀ ರ್ನಿತ್ಯ ಮಿತ್ಯೇತತ್ತು ತೃತೀಯಕಮ್ ॥ ಉಪೇಕ್ಷಕೋ ಯಥಾಕರ್ಮ ಫಲ**

---

ಶರಣಾಗತಿಯನ್ನನುಷ್ಠಿಸಿರುತ್ತಾರೆ. ಮುಂದಿನವಾಕ್ಯದಿಂದ ಈ ಮುಖ್ಯವಾದ ಅಙ್ಗವಿಲ್ಲದಿದ್ದರೆ ನಮಸ್ಕಾರವು ಶರಣಾಗತಿಯಾಗುವದಿಲ್ಲವೆಂದು ಹೇಳುತ್ತಾರೆ. **ಸ್ವಸ್ಯಾತಂತ್ರ್ಯಾವಬೋಧಸ್ತು**-ತನಗೆ ಸ್ವಾತಂತ್ರ್ಯವಿದೆ ಎಂಬ ಅನುಸಂಧಾನ ವಾದರೋ, ಎಂದರೆ ತನ್ನನ್ನು ರಕ್ಷಿಸಿಕೊಳ್ಳಲು ತನಗೆ ಶಕ್ತಿಯುಂಟು, ಅದನ್ನು ನಿರ್ವಹಿಸಲು ನಾನುಶಕ್ತನು ಎಂಬ ಭಾವನೆಯಾದರೋ, **ತದ್ವಿರೋಧಃ** - ಆ ಅಂಗಕ್ಕೆ ವಿರೋಧವು ಎಂದು, **ಉದೀರ್ಯತೇ** - ಹೇಳಲ್ಪಡುತ್ತದೆ. ಕಾರ್ಪಣ್ಯ ವಾದ ಮುಖ್ಯ ಅಙ್ಗವೇ ಯಾವಾಗ ಇಲ್ಲವೋ,ಆಗ ಅದು ಶರಣಾಗತಿಯೇ ಆಗುವ ದಿಲ್ಲವೆಂಬ ಭಾವವೂ, ತೋರಿಬರುತ್ತದೆ. ತನ್ನ ರಕ್ಷಣೆಯಲ್ಲಿ ತನಗೆ ಶಕ್ತಿಯಿಲ್ಲ ವೆಂಬ, ಇನ್ನು ಯಾರಿಗೂ ತನ್ನನ್ನು ರಕ್ಷಿಸುವ ಶಕ್ತಿಯಿಲ್ಲವೆಂಬಅಲ್ಲವೇ ಶರಣಾ ಗತಿಯನ್ನು ಅನುಷ್ಠಿಸುವವರ ಭಾವವು.

ಮುಂದೆ ಮೂರನೆಯ ಅಙ್ಗವಾದ ಮಹಾ ವಿಶ್ವಾಸವನ್ನು ಹೇಳುತ್ತಾರೆ. **ಪರತ್ವೇ ಸತಿ** - ರಕ್ಷಣೆಗೆ ಬೇಕಾದ ನಿರತಿಶಯ ಕಲ್ಯಾಣಗುಣಗಳಾದ ಸ್ವಾತಂತ್ರ್ಯ ಶಕ್ತಿ ದಯೆ ಮೊದಲಾದ ಗುಣಗಳಿಂದ ಪರಿಪೂರ್ಣನಾಗಿರುವ ಸರ್ವೋತ್ಕೃಷ್ಟ ತೆಯು ಇರಲಾಗಿ, **ಅಯಂ ದೇವಃ** - ಈ ಲೀಲಾ ಪರನಾದ ಸರ್ವೇಶ್ವರನು, **ಭೂತಾನಾಂ ಅನುಕಂಪನಃ** - ಪ್ರಾಣಿಗಳನ್ನು ರಕ್ಷಿಸಲೇಬೇಕೆಂಬ ಕೃಪಾಪ್ರೇರಿತ ನಾಗಿಯೇ ಇದ್ದುಕೊಂಡು, **ನಿತ್ಯಂ**-ಯಾವಾಗಲೂ **ಅನುಗ್ರಹೈಕ ಧೀಃ**-ಆಶ್ರಿತ ರನ್ನುರಕ್ಷಿಸಬೇಕೆಂಬುದೇ ಮುಖ್ಯವಾದ ಸಙ್ಕಲ್ಪರೂಪಜ್ಞಾನವುಳ್ಳವನಾಗಿರುವನು, **ಇತ್ಯೇತತ್ತು** - ಇಂತಹ ಅನುಸಂಧಾನವನ್ನಾದರೋ, **ತೃತೀಯಕಂ** - ಮೂರನೆಯ ಅಙ್ಗವಾಗಿವುಳ್ಳದುದು ಈ ಶರಣಾಗತಿರೂಪ ನಮಸ್ಕಾರವು ಎಂಬ ಭಾವವು. ಇಲ್ಲಿ ಅನುಕಂಪಾ ಮಾತ್ರವೇ ಇದ್ದರೆ ಕಾರ್ಯಕಾರಿಯಾಗುವದಿಲ್ಲವು; ಪರತ್ವಕ್ಕೆ ಬೇಕಾದ ಸರ್ವ ಶಕ್ತಿತ್ವ, ಸ್ವಾತಂತ್ರ್ಯಾದಿ ಗುಣಗಳೂ ಅನುಕಂಪಾದಿಂದ ಸೇರಿದ್ದರೇನೇ ಕಾರ್ಯಕಾರಿಯಾಗುತ್ತದೆಂಬ ಭಾವವನ್ನು ವ್ಯಕ್ತಪಡಿಸುವದಕ್ಕಾಗಿಯೇ **"ಪರ ತ್ವೇ ಸತಿ"** ಎಂದಾರಂಭಿಸಿ, **ಅನುಕಂಪನಃ** ಎಂದೂ ಹೇಳಿ, **ಅನುಗ್ರಹೈಕಧೀಃ** ಪರಮಾತ್ಮನು ಆಗುತ್ತಾನೆಂದು ಉಪಪಾದಿಸಲ್ಪಟ್ಟಿತು. ಜೀವಾತ್ಮನ ದೈನ್ಯತೆ ಯನ್ನು ನೋಡಿ ಪರಿತಾಪ ಮಾತ್ರವೇ ಪ್ರಯೋಜನವಾಗುವದಿಲ್ಲವು. ಆ ದೈನ್ಯತೆ ಯನ್ನು ಹೋಗಲಾಡಿಸುವ ಶಕ್ತಿ ಇದ್ದು ಹೋಗಲಾಡಿಸಿದರೆ, ಅನುಕಂಪವು ಸಾರ್ಥ ಕ್ಯವನ್ನು ಹೊಂದುತ್ತದೆಂಬ ಭಾವವೂ ದ್ಯೋತಿತವು. ಈ ಮಹಾ ವಿಶ್ವಾಸರೂಪ ವಾದ ಅಙ್ಗಕ್ಕೆ ವಿರೋಧವಾದುದು ಯಾವುದೆಂಬುದು ಮುಂದೆಹೇಳಲ್ಪಡುತ್ತದೆ.—

**ದಾಯೀತಿ ಯಾ ಮತಿಃ। ವಿಶ್ವಾಸಾತ್ಮಕಮೇತತ್ತು ತೃತೀಯಂ ಹನ್ತಿ ವೈ ಸದಾ॥ ಏವಂ ಭೂತೋಽಪ್ಯಶಕ್ತಸ್ಸನ್ ನ ತ್ರಾಣಂ ಭವಿತುಂ ಕ್ಷಮಃ। ಇತಿ ಬುದ್ಧ್ಯಾಸ್ಯ ದೇವಸ್ಯ ಗೋಪ್ತೃಶಕ್ತಿನಿರೂಪಣಮ್ ॥ ಚತುರ್ಥ ಮಙ್ಗ ಮುದ್ದಿಷ್ಟ**

---

ಹೀಗೆ ದಯೆಯಿಂದ ಪ್ರೇರಿತನಾಗಿ ಪ್ರತಿಬಂಧಕ ಕರ್ಮಗಳನ್ನೆಲ್ಲಾ ಹೋಗಲಾಡಿಸಿ ರಕ್ಷಿಸಬೇಕೆಂದು ಕಂಕಣ ಬದ್ಧನಾಗಿರುವಾಗ, ಇಂತಹ ಅನುಸಂಧಾನವಿಲ್ಲದೆ, ಕರ್ಮಾನುಗುಣವಾಗಿ ಫಲಕೊಡುವವನು ಪರಮಾತ್ಮನು ನಾವು ಮಾಡತಕ್ಕದ್ದೇನಿರುತ್ತದೆ ಎಂಬ ಭಾವನೆಯು, ಈ ಮಹಾ ವಿಶ್ವಾಸಕ್ಕೆ ವಿರೋಧವೆಂದು ಹೇಳಲ್ಪಡುತ್ತದೆ.—ಪರಮಾತ್ಮನು **ಉಪೇಕ್ಷಕಃ** – ಉದಾಸೀನ ಭಾವದಿಂದಿರುವನು, **ನಮೇ ದ್ವೇಷ್ಯೋಽಸ್ತಿನಪ್ರಿಯಃ** ಎಂದು ಹೇಳಿಕೊಂಡಿರುವಂತೆ, ಉದಾಸೀನನಾಗಿರುವನು, ಏಕೆಂದರೆ **ಯಥಾಕರ್ಮ ಫಲದಾಯೀ** - ನಮ್ಮ ಹಿಂದಿನ ಜನ್ಮದ ಅಥವಾ ಈಗ ಮಾಡಿದ ಸುಕೃತ ದುಷ್ಕೃತಗಳಿಗನುಗಣವಾಗಿ ಫಲವನ್ನು ಕೊಡುವವನು, **ಇತಿ** - ಹೀಗೆಂದು **ಯಾಮತಿಃ** - ಯಾವ ಅನುಸಂಧಾನ ಉಂಟೋ, **ಏತತ್** - ಇದಾದರೆ, **ವಿಶ್ವಾಸಾತ್ಮಕಂ ತೃತೀಯಂ** - ಈ ಮಹಾ ವಿಶ್ವಾಸವೆಂದು ಹೇಳಿಸಿಕೊಳ್ಳುವ ಮೂರನೆಯ ಅಙ್ಗವನ್ನಾದರೋ, **ಹನ್ತಿ** - ನಾಶಗೊಳಿಸುತ್ತದೆ. ಇಂತಹ ಅನುಸಂಧಾನವು ಮಹಾ ವಿಶ್ವಾಸವೆಂಬ ಅಙ್ಗಕ್ಕೆ ವಿರೋಧವು ಎಂಬ ಭಾವವು. "**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ** ಎಂದು ಹೇಳಿದವನು ಕೃಪಾ ಮಹೋದಧಿಯಲ್ಲವೇ? ಆತನ **ಶರಣಂ ವ್ರಜ** ಎಂಬ ವಿಧ್ಯುಕ್ತ್ಯನುಸಾರ ನಡೆಸಿ ಶರಣಾಗತಿಯನ್ನು ಅನುಷ್ಠಿಸಿರುತ್ತೇನೆ, ಎಷ್ಟು ಮಹಾ ಪಾಪಿಯಾಗಿದ್ದರೇನು? ಅಂತವನನ್ನೂ ಕೂಡ ರಕ್ಷಿಸಲು, ಆತನಿಗೆ ಶಕ್ತಿ ಇಲ್ಲವೇ? ರಕ್ಷಿಸಿಯೇ ರಕ್ಷಿಸುವನು, ಎಂಬ ಸಂಪೂರ್ಣ ನಂಬಿಕೆ ಇರಬೇಕೆಂದು ಈ ಮಹಾ ವಿಶ್ವಾಸಾಙ್ಗವು ಹೇಳಲ್ಪಟ್ಟಿತು. ಯದ್ಯಪಿ ಕರ್ಮಾನುರೂಪ ಫಲಪ್ರದನಾಗಿದ್ದರೂ ಶರಣಾಗತನ ವಿಷಯದಲ್ಲಿ ನಿರತಿಶಯ ಫಲಪ್ರದನೆಂಬುದು ಹಿಂದೆ ಪರಿಕರ ವಿಭಾಗಾಧಿಕಾರದಲ್ಲಿ ಉಪಪಾದಿತವು. ೧೦೦ನೆಯ ಪುಟವನ್ನು ನೋಡಿ.

ಮುಂದೆ ನಾಲ್ಕನೆಯ ಅಙ್ಗವನ್ನು ಉಪಪಾದಿಸುತ್ತಾರೆ.—**ಏವಂ ಭೂತೋಽಪಿ**– ಹೀಗೆ ಸ್ವತಂತ್ರನಾಗಿ, ಸರ್ವಶಕ್ತನಾಗಿ, ಚೇತನನ ರಕ್ಷಣೆಯಲ್ಲೇ ಬದ್ಧಾದರನಾಗಿ, ಸರ್ವೇಶ್ವರನಿದ್ದರೂ, **ಅಶಕ್ತಸ್ಸನ್** - ಅಶಕ್ತನಹಾಗೆ ನಟಿಸಿ, **ತ್ರಾಣಂ ಭವಿತುಮ್** - ರಕ್ಷಕನಾಗಿ ಆಗಲು, **ನಕ್ಷಮಃ** - ಅರ್ಹನಾಗುವದಿಲ್ಲವು, **ಇತಿಬುದ್ಧ್ಯಾ** - ಎಂಬ ಅಭಿಪ್ರಾಯದಿಂದ, **ಅಸ್ಯ ದೇವಸ್ಯ** - ಈ ಲೀಲಾ ವಿಭೂತಿ ನಾಯಕನಿಗೆ, **ಗೋಪ್ತೃ ಶಕ್ತಿನಿರೂಪಣಂ** - ತನ್ನನ್ನು ರಕ್ಷಿಸುವ ಶಕ್ತಿಯುಂಟೆಂದು ನಿರೂಪಿಸೋಣವು, **ಚತುರ್ಥಮಙ್ಗಂ** - ನಾಲ್ಕನೆಯ ಅಙ್ಗವೆಂದು, **ಉದ್ದಿಷ್ಟಂ** - ಹೇಳ

**ಮಮುಷ್ಯ ವ್ಯಾಹತಿಃ ಪುನಃ । ಉದಾಸೀನೋ ಗುಣಾಭಾವಾ ದಿತ್ಯುತ್ಪ್ರೇಕ್ಷಾ ನಿಮಿತ್ತಜಾ ॥ ಸ್ವಸ್ಯ ಸ್ವಾಮಿನಿ ವೃತ್ತಿ ರ್ಯಾ ಪ್ರಾತಿಕೂಲ್ಯಸ್ಯ ವರ್ಜನಮ್। ತದಙ್ಗಂ ಪಂಚಮಂ ಪ್ರೋಕ್ತ ಮಾಜ್ಞಾವ್ಯಾಘಾತವರ್ಜನಮ್ ॥ ಅಶಾಸ್ತ್ರೀಯೋಪಸೇವಾ ತು ತದ್ವ್ಯಾಘಾತ ಉದೀರ್ಯತೇ । ಚರಾಚರಾಣಿ ಭೂತಾನಿ**

---

ಲ್ಪಟ್ಟಿತು, ನಿನಗೆ ಮಹಾಪರಾಧಿಯಾದ ನನ್ನನ್ನೂ ಕೂಡ ರಕ್ಷಿಸುವ ಶಕ್ತಿಯುಂಟೆಂದು ನಂಬಿರುವೆನು, ಆದುದರಿಂದ ನನ್ನನ್ನು ರಕ್ಷಿಸು ಎಂಬ ಪ್ರಾರ್ಥನೆಯು **ಗೋಪ್ತೃತ್ವವರಣ** ವೆಂಬ ಅಙ್ಗವೆನಿಸುತ್ತದೆಂಬ ಭಾವವು. ಮುಂದೆ ಈ ಅಙ್ಗಕ್ಕೆ ವಿರೋಧವು ಹೇಗೆ ಉಂಟಾಗಬಹುದೆಂಬುದು ಹೇಳಲ್ಪಡುತ್ತದೆ.— **ಅಮುಷ್ಯ** - ಈ ಗೋಪ್ತೃತ್ವ ವರಣವೆಂಬ ಅಙ್ಗಕ್ಕೆ, **ವ್ಯಾಹತಿಃ ಪುನಃ** - ವಿರೋಧವಾದರೋ, **ಗುಣಾಭಾವಾತ್** - ತಾನು ಅನುಷ್ಠಿಸಿದುದು ಶರಣಾಗತಿ ಯಾಗಲು ಬೇಕಾದ ಗುಣಗಳಿಲ್ಲದುದರಿಂದ, **ಉದಾಸೀನಃ** - ರಕ್ಷಿಸದೆ ಉದಾಸೀನನಾಗಿ ಸರ್ವೇಶ್ವರನು ಇದ್ದಾನೆ, ಇತಿ - ಎಂಬದಾಗಿ, **ನಿಮಿತ್ತಜಾ** - ಕಾರಣಾಂತರಗಳಿಂದುಂಟಾದ, **ಉತ್ಪ್ರೇಕ್ಷಾ** - ಅತಿಶಯೋಕ್ತಿಯು, ಇಲ್ಲಿ ಊಹೆ ಅಥವಾ ಶಂಕಾ ಎಂಬರ್ಥವು. ತಾನು ಅನುಷ್ಠಿಸಿದ ಶರಣಾಗತಿಯು ಸರಿಯೋ ಅಲ್ಲವೋ? ಕಾರಣಾಂತರಗಳಿಂದ ಸರಿಯಾದ ಶರಣಾಗತಿಯಲ್ಲದಿರಬಹುದು; ಆದುದರಿಂದ ಪರಮ ಪುರುಷನು ಉದಾಸೀನನಾಗಿಯೇ ಇರಬಹುದು; ಇತ್ಯಾದಿ ಶಙ್ಕಾದಿ ನಿಮಿತ್ತವಾಗಿ ಉಂಟಾಗುವ ಊಹೆಯೇ ಈ ಗೋಪ್ತೃತ್ವ ವರಣಕ್ಕೆ ಪ್ರತಿಬಂಧಕವೆಂಬ ಭಾವವು.

ಮುಂದೆ ಪ್ರಾತಿಕೂಲ್ಯವರ್ಜನರೂಪಅಙ್ಗವೂ, ಅದರ ವ್ಯಾಘಾತವೂ ಹೇಳಲ್ಪಡುವುವು — **ಸ್ವಸ್ಯ**-ತನಗೆ, **ಸ್ವಾಮಿನಿ**-ಸ್ವಾಮಿಯಾದವನಲ್ಲಿ, **ವೃತ್ತಿಃ**-ನಡೆದುಕೊಳ್ಳೋಣವು, **ಯಾ**-ಯಾವುದುಂಟೋ, ಎಂದರೆ ಸ್ವಾಮಿಯ ಆಜ್ಞೆಯಾದ ಶಾಸ್ತ್ರಾನುಗುಣ್ಯವಾಗಿ ನಡೆಯೋಣವು, ತತ್ - ಅದು, **ಪ್ರಾತಿಕೂಲ್ಯಸ್ಯ ವರ್ಜನಮ್** - ಪ್ರಾತಿಕೂಲ್ಯ ವರ್ಜನ ರೂಪವಾದ, **ಪಂಚಮಂ ಅಙ್ಗಂ** - ಐದನೆಯ ಅಙ್ಗವೆಂದು, **ಪ್ರೋಕ್ತಮ್** - ಹೇಳಲ್ಪಟ್ಟಿರುತ್ತದೆ. ಅದು ಎಂತಾದ್ದೆಂದರೆ, **ಆಜ್ಞಾವ್ಯಾಘಾತವರ್ಜನಮ್** - ಸ್ವಾಮಿಯ ಆಜ್ಞೆಗೆ ವಿರೋಧವಿಲ್ಲದಿರೋಣವು, ಕೃತ್ಯಾಕರಣ, ಅಕೃತ್ಯಕರಣ ದೋಷಗಳಿಲ್ಲದುದು. ಈ ಆಙ್ಗಕ್ಕೆ ವ್ಯಾಘಾತವು ಯಾವುವೆಂದರೆ, **ಅಶಾಸ್ತ್ರೀಯೋಪಸೇವಾತು** - ಶಾಸ್ತ್ರವಿರುದ್ಧ ಕರ್ಮಗಳನ್ನೆಸಗುವದಾದರೋ, **ತದ್ವ್ಯಾಘಾತಃ** – ಈ ಪ್ರಾತಿಕೂಲ್ಯ ವರ್ಜನವಾದ ಅಙ್ಗಕ್ಕೆ ನಾಶವನ್ನುಂಟುಮಾಡುವಂತಾದ್ದೆಂದು, **ಉದೀರ್ಯತೇ** - ಹೇಳಲ್ಪಟ್ಟಿರುತ್ತದೆ.

ಮುಂದೆ ಆನುಕೂಲ್ಯ ಸಙ್ಕಲ್ಪರೂಪ ಅಙ್ಗವು ಹೇಳಲ್ಪಡುತ್ತದೆ.—**ಚರಾಚರಾಣಿ**-ಸ್ಥಾವರಜಙ್ಗಮಾತ್ಮಕಗಳಾದ, **ಸರ್ವಾಣಿ ಭೂತಾನಿ**-ಸಮಸ್ತ ಪ್ರಾಣಿಗಳೂ, ಭಗವ

**ಸರ್ವಾಣಿ ಭಗವದ್ವಪುಃ ॥ ಅತಸ್ತದಾನುಕೂಲ್ಯಂ ಮೇ ಕಾರ್ಯ ಮಿತ್ಯೇವ ನಿಶ್ಚಯಃ । ಷಷ್ಠಮಙ್ಗಂ ಸಮುದ್ದಿಷ್ಟಂ ತದ್ವ್ಯಾಘಾತೋ ನಿರಾಕೃತಿಃ ॥**

---

**ದ್ವಪುಃ**-ಭಗವಂತನಿಗೆ ಶರೀರವು, **ಅತಃ**-ಹೀಗೆ ಇವೆಲ್ಲವೂ ಭಗವಂತನಿಗೆ ಶರೀರವಾಗಿರುವದರಿಂದ, **ತದಾನುಕೂಲ್ಯಂ**-ಅಂತಹ ಶರೀರಗಳಿಗೆ ಅನುಕೂಲವಾಗಿಯೇ ಇರೋಣವು, **ಮೇ** - ನನಗೆ, **ಕಾರ್ಯಂ** - ವಿಹಿತವಾದ ಕಾರ್ಯವು, **ಇತ್ಯೇವ** - ಎಂಬದಾಗಿಯೇ, **ನಿಶ್ಚಯಃ** - ದೃಢ ಸಙ್ಕಲ್ಪವು, **ಷಷ್ಠಮಙ್ಗಂ** - ಆರನೆಯ ಅಙ್ಗವಾಗಿ, **ಸಮುದ್ದಿಷ್ಟಮ್** - ಉಪದೇಶಿಸಲ್ಪಟ್ಟಿತು, **ತದ್ವ್ಯಾಘಾತಃ** ಈ ಆನುಕೂಲ್ಯ ಸಙ್ಕಲ್ಪಕ್ಕೆ ವಿರೋಧವಾದುದು, **ನಿರಾಕೃತಿಃ** - ಭೂತದ್ರೋಹವು. ಚರಾಚರವೆಲ್ಲಾ ಪರಮಾತ್ಮನಿಗೆ ಶರೀರವೆಂದು ಅನೇಕ ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳು ಹೇಳುತ್ತವೆ. **"ಯಸ್ಯ ಸರ್ವಾಣಿ ಭೂತಾನಿ ಶರೀರಮ್"** ಎಂದು (೫ ೭-೧೫) ಬೃಹದಾರಣ್ಯಕ ಶ್ರುತಿಯು ಹೇಳುತ್ತದೆ. ಗೀ. ೧೧. ೧೩ನೆಯ ಶ್ಲೋಕದಲ್ಲಿ **"ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತ ಮನೇಕಧಾ । ಅಪಶ್ಯದ್ದೇವ ದೇವಸ್ಯ ಶರೀರೇ ಪಾಂಡವ ಸ್ತದಾ"** ಎಂದು ಹೇಳಲ್ಪಟ್ಟಿರುತ್ತದೆ. ಮನುಸ್ಮೃತಿಯಲ್ಲಿ **"ಸೋಽಭಿಧ್ಯಾಯ ಶರೀರಾತ್ಸ್ವಾತ್"** ಎಂಬ ಪ್ರಯೋಗವಿದೆ, **"ಜಗತ್ಸರ್ವಂ ಶರೀರಂ ತೇ"** (ರಾ. ಯುದ್ಧ. ೧೨೦. ೨೫.) **ಯದಂಬು ವೈಷ್ಣವಃ ಕಾಯಃ"** (ವಿ. ಪು. ೨. ೧೨. ೩೭) **"ತಾನಿ ಸರ್ವಾಣಿ ತದ್ವಪುಃ"** (ವಿ. ಪು. ೧. ೨೨. ೮೬.) "ತತ್ಸರ್ವಂ ವೈ ಹರೇಸ್ತನುಃ" (ವಿ. ಪು. ೧. ೨೨. ೩೮) ಇತ್ಯಾದ್ಯನೇಕ ಪುರಾಣೇತಿಹಾಸೋಕ್ತಿಗಳುಂಟು. ಯಾವಾಗ ಸಮಸ್ತ ಪ್ರಾಣಿಗಳೂ ಭಗವಂತನಿಗೆ ಶರೀರವಾಯಿತೋ, ಅಂತಹ ಭಗವಂತನ ಶರೀರಕ್ಕೆ ಅನುಕೂಲನಾಗಿಯೇ ಇರುತ್ತೇನೆಂಬ ದೃಢ ಸಙ್ಕಲ್ಪವಿರಬೇಕು. ಇಂತಹ ಅಙ್ಗಕ್ಕೆ ಆನುಕೂಲ್ಯಸಙ್ಕಲ್ಪವೆಂಬ ಹೆಸರೆಂದು ಪರಿಕರವಿಭಾಗಾಧಿಕಾರದಲ್ಲಿ ಹೇಳಲ್ಪಟ್ಟಿತು. ಇದಕ್ಕೆ ವಿರೋಧವು ಯಾವುದೆಂದರೆ ಹಿಂಸೆ ವಂಚನೆ ಮೊದಲಾದ ಭೂತದ್ರೋಹವೆಂದು ಹೇಳಲ್ಪಟ್ಟಿತು. ಹೀಗೆ ಇಲ್ಲಿ ಆರು ಅಙ್ಗಗಳು ಹೇಳಲ್ಪಟ್ಟರೂ, ಇಲ್ಲಿ ಹೇಳಲ್ಪಟ್ಟ ತ್ಯಾಗರೂಪ ಪ್ರಥಮಾಙ್ಗವು ಅಂಗಿಯಾದ ಆತ್ಮನಿಕ್ಷೇಪಕ್ಕೇ ಸೇರಿದುದಾದುದರಿಂದ, ಐದೇ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಆದುದರಿಂದ **"ನ್ಯಾಸಃ ಪಂಚಾಗಸಂಯುತಃ"** ಎಂಬ ಲಕ್ಷ್ಮೀತಂತ್ರವಾಕ್ಯಕ್ಕೇನೂ ಈ ಪ್ರಮಾಣಗಳು ವಿರೋಧವಲ್ಲವು. ೯೪ನೆಯ ಪುಟವನ್ನು **ನೋಡಿ.** ಹೀಗೆ ಶರಣಾಗತಿಯ ಈ ಐದು ಪರಿಕರಗಳ ಅನುಸಂಧಾನವೂ ಈ ನಮನ ಕ್ರಿಯೆಯಲ್ಲಿರತಕ್ಕದ್ದೆಂದು ಮುಂದೆ ನಿಗಮನ ಶ್ಲೋಕದಲ್ಲಿ ಹೇಳುತ್ತಾರೆ. ಈ ಅಙ್ಗಗಳ ಅನುಸಂಧಾನವು ಹೇಗೆಂದರೆ. ಈ ಆತ್ಮಾ ಪರಮಾತ್ಮನಸ್ವತ್ತು, ಅದನ್ನು ಆತನ ಪಾದ

**ಪೂರ್ಣಮಜ್ಗೈ ರುಪಾಙ್ಗೈಶ್ಚ ನಮನಂ ತೇ ಪ್ರಕೀರ್ತಿತಮ್ ।**
**ಸ್ಥೂಲೋಽಯಂ ನಮಸಸ್ತ್ವರ್ಥಃ ಸೂಕ್ಷ್ಮಮನ್ಯನ್ನಿಶಾಮಯ ॥**

ದಲ್ಲಿ ಸಮರ್ಪಿಸಿಬಿಟ್ಟು ನಿನ್ನವಸ್ತುವನ್ನು ನೀನೇ ರಕ್ಷಿಸಲು ಅರ್ಹನೇವಿನಾ ನಾನ ಲ್ಲವೆ, ನನಗೆ ಅದರಲ್ಲಿ ಯಾವವಿಧ ಅನ್ವಯವು ಇಲ್ಲವೆಂದು ಆತ್ಮ ಸಮರ್ಪಣೆ ಯನ್ನು ಮಾಡತಕ್ಕದ್ದು; ಅಕಿಂಚನನು ನಾನು, ರಕ್ಷಿಸಿಕೊಳ್ಳುವ ಉಪಾಯಕ್ಕೆ ಅಶಕ್ತನು, ಅನನ್ಯಗತಿಕನು, ನೀನಲ್ಲದೆ ನನ್ನನ್ನು ಇನ್ನು ಯಾರೂ ರಕ್ಷಿಸಲಾರರು; ಈ ವ್ಯಾಜವಾಗಿ ಏರ್ಪಡಿಸಿದ ಶರಣಾಗತಿರೂಪ ನಮನದಮೂಲಕ ನಾನು ಎಷ್ಟು ಶತಾಪರಾಧಿಯಾಗಿದ್ದರೂ ನೀನು ನನ್ನನ್ನು ರಕ್ಷಿಸುವಿ; ಇದರಲ್ಲಿ ಸರ್ವಾತ್ಮನಾ ಸಂ ಶಯವಿಲ್ಲವು; ಆದುದರಿಂದ ನೀನೇ ಗೋಪ್ತಾವಾಗಬೇಕೆಂದು ಪ್ರಾರ್ಥಿಸುವೆನು. ನಿನ್ನ ಆಜ್ಞೆಗಳಿಗೆ ವಿರುದ್ಧವಾಗಿ ನಡೆಯುವನಲ್ಲವು ; ಸಮಸ್ತ ಭೂತಗಳೂ ನಿನಗೆ ಶರೀರವಾದುದರಿಂದ ಅವುಗಳಿಗೆ ಅನುಕೂಲವಾಗಿಯೇ ಇರುವನೆಂಬ ದೃಢ ಸಙ್ಕಲ್ಪ ವನ್ನು ಹೊಂದಿರುತ್ತೇನೆ; ನೀನು ಸಾಯುಜ್ಯವನ್ನು ಕೊಟ್ಟು ಕಾಪಾಡತಕ್ಕದ್ದು ಎಂಬ ಅನುಸಂಧಾನವಿರಬೇಕೆಂದು ಹೇಳಲ್ಪಟ್ಟಿತು. ಹೀಗೆ ಅಙ್ಗಗಳ ಪೂರ್ತಿಯು ಅಂಗಿಯಾದ ಆತ್ಮನಿಕ್ಷೇಪಕ್ಕಿರಬೇಕೆಂದು ನಿಗಮನದಲ್ಲಿ ಹೇಳಲ್ಪಡುತ್ತದೆ. ಈ ನಮನದಿಂದ ತಾನು ಅನಂತರ ನಿರ್ಭರನಾಗಿ, ನಿರ್ಭಯನಾಗಿ, ನಿಸ್ಸಂಶಯನಾಗಿ, ಹೃಷ್ಟಮನಸ್ಕನಾಗಿ ಇರುವ ಕೃತಕೃತ್ಯನೆಂದು ಭಾವಿಸಬಹುದೆಂಬುದೂ ಸೂಚಿತವು. ಹೀಗೆ **ಅಙ್ಗೈಃ** - ಈ ಮೇಲೆ ಹೇಳಿದ ಅಙ್ಗಗಳಿಂದ, **ಉಪಾಙ್ಗೈಶ್ಚ** - ಆ ಅಙ್ಗಗಳಿಗೆ ಸಹಕಾರಿಗಳಾದ ಪರಿಕರಗಳಿಂದಲೂ, ಎಂದರೆ ಆ ಅಙ್ಗಗಳಿಗೆ ವಿರೋ ಧವಾದವುಗಳನ್ನು ಅನುಷ್ಠಿಸದೆ ಜಾಗರೂಕನಾಗಿರೋಣದರಿಂದಲೂ, **ನಮನಂ** - ಶರಣಾಗತಿರೂಪ ನಮಸ್ಕಾರ ಮಾಹಾತ್ಮ್ಯೆಯು, **ತೇ** - ನಿನಗಾಗಿ, **ಪ್ರಕೀರ್ತಿತಮ್** - ಪ್ರಕರ್ಷೇಣ ಹೊಗಳಲ್ಪಟ್ಟಿತು. ನಮಸ್ಕಾರದೊಂದಿಗೆ ಇರಬೇಕಾದ ಕಾಯಿಕ ವಾಚಿಕ ಮಾನಸಿಕ ಪ್ರವೃತ್ತಿರೂಪ ಅನುಸಂಧಾನವೆಲ್ಲವೂ ನಿನ್ನ ಅನು ಗ್ರಹಕ್ಕಾಗಿ ಹೇಳಲ್ಪಟ್ಟವೆಂಬ ಭಾವವು. ಈಗ ಇಷ್ಟುದೂರ ಹೇಳಿದ ಅರ್ಥವೆಲ್ಲಾ ನಮಶ್ಶಬ್ದದ "ಸ್ಥೂಲಾರ್ಥ"ವೆಂದು ಹೇಳಿ ಮುಗಿಸಿ, ಮುಂದೆ ಎರಡನೆಯ ದಾದ ಸೂಕ್ಷ್ಮಾರ್ಥವನ್ನು ತಿಳಿಸುತ್ತಾರೆ.—ಅಯಂತು - ಈಗ ನಿನಗೆ ಉಪ ದೇಶಿಸಿದುದೆಲ್ಲವೂ **ನಮಸಃ** - ನಮಶ್ಶಬ್ದದ, **ಸ್ಥೂಲಃ** - ಸ್ಥೂಲವಾದ ಅರ್ಥವು, ಮೇಲೆ ವ್ಯಕ್ತವಾಗಿ ತೋರುವ ಅರ್ಥವು. **ಅನ್ಯತ್** - ಇದಕ್ಕಿಂತ ಬೇರೆಯಾದ, **ಸೂಕ್ಷ್ಮಂ** - ಸೂಕ್ಷ್ಮವಾದ ಅರ್ಥವನ್ನು, ಗೂಢವಾಗಿರುವ ಅರ್ಥವನ್ನು, **ನಿಶಾಮಯ** - ಕೇಳು ತಿಳಿಸುತ್ತೇನೆ. ಈ ನಮಶ್ಶಬ್ದವನ್ನು ಎರಡು ಪದವಾಗಿ **ನ, ಮಃ** ಎಂದು ಭಾಗಿಸಿ ಮಃ ಎಂದರೆ ಹಿಂದೆ ಉಪಪಾದಿಸಿದ ರೀತಿಯಲ್ಲಿಮಮ ಎಂಬ

## (೨) ಅಥ ನಮಸಃ ಸೂಕ್ಷ್ಮಾರ್ಥಃ

**ಚೇತನಸ್ಯ ಯದಾ ಮಮ್ಯಂ ಸ್ವಸ್ಮಿನ್ ಸ್ವೀಯೇಚ ವಸ್ತುನಿ । ಮಮ ಇತ್ಯಕ್ಷರದ್ವಂದ್ವಂ ತದಾ ಮಮ್ಯಸ್ಯ ವಾಚಕಮ್ ॥ ಅನಾದಿವಾಸನಾರೂಢ ಮಿಥ್ಯಾಜ್ಞಾನ ನಿಬಂಧನಾ । ಆತ್ಮಾತ್ಮೀಯ ಪದಾರ್ಥಸ್ಥಾ ಯಾ ಸ್ವಾತಂತ್ರ್ಯ**

---

ಷಷ್ಠೀ ವಿಭಕ್ತಿಯ ಪದವಾಗಿ ಭಾವಿಸಿ, ನಮಮ ಎಂಬ ಅರ್ಥವು ಬೋಧಿಸಲ್ಪಡುತ್ತದೆ.

**ಮುಂದೆ ನಮಸ್ಸಿನ ಸೂಕ್ಷ್ಮಾರ್ಥವು ಹೇಳಲ್ಪಡುತ್ತದೆ.**

---

ಹಿಂದೆ "ಮಮೇತಿ ದ್ವ್ಯಕ್ಷರಂ ಮೃತ್ಯುರ್ನಮಮೇತಿ ಚ ಶಾಶ್ವತಮ್" ಎಂಬಲ್ಲಿ ಉಪಪಾದಿಸಲ್ಪಟ್ಟ ಅರ್ಥವೇ ಈಗ ಸೂಕ್ಷ್ಮಾರ್ಥವೆಂಬುದಾಗಿ ಬೋಧಿಸಲ್ಪಡುತ್ತದೆ. ಮಮ ಎಂಬೆರಡಕ್ಷರವು ಅಹಂಕಾರ ಮಮಕಾರಗಳನ್ನು ಬೋಧಿಸುತ್ತದೆಂದು ಹೇಳಲ್ಪಡುತ್ತದೆ. **ಯದಾ** - ಯಾವಾಗ, **ಚೇತನಸ್ಯ** - ಚೇತನನಿಗೆ, **ಸ್ವಸ್ಮಿನ್** - ತನ್ನಲ್ಲೂ, **ಸ್ವೀಯೇ ಚ ವಸ್ತುನಿ** - ತನಗೆ ಸಂಬಂಧಿಸಿದ ಗೃಹ ಕ್ಷೇತ್ರಾದಿಗಳಲ್ಲೂ ದಾರ ಪುತ್ರಾದಿಗಳಲ್ಲೂ, **ಮಮ್ಯಂ** - ಮಮತೆಯು, ತಾನು ಸ್ವತಂತ್ರನು, ಎಂಬ ಅಹಂಭಾವವೂ ತನಗೆ ಶೇಷಭೂತವಾದುವೆಲ್ಲಾ ತನ್ನದು ಎಂಬ ಮಮಕಾರವೂ, ಉಂಟಾಗುತ್ತದೋ, **ತದಾ** - ಆಗ, **ಮಮ ಇತ್ಯಕ್ಷರ ದ್ವಂದ್ವಂ** - ಮಮ ವೆಂಬೆರಡಕ್ಷರವು, **ಮಮ್ಯಸ್ಯ ವಾಚಕಮ್** - ಅಹಂಕಾರ ಮಮಕಾರಗಳಿಗೆ ವಾಚಿಕವಾಗುತ್ತದೆ. ಈ ಮಮ ಶಬ್ದಕ್ಕೆ ನ ಎಂಬುದು ನ **ಮಮ** ಎಂಬುದರಿಂದುಂಟಾಗುವ ಅರ್ಥವು ಮುಂದೆ ಹೇಳಲ್ಪಡುತ್ತದೆ.—ಹೀಗೆ **ಅನಾದಿ ವಾಸನಾರೂಢಮಿಥ್ಯಾಜ್ಞಾನ ನಿಬಂಧನಾ** - ಅನಾದಿಯಾಗಿ ಬಂದಿರುವ ಕರ್ಮವಾಸನೆಯಿಂದ, **ಆರೂಢ** - ಹತ್ತಿದ, ಎಂದರೆ ಸ್ಥಾಪಿತವಾದ, ಅಥವಾ **ರೂಢ** ಎಂದಾಗಲಿ ಪದಚ್ಛೇದವಾಗಬಹುದು, ಸಿದ್ಧವಾದ, **ಮಿಥ್ಯಾಜ್ಞಾನ ನಿಬಂಧನಾ**– ಭ್ರಮಜ್ಞಾನವೇ ಕಾರಣವಾಗಿವುಳ್ಳ, **ಆತ್ಮಾತ್ಮೀಯ ಪದಾರ್ಥಸ್ಥಾ** - ತನ್ನ ವಿಷಯದಲ್ಲೂ ತನಗೆ ಸಂಬಂಧಿಸಿದ ವಸ್ತುಗಳ ವಿಷಯದಲ್ಲೂ ಇರುವ, **ಯಾ** - ಯಾವ, **ಸ್ವಾತಂತ್ರ್ಯಸ್ವತಾಮತಿಃ** - ತಾನು ಸ್ವತಂತ್ರನು ಎಂಬ ಅಹಂಕಾರ ರೂಪವಾದ, ತನಗೆ ಸೇರಿದವೆಲ್ಲಾ ತನ್ನದೇ ಎಂಬ ಮಮಕಾರರೂಪಬುದ್ಧಿಯು ಉಂಟೋ, **ಸಾ** - ಅಂತಹ ಮಿಥ್ಯಾಜ್ಞಾನವು, **ಅತ್ರ** - ಈ ಸಂದರ್ಭದಲ್ಲಿ ಎಂದರೆ ನಮಶ್ಯಬ್ದಾರ್ಥದ ಅನುಸಂಧಾನದಲ್ಲಿ, **ಮೇ** - ಯಥಾರ್ಥಜ್ಞಾನವುಳ್ಳ ನನಗೆ, ನ- [illegible] ಇತಿ ಎಂದು,

**ಸ್ವತಾಮತಿಃ ॥ ಮೇನೇತ್ಯೇವಂ ಸಮೀಚೀನ ಬುದ್ಧ್ಯಾ ಸಾ ತ್ರ ನಿವಾರ್ಯತೇ। ನಾಹಂ ಮಮ ಸ್ವತಂತ್ರೋಽಹಂ ನಾಸ್ಮೀ ತ್ಯಸ್ಯಾರ್ಥ ಉಚ್ಯತೇ॥ ನ ಮೇ ದೇಹಾದಿಕಂ ವಸ್ತು ಸ ಶೇಷಃ ಪರಮಾತ್ಮನಃ ॥ ಇತಿ ಬುದ್ಧ್ಯಾ ನಿವರ್ತನ್ತೇ ತಾಸ್ತಾಸ್ಸ್ವೀಯಾ ಮನೀಷಿಕಾಃ ॥ ಅನಾದಿವಾಸನಾಜಾತೈರ್ಬೋಧೈಸ್ತೈಸ್ತೈ**

---

**ಏವಂ** - ಈ ವಿಧವಾಗಿ, **ಸಮೀಚೀನಬುದ್ಧ್ಯಾ** - ಸದ್ಗುರುವಿನಿಂದ ಉಪದಿಷ್ಟವಾಗಿ ಯಥಾರ್ಥವಾಗಿರುವದರಿಂದ ಸಾತ್ವಿಕವಾದ ಬುದ್ಧಿಯಿಂದ, **ನಿವಾರ್ಯತೇ** – ಅಂತಹ ಭ್ರಮ ಬುದ್ಧಿಯು ನಿವಾರಿಸಲ್ಪಡುತ್ತದೆ. ಹೀಗಾದನಂತರ ಅನುಸಂಧಾನವು ಈ ನಮನ ಎಂಬುದರಿಂದ ಹೇಗೆಂದರೆ ಹೇಳಲ್ಪಡುತ್ತದೆ. ಹಿಂದೆ ಉಪಪಾದಿಸಲ್ಪಟ್ಟ **ಅಹಂ ಮಮ ನ** ಎಂಬರ್ಥವು ಉಪದೇಶಿಸಲ್ಪಡುತ್ತದೆ. **ಅಹಂ** - ನಾನು, **ಮಮನ** - ನನ್ನವನಲ್ಲವು, ನಾನೂ ಪರಮಾತ್ಮನ ವಸ್ತುವು ಎಂಬ ಭಾವವು. ಆದುದರಿಂದ ನಾನು ಸ್ವತಂತ್ರನಲ್ಲವು ಎಂಬರ್ಥವುಂಟಾಗುತ್ತದೆಂದು ಹೇಳುತ್ತಾರೆ. **ಅಹಂ** – ನಾನು, **ಸ್ವತಂತ್ರಃ** - ಸ್ವತಂತ್ರನು, **ನಾಸ್ಮಿ** – ಅಲ್ಲವು, ಪರಮಾತ್ಮನಿಗೆ ಆಧೀನನು ಎಂಬ ಭಾವವು. **ಇತಿ** – ಎಂಬದಾಗಿ, **ಅಸ್ಯಾರ್ಥಃ** - ಈ ನಮಸ್ಸಿನ ಸೂಕ್ಷ್ಮಾರ್ಥವು, **ಉಚ್ಯತೇ** – ಹೇಳಲ್ಪಡುತ್ತದೆ. ಸೂಕ್ಷ್ಮಾರ್ಥದಿಂದ ತೋರುವ ಇನ್ನೊಂದು ಅಭಿಪ್ರಾಯವುಂಟೆಂದು ಹೇಳುತ್ತಾರೆ. **ದೇಹಾದಿಕಂ ವಸ್ತು** - ದೇಹವೇ ಮೊದಲಾದ ವಸ್ತು, ನನಗೆ ಸೇರಿದ ಎಲ್ಲಾವಸ್ತುವು ಆದಿಪದದಿಂದ ದಾರ ಪುತ್ರ ಗೃಹಾರಾಮಾದಿಗಳು ಹೇಳಲ್ಪಟ್ಟವು, **ಮೇ**-ನನಗೆ ಸಂಬಂಧಿಸಿದವು, **ನ**-ಅಲ್ಲವು. **ಸಃ**-ಆ ವಸ್ತುವಾದರೋ, **ಪರಮಾತ್ಮನಃ**-ಪರಮಾತ್ಮನಿಗೆ, **ಶೇಷಃ** - ಶೇಷಭೂತವಾದ ವಸ್ತುವು, **ಅಸ್ಯಾರ್ಥಃ ಉಚ್ಯತೇ**-ಎಂದು ಇಟ್ಟುಕೊಳ್ಳತಕ್ಕದ್ದು, ಇದು ಈ ನಮಸ್ಸಿನ ಅರ್ಥವೆಂದು ಹೇಳಲ್ಪಡುತ್ತದೆ. **ಇತಿ ಬುದ್ಧ್ಯಾ** - ಎಂಬೀ ಬುದ್ಧಿಯಿಂದ ಎಂದರೆ ಅನುಸಂಧಾನದಿಂದ, **ತಾಃ ತಾಃ** – ಆ ಆ, **ಸ್ವೀಯಾಃ ಮನೀಷಿಕಾಃ** - ತನ್ನವು ಎಂಬೀ ಅಹಂಕಾರ ಮಮಕಾರ ರೂಪ ಜ್ಞಾನಗಳು, **ನಿವರ್ತಂತೇ** - ತೊಲಗುತ್ತವೆ. ಈಗ ಎಲ್ಲವೂ ಪರಮಾತ್ಮ ಶೇಷವೆಂದು ಹೇಳಿದುದನ್ನೇ ಮುಂದಿನ ಎರಡು ಶ್ಲೋಕಗಳಿಂದ ಇನ್ನೊಂದು ವಿಧವಾಗಿ ವಿಶದವಾಗಿ ಹೇಳುತ್ತಾರೆ. **ಅನಾದಿ ವಾಸನಾ ಜಾತೈಃ** - ಅನಾದಿ ಕಾಲಗಳಿಂದಲೂ ಉಂಟಾದ ಕರ್ಮವಾಸನೆಯಿಂದ ಉತ್ಪನ್ನವಾದ, **ತೈಸ್ತೈಃ** - ಆ ಆ, **ಬೋಧೈಃ** - ಜ್ಞಾನಗಳಿಂದ, ಇದು ಅಜ್ಞಾನ, ಅನ್ಯಥಾ ಜ್ಞಾನ, ಅಥವಾ ವಿಪರೀತ ಜ್ಞಾನ, ಇವುಗಳಿಂದ ಎಂಬ ಭಾವವು, **ವಿಕಲ್ಪಿತೈಃ** - ವಿಶೇಷವಾದ ಅಯಥಾರ್ಥಭಾವನೆಗಳಿಂದ, ಇದರಿಂದ ದೇಹಾತ್ಮಭ್ರಮ ಸ್ವತಂತ್ರಾತ್ಮ ಭ್ರಮ ಅನ್ಯಶೇಷತ್ವ ಭ್ರಮ, ತಾನೇ ಪರಮಾತ್ಮನೆಂಬ ಭ್ರಮ, ಇಂತಹ ಭ್ರಮ

ರ್ವಿಕಲ್ಪೈಃ । ರೂಷಿತಂ ಯದ್ಧೃಢಂ (ಚಿತ್ತಂ) ತತ್ರ ತಾಸ್ವತಂತ್ರ್ಯಸ್ವತ್ವಧೀಮಯಃ ॥ ತತ್ತದ್ವೈಷ್ಣವ ಸಾರ್ವಾ (ರ್ಥ್ಯ) ತ್ಮ್ಯ ಪ್ರತಿಬೋಧ ಸಮುತ್ಥಯಾ । ನಮ ಇತ್ಯೇತಯಾ ವಾಚಾ ನನ್ಮ್ರಾಸ್ಸಸ್ಮಾದ ಪೋಹ್ಯತೇ ॥

---

ಜ್ಞಾನಗಳಿಂದ, ದೃಢಂ - ಸ್ಥಿರವಾಗಿ, ರೂಷಿತಂ - ಲೇಪಿಸಲ್ಪಟ್ಟ, ಯತ್ - ಯಾವುದುಂಟೋ, ತತ್ರ ತಾಸ್ವತಂತ್ರ್ಯಸ್ವತ್ವಧೀಮಯಃ - ಅಂತಹ ತಾನು ಸ್ವತಂತ್ರನೆಂಬ ಮತ್ತು ತನಗೆ ಸಂಬಂಧಿಸಿದ ವಸ್ತುವೆಲ್ಲಾ ತನ್ನದು ಎಂಬ ಅನುಸಂಧಾನವು, ಎಂದರೆ ಅಹಂಕಾರ ಮಮಕಾರರೂಪ ಅಭಿಮಾನವು, ತತ್ತದ್ವೈಷ್ಣವಸಾರ್ವಾತ್ಮ್ಯಪ್ರತಿಬೋಧ ಸಮುತ್ಥಯಾ - ಅವುಗಳಿಗೆಲ್ಲಾ ಎಂದರೆ ತನಗೂ ತನಗೆ ಸೇರಿದವುಗಳೆಲ್ಲಕ್ಕೂ ಶ್ರೀಮಹಾವಿಷ್ಣುಸಂಬಂಧವಾದ, ಸಾರ್ವಾತ್ಮ್ಯ ಎಂದರೆ ಸಮಸ್ತಕ್ಕೂ ಆತ್ಮಾವಾಗಿರುವ ಭಾವವು, ಎಲ್ಲವೂ ವಿಷ್ಣುವಿಗೆ ಶರೀರವು, ಎಲ್ಲಕ್ಕೂ ಆತನು ಆತ್ಮಾ ಎಂಬ, ಪ್ರತಿಬೋಧ ಸಮುತ್ಥಯಾ - ಒಳ್ಳೇ ಜ್ಞಾನೋತ್ಪತ್ತಿಯಿಂದ, ನಮ ಇತ್ಯೇತಯಾ ವಾಚಾ - ನಮಃ ಎಂಬೀ ವಾಕ್ಯನಮೂಲಕವಾಗಿ ಎಂದರೆ ಇಂತಹ ಮನಸ್ಸಿನಲ್ಲಿನ ಅನುಸಂಧಾನದಿಂದ ಯುಕ್ತವಾಗಿರುವ ನಮಶ್ಯಬ್ದೋಚ್ಚಾರಣೆಯುಳ್ಳ, ನನ್ಮ್ರಾ - ಶರೀರ ಮೂಲಕವಾಗಿ ಪ್ರಣಾಮವನ್ನೆಸಗಿದ ಶರಣಾಗತಿಯ ಮೂಲಕ, ಸ್ವಸ್ಮಾತ್ - ತಾನು ತನ್ನದೆಂಬ ಭ್ರಮರೂಪವಾದ ಅಹಂಕಾರ ಮಮಕಾರಗಳ ದಶೆಯಿಂದ, ಅಪೋಹ್ಯತೇ - ಬಿಡಲ್ಪಡುತ್ತದೆ; ಇದಕ್ಕೆ ಕರ್ತೃಪದವು ಸ್ವತ್ವಧೀಮಯಃ, ಎಂಬ ಭ್ರಮರೂಪಜ್ಞಾನವು. ಎಲ್ಲವೂ ವಿಷ್ಣುವಿಗೆ ಶರೀರವು,ಎಲ್ಲಕ್ಕೂ ಆತನು ಆತ್ಮನು ಎಂದಾಯಿತೋ,ಆಧೇಯತ್ವವಿಧೇಯತ್ವಶೇಷತ್ವಗಳು ಉಂಟಾಗಿ, ಎಲ್ಲವೂ ಪರಮಾತ್ಮಾಧೀನವೆಂಬ ಜ್ಞಾನ ಉಂಟಾಗುವವರ ಮೂಲಕ ಅಹಂಕಾರ ಮಮಕಾರರೂಪ ಅಜ್ಞಾನಗಳು ತೊಲಗುತ್ತವೆ. ಇದು ನಮನು ಎಂಬ ಸಖಂಡ ನಮಸ್ಸಿನಿಂದುಂಟಾದ ಸೂಕ್ಷ್ಮಾರ್ಥವು ಎಂಬ ಉಪದೇಶವು. ಸಾರಪ್ರಕಾಶಿಕೆಯವರು "ತತ್ತದ್ವೈಷ್ಣವ ಸಾರ್ವಾತ್ಮ್ಯ ಪ್ರತಿ ಬೋಧ ಸಮರ್ಥಯಾ ಎಂಬ ಪಾಠಾಂತರವನ್ನಿಟ್ಟುಕೊಂಡು,ವೈಷ್ಣವಶಬ್ದ ಸ್ವಾರಸ್ಯದಿಂದ "ಆತ್ಮಾತ್ಮೀಯೇ ಸರ್ವಂ ಸ್ಮಿಂ ಸ್ತತ್ತತ್ಸರ್ವಭಾಗವತಾರ್ಥತ್ವರೂಪ ಭಾಗವತ ಶೇಷತ್ವ ಜ್ಞಾನಸಮರ್ಥಯಾ" ಎಂಬ ಇನ್ನೊಂದರ್ಥವನ್ನೂ ಹೇಳಿರುತ್ತಾರೆ. ಎಲ್ಲಕ್ಕೂ ಭಗವಚ್ಛೇಷತ್ವಮಾತ್ರವೇ ಅಲ್ಲದೆ ಭಾಗವತ ಶೇಷತ್ವಜ್ಞಾನ ಸಮರ್ಥನೆಯಿಂದ, ಎಂದೂ ಅರ್ಥಮಾಡಿರುತ್ತಾರೆ.

ಮುಂದೆ ಮೂರನೆಯ ಪರರೂಪಾರ್ಥವನ್ನು ಉಪದೇಶಿಸುತ್ತಾರೆ.

---

ಮೊದಲು ಸ್ಥೂಲಾರ್ಥವನ್ನೂ, ಅನಂತರ ಸೂಕ್ಷ್ಮಾರ್ಥವನ್ನೂ, ಉಪ

## ಅಥ ತೃತೀಯ ಪರಾರ್ಥನಾಹ

**ಇತಿ ತೇ ಸೂಕ್ಷ್ಮ ಉದ್ದಿಷ್ಟಃ ಪರ ಮನ್ಯನ್ನಿಶಾಮಯ।ಪನ್ಥಾ ನಕಾರ ಉದ್ದಿಷ್ಟೋ ಮಃ ಪ್ರಧಾನೋ ನಿರೂಪ್ಯತೇ॥ವಿಸರ್ಗಃ ಪರಮೇಶಸ್ತು ತತ್ರಾರ್ಥೋಽಯಂ ಉದೀರ್ಯತೇ। ಅನಾದಿ ಪರಮೇಶೋಽಯಶ್ಶಕ್ತಿಮಾನ್ ಪುರುಷೋತ್ತಮಃ ॥ ತತ್ಪ್ರಾಪ್ತಯೇ ಪ್ರಧಾನೋಽಯಂ ಪಂಥಾ ನಮನ**

---

ದೇಶಿಸಿದರು ; ಇದನ್ನು ನಿಗಮನಮಾಡಿ ಹೇಳಿ, ಮುಂದೆ ಪರಾರ್ಥವನ್ನು ಉಪದೇಶಿಸುತ್ತಾರೆ.—ಇತಿ - ಈ ಪ್ರಕಾರವಾಗಿ, **ತೇ** – ಶಿಷ್ಯನಾದ ನಿನಗೆ, **ಸೂಕ್ಷ್ಮಃ ಉದ್ದಿಷ್ಟಃ** - ನಮಶ್ಶಬ್ದದ ಸೂಕ್ಷ್ಮಾರ್ಥವೂ ಸಹ ಉಪದೇಶಿಸಲ್ಪಟ್ಟಿತು. ಮುಂದೆ **ಅನ್ಯತ್** - ಈ ಸ್ಥೂಲಸೂಕ್ಷ್ಮರೂಪಾರ್ಥಗಳಿಗಿಂತಲೂ ಬೇರೆಯಾದ, **ಪರಂ** - ಪರವೆಂದು ಹೇಳಿಸಿಕೊಳ್ಳುವ ಅರ್ಥವನ್ನು, **ನಿಶಾಮಯ** - ಕೇಳು—**ನಕಾರಃ**- ನಕಾರವು, **ಪನ್ಥಾ** - ಮಾರ್ಗವಾಗಿ ಎಂದರೆ ಆತನನ್ನು ಸೇರಲು ಉಪಾಯವಾಗಿ, **ಉದ್ದಿಷ್ಟಃ** - ಹೇಳಲ್ಪಟ್ಟಿರುತ್ತದೆ. **ಮಃ** ಎಂಬುದು **ಪ್ರಧಾನಂ** - ಮುಖ್ಯವಾದುದಾಗಿ, ಎಂದರೆ ಮುಖ್ಯವಾದ ಉಪಾಯವಾಗಿ, **ಉದೀರ್ಯತೇ** - ಹೇಳಲ್ಪಟ್ಟಿರುತ್ತದೆ. **ವಿಸರ್ಗಸ್ತು**-ವಿಸರ್ಗವಾದರೋ, **ಪರಮೇಶಃ** - ಸರ್ವೇಶ್ವರನೆಂದು ಹೇಳಲ್ಪಟ್ಟಿರುತ್ತದೆ. ಇದರಿಂದ ಪ್ರಧಾನನಾದ ಸಿದ್ಧೋಪಾಯನು ಪರಮಾತ್ಮನೇ ಎಂಬರ್ಥವನ್ನು ಈ ನಮಶ್ಶಬ್ದವು ಬೋಧಿಸುತ್ತದೆಂದು ಹೇಳುತ್ತಾರೆ.—**ತತ್ರ** – ಆ ನಮಶ್ಶಬ್ದದಲ್ಲಿ, ಅಥವಾ ಈ ಪರಾರ್ಥವನ್ನು ಹೇಳುವಸಂದರ್ಭದಲ್ಲಿ, **ಅಯಂ ಅರ್ಥಃ** - ಈ ಮುಂದೆ ಹೇಳುವ ಅರ್ಥವೇ, **ನಿರುಚ್ಯತೇ** - ನಿರುಕ್ತಿಯಮೂಲಕ ತೋರಿಬರುತ್ತದೆ. ಏನೆಂದರೆ **ಅನಾದಿ ಪರಮೇಶೋಽಯಮ್** - ಅನಾದಿಯಾಗಿರುವ ಈ ಸರ್ವೇಶ್ವರನು, **ಶಕ್ತಿಮಾನ್** - ಎಂತಹ ಪಾಪಿಯನ್ನೂ ಕೂಡ ದಿವ್ಯವೈಕುಂಠಕ್ಕೆ ಕರೆದುಕೊಂಡುಹೋಗುವ ಅಘಟಿತಘಟನಾಶಕ್ತಿಯುಳ್ಳವನು, **ಪುರುಷೋತ್ತಮಃ**-ಅಂತವರನ್ನೂಕೂಡ ತನ್ನಲ್ಲಿಗೆ ಕರೆದುಕೊಂಡು ಹೋಗಬೇಕೆಂಬ ದಯಾದಾರ್ಯಾದಿಕಲ್ಯಾಣ ಗುಣಾಕರನಾದುದರಿಂದ ಪುರುಷಶ್ರೇಷ್ಠನು. **ತತ್ಪ್ರಾಪ್ತಯೇ**-ಆತನನ್ನುಮೋಕ್ಷದಶೆಯಲ್ಲಿ ಪ್ರಾಪ್ಯವಾಗಿ ಹೊಂದುವದಕ್ಕೆ,**ಪ್ರಧಾನೋಽಯಂ ಪನ್ಥಾ**-ಇಂತಹ ವಿಷ್ಣುವೇ ಪ್ರಧಾನವಾದಸಿದ್ಧೋಪಾಯನು,ಆದುದರಿಂದಲೇ ಈತನು **ನಮನನಾಮವಾನ್** - **ನಮಃ** ಎಂಬ ಶಬ್ದದಿಂದ ಹೇಳಲ್ಪಡುವವನು. ಇದರಿಂದ **"ಯಮೇವೈಷ ವೃಣುತೇ ತೇನಲಭ್ಯಃ"** (ಮುಂ. ೩. ೨. ೩), **"ಕೃಷ್ಣಂ ಧರ್ಮಂ ಸನಾತನಂ"** (ಭಾರತ)**"ಶರಣ್ಯಂ ಶರಣಂ ಚ ತ್ವಾ ಮಾಹು ರ್ದಿವ್ಯಾ ಮಹರ್ಷಯಃ"** (ರಾ. ಯುದ್ಧ. ೧೨೦. ೧೮) ಇತ್ಯಾದ್ಯನೇಕ ಪ್ರಮಾಣಗಳಲ್ಲಿ ಹೇಳಿರುವ ಅರ್ಥವು ಇಲ್ಲಿ ಶಿಕ್ಷಿತವು. ನಕಾರಕ್ಕೆ ಸಿದ್ಧೋಪಾಯನೆಂಬ ಅರ್ಥವು

**ನಾಮವಾ೯ । ಇತಿತೇ ತ್ರಿವಿಧಃ ಪ್ರೋಕ್ತೋ ನಮಶ್ಶಬ್ದಾರ್ಥ ಈದೃಶಃ" ಇತಿ ಇವ್ವಿಡತ್ತಿಲ್ "ನಂತವ್ಯಃ ಪರಮಶ್ರೇಷ್ಠೀ" ಎನ್ಗೈಯಾಲೇ ನಮಸ್ಸುಕ್ಕು ಪರಮಶೇಷಿಯೇ ಪ್ರತಿಸಂಬಂಧಿ ಯೆನ್ನುಮಿಡಮ್ ಸ್ವತಃ ಪ್ರಾಪ್ತಮ್. ಪರಮಶೇಷಿ ಇನ್ನಾನೆನ್ರು ತೆಳಿವಿಕ್ಕೈಕ್ಕಾಹ ವಿಶೇಷ ನಾಮಧೇಯಮ್.**

---

ಹೇಗೆ ಎಂದರೆ ನಿರುಕ್ತಿಯಿಂದಲೇ ಆ ಅರ್ಥವು ಉಂಟಾಗುತ್ತದೆಂದು ಹೇಳಲ್ಪಟ್ಟಿತು. ಣೀಞ್ ಪ್ರಾಪಣೇ ಎಂಬ ಧಾತುವಿನಮೂಲಕ ಮಾರ್ಗ ತೋರಿಸಿ ಕರೆದುಕೊಂಡು ಹೋಗುವವನು ಎಂಬುದು ನಕಾರಾರ್ಥವು. ಆದುದರಿಂದ ಸಹಸ್ರನಾಮದಲ್ಲಿ **ನಯಃ** ಎಂಬುದೂ ಒಂದು ನಾಮವು (೪೨೦); ಈತನಿಂದ ಶರಣಾಗತರು ಕರೆದುಕೊಂಡು ಹೋಗಲ್ಪಡುವರು; ಆದುದರಿಂದ **ನಯಾಯ ನಮಃ** ಎಂದು ಇದೆ. ಹಾಗೆಯೇ ಮಃ ಎಂಬುದು ಪ್ರಕೃಷ್ಟವಾದುದನ್ನು ಬೋಧಿಸುತ್ತದೆ. **ಮಹ ಪೂಜಾಯಾಂ** ಎಂಬ ಧಾತುವಿನ ಮೂಲಕ ಉಂಟಾಗುವ ಅರ್ಥವು. ಆದುದರಿಂದ ಆತನನ್ನು ಹೊಂದಲು ಆತನೇ ಸರ್ವೋತ್ಕೃಷ್ಟ ಉಪಾಯನೆಂಬ ಭಾವವು. ಮುಂದೆ ಹೀಗೆ ಓ ಶಿಷ್ಯನೇ ನಿನಗೆ ಮೂರುವಿಧ ಅರ್ಥಗಳು ನಮಶ್ಶಬ್ದಕ್ಕೆ ಬೋಧಿಸಲ್ಪಟ್ಟವೆಂದು ನಿಗಮನದಲ್ಲಿ ಹೇಳುತ್ತಾರೆ. ಇತಿ - ಈ ಪ್ರಕಾರವಾಗಿ, ತೇ - ನಿನಗೆ, ಈದೃಶಃ - ಈಪರಿಯಲ್ಲಿರುವ, ತ್ರಿವಿಧಃ - ಮೂರುವಿಧಗಳನ್ನುಳ್ಳ, ನಮಶ್ಶಬ್ದಾರ್ಥಃ - ನಮಶ್ಶಬ್ದದ ಅರ್ಥವು, ಪ್ರೋಕ್ತಃ - ಚನ್ನಾಗಿ ಉಪದೇಶಿಸಲ್ಪಟ್ಟಿತು" ಇತಿ ಎಂಬದಾಗಿ, ಅಹಿರ್ಬುಧ್ನ್ಯ ಸಂಹಿತೆಯಲ್ಲಿ ಅತಿವಿಶದವಾಗಿ ನಮಶ್ಶಬ್ದಾರ್ಥಗಳು ವಿಸ್ತರಿಸಲ್ಪಟ್ಟಿವೆ ಎಂಬ ತಾತ್ಪರ್ಯವು. ಬಹು ಸ್ಫುಟವಾದ ಉಪಪಾದನೆಯಾದುದರಿಂದಲೇ ಅಲ್ಲಿನ ೩೬ ಶ್ಲೋಕಗಳನ್ನೂ ಸಂಪೂರ್ಣವಾಗಿ ಉದಾಹರಿಸಿರುತ್ತಾರೆ.

ಹೀಗೆ ಉದಾಹರಿಸಿದ ಶ್ಲೋಕಗಳಲ್ಲಿ ಕೆಲವು ಮುಖ್ಯವಾದ ಅಭಿಪ್ರಾಯಗಳನ್ನು ಮುಂದಿನ ನಾಲ್ಕು ವಾಕ್ಯಗಳಮೂಲಕ ತೋರ್ಪಡಿಸುತ್ತಾರೆ.— ಪ್ರಥಮತಃ ಈ ನಮಶ್ಶಬ್ದದಿಂದ ತೋರಿಬರುವ ಶರಣಾಗತಿಗೆ ಉದ್ದೇಶ್ಯನು ಪರಮಶೇಷಿಯಾದ ಭಗವಂತನೇ ವಿನಾ ಅನ್ಯದೇವತೆಗಳು ಯಾರೂ ಆಗುವದಿಲ್ಲವೆಂಬುದು, "ನಂತವ್ಯಃ ಪರಮಶ್ರೇಷ್ಠೀ ಶೇಷಾ ನಂತಾರ ಈರಿತಾಃ" ಎಂಬ ಶ್ಲೋಕತಾತ್ಪರ್ಯವೆಂದು ಉಪದೇಶಿಸುತ್ತಾರೆ. ಇವ್ವಿಡತ್ತಿಲ್ - ನಮಶ್ಶಬ್ದಾರ್ಥವಾಗಿ ಉದಾಹರಿಸಿದ ಪ್ರಮಾಣಗಳಲ್ಲಿ, ನಂತವ್ಯಃ ಪರಮಶ್ರೇಷ್ಠೀ, ಎನ್ಗೈಯಾಲ್ - ಎಂದು ಹೇಳಿರುವದರಿಂದ ಈ ನಮಸ್ಸುಕ್ಕು ಈ ಶರಣಾಗತ್ಯರ್ಥವನ್ನು ಬೋಧಿಸುವ ನಮಶ್ಶಬ್ದಕ್ಕೆ, ಪರಮಶೇಷಿಯೇ - "ಶರಂ[illegible]" ಎಂದು ಶ್ರುತಿಯು ಉದ್ಘೋಷಿಸುವದಾಗಿ [illegible] ಪ್ರತಿ ಸಂಬಂಧಿ ಎನ್ನುಮಿಡಮ್ - ಉದ್ದೇಶ್ಯನೇ

ಇಙ್ಗ "ಅಶಾಸ್ತ್ರೀಯೋಪಸೇವಾ ತು ತದ್ವಿಘಾತ ಉದೀರ್ಯತೇ" ಎನ್ರುಮ್, "ತದ್ವಿಘಾತೋ ನಿರಾಕೃತಿಃ" ಎನ್ರುಮ್ ಶೊನ್ನ ವಚನಙ್ಗ

---

ವಿನಾ, ಇತರರಲ್ಲವೆಂಬ ಸಿದ್ಧಾಂತಾರ್ಥವು, ಸ್ವತಃ ಪ್ರಾಪ್ತನ್ - ತಾನಾಗಿಯೇ ಉಂಟಾಗುತ್ತದೆ; ಕರ್ಮೋಪಾಧಿ ಮೊದಲಾದವುಗಳ ಮೂಲಕ ಉಂಟಾದುದಲ್ಲವೆಂಬ ಭಾವವು. ಹೀಗೆ **ಸ್ವತಃ ಪ್ರಾಪ್ತನ್** ಎಂಬುದನ್ನು ಉಪಪಾದಿಸುವದಕ್ಕಾಗಿಯೇ ಮುಂದೆ ಸಂಹಿತಾವಾಕ್ಯದಲ್ಲಿ "ಭಗವಾನ್ಮೇ ಪರೋನಿತ್ಯಂ" "ಪುರುಷಂಪರಮುದ್ದಿಶ್ಯ" **"ಭೂತಾನಾಮನುಕಂಪನಃ" "ಅನಾದಿಃ ಪರಮೋಶೋಽಯಂ ಶಕ್ತಿಮಾನ್ ಪುರುಷೋತ್ತಮಃ"** ಇತ್ಯಾದಿ ಪ್ರಯೋಗಗಳನ್ನು ಗ್ರಹಿಸಬಹುದೆಂದು ತಿಳಿಸುತ್ತಾರೆ. **ಪರಮ ಶೇಷಿ ಇನ್ನಾನೆನ್ರು** - ಆ ಪರಮ ಶೇಷಿಯು ಇಂತವನೆಂದು, **ತೆಳಿವಿಕ್ಕೈಕ್ಕಾಹ**-ತಿಳಿಸುವದಕ್ಕಾಗಿಯೇ, **ವಿಶೇಷನಾಮಧೇಯಮ್** - ಮೇಲೆ ಅವತಾರಿಕೆಯಲ್ಲಿ ಹೇಳಿದ, **"ಭಗವಾನ್ ಮೇಪರಃ" "ಪುರುಷಂ ಪರಂ"** ಇತ್ಯಾದಿ ವಿಶೇಷ ಪ್ರಯೋಗಗಳು. ಹಿಂದೆ ಪ್ರಾತಿಕೂಲ್ಯವರ್ಜನವೂ ಮತ್ತು ಆನುಕೂಲ್ಯ ಸಙ್ಕಲ್ಪವೂ ಈ ನಮಸ್ಸೆಂಬ ಶರಣಾಗತ್ಯನುಷ್ಠಾನಕಾಲದಲ್ಲಿರಬೇಕೆಂದು ಹೇಳಿ, ಅವುಗಳಿಗೆ ವ್ಯಾಘಾತಗಳು ಯಾವುವು ಎಂದು ತಿಳಿಸುವ ಸಂದರ್ಭದಲ್ಲಿ ಪ್ರಾತಿಕೂಲ್ಯವರ್ಜನಕ್ಕೆ **"ಅಶಾಸ್ತ್ರೀಯೋಪಸೇವಾ ತು ತದ್ವ್ಯಾಘಾತ ಉದೀರ್ಯತೇ"** ಎಂದು ಅಶಾಸ್ತ್ರೀಯೋಪಸೇವೆಯು ವಿಘಾತವೆಂದು ಹೇಳಲ್ಪಟ್ಟಿತು. ಹಾಗೆಯೇ ಆನುಕೂಲ್ಯ ಸಙ್ಕಲ್ಪಕ್ಕೆ **"ತದ್ವ್ಯಾಘಾತೋ ನಿರಾಕೃತಿಃ"** ಹೀಗೆ ವಿರೋಧವಾಗುವ ಭಾವವು ಪ್ರಪದನ ಕಾಲದಲ್ಲಿ ಮಾತ್ರವೇ ಅಥವಾ ಪ್ರಪತ್ತ್ಯುತ್ತರಕಾಲಕ್ಕೂ ಅನ್ವಯಿಸುತ್ತದೆಯೇ ಎಂಬ ಶಙ್ಕಾನಿವೃತ್ತಿಗಾಗಿ ಸಿದ್ಧಾಂತಾರ್ಥವನ್ನು ತಿಳಿಸುತ್ತಾರೆ. ಪ್ರಪತ್ತಿಕಾಲದಲ್ಲಿ ಆ ಅಙ್ಗಗಳು ಮುಖ್ಯವಾಗಿ ಇರಬೇಕು. ಅಙ್ಗಗಳಿಲ್ಲದಿದ್ದರೆ ಅಂಗಿಯು ಉತ್ಪನ್ನವೇ ಆಗುವದಿಲ್ಲವು, ಆಗ ಅದು ಶರಣಾಗತಿಯೇ ಆಗುವದಿಲ್ಲವು. ಪ್ರಪತ್ತ್ಯುತ್ತರಕಾಲದಲ್ಲಿ ಈ ವ್ಯಾಘಾತಗಳು ಪ್ರಾಪ್ತವಾದರೆ ಶರಣಾಗತಿಗೆ ಲೋಪವಿಲ್ಲವು. ಭಗವದಾಜ್ಞಾತಿಲಂಘನೆಯನ್ನು ಮಾಡಿದ ಉದ್ದಿಶ್ಯ ಸ್ವಲ್ಪ ಶಿಕ್ಷೆಗೆ ಗುರಿಯಾಗಿ ಅದನ್ನು ಅನುಭವಿಸಿದನಂತರ **"ಕ್ರೋಡೀಕರೋತಿಪ್ರಭುಃ"** ಎಂದು ಹಿಂದೆ ಹೇಳಿದುದನ್ನು ಜ್ಞಾಪಿಸುತ್ತಾರೆ. ಇಙ್ಗ - ಈ ಸಂದರ್ಭದಲ್ಲಿ, "ಅಶಾಸ್ತ್ರೀಯೋಪಸೇವಾತು" ಎಂಬ ವಾಕ್ಯದಲ್ಲಿ ಅಶಾಸ್ತ್ರೀಯವಾಗಿ ಅಧರ್ಮಗಳಾದ ಅಕೃತ್ಯಕರಣ ಕೃತ್ಯಾಕರಣ ದೋಷಗಳು ಪ್ರಾತಿಕೂಲ್ಯವರ್ಜನಾಙ್ಗಕ್ಕೆ ವ್ಯಾಘಾತವೆಂದೂ, ಹಾಗೆಯೇ **ತದ್ವಿಘಾತೋ ನಿರಾಕೃತಿಃ" ಎನ್ರುಮ್** -ಎಂಬ ವಾಕ್ಯದಲ್ಲಿರುವ ಭೂತದ್ರೋಹವು ಆನುಕೂಲ್ಯಸಙ್ಕಲ್ಪರೂಪಾಙ್ಗಕ್ಕೆ ವ್ಯಾಘಾತವೆಂದೂ, **ಶೊನ್ನ ವಚನಙ್ಗಳುಕ್ಕು** - ಹೇಳಲ್ಪಟ್ಟ ವಾಕ್ಯ

**ಳುಕ್ಕು ಪ್ರಪತ್ತಿಕಾಲತ್ತಿಲ್ ಬುದ್ಧಿಪೂರ್ವ ಪ್ರಾತಿಕೂಲ್ಯಮ್ ನಡಕ್ಕುಮಾಗಿಲ್, ಅನುಕೂಲ್ಯ ಸಙ್ಕಲ್ಪಮುಮ್, ಪ್ರಾತಿಕೂಲ್ಯತ್ತಿಲ್ ಅಭಿಸಂಧಿ ವಿರಾಮಾದಿಗಳುಮ್ ಇಲ್ಲೈ ಯಾಯಿಱ್ಱೆನ್ನು ತಾತ್ಪರ್ಯಮ್. ಪ್ರಪತ್ತ್ಯುತ್ತರ ಕಾಲತ್ತಿಲ್ ಬುದ್ಧಿಪೂರ್ವ ಪ್ರಾತಿಕೂಲ್ಯಂ ನಡನ್ದದಾಗಿಲ್, ಇವರ್ ರುಚಿಯೋಡು ಪೊರುಂದಿನ ಸ್ವತಂತ್ರ ಭಗವದಾಜ್ಞೈಕ್ಕು ವಿರುದ್ಧಮಾಮ್.**

---

ಗಳಿಗೆ, **ಪ್ರಪತ್ತಿ ಕಾಲತ್ತಿಲ್** - ಪ್ರಪದನಾನುಷ್ಠಾನಕಾಲದಲ್ಲಿ, **ಬುದ್ಧಿ ಪೂರ್ವ ಪ್ರಾತಿಕೂಲ್ಯಮ್** - ಬುದ್ಧಿ ಪೂರ್ವಕವಾಗಿ ಅಕೃತ್ಯಕರಣ ಕೃತ್ಯಾಕರಣರೂಪ ಪ್ರತಿಕೂಲಾಚರಣೆಯು, **ನಡಕ್ಕು ಮಾಗಿಲ್** - ನಡೆದರೆ, ಅನುಕೂಲ್ಯ ಸಂಕಲ್ಪವೆಂಬ ಅಂಗವೂ, **ಪ್ರಾತಿಕೂಲ್ಯತ್ತಿಲ್ ಅಭಿಸಂಧಿ ವಿರಾಮಾದಿಗಳ್** - ಪ್ರತಿಕೂಲಾಚರಣೆಯುನ್ನು ಮಾಡುವ ಬುದ್ಧಿಗೆ ವಿರಾಮವೇ ಮೊದಲಾದವುಗಳು, **ಇಲ್ಲೈಯಾಯಿಱ್ಱೆನ್ನುತಾತ್ಪರ್ಯಮ್** - ಇಲ್ಲವು ಎಂದು ಆಯಿತು.. ಯಾವಾಗ ಅಂಗಗಳೇ ಇಲ್ಲವೋ ಆಗ ಅಂಗಿಯಾದ ಶರಣಾಗತಿಯೇ ಆಗುವದಿಲ್ಲವೆಂಬಭಾವವು. ಈ ವ್ಯಾಘಾತಗಳುಂಟಾಗುವದು ಪ್ರಪದನಕಾಲದಲ್ಲೇಯಾದರೇ ಆಗ ಅದು ಶರಣಾಗತಿಯೇ ಆಗುವದಿಲ್ಲವು. ಪ್ರಪದನೋತ್ತರಕಾಲದಲ್ಲಿ ಬುದ್ಧಿಪೂರ್ವಕವಾಗಿ ಈ ವ್ಯಾಘಾತಗಳು ಸಂಬಂಧಿಸಿದರೆ, ಶರಣಾಗತಿಯು ವ್ಯರ್ಥವಾಗುವದಿಲ್ಲವು. ಅದಕ್ಕಾಗಿ ಪುನಶ್ಶರಣಾಗತಿಯನ್ನನುಷ್ಠಿಸಿದರೆ, ಆ ಪ್ರಾಯಶ್ಚಿತ್ತಪೂರ್ವಕವಾಗಿ ವ್ಯಾಘಾತದೋಷಪರಿಹಾರಮೂಲಕ ಮೋಕ್ಷ ಉಂಟು. ಅಂತಹ ಪ್ರಾಯಶ್ಚಿತ್ತಾನುಷ್ಠಾನವಿಲ್ಲದೇ ಹೋದರೆ, ಸರ್ವೇಶ್ವರನು ಲಘುದಂಡನೆಯುನ್ನುಕೊಟ್ಟು, ಮುಂದೆ ಅನುಷ್ಠಿಸಿದ ಪ್ರಪದನವು ನಿರರ್ಥಕವಾಗದೇ ಇರುವದರಿಂದ, ಆತನನ್ನು ದೇಹಾವಸಾನಾನಂತರ ಪರಿಗ್ರಹಿಸುವನೆಂಬ ಭಾವದಿಂದ ಹೇಳುತ್ತಾರೆ. **ಪ್ರಪತ್ತ್ಯುತ್ತರಕಾಲ** ದಲ್ಲಿ. **ಬುದ್ಧಿಪೂರ್ವಪ್ರಾತಿಕೂಲ್ಯಂ** - ಬುದ್ಧಿಪೂರ್ವಕವಾದ ಪ್ರತಿಕೂಲಾಚರಣೆಯು, **ನಡನ್ದದಾಗಿಲ್** - ನಡೆದುದಾದರೆ, **ಇವರ್ ರುಚಿಯೋಡು ಪೊರುನ್ದಿನ** - ಈ ಪ್ರಪನ್ನನ ರುಚಿಯಾವುದು ಎಂದರೆ ಆತನ ಆಜ್ಞಾನುಸಾರ ನಡೆಯುವದು, ಅದಕ್ಕೆ ಯೋಗ್ಯವಾಗಿರುವ **ಸ್ವತಂತ್ರ ಭಗವದಾಜ್ಞೈಕ್ಕು** - ಸ್ವತಂತ್ರನಾದ ಸರ್ವೇಶ್ವರನ ಆಜ್ಞೆಗೆ, **ವಿರುದ್ಧಮಾಮ್** - ವಿರುದ್ಧವಾಗುತ್ತದೆ. ಪ್ರಪನ್ನನು ಭಗವಂತನ ಆಜ್ಞೆಗೆ ಅನುಗುಣವಾಗಿ ವರ್ತಿಸತಕ್ಕದ್ದು. ಹಾಗೆ ನಡೆಯದೆ ಇದ್ದುದರಿಂದ ಭಗವನ್ನಿಗ್ರಹಕ್ಕೆ ಪಾತ್ರನಾಗಿ, ಪ್ರಪನ್ನನಾದುದರಿಂದ ಅಲ್ಪ ಶಿಕ್ಷೆಗೆ ಗುರಿಯಾಗಿ, ಅದನ್ನನುಭವಿಸಿದನಂತರ, ಶರಣಾಗತಿಯು ನಿರರ್ಥಕವಾಗುವದಿಲ್ಲವಾದುದರಿಂದ ದೇಹಾವಸಾನದಲ್ಲಿ ಮೋಕ್ಷವನ್ನು ಹೊಂದುವನು. ಈ ಅಂಶವು ಹಿಂದೆ ಅಪರಾಧ ಪರಿಹಾರಾಧಿಕಾರದಲ್ಲಿ ಉಪಪಾದಿತವು. ಇಂತಹ ಪ್ರತಿಕೂಲಾಚರಣೆಯುನ್ನು ಏನೋ ಅಜಾಗರೂಕತೆಯಿಂದ ನಡೆದುದು, ಪ್ರಪನ್ನನಿಗೆ "**ಅರುನ್ತುದ**

**ಅಥ ಸ್ಥೂಲ ಸೂಕ್ಷ್ಮ ಪರಶಬ್ದಾನಾಂ ಕ್ರಮೇಣಾರ್ಥಾನಾಹ.**

**ಇಜ್ಜು ಸ್ಥೂಲಮಾನವರ್ಥಮಾವದು ? ವ್ಯಾಕರಣತ್ತೈತ್ತುವಕ್ಕಿ ವರು**

---

**ಮಾ ಯಿರುಕ್ಕುಮ್**" ಎಂದು ಹೇಳಿ, ಹೀಗೆ ಭಗವದಪ್ರೀತಿಯುಂಟಾಯಿತೇ ಎಂಬ ಶೋಕದಿಂದ ನರಕಪ್ರಾಪ್ತಿಯುಂಟಾದಹಾಗೆ ಭಾವಿಸುವನು; ಅನಂತರ ಪುನಶ್ಶರಣಾಗತಿಯ ಮೂಲಕ ಕ್ಷಮಿಸೆಂದು ಭಾವಿಸುವನು ಎಂದು ಹೇಳಿರುತ್ತಾರೆ. (೧೪೬೫-೬ನೆಯ ಪುಟಗಳನ್ನು ನೋಡಿ.) ಹಾಗೆ ಪ್ರಾತಿಕೂಲ್ಯಾಚರಣೆಯಿಂದ ಪರಿತಾಪವೂ ಹುಟ್ಟದೆ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳದೆ, ಅಂತಹ ಪ್ರಾತಿಕೂಲ್ಯಾಚರಣೆಯನ್ನು ತ್ಯಜಿಸದೇ ಇದ್ದುಹೋದರೆ, ಉಪಾಯಾನುಷ್ಠಾನವೇ ಫಲಿಸಲಿಲ್ಲವೆಂದು ಶಂಕಿಸಬೇಕಾಗುತ್ತದೆಂದು **ಇಜ್ಜು ನಿರ್ಬಾದಪನುಕ್ಕು ಸ್ವಾಮಿವಿಷಯತ್ತಿಲ್ ಪ್ರಾವಣ್ಯಮುಮ್ ಕೈಙ್ಕರ್ಯರೂಪಮಾನ ಮೋಕ್ಷತ್ತಿಲ್ ಅಭಿರುಚಿಯುಮ್ ಶಙ್ಕಿಕ್ಕ ಅಡುಕ್ಕುಮ್** ಎಂದು ಶಾಸ್ತ್ರೀಯ ನಿಯಮನಾಧಿಕಾರದಲ್ಲಿ ಹೇಳಿರುತ್ತಾರೆ. (೧೪೬೭ನೆಯ ಪುಟವನ್ನು ನೋಡಿ.)

**ಹಿಂದೆ ಉಪಯೋಗಿಸಿದ ಸ್ಥೂಲಸೂಕ್ಷ್ಮ ಪರಶಬ್ದಗಳ ಅರ್ಥಗಳನ್ನು ವಿವರಿಸುತ್ತಾರೆ.**

ನಮಸ್ಸಿಗೆ ಸ್ಥೂಲಸೂಕ್ಷ್ಮ ಪರಾರ್ಥಗಳೆಂದು ಮೂರರ್ಥಗಳನ್ನು ಉಪಪಾದಿಸಿದರು. ಆ ಅರ್ಥಗಳಿಗೆ **ಸ್ಥೂಲಸೂಕ್ಷ್ಮಪರ** ವೆಂದು ಪ್ರಯೋಗಿಸಿದುದರ ಭಾವವೇನೆಂಬುದನ್ನು ತಿಳಿಸುತ್ತಾರೆ.—**ಇಜ್ಜು ಸ್ಥೂಲಮಾವದು?** - ಈ ನಮಸ್ಸಿನ ಅರ್ಥದಲ್ಲಿ ಸ್ಥೂಲವೆಂದರೆ ಯಾವುದು? ಎಂದರೆ ಸ್ಥೂಲ ಶಬ್ದಾಭಿಪ್ರೇತವೇನು? ಎಂಬ ಪ್ರಶ್ನೆಯು; **ವ್ಯಾಕರಣತ್ತೈತ್ತುವಕ್ಕಿ** - ವ್ಯಾಕರಣವನ್ನನುಸರಿಸಿ, ಸಂಬಂಧಿಸಿ, **ವರುಗಿರ** - ಪ್ರಾಪ್ತನಾಗುವ, **ಸ್ಫುಟವ್ಯುತ್ಪತ್ತಿಯಾಲೇ** - ವ್ಯಕ್ತವಾದ ಧಾತು ಪ್ರತ್ಯಯಗಳ ಮೂಲಕ, **ತೋತ್ತುಮದು** - ತೋರಿಬರುವಂತಾದ್ದು. ಇಂತಹ ಅರ್ಥವು ಸ್ಥೂಲಾರ್ಥವು. ಸ್ಥೂಲತ್ವವೆಂದರೆ ಸ್ಫುಟವಾಗಿ ಪ್ರಕಾಶತ್ವಂ-ತೋರಿಬರುವದು. ಹೇಗೆಂದರೆ **ಯೇನ ನಮತಿ ತನ್ನಮನಂ** ಎಂಬ **ವ್ಯುತ್ಪತ್ತಿ**ಯಿಂದಲಾಗಲಿ ಅಥವಾ **ನಮ ನಂ**ನಮಃ ಎಂಬುದರಿಂದಲಾಗಲಿ "**ದೇವಂನಾಮಯತಿ**" ಎಂಬುದರಿಂದಲಾಗಲಿ ಅರ್ಥವು ಸ್ಫುಟವೆಂಬ ಭಾವವು. ಸೂಕ್ಷ್ಮತ್ವವೆಂದರೆ, ಸ್ಫುಟವಾಗಿ ತೋರದೆ ಗೂಢವಾಗಿ ತೋರುವಂಥಾದ್ದೆಂದು ಮುಂದೆ ಹೇಳುತ್ತಾರೆ. **ಸೂಕ್ಷ್ಮಮಾವದು ?** ಅರ್ಥದಲ್ಲಿ ಸೂಕ್ಷ್ಮವೆಂಬುದು ಯಾವುದು ? **ವರ್ಣಸಾಮ್ಯಾದಿಗಳೈ ಕೊಂಡು** - ನ, ಮ, ಎಂಬ ವರ್ಣಗಳ ಸಾದೃಶ್ಯವನ್ನು ಅಂಗೀಕರಿಸಿ, ಇಳುಗಿರ - ಉಂಟಾಗುವ, ನಿರುಕ್ತಿ ಬಲತ್ತಾಲೇ - ನಿರುಕ್ತಿಶಾಸ್ತ್ರದ ಬಲದಿಂದ, ತೋತ್ತುಮದು - ತೋರಿಬರುವ ಅರ್ಥವು, ನಮಃ, ಮಃ ನ, ಎಂಬಲ್ಲಿ

ಗಿರ ಸ್ಫುಟವೃತ್ತಿಯಾಲೇ ತೋತ್ತುಮದು. ಸೂಕ್ಷ್ಮಮಾವದು ? ವರ್ಣ ಸಾಮ್ಯಾದಿಗಳೈಕ್ಕೊಂಡಿಳಿಗಿರ ನಿರುಕ್ತಬಲತ್ತಾಲೆ ತೋತ್ತುಮದು. ಪರಮಾವದು ? ರಹಸ್ಯ ಶಾಸ್ತ್ರಙ್ಗಳಿಲ್ ಶೊಲ್ಲಾಗಿರ ಅಕ್ಷರ ನಿಖಣ್ಡು ಪ್ರಕ್ರಿಯೈಯಾಲೇ ತೋತ್ತುಮದು.

ಅಥ ಯೋಜನಾತ್ರಯಲಬ್ಧ ಸಾರಭೂತಾರ್ಥಮಾಹ

ಇದಿಲ್ ಮುರ್ಪಡ ಶೇಷಭೂತನುಕ್ಕು ಸ್ವತಃ ಪ್ರಾಪ್ತ ವೃತ್ತಿಯುಮ್,

---

ನಿರುಕ್ತಬಲದಿಂದುಂಟಾಗುವದು; "ಅಹಮಪಿ ನಮಮ ಭಗವತ ಏವ, ಅಹಮಸ್ಮಿಯಾಶ್ಚ ಕಾಶ್ಚನ ಕೃತಯಃ ಮಮಭಗವತಿ ಮಮತಾ ನಾಸ್ತಿ ತಾಸು" ಎಂದು ಎರಡುಪದವಾಗಿ ಭಾವಿಸುವದರಿಂದ ಮಃ, ನ ಎಂದರೆ ಮಮನ ಎಂಬ ವರ್ಣಸಾಮ್ಯದಿಂದ ನಾನು ನನ್ನವನಲ್ಲವು, ನಾನು ಮಾಡುವ ಕೈಙ್ಕರ್ಯಗಳೂ ನನಗಾಗಿ ಅಲ್ಲವು, ನಾನು ಮಾಡಲೂ ಇಲ್ಲವು ಇತ್ಯಾದಿ ಅರ್ಥಗಳುಂಟಾಗುವದರಿಂದ ಇದಕ್ಕೆ ಸೂಕ್ಷ್ಮಾರ್ಥವೆಂಬ ಭಾವವು. **ಪರಮಾವುದು ?** ಪರವೆಂದು ಹೇಳುವದು ಯಾವುದು? **ರಹಸ್ಯಶಾಸ್ತ್ರಙ್ಗಳಿಲ್** - ರಹಸ್ಯ ಶಾಸ್ತ್ರಗಳು ಮೋಕ್ಷೋಪಾಯಾನುಷ್ಠಾನ ಮನ್ತ್ರಗಳನ್ನು ಬೋಧಿಸುವ ಶಾಸ್ತ್ರಗಳು, ಅವುಗಳಲ್ಲಿ, **ಶೊಲ್ಲುಗಿರ** - ಹೇಳುವ, **ಅಕ್ಷರ ನಿಖಂಡು ಪ್ರಕ್ರಿಯೈಯಾಲೇ** - ಅಕ್ಷರ ನಿಘಂಟುವಿನ ಮೂಲಕ ಉಂಟಾಗುವ ರೀತಿಯಲ್ಲಿ, **ತೋತ್ತುಮದು** - ತೋರಿಬರುವ ಅರ್ಥವು. ನಿಘಂಟುಗಳಲ್ಲಿ ಈ ನ ಮತ್ತು ಮ ಮತ್ತು ವಿಸರ್ಗ ಎಂಬ ಅಕ್ಷರಗಳಿಗೆ ಹೇಳಿರುವ ಅರ್ಥಗಳನ್ನು ಮನಸ್ಸಿನಲ್ಲಿಟ್ಟು ಹೇಳುವ ಅರ್ಥವು. ಇದು ಮೇಲಿನ ಸೂಕ್ಷ್ಮಾರ್ಥಕ್ಕಿಂತ ಸೂಕ್ಷ್ಮವಾಗಿರುವದರಿಂದಲೂ ಶ್ರೇಷ್ಠತೆಯನ್ನು ಹೊಂದಿ ಪರಮಾತ್ಮನನ್ನೇ ಬೋಧಿಸುವ ಅರ್ಥವಾದುದರಿಂದಲೂ, **ಪರಾರ್ಥ** ವೆಂಬ ಹೆಸರು. **ಸ್ಥೂಲವಾದ** ಅರ್ಥವೆಂದು ಹೇಳುವದರ ಅಭಿಪ್ರಾಯವೇನೆಂದರೆ, ಸ್ಫುಟವಾಗಿ ಪ್ರಕಾಶಿಸುವ ಅರ್ಥವು **ಸೂಕ್ಷ್ಮಾರ್ಥವು** ಹಾಗಲ್ಲದೆ ಗೂಢವಾಗಿ ತೋರುವ ಅರ್ಥವು. ಪರಾರ್ಥವಾದರೋ ಉತ್ಕೃಷ್ಟಶಾಸ್ತ್ರೈಕಗಮ್ಯವಾದ ಅರ್ಥವು.

**ಹೀಗೆ ಯೋಜನಾತ್ರಯದಿಂದುಂಟಾದ ಸಾರಭೂತಾರ್ಥವನ್ನು ಹೇಳುತ್ತಾರೆ.**

---

ಹೀಗೆ ನಮಶ್ಶಬ್ದಾರ್ಥಗಳನ್ನು ಸ್ಥೂಲಸೂಕ್ಷ್ಮಪರವೆಂದು ವಿಸ್ತರಿಸಿ ಹೇಳಿದುದರ ಸಾರಭೂತಾರ್ಥವನ್ನು ತಿಳಿಸುತ್ತಾರೆ.—ಮೊದಲು ಸ್ಥೂಲಾರ್ಥವನ್ನು ಅನುವದಿಸಿ ಹೇಳುತ್ತಾರೆ. **ಇದಿಲ್** – ಈ ನಮಶ್ಶಬ್ದಾರ್ಥ ವಿವರಣೆಯಲ್ಲಿ, **ಮುರ್ಪಡ** – ಪ್ರಥಮತಃ, ಸ್ಥೂಲರೂಪದಲ್ಲಿ, **ಶೇಷಭೂತನುಕ್ಕು** - ಶೇಷಭೂತನಾದ ಈ ಚೇತನನಿಗೆ, **ಸ್ವತಃ ಪ್ರಾಪ್ತ ವೃತ್ತಿಯುಮ್** - ಕರ್ಮೋಪಾಧಿ ಮೊದಲಾದ ವ್ಯಾಜಗಳಿಂದಲ್ಲದೆ ಸ್ವಾಭಾವಿಕವಾದ ಸ್ವರೂಪದಿಂದಲೇ ಉಂಟಾದ

**ಸಾಙ್ಗನ್ಯಾಸರೂಪಮಾನ ಸಾಧ್ಯೋಪಾಯ ಶರೀರಮುಮ್ ವಕುತ್ತದು. ಅನಂತರಂ ಮೋಕ್ಷೋಪಾಯಾಧಿಕಾರಿಕ್ಕು ಅವಶ್ಯಾಪೇಕ್ಷಿತಮಾನ ನಿರಪೇಕ್ಷ ಸ್ವಾತಂತ್ರ್ಯಾದಿ ನಿವೃತ್ತಿಪೂರ್ವಕ ಸ್ವರೂಪ ಶೋಧನಂ ಪಣ್ಣಿತ್ತು. ಪಿನ್ಬು ಸಾಧ್ಯೋಪಾಯ ವಿಶೇಷತ್ತಾಲೇ ವಶೀಕಾರ್ಯಮುಮಾಯ್ ಪ್ರಾಪ್ಯಮು**

---

ಕೈಂಕರ್ಯರೂಪವಾದ ವೃತ್ತಿಯನ್ನೂ, (ಹಿಂದೆ **"ನೀಚೋಚ್ಚಯೋಃ ಸ್ವಭಾವೋಯಂ ನಂಕ್ಸನಂತವ್ಯತಾತ್ಮಕಃ"** ಎಂಬಲ್ಲಿ ಉಪಪಾದಿಸಲ್ಪಟ್ಟ ಅಭಿಪ್ರಾಯವು ಇಲ್ಲಿ ಉಪನ್ಯಸ್ತವು.) ನಾವುಗಳೆಲ್ಲಾ **ದಾಸಭೂತಾಸ್ಸ್ವತಸ್ಸರ್ವೇ"** ಎಂಬಲ್ಲಿ ಹೇಳಿರುವಹಾಗೆ ಪರಮಾತ್ಮನಿಗೆ ದಾಸಭೂತರಾದುದರಿಂದ ಅಂತವರ ವೃತ್ತಿಯು ಕೈಂಕರ್ಯವೇ ಎಂಬ ಭಾವವು; ಅಂತಹ ವೃತ್ತಿಯನ್ನೂ, **ಸಾಙ್ಗನ್ಯಾಸರೂಪಮಾನ ಸಾಧ್ಯೋಪಾಯ ಶರೀರಮುಮ್** - ಐದು ಅಂಗಗಳಿಂದ ಕೂಡಿದ ಆತ್ಮನಿಕ್ಷೇಪರೂಪ ಭರನ್ಯಾಸವಾದ ಸಾಧ್ಯೋಪಾಯದ ಸ್ವರೂಪವನ್ನೂ ಸಹ, **ವಕುತ್ತದು** - ಕುರಿತದ್ದು, ಉಪದೇಶರೂಪದಲ್ಲಿ ಹೇಳಲ್ಪಟ್ಟಿತು ಎಂಬ ಭಾವವು. ಸ್ಥೂಲಾರ್ಥದಲ್ಲಿ ಇವೆರಡೂ ಎಂದರೆ ಸಾಙ್ಗ ಭರನ್ಯಾಸವೂ, ಉತ್ತರ ಕೃತ್ಯವಾಗಿ ಭಗವದ್ಭಾಗವತ ಕೈಂಕರ್ಯವೂ **"ಪ್ರೇಕ್ಷಾವತಃ ಪ್ರವೃತ್ತಿರ್ಯಾ-** ಎಂಬ ಅಹಿರ್ಬುಧ್ನ್ಯ ವಾಕ್ಯಗಳಲ್ಲಿ ಹೇಳಲ್ಪಟ್ಟವೆಂಬ ಭಾವವು. **ಅನಂತರಂ"** ಸೂಕ್ಷ್ಮರೂಪವಾದ ಎರಡನೆಯ ಯೋಜನೆಯಲ್ಲಿ, **ಮೋಕ್ಷೋಪಾಯ ಅಧಿಕಾರಿಕ್ಕು**-ಮೋಕ್ಷೋಪಾಯವನ್ನನುಷ್ಠಿಸುವ ಅಧಿಕಾರಿಗೆ, **ನಿರಪೇಕ್ಷ** ಇನ್ನಾವುದನ್ನೂ ಅಪೇಕ್ಷಿಸದೇ ಇರುವ, **ಸ್ವಾತಂತ್ರ್ಯಾದಿ ನಿವೃತ್ತಿ ಪೂರ್ವಕ** - ಸ್ವಾತಂತ್ರ್ಯವೇನು, ಅದರಿಂದ ಶೇಷಿತ್ವವೇನು, ಎಂದರೆ ಅಹಂಕಾರ ಮಮಕಾರವೇನು, ಇವುಗಳ ನಿವೃತ್ತಿಪೂರ್ವಕವಾದ, **ಸ್ವರೂಪ ಶೋಧನಮ್** - ಮೋಕ್ಷಾಧಿಕಾರಿಯ ಸ್ವರೂಪ ವಿವೇಚನೆಯು, **ಪಣ್ಣಿತ್ತು** - ಮಾಡಲ್ಪಟ್ಟಿತು. ಇದು ಅಹಿರ್ಬುಧ್ನ್ಯ ಸಂಹಿತೆಯಲ್ಲಿ, **"ಚೇತನಸ್ಯ ಯದಾಮುಷ್ಯಂ"** ಎಂದು ಹಿಂದೆ ಆರಂಭಿಸಿ ಹೇಳಿದ ಅರ್ಥದ ಸಂಗ್ರಹವು; ಸ್ವಾತಂತ್ರ್ಯ ಶೇಷಿತ್ವರೂಪ ಅರ್ಥವು ನಿರುಕ್ತದಲ್ಲಿ **"ಅಹಂ ಭಗವತ ಏವ ನಮಮ, ಮಮ ಯೋ ಕ್ರತಯೋ ನ ತಾ ಮಮ, ಭಗವತ ಏವ"** ಎಂದು ಹೇಳಲ್ಪಟ್ಟು, ವರ್ಣಸಾಮ್ಯದಿಂದ **ನಮಃ** ಎಂದರೆ ನಮಮ ಎಂದು ತೋರಿಬರುವದರಿಂದ ಅಹಂಕಾರಮಮಕಾರ ನಿವೃತ್ತಿಯು ಮೋಕ್ಷಾಧಿಕಾರಿಗೆ ಉಪದೇಶಿಸಲ್ಪಟ್ಟಿತೆಂಬ ತಾತ್ಪರ್ಯವು. ಮುಂದಿನ ಎರಡು ವಾಕ್ಯಗಳಿಂದ ಪರಾರ್ಥದ ಸಂಗ್ರಹಾಭಿಪ್ರಾಯವನ್ನು ತಿಳಿಸುತ್ತಾರೆ. **ಪಿನ್ಬು** - ಅನಂತರ ಪರಾರ್ಥದಲ್ಲಿ, **ಸಾಧ್ಯೋಪಾಯ ವಿಶೇಷತ್ತಾಲೇ** – ಸಾಂಗ ಭರನ್ಯಾಸ ರೂಪ ಸಾಧ್ಯೋಪಾಯದಿಂದ, **ವಶೀಕಾರ್ಯಮುಮಾಯ್ - ತಸ್ಯ ಚ ವಶೀಕರಣಂ ತಚ್ಛರಣಾಗತಿ**

ನಾಯ್ ಇರುಕ್ಕಿರ ಸಿದ್ಧೋಪಾಯ ಮಿರುಕ್ಕುಂಪಡಿಯೈ ಚೊಲ್ಲಿತ್ತು. ಉಪಾಯಾನ್ತರಙ್ಗಳಿರ್ಕ್ಕಾಟ್ಟಿಲ್ ಸಮರ್ಪಣತ್ತಿನುಡೈಯ ಪ್ರಧಾನೋಪಾಯತ್ವಮ್ ಶೊಲ್ಲಿತ್ತಾಗವುಮಾಮ್. ಇವೈ ಯೆಲ್ಲಾಮ್ ಮೇಲ್ಶೊಲ್ಲಪುಕುಕಿರ

---

ರೇವ ಎಂಬಲ್ಲಿ ತೋರಿಬರುವ ಹಾಗೆ, ವಶಮಾಡಿಕೊಳ್ಳಲು ಅರ್ಹನಾಗಿಯೂ, ಪ್ರಾಪ್ಯನುಮಾಯ್ - ಮೋಕ್ಷದೆಶೆಯಲ್ಲಿ ಪ್ರಾಪ್ಯನೂ ಆಗಿರುವ, ಇದರಿಂದ, ಆತನೇ ಉಪಾಯವೂ ಆತನೇ ಉಪೇಯವೂ ಎಂದು ಹೇಳಿದಂತೆ ಆಯಿತು, ಹೀಗಿರುವ, ಸಿದ್ಧೋಪಾಯ ಮಿರುಕ್ಕುಂಪಡಿ – ನಮಗೆ ಸಿದ್ಧೋಪಾಯನಾಗಿರುವ ರೀತಿಯು, ಚೊಲ್ಲಿತ್ತು - ಹೇಳಲ್ಪಟ್ಟಿತು. ಇದು ಸಂಹಿತೆಯಲ್ಲಿ "ಪಸ್ಥಾನಕಾರ ಉದ್ದಿಷ್ಟೋ ಮಃ ಪ್ರಧಾನ ಸ್ಸಮುದೀರ್ಯತೇ" ಎಂದಾರಂಭಿಸಿ ಹೇಳಲ್ಪಟ್ಟಿದುದರ ಸಙ್ಗ್ರಹವು. ಪರಮಪುರುಷನೇ ನಾವು ಅನುಷ್ಠಿಸಿದ ಭರನ್ಯಾಸದಿಂದ ಸಿದ್ಧೋಪಾಯನಾಗಿ ಪ್ರೀತನಾಗಿ ಈ ಕೃತಕೃತ್ಯನನ್ನು ತನ್ನೊಂದಿಗೆ ಸೇರಿಸಿಕೊಳ್ಳುವ ವಿಸರ್ಗದಿಂದ ಹೇಳಲ್ಪಟ್ಟ ಪರಮೇಶ್ವರನೇ ಎಂಬ ಅರ್ಥವು. ಇದರಿಂದ ಹಿಂದೆ ಹೇಳಿದ "ನಮನ ನಾಮವರ್ಗ" ಎಂಬುದರ ಅರ್ಥವು ಹೇಳಲ್ಪಟ್ಟಿತು. ಈ ಪರಾರ್ಥದಿಂದ ತೋರಿಬರುವ ಇನ್ನೊಂದು ಅಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ.—ಉಪಾಯಾನ್ತರಙ್ಗಳಿರ್ ಕಾಟ್ಟಿಲ್ - ಕರ್ಮಯೋಗ ಜ್ಞಾನಯೋಗಗಳಿಂದ ಸಾಧ್ಯವಾದ ಭಕ್ತಿಯೋಗವಾದ ಉಪಾಯಾನ್ತರಕ್ಕಿಂತ, ಸಮರ್ಪಣತ್ತಿನುಡೈಯ - ಆತ್ಮಸಮರ್ಪಣ ರೂಪವಾದ ಭರನ್ಯಾಸದ, ಪ್ರಧಾನೋಪಾಯತ್ವಂ - ಸಕೃದನುಷ್ಠೇಯವಾಗಿ ಸುಲಭವಾಗಿ ಕ್ಷಿಪ್ರಮೋಕ್ಷಪ್ರಾಪಕವಾಗಿರುವದರಿಂದ ಮುಖ್ಯೋಪಾಯವಾಗಿರೋಣವೂ ಸಹ, ಶೊಲ್ಲಿತ್ತಾಗವುಮಾಮ್ - ನಮಃ ಎಂಬಲ್ಲಿ ಮಕಾರದಿಂದ ಪ್ರಧಾನತ್ವವು ತೋರಿಬರುವದರಿಂದ, ಹೇಳಲ್ಪಟ್ಟಿತೆಂದು ಭಾವಿಸಬಹುದು. ಇಲ್ಲಿ ಉಪಾಯಾನ್ತರಙ್ಗಳಿಲ್ ಕಾಟ್ಟಿಲ್ ಎಂಬಲ್ಲಿ ಬಹುವಚನವಿರುವದರಿಂದ ಭರನ್ಯಾಸವಲ್ಲದೆ ಬೇರೆ ಅನೇಕ ಮೋಕ್ಷೋಪಾಯಗಳುಂಟೆಂದು ಭ್ರಮಿಸುವರು. ಉಪಾಯಾನ್ತರವು ಉಪಾಸನವೇ, ಅದಕ್ಕೆ ಸಾಧನಗಳಾಗಿ ಕರ್ಮಯೋಗ ಜ್ಞಾನಯೋಗಗಳು ಬೇರಾಗಿರುವದರಿಂದ ಬಹುವಚನವೆಂದು ತಿಳಿಯತಕ್ಕದ್ದು. ಈ ಬಹುವಚನ ಭ್ರಮನಿವಾರಣೆಗಾಗಿ ಉಪಾಯಾನ್ತರಙ್ಗಳಿಲ್ ಕಾಟ್ಟಿಲ್ ಎಂಬುವಕ್ಕೆ ಸಾರವಿವರಣೆಯವರು ಇತರೋಪಾಯಾಪೇಕ್ಷೆಯೂ ಎಂದು ವ್ಯಾಖ್ಯಾನಮಾಡಿರುತ್ತಾರೆ. ಉಪಾಯವಿಭಾಗಾಧಿಕಾರವನ್ನು ಪರಿಶೀಲಿಸಿದರೆ ಸರ್ವಸಂಶಯವೂ ತೊಲಗುತ್ತದೆ. "ಪ್ರಪನ್ನಶ್ಚ ದ್ವೇಧಾ ಸಂಚಿತಪರಿಪಾಕಭಿದಯಾ" ಎಂಬುದು ಅನುಸಂಧೇಯವು.

ಮುಂದೆ ಹೀಗೆ ನಮಸ್ಸುಗಳಿಗೆ ಹೇಳಿದ ಅರ್ಥಗಳ ಪ್ರಯೋಜನಗಳೇನು?

ವಾಕ್ಯಾರ್ಥಙ್ಗಳಿಲೇ ಯಥಾಸಂಭವ ಮನುಸಂಧಿತ್ತುಕೊಳ್ವದು.

ಎಂದರೆ, 'ಇನ್ನೆ ಎಲ್ಲಾಮ್' ಎಂಬ ವಾಕ್ಯದ ಮೂಲಕ ತಿಳಿಸುತ್ತಾರೆ.—ಇನ್ನೆ ಎಲ್ಲಾಮ್ - ಇದುವರೆಗೂ ನಮಶ್ಶಬ್ದದಲ್ಲಿ ತೋರಿಬರುವ ಅಭಿಪ್ರಾಯಗಳಾದ ಸ್ಥೂಲ ಸೂಕ್ಷ್ಮಪರಾರ್ಥಗಳನ್ನೆಲ್ಲಾ, ಮೇಲ್ಚೊಲ್ಲಪ್ಪುಕಿರ - ಮುಂದೆ ಹೇಳಲ್ಪಡುವ, ವಾಕ್ಯಾರ್ಥಙ್ಗಳಿಲೇ - ವಾಕ್ಯಾರ್ಥಗಳಲ್ಲಿ, ಯಥಾಸಂಭವಂ - ಎಲ್ಲಿ ಎಲ್ಲಿ ಯಾವ ಅರ್ಥಗಳು ಸಮಂಜಸವಾಗುತ್ತವೋ ಅಲ್ಲೆಲ್ಲಾ, ಅನುಸಂಧಿತ್ತುಕೊಳ್ವದು - ಅನುಸಂಧಾನಮಾಡಿಕೊಳ್ಳಬಹುದು. ಯಾವ ಯಾವ ಅನುಸಂಧಾನ ಸಂದರ್ಭದಲ್ಲಿ ಈ ಮೂರು ಅರ್ಥಗಳು ಉಪಯೋಗಪಡುತ್ತವೆ ಎಂಬುದನ್ನು ಸಾರಪ್ರಕಾಶ ವ್ಯಾಖ್ಯಾತೃವು ಉಪಪಾದಿಸಿರುತ್ತಾರೆ. ಹೇಗೆಂದರೆ— (೧) ಮೂಲಮನ್ತ್ರದಲ್ಲಿರುವ ಮೂರು ಪದಗಳಿಂದ ಉಂಟಾಗತಕ್ಕ ಅರ್ಥವು ಪ್ರಣವವಾಚ್ಯನಾದ ನಾರಾಯಣನಿಗೆ ಸಮರ್ಪಿಸುತ್ತೇನೆಂಬ ಉಪಾಯಪರವಾದ ಯೋಜನೆಯಲ್ಲಿ ಸಾಂಗೋಪಾಯರೂಪ ಭರನ್ಯಾಸವನ್ನು ತಿಳಿಸುವ ನಮಶ್ಶಬ್ದದ ಸ್ಥೂಲಾರ್ಥದ ಉಪಯೋಗವು. (೨) ಪ್ರಣವದಿಂದ ತೋರಿಬರುವ ಸರ್ವರಕ್ಷಕನಾಗಿ ಸರ್ವಶೇಷಿಯಾಗಿರುವ ಶ್ರೀಮನ್ನಾರಾಯಣನಿಗೆ ನಮಃ ಎಂಬ ಪುರುಷಾರ್ಥ ವಿಷಯವಾದ ಯೋಜನೆಯಲ್ಲಿ, ತಾನು ಪರಮಾತ್ಮನಿಗೆ ಶೇಷಭೂತನು, ತನಗಾಗಲಿ ಇತರರಿಗಾಗಲಿ ಅಲ್ಲವೆಂಬ ನಮಶ್ಶಬ್ದದ ಸ್ಥೂಲಾರ್ಥದ ಉಪಯೋಗವು. (೩) ಪ್ರಣವದ ಮಕಾರದಿಂದ ಅಹಂ ಎಂಬರ್ಥವು ತೋರಿಬರುವದರಿಂದ, ಅಕಾರವಾಚ್ಯನಾದ ವಿಷ್ಣುವಿಗೇ ಶೇಷಭೂತನೇ ವಿನಾ ತನಗೆ ಶೇಷಿತ್ವವೂ ಇಲ್ಲವು ಸ್ವಾತಂತ್ರ್ಯವೂ ಇಲ್ಲವೆಂಬ ಎರಡು ಅರ್ಥವನ್ನೂ ಪ್ರತಿಪಾದಿಸುವ ಸ್ವರೂಪ ಪರವಾದ ಯೋಜನೆಯಲ್ಲಿ ಸೂಕ್ಷ್ಮಾರ್ಥದ ಉಪಯೋಗವು. (೪) ಇಂದ್ರಾಯ ಇದಂ ನಮಮ, ಎಂದು ಹವಿಸ್ಸಮರ್ಪಣೆಯಲ್ಲಿ ಹೇಗೋ ಹಾಗೆ, ಈ ಮಕಾರವಾಚ್ಯನಾದ ಅಹಂ - ನಾನು, ಸರ್ವರಕ್ಷಕನಾದ ಶ್ರೀ ಮಹಾವಿಷ್ಣುವಿಗೇನೇ ಎಂದು ಭರಸಮರ್ಪಣೆಯನ್ನು ಮಾಡಿರುತ್ತೇನೆ, ಅದರ ಭರವು ತನಗೆ ಅನ್ವಯಿಸಿದುದಲ್ಲವು ಎಂಬ ಉಪಾಯ ಪರನಾದ ಯೋಜನೆಯಲ್ಲೂ ನಮಶ್ಶಬ್ದದ ಸೂಕ್ಷ್ಮಾರ್ಥದ ಉಪಯೋಗವು. (೫) ಮಕಾರಾರ್ಥನಾದ ನಾನು,ಅಕಾರಾರ್ಥನಾದ ಶ್ರೀ ಮಹಾವಿಷ್ಣುವಿಗೇ ಸ್ಯಾಂ - ಆಗುವೆನು, ನಮಮಸ್ಯಾಂ – ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಗಳಿಗೆ ಅಧಿಕಾರಿಯು ಅವನು ಆಗುವನೇ ವಿನಾ ನನಗೆ ಶಕ್ತಿಯಿಲ್ಲವು ಎಂಬ ಪುರುಷಾರ್ಥಪರವಾದ ಯೋಜನೆಯಲ್ಲೂ ಸಹ ನಮಶ್ಶಬ್ದದ ಸೂಕ್ಷ್ಮಾರ್ಥದ ಉಪಯೋಗವು. (೬) ಮೂಲಮನ್ತ್ರದ ಮೂರು ಪದಗಳ ಮೂಲಕವಾಗಿ ಪ್ರಣವದಿಂದ ಭಗವಚ್ಛೇಷತ್ವವೂ, ನಮಸ್ಸಿನಿಂದ ಅಹಂಕಾರ

ನಮಶ್ಶಬ್ದಾನ್ವಿತಾಃ ಸರ್ವೇ ಮನ್ತ್ರಾಃ ಮೂಲಮನ್ತ್ರವತ್ ಕರಣಮನ್ತ್ರಾ ಭವಂತಿ.

ಏವಂ ಶಿಕ್ಷಿತ ನಾನಾರ್ಥ ನಮಶ್ಶಬ್ದ ಸಮನ್ವಿತಾಃ ।
ಸರ್ವೇ ಕರಣತಾಂ ಯಾನ್ತಿ ಮನ್ತ್ರಾ ಸ್ಸ್ವಾತ್ಮ ಸಮರ್ಪಣೇ ॥ ೭೭ ॥

ಮಮಕಾರಗಳ ನಿವೃತ್ತಿಯೂ ಹೀಗೆ ಇವೆರಡರಿಂದ ಸ್ವರೂಪಪರವಾಗಿಯೂ ಮೂರನೆಯ ಪದವಾದ ನಾರಾಯಣಾಯ ಎಂಬುದರಿಂದ ಪುರುಷಾರ್ಥಪರ ವಾಗಿಯೂ ಮಾಡುವ ಯೋಜನೆಯಲ್ಲೂ ಸಹ ಸೂಕ್ಷ್ಮಾರ್ಥದ ಉಪಯೋಗವಿರು ತ್ತದೆ. (೭) ಅಥವಾ ಪ್ರಣವವು ಭಗವಚ್ಛೇಷತ್ವರೂಪ ಸ್ವರೂಪಪರವೆಂದೂ, ನಮಸ್ಸು ಅನಿಷ್ಟಗಳಾದ ಅಹಂಕಾರ ಮಮಕಾರಗಳ ನಿವೃತ್ತಿಪರವೆಂದೂ, ಮೂರ ನೆಯ ಪದವಾದ ನಾರಾಯಣಾಯ, ನಿತ್ಯಕೈಙ್ಕರ್ಯರೂಪ ಇಷ್ಟಪ್ರಾಪ್ತಿಪರವೆಂದೂ ಹೇಳುವ ಯೋಜನೆಯಲ್ಲೂ ನಮಸ್ಸಿನ ಸೂಕ್ಷ್ಮಾರ್ಥದ ಉಪಯೋಗವಿರುತ್ತದೆ. (೮) ಪ್ರಣವವು ಮೇಲೆ ಹೇಳಿದ ರೀತಿಯಲ್ಲಿ ಸ್ವರೂಪಪರವೆಂದೂ, ಮಿಕ್ಕ ಎರಡು ಪದಗಳೂ ಸಿದ್ಧೋಪಾಯ ಸಾಧ್ಯೋಪಾಯ ಪರಗಳೆಂದೂ ಹೇಳುವ ಯೋಜನೆ ಯಲ್ಲಿ ಸ್ಥೂಲಾರ್ಥದ ಪ್ರಯೋಜನವುಂಟು. (೯) ಪ್ರಣವವೇ ಆತ್ಮಸಮರ್ಪಣ ಪರವೆಂದೂ, ಮಿಕ್ಕ ಎರಡು ಪದಗಳೂ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿರೂಪ ಫಲ ಪರಗಳೆಂದೂ ಹೇಳಿರುವ ಯೋಜನೆಯಲ್ಲಿ ನಮಶ್ಶಬ್ದದ ಸೂಕ್ಷ್ಮಾರ್ಥದ ಉಪ ಯೋಗವೇ ತೋರಿಬರುತ್ತದೆ. (೧೦) ಮೂಲಮನ್ತ್ರದಲ್ಲಿ ಮೂರು ವಾಕ್ಯಗಳುಂ ಟೆಂದು ಭಾವಿಸಿ, ಕ್ರಮವಾಗಿ ಸ್ವರೂಪ, ಉಪಾಯ, ಪುರುಷಾರ್ಥಗಳು ಬೋಧಿಸ ಲ್ಪಟ್ಟವೆಂಬ ಯೋಜನೆಯಲ್ಲಿ ಸಿದ್ಧೋಪಾಯತ್ವವು ಬೋಧಿತವಾಗುವದರಿಂದ ನಮ ಶ್ಶಬ್ದದ ಪರಾರ್ಥದ ಉಪಯೋಗವು ಸೂಚಿತವು.

ಹೀಗೆ ನಮಶ್ಶಬ್ದದ ಮೂರರ್ಥಗಳ ಉಪಯೋಗಗಳನ್ನು ಆಯಾ ಅರ್ಥ ಗಳ ಅನುಸಂಧಾನ ಕಾಲದಲ್ಲಿ ಕಾಣಬಹುದು ಎಂದು ಯಥಾಸಂಭವಂ ಅನು ಸನ್ಧಿತ್ತುಕೊಳ್ಳದು ಎಂಬುದರಿಂದ ಹೇಳಲ್ಪಟ್ಟಿತು.

ನಮಶ್ಶಬ್ದದಿಂದ ಕೂಡಿದ ಸಮಸ್ತ ಮನ್ತ್ರಗಳೂ ಮೂಲಮನ್ತ್ರದ
ಹಾಗೆ ಕರಣಮನ್ತ್ರಗಳು.

ಈಗ ನಮಶ್ಶಬ್ದವು ಸ್ಥೂಲಾರ್ಥದಲ್ಲಿ ಸಾಙ್ಗಭರನ್ಯಾಸಪರವೆಂದು ಸ್ಪಷ್ಟವಾಗಿ ಹೇಳಿದುದರಿಂದ, ಇಂತಹ ನಮಶ್ಶಬ್ದದಿಂದ ಕೂಡಿದ ಸರ್ವಮನ್ತ್ರಗಳೂ ಭರನ್ಯಾಸ ಕ್ಕುಪಯೋಗಿ ಎಂದು ಕಾರಿಕೆಯ ಮೂಲಕ ಉಪದೇಶಿಸುತ್ತಾರೆ.—ಏವಂ ಈ ಪ್ರಕಾರವಾಗಿ ಎಂದರೆ ಹಿಂದೆ ವಿಸ್ತರವಾಗಿ ಉಪಪಾದಿಸಿದ ರೀತಿಯಲ್ಲಿ, ಶಿಕ್ಷಿತ

ಏವಮಾತ್ಮಸಮರ್ಪಣೇ ಪೂರ್ವೋಕ್ತಾರ್ಥಾನುಸಂಧಾನಂ
ಕಾರಿಕಾಭಿಸ್ಸಂಗೃಹ್ಣಾತಿ.

**ಜೀವಸಾಮಾನ್ಯಮುಖತಶ್ಶೃಂಗಗ್ರಾಹಿಕಯಾಪಿ ವಾ ।**
**ಮಕಾರೌ ತಾರನಮಸೋಸ್ಸ್ವಾನುಸಂಧಾನದಾವಿಹ. ॥೭೪॥**

**ನಾನಾರ್ಥನಮಶ್ಶಬ್ದಾನ್ವಿತಾಃ** - ಉಪದೇಶಿಸಲ್ಪಟ್ಟ ಸ್ಥೂಲಸೂಕ್ಷ್ಮಪರರೂಪದಲ್ಲಿ ನಾನಾರ್ಥಗಳನ್ನುಳ್ಳ ನಮಸ್ಸೆಂಬ ಶಬ್ದದಿಂದ ಸೇರಿದ, **ಸರ್ವೇಮನ್ತ್ರಾಃ**-ಭಗವಂತನನ್ನು ಕುರಿತ ಸಮಸ್ತಮನ್ತ್ರಗಳೂ, ದ್ವಯ ದ್ವಾದಶಾಕ್ಷರ ಷಡಕ್ಷರ ಇತ್ಯಾದಿ ಮನ್ತ್ರಗಳೆಲ್ಲಾ, **ಸ್ವಾತ್ಮಸಮರ್ಪಣೇ** - ತನ್ನ ಆತ್ಮಸಮರ್ಪಣೆಯಲ್ಲಿ, **ಶರಣತಾಂ ಯಾನ್ತಿ** - ಶರಣಾಗತ್ಯನುಷ್ಠಾನರೂಪ ಭಾವವನ್ನೇ ಹೊಂದುತ್ತವೆ. ಸಾಧಾರಣವಾಗಿ ದ್ವಯಮನ್ತ್ರವೇ ಶರಣಾಗತ್ಯನುಷ್ಠಾನ ಮನ್ತ್ರವೆಂದು ಹೇಳಿಸಿಕೊಳ್ಳುವದರಿಂದ ಅದಕ್ಕೆ ಶರಣಮನ್ತ್ರವೆಂದು ಹೆಸರು. ಈಗ ನಮಶ್ಶಬ್ದದ ಅರ್ಥಗಳ ಉಪಪಾದನೆಯಿಂದ ಸ್ಥೂಲಾರ್ಥದಲ್ಲಿ ಶರಣಾಗತಿ ಮನ್ತ್ರವಾಗಿ ತೋರಿಬರುವದರಿಂದ ಶರಣಮನ್ತ್ರವಾಗಲು ಅಭ್ಯಂತರವಿಲ್ಲವು. ಹಾಗೆಯೇ ಈ ನಮಶ್ಶಬ್ದಾರ್ಥಗಳನ್ನೆಲ್ಲಾ ಅತಿದೇಶಮಾಡಿಕೊಂಡು ಇತರ ವ್ಯಾಪಕಮನ್ತ್ರಗಳಾದ ವಾಸುದೇವ ದ್ವಾದಶಾಕ್ಷರಮನ್ತ್ರ ಮತ್ತು ವಿಷ್ಣುಷಡಕ್ಷರಮನ್ತ್ರ ದ್ವಯಮನ್ತ್ರ ಇತ್ಯಾದಿಗಳಲ್ಲೂ ನಮಶ್ಶಬ್ದಕ್ಕೆ ಈ ಅರ್ಥಗಳನ್ನೇ ಹೇಳಿ ಆತ್ಮಸಮರ್ಪಣಪರವೆಂದೇ ಭಾವಿಸಿ, ಅವೂ ಕೂಡ ಶರಣಮನ್ತ್ರಗಳೆಂದೇ ಹೇಳಬಹುದೆಂಬುದು ಈ ಶ್ಲೋಕಾರ್ಥವು.

**ಹೀಗೆ ಆತ್ಮಸಮರ್ಪಣೆಯಲ್ಲಿ ಹಿಂದೆ ಹೇಳಲ್ಪಟ್ಟ ಅರ್ಥಾನುಸಂಧಾನ ಪ್ರಕಾರವನ್ನು ಕಾರಿಕೆಗಳಿಂದಲೂ ಸಂಗ್ರಹಿಸುತ್ತಾರೆ.**

ಹೀಗೆ ಮೂಲಮನ್ತ್ರವನ್ನು ನಮಶ್ಶಬ್ದಾರ್ಥದ ಮೂಲಕ ಶರಣಮನ್ತ್ರಪರವಾಗಿಯೇ ಭಾವಿಸಿದರೆ,ನಾನು ಆತ್ಮಸಮರ್ಪಣೆಯನ್ನು ಮಾಡಿರುತ್ತೇನೆ ಎಂಬರ್ಥದ ಅನುಸಂಧಾನ ಉಂಟಾಗಬೇಕಷ್ಟೇ. ಪ್ರಣವದ ಮಕಾರದಿಂದ ಮಕಾರವಾಚನಾದ ಜೀವನು ಭಗವಂತನಿಗೇ ಶೇಷಭೂತನೆಂದು ಸಾಮಾನ್ಯವಾಗಿ "**ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ**" ಎಂಬಲ್ಲಿ ಹೇಳಿರುವ ಹಾಗೆ ಉಪದೇಶವಿರುತ್ತದೆ. ಈಗ ಆತ್ಮಸಮರ್ಪಣೆಯಲ್ಲಿ ನಾನು ಸಮರ್ಪಿಸಿರುತ್ತೇನೆ ಎಂಬ ಅನುಸಂಧಾನವು ಬರತಕ್ಕದ್ದು ಆವಶ್ಯಕವು. ಅಂತಹ ಅನುಸಂಧಾನವು ಹೇಗೆ ಉಂಟಾಗುತ್ತದೆಂಬುದನ್ನೂ, ಹಿಂದೆ ಉಪಪಾದಿಸಿದುದನ್ನೇ ಅನುಸಂಧಾನಮಾಡುವ ಕ್ರಮವನ್ನೂ, ಸೂಚಿಸುತ್ತಾರೆ.— **ತಾರನಮಸೋಃ** - ಪ್ರಣವ ನಮಸ್ಸುಗಳಲ್ಲಿರುವ, **ಮಕಾರೌ** - ಎರಡು ಮಕಾರಗಳೂ, **ಜೀವಸಾಮಾನ್ಯಮುಖತಃ** - ಸಾಮಾನ್ಯ

ಇಹ ಯಾ ಸ್ವಾನು ಸಂಧಾನ ಪ್ರಕ್ರಿಯೈಕಸ್ಯ ದರ್ಶಿತಾ ।
ಅನ್ಯೇಷಾ ಮಪಿ ತತ್ಸಾಮ್ಯಾನ್ನಾ ನ್ಯೋನ್ಯಶರಣಾ ಇಮೇ ॥೭೯॥

ವಾಗಿ ಜೀವವರ್ಗವನ್ನೆಲ್ಲಾ ಬೋಧಿಸುವ ಮೂಲಕವಾಗಿಯಾಗಲಿ, ಅಥವಾ, **ಶೃಂಗ ಗ್ರಾಹಿಕೆಯಾ ಪಿ ವಾ** - ಕೋಡನ್ನು ಹಿಡಿದು ಹೇಳುವ ನ್ಯಾಯದಿಂದಲಾಗಲಿ, ಎಂದರೆ ಗೋವಿಗೆ ಕೊಂಬು ಹೇಗೆ ಸಾರವಾದುದೋ ಹಾಗೆ ಮುಖ್ಯವಾದುದನ್ನು ಗ್ರಹಿಸುವದರ ಮೂಲಕವಾಗಲಿ, **ಇಹ** - ಈ ಮೂಲಮನ್ತ್ರದಲ್ಲಿ, **ಸ್ವಾನುಸಂಧಾನದೌ**-ತನ್ನನ್ನು ಕುರಿತು ಹೇಳಲ್ಪಟ್ಟಿತೆಂಬ ಅನುಸಂಧಾನವನ್ನು ಕೊಡುವಂತವುಗಳು. ಪ್ರಣವದ ಮೂರನೆಯ ಅಕ್ಷರವಾದ ಮಕಾರವೂ ಮತ್ತು ನಮಶ್ಶಬ್ದದ ಮಕಾರವೂ ಸಹ, ಇವೆರಡೂ, ಸ್ವಾನುಸಂಧಾನವನ್ನು ಕೊಡುವಂತವು ಎಂದರೆ ಅಹಂ ಎಂಬ ಅರ್ಥವುಳ್ಳವು. ಇದು ಹೇಗೆ ಎಂಬುದನ್ನು ಎರಡು ವಿಧವಾಗಿಯೂ ತಿಳಿಯಬಹುದೆಂದು ಹೇಳುತ್ತಾರೆ.—(೧) **ಜೀವ ಸಾಮಾನ್ಯಮುಖತಃ** - **ಮಕಾರೋಜೀವವಾಚಕಃ** ಎಂಬ ಉಕ್ತಿಯ ಮೂಲಕ, ಯಾವಾಗ ಸಾಮಾನ್ಯವಾಗಿ ಎಲ್ಲಾ ಜೀವವರ್ಗವನ್ನೂ ಬೋಧಿಸಿತೋ, ತಾನೂ ಜೀವವರ್ಗಕ್ಕೆ ಸೇರಿದವನಾದುದರಿಂದ, **ಅಹಂ** ಎಂಬ ಅರ್ಥವೂ ಅರ್ಥವಾಗಿ ವಿಶೇಷಿಸಿ ಹೇಳುವದರ ಮೂಲಕ ಉಂಟಾಗುತ್ತದೆ. (೨) ಅಥವಾ **ಶೃಂಗಗ್ರಾಹಿಕೆಯಾಪಿವಾ** - ಅರ್ಥ, ಪ್ರಕರಣ, ಲಿಂಗ ಔಚಿತ್ಯ ಅರ್ಥನಿರ್ಣಯ ನ್ಯಾಯಮೂಲಕವಾಗಿ, ಅಸ್ಮಚ್ಛಬ್ಧದಲ್ಲಿರುವ ಪೂರ್ವೋತ್ತರ ಭಾಗಗಳ ಲೋಪದಿಂದ ಮ ಉಳಿದು ಅಹಂ ಎಂಬರ್ಥವು ನಿರುಕ್ತ ಮೂಲಕ ಉಂಟಾಗುವದರಿಂದಲಾಗಲಿ, ಸ್ವಾನುಸಂಧಾನಕ್ಕೆ ಅವಕಾಶ ಉಂಟೆಂಬ ಅಭಿಪ್ರಾಯವು. ಆದುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಿದ ಸ್ವಾತ್ಮಸಮರ್ಪಣೆಯ ಅನುಸಂಧಾನವು ಉಂಟಾಗಲು ಏನೊಂದೂ ಸಂದೇಹವಿಲ್ಲವೆಂಬ ಭಾವವು.

ಹಿಂದೆ ಪ್ರಣವ ನಮಸ್ಸುಗಳ ಅರ್ಥಾನುಸಂಧಾನ ರೀತ್ಯಾ ಮೂಲಮನ್ತ್ರವು ಶರಣಮನ್ತ್ರವಾಗಬಹುದು. ನಾನು ಶರಣಾಗತನಾಗಿದ್ದೇನೆ ಎಂಬ ಭಾವವು ಪ್ರಣವ ನಮಸ್ಸುಗಳ ಮೂಲಕ ನಿರುಕ್ತ ಬಲದಿಂದ ಉಂಟಾಗುತ್ತದೆಂದು ಹೇಳಲ್ಪಟ್ಟಿತು. ಹೀಗೆ ಹೇಳಿದುದು ಇತರರಿಗೂ ಸಮಾನವಾದುದರಿಂದ ಭಗವಂತನೇ ಸರ್ವರಿಗೂ ಶರಣ್ಯನೇ ವಿನಾ ಇತರರಿಗೆ ಎಂದಿಗೂ ಶರಣ್ಯತ್ವವು ಕೂಡುವದಿಲ್ಲವು ಎಂದೂ, ಜೀವಾತ್ಮರಿಗೆ ಪರಸ್ಪರ ಶರಣ್ಯತ್ವವು ಸಲ್ಲುವದಿಲ್ಲವೆಂದೂ, ಈಗ ಉಪದೇಶಿಸುತ್ತಾರೆ.— **ಇಹ** - ಈ ಮೂಲಮನ್ತ್ರದಲ್ಲಿ, **ಏಕಸ್ಯ** - ಒಬ್ಬ ಜೀವಾತ್ಮನಿಗೆ, **ಯಾ** - ಯಾವ, **ಸ್ವಾನುಸಂಧಾನ ಪ್ರಕ್ರಿಯಾ** - ಭಗವಂತನೇ ಶೇಷಿಯಾಗಿ ರಕ್ಷಕನಾದುದರಿಂದ, ತಾನು ಆತನಿಂದಲೇ ರಕ್ಷ್ಯನೆಂಬ ಅನುಸಂಧಾನದ ಪ್ರಕಾ

ಅತ ಸ್ಸ್ವಪರ ರಕ್ಷಾಯಾಂ ಪರಾಧೀನೇಷು ಜನ್ತುಷು ।
ನಿರಪೇಕ್ಷ ಶರಣ್ಯತ್ವಂ ನಿಯತಂ ಕಮಲಾಪತೌ ॥೮೦॥

ರವು, ದರ್ಶಿತಾ - ಈ ಪ್ರಣವ ನಮಸ್ಸುಗಳ ಅರ್ಥಾನುಸಂಧಾನ ಮೂಲಕ ತೋರಿ ಸಲ್ಪಟ್ಟಿತೋ, ಅನ್ಯೇಷಾಮಪಿ - ಇತರ ಚೇತನರಿಗೂ ಕೂಡ, ತತ್ಸಾಮ್ಯಾತ್ - ಅಂತಹ ಅನುಸಂಧಾನದ ಸಾಮ್ಯವಿರುವದರಿಂದ, ಇವೋ ಈ ಇತರ ಚೇತನರೂ, ನಾನ್ಯೋನ್ಯಶರಣಾಃ - ಪರಸ್ಪರ ರಕ್ಷಕರಾಗಲಾರರು, ರಕ್ಷಕರಾಗಲು ಅಸ ಮರ್ಥರೆಂಬ ಭಾವವು. ಯಾವಾಗ ತನ್ನನ್ನು ರಕ್ಷಿಸಿಕೊಳ್ಳಲು ತಾನು ಅಸ ಮರ್ಥನು, ಭಗವಂತನೊಬ್ಬನೇ ತನಗೆ ರಕ್ಷಕನು ಎಂಬ ಅನುಸಂಧಾನ ಉಂಟಾ ಯಿತೋ, ಹಾಗೆಯೇ ಇತರರಿಗೂ ಅನುಸಂಧಾನ ಉಂಟಾಗುವದು ಸಮವಾದುದೇ. ಇದರಲ್ಲಿ ಯಾರೂ ಸಮರ್ಥರಲ್ಲವ್ವ. ಆದುದರಿಂದ ಚೇತನರು ಪರಸ್ಪರ ರಕ್ಷಕ ರಾಗಲು ಅಸಮರ್ಥರು ಎಂಬ ಭಾವವು. ತನ್ನನ್ನೇ ರಕ್ಷಿಸಿಕೊಳ್ಳಲು ಅಶಕ್ತನು ಇತರರನ್ನು ರಕ್ಷಿಸಲು ಶಕ್ತನಲ್ಲವೆಂಬುದು ಕೈಮುತಿಕನ್ಯಾಯಸಿದ್ಧವು.

ಆದರೆ ಲೋಕದಲ್ಲಿ ಕೆಲವರು ರಕ್ಷಕರಾಗಿಯೂ ಇತರರು ರಕ್ಷ್ಯರಾಗಿಯೂ ಕಂಡಿರುವೆವು ಅಲ್ಲವೇ ? ಎಂದರೆ ಐಹಿಕವಾಗಿಯೂ ಸೋಪಾಧಿಕವಾಗಿಯೂ ತಂದೆ ಮಗ, ರಾಜಾಪ್ರಜೆ, ಭರ್ತೃಭಾರ್ಯ, ಸ್ವಾಮಿಭೃತ್ಯ, ಗುರುಶಿಷ್ಯ ಇಂತಹ ಸಂಬಂಧ ಮೂಲಕವಾಗಿಯೂ ಇರುವ ರಕ್ಷಣೆಯು ಇಲ್ಲಿ ಹೇಳಲ್ಪಡಲಿಲ್ಲವು. ಬದ್ಧದೆಶೆ ಯಲ್ಲಿ ಪ್ರಾಪ್ತವಾಗುವ ದುಃಖಗಳ ದೆಶೆಯಿಂದಬಿಡಗಡೆಯನ್ನುಂಟುಮಾಡಬಹುದು. ಆಗಲಿ, ಮೋಕ್ಷಪ್ರಾಪ್ತಿರೂಪರಕ್ಷಣೆಯು ಮುಖ್ಯವಾಗಿ ಗುರುವೂ ಭರನ್ಯಾಸಾನು ಷ್ಠಾನಕ್ಕೆ ಕಾರಣಭೂತನಾಗಿ ರಕ್ಷಕನಲ್ಲವೋ? ಎಂದರೆ ಗುರುವಿಗೂಕೂಡ ನಿರಪೇಕ್ಷ ಶರಣ್ಯತ್ವವಿಲ್ಲವೆಂದು ಉಪದೇಶಿಸುತ್ತಾರೆ. ಇಂತಹ ನಿರಪೇಕ್ಷಶರಣತ್ವ ಪರಮಾತ್ಮ ನೊಬ್ಬನಲ್ಲೇ ನಿಯತವಾದುದೆಂದು ಹೇಳುತ್ತಾರೆ. ಅತಃ - ಜೀವಾತ್ಮರಿಗೆ ಪರ ಸ್ಪರ ಶರಣ್ಯತ್ವವಿಲ್ಲವೆಂದು ಹೇಳಿದಕಾರಣದಿಂದಲೇ, ಸ್ವಪರ ರಕ್ಷಾಯಾಂ - ತನ್ನ ಮತ್ತು ಇತರ ರಕ್ಷಣೆಯಲ್ಲೂ, ಜನ್ತುಷು - ಕ್ಷೇತ್ರಜ್ಞರು, ಪರಾಧೀನೇಷು ಸತ್ಸು - ಎಲ್ಲರೂ ಪರಮಾತ್ಮನಿಗೇ ಅಧೀನರಾಗಲಾಗಿ, ಆ ಕಾರಣದಿಂದಲೇ ನಿರಪೇಕ್ಷ ಶರಣ್ಯತ್ವಂ - ಇನ್ನು ಯಾವುದನ್ನೂ ನಿರೀಕ್ಷಿಸದೇ ಇರುವ ಸ್ವತಂತ್ರವಾಗಿ ರಕ್ಷಕ ನಾಗಿರುವ ಭಾವವು, ಕಮಲಾಪತೌ - ಶ್ರಿಯಪತಿಯೊಬ್ಬನಲ್ಲೇ, ನಿಯತಮ್ - ನಿಯತವಾದುದು, ಸ್ಥಾಪಿತವು ಎಂಬರ್ಥವು. ಆಚಾರ್ಯರೂ ಕೂಡ ಮಾರ್ಗ ತೋರಿ ಸುವವರೇ ವಿನಾ ಸ್ವತಃ ರಕ್ಷಕರಾಗಲಾರರು. ಅವರ ಶರಣ್ಯತ್ವವೂ ಸದ್ವಾರಕ ವಾಗಿ ಪರಮಾತ್ಮ ಮೂಲಕವಾಗಿಯೇಯಾದುದರಿಂದ ನಿರಪೇಕ್ಷಶರಣ್ಯತ್ವವು ಶ್ರಿಯಃಪತಿಗೆ ಮಾತ್ರವೇ ಸಲ್ಲುವದೇ ವಿನಾ ಇನ್ನು ಯಾರಿಗೂ ಇಲ್ಲವು. ಇಲ್ಲಿ

ಅಥ ನಾರಾಯಣಶಬ್ದಾರ್ಥಂ ವಕ್ತುಂ ತಸ್ಯ ನಮಶ್ಶಬ್ದಾರ್ಥೇನ
ಸಙ್ಗತಿಂ ಪ್ರದರ್ಶಯತಿ.

---

ಇಙ್ಗ ಶಾಬ್ದಮಾಗವಾದಲ್, ಅರ್ಥಮಾಗವಾಚಲ್, ನಮಸ್ಸಿಲೇ

---

ಕೇವಲಾಪತೌ ಎಂಬ ಪ್ರಯೋಗವು ಏತಕ್ಕೆಂದರೆ ಉಪಾಯಭಾವದಲ್ಲೂ ಉಪೇಯ ಭಾವದಲ್ಲೂ ಅಕ್ಷಾತ್ಸಹ ರಕ್ಷಕನೆಂಬ ಸಿದ್ಧಾನ್ತಾರ್ಥವನ್ನು ಜ್ಞಾಪಕ ಕೊಡುವದಕ್ಕಾಗಿ ಎಂದು ಭಾವಿಸತಕ್ಕದ್ದು.

**ಅನಂತರ ನಾರಾಯಣಶಬ್ದಾರ್ಥವನ್ನು ವಿಸ್ತರಿಸಿ ಹೇಳಲು ಹೊರಟು ಅದಕ್ಕೂ ನಮಶ್ಶಬ್ದಕ್ಕೂ ಇರುವ ಸಙ್ಗತಿಯನ್ನು ತಿಳಿಸುತ್ತಾರೆ.**

---

ಪ್ರಣವದ ಅಕಾರದಿಂದಲೇ ಪರಮಪುರುಷನು ಜಗತ್ಕಾರಣನು, ಸರ್ವರಕ್ಷಕನು, ಸರ್ವಶೇಷಿಯು, ಶ್ರಿಯಃಪತಿಯು ಎಂದು ಹೇಳಲ್ಪಟ್ಟಿತು. ಉಕಾರ ಮಕಾರಗಳಿಂದ ಅಂತವನಿಗೇ ಕೈಂಕರ್ಯ ಮಾಡುವದೇ ಮಕಾರವಾಚ್ಯನಾದ ಚೇತನನ ಸ್ವರೂಪವೆಂದು ಪ್ರಣವಾರ್ಥವನ್ನು ಹೇಳಿ, ಅನಂತರ ನಮಶ್ಶಬ್ದ ಮೂರು ಅರ್ಥಗಳಿಂದ ಸಾಧ್ಯೋಪಾಯವಾದ ಸಾಙ್ಗ ಭರನ್ಯಾಸವು ಬೋಧಿಸಲ್ಪಟ್ಟಿತು. ಹೀಗಾದ ನಂತರ ನಾರಾಯಣಾಯ ಎಂಬ ಮೂರನೆಯ ಪದದ ಆವಶ್ಯಕವೇನು? ಶರಣಾಗತಿಗೆ ಉದ್ದೇಶ್ಯದೇವತೆಯು ಅಕಾರವಾಚ್ಯನಾದ ಶ್ರಿಯಃಪತಿಯೇ ಎಂಬುದು ; ಈ ಚೇತನನಿಗೆ ಅಪೇಕ್ಷಿತವಾದುದು ಶ್ರಿಯಃಪತಿಗೆ ಮಾಡುವ ನಿತ್ಯ ಕೈಙ್ಕರ್ಯವು; ಇದು ಅಕಾರದ ಲುಪ್ತ ಚತುರ್ಥಿಯಿಂದಲೇ ವ್ಯಕ್ತವೆಂದೂ ಹೇಳಿದ ನಂತರ, ಮೂರನೆಯ ಪದವಾದ ನಾರಾಯಣಾಯ ಎಂಬುದು ನಿರರ್ಥಕವಲ್ಲವೋ? ಮತ್ತು ಪುನರುಕ್ತಿ ದೋಷಕ್ಕೆ ಗುರಿಯಾಗುವದಿಲ್ಲವೋ? ಎಂದರೆ ಅಕಾರ ಶಬ್ದಕ್ಕಿಂತ ನಾರಾಯಣಶಬ್ದಕ್ಕೆ ವಿಶೇಷ ಮಹಿಮೆ ಇರುವದರಿಂದಲೂ, ನಾರಾಯಣಶಬ್ದಕ್ಕೆ ವ್ಯುತ್ಪತ್ತಿಮೂಲಕವಾಗಿ ಅನೇಕಾರ್ಥಗಳು ತೋರಿ ಬರುವದರಿಂದಲೂ, ಶ್ರುತಿಗಳಲ್ಲಿ ರೂಢಮೂಲಕವಾಗಿಯೇ ಪರಬ್ರಹ್ಮ ವಾಚಕ ಶಬ್ದಗಳಿಗೆಲ್ಲಾ ನಾರಾಯಣ ಶಬ್ದದಲ್ಲೇ ಅನ್ವಯವಿರುವದರಿಂದಲೂ, ಪ್ರಣವದ ವಿವರಣೆಯು ಆವಶ್ಯಕವಾಗಿ, ನಾರಾಯಣಾಯ ಎಂಬ ಮೂರನೆಯ ಪದವು ಮೂಲ ಮಂತ್ರದಲ್ಲಿ ಆವಶ್ಯಕವೆಂದು ಹೇಳುತ್ತಾರೆ.

ಇಙ್ಗ - ಈ ಮೂಲಮಂತ್ರದಲ್ಲಿ, ಈ ನಾರಾಯಣ ಶಬ್ದವು ನಿರಪೇಕ್ಷ ರಕ್ಷಕನಾದ ಶ್ರಿಯಃಪತಿಯನ್ನು ಬೋಧಿಸುತ್ತದೆ ಎಂದು ಹೇಳುತ್ತಾರೆ. —

ತೋತ್ತಿನ ಶರಣಾಗತಿಯಾಗಿರ ಸಾಧ್ಯೋಪಾಯತ್ತಾಲೆ ಪ್ರಸಾದನೀಯನಾಯ್, ಮೇಲಿಲ್ ಚತುರ್ಥಿಯಿಲ್ ವಿವಕ್ಷಿತಮಾನ ಕೈಙ್ಕರ್ಯತ್ತುಕ್ಕು ಪ್ರತಿಸಂಬಂಧಿಯುಮಾಯ್, ಸರ್ವರಕ್ಷಕನಾಗವುಮ್, ಸರ್ವಶೇಷಿಯಾಗವುಮ್, ಪ್ರಥಮಾಕ್ಷರತ್ತಿಲ್ (ತೋತ್ತಿನ) ಪ್ರತಿಪನ್ನನಾನ ನಿರಪೇಕ್ಷ ಶರಣ್ಯನುಡೈಯ ಪಡಿಯೈ ವೆಳಿಯಿಡುಕಿರದು ಯೋಗರೂಢಮಾನ ನಾರಾಯಣ ಶಬ್ದಮ್.

ಶುರಙ್ಗಚ್ಚೊನ್ನವರ್ಥಂ ತನ್ನೈಯೇ ಅಜ್ಞಾನ ಸಂಶಯ ವಿಪರ್ಯ

---

**ಶಬ್ದಮಾಗವಾದಲ್** - ಸ್ಥೂಲಾರ್ಥಮೂಲಕವಾಗಿ ಶಾಬ್ದವಾಗಿಯಾಗಲಿ **ಅರ್ಥಮಾಗವಾದಲ್** - ಸೂಕ್ಷ್ಮಾರ್ಥಮೂಲಕವಾಗಿ ಅರ್ಥವಾಗಿ ಆಗಲಿ, **ನಮಸ್ಸಿಲೇ ತೋತ್ತಿನ** - ನಮಶ್ಶಬ್ದದಲ್ಲಿ ತೋರಿಬಂದ, **ಶರಣಾಗತಿಯಾಗಿರ** - ಆತ್ಮರಕ್ಷಾಭರ ಸಮರ್ಪಣವಾಗಿರುವ **ಸಾಧ್ಯೋಪಾಯತ್ತಾಲೇ** - ಸಾಧ್ಯೋಪಾಯದ ಮೂಲಕ, **ಪ್ರಸಾದನೀಯನಾಯ್** - ಪ್ರಸನ್ನನಾಗುವ ಶೀಲವುಳ್ಳವನಾಗಿ **ಮೇಲಿಲ್ ಚತುರ್ಥಿಯಿಲ್** - ಹಿಂದೆ ಆಕಾರದ ಲುಪ್ತಚತುರ್ಥಿಯಲ್ಲಿ, **ವಿವಕ್ಷಿತಮಾನ** - ಹೇಳಲ್ಪಟ್ಟ, **ಕೈಙ್ಕರ್ಯತ್ತುಕ್ಕು** - ಕೈಙ್ಕರ್ಯಕ್ಕೆ, **ಪ್ರತಿಸಂಬಂಧಿಯುಮಾಯ್**-ಉದ್ದೇಶ್ಯನಾಗಿಯೂ, ಸರ್ವರಕ್ಷಕನಾಗಿಯೂ, ಸರ್ವಶೇಷಿಯಾಗಿಯೂ, ಹೀಗೆ **ಪ್ರಥಮಾಕ್ಷರತ್ತಿಲ್ ತೋತ್ತಿನ** - ಹೀಗೆ ಆಕಾರದಲ್ಲಿ ತೋರಿಬಂದು ಪ್ರತಿಪನ್ನನಾನ ಎಂದು ಪಾಠಾಂತರವು, ಅದಕ್ಕೂ ಅದೇ ಅರ್ಥವು, **ನಿರಪೇಕ್ಷ ಶರಣ್ಯನುಡೈಯ** - ಸ್ವತಂತ್ರ ಶರಣ್ಯನಾಗಿರುವ ಪರಮಪುರುಷನ, **ಪಡಿಯೈ** – ಪ್ರಕಾರವನ್ನು, **ಯೋಗರೂಢಮಾನ ನಾರಾಯಣ ಶಬ್ದಮ್** - ವ್ಯುತ್ಪತ್ತಿಮೂಲಕವಾಗಿಯೂ ಪ್ರಸಿದ್ಧಿಯಿಂದ ರೂಢವಾಗಿಯೂ ಉಂಟಾಗುವ ಅರ್ಥಗಳುಳ್ಳ ನಾರಾಯಣ ಶಬ್ದವು **ವೆಳಿಯಿಡುಗಿರದು** - ಹೊರಪಡಿಸುತ್ತದೆ. ಆಕಾರದಿಂದ ತೋರಿದ ಅರ್ಥಗಳನ್ನು ವಿಸ್ತರಿಸಿ ಹೇಳುವದಲ್ಲದೆ, ಆತನು ಹೇಗೆ ನಿರಪೇಕ್ಷ ಶರಣ್ಯನು ಎಂಬುದನ್ನು ವ್ಯುತ್ಪತ್ತಿಮೂಲಕವಾಗಿಯೂ ರೂಢವಾದ ಪ್ರಸಿದ್ಧಾರ್ಥಮೂಲಕವಾಗಿಯೂ ನಾರಾಯಣ ಶಬ್ದವು ಪ್ರಣವದ ವಿವರಣವಾಗಿ ಪರತತ್ವಮಾಹಾತ್ಮ್ಯವನ್ನು ಬಹು ವಿಸ್ತರಿಸಿ ಹೇಳುತ್ತದೆಯಾದುದರಿಂದ ಬಹ್ವರ್ಥವುಳ್ಳದುದಾಗಿ ಆ ನಾಮವೇ ಬಹುಮಾಹಾತ್ಮ್ಯವುಳ್ಳದದು ಎಂಬ ಭಾವನೆಯಿಂದ ಈ ಅವತಾರಿಕೆಯನ್ನು ಕೊಟ್ಟಿರುತ್ತಾರೆ.

ಆಕಾರಾರ್ಥವನ್ನೇ ನಾರಾಯಣ ಶಬ್ದವು ವಿಸ್ತರಿಸಿ ಹೇಳುತ್ತದೆಂಬುದು ಉಪದೇಶವು. ವಿಸ್ತರಿಸಿ ಹೇಳುವದೆಂದರೇನು ಎಂಬುದನ್ನು ವ್ಯಕ್ತಪಡಿಸುತ್ತಾರೆ. **ಶುರಙ್ಗಚ್ಚೊನ್ನವರ್ಥಂ** - ಆಕಾರಾದಿಗಳಲ್ಲಿ ಸಙ್ಗ್ರಹವಾಗಿ ಹೇಳಲ್ಪಟ್ಟ ಅರ್ಥವನ್ನು, ಅದು ಯಾವುದೆಂದರೆ ಆಕಾರವು ನಾರಾಯಣಶಬ್ದ ವಾಚ್ಯನಾದ ವಿಷ್ಣು

**ಯಙ್ಗಳ್ ಕಳಿಯುಮ್ಪಡಿ ಮುಖಾನ್ತರತ್ತಾಲೇ ತೆಳಿವಿಕ್ಕೈ ವಿವರಣಮ್.**

ವನ್ನೂ, ಮ ಕಾರವು ನಾರಾಯಣ ಶಬ್ದದಲ್ಲಿರುವ ನಾರಶಬ್ದದಿಂದ ಬೋಧಿತನಾದ ಜೀವಾತ್ಮನನ್ನೂ ಎಂಬುದು; ಮತ್ತು ನಾರಾಯಣಾಯ ಎಂಬಲ್ಲಿ ಚತುರ್ಥಿಯ ಅರ್ಥದಿಂದ ಪ್ರಣವದ ಉಕಾರಾರ್ಥದ ವಿವರಣೆಯು; ಹೀಗೆ ಭಾವಿಸತಕ್ಕದ್ದು. **ತನ್ನೈಯೈ** - ಅದನ್ನೇ, **ಅಜ್ಞಾನ** - ಜ್ಞಾನವಿಲ್ಲದಿರೋಣವು, **ಸಂಶಯ,** **ವಿಪರ್ಯಯಙ್ಗಳ್** – ವ್ಯತ್ಯಸ್ತವಾಗಿರುವ ಭ್ರಮಜ್ಞಾನ, ಇವುಗಳು, **ಕಳಿಯುಂಪಡಿ** - ನಿವರ್ತಿಸುವಹಾಗೆ, **ಮುಖಾನ್ತರತ್ತಾಲೆ** - ಬೇರೆ ರೀತಿಯಲ್ಲಿ, ಎಂದರೆ ಅಕಾರವು ರಕ್ಷ್ಯರಕ್ಷಕ ಶೇಷಶೇಷಿ ಭಾವವನ್ನು ಪ್ರದರ್ಶಿಸಿದರೆ ಆ ಭಾವಗಳನ್ನೇ ಬೇರೇ ವಿಧವಾಗಿ ಅವುಗಳಿಗೆ ಬೇಕಾದ ಆಶ್ರಿತವಾತ್ಸಲ್ಯ ದಯೆ ಮೊದಲಾದ ಕಲ್ಯಾಣ ಗುಣಾಕರನೆಂದೂ, ಸರ್ವಾಂತರ್ಯಾಮಿಯೆಂದೂ, ಸರ್ವಾಧಾರನೆಂದೂ ಸರ್ವರಿಗೂ ಗತಿಯೆಂದೂ ಹೀಗೆ ಬೇರೆ ವಿಧವಾಗಿ, **ತೆಳಿವಿಕ್ಕೈ** - ತಿಳಿಸೋಣವು, **ವಿವರಣಮ್** - ವಿವರಣವು, ಉಪಪಾದನವೆನಿಸುತ್ತದೆ. ರಕ್ಷಕನಾಗಿಯೂ ಶೇಷಿಯಾಗಿಯೂ ಅಕಾರದಿಂದ ಹೇಳಲ್ಪಟ್ಟವನು ಅನ್ಯ ದೇವತೆಗಳೂ ಆಗಬಹುದೋ ಎಂಬ ಶಙ್ಕೆ ಉಂಟಾಗದಿರುವದಕ್ಕಾಗಿ, ಈ ಪರ ತತ್ವವು ಸರ್ವಾಧಾರತ್ವ ಸರ್ವಶರೀರತ್ವಾದ್ಯಾಕಾರವಿಶಿಷ್ಟನೆಂದು ನಾರಾಯಣ ಶಬ್ದವು ವಿಸ್ತರಿಸಿ ಹೇಳುವದರಿಂದ ವಿವರಣೆಯೆಂಬ ತಾತ್ಪರ್ಯವು. ಹೀಗೆ ವಿವರಣವಾದುದರಿಂದ ಪುನರುಕ್ತಿದೋಷಕ್ಕೆ ಕಾರಣವಿಲ್ಲವೆಂಬುದೂ ತೋರಿಬರುತ್ತದೆ. ಶ್ರುತಿಯು ಪ್ರಣವಾರ್ಥ ಬೋಧೆಯಲ್ಲಿ **"ಯದ್ವೇದಾದೌ ಸ್ವರಃಪ್ರೋಕ್ತೋ ವೇದಾನ್ತೇಚ ಪ್ರತಿಷ್ಠಿತಃ। ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ"** ಎಂದು ಮಹೇಶ್ವರ ಶಬ್ದದಿಂದ ಶಙ್ಕೆಗೆ ಕಾರಣವಿದ್ದರೂ, ಶಿವನೋ ಎಂಬ ಅಂತಹ ಶಙ್ಕೆ ಕಳೆಯುವ ಹಾಗೆ ನಾರಾಯಣ ಶಬ್ದವು ನಾರಾಯಣನೇ ಅಕಾರವಾಚ್ಯನೆಂದು ನಿಸ್ಸಂಶಯವಾಗಿ ಹೇಳಲ್ಪಟ್ಟಿತು. ಈ ನಾರಾಯಣನು ಯಾರೆಂಬ ವಿಷಯದಲ್ಲಿ **"ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ"** ಎಂಬುದರಿಂದ ಶ್ರಿಯಃಪತಿಯೇ ಇಲ್ಲಿ ಉದ್ದೇಶ್ಯ ದೇವತೆ ಎಂಬುದು ವ್ಯಕ್ತವು. ಆಗಲಿ ನಾರಾಯಣ ಶಬ್ದವು ಅಕಾರದ ವಿವರಣೆಯಾದರೆ ಅಕಾರವಾದನಂತರವೇ ನಾರಾಯಣಶಬ್ದವಿರತಕ್ಕದ್ದು ಉಚಿತವಲ್ಲವೋ ? ಎಂದರೆ ಅಕಾರಕ್ಕೂ ಮಕಾರಕ್ಕೂ ಇರುವ ಸಂಬಂಧವು, ರಕ್ಷಕ ರಕ್ಷ್ಯ, ನಿಯಮನ ನಿಯಾಮ್ಯ, ಸ್ವಾತಂತ್ರ್ಯ ಪಾರತಂತ್ರ್ಯ, ಶೇಷಿ ಶೇಷ ಇತ್ಯಾದಿ ಭಾವಗಳನ್ನು ನಮಸ್ಸು ವಿವರಿಸಿ, ಇಂತಹ ನಾರಾಯಣನಿಗೇನೇ ಕೈಂಕರ್ಯವೆಂಬ ವಿವರಣೆಯು ಉಚಿತವಾದುದೇ ಎಂಬ ಭಾವವು. ಆದುದರಿಂದ ನಾರಾಯಣ ಶಬ್ದದ

**ಇಸ್ಸಙ್ಗ್ರಹ ವಿವರಣ ಭಾವಮ್ ಪ್ರಥಮಾಕ್ಷರಂ ಮುದಲಾಕ ಯಥಾ ಸಂಭವಮ್ ಕಣ್ಡುಕೊಳ್ವದು.**

ಪುನರುಕ್ತಿಯಲ್ಲವು, ಅದರ ವಿವರಣೆಯು. ಮತ್ತು ಪ್ರಣವದ ಅಕಾರವಾಚ್ಯನು ನಾರಾಯಣನೇ ವಿನಾ ಅನ್ಯದೇವತೆಗಳು ಯಾರೂ ಆಗುವದಿಲ್ಲವೆಂದು ಹೇಳಿದ ಪುರುಷಸೂಕ್ತಾರ್ಥವು, ಈ ಮಂತ್ರದಲ್ಲಿ ವ್ಯಕ್ತವು.

**ಇಸ್ಸಂಙ್ಗ್ರಹ ವಿವರಣ ಭಾವಮ್** - ಪ್ರಣವವು ಸಙ್ಗ್ರಹವು, ನಾರಾಯಣಶಬ್ದವು ಅದರ ವಿವರಣವು ಎಂಬುದನ್ನು, **ಪ್ರಥಮಾಕ್ಷರಂ ಮುದಲಾಗ**- ಅಕಾರಾದಿ ಅಕ್ಷರಗಳಲ್ಲಿ, **ಯಥಾ ಸಂಭವಂ** - ಅರ್ಥವಿವರಣಕ್ಕನುಗುಣವಾಗಿ, **ಕಂಡು ಕೊಳ್ವದು** - ತಿಳಿದುಕೊಳ್ಳುವದು. ಹೇಗೆಂದರೆ ಅಕಾರಾರ್ಥವನ್ನು ನಾರಾಯಣ ಶಬ್ದಾರ್ಥದಲ್ಲೂ, ಮಕಾರಾರ್ಥವನ್ನು ನಾರಶಬ್ದದ ಅರ್ಥದಲ್ಲೂ, ಲುಪ್ತಚತುರ್ಥ್ಯರ್ಥವನ್ನು ವ್ಯಕ್ತ ಚತುರ್ಥಿಯಲ್ಲೂ, ಉಕಾರಾರ್ಥವನ್ನು ನರ ಸಂಬಂಧಿನೋ ನಾರಾಃ ಎಂದುಂಟಾಗುವ ವ್ಯುತ್ಪತ್ತಿಯ ಮೂಲಕವಾಗಿಯೂ ಹೀಗೆ ಯಥಾ ಸಂಭವಂ ತಿಳಿಯಬಹುದೆಂಬುದು ತಾತ್ಪರ್ಯವು. ಅಥವಾ, ಪ್ರಣವವು ಶೇಷನೆಂದು ಹೇಳಲ್ಪಟ್ಟ ಮಕಾರವಾಚ್ಯ ಜೀವನನ್ನೂ, ಶೇಷಿ ಎಂದು ಹೇಳಲ್ಪಟ್ಟ ಅಕಾರವಾಚ್ಯ ರಕ್ಷಕನನ್ನೂ, ಪಾರತಂತ್ರ್ಯ ಸ್ವಾತಂತ್ರ್ಯ ವಿಶಿಷ್ಟನಾಗಿ ತೋರಿಸುವದರಿಂದಲೂ, ನಮಸ್ಸು ಈ ಜೀವಾತ್ಮನಿಗೆ ಪರಮಾತ್ಮ ಕಾರ್ಯತ್ವ ವ್ಯಾಪ್ಯತ್ವ ನಿಶ್ಯತ್ವ ವ್ಯಾಪಕತ್ವಾದ್ಯಾಕಾರ ವಿಶಿಷ್ಟತೆಯನ್ನು ಪ್ರದರ್ಶಿಸುವದರಿಂದಲೂ, ಈ ಪ್ರಣವ ನಮಸ್ಸುಗಳ ಅರ್ಥಗಳನ್ನೆಲ್ಲಾ ನಾರಾಯಣ ಶಬ್ದದಲ್ಲಿ ವಿವರಣರೂಪದಲ್ಲಿ ಕಾಣಬಹುದೆಂಬ ಭಾವದಿಂದ **ಯಥಾ ಸಂಭವಮ್ ಕಂಡು ಕೊಳ್ವದು** ಎಂಬ ಪ್ರಯೋಗವು. ಆ ಕಾರಣದಿಂದಲೂ ಪ್ರಣವವಾದ ಒಡನೆಯೇ **ನಾರಾಯಣಾಯ** ಎಂದು ಅದರ ವಿವರಣ ಶಬ್ದವನ್ನು ಹೇಳದೆ ನಮಶ್ಶಬ್ದಾರ್ಥದ ವಿವರಣೆಯೂ ನಾರಾಯಣ ಪದದಲ್ಲಿರುವದರಿಂದ ನಮಶ್ಶಬ್ದಾನಂತರ ನಾರಾಯಣಾಯ ಎಂಬುದು ಮೂರನೆಯ ಪದವಾಗಿರುತ್ತದೆ. ಈ ಸಙ್ಗ್ರಹ ವಿವರಣ ಭಾವವು ಇಲ್ಲಿಮಾತ್ರವೇ ಅಲ್ಲದೆ, ದ್ವಯಮನ್ತ್ರಾರ್ಥಗಳನ್ನು ಪರಿಶೀಲಿಸಿದರೂ, ಅದು ಅಷ್ಟಾಕ್ಷರದ ವಿವರಣವಾಗಿಯೂ, ಚರಮ ಶ್ಲೋಕವು ಇವೆಲ್ಲಕ್ಕೂ ವಿವರಣೆಯಾಗಿಯೂ ಗ್ರಹಿಸಬಹುದೆಂಬ ಭಾವವು ಈ ವಾಕ್ಯದಿಂದ ಅರ್ಥವಾಗಿ ತೋರಿಬರುತ್ತದೆ.

**ಭಗವನ್ನಾಮಗಳಲ್ಲಿ ನಾರಾಯಣಶಬ್ದಕ್ಕೇ ಸರ್ವೋತ್ಕೃಷ್ಟ ಮಾಹಾತ್ಮ್ಯೆಯು.**

ಮುಂದೆ ಈ ನಾರಾಯಣ ಶಬ್ದಕ್ಕೇನೆ ಭಗವನ್ನಾಮಗಳಲ್ಲಿ ವಿಶೇಷ ಮಾಹಾ

## ನಾರಾಯಣ ಶಬ್ದಸ್ಯ ಸರ್ವೋತ್ಕೃಷ್ಟ ಮಾಹಾತ್ಮ್ಯಮಾಹ.

ಇನ್ನಾರಾಯಣಶಬ್ದಮ್ ಶೇಷಶೇಷಿತತ್ವಙ್ಗಳಿರಣ್ಡೈಯುಮ್ ವೆಳಿಯಾಗ ಕಾಟ್ಟುಗಿರ ಉಪಕಾರಾತಿಶಯತ್ತಾಲೇ, ವಿಷ್ಣುಗಾಯತ್ರಿಯಿಲುಮ್ ತಿರುನಾರಾಯಣೀಯತ್ತಿಲೇ ನಾಮನಿರ್ವಚನಂ ಪಣ್ಣುಗಿರ ವಿಡತ್ತಿಲುಮ್, ಮತ್ತುಮುಳ್ಳ ವ್ಯಾಪಕನಾಮಙ್ಗಳುಕ್ಕುಮ್ ಮುನ್ನೇ ಪಠಿಕ್ಕಪಟ್ಟದು.

---

ತ್ಮ್ಯೆಯೆಂದು ಸಹೇತುಕವಾಗಿಯೂ ಸಪ್ರಮಾಣವಾಗಿಯೂ ಮುಂದೆ ಉಪದೇಶಿಸುತ್ತಾರೆ.—ಈ ನಾಮವು ಭಗವಂತನ ಮಾಹಾತ್ಮ್ಯೆಯನ್ನು ವ್ಯಕ್ತಪಡಿಸುವಹಾಗೆ ಇನ್ನು ಯಾವ ನಾಮವೂ ತಿಳಿಸುವದಿಲ್ಲವಾದುದರಿಂದ ಇದಕ್ಕೆ ವಿಶೇಷ ಮಾಹಾತ್ಮ್ಯೆಯು. ಪ್ರಥಮತಃ ಪ್ರಣವದಲ್ಲಿ ತೋರಿಬರುವ ಶೇಷಿ ಶೇಷ ತತ್ವಗಳೆರಡರ ಸ್ವರೂಪವನ್ನು ಈ ನಾಮವು ಪ್ರಕಾಶಗೊಳಿಸುವದರ ಪ್ರಾಧಾನ್ಯದಿಂದ, ವಿಷ್ಣು ಗಾಯತ್ರಿಯಲ್ಲೂ ಭಾರತ ಮೋಕ್ಷಧರ್ಮದ ಕೊನೆಯ ಭಾಗವಾದ ತಿರುನಾರಾಯಣೀಯದಲ್ಲೂ, ಮತ್ತು ವ್ಯಾಪಕ ಮನ್ತ್ರಗಳಲ್ಲೂ, ಅಷ್ಟಾಕ್ಷರಕ್ಕೇ ಮಾಹಾತ್ಮ್ಯೆಯು ಏರ್ಪಟ್ಟಿರುತ್ತದೆಂದು ತಿಳಿಸುತ್ತಾರೆ. ಇನ್ನಾರಾಯಣ ಶಬ್ದಮ್ - ಈ ನಾರಾಯಣ ಶಬ್ದವು, ಶೇಷಶೇಷಿ ತತ್ವಙ್ಗಳಿರಂಡೈಯುಮ್ - ಶೇಷ ಶೇಷಿ ತತ್ವಗಳಾದ ಜೀವಾತ್ಮ ಪರಮಾತ್ಮರಿಬ್ಬರನ್ನು ಎಂದರೆ ಜೀವಾತ್ಮ ಪರಮಾತ್ಮರುಗಳಿಗಿರುವ ಶೇಷ ಶೇಷೀ ಸಂಬಂಧವನ್ನು ಎಂಬ ಭಾವವು. ವೆಳಿಯಾಗಕಾಟ್ಟುಗಿರ- ಚೆನ್ನಾಗಿ ಪ್ರಕಾಶಪಡಿಸುವ, ಉಪಕಾರಾತಿಶಯದಿಂದ, ವಿಷ್ಣುಗಾಯತ್ರಿಯಲ್ಲೂ, ತಿರುನಾರಾಯಣೀಯತ್ತಿಲೇ-ಭಾರತ ಶಾಂತಿಪರ್ವದ ಕೊನೆಯಭಾಗಕ್ಕೆ ತಿರುನಾರಾಯಣೀಯವೆಂಬ ಹೆಸರು ಅದರಲ್ಲಿ, ನಾಮ ನಿರ್ವಚನಂ ಪಣ್ಣುಗಿರ ವಿಡತ್ತಿಲುಮ್ - ಅರ್ಜುನನಿಗೆ ಭಗವನ್ನಾಮಗಳಿಗೆ ವ್ಯುತ್ಪತ್ತಿಮೂಲಕ ಉಂಟಾಗುವ ಅರ್ಥಗಳನ್ನು ಉಪದೇಶಿಸುವ ಸ್ಥಳದಲ್ಲೂ, ಮತ್ತು ಮುಳ್ಳ ವ್ಯಾಪಕ ನಾಮಙ್ಗಳುಕ್ಕುಮ್ - ಇನ್ನೂ ಇತರ ವ್ಯಾಪಕ ಮಂತ್ರಗಳಾದ ವಿಷ್ಣು ವಾಸುದೇವ ಮನ್ತ್ರಗಳಲ್ಲಿರುವ, ವಿಷ್ಣು ವಾಸುದೇವ ನಾಮಗಳಿಗಿಂತಲೂ, ಮುನ್ನೇ ಪಠಿಕ್ಕಪಟ್ಟದು - ಮುಂಚಿತವಾಗಿ ಎಂದರೆ ಈ ಮೂಲಮನ್ತ್ರವೇ ಮೇಲಾದುದಾಗಿ, ಈ ನಾರಾಯಣ ಶಬ್ದವೇ ಹೇಳಲ್ಪಟ್ಟಿತು. ತಿರುನಾರಾಯಣೀಯದಲ್ಲಿ ಇತರ ನಾಮಗಳ ನಿರ್ವಚನ ಮಾಡಿ ಹೇಳುವದಕ್ಕೆ ಮುಂದೆ ಪ್ರಥಮದಲ್ಲಿ ನಾರಾಯಣ ಶಬ್ದನಿರ್ವಚನವಿರುತ್ತದೆ. ಇದು ಏತರಿಂದ ಎಂದರೆ ನಾರಾಯಣ ಶಬ್ದ ಮಾಹಾತ್ಮ್ಯೆಯಿಂದ ಎಂದು ಹೇಳುತ್ತಾರೆ. ಅರ್ಜುನನು ಶ್ರೀಕೃಷ್ಣಭಗವಾನರವರನ್ನು "ಯಾನಿನಾಮಾನಿ ತೇ ದೇವ ಕೀರ್ತಿತಾನಿ ಮಹರ್ಷಿಭಿಃ । ತೇಷಾಂ ನಿರುಕ್ತಂ ತ್ವತ್ತೋಹಂ

**ಸರ್ವ ಪರವಿದ್ಯೋಪಾಸ್ಯ ವಿಶೇಷನಿರ್ಣಯಂ ಪಣ್ಣುಗಿರ ನಾರಾಯಣಾನುವಾಕಂ ಪರತತ್ತ್ವಮಾಗ ಅಜ್ಞ್ಯತರಾನ ಬ್ರಹ್ಮಶಿವಾದಿಗಳೆಲ್ಲಾಮ್ ಸಾವರಾ**

---

**ಶ್ರೋತುಮಿಚ್ಛಾಮಿ ಕೇಶವ"** ಬ್ರಹ್ಮರುದ್ರರಿಗೂ ಸ್ವಾಮಿಯಾದ ಶ್ರೀ ಕೃಷ್ಣನೇ ನಿನ್ನ ಮೂಲಕವಾಗಿ ಭಗವನ್ನಾಮಗಳ ನಿರುಕ್ತವನ್ನು ಕೇಳಬೇಕೆಂಬ ಇಚ್ಛೆಯುಂಟು ತಿಳಿಸು ಎಂದು ಪ್ರಾರ್ಥಿಸಲು; ಪ್ರಥಮದಲ್ಲಿ ನಾರಾಯಣ ಶಬ್ದಕ್ಕೆ ನಿರುಕ್ತವನ್ನು ತಿಳಿಸುತ್ತಾರೆ.—**"ನರಾಣಾಮಯನಂ ಖ್ಯಾತ ಮಹಮೇಕಃ ಸನಾತನಃ। ಆಪೋ ನಾರಾ ಇತಿ ಪ್ರೋಕ್ತಾ ಆಪೋವೈ ನರಸೂನವಃ। ಅಯನಂ ಮಮ ತಾಃ ಪೂರ್ವಮತೋ** ನಾರಾಯಣೋ **ಸ್ಮೃಹಮ್"** ಎಂಬದಾಗಿ. ಅನಂತರ ವಾಸುದೇವ ಶಬ್ದಕ್ಕೆ ವ್ಯುತ್ಪತ್ತಿಯನ್ನು ತಿಳಿಸುತ್ತಾರೆ. ಇದರಿಂದ ನಾರಾಯಣಶಬ್ದವು ಎಲ್ಲಾ ನಾಮಗಳಿಗಿಂತಲೂ ಮೊದಲು ಹೇಳಿರುವದರಿಂದ ಇದಕ್ಕೆ ಪ್ರಾಶಸ್ತ್ಯವು. ಆದುದರಿಂದಲೇ "ಸಂಕೀರ್ತ್ಯನಾರಾಯಣ ಶಬ್ದಮಾತ್ರಂ ವಿಮುಕ್ತ ದುಃಖಾ **ಸ್ಸುಖಿನೋ ಭವನ್ತಿ"** ಎಂಬುದು ಅನುಸಂಧೇಯವು. ಅಜಾಮಿಳೋಪಾಖ್ಯಾನವು **ನಾರಾಯಣ** ಶಬ್ದ ಘಟಪದ ಮಾಹಾತ್ಮ್ಯೆಯನ್ನೇ ಬೋಧಿಸುತ್ತದೆ. ನಾರಾಯಣ ಶಬ್ದಮಾಹಾತ್ಮ್ಯೆಯನ್ನು ಬೋಧಿಸುವ ನಾರಾಯಣೋಪನಿಷತ್ತೇ ಇರುತ್ತದೆ. ಹಾಗೆಯೇ, ವ್ಯಾಪಕ ಮನ್ತ್ರಗಳಾದ ನಾರಾಯಣಾಷ್ಟಾಕ್ಷರ ಮನ್ತ್ರ, ವಿಷ್ಣುಷಡಕ್ಷರ ಮನ್ತ್ರ, ಮತ್ತು ವಾಸುದೇವ ದ್ವಾದಶಾಕ್ಷರ ಮನ್ತ್ರಗಳಲ್ಲೂ ಈ ಅಷ್ಟಾಕ್ಷರ ಮನ್ತ್ರವೇ ಪ್ರಧಾನವಾಗಿ ಪ್ರಥಮದಲ್ಲಿ ಹೇಳಲ್ಪಟ್ಟಿರುತ್ತದೆ ಎಂಬುದೂ ತಾತ್ಪರ್ಯವು. ಹೀಗೆ ಪ್ರಥಮದಲ್ಲಿ ಹೇಳಿ ಪ್ರಾಧಾನ್ಯವನ್ನು ಪ್ರದರ್ಶಿಸಲು ಕಾರಣವೇನೆಂಬುದಕ್ಕೆ ಶೇಷ ಶೇಷಿ ಎರಡು ತತ್ತ್ವಗಳನ್ನು ಈ ನಾರಾಯಣ ಶಬ್ದವು ಚನ್ನಾಗಿ ಪ್ರಕಾಶಗೊಳಿಸುವ **ಉಪಕಾರಾತಿಶಯತ್ತಾಲೇ** ಎಂದು ಹೇತುವನ್ನು ಕೊಟ್ಟಿರುತ್ತಾರೆ. ಹೀಗೆ ನಾರಾಯಣ ಶಬ್ದದಿಂದ ಉಪಕಾರಾತಿಶಯವು ತಮಗೂ ತಮ್ಮ ಶಿಷ್ಯವರ್ಗಕ್ಕೂ ವೇದ್ಯವೇ ವಿನಾ, ಇತರ ನಿರ್ಗುಣವಾದಿಗಳೂ ಜೀವೇಶ್ವೈಕ್ಯಹೇಳುವ ಅದ್ವೈತವಾದಿಗಳೂ ಈ ಉಪಕಾರಾತಿಶಯವನ್ನು ಗ್ರಹಿಸಲಾರರೆಂಬ ಭಾವವೂ ತೋರಿಬರುತ್ತದೆ.

ಮುಂದೆ ಪುರುಷ ಸೂಕ್ತದ ನಾರಾಯಣಾನುವಾಕದಲ್ಲೂ ಇದರ ಮಾಹಾತ್ಮ್ಯೆಯು ವ್ಯಕ್ತವೆಂದುಉಪಪಾದಿಸುತ್ತಾರೆ.—**ಸರ್ವಪರವಿದ್ಯೋಪಾಸ್ಯನಿರ್ಣಯಂ ಪಣ್ಣುಗಿರ** - ಸಮಸ್ತ ಬ್ರಹ್ಮವಿದ್ಯೆಯಲ್ಲೂ ಉಪಾಸ್ಯನು ಯಾರು ಎಂಬುದನ್ನು ನಿರ್ಣಯಮಾಡುವ, **ನಾರಾಯಣಾನುವಾಕಂ** - ತೈತ್ತರೀಯದಲ್ಲಿ **"ಸಹಸ್ರ ಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ"** ಎಂದಾರಂಬಿಸಿ, **"ಸಬ್ರಹ್ಮಾ ಸ ಶಿವ ಸ್ಸೇನ್ದ್ರ ಸ್ಸೋಕ್ಷರಃ ಪರಮಸ್ಸ್ವರಾಟ್"** ಎಂದು ಮುಗಿಸಿಹೇಳುವ ಅನು

**ಸಾಧಿಕರಣ್ಯನಿರ್ದೇಶತ್ತಾಲೇ ಯಜ್ಞ್ಗಶೊನ್ನ ವಿಶ್ವನ್ಪೋಲೆ ವಿಭೂತಿಯಾನಾರ್ಗಳೆನ್ರುಮ್, ಇವರ್ಗಳುಮ್ ನಾರಶಬ್ದಾರ್ಥಮೆನ್ರುಮ್ ತೆಳಿವಿಕ್ಕೈಕ್ಕಾಹ ಇನ್ನಾರಾಯಣ ಶಬ್ದತ್ತೈ ಪ್ಪಲಕಾಲುಮ್ ಆದರಂ ತೋತ್ತ ಆವರ್ತ್ತಿತ್ತದು.**

---

ವಾಕವು, ಪರತತ್ತ್ವವಾಗ ಶಙ್ಕಿತರಾನ ಬ್ರಹ್ಮಶಿವಾದಿಗಳೆಲ್ಲಾ - ಅದೇ ಅನುವಾಕದಲ್ಲೇ ಸಬ್ರಹ್ಮ ಸಶಿವಸ್ಸೇನ್ದ್ರ ಸ್ಸೋಽಕ್ಷರಃ ಪರಮ ಸ್ವರಾಟ್ ಎಂಬ ಪ್ರಯೋಗದಿಂದ, ಪರತತ್ತ್ವವೆಂದು ಶಙ್ಕಿಸಲ್ಪಟ್ಟ ಬ್ರಹ್ಮ ಶಿವ, ಆದಿಶಬ್ದದಿಂದ ಇಂದ್ರಾದಿಗಳೆಲ್ಲಾ, ಸಾಮಾನಾಧಿಕರಣ್ಯ ನಿರ್ದೇಶತ್ತಾಲೇ-ಮೇಲೆ ಹೇಳಲ್ಪಟ್ಟ ಸಮಾನಾಧಿಕರಣ್ಯ ಪ್ರಯೋಗದಿಂದ, ಅಙ್ಗು ಶೊನ್ನ ವಿಶ್ವನ್ಪೋಲೇ - ಆ ಅನುವಾಕದಲ್ಲೇ ಹೇಳಲ್ಪಟ್ಟ, ವಿಶ್ವಂ ನಾರಾಯಣಂ ದೇವಂ - ಸಮಸ್ತ ವಿಶ್ವವೂ ನಾರಾಯಣನೇ ಎಂದು ಹೇಳಲ್ಪಟ್ಟ ಹಾಗೆ, ವಿಭೂತಿ ಯಾನಾರ್ಗಳೆನ್ರುಮ್ - ಆತನ ನಿಯಾಮ್ಯ ವರ್ಗವಾದ ಈ ಲೀಲಾ ವಿಭೂತಿಗೆ ಸೇರಿದವರೆಂದೂ, ಇವರ್ಗಳುಮ್ - ಈ ಚತುರ್ಮುಖ ಬ್ರಹ್ಮ, ರುದ್ರ, ಇಂದ್ರಾದಿಗಳೂ, ನಾರಶಬ್ದಾರ್ಥಮೆನ್ರು – ನಾರ ಶಬ್ದದ ಅರ್ಥದಲ್ಲೇ ಸೇರಿದವರೆಂದೂ, ತೆಳಿವಿಕ್ಕೈಕ್ಕಾಹ - ತಿಳಿಸುವದಕ್ಕಾಗಿ, ಇನ್ನಾರಾಯಣ ಶಬ್ದಮ್ - ಈ ನಾರಾಯಣ ಶಬ್ದವು, ಪಲಕಾಲುಮ್ - ಅನೇಕಾವರ್ತಿ, ಆದರಂತೋತ್ತ – ಆದರವನ್ನುಂಟುಮಾಡುವದಕ್ಕಾಗಿ, ಆವರ್ತಿತ್ತದು-ಅನೇಕ ಸಲ ಹೇಳಲ್ಪಟ್ಟಿರುತ್ತದೆ ಎಂಬ ಭಾವವು. "ವಿಶ್ವಂ ನಾರಾಯಣಂ ಹರಿಂ" ಎಂದೂ, "ನಾರಾಯಣಂ ಮಹಾಜ್ಞೇಯಂ" ಎಂದೂ, "ನಾರಾಯಣಃ ಪರೋಜ್ಯೋತಿಃ" ಎಂದೂ, "ಆತ್ಮಾ ನಾರಾಯಣಃ ಪರಃ" ಎಂದೂ, "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ" ಎಂದೂ, ಹೀಗೆಲ್ಲಾ ನಾರಾಯಣ ಶಬ್ದವು ಪರವಾದರದಿಂದ ಪುನಃಪುನಃ ಹೇಳಲ್ಪಟ್ಟಿರುತ್ತದೆಂಬ ಭಾವವು. ಈ ನಾರಾಯಣಾನುವಾಕದ ತಾತ್ಪರ್ಯವೇನು ಎಂದರೆ ಬ್ರಹ್ಮವಿದ್ಯೆಗಳಲ್ಲೆಲ್ಲಾ ಉಪಾಸ್ಯನು ಯಾರು ಎಂಬ ಸಂದೇಹದಲ್ಲಿ, ಶ್ರುತಿಯಲ್ಲಿರುವ ಅಕ್ಷರ, ಶಿವ, ಶಂಭು, ಪರಬ್ರಹ್ಮ, ಪರಂಜ್ಯೋತಿ, ಪರತತ್ತ್ವ ಪರಮಾತ್ಮ ಇತ್ಯಾದಿ ಶಬ್ದಗಳೆಲ್ಲಾ ಶ್ರಿಯಃಪತಿಯಾದ ನಾರಾಯಣನೇ, ಆತನೇ ಉಪಾಸ್ಯನೆಂದು ನಿರ್ಧರಿಸಿ ಹೇಳುತ್ತದೆ. ಆದರೆ **ಸ ಬ್ರಹ್ಮಾ ಸ ಶಿವಃ** ಇತ್ಯಾದಿ ಸಾಮಾನಾಧಿಕರಣ್ಯ ವಾಕ್ಯದಿಂದ ಚತುರ್ಮುಖ ಬ್ರಹ್ಮನೂ ಶಿವನೂ ಉಪಾಸ್ಯರಾಗಬಹುದೆಂಬ, ಶಙ್ಕೆ ಉಂಟಾಗುವದಿಲ್ಲವೇ ? ಎಂದರೆ ಸಾಮಾನಾಧಿಕರಣ್ಯದಿಂದ, ಐಕ್ಯವನ್ನು ಬೋಧಿಸಲಿಲ್ಲವು. ಸಾಮಾನಾಧಿಕರಣ್ಯಕ್ಕೆ ನಿಬಂಧನವೇನೆಂದರೆ, ಶರೀರಾತ್ಮಭಾವದಿಂದ ಅಪೃಥಕ್ಸಿದ್ಧ ವಿಶೇಷಣ ವಿಶೇಷ್ಯಭಾವದಿಂದ ಶರೀರ

## ಅಥ ನಾರಾಯಣ ಶಬ್ದಪ್ರಭಾವೇ ಪ್ರಮಾಣಾನ್ಯಾಹ.

**ಇಶ್ಶಬ್ದತ್ತಿ೯ ಪ್ರಭಾವಮ್, (೧) ಸಙ್ಕೀರ್ತ್ಯ ನಾರಾಯಣ ಶಬ್ದ ಮಾತ್ರಂ" (೨) "ನಾರಾಯಣೇತಿ ಯಸ್ಯಾಸ್ಯೇ" (೩) "ನಾರಾಯಣೇತಿ**

---

ವನ್ನೇ ಶರೀರಿ ಎಂದು ಹೇಳಬಹುದು. ಆದುದರಿಂದಲೇ ಸ ಬ್ರಹ್ಮಾ ಸ ಶಿವಃ ಎಂದು ಹೇಳಲ್ಪಟ್ಟಿತು. ಯಾವಾಗ ಶರೀರವಾಯಿತೋ ಆಗ ನಿಯಾಮ್ಯ ವರ್ಗಕ್ಕೆ ಸೇರಿದವನಾದುದರಿಂದ, ಇವರುಗಳು "ವಿಶ್ವಂ ಪೋಲೆ ವಿಭೂತಿಯಾನಾರ್" ಎಂದು ಹೇಳಲ್ಪಟ್ಟಿತು. ಈ ಅನುವಾಕದಲ್ಲಿ ಇದೆಲ್ಲಿ ಹೇಳಲ್ಪಟ್ಟಿದೆ? ಎಂದರೆ ವಿಶ್ವಾತ್ಮಾನಂ ಎಂಬ ಪ್ರಯೋಗವೂ, ವಿಶ್ವಂ ನಾರಾಯಣಂ ದೇವಂ ಎಂಬ ಪ್ರಯೋಗವೂ, ಶರೀರಾತ್ಮ ಭಾವವೇ ಸಾಮಾನಾಧಿಕರಣ್ಯಪ್ರಯೋಗಕ್ಕೆ ನಿಬಂಧನ ವೆಂದು ವ್ಯಕ್ತವಾಗಿ ಹೇಳುತ್ತದೆ. ಸ್ವಾಮಿ ದೇಶಿಕರವರು ಈ ವಾಕ್ಯದಲ್ಲಿ ಉಪಪಾ ಡಿಸಿರುವ ಅರ್ಥವು "ಲಿಂಗಭೂಯಸ್ತ್ವಾತ್ತದ್ಧಿಬಲೀಯಸ್ತದಪಿ" (ಶಾ. ಸೂ. ೩. ೩. ೪೩) ಎಂಬ ಅಧಿಕರಣದಲ್ಲಿ ಉಪಪಾದಿಸಲ್ಪಟ್ಟ ಅರ್ಥವು ಬ್ರಹ್ಮ ವಿದ್ಯೆಗ ಳಲ್ಲೆಲ್ಲಾ ಉಪಾಸ್ಯನು ಯಾರು ಎಂಬ ನಿರ್ಣಯದಲ್ಲಿ ಈ ತೈತ್ತಿರೀಯಾನುವಾಕವು ಪ್ರಮಾಣವು. ಶ್ರೀಮನ್ನಾರಾಯಣನೇ ಉಪಾಸ್ಯನೆಂಬುದಕ್ಕೆ ಅನೇಕ ಪ್ರಮಾ ಣದ ಭೂಯಸ್ತ್ವವಿರುವದರಿಂದ, ಅದೇ ಪ್ರಕರಣಾದಿಗಳಿಗಿಂತಲೂ ಬಲಿಷ್ಠವಾದು ದರಿಂದ, ಆತನೇ ಉಪಾಸ್ಯನು ಎಂಬುದು ಸೂತ್ರ ತಾತ್ಪರ್ಯವು.

### ಅನಂತರ ನಾರಾಯಣ ಶಬ್ದ ಪ್ರಭಾವ ವಿಷಯದಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ.

ಈ ನಾರಾಯಣ ಶಬ್ದದ ಪ್ರಭಾವವು, ಈ ಮುಂದೆ ಉದಾಹರಿಸುವ ಪ್ರಮಾ ಣಗಳಲ್ಲಿ ಪ್ರಸಿದ್ಧವೆಂದು ಹೇಳುತ್ತಾರೆ.—ಇಶ್ಶಬ್ದತ್ತಿನ್ - ಈ ನಾರಾಯಣ ಶಬ್ದದ ಪ್ರಭಾವವು, ಮುಂದೆ ಇರುವ ಪ್ರಸಿದ್ಧಮ್ ಎಂಬುದರೊಂದಿಗೆ ಅನ್ವ ಯವು. (೧) ನಾರಾಯಣ ಶಬ್ದಮಾತ್ರಂ-ನಾರಾಯಣಶಬ್ದಮಾತ್ರವನ್ನೇ ಸಂಕೀರ್ತ್ಯ - ಹೊಗಳಿ, ವಿಮುಕ್ತದುಃಖಾಃ ಸ್ಸುಖಿನೋಭವನ್ತಿ ಎಂದು ಮುಂದೆ ಇರುತ್ತದೆ. ಬಿಡಲ್ಪಟ್ಟ ದುಃಖವುಳ್ಳವರಾಗಿ ಸುಖಿಗಳಾಗುತ್ತಾರೆಂದು ಹೇಳಲ್ಪಟ್ಟಿರುತ್ತದೆ. (೨) "ನಾರಾಯಣೇತಿ - ನಾರಾಯಣ ಎಂಬದಾಗಿ, ಯಸ್ಯ- ಯಾವನ, ಆಸ್ಯೇ - ಬಾಯಿಯಲ್ಲಿ, ಮುಂದಕ್ಕೆ "ವರ್ತತೇನಾಮಮಙ್ಗಳಮ್। ನಾರಾಯಣ ಸ್ತಮನ್ವೇತಿ ವತ್ಸಂ ಗೌರಿವ ವತ್ಸಲಾ" ನಾರಾಯಣ ಎಂಬ

---

(೧) ವ್ಯಾಸ ಸಂಜಯ ಸಂವಾದವು. (೩) ಸುದರ್ಶನಕಲ್ಪಂ

**ಶಬ್ದೋऽಸ್ತಿ" ಇತ್ಯಾದಿಗಳಿಲುಮ್, ಆಳ್ವಾರ್ಗಳುಡೈಯ (೪) "ಕುಲಂ ತರುಮ್ ಶೆಲ್ವನ್ ತನ್ದಿಡುಮ್" (೫) "ನಾರಣನ್ರುಮ್ ಮನ್ನೈ ನರಕಂ**

ಮಂಗಳಕರವಾದ ನಾಮವು ಯಾರ ಬಾಯಲ್ಲಿರುತ್ತದೆಯೋ ಅಂತವನನ್ನು ನಾರಾಯಣನು ಅನುಸರಿಸಿ ಹೋಗುವನು; ಹೇಗೆಂದರೆ, ಕರುವಿನಲ್ಲಿ ತುಂಬಾ ಪ್ರೇಮವಿಟ್ಟಿರುವ ಆಕಳು ಹೇಗೆ ಕರುವನ್ನು ಅನುಸರಿಸಿಹೋಗುತ್ತದೋ ಹಾಗೆ ಎಂಬ ಭಾವವು; (೩) "ನಾರಾಯಣೇತಿ ಶಬ್ದೋऽಸ್ತಿ" - ನಾರಾಯಣ ಎಂಬ ಶಬ್ದ ಉಂಟ, ವಾಗಸ್ತಿವಶವರ್ತಿನೀ - ನಮ್ಮ ಸ್ವಾಧೀನವಾಗಿ ವಾಕ್ಕು ಉಂಟು, ಸುಲಭವಾಗಿ ನಾರಾಯಣ ಶಬ್ದೋಚ್ಚಾರಣೆಯನ್ನು ಮಾಡಿ ಪಾಪಗಳನ್ನು ಕಳೆದುಕೊಳ್ಳಬಹುದು; ಹಾಗಿದ್ದರೂ ಜನರು ನರಕಕ್ಕೆ ಹೋಗುತ್ತಿರುವದು ಆಶ್ಚರ್ಯವು ಎಂಬ ಭಾವವು, "ಇತ್ಯಾದಿಗಳಿಲುಮ್ - ಇವೇ ಮೊದಲಾದ ಪ್ರಮಾಣಗಳಲ್ಲೂ, ಇಲ್ಲಿ ಆದಿಪದದಿಂದ, "ಆಕ್ರುಶ್ಯ ಪುತ್ರ ಮಘವಾನ್ ಯದಜಾಮಿಳೋऽಪಿ ನಾರಾಯಣೇತಿ ಮ್ರಿಯಮಾಣ ಉಪೈತಿ ಮುಕ್ತಿಂ", "ಶ್ವಚಾಹಂ ಕಿತವಃ ಪಾಪೋ ಬ್ರಹ್ಮಘ್ನೋ ನಿರಪತ್ರಪಃ ಶ್ವೇತ ನಾರಾಯಣೇತ್ಯೇತದ್ಭಗವನ್ನಾಮ ಮಙ್ಗಳಮ್" ಎಂಬ ಪ್ರಮಾಣಗಳು ಸಙ್ಗೃಹೀತವು; ಮತ್ತು ಆಳ್ವಾರುಗಳುಡೈಯ - ಆಳ್ವಾರುಗಳ, (೪) "ಕುಲಂ ತರುಮ್ ಶೆಲ್ವನ್ ತನ್ದಿಡುಮ್"-ಉತ್ಕೃಷ್ಟಗೋಷ್ಠಿಯೊಂದಿಗೆ ಇರಲು ಅರ್ಹತೆಯನ್ನು ಕೊಡುವದು, ವೈಷ್ಣವ ಜ್ಞಾನ ಸಂಪತ್ತನ್ನು ಕೊಟ್ಟೀತು", (ಈ ಪಾಶುರಾರ್ಥಕ್ಕೆ ಪ್ರಭಾವ ವ್ಯವಸ್ಥಾಧಿಕಾರದ ೨೫೧-೧೭ನೆಯ ಪುಟಗಳನ್ನು ಪರಾಂಬರಿಸಿ) ಯಾವುದು ಎಂದರೆ ಶೊಲ್ಲೈ ನಾನ್ ಕಂಡುಕೊಂಡೇನ್ ನಾರಾಯಣವೆನ್ನುಂನಾಮಮ್ ಎಂಬ ಪಾಶುರಾಂತ್ಯದಲ್ಲಿದೆ. ಈ ಪೂರಾಪಾಶುರವು ಯಾವುದೆಂದರೆ—

**"ಕುಲನ್‌ತರುಮ್ ಚೆಲ್ವಂ ತನ್ದಿಡುಮ್ ಅಡಿಯಾರ್‌ಪಡು ತುಯರಾಯಿನ ವೆಲ್ಲಾಮ್‌ನಿಲನ್ ತರುಮ್ ಚೆಯ್ಯುಂ ನೀಳ್‌ವಿಶುಮ್ ಪರುಳುಮ್ ಅರುಳೋಡು ಪೆರುನಿಲಮಳಿಕ್ಕುಮ್। ವಲನ್ ತರುಮ್ ಮಱ್ಱುಮ್ ತನ್ದಿಡುಮ್ ಪೆಱ್ಱತಾಯಿನುಮಾಯಿನ ಚೆಯ್ಯುಮ್, ನಲನ್ ತರುಮ್ ಚೊಲ್ಲೈ ನಾನ್ ಕಣ್ಡುಕೊಣ್ಡೇನ್ ನಾರಾಯಣಾ ವೆನ್ನುಮ್ ನಾಮಮ್" ॥ (೧.೧.೯)**

**ಅರ್ಥವು**—ನಾರಾಯಣ ವೆನ್ನುಮ್ ನಾಮಮ್ - ನಾರಾಯಣ ನೆಂಬ ಶ್ರೇಷ್ಠನಾಮವು, ಕುಲನ್ ತರುಮ್ - ಹೀನಕುಲದಲ್ಲಿ ಹುಟ್ಟಿದವನಾದರೂ

(೪) ಪೆರಿಯ ತಿರುಮೊಳಿ ೧.೧.೯. (೫) ಪೆರಿಯಾಳ್ವಾರ್ ತಿರುಮೊಳಿ ೪.೬.೧.

ಸತ್ಕುಲಪ್ರಸೂತನ ಹಾಗೆ ಶ್ಲಾಘನೀಯನಾಗುವನು; ಅತನಿಗೆ ಹೆಣ್ಣು ಕೊಟ್ಟು, ಆತನ ಕನ್ಯಾಪರಿಗ್ರಹ ಮಾಡಿ, ಆತನೊಂದಿಗೆ ಸಹ ಪಙ್ಕ್ತಿಭೋಜನಾದಿಗಳನ್ನು ಮಾಡಲು ಯೋಗ್ಯನೆಂಬರ್ಥವಲ್ಲವು. ಹೇಗೆ? ಎಂದರೆ ಶ್ರೀ ವಿದುರರು ದೇಹ ತ್ಯಾಗ ಮಾಡಿದಾಗ ಶ್ರೀ ಯುಧಿಷ್ಠಿರರು ಅವರಿಗೆ ಬ್ರಹ್ಮಮೇಧ ಸಂಸ್ಕಾರಮಾಡಲು ಶೂದ್ರರಾದುದರಿಂದ ಹಿಂತೆಗೆದರೂ, ಅಶರೀರ ವಾಕ್ಕಿನ ಮೂಲಕ ಅರ್ಹತೆ ಯುಳ್ಳವರೆಂದು ಅರಿತು ನಡಿಸಿದರು. ಹಾಗೆಯೇ ಋಷಿಗಳು ಧರ್ಮವ್ಯಾಧನು ಜನ್ಮತಃ ಮಾಂಸವಿಕ್ರಯವೃತ್ತಿಯನ್ನು ಹೊಂದಿದವನಾದರೂ, ಧರ್ಮಗಳನ್ನು ಅತ ನಿಂದ ಕೇಳಿ ತಿಳಿದರು; ರಾವಣ ಸಂಬಂಧದಿಂದ ವಿಭೀಷಣನು ದೋಷಯುಕ್ತ ಕುಲದಲ್ಲಿ ಹುಟ್ಟಿದರೂ, ಶ್ರೀರಾಮ ಸಂಬಂಧದಿಂದ ಉತ್ಕೃಷ್ಟನಾಗಿ, ಸುಗ್ರೀವಾಂಜ ನೇಯಾದಿಗಳೊಂದಿಗೆ ಸೇರಿರಲು ಅರ್ಹನಾದನು. ಪ್ರಹ್ಲಾದನು ರಾಕ್ಷಸಪುತ್ರ ನಾದರೂ, ಸ್ವಾಮಿಯನ್ನೇ ಅನವರತ ಧ್ಯಾನಿಸುತ್ತಿದ್ದವನಾದ ಪ್ರಯುಕ್ತ ಬಹು ಶ್ಲಾಘನೀಯನಾದನು.

ಚೆಲ್ವಂ ಶಂದಿಡುಮ್ - ಮಹತ್ತಾದ ಐಶ್ವರ್ಯವನ್ನುಂಟುಮಾಡು ತ್ತದೆ, ಅಜಾಮಿಳನಿಗೆ ಉಂಟಾದ ಹಾಗೆ; ಅಂತರಿಕ್ಷಗತಃಶ್ರೀಮಾನ್ ಎಂದು ವಿಭೀಷಣನೂ,"ಸ ತು ನಾಗವರಶ್ರೀಮಾನ್"ಎಂದು ಗಜೇಂದ್ರನೂ,ಲಕ್ಷ್ಮಣೋ ಲಕ್ಷ್ಮಿವರ್ಧನಃ" ಎಂದು ಲಕ್ಷ್ಮಣನೂ, ಸಹ ಹೇಳಲ್ಪಟ್ಟಿರುತ್ತಾರೆ. ಧ್ರುವನು ಧ್ರುವಮಂಡಲಾಧಿಪತ್ಯದ ಐಶ್ವರ್ಯವನ್ನು ಹೊಂದಿದನು. ಅರ್ಜುನನು ವಿಶ್ವರೂಪ ದಿವ್ಯವೈಕುಂಠರೂಪಗಳನ್ನು ನೋಡುವ ಐಶ್ವರ್ಯವನ್ನು ಹೊಂದಿದನು. ಕುಚೇಲನು ಐಹಿಕೈಶ್ವರ್ಯಾದಿಗಳನ್ನೂ ಅನಂತರ ವೈಕುಂಠ ಪ್ರಾಪ್ತಿಯನ್ನೂ ಪಡೆದನು.

ಅಡಿಯಾರ್‌ಪಡು - ಸ್ವಾಮಿಗೆ ಶೇಷಭೂತರಾದ ಪ್ರಪನ್ನರು ಅನುಭವಿಸುವ, ತುಯರಾಯಿನ ಎಲ್ಲಾಮ್ - ದುಃಖಗಳೆಲ್ಲವನ್ನೂ ಅವುಗಳಿಗೆ ಕಾರಣಭೂತ ವಾದ ಅಪರಾಧಗಳನ್ನೆಲ್ಲಾ ಎಂಬ ಭಾವವು, ನಿಲನ್ ತರುಮ್‌ಶೆಯ್ಯುಮ್ - ನೆಲಸಮ ಮಾಡಿಬಿಡುತ್ತದೆ; ಕ್ಷತ್ರಬಂಧುವಿಗೆ ಪ್ರಾಪ್ತವಾದ ಹಾಗೆ; ಅಥವಾ ಈ ಭೂಮಿಯು ಇರಲು ಸರಿಯಲ್ಲದ ಹಾಗೆ ಮಾಡುವದು. "ಯತ್ರಾಷ್ಟಾಕ್ಷರಸಂಸಿದ್ಧೋ ಮಹಾಭಾಗೋ ಮಹೀಯತೇ । ನ ತತ್ರ ಸಂಚರಿಷ್ಯನ್ತಿ ವ್ಯಾಧಿದುರ್ಭಿಕ್ಷ ತಸ್ಕರಾಃ॥ ಎಂಬುದು ಅನುಸಂಧೇಯವು. ಅಥವಾ ನಿಲಂತರುಮ್‌ಶೆಯ್ಯುಂ - ಎಂದರೆ ಈ ಪ್ರಪನ್ನನು ಪ್ರಾರಬ್ಧಕರ್ಮವನ್ನು ಅನುಭವಿಸುವವರಿಗೇನೇ ಈ ಭೂಮಿ ಯಲ್ಲಿ ಇರುವಹಾಗೆ ಮಾಡುತ್ತದೆ. ನೀಳ್‌ವಿಶುಮ್ಬು - ಪರಮ ಪದವನ್ನು, ಅರುಳುಮ್ - ಕೃಪೆಗೈಯುತ್ತದೆ. "ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂಗತಿಮ್" ಎಂದೂ "ಖಗಾನ್ಮೃಗಾಃ ಪಾಪಜೀವಾಃ ಸನ್ತಿ

ಹ್ಯಚ್ಯುತಶಾಂಗತಾಃ" ಎಂದೂ ಹೇಳಿರುವ ಹಾಗೆ ಹೀನಜನ್ಮದವರೂ ಆಶ್ರಯಿಸಿದರೆ ಮುಕ್ತಿಯನ್ನು ಆ ನಾರಾಯಣ ನಾಮವು ಕೊಡುತ್ತದೆಂಬ ಭಾವವು.

ಅರುಳೋಡು - ಹೀಗೆ ಕೃಪೆಮಾಡುವದರೊಂದಿಗೆ, ಪೆರುನಿಲನ್ - ಸ್ವಾಮಿಗೆ ನಿತ್ಯಕೈಂಕರ್ಯವನ್ನು ಮಾಡುವ ಸುಕೃತಾವಸ್ಥೆಯನ್ನು, ಅಳಿಕ್ಕುಮ್ - ಹೊಂದಿಸುತ್ತದೆ. ಪಲಂಕರುಮ್-"ಯ ಆತ್ಮದಾಬಲದಾ" ಎಂಬಲ್ಲಿ ಹೇಳಿರುವ ಹಾಗೆ ಪರಿಪೂರ್ಣ ಬ್ರಹ್ಮಾನುಭವ ಮಾಡಲು ಶಕ್ತಿಯನ್ನೂ ಕೊಡುತ್ತದೆ. ಹೀಗೆ ಕೃಪೆ ಮಾಡುವಾಗ ಈ ಆಶ್ರಿತನ ಯೋಗ್ಯಸಂಬಂಧಿಗಳಿಗೂ ಮುಕ್ತಿಯನ್ನು ಕೊಡುವದೆಂಬ ಧ್ವನ್ಯರ್ಥವೂ ತೋರಿಬರುತ್ತದೆ. ಮಱ್ಱುಮ್ ತನ್ದಿಡುಮ್-ತಾನು ಪ್ರಾರ್ಥಿಸದೇ ಇದ್ದರೂ ಈತನಿಗೆ ಸ್ವಾಮಿಕೃಪೆಯಿಂದ ಇತರ ಐಹಿಕಾದಿ ಸುಖಗಳನ್ನೂ ಒದಗಿಸುತ್ತದೆ."ತಸ್ಮಿನ್ ಪ್ರಸನ್ನೇ ಕಿ ಮಿಹಾಸ್ತ್ಯಲಭ್ಯಂ" ಎಂಬಲ್ಲಿ ಹೇಳಿರುವ ಹಾಗೆ ಈ ನಾರಾಯಣ ನಾಮಾರ್ಥವನ್ನು ತಿಳಿದು ಆಶ್ರಯಿಸಿದವನಿಗೆ ಇತರಸುಖಗಳನ್ನೂ ಮಾಲಾಕಾರ, ಕುಬ್ಜೆ, ಕುಚೇಲಾದಿಗಳಿಗೆ ಕೊಟ್ಟಹಾಗೆ ದಯಪಾಲಿಸುತ್ತದೆಂಬ ಭಾವವು. ಪೆತ್ತತಾಯಿನುಮ್ - ತನಗೆ ಶರೀರವನ್ನುಂಟುಮಾಡಿ ಕೃಪೆಗೈದ ತಾಯಿಗಿಂತಲೂ. ಆಯಿನಶೆಯ್ಯುಮ್ - ಹಿತವಾಗಿರುವ ಸ್ವರೂಪಜ್ಞಾನ ವಿಕಾಸವನ್ನು ಮಾಡುವಂತಾದ್ದು. ತಾಯಿಯಾದರೋ ಜನ್ಮಕ್ಕೆ ಮಾತ್ರ ಕಾರಣಳು. ನಾರಾಯಣ ನಾಮೋಚ್ಚಾರಣ ಸಹಕೃತ ಪ್ರಪದನಾನುಷ್ಠಾನದಿಂದ ಪ್ರೀತನಾದವನು ಸಿದ್ಧೋಪಾಯನಾಗಿ ಜ್ಞಾನವಿಕಾಸವನ್ನು ಹೊಂದಿಸುವನೆಂಬ ಭಾವವು. ಆದುದರಿಂದ ಜನ್ಮಜನ್ಮಗಳಲ್ಲಿ ಕಾರಣಭೂತರಾದ ಸಹಸ್ರ ಮಾತಾಪಿತರುಗಳಿಗಿಂತ ವತ್ಸಲತರನು ಶ್ರೀಮನ್ನಾರಾಯಣನು ಎಂಬ ಭಾವವು. ನಲಂತರುಮ್ - ಭಗವತ್ಪ್ರೀಣನವನ್ನುಂಟುಮಾಡುವ, ಅಥವಾ 'ಪರಮ ಶೇಷಿಗೆ ನಿತ್ಯಕೈಙ್ಕರ್ಯಮಾಡುವ ಸಾಮ್ರಾಜ್ಯವನ್ನು ಒದಗಿಸಿಕೊಡುವ, ಶೊಲ್ಲೈ - ತಿರುನಾಮವನ್ನು ಅಥವಾ ತಿರುನಾಮವಿರುವ ಅಷ್ಟಾಕ್ಷರ ಮನ್ತ್ರವನ್ನು, ನಾನ್ - ಪರಮ ಕೃಪೆಗೆ ಪಾತ್ರನಾದ ನಾನು, ಕೇಡುಕೊಂಡೇನ್ - ಅದರ ಮಾಹಾತ್ಮ್ಯೆಯೊಂದಿಗೆ ತಿಳಿದುಕೊಂಡೆನು. ನಾವು ಆ ಕಾರಣದಿಂದ ಪರಮಭಾಗ್ಯಶಾಲಿಯು ಎಂಬ ಭಾವವು. "ನಮೋ ನಾರಾಯಣಾಯೇತಿ ಮನ್ತ್ರಸ್ಸರ್ವಾರ್ಥಸಾಧಕಃ" ಎಂಬುದು ಅನುಸಂಧೇಯವು.

(೫) ನಾರಣನ್ನಮ್ ಇತ್ಯಾದಿ. ನಾರಾಯಣನೆಂದು ಮಗನಿಗೆ ಹೆಸರಿಟ್ಟ ತಾಯಿಯು ನರಕವನ್ನು ಹೊಂದುವದಿಲ್ಲವು. ಪೂರ್ವಾಪಾಶುರಗಳು ಯಾವುದೆಂದರೆ :—

ಕಾಶುಂ ಕರೈಯುಡೈ ಕೂರೈಕ್ಕು ಮಱ್ಱಾಙ್ಗೇರ್ ಕತ್ತೈಕ್ಕುವರ್ ।
ಆಶೈಯಿನಾಲ್ ಅಙ್ಗವತ್ತೆ ಪೇರಿಡು ಮಾತರ್ಗಾಳ್ ।

**ಕೇಶವರ್ಗ ಪೇರಿಟ್ಟು ನೀಙ್ಗಳ್ ತೇನಿತ್ತಿರುಮಿನೋ ।**
**ನಾಯಗರ್ಗ ನಾರಣರ್ಗ ತಮ್ಮನ್ನೈ ನರಕಂ ಪುಗಾಳ್ ॥**

**ಅರ್ಥವು—ಅಙ್ಗು** - ಅವರಲ್ಲಿ, ಸಾಧಾರಣ ಮನುಷ್ಯರಲ್ಲಿ, **ಕಾಶುಂ** - ದುಡ್ಡಿಗೂ, ಹಣಕ್ಕೂ, **ಕರೈಯುಡೈಕೂರೈಕ್ಕುಮ್** - ಜರತಾರಿ ಅಂಚುಗಳುಳ್ಳ ವಸ್ತ್ರಗಳಿಗೂ, **ಓರ್‌ಕಣ್ಣಿಕ್ಕುಮ್** ಒಂದು ಭತ್ತದ ಕಂತೆಗಾಗಿ, **ಆಶೈಯಿನಾಲ್**- ಕೊಡುವರೆಂಬ ಆಶೆಯಿಂದ, **ಅವತ್ತಂ ಪೇರ್**-ಅಲ್ಪರಾದವರ ಹೆಸರನ್ನು **ಇಡುಮ್** – ಮಕ್ಕಳಿಗೆ ಇಟ್ಟು ಕರೆಯುವ, **ಆತರ್‌ಗಳ್** - ಪಶುವಿನ ಹಾಗಿರುವ ಜ್ಞಾನಶೂನ್ಯರುಗಳೇ! **ಕೇಶವನ್‌ಪೇರು** - ಚತುರ್ಮುಖನಿಗೂ ರುದ್ರನಿಗೂ ಸ್ವಾಮಿಯಾದವನ ಹೆಸರನ್ನು, ನಾರಾಯಣ, ಕೃಷ್ಣ, ರಾಮ ಮೊದಲಾದ ಹೆಸರುಗಳನ್ನೂ ಸಹ, **ಇಡುಮ್** - ತಮ್ಮ ಮಕ್ಕಳಿಗೆ ಇಟ್ಟು, **ನೀಙ್ಗಳ್** - ನೀವು, **ತೇನಿತ್ತು** - ಮನಸ್ಸಿನಲ್ಲಿ ಭಕ್ತಿಯನ್ನು ಹೊಂದಿ, **ಇರುಮಿನ್** - ಇರುವರಾಗಿರಿ; **ನಾಯಕನ್** - ಉಭಯ ವಿಭೂತಿಗಳಾದ ಎಲ್ಲಕ್ಕೂ ಸ್ವಾಮಿಯಾದ, **ನಾರಾಯಣರ್ತಮ್** - ನಾರಾಯಣನೆಂಬ ನಾಮವನ್ನು ಧರಿಸಿದನಂತವನ, **ಅನ್ನೈ** - ತಾಯಿಯು, ತಂದೆಯೂ ಕೂಡ ಹೇಳಲ್ಪಟ್ಟನು, **ನರಕಮ್** - ಮಹಾಪರಾಧಿಯಾಗಿ ನರಕವನ್ನು ಸೇರಲು ಯೋಗ್ಯಳಾಗಿದ್ದರೂ ನರಕವನ್ನು, **ಪುಕಾಳ್** - ಪ್ರವೇಶಿಸುವದಿಲ್ಲವು. ಮಗನಿಗೆ ನಾರಾಯಣ ಎಂದು ಹೆಸರಿಟ್ಟ ಮಹತ್ವದಿಂದ, ತಾಯಿಯಾಗಲೂ ತನ್ನ ಮಗನನ್ನು ಕರೆಯುವದಕ್ಕಾಗಿ ಅಜಾಮಿಳನ ಹಾಗೆ ನಾರಾಯಣನೆಂದು ಕೂಗಿದರೆ ಶ್ರೀಮನ್ನಾರಾಯಣನ ಭಟರು ಕರೆದುಕೊಂಡು ಹೋಗಲು ಬಂದು, ಅವರ ದರ್ಶನದಿಂದ ಒಳ್ಳೆಯ ಜನ್ಮವನ್ನು ದೊರೆಯುವದರ ಮೂಲಕ, ನರಕಕ್ಕೆ ಪ್ರಯಾಣವು ತಪ್ಪುತ್ತದೆಂಬ ಭಾವವು. ಧನಿಕನ ಹೆಸರನ್ನು ಮಕ್ಕಳಿಗಿಟ್ಟರೆ, ನಾಲ್ಕು ಕಾಸು ಸಿಕ್ಕಬಹುದು. ಒಳ್ಳೇ ಘನವಸ್ತ್ರ ಭತ್ತದ ಕಂತೆಗಳು ಸಿಕ್ಕಬಹುದು. ಇವೆಲ್ಲಾ ಅಲ್ಪವಾಗಿ ಅಶಾಶ್ವತವಾದವು. ಹಾಗಲ್ಲದೆ ಮಕ್ಕಳಿಗೆ ನಾರಾಯಣ ಮೊದಲಾದ ಭಗವನ್ನಾಮಗಳನ್ನಿಟ್ಟರೆ, ಇದರ ಮಾಹಾತ್ಮ್ಯಯಿಂದ ತಾಯಿತಂದೆಗಳಿಗೆ ಒಳ್ಳೇ ಶ್ರೇಯಸ್ಸುಂಟೆಂದು ನಾರಾಯಣ ಶಬ್ದದ ಮಾಹಾತ್ಮ್ಯೆಯು ಹೊಗಳಲ್ಪಟ್ಟಿತು. ಇವರಿಗೆ ನಾಲ್ಕು ಕಾಸನ್ನು ಕೊಡುವವನು,ಅಲ್ಪಮನುಷ್ಯನೆಂದೂ ಕೂಡ ಹೇಳಲು ಇಷ್ಟವಿಲ್ಲದೆ ಅಙ್ಗು ಎಂಬ ಪ್ರಯೋಗವು.

**ಇತ್ಯಾದಿಗಳಾನ ಪಾಶುರಙ್ಗಳಾಲುಮ್**-ಇವೇಮೊದಲಾದ ಪಾಶುರಗಳಿಂದಲೂ **ಪ್ರಸಿದ್ಧಮ್** - ಪ್ರಸಿದ್ಧವು. ಇವಕ್ಕೆ ಕರ್ತೃಪದವು ಇಶ್ಯಬ್ದತ್ತಿನ್ ಪ್ರಭಾವಮ್ ಎಂದು ಹಿಂದೆ ಇರುತ್ತದೆ. ಇವರುಗಳ ಪಾಶುರಗಳಿಂದಲೂ ನಾರಾಯಣ ಶಬ್ದದ ಮಹಿಮೆಯು ವ್ಯಕ್ತವು. ಆದರ ಮಹಿಮೆಯನ್ನು ಅರಿತು ಬಹುವಾಗಿ ಪ್ರಕಾಶ

ಪುರ್ತಾಳ್" ಇತ್ಯಾದಿಗಳಾನ ಪಾಶುರಙ್ಗಳಿಲುಮ್ ಪ್ರಸಿದ್ಧಮ್. ನಾರದೀಯ ಕಲ್ಪತ್ತಿಲುಮ್, "ರೋಗಾಪದ್ಭಯದುಃಖೇಭ್ಯೋ ಮುಚ್ಯಂತೇ ನಾತ್ರ ಸಂಶಯಃ। ಅಪಿನಾರಾಯಣೇತ್ಯೇತಚ್ಛಬ್ದ ಮಾತ್ರ ಪ್ರಲಾಪಿನಃ" ಎನ್ರುಮ್ ಶೊಲ್ಲಪಟ್ಟದು. ಇದು ತನ್ನೈಯೈ ಸ್ವರವ್ಯಂಜನ ಭೇದತ್ತಾಲೇ ಎಟ್ಟು ತ್ತಿರುವಕ್ಷರಮಾಗ ಭಾವಿಕ್ಕ ತ್ತಿರುಮನ್ತ್ರತ್ತೋಡೊಕ್ಕುಮೆನ್ರು ಪುರಾಣಾನ್ತರೋಕ್ತೈಮ್.

---

ಪಡಿಸಿದವರು ಆಳ್ವಾರುಗಳೆಂಬ ಭಾವವು. ಏನೋ ಈ ಆಳ್ವಾರುಗಳು ಪಕ್ಷಪಾತ ದಿಂದ ನಾರಾಯಣ ಶಬ್ದಕ್ಕೆ ಮಹಿಮೆಯನ್ನು ಏಕೆ ಹೇಳಿರಕೂಡದು? ಎಂದರೆ ಮುಂದೆ ಇನ್ನೂ ಸಮಾಧಾನವನ್ನು ಹೇಳುತ್ತಾರೆ.—

ಮುಂದೆ ಇನ್ನೂ ಪ್ರಮಾಣಗಳನ್ನು ಉದಾಹರಿಸುವವರಾಗಿ ನಾರಾಯಣ ಶಬ್ದಕ್ಕೆ "ವಿಮುಕ್ತದುಃಖಾ ಸ್ಸುಖಿನೋ ಭವನ್ತಿ" ಎಂದು ಹೇಳಿದಹಾಗೆ ಸರ್ವವಿಧ ದುಃಖಗಳನ್ನು ಹೋಗಲಾಡಿಸುವ ಶಕ್ತಿಯುಂಟೆಂದು ಹೇಳುತ್ತಾರೆ.—"ನಾರಾಯಣೇತಿ - ನಾರಾಯಣ ಎಂಬ, ಏತತ್ ಶಬ್ದಮಾತ್ರಂ - ಅದರಲ್ಲಿರುವ ಸ್ವಾರಸ್ಯಾರ್ಥಗಳ ಗ್ರಹಣವಿಲ್ಲದೆ ಬರೀಶಬ್ದವನ್ನು ಮಾತ್ರ, ಪ್ರಲಾಪಿನಃ ಅಪಿ - ಕೂಗಿ ಹೇಳುವವರಾದರೂ ಕೂಡ, ರೋಗಾಪದ್ಭಯದುಃಖೇಭ್ಯಃ-ರೋಗ, ವಿಪತ್ತು, ಭಯ, ಇವುಗಳಿಂದುಂಟಾಗುವ ಎಲ್ಲಾ ದುಃಖಗಳಿಂದಲೂ, ಮುಚ್ಯಂತೇ ಎನ್ರು- ಬಿಡಲ್ಪಡುವರು ಎಂದು, ನಾರದೀಯಕಲ್ಪದಲ್ಲಿಶೊಲ್ಲಪ್ಪಟ್ಟದು - ಹೇಳಲ್ಪಟ್ಟಿರುತ್ತದೆ. ಭಗವಾನ್ ನಾರದರು ಮೂಲ ಮಂತ್ರ ಪ್ರವರ್ತಕರು. ಅವರೇ ಪ್ರಣವ ನಮಸ್ಸುಗಳ ಮಾಹಾತ್ಮ್ಯಕ್ಕಿಂತ ನಾರಾಯಣ ಶಬ್ದವನ್ನು ಹೆಚ್ಚಾಗಿ ಪ್ರಶಂಶಿಸಿರುವದರಿಂದ, ಹೀಗೆ ನಾರದೀಯಕಲ್ಪದಲ್ಲಿ ಕೊಂಡಾಡಿರುವದು ಅತಿಶಯೋಕ್ತಿಯಾಗುವದಿಲ್ಲವು. ಮಾಹಾತ್ಮ್ಯವು ವಾಸ್ತವವಾದುದೇ ಎಂಬ ಭಾವವು.

ಮುಂದೆ ನಾರಾಯಣ ಎಂಬ ಶಬ್ದದಲ್ಲೇ ನಾಲ್ಕು ಸ್ವರ ನಾಲ್ಕು ವ್ಯಂಜನಗಳಿರುವದರಿಂದ ಅಷ್ಟಾಕ್ಷರವೇ ಆಗಿ ಮಾಹಾತ್ಮ್ಯವುಳ್ಳದು ಈ ಪದವೆಂದು ಹೇಳಲ್ಪಟ್ಟಿರುತ್ತದೆಂದು ತಿಳಿಸುತ್ತಾರೆ.—ಇದುತನ್ನೈಯೇ - ಈ ನಾರಾಯಣ ಶಬ್ದವೇ, ಸ್ವರ ವ್ಯಂಜನ ಭೇದತ್ತಾಲೆ ನಾ ಎಂಬಲ್ಲಿ ನ್ + ಆ ಎಂದು, ಹೀಗೆ ಈ ನಾಲ್ಕು ಅಕ್ಷರಗಳಲ್ಲಿ ನಾಲ್ಕು ವ್ಯಂಜನ ಮತ್ತು ನಾಲ್ಕು ಸ್ವರಗಳಿರುವದರಿಂದ, ಎಟ್ಟಿರು ವಕ್ಷರಮಾಗ ಭಾವಿಕ್ಕ - ಎಂಟು ಅಕ್ಷರಗಳಾಗಿ ಭಾವಿಸಿದರೆ, ತಿರುಮನ್ತ್ರತ್ತೋಡೊಕ್ಕುಮೆನ್ರು - ಆಗ ಮೂಲಮನ್ತ್ರದೊಂದಿಗೆ ಸಮವೆಂದು, ಪುರಾಣಾನ್ತರೋ

---

(೬) ನಾರದೀಯ ಕಲ್ಪ.

## ನಾರಾಯಣ ಶಬ್ದಸ್ಯ ಸಮಾಸದ್ವಯ ನಿರೂಪಣಮ್

**ಈಶ್ವರನೋಡು ಪೃಥಕ್ಸಿದ್ಧಙ್ಗಳಲ್ಲಾದ ನಾರಙ್ಗಳಕ್ಕು "ನಾರಾಃ ಅಯನಂ ಯಸ್ಯ" ಎನ್ರುಮ್, "ನಾರಾಣಾಂ ಅಯನಂ" ಎನ್ರುಮ್, ನಿಷ್ಕರ್ಷ ವಿವಕ್ಷೈಯಾಲೇ ವೈಯಧಿಕರಣ್ಯಮುಂಡಾಯಿತ್ತು.**

---

ಕ್ತೈಮ್ - ಬೇರೆ ಪುರಾಣದಲ್ಲಿ ಶ್ಲಾಘಿಸಲ್ಪಟ್ಟಿರುತ್ತದೆ. ಅದು ಯಾವುವೆಂದು ಹೇಳಲಿಲ್ಲವು. ವ್ಯಾಖ್ಯಾತೃಗಳು ಯಾರೂ ತಿಳಿಸಲೂ ಇಲ್ಲವು.

ನಾರಾಯಣ ಶಬ್ದಕ್ಕೆ ಎರಡು ವಿಧವಾಗಿ ಸಮಾಸನಿರೂಪಣೆಯು.

---

**ನಾರಾಯಣ** ಶಬ್ದದಲ್ಲಿ ಅನೇಕಾರ್ಥಗಳು ವಿವಕ್ಷಿತಗಳೆಂದು ಹಿಂದೆಯೇ ಹೇಳಲ್ಪಟ್ಟಿತು. ಆ ಅರ್ಥಗಳು ಹೇಗೆ ಉಂಟಾಗುತ್ತವೆ ಎಂಬ ವಿಮರ್ಶೆಯಲ್ಲಿ ಬಹುವ್ರೀಹಿ ತತ್ಪುರುಷ ಸಮಾಸಗಳಿಂದ ಪ್ರಾಪ್ತವಾಗುತ್ತವೆಂದ ತಿಳಿಸುತ್ತಾರೆ.–**ಈಶ್ವರನೋಡು** - ಸರ್ವೇಶ್ವರನೊಂದಿಗೆ, **ಪೃಥಕ್ಸಿದ್ಧಙ್ಗಳಲ್ಲಾದ**-ಅಪೃಥಕ್ಸಿದ್ಧಗಳಾದ, ಎಲ್ಲವೂ ಅಪೃಥಕ್ಸಿದ್ಧಗಳೇ ವಿನಾ ಪೃಥಕ್ಸಿದ್ಧಗಳಾದವು ಯಾವುವೂ ಇಲ್ಲವು. ಇದು ದ್ವೈತ ಸಿದ್ಧಾಂತವನ್ನು ನಿರಾಕರಿಸುತ್ತದೆ. **ನಾರಙ್ಗಳುಕ್ಕು**-ನಿತ್ಯಗಳಾದವುಗಳಿಗೆ, **ನಾರಾಃ ಅಯನಂ ಯಸ್ಯಸಃ ನಾರಾಯಣಃ**-ನಿತ್ಯವಾದವುಗಳು ಯಾವನಿಗೆ ಆಶ್ರಯವೋ ಅವನು **ನಾರಾಯಣನು**; ಇದು ಬಹುವ್ರೀಹಿ ಸಮಾಸಾರ್ಥವು ಎಂದೂ, **"ನಾರಾಣಾಂ ಅಯನಂ"**-ನಿತ್ಯವಾದ ವಸ್ತುಗಳಿಗೆ ಪ್ರಾಪ್ಯನೂ, ಪ್ರಾಪಕನೂ,ಆಧಾರನು,ನಾರಾಯಣಃ"(ಷಷ್ಠೀತತ್ಪುರುಷಾರ್ಥವು) ಎಂದೂ, **ನಿಷ್ಕರ್ಷ ವಿವಕ್ಷೈಯಾಲೇ**-ನಾರಶಬ್ದವು ಮುಖ್ಯವಾಗಿ ಏನನ್ನು ಬೋಧಿಸುತ್ತದೆಂಬುದನ್ನು ನಿಷ್ಕರ್ಷೆಯಿಂದ ಹೇಳುವದು ಅಪೇಕ್ಷಿತವಾಗಿರುವದರಿಂದ, **ವೈಯಧಿಕರಣ್ಯಮ್**-ನಾರಶಬ್ದಕ್ಕೂ ಅಯನ ಶಬ್ದಕ್ಕೂ ಬೇರೆ ಬೇರೆ ವಿಭಕ್ತಿಗಳಿಂದ ಹೇಳೋಣವು, **ಉಂಡಾಯಿತ್ತು**-ಪ್ರಾಪ್ತವಾಯಿತು. ಇಲ್ಲಿ ನಾರ ಶಬ್ದಾರ್ಥವೇನೆಂಬುದನ್ನು ಗ್ರಹಿಸತಕ್ಕದ್ದು. ಹೇಗೆಂದರೆ ರಾಃ ಎಂದರೆ **ರೀಙ್ ಕ್ಷಯೇ** ಎಂಬ ಧಾತುವಿನಿಂದ ನಾಶವುಳ್ಳವುಎಂಬರ್ಥವು;ಹಾಗೆ ನಾಶವಿಲ್ಲದೆ ಇರುವುವುಗಳು ನರಾಃ ಎಂದು ಹೇಳಲ್ಪಡುತ್ತವೆ. ಅಂತಹ ನರಗಳ ಸಮೂಹವು ನಾರಾಃ ಎಂದು ಹೇಳಿಸಿಕೊಳ್ಳುತ್ತವೆ. ಆದುದರಿಂದ ನಾರಾಃ ಎಂದರೆ ನಿತ್ಯವಸ್ತುಗಳ ಸಮೂಹವು. ಹೀಗೆ ನಿತ್ಯವಾದವುಗಳ ಸಮೂಹವು ಯಾವುವು? ಎಂದರೆ ತ್ರಿವಿಧ ಚೇತನಾಚೇತನಸಮೂಹವೂ, ತತ್ಸ್ವರೂಪವನ್ನು ಕೊಡುವ ಗುಣಗಳೂ, ಇವೆಲ್ಲಾ ಪರಮಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣಗಳು, ಅಂತವುಗಳನ್ನು ಹೇಳುವಾಗ ಸಮಾನ ವಿಭಕ್ತಿಗಳಿಂದ ಎಂದರೆ

ಸಾಮಾನಾಧಿಕರಣ್ಯದಿಂದ ವಿಶೇಷ್ಯ ವಿಶೇಷಣಗಳನ್ನು ಹೇಳಬೇಕಾಗಿತ್ತು. ಹಾಗ ಲ್ಲದೆ ವೈಯಧಿಕರಣ್ಯದಿಂದ ಎಂದರೆ ವ್ಯಸ್ತ ವಿಭಕ್ತಿಗಳಿಂದ ವಿಶೇಷ್ಯ ವಿಶೇಷಣ ಗಳನ್ನು ಹೇಳಿದುದು ಹೇಗೆ? ಎಂಬ ಆಕ್ಷೇಪವು. ಈ ಆಕ್ಷೇಪವನ್ನು ಶ್ರೀ ದೇಶಿಕರ ವರೇ, ಈಶ್ವರನೋಡು ಅಪೃಥಕ್ಸಿದ್ಧಙ್ಗಳಲ್ಲಾದನಾರಙ್ಗಳಕ್ಕು ಎಂಬ ಪ್ರಯೋಗದಿಂದ ತೋರಿಸಿದ್ದಾರೆ. ವೈಯಧಿಕರಣ್ಯವನ್ನು ಎಲ್ಲಿ ಹೇಳಬಹುದು ಎಂದರೆ ಪೃಥಕ್ಸಿದ್ಧಗಳಾದ ವಿಶೇಷಣಕ್ಕೆ ವಿಶೇಷ್ಯದೊಂದಿಗೆ ಹೇಳಬಹುದು. ಸಾಮಾನಾಧಿಕರಣ್ಯವು ಅಪೃಥಕ್ಸಿದ್ಧ ವಿಶೇಷಣಕ್ಕೆ ವಿಶೇಷ್ಯದೊಂದಿಗೆ ಉಚಿತವಾಗಿ ರುವಾಗ, ಬಹುವ್ರೀಹಿ ತತ್ಪುರುಷ ಸಮಾಸಗಳಲ್ಲಿ ಅಯನಂ ಯಸ್ಯ ಎಂದೂ, ನಾರಾಣಾಂ ಅಯನಂ ಎಂದೂ, ಭಿನ್ನ ವಿಭಕ್ತಿಗಳಿಂದ ಅನ್ವಯವು ನ್ಯಾಯವೋ ಎಂದರೆ ನ್ಯಾಯವೆಂದು ಹೇಳಿದರು. ಹೇಗೆ ನ್ಯಾಯವು ಎಂದರೆ ನಿಷ್ಕರ್ಷ ವಿವ ಕ್ಷೆಯಾಲೇ - ಶರೀರಾತ್ಮಭಾವವು ವಿಶೇಷಣ ವಿಶೇಷ್ಯಗಳಿಗಿದ್ದರೂ, ಅವುಗಳಿ ರುವ ಭೇದವ್ಯಪದೇಶವೂ, ವೈಲಕ್ಷಣ್ಯವೂ, ಆಧೇಯಾಧಾರ ಭಾವವೂ, ಶರೀರಾತ್ಮ ಭಾವವೂ ಇವುಗಳ ಉಪದೇಶವೆಲ್ಲಾ ಪ್ರಕಟವಾದುದರಿಂದ ವೈಯಧಿಕರಣ್ಯರೀತ್ಯಾ ಅನ್ವಯವು ಸಾಧುವೆಂದು ತಿಳಿಸಿರುತ್ತಾರೆ. ನಾರಾಃ ಅಯನಂಯಸ್ಯಸಃ ಎಂಬ ಬಹುವ್ರೀಹಿಯು ಅರ್ಥದಿಂದ, ಈ ನಿತ್ಯವಾದವುಗಳೆಲ್ಲಾ ಯಾರಿಗೆ ಆಧಾರವೋ, ಆಶ್ರಯವೋ ಅವನು ಎಂಬುದರಿಂದ ಸರ್ವಾಂತರ್ಯಾಮಿತ್ವವು, ಅಂತರ್ವ್ಯಾಪ್ತಿ ಬಹಿರ್ವ್ಯಾಪ್ತಿ ಇತ್ಯಾದಿಗಳು ಉಪದೇಶಿಸಲ್ಪಟ್ಟವು. ನಾರಾಣಾಂ ಅಯನಂ ಎಂಬ ಷಷ್ಠೀ ತತ್ಪುರುಷಾರ್ಥದಿಂದ ಈ ನಿತ್ಯವಾದವುಗಳಿಗೆ (ಮುಖ್ಯವಾಗಿ ಚೇತ ನರಿಗೆ) ಪ್ರಾಪಕನು,ಪ್ರಾಪ್ಯನು,ಆಧಾರನು ಎಂಬ ಮೂರರ್ಥಗಳು ಧಾತು ವ್ಯುತ್ಪತ್ತಿ ಯಿಂದತೋರಿಬರುತ್ತವೆ. ಹೇಗೆಂದರೆ (೧) ಈಯತೇತ್ಯಯನಂ ಎಂಬ ವ್ಯುತ್ಪತ್ತಿ ಯಿಂದ, ಹೊಂದಲ್ಪಡುವನು ಯಾರೋ ಅವನು, ಎಂಬುದರಿಂದ ಪ್ರಾಪ್ಯನು (೨). ಈಯತೇ ಅನೇನ ಎಂಬ ಕರಣ ವ್ಯುತ್ಪತ್ತಿಯಿಂದ, ಯಾರಿಂದ ಹೊಂದ ಲ್ಪಡುವನೋ ಅವನು ಎಂಬುದರಿಂದ ಪ್ರಾಪಕನು (೩) ಈಯತೇ ಅಸ್ಮಿನ್ ಎಂಬ ಅಧಿಕರಣ ವ್ಯುತ್ಪತ್ತಿಯಿಂದ ಯಾವನಲ್ಲಿ ಹೊಂದಲ್ಪಡುವನೋ ಅವನು ಎಂಬುದರಿಂದ ಸಾಯುಜ್ಯ ಪರತ್ವಾದಿಗಳು ದ್ಯೋತಿತವಾಗುವದರಿಂದ, ಅಧಾ ರನು ಎಂಬ ಅರ್ಥವುಂಟಾಗುತ್ತದೆ. ಈ ಅರ್ಥಗಳೆಲ್ಲಾ ಮುಂದೆ ವಿಸ್ತಾರವಾಗಿ ಹೇಳಲ್ಪಡುವದರಿಂದ ಅವುಗಳ ಸುಖಾವಗಾಹನೆಗಾಗಿ ಇಲ್ಲಿ ಸಂಗ್ರಹವಾಗಿ ನಿರೂ ಪಿಸುವೆವು. ಇಲ್ಲಿ ಮುಖ್ಯವಾಗಿ ತಿಳಿಯತಕ್ಕದ್ದು, ಸಾಮಾನಾಧಿಕರಣ್ಯೋಕ್ತಿಗೂ ವೈಯಧಿಕರಣ್ಯೋಕ್ತಿಗೂ ಇರುವ ವ್ಯತ್ಯಾಸವು. ಅಪೃಥಕ್ಸಿದ್ಧ ವಿಶೇಷಣವಾಗಿ ದ್ದರೆ, ಅದನ್ನು ವಿಶೇಷ್ಯಕ್ಕೆ ಸಮವಾದ ವಿಭಕ್ತಿಯೊಂದಿಗೆ ಹೇಳೋಣವು ಸಾಮಾ

ನಾಧಿಕರಣ್ಯವು ; ಉದಾಹರಣೆಯು ಜಗಚ್ಛಕ್ತಃ-ಜಗತ್ತೇ ಪರಮಾತ್ಮನು. ಭಿನ್ನ ವಿಭಕ್ತಿಯಿಂದ ಹೇಳೋಣವು ವೈಯಧಿಕರಣ್ಯವು, ಉದಾ. ಜಗತಃ ಆಧಾರಃ ಜಗತ್ತಿಗೆ ಆಧಾರನು.

**ಅಸ್ಯ ಸಮಾಸ ದ್ವಯಾರ್ಥಸ್ಯ ಸಾಂಪ್ರದಾಯಿಕತ್ವಮಾಹ**

**ಇತ್ಶಬ್ದತ್ತುಕ್ಕು ನಮ್ಮಾಳ್ವಾರ್ (೧) "ಎಣ್ ಪೆರುಕ್ಕನ್ನಲತ್ತೊಣ್ ಪೊರುಳೀರಿಲ ॥ ವಣ್ ಪುಕಳ್ ನಾರಣ್ಣ |" ಎನ್ರುಮ್, (೨) "ನಾರಣ್ಣ**

**ಈ ಎರಡು ವಿಧ ಸಮಾಸಾರ್ಥಕ್ಕೆ ಸಾಂಪ್ರದಾಯಿಕತ್ವವೂ ಉಂಟೆಂದು ಹೇಳುತ್ತಾರೆ.**

ಹೀಗೆ ಎರಡು ವಿಧ ಸಮಾಸಗಳಿಂದ ಅನ್ವಯವನ್ನೂ ತಿಳಿಸಿ, ವ್ಯುತ್ಪತ್ತಿ ಮೂಲಕ ವಿಶೇಷಾರ್ಥಗಳನ್ನು ಹೇಳಿರುವದರಲ್ಲಿ ವಿಶೇಷ ಸ್ವಾರಸ್ಯ ಉಂಟೆಂಬ ದನ್ನೇನೋ ಒಪ್ಪತಕ್ಕದ್ದೇ. ಸಿದ್ಧಾಂತಕ್ಕೆ ವಿರೋಧವಿಲ್ಲದೆ ಅರ್ಥ ವಿಶೇಷಗಳನ್ನು ಕಲ್ಪಿಸಿದರೂ ಅವೂ ಗ್ರಾಹ್ಯವಾದರೂ, ಅವುಗಳಿಗೆ, ಶಿಷ್ಟ ಪರಿಗ್ರಹವಿಲ್ಲದ ಪಕ್ಷದಲ್ಲಿ ಅಷ್ಟು ಮಾಹಾತ್ಮ್ಯ ಇಲ್ಲವು. ಆದುದರಿಂದ ಈ ಅರ್ಥಗಳು ತಮಗೆ ತೋರಿದ ಅರ್ಥಕಲ್ಪನೆಯಲ್ಲವು. ಮಹಾನುಭಾವರಾಗಿ **"ಆದ್ಯಸ್ಯ ನಃ ಕುಲಪತೇಃ"** ಎಂದು ಕೊಂಡಾಡಲ್ಪಟ್ಟಿರುವ ಪ್ರಪನ್ನ ಜನಕೂಟಸ್ಥರಾದ ನಮ್ಮಾಳ್ವಾರವರೇ ತಿರುವಾಯಿಮೊಳಿಯಲ್ಲಿ ಈ ಅರ್ಥಗಳನ್ನು ಉಪಪಾದಿಸಿರುತ್ತಾರೆಂದು ಆ ಪಾಶುರಗಳನ್ನು ಮುಂದೆ ಉದಾಹರಿಸುತ್ತಾರೆ.—

**ಇತ್ಶಬ್ದತ್ತುಕ್ಕು**-ಈ ನಾರಾಯಣ ಶಬ್ದಕ್ಕೆ, **ನಮ್ಮಾಳ್ವಾರವರು ಸಮಾಸದ್ವಯತ್ತಿಲ್ ಅರ್ಥತ್ತೈ ಪ್ರದರ್ಶಿಪ್ಪಿತ್ತಾರ್**-ಎರಡು ಪಾಶುರಗಳನ್ನು ಹೇಳಿ, ಅವುಗಳಲ್ಲಿ ಈ ಎರಡು ಸಮಾಸಗಳಿಂದುಂಟಾಗುವ ಅರ್ಥಗಳನ್ನು ವ್ಯಕ್ತವಾಗಿ ತೋರ್ಪಡಿಸಿರುತ್ತಾರೆ, ಎಂಬುದರೊಂದಿಗೆ ಅನ್ವಯವು. (೧) **ಎಣ್ ಪೆರುಕ್ಕು**-ಎಣಿಸಲು ಅನಂತವಾದ, ಜೀವಾನಂತ್ಯವನ್ನು ಮನಸ್ಸಿನಲ್ಲಿಟ್ಟು ಎಣಿಸಲು ಸಾಧ್ಯವಿಲ್ಲದ, **ಅನ್ನಲತ್ತು**-ಪ್ರಣವದ ಮಕಾರದಿಂದ ತೋರಿಬರುವ ಜ್ಞಾನಾನಂದ ಸ್ವರೂಪಸ್ವಭಾವಗಳುಳ್ಳ, **ಒಣ್ಪೊರುಳ್**-ಸ್ವಯಂಪ್ರಕಾಶನಾಗಿ ವಿಲಕ್ಷಣಸ್ವರೂಪನಾದ ಕೊನೆಗೆ ಆವಿರ್ಭೂತ ಸ್ವಸ್ವರೂಪನಾಗುವದರಿಂದ, ವಿಲಕ್ಷಣ ಆತ್ಮ ವರ್ಗವೇನು, ಇಲ್ಲಿ ಆತ್ಮವರ್ಗವನ್ನು ಹೇಳಿರುವದರಿಂದ ಬದ್ಧ ದಶೆಯಲ್ಲಿ ಆದರೊಂದಿಗಿರುವ ಅಚಿದ್ವರ್ಗವೂ ಕೂಡ ಉಪಲಕ್ಷಣವಾಗಿ ಹೇಳಲ್ಪಟ್ಟಿತೆಂದು ಭಾವಿಸ

(೧) ತಿರು. ೧. ೨. ೧೦. (೨) ೨.೭.೨.

ಬಹುದು. ಈರಿಲ - ಅಪರಿಚ್ಛಿನ್ನವಾದ, ವಣ್ಪುಗಳ್ - ಕಲ್ಯಾಣ ಗುಣಗಳೇನ್ನು ಇವುಗಳನ್ನು ಹೊಂದಿರುವ, ನಾರಣನ್ - ನಾರಾಯಣನ, ಮುಂದಕ್ಕೆ, ತಿಣ, ಕಲ್ ಶೇರೇ - ಸ್ಥಿರವಾದ ಪಾದಗಳನ್ನು ಆಶ್ರಯಿಸು ಎಂದಿರುತ್ತದೆ. ಇದರಿಂದ ನಾರಶಬ್ದದಿಂದ ಹೇಳಲ್ಪಟ್ಟ ಅಪೃಥಕ್ಸಿದ್ಧ ವಿಶೇಷಣರಾದ ಜೀವಾತ್ಮವರ್ಗ ವನ್ನೂ ಹೊಂದಿರುವನು ಎಂಬ ಅರ್ಥದಿಂದ 'ಅವುಗಳನ್ನು ವ್ಯಾಪಿಸಿರುವನು ಎಂಬರ್ಥಉಂಟಾಗಿ ಬಹುವ್ರೀಹ್ಯರ್ಥವೂ ಅದರಿಂದ ಸೌಲಭ್ಯವೂ ತೋರಿ ಬಂದು, ಅದಕ್ಕಾಗಿ ಆತನ ಪಾದಕಮಲವನ್ನು ಆಶ್ರಯಿಸು ಎಂದು ಉಪದೇಶಿಸ ಲ್ಪಟ್ಟಿತು. ತಾತ್ಪರ್ಯ ರತ್ನಾವಳಿಯಲ್ಲಿ ಈ ಪಾಶುರಾರ್ಥವನ್ನು "ಜಗದಯನ ತಯಾ" ಎಂದು ವ್ಯಕ್ತಪಡಿಸಿರುವದರಿಂದಲೂ ಬಹುವ್ರೀಹ್ಯರ್ಥವು. (೨) ಈ ಪೂರಾ ಪಾಶುರವು ಯಾವುದೆಂದರೆ ಹಿಂದಿನ ಪಾಶುರದಲ್ಲಿ ಬಹುವ್ರೀಹಿ ಸಮಾಸಾ ರ್ಥವನ್ನು ಮೊದಲು ವಿವರಿಸಿ ನಾರಣ್ಣ ಎಂದು ಪ್ರಯೋಗಿಸಿದರು. ಈ ಪಾಶುರ ದಲ್ಲಿ ನಾರಣ್ಣ ಎಂದು ಮೊದಲು ಪ್ರಯೋಗಿಸಿ ಅದರ ತತ್ಪುರುಷಾರ್ಥವನ್ನು ಅನಂತರ ಉಪಪಾದಿಸಿರುತ್ತಾರೆ.—ನಾರಣನ್ ಮುಳುವೇಳುಲಕುಕ್ಕು ನಾತ ನ್ವೇದಮಯ್ಯ । ಕಾರಣಂ ಕಿರಿಶೈಕರುಮವೈ ಮುದಲ್ವನೆನ್ದ್ರೈ 'ಶೀರಣಙ್ಗ ಮರರ್ ಪಲರುನ್ದೊಳುತೇತ್ತನಿನ್ರ । ನಾರಣತ್ತೈ ಮರುಪ್ಪೊಶಿತ್ತ ಪಿರಾನೆ ನ್ಮಾಧವನೇ ॥ ಎಂಬುದು. ನಾರಣ್ಣ - ನಾರಾಯಣ ಶಬ್ದವಾಚ್ಯನಾಗಿ, ಅದು ಏನನ್ನು ಹೇಳುತ್ತದೆ ಎಂದರೆ, ಮುಳುವೇಳುಲಕುಕ್ಕು ನಾತನ್ - ಸಮಸ್ತ ವಾದ ಏಳು ಲೋಕಗಳಿಗೂ "ಪತಿಂ ವಿಶ್ವಸ್ಯ" ಎಂಬಲ್ಲಿ ಹೇಳಿರುವ ಹಾಗೆ ಸ್ವಾಮಿಯು ಶೇಷಿಯಾಗಿ, ಇದರಿಂದ ಸಮಸ್ತ ಜೀವಾತ್ಮರಿಗೂ ಶೇಷಿಯಾಗಿ ಪ್ರಾಪ ಕನೂ ಪ್ರಾಪ್ಯನೂ ಎಂಬರ್ಥಗಳುಂಟಾಗುವದರಿಂದ ತತ್ಪುರುಷಾರ್ಥವು ಬೋಧಿ ತವು. ಉಭಯ ವಿಭೂತಿನಾಯಕನೆಂದೂ ಹೇಳಲ್ಪಟ್ಟಿತು. ಸಮಸ್ತ ಲೋಕಕ್ಕೂ ಆಧಾರನು ಎಂಬ ಅರ್ಥವೂ ತೋರಿಬರುವದರಿಂದ "ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ" ಎಂಬ ಸರ್ವಧಾ ರಕತ್ವವನ್ನು ಬೋಧಿಸುವ ಶ್ರುತ್ಯರ್ಥವು ಉಪಪಾದಿಸಲ್ಪಟ್ಟಿತು. ಹೀಗೆ ಶ್ರುತ್ಯ ರ್ಥಗಳು ನಾರಾಯಣ ಶಬ್ದಾರ್ಥವನ್ನು ಬೋಧಿಸುವದರಿಂದಲೇ ವೇದಮಯ್ಯ- ವೇದ ಪ್ರತಿಪಾದ್ಯನಾಗಿ, ಈ ನಾರಾಯಣ ಶಬ್ದಕ್ಕೆ ಹೀಗೆ ಅರ್ಥ ಹೇಳದುದು ತಮ್ಮ ಕಲ್ಪನೆಯಲ್ಲವು, ವೇದದಲ್ಲೇ ಹಾಗೆ ಪ್ರತಿಪಾದ್ಯನು. ನಾರಾಯಣಂ ಮಹಾ ಜ್ಞೇಯಂ, ನಾರಾಯಣ ಪರಂಬ್ರಹ್ಮ ಎಂದು ಹೀಗೆ ಶ್ರುತಿವಾಕ್ಯಗಳುಂಟು ಎಂಬ ಭಾವವು. ಕಾರಣಾ - ಕ್ರಿಯೆಗೆ ಹೇತುವೂ, ಕಿರಿಶೆ - ಕ್ರಿಯೆಯೂ ಕರುಮಮ್ - ಕ್ರಿಯಾಫಲವಾದ ಕಾರ್ಯವೂ, ಇವುಗಳಿಗೆಲ್ಲಾ, ಮುದಲ್ವನ್ -

**ಮುಳುವೇಳುಲಕುಕ್ಕುಮ್ ನಾರ್ತ್" ಎನ್ರುಮ್, ಪೂರ್ವಾಪರಂಗಳಿಲೇ ಸಮಾಸಮಾಸದ್ವಯತ್ತಿಲ್ ಅರ್ಥತ್ತೈ ಪ್ರದರ್ಶಿಪ್ಪಿತ್ತಾರ್.**

ಮೂಲಕಾರಣನಾಗಿ, ಇದರಿಂದ ಸಮಸ್ತ ನಿಮಿತ್ತೋಪಾದಾನ ಸಹಕಾರಿಕಾರಣ ಗಳೆಲ್ಲವೂ ಅಗಿ ಎಂಬ ಭಾವವು, ಆದುದರಿಂದ **ಎನ್ದೈ** - ನನಗೂ ಜನಕನಾಗಿ ಎಂದರೆ ಕಾರಣಭೂತನಾಗಿರುವ, **ಶೀರ್ ಅಣಙ್ಗು ಅಮರರ್**- ಕಲ್ಯಾಣ ಗುಣ ಪೂರ್ಣರಾಗಿ ಪರಮ ಪದದಲ್ಲಿರುವ ನಿತ್ಯಸೂರಿಗಳೂ, **ಪಿರರ್ ಪಲರುಮ್** - ಋಷಿ ಗಳೂ ದೇವತೆಗಳೂ ಮನುಷ್ಯರೂ ಎಲ್ಲರೂ, **ತೊಳುದು** - ಆಶ್ರಯಿಸಿ, ಶರಣಾಗ ತಿಯನ್ನನುಷ್ಠಿಸಿ (ಇದರಿಂದ ನಾರಾಯಣ ಶಬ್ದದ ಪ್ರಾಪಕತ್ವ ಪ್ರಾಪ್ಯತ್ವಗಳು ಬೋಧಿತವು) **ಏತ್ತ ನಿನ್ರ**- ಸ್ತುತಿಸುವಹಾಗೆ ಇರುವ, ಮತ್ತು **ವಾರಣತ್ತೈ ಮರುಪ್ಪೊಶಿತ್ತ**–ಪ್ರತಿವರ್ಗ ಕೋಟಿಗೆ ಸೇರಿದ ಕುವಲಯಾಪೀಡನೆಂಬ ಮದಗಜದ ಕೊಂಬುಗಳನ್ನು ಮುರುದು ಹಾಕಿದ, **ಮಾಧವನೇ** - **ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ** ಎಂಬ ಸ್ವರೂಪ ನಿರೂಪಕ ಧರ್ಮವಾಗಿ ಹೇಳಿದ ಶ್ರಿಯಃಪತಿಯಾದ ನಾರಾಯಣನೇ, **ಎನ್ ತಂದೈ** - ಎನಗೆ ಸರ್ವ ವಿಧದಲ್ಲೂ ಉಪಕಾರಕನಾದ ತಂದೆಯು. ಇದರಿಂದ **ನಾರಾಣಾಂ** ಅಯನನು ಎಂಬಲ್ಲಿ ತೋರುವ ಪ್ರಾಪ್ಯನು ಪ್ರಾಪಕನು, ಆಧಾರನು ಇತ್ಯಾದಿ ಎಲ್ಲಾ ಅರ್ಥಗಳೂ ಪ್ರಕಾಶಗೊಳಿಸಲ್ಪಟ್ಟವು" **ಎನ್ರುಮ್** - ಎಂಬದಾಗಿ **ಪೂರ್ವಾಪರಙ್ಗಳಿಲೇ** - ಮೊದಲಿನ ಪಾಶುರದಲ್ಲಿ ಬಹು ವ್ರೀಹಿ ಅರ್ಥವನ್ನು ನಾರಾಯಣ ಶಬ್ದಕ್ಕೆ ಮೊದಲು ಉಪಪಾದಿಸಿ, ಎರಡನೆಯ ಪಾಶುರದಲ್ಲಿ ತತ್ಪುರುಷಾರ್ಥವನ್ನು ಅನಂತರ ಉಪಪಾದಿಸಿ, ನಾರಾಯಣಶಬ್ದವನ್ನು ಮೊದಲು ಹೇಳಿ ಹೀಗೆ **ಸಮಾಸದ್ವಯತ್ತಿಲ್** - ಬಹುವ್ರೀಹಿ ತತ್ಪುರುಷಗಳಾದ ಎರಡು ಸಮಾಸಗಳಿಂದಲೂ, **ಅರ್ಥತ್ತೈ ಪ್ರದರ್ಶಿಪ್ಪಿತ್ತಾರ್** - ಅರ್ಥಗಳನ್ನು ವ್ಯಕ್ತವಾಗಿ ತೋರ್ಪಡಿಸಿದರು. ಇದಕ್ಕೆ ಕರ್ತೃಪದವು **ಸನ್ಮಾಳ್ವಾರ್** ಎಂದು ಹಿಂದೆ ಇರುತ್ತದೆ.

ಈ ನಾರಾಯಣ ಶಬ್ದದಿಂದ ಶ್ರೀಮನ್ನಾರಾಯಣನು ಅಂತರ್ಯಾಮಿಯೂ ಪ್ರಾಪ್ಯನೂ, ಪ್ರಾಪಕನೂ, ಆಧಾರನೂ ಎಂದು ಅರ್ಥಮಾಡಿ ಆತನಿಗೆ ಸರ್ವ ಶೇಷಿ ತ್ವವನ್ನು ಸಮಾಸದ್ವಯದಿಂದ ಸ್ಥಾಪಿಸಿದುದೂ, ಅದಕ್ಕೆ ಸಂಪ್ರದಾಯತ್ವವನ್ನೂ ಸಾಧಿಸಿದುದೂ ಸರಿಯೇ. ಆದರೆ ಹಾಗೆ ಪ್ರಾಪ್ಯನೂ ಪ್ರಾಪಕನೂ ಆಗಬೇಕಾ ದರೆ ನಾರಾಯಣನಿಗೆ ಹೇಯ ಪ್ರತ್ಯನೀಕತ್ವ, ಕಾರುಣ್ಯ ಸೌಲಭ್ಯ ಸೌಶೀಲ್ಯ ಪರ ತ್ವಾದಿ ಕಲ್ಯಾಣ ಗುಣಾಕರತ್ವವೂ ಉಭಯ ವಿಭೂತಿ ನಿಯಮನತ್ವವೂ ಆವಶ್ಯ ಕವು. ಹೀಗೆ ಪ್ರಾಪ್ಯನೂ ಪ್ರಾಪಕನೂ ಆಗಬೇಕಾದರೆ ಅದಕ್ಕೆ ಆವಶ್ಯಕವಾದ

## ನಾರಾಯಣಶಬ್ದಸ್ಯ ನಾರಶಬ್ದಾರ್ಥಃ

**ಇದಿಲೇ ಹೇಯಪ್ರತ್ಯನೀಕತ್ವ ಕಲ್ಯಾಣೈಕತಾನತ್ವರೂಪಮಾನ ಉಭಯಲಿಙ್ಗತ್ವಮುಮ್ ಉಭಯ ವಿಭೂತಿ ಯೋಗಮುಮ್ ಗರ್ಭಿತಮ್.**

ಆಶ್ರಯಣೀಯತ್ವಕ್ಕೆ ಉಪಯುಕ್ತಗಳಾದ ಕಲ್ಯಾಣ ಗುಣಾಕರತ್ವಾದಿಗಳು ಪ್ರಣವ ನಮಸ್ಸುಗಳಲ್ಲಿ ವ್ಯಕ್ತವೆಂದು ಹಿಂದೆಯೇ ಉಪಪಾದಿಸಲ್ಪಟ್ಟವೆ. ಇವು ನಾರಾಯಣ ಶಬ್ದದಲ್ಲೂ ಸಹ ತೋರಿಬರುತ್ತವೆಯೋ ? ಎಂದರೆ ಇಂತಹ ಉಭಯಲಿಙ್ಗತ್ವವೂ ಉಭಯ ವಿಭೂತಿಮತ್ತ್ವವೂ ಸಹ ನಾರಾಯಣಶಬ್ದದ ನಾರಶಬ್ದದಲ್ಲೇ ಅಂತರ್ಗತವೆಂದು ಹೇಳುತ್ತಾರೆ.—**ಇದಿಲೇ** - ಈ ನಾರಾಯಣ ಶಬ್ದದಲ್ಲೇ ಅಥವಾ ಈ ಸಮಾಸದ್ವಯದಿಂದ ಪ್ರಾಪ್ತಗಳಾದ ಅರ್ಥದಲ್ಲೇ, **ಉಭಯ ಲಿಙ್ಗತ್ವಮುಮ್**–ಅರ್ಥವಾಗಿ ನಾರಾಯಣನು ಹೇಯ ಪ್ರತ್ಯನೀಕನು ಕಲ್ಯಾಣ ಗುಣಾಕರನೆಂಬ ಎರಡು ವಿಶೇಷಣಗಳನ್ನುಳ್ಳ ಹೇತುಗಳನ್ನುಳ್ಳೋಣವೂ, **ಉಭಯ ವಿಭೂತಿಯೋಗಮುಮ್** – ಶಾಬ್ದವಾಗಿ ಲೀಲಾ ವಿಭೂತಿ ನಿತ್ಯ ವಿಭೂತಿಗಳೊಂದಿಗೆ ಸೇರಿರೋಣವೂ, **ಗರ್ಭಿತಮ್** - ನಾರಾಯಣ ಶಬ್ದದ ನಾರ ಶಬ್ದದಲ್ಲೇ ಅಡಗಿವೆ. ಹಿಂದೆ ನಾರಶಬ್ದಕ್ಕೆ ನಿತ್ಯಗಳಾದವುಗಳ ಸಮೂಹಗಳೆಂದು ಹೇಳಿ, ಇವುಗಳನ್ನೇ **ಅಯನಂ** ಆಶ್ರಯವಾಗಿ ಉಳ್ಳವರೆಂದೂ, (ಬಹುವ್ರೀಹಿ) ಇವುಗಳಿಗೆ **ಅಯನನು** ಎಂದರೆ ಪ್ರಾಪ್ಯನು ಪ್ರಾಪಕನು ಆಧಾರನೆಂದೂ, (ತತ್ಪುರುಷ) ಅರ್ಥಗಳು ವಿವರಿಸಲ್ಪಟ್ಟವು. ಈ ನಿತ್ಯವಾದ ನಾರ ಶಬ್ದದಲ್ಲಿ ಸೇರಿದವು ಯಾವುವೆಂದರೆ (೧) ಚೇತನಾ ಚೇತನಗಳೂ, ಅವರುಗಳ ಭೋಗ್ಯ ಭೋಗೋಪಕರಣ ಭೋಗಸ್ಥಾನಗಳೂ, ಇದರಿಂದ ಉಭಯ ವಿಭೂತಿ ಯೋಗವು ಹೇಳಲ್ಪಟ್ಟಿತು. ಮತ್ತು (೨) ಜ್ಞಾನಾನಂದಾಮಲತ್ವಗಳೂ ಜ್ಞಾನಶಕ್ತಿ ಕೃಪಾವಾತ್ಸಲ್ಯ ಸೌಲಭ್ಯ ಸೌಶೀಲ್ಯಾದಿಗಳಾದ ಆತ್ಮಗುಣಗಳೂ, ಇದರಿಂದ ಹೇಯ ಪ್ರತ್ಯನೀಕತ್ವ ಕಲ್ಯಾಣ ಗುಣಾಕರತ್ವರೂಪವಾದ ಉಭಯಲಿಙ್ಗತ್ವವು ಹೇಳಲ್ಪಟ್ಟಿತು. (೩) ದಿವ್ಯ ಮಙ್ಗಳವಿಗ್ರಹವೂ, ಅವುಗಳ ಗುಣಗಳೂ, ದಿವ್ಯಮಹಿಷಿಗಳೂ ಛತ್ರ ಚಾಮರಾದಿಗಳೂ, ಇವುಗಳೆಲ್ಲಾ ನಾರಶಬ್ದದಲ್ಲಿ ಸೇರಿದವು. ಹೇಯ ಪ್ರತ್ಯನೀಕತ್ವ ಕಲ್ಯಾಣ ಗುಣಾಕರತ್ವಗಳೇ ಉಭಯ ಲಿಙ್ಗತ್ವವೆಂದು ಶ್ರೀ ಯತಿವರ್ಯರು ನಸ್ಥಾನತೋಽಪಿ ಪರಸ್ಯೋಭಯಲಿಙ್ಗಂ ಸರ್ವತ್ರ ಹಿ ಎಂಬ ವ್ಯಾಸ ಸೂತ್ರದ ಭಾಷ್ಯದಲ್ಲಿ ವ್ಯಾಖ್ಯಾನಮಾಡಿರುತ್ತಾರೆ. [೩. ೨. ೧]. ಇದರರ್ಥವೇನೆಂದರೆ ನಿಹೀನಗಳಾದ ಪ್ರಕೃತಿ ಪುರುಷರಲ್ಲಿ ಅಂತರ್ಯಾಮಿತ್ವೇನ, ಸ್ಥಾನತೋಽಪಿ - ಇದ್ದರೂ ಕೂಡ, ನ - ಆ ಪ್ರಕೃತಿ ಪುರುಷರಲ್ಲಿರುವ ದೋಷಗಳು ಯಾವುವೂ

ದೇವೀ ಭೂಷಣಾಯುಧ ಪರಿಜನ ಪರಿಚ್ಛದ ದ್ವಾರಪಾಲಪಾರ್ಷದಾದಿ ಭೇದಙ್ಗಳುಮ್, ಇಙ್ಗೇಯನುಸಂಧೇಯಙ್ಗಳ್.

ಕಾರಣತ್ವ ಮಬಾಧ್ಯತ್ವ ಮುಪಾಯತ್ವ ಮುಪೇಯತಾ ।
ಇತಿ ಶಾರೀರಕಸ್ಥಾಪ್ಯ ಮಿಹ ಚಾಪಿ ವ್ಯವಸ್ಥಿತಮ್ ॥೮೧॥

ಇಲ್ಲವು, ಏಕೆಂದರೆ, ಸರ್ವತ್ರಹಿ - ಏಕೆಂದರೆ ಎಲ್ಲಾ ಕಡೆಯಲ್ಲೂ ಎಂದರೆ ಎಲ್ಲಾ ಶ್ರುತಿ ಸ್ಮೃತಿಗಳಲ್ಲೂ, ಪರಸ್ಯ - ಪರಬ್ರಹ್ಮನಿಗೆ, ಉಭಯಲಿಙ್ಗಂ - ಈ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವ ಲಕ್ಷಣಗಳೇ ಹೇಳಲ್ಪಟ್ಟಿವೆ, ಇಲ್ಲಿ ಲಿಙ್ಗವೆಂದರೆ ಲಕ್ಷಣವು. ಈ ಸೂತ್ರಾಭಿಪ್ರಾಯವನ್ನು ಮನಸ್ಸಿನಲ್ಲಿಟ್ಟೇ ಶ್ರೀದೇಶಿಕೇಂದ್ರರು ಇಲ್ಲಿ ಉಭಯಲಿಙ್ಗತ್ವ ವೆಂದೇ ಪ್ರಯೋಗಿಸಿರುತ್ತಾರೆ.

ಉಭಯ ವಿಭೂತಿ ಯುಕ್ತತ್ವವೂ, ಹೇಯ ಪ್ರತ್ಯನೀಕತ್ವ ಕಲ್ಯಾಣ ಗುಣಾಕರತ್ವರೂಪ ಉಭಯಲಿಙ್ಗತ್ವವೂ ಕೂಡ ನಾರ ಶಬ್ದದಲ್ಲಿ ನಿತ್ಯವಾದವುಗಳ ಸಮೂಹವನ್ನುಹೇಳುವ ಬಹುವಚನದಲ್ಲಿ ಅಂತರ್ಗತವೆಂಬುದನ್ನು ತಿಳಿಸುತ್ತಾರೆ.— ದೇವೀ - ಶ್ರೀ, ಭೂಮಿ, ನೀಳೆಯರೂ, ಭೂಷಣ - ಪರಮಾತ್ಮನ ದಿವ್ಯ ಭೂಷಣಗಳು, ಇವುಗಳು ಶರಣಾಗತಿ ಗದ್ಯದಲ್ಲಿ ಕಿರೀಟ, ಕುಂಡಲ, ಅಂಗದ ಗ್ರೈವೇಯಿಕ, ಹಾರ, ನೂಪುರ ಮೊದಲಾದವುಗಳು ಎಂದೂ ಶಂಖ, ಚಕ್ರ, ಗದಾ, ಪದ್ಮ, ನಂದಕ, ಪಾಂಚಜನ್ಯ, ಮೊದಲಾದ ದಿವ್ಯಾಯುಧಗಳೂ ಹೇಳಲ್ಪಟ್ಟಿವೆ. ಆಯುಧ ಪರಿಚ್ಛದ–ಪಾದುಕಾ, ಚಾಮರಗಳು, ವ್ಯಜನ, ಪೀತಾಂಬರಮೊದಲಾದವುಗಳು. ಪರಿಜನ– ಅನಂತ ಗರುಡ ವಿಷ್ವಕ್ಸೇನರುಗಳು, ಪಾರ್ಷದರು - ಕುಮುದ, ಕುಮುದಾಕ್ಷ, ಪುಂಡರೀಕ, ವಾಮನ, ಶಂಕು ಕರ್ಣ, ಸರ್ಪನೇತ್ರ, ಸುಮುಖ, ಸುಪ್ರತಿಷ್ಠರೆಂಬ ಗಣಾಧಿಪತಿಗಳು, ದ್ವಾರಪಾಲಕರು-ಚಂಡ, ಪ್ರಚಂಡ, ಭದ್ರ, ಸುಭದ್ರ, ಜಯ, ವಿಜಯ, ಧಾತಾ, ವಿಧಾತಾ ಎಂಬ ಅಷ್ಟ ದ್ವಾರಪಾಲಕರು, ಆದಿ - ಇವೇ ಮೊದಲಾದ, ಭೇದಙ್ಗಳುಮ್ - ಭೇದಗಳೂ ಸಹ, ಇಙ್ಗೇ - ಈ ನಾರಾಯಣ ಶಬ್ದದಲ್ಲೇ, ಎಂದರೆ ಆ ಶಬ್ದದ ನಾರ ಎಂಬ ಪದದಲ್ಲಿ, ಅನುಸಂಧೇಯಗಳು.

ಮುಂದೆ ತುಂಬಾ ವಿಸ್ತರಿಸಿ ಹೇಳುವದೇನು, ಬ್ರಹ್ಮಸೂತ್ರಗಳ ನಾಲ್ಕು ಅಧ್ಯಾಯಗಳ ಅರ್ಥವೆಲ್ಲಾ ನಾರಾಯಣ ಶಬ್ದದಲ್ಲೇ ಅಡಗಿವೆ ಎಂದು ಕಾರಿಕೆಯಿಂದ ತಿಳಿಸುತ್ತಾರೆ.— ಕಾರಣತ್ವಂ – ಪ್ರಥಮಾಧ್ಯಾಯದಲ್ಲಿ ಸ್ಥಾಪಿಸಲ್ಪಟ್ಟ ಜಗತ್ಕಾರಣತ್ವವೂ, ಅಬಾಧ್ಯತ್ವಂ – ಎರಡನೆಯ ಅಧ್ಯಾಯದಲ್ಲಿ ಹೇಳುವ ಬಾಹ್ಯ ಕುದೃಷ್ಟಿ ಮತಗಳಿಂದ ಈ ಜಗತ್ಕಾರಣತ್ವವನ್ನು ಹೇಳುವ ಸಿದ್ಧಾನ್ತಕ್ಕೆ ವಿರೋಧವಿಲ್ಲದಿರೋಣವೂ, ಉಪಾಯತ್ವಂ – ತೃತೀಯಾಧ್ಯಾ

ಯದಲ್ಲಿ ಹೇಳುವ ಉಪಾಯತತ್ವವೂ, **ಉಪೇಯತಾ** - ನಾಲ್ಕನೆಯ ಅಧ್ಯಾಯದಲ್ಲಿ ಹೇಳುವ ಉಪೇಯತ್ವವೂ, **ಇತಿ** - ಹೀಗೆ, **ಶಾರೀರಕಸ್ಥಾಪ್ಯಂ**- ಶಾರೀರಕ ಶಾಸ್ತ್ರವೆಂದರೆ ಬ್ರಹ್ಮಮೀಮಾಂಸೆಯಲ್ಲಿ ಸ್ಥಾಪಿಸಲ್ಪಡುವ ಅಭಿಪ್ರಾಯಗಳು, **ಇಹಚಾಪಿ** - ಈ ನಾರಾಯಣಶಬ್ದದಲ್ಲೂ ಕೂಡ, **ವ್ಯವಸ್ಥಿತಮ್** - ನಾರಾಯಣ ಶಬ್ದದ ವ್ಯುತ್ಪತ್ತಿ ಮೂಲಕ ನಿಷ್ಕರ್ಷಿಸಲ್ಪಟ್ಟಿರುತ್ತದೆ. ಪ್ರಥಮಾಧ್ಯಾಯದಲ್ಲಿ "ಜನ್ಮಾದ್ಯಸ್ಯ ಯತಃ" ಎಂಬ [೧. ೧. ೨] ಬ್ರಹ್ಮ ಸೂತ್ರದಲ್ಲಿ "ಯತೋವಾ ಇಮಾನಿ ಭೂತಾನಿ ಜಾಯನ್ತೇ" ಇತ್ಯಾದಿ ಶ್ರುತಿ ಪ್ರತಿಪಾದ್ಯಾರ್ಥವು ನಿರ್ಣಯಿಸಲ್ಪಟ್ಟು, ಪರಬ್ರಹ್ಮನಾದ ಶ್ರೀಮನ್ನಾರಾಯಣನೇ ಅಖಿಲ ಜಗತ್ಕಾರಣನೆಂದು ನಿರ್ಣಯಿಸಲ್ಪಟ್ಟಿರುತ್ತದೆ. ಈ ಅರ್ಥವು ನಾರಾಯಣ ಶಬ್ದದಲ್ಲಿ ಉಪಪಾದಿತವೆಂದು "ನರಾಜ್ಜಾತಾನಿ ತತ್ತ್ವಾನಿ" ಇತ್ಯಾದಿ ಮಹರ್ಷಿವಾಕ್ಯಗಳಲ್ಲೂ ಉಪಪಾದಿತವೆಂದು ಮುಂದೆ ಹೇಳಲ್ಪಡುತ್ತದೆ. ದ್ವಿತೀಯಾಧ್ಯಾಯದಲ್ಲಿ ಕಾಪಿಲ ಸಾಂಖ್ಯಾದಿ ಸಿದ್ಧಾಂತಗಳಿಂದ ಈ ಸ್ಥಾಪಿತವಾದ ಅಖಿಲ ಜಗತ್ಕಾರಣತ್ವಕ್ಕೆ ಏನೊಂದು ಬಾಧೆಯಿಲ್ಲವೆಂದು ಹೇಳಿ, ಆ ಸಿದ್ಧಾಂತಗಳು ಉಪಾದೇಯಗಳಲ್ಲವೆಂದು ತೋರಿಸಲ್ಪಟ್ಟಿವೆ. ಈ ಅಬಾಧ್ಯತ್ವವು ನಾರಾಯಣ ಶಬ್ದದಲ್ಲಿ ಹೇಗೆ ವ್ಯಕ್ತವು ? ಎಂದರೆ, ಈಗತಾನೆ ನಾರ ಶಬ್ದದಿಂದ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವಗಳು ಬೋಧಿತವಾಗಿ, ಅವು ಪರಬ್ರಹ್ಮನಾದ ನಾರಾಯಣನಲ್ಲಿ ಇರುವದರಿಂದ, ಕಾರಣ ವಾಕ್ಯಗಳಲ್ಲಿ "ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ". "ಯಸ್ಸರ್ವಜ್ಞಸ್ಸರ್ವವಿತ್" "ಯಸ್ಯ ಜ್ಞಾನ ಮಯಂತಪಃ"ಇತ್ಯಾದಿ ಪ್ರಯೋಗಗಳಿರುವದರಿಂದ ಇಂತಹ ಶಕ್ತಿಯುಳ್ಳದು ಜಡವಾದ ಪ್ರಕೃತಿ ಎಂದಿಗೂ ಆಗಲಾರದು ; ಆ ಕಾರಣದಿಂದ ಅಬಾಧ್ಯತ್ವವನ್ನು ನಾರಾಯಣ ಶಬ್ದದಿಂದ ಅನುಸಂಧಾನ ಮಾಡಬಹುದು. ಮೂರನೆಯ ಅಧ್ಯಾಯದಲ್ಲಿ, ಚೇತನ ವ್ಯಾಪಾರರೂಪವಾದ ಭಗವಂತನನ್ನು ತೈಲಧಾರಾವತ್ ಅವಿಚ್ಛಿನ್ನ ಸ್ಮೃತಿ ಸಂತತಿ ರೂಪ ಭಕ್ತಿಯಿಂದ ಉಪಾಸಿಸೋಣವೂ, ಆಕಿಂಚಿನ್ಯಾದಿ ವಿಶ್ವಾಸದಿಂದ ಭರನ್ಯಾಸವೂ, ಉಪಾಯುಗಳು ಎಂದು ಹೇಳಿ,ಇವುಗಳಿಂದ ಪ್ರೀತನಾದ ಸಿದ್ಧೋಪಾಯನೇ ಪ್ರಾಪಕನೆಂಬುದು ಹೇಳಲ್ಪಡುತ್ತದೆ. ಇದು **ಈಯತೇ ಅನೇನ** ಎಂಬ ಕರಣವ್ಯುತ್ಪತ್ತಿಯಿಂದ ಪ್ರಾಪಕನು ಎಂಬರ್ಥವು ಉಂಟಾಗುವದರಿಂದ ಉಪಾಯತ್ವವೂ ಬೋಧಿತವು. ನಾಲ್ಕನೆಯ ಫಲವನ್ನು ಬೋಧಿಸುವ, ಅಧ್ಯಾಯದಲ್ಲಿ ಪರಬ್ರಹ್ಮವೇ ಪ್ರಾಪ್ಯನೆಂದು ಹೇಳಲ್ಪಡುವ ಅರ್ಥವೂ, ನಾರಾಯಣ ಶಬ್ದದಲ್ಲೇ ಕರ್ಮ ವ್ಯುತ್ಪತ್ತಿಯಾದ **ಈಯತೇ ಇತ್ಯಯನಂ** ಎಂಬುದರಿಂದ ಪರಬ್ರಹ್ಮವೇ ಪ್ರಾಪ್ಯನೆಂಬರ್ಥವೂ ಅನುಸಂಧೇಯವು. ಹೀಗೆ ನಾಲ್ಕು ಅಧ್ಯಾಯಗಳಿಂದ ಉಪದೇಶಿಸಲ್ಪಟ್ಟ

ಇದೆಲ್ಲಾಮ್ "ಜ್ಞಾನಾನಂದಾಮಲತ್ವಾದಿ" ಎನ್ರುತುಡಙ್ಗಿ ಭಟ್ಟರ್ ನಿತ್ಯತ್ತಿಲೇ ಪ್ರತಿಪಾದಿತಮ್. ಇನ್ನಿಡತ್ತಿಲ್ (೧)"ಸೃಷ್ಟ್ವಾ ನಾರಂ ತೋಯಮಂತಸ್ಸ್ಥಿತೋಽಹಂ ಯೇನಸ್ಯಾನ್ಮೇನಾಮ ನಾರಾಯಣೇತಿ |"(೨) ಆಪ್ನೋ

---

ಅರ್ಥವೆಲ್ಲಾ ನಾರಾಯಣ ಶಬ್ದದಲ್ಲೇ ಉಪಪಾದಿತವೆಂದು ವ್ಯುತ್ಪತ್ತಿಮೂಲಕ ಗ್ರಹಿಸಬಹುದೆಂಬುದು ಶ್ಲೋಕಾರ್ಥವು. ವ್ಯಾಸಸೂತ್ರಗಳಿಗೆ ಶಾರೀರಕ ಶಾಸ್ತ್ರವೆಂದು ಹೇಳಿ, ಶಾರೀರಕಸ್ಥಾಪ್ಯಂ ಎಂಬ ಪ್ರಯೋಗಕ್ಕೆ ಕಾರಣವೇನೆಂದು ಕೇಳಬಹುದು. ಈ ವ್ಯಾಸ ಸೂತ್ರಗಳ ಉಪದೇಶವಾದ ಬ್ರಹ್ಮಮೀಮಾಂಸೆಗೆ ಮುಖ್ಯ ತಳಹದಿಯು, ಜಗತ್ತಿಗೂ ಪರಮಾತ್ಮನಿಗೂ ಇರುವ ಶರೀರಾತ್ಮಭಾವವೇ ಎಂದು ಪ್ರಕಟಿಸುವದರಿಂದ ಹಾಗೆ ಪ್ರಯೋಗವು. ಆದುದರಿಂದ ವ್ಯಾಸಸೂತ್ರಗಳಿಗೆ ಶಾರೀರಕಸೂತ್ರಗಳೆಂಬ ವ್ಯವಹಾರ ಉಂಟು. ಈ ಶರೀರಾತ್ಮ ಭಾವವನ್ನು ಒಪ್ಪದಿರುವ ಸಿದ್ಧಾಂತಿಗಳಿಗೆ ಬ್ರಹ್ಮಮೀಮಾಂಸೆಯು ಅರ್ಥವಾಗುವದಿಲ್ಲವೆಂಬುದು ಇದರಿಂದ ವ್ಯಕ್ತವು. ನಮ್ಮ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಈ ಶರೀರಾತ್ಮಭಾವವೇ ಪ್ರಧಾನ ಪ್ರತಿತಂತ್ರವಾದುದರಿಂದ ನಮಗೆ ಸರ್ವವೂ ಸಮಂಜಸವೆಂದು ಶ್ರೀ ಯತಿವರ್ಯರು ಅನೇಕಕಡೆಯಲ್ಲಿ ಹೇಳಿರುತ್ತಾರೆ.

ಈಗ ತಾವು ಕಾರಿಕೆಯಲ್ಲಿ ಹೇಳಿದ ಅರ್ಥವೆಲ್ಲಾ ಶ್ರೀ ಪರಾಶರ ಭಟ್ಟರು ತಾವು ಬರೆದಿರುವ ನಿತ್ಯವೆಂಬ ಗ್ರಂಥದಲ್ಲಿ ಉಪಪಾದಿಸಿರುತ್ತಾರೆಂದು ಈ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—ಇದೆಲ್ಲಾಮ್ - ಈಗ ಹೇಳಲ್ಪಟ್ಟ, ಕಾರಣತ್ವ, ಅಬಾಧ್ಯತ್ವ, ಉಪಾಯತ್ವ, ಉಪೇಯತ್ವಾದಿ ಅರ್ಥಗಳೆಲ್ಲವನ್ನೂ, "ಜ್ಞಾನಾನಂದಾಮಲತ್ವಾದಿ" ಎನ್ರು ತುಡಙ್ಗಿ - ಎಂದಾರಂಭಿಸಿ, ಭಟ್ಟರ್ - ಶ್ರೀ ಪರಾಶರ ಭಟ್ಟರು, ನಿತ್ಯತ್ತಿಲೇ - ನಿತ್ಯವೆಂಬ ತಮ್ಮ ಗ್ರಂಥದಲ್ಲಿ, ಪ್ರತಿಪಾದಿತಮ್ - ಪ್ರತಿಪಾದಿಸಿರುತ್ತಾರೆ, ಅಥವಾ ಭಟ್ಟರಿಂದ ಪ್ರತಿಪಾದಿಸಲ್ಪಟ್ಟಿತು ಎಂಬ ಭಾವವು. ಇದನ್ನೇ ಇತರ ಪ್ರಮಾಣಗಳಿಂದ ಸ್ಥಿರೀಕರಿಸುತ್ತಾರೆ. ಇದೂ ಅಲ್ಲದೆ ಮನುಸ್ಮೃತಿಯು ನಾರಾಯಣ ಶಬ್ದ ನಿರ್ವಚನದಲ್ಲಿ ನಾರ ಶಬ್ದವು ಅಪ್ಪನ್ನು ಮಾತ್ರ ಬೋಧಿಸುತ್ತದೆ ಎಂದು ಹೇಳಿರುವದು ವಿರೋಧವಲ್ಲವೋ ಎಂಬ ಆಕ್ಷೇಪಕ್ಕೂ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ. ಅಪ್ಪು ಎಂಬ ಪದವು ಇತರ ತತ್ವಗಳಿಗೂ ಉಪಲಕ್ಷಣವೆಂದೂ ಹೇಳುತ್ತಾರೆ.—ಜಗತ್ಕಾರಣತ್ವಕ್ಕೆ ಎರಡು ಪ್ರಮಾಣಗಳನ್ನು ಉದಾಹರಿಸುತ್ತಾರೆ. (೧) ನಾರಂ—ನಾರ ಶಬ್ದದಿಂದ ಹೇಳಲ್ಪಡುವ, ತೋಯಂ - ಅಪ್ಪನ್ನು, ಸೃಷ್ಟ್ವಾ - ಸೃಷ್ಟಿಸಿ, ಅಹಂ — ನಾನು, ಅಂತಸ್ಸ್ಥಿತಃ - ಅದನ್ನೇ ವ್ಯಾಪಿಸಿ, ಅದರೊಳಗೆ ಇದ್ದೆನು, ಯೇನ -

ನಾರಾ ಇತಿ ಪ್ರೋಕ್ತಾ ಆಪೋವೈ ನರಸೂನವಃ। ತಾಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ ॥ ಇತ್ಯಾದಿಗಳಿಲೇ ಅಪ್ಪುಶಕ್ಕಳೈ ಎಡುತ್ತದು ತತ್ತ್ವಾಂತರಙ್ಗಳುಕ್ಕುಮ್ ಉಪಲಕ್ಷಣಮೆನ್ನುಮಿಡಮ್ (೩) "ನರಾಜ್ಜಾತಾನಿ ತತ್ತ್ವಾನಿ ನಾರಾಣೀತಿ ತತೋ ವಿದುಃ । ತಾನ್ಯೇವ ಚಾಯನಂ ತಸ್ಯ ತೇನ ನಾರಾಯಣಃ ಸ್ಮೃತಃ" ಇತ್ಯಾದಿಗಳಿಲೇ ಸಿದ್ಧಮ್.

---

ಇಂತಹ ಪ್ರಸಿದ್ಧವಾದ ನನ್ನ ಸೃಷ್ಟಿ ಮತ್ತು ವ್ಯಾಪ್ತಿವ್ಯಾಪಾರದಿಂದ, ನಾರಾಯಣೇತಿ-ನಾರಾಯಣನೆಂಬ, ನಾಮ-ಹೆಸರು, ಸ್ಯಾತ್-ಉಂಟಾಗಿರುತ್ತದೆ. ಇಲ್ಲಿ ತೋಯ ಶಬ್ದದಿಂದ ಅಪ್ಪುಮಾತ್ರ ಹೇಳಲ್ಪಟ್ಟರೂ, ಪಂಚಭೂತಾದಿ ಪ್ರಕೃತಿ ಮತ್ತು ಪ್ರಕೃತಿ ಸಂಸೃಷ್ಟ ಚಿತ್ತೂ ಸಹ ಉಪಲಕ್ಷಣವಾಗಿ ಹೇಳಲ್ಪಟ್ಟಿತು. ಶ್ರುತಿಯಲ್ಲೂ ಹಾಗೆಯೇ ಪ್ರಯೋಗವುಂಟು. "ಅಪ ಏವ ಸಸರ್ಜಾದೌ ತಾಸು ವೀರ್ಯ ಮಪಾಸೃಜತ್" (ಮನುಸ್ಮೃತಿ. ೧. ೮.) "ವ್ಯಸಸರ್ಜ ಭೂಮ್ಯಾಂ" "ಅಪ ಏವ ಸಸರ್ಜಾದೌ ತಾಸು" ಇಲ್ಲಿಯೂ ಅಪ್‌ಶಬ್ದವು ಪ್ರಕೃತಿಯುಕ್ತ ಚಿತ್ತಿಗೂ ಉಪಲಕ್ಷಣವು. ಒಂದು ಪ್ರಕೃತ ವಿಕಾರವನ್ನು ಹೇಳಿದರೆ ಇತರ ವಿಕಾರಗಳನ್ನೂ ಹೇಳಿದಂತೆ ಭಾವಿಸತಕ್ಕದ್ದು. "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಇತ್ಯಾದಿ ಶ್ರುತ್ಯರ್ಥವೂ "ಸೃಷ್ಟ್ವಾ ನಾರಂ" ಎಂಬ ಶ್ಲೋಕದಲ್ಲಿ ಉಪಪಾದಿತವು. ಇದರಿಂದ ನಾರಾಯಣಶಬ್ದದ ಬಹುವ್ರೀಹ್ಯರ್ಥದ ವ್ಯಾಪ್ತಿಯೂ, ಅಂತರ್ಯಾಮಿತ್ವವೂ ತನ್ಮೂಲಕ ಜಗತ್ಕಾರಣತ್ವವೂ ವ್ಯಕ್ತವು. (೨) ಆಪಃ ಅಪ್ಪುಗಳು (ಇದು ಪೃಥಿವೀ ತೇಜಸ್ಸೇ ಮೊದಲಾದವುಗಳಿಗೂ ಉಪಲಕ್ಷಣವು) ನಾರಾ ಇತಿ - ನಾರಗಳೆಂದು, ಪ್ರೋಕ್ತಾಃ - ಹೇಳಲ್ಪಟ್ಟಿವೆ, ಆಪೋವೈ - ಈ ಅಪ್ಪುಗಳಾದರೋ, ನರಸೂನವಃ - ನರಶಬ್ದವಾಚ್ಯನಾದ ಪರಮ ಪುರುಷನಿಂದ ಉತ್ಪತ್ತಿಯನ್ನು ಹೊಂದಿದವು. ಪರಮ ಪುರುಷನಿಗೂ ನರಶಬ್ದವಾಚ್ಯತ್ವ ಉಂಟೋ? ಎಂದರೆ ಸಹಸ್ರನಾಮದಲ್ಲಿ "ಜಹ್ನುರ್ನಾರಾಯಣೋನರಃ" ಎಂಬ ಪ್ರಯೋಗವುಂಟು. ಇದರಿಂದ ನಾಶವಿಲ್ಲದೆ ನಿತ್ಯಗಳಾಗಿರುವ ಚಿದಚಿದ್ವಿಭೂತಿಯುಕ್ತನೆಂದು ಹೇಳಲ್ಪಟ್ಟಿತು. ಹೀಗೆ ಯತ್ - ಯಾವ ಕಾರಣದಿಂದಲೇ, ತಾಃ - ಆ ಅಪ್ಪೇ ಮೊದಲಾದವುಗಳು ತಸ್ಯ-ಆ ಪರಮಪುರುಷನಿಗೇನೇ, ಪೂರ್ವಂ-ಮೊದಲು ಎಂದರೆ ಸೃಷ್ಟಿಕಾಲದಲ್ಲೇ ಇದ್ದವೋ, ಆ ಕಾರಣದಿಂದ ನಾರಾಯಣಸ್ಮೃತಃ ನಾರಾಯಣನೆಂಬದಾಗಿ ಸ್ಮೃತಿಗಳಲ್ಲಿ ಪ್ರಮಾಣಕ್ಕೇನ ಹೇಳಲ್ಪಟ್ಟಿರುವನು." ಇತ್ಯಾದಿಗಳಿಲೇ ಇವೇ ಮೊದಲಾದ ಪ್ರಮಾಣಗಳಲ್ಲಿ ಅಪ್ಪುಗಳೈ ಎಡುತ್ತಿದು - ಅಪ್ಪುಗಳನ್ನು ಮಾತ್ರ ಹೇಳಿರುವದು.

---

(೧) ವರಾಹಪುರಾಣ (೨) ಮನುಸ್ಮೃತಿ ೧-೧೦.

## ನಾರಾಯಣ ಪದಸ್ಯ ಅಯನಶಬ್ದಾರ್ಥಃ

ಇನ್ದ ಬಹುವ್ರೀಹಿ ಸಮಾಸ (ಮಾನ) ನಿರ್ವಚನತ್ತಿಲ್ "ನರಾಜ್ಜಾತಾನಿ ತತ್ತ್ವಾನಿ" ಎನ್ರು ನಾರಶಬ್ದಾರ್ಥಂ ಶೊಲ್ಲುಗೈಯಾಲೇ ಮಹೋಪನಿಷತ್ತು

---

ತತ್ತ್ವಾನ್ತರಙ್ಗಳುಕ್ಕುಮ್. ಪೃಥಿವೀ ಮೊದಲಾದ ತತ್ತ್ವಗಳಿಗೂ, ಅವುಗಳೊಂದಿಗೆ ಸೇರಿರುವ ಚಿತ್ತತ್ವಕ್ಕೂ ಸಹ, ಉಪಲಕ್ಷಣಮೆನ್ನುಮಿಡಮ್ - ಉಪಲಕ್ಷಣವೆಂದು ಹೇಳುವ ಸ್ಥಳವು (೩) "ನರಾಜ್ಜಾತಾನಿತತ್ತ್ವಾನಿ-ಯತೋವಾ ಇಮಾನಿಭೂತಾನಿ ಜಾಯನ್ತೇ" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ಪರಮಪುರುಷನಿಂದ ಚಿದಚಿದ್ರೂಪತತ್ತ್ವಗಳೆಲ್ಲಾ ಸೃಷ್ಟಿಸಲ್ಪಟ್ಟವು, ತತಃ-ಆ ಕಾರಣದಿಂದ, ನಾರಾಣೀತಿ- ಈ ಭೂತಗಳು ನಾರಶಬ್ದವಾಚ್ಯಗಳೆಂದು, ವಿದುಃ - ಪ್ರಾಜ್ಞರು ತಿಳಿದರು. ತಾನ್ಯೇವ - ಆ ಭೂತಗಳೇ, ತಸ್ಯ - ಸೃಷ್ಟಿಕರ್ತನಾದ ಪರಮಪುರುಷನಿಗೆ, ಅಯನಮ್ - ವಾಸಸ್ಥಳಗಳಾದವು. "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತ್ಯರ್ಥವು ಹೇಳಲ್ಪಟ್ಟಿತು; ಹೀಗೆ ಈ ತತ್ತ್ವಗಳನ್ನೇ ಅಯನವಾಗಿ ಆಶ್ರಯವಾಗಿ ಉಳ್ಳವನು ಎಂದು ಬಹುವ್ರೀಹ್ಯರ್ಥವು ಉಪಪಾದಿಸಲ್ಪಟ್ಟು ನಾರಾಯಣ ಶಬ್ದವಾಚ್ಯನೆಂದು ಮುಂದೆ ಹೇಳುತ್ತಾರೆ.—ತೇನ-ಹೀಗೆ ತತ್ತ್ವಗಳನ್ನೇ ಅಯನವಾಗಿ ಉಳ್ಳೋಣದರಿಂದ, ನಾರಾಯಣಸ್ಸ್ಮೃತಃ - ನಾರಾಯಣನೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುತ್ತಾನೆ." ಇತ್ಯಾದಿಗಳಾಲೇ ಇವೇ ಮೊದಲಾದ ಪ್ರಮಾಣಗಳಿಂದ ಸಿದ್ಧಮ್ - ಸ್ಥಾಪಿತವು, ಇಲ್ಲಿನ ಆದಿ ಶಬ್ದದಿಂದ "ನಾರೋನರಾಣಾಂ ಸಂಘಾತಸ್ತಸ್ಯಾಹ ಮಯನಂ ಗತಿಃ" ಎಂಬ "ನಾರಾಣಾಮಯನತ್ವಾಚ್ಚ ನಾರಾಯಣ ಇತಿ ಸ್ಮೃತಃ" ಎಂಬ ಪ್ರಮಾಣಗಳು ಸೂಚಿತವು. ಹೀಗೆ ನಾರಶಬ್ದದಿಂದ ನಿತ್ಯಗಳಾದ ವಸ್ತುಗಳೆಲ್ಲಾ ಹೇಳಲ್ಪಟ್ಟು, ಅವುಗಳನ್ನೇ ಆಶ್ರಯವಾಗಿವುಳ್ಳವನೆಂದು ಹೇಳಿದುದರಿಂದ ಜಗತ್ಕಾರಣತ್ವವೂ, ನಾರಾಯಣ ಶಬ್ದದ ಬಹುವ್ರೀಹ್ಯರ್ಥವೂ ಉಪಪಾದಿತವು.

### ನಾರಾಯಣಪದದಲ್ಲಿರುವ ಅಯನ ಶಬ್ದದ ಅರ್ಥವು.

ಮುಂದೆ ಅಯನ ಶಬ್ದದಲ್ಲಿನ ಧಾತುವಿನ ಮೂರು ವಿಧ ವ್ಯುತ್ಪತ್ತಿಗಳಿಂದ ಮೂರು ವಿಧ ಅರ್ಥ ಬೇಧಗಳು ತೋರಿಬರುತ್ತವೆಂದು ಮುಂದೆ ಹೇಳುತ್ತಾರೆ.— (೧) ಇನ್ದ ಬಹುವ್ರೀಹಿ ಸಮಾಸಮಾನ ನಿರ್ವಚನತ್ತಿಲ್ - ಈಮೇಲೆ ಹೇಳಿದ ಬಹುವ್ರೀಹಿ ಸಮಾಸಮೂಲಕ ಮಾಡಿದ ನಿರ್ವಚನದಲ್ಲಿ, "ನರಾಜ್ಜಾತಾನಿತತ್ತ್ವಾನಿ" ಎನ್ರು - ಎಂಬದಾಗಿ, ನಾರಶಬ್ದಾರ್ಥಮ್ ಶೊಲ್ಲುಗೈಯಾಲೇ - ನಾರಶಬ್ದಕ್ಕೆ

ಭೃತಿಗಳಿಲ್ ಚೊಲ್ಲಾಗಿರಪಡಿಯೇ ಬ್ರಹ್ಮೇಶಾನಾದಿ ಸರ್ವತ್ತೈಯುಮ್ಪೃತ್ತ ನಾರಾಯಣನುಡೈಯ ಸರ್ವವಿಧ ಕಾರಣತ್ವಮುಮ್, ಅಯನ ಶಬ್ದತ್ತಿಲ್ "ಈಯತ ಇತ್ಯಯನಂ" ಎಙ್ಗಿರ ಕರ್ಮ ವ್ಯುತ್ಪತ್ತಿಯಾಲೇ ಇವತ್ತೈ ವ್ಯಾಪ್ಯಮಾಗವುಡೈಯವನುಡೈಯ ಸರ್ವವ್ಯಾಪಕತ್ವಮುಮ್, ಅದಕ್ಕುಪ ಯುಕ್ತಮಾನ ನಿರತಿಶಯ ಸೂಕ್ಷ್ಮತ್ವಮುಮ್, ಶೊಲ್ಲಿತ್ತಾಯಿತ್ತು. ಇಪ್ಪೊರುಳ್‌ಗಳ್ "ಈಯತೇ ಅಸ್ಮಿನ್ ಎಙ್ಗಿರ ಅಧಿಕರಣ ವ್ಯುತ್ಪತ್ತಿಯಿಲುಮ್

---

ಅರ್ಥ ಹೇಳಿರುವದರಿಂದ, ಮಹೋಪನಿಷತ್ಪ್ರಭೃತಿಗಳಿಲ್‌ಶೊಲ್ಲಾಗಿರಪಡಿಯೇ-ಮಹೋಪನಿಷತ್ತೇ ಮೊದಲಾದವುಗಳಲ್ಲಿ ಹೇಳಿರುವಹಾಗೆ, ಬ್ರಹ್ಮೇಶಾನಾದಿಯುಮ್ಪೃತ್ತ-ಚತುರ್ಮುಖಬ್ರಹ್ಮರುದ್ರರನ್ನು ಕುರಿತ, ನಾರಾಯಣನುಡೈಯ ಸರ್ವವಿಧ ಕಾರಣತ್ವಮುಮ್ - ನಾರಾಯಣನ ಸಮಸ್ತವಿಧವಾದ ಕಾರಣತ್ವವೂ, ಅಯನ ಶಬ್ದತ್ತಿಲ್ – ಅಯನ ಶಬ್ದದಲ್ಲಿ, ಈಯತೇ ಇತ್ಯಯನಂ ಎನ್ರ-ಹೊಂದುತ್ತದೆಯಾದುದರಿಂದ ಅಯನವು, ಎಙ್ಗಿರ - ಎನ್ನುವ, ಕರ್ಮವ್ಯುತ್ಪತ್ತಿಯಿಂದ, ಇವತ್ತೈ-ಈ ನಾರಶಬ್ದದಿಂದ ಹೇಳಲ್ಪಟ್ಟ ಚೇತನಾಚೇತನತತ್ವಗಳನ್ನು, ವ್ಯಾಪ್ಯಮಾಗವನುಡೈಯ - ವ್ಯಾಪಿಸಲು ಯೋಗ್ಯವಾದವುಗಳನ್ನಾಗಿ ಹೊಂದಿರುವ, ಪರಮ ಪುರುಷನ, ಸರ್ವ ವ್ಯಾಪಕತ್ವಮುಮ್ - "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ" ಎಂದು ಹೇಳಿರುವಹಾಗೆ ವ್ಯಾಪಿಸಿರೋಣವೂ ಅದಕ್ಕುಪಯುಕ್ತಮಾನ-ಅದಕ್ಕೆ ಬೇಕಾದ ನಿರತಿಶಯಸೂಕ್ಷ್ಮತ್ತೈಯುಮ್-"ಅಣೋರಣೀಯಾನ್"ಎಂಬ ಶ್ರುತಿಯಲ್ಲಿಹೇಳಿರುವ ನಿರತಿಶಯ ಸೂಕ್ಷ್ಮತ್ವವೂ, ಶೊಲ್ಲಿತ್ತಾಯಿತ್ತು - ಹೇಳಿದಂತಾಯಿತು.ಈ ಬಹುವ್ರೀಹಿ ಸಮಾಸ ನಿರ್ವಚನದಿಂದ ಮೂರರ್ಥಗಳು ಮುಖ್ಯವಾಗಿ ಹೇಳಲ್ಪಟ್ಟವೆಂದು ತಿಳಿಸಿದರು. (೧) ಸಮಸ್ತ ಚಿದಚಿತ್ತುಗಳಿಗೆ ನಾರಾಯಣನು ನಿಮಿತ್ತ ಉಪಾದಾನ ಸಹಕಾರಿ ಸರ್ವ ವಿಧ ಕಾರಣನು ಎಂಬುದು ; ಆದುದರಿಂದ ಚತುರ್ಮುಖ ರುದ್ರೇಂದ್ರಾದಿಗಳಿಗೂಕೂಡ ಕಾರಣನೆಂಬುದು. (೨) ನಿರತಿಶಯ ಸೂಕ್ಷ್ಮತ್ವವೂ ಹಾಗೆಯೇ ಬೃಹತ್ವವೂ, (೩) ಸರ್ವಾನ್ತರ್ಯಾಮಿಯಾಗಿ ಸರ್ವವ್ಯಾಪಕತ್ವವೂ. ಮಹೋಪನಿಷತ್ತಿನಲ್ಲಿಬ್ರಹ್ಮೇಶಾನಾದಿಗಳು ಮೊದಲುಗೊಂಡು ಸರ್ವಕ್ಕೂ ಕಾರಣನೆಂದು "ಏಕೋಹವೈ ನಾರಾಯಣ ಆಸೀತ್ ನ ಬ್ರಹ್ಮಾನೇಶಾನಃ" ಎಂಬಲ್ಲಿ ಹೇಳಿರುತ್ತದೆ, ಪ್ರಭೃತಿ ಶಬ್ದದಿಂದ ತದಂಡಂ ಸಮಭವತ್ತತ್ರ ಬ್ರಹ್ಮಾಚತುರ್ಮುಖೋಜಾಯತ" "ನಾರಾಯಣಾತ್ ಬ್ರಹ್ಮೋಜಾಯತ, ನಾರಾಯಣಾದುದ್ರೋಜಾಯತ" ಇತ್ಯಾದಿ ಪ್ರಮಾಣಗಳು ಸೂಚಿತವು.

**ವರುಮ್.** (೧) "ನಾರಾಣಾಮಯನತ್ವಾಚ್ಚ ನಾರಾಯಣ ಇತಿಸ್ಮೃತಃ (೨) "ನಾರಸ್ತ್ವಿತಿ ಸರ್ವಪುಂಸಾಂ ಸಮೂಹಃ ಪರಿಕೀರ್ತಿತಃ । ಗತಿರಾಲಂಬನಂ ತಸ್ಯ ತೇನ ನಾರಾಯಣಃಸ್ಮೃತಃ"(೨)"ನಾರೋ ನರಾಣಾಂ ಸಂಘಾತಸ್ತಸ್ಯಾಹ

---

ಮುಂದೆ ಈ ಹೇಳಿದ ಅರ್ಥಗಳು ಕರ್ಮ ವ್ಯುತ್ಪತ್ತಿಯಿಂದಲೂ ತೋರಿಬರುತ್ತದೆಂದು ತಿಳಿಸುತ್ತಾರೆ.—ಇಪ್ಪೊರುಳ್‌ಗಳ್—ಜಗತ್ಕಾರಣನಾಗಿ ವ್ಯಾಪಕತ್ವವು, ಆದಕ್ಕಾಗಿ ಸೂಕ್ಷ್ಮತ್ವವು, ಈ ಅರ್ಥಗಳು, ಈಯುತ್ತೇಟ್ಟಿಲ್, ಈ ಪರಮಾತ್ಮನಲ್ಲೇ ಅಡಗಿವೆ ಎಂಬ ಅಧಿಕರಣ ವ್ಯುತ್ಪತ್ತಿಯಿಲುಮ್ - ಸಪ್ತಮೀ ವ್ಯುತ್ಪತ್ತಿಯಿಂದಲೂ, ವರುಮ್ - ಉಂಟಾಗುತ್ತವೆ. ಹೇಗೆಂದರೆ—ಯಾವನು ಸೃಷ್ಟಿಗೆ ಕಾರಣನೋ ಅವನೇ ಲಯಕ್ಕೂ ಕಾರಣನು ಎಂದಾಗುವದರಿಂದ ಪ್ರಳಯದಲ್ಲಿ "ತಮೋದೇವೇ ಏಕೀಭವತಿ" ಎಂಬ ಶ್ರುತ್ಯನುಸಾರ ಸೂಕ್ಷ್ಮರೂಪವನ್ನು ಹೊಂದಿ ಪರಮಾತ್ಮನಲ್ಲೇ ಎಲ್ಲವೂ ಸೇರುವದರಿಂದ ಕರ್ಮಣಿ ವ್ಯುತ್ಪತ್ತಿಯಿಂದ ಜಗತ್ಕಾರಣತ್ವವೂ ಸಿದ್ಧವು; ಆ ಕಾರಣದಿಂದ ಸೂಕ್ಷ್ಮತ್ವವೂ ಬೋಧಿತವು.

ಮುಂದೆ, ಷಷ್ಠೀ ತತ್ಪುರುಷಮೂಲಕ ಅಯನ ಶಬ್ದಕ್ಕೆ ವ್ಯುತ್ಪತ್ತಿಮೂಲಕ ಅರ್ಥವನ್ನು ಹೇಳುತ್ತಾರೆ. ನಾರಾಣಾಂ ಅಯನಂ ಎಂದು ಷಷ್ಠೀ ಸಮಾಸ ಮಾಡಿದರೆ ನಾರಾಯಣಂ ಎಂದು ನಪುಂಸಕ ಲಿಙ್ಗವಿರಬೇಕಲ್ಲವೇ ? ನಾರಾಣಾ ಅಯನಂ ನಾರಾಯಣಃ ಎಂದು ಪುಲ್ಲಿಙ್ಗವು ಹೇಗೆ? ಎಂದು ಆಕ್ಷೇಪತಂದರೆ, ಶಾಸ್ತ್ರಗಳಲ್ಲೂ ಋಷಿ ವಚನಗಳಲ್ಲೂ ಪುಲ್ಲಿಙ್ಗವೇ ಇರುವದರಿಂದ, ಪ್ರಯೋಗವು ಸಾಧುವೇ ಎಂದು ಸಪ್ರಮಾಣವಾಗಿ ತಿಳಿಸುತ್ತಾರೆ. ನಾರಾಣಾಂ ನಿತ್ಯಗಳಾದ ವಸ್ತುಗಳಾದ ಚೇತನಾ ಚೇತನಾದಿಗಳ ಸಮೂಹಕ್ಕೆ, ಅಯನತ್ವಾಚ್ಚ - ಗತಿಯಾದುದರಿಂದ, ನಾರಾಯಣ ಇತಿಸ್ಮೃತಃ - ನಾರಾಯಣನೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವನು. ಇಲ್ಲಿ ನಾರಾಣಾಂ ಅಯನಂ ಎಂದು ಷಷ್ಠೀ ತತ್ಪುರುಷಾರ್ಥ ರೂಪ ವ್ಯುತ್ಪತ್ತಿಯನ್ನು ತೋರಿಸಿ ಮಹರ್ಷಿಯು ನಾರಾಯಣಃ ಎಂದು ಪ್ರಯೋಗ ಸಿರುವದರಿಂದ ಷಷ್ಠೀತತ್ಪುರುಷಾರ್ಥವು ಸಾಧುವಾದುದೇ ಎಂಬ ತಾತ್ಪರ್ಯವು. ಹಾಗೆಯೇ ಇನ್ನೂ ಪ್ರಮಾಣಗಳನ್ನು ಉದಾಹರಿಸುತ್ತಾರೆ. (೨) ನಾರಸ್ತ್ವಿತಿ-ನಾರ ಎಂಬ ಶಬ್ದದಿಂದಲಾದರೋ, ಸರ್ವ ಪುಂಸಾಂ ಸಮೂಹಃ - ಸಮಸ್ತ ಚೇತನರ ಸಮೂಹವು, ಪರಿಕೀರ್ತಿತಃ - ಹೇಳಲ್ಪಟ್ಟಿತು ; ಮುಂದೆ ಅಯನ ಶಬ್ದಾರ್ಥವು ಹೇಳಲ್ಪಡುತ್ತದೆ - ತಸ್ಯ - ಅಂತಹ ಚೇತನ ವರ್ಗಕ್ಕೆ, ಈ ಪರಮ ಪುರುಷನು, ಗತಿಯು; ಆಲಂಬನಂ - ತನ್ನನ್ನು ಹೊಂದಲು ತನ್ನ ದಿವ್ಯ ಮಙ್ಗಳ ವಿಗ್ರಹದ

---

(೧) ಭಾರತ ಉದ್ಯೋಗ ೬೩-೩೨. (೨) ಪಾದ್ಮೋತ್ತರ.

ಮಯನಂ ಗತಿಃ । ತೇನಾಸ್ಮಿ ಮುನಿಭಿರ್ನಿತ್ಯಂ ನಾರಾಯಣ ಇತೀರಿತಃ॥ನಾರ ಶಬ್ದೇನ ಜೀವಾನಾಂ ಸಮೂಹಃ ಪ್ರೋಚ್ಯತೇ ಬುಧೈಃ । ತೇಷಾಮಯನ ಭೂತತ್ವಾನ್ನಾರಾಯಣ ಇಹೋಚ್ಯತೇ । ತಸ್ಮಾನ್ನಾರಾಯಣಂ ಬಂಧುಂ ಮಾತರಂ ಪಿತರಂ ಗರುಮ್ । ನಿವಾಸಂ ಶರಣಂ ಚಾಹು ರ್ವೇದವೇದಾಂತ ಪಾರಗಾಃ" ಇತ್ಯಾದಿಗಳಿಲ್ ಪಡಿಯೇ ತತ್ಪುರುಷ ಸಮಾಸಮಾನಾಲುಮ್ ನಿರುಕ್ತಿ ಬಲತ್ತಾಲೇ ಅಯನಶಬ್ದಮ್ ಪುಲ್ಲಿಙ್ಗಮ್.

---

ಉಪಾಸನವಾದ ಮಾರ್ಗವನ್ನು ತೋರಿಸಿ ತನ್ನನ್ನು ಸೇರಿಸಿಕೊಳ್ಳುವಹಾಗೆ ಮಾಡು ವವರಿಂದ ಸರ್ವವಿಧವಾದ ಆಧಾರಭೂತನು, ಸತ್ತಾದಾಯಿಕನು, ತೇನ-ಆ ಕಾರಣ ದಿಂದ, ನಾರಾಯಣ ಸ್ಸ್ಮೃತಃ - ನಾರಾಯಣನೆಂದು ಹೇಳಲ್ಪಟ್ಟಿರುತ್ತಾನೆ." (೩) ನಾರಃ ಎಂದರೆ ನರಾಣಾಂ ಸಂಘಾತಃ - ನಾಶವಿಲ್ಲದ ವಸ್ತುಗಳ ಸಮೂ ಹವು, ತಸ್ಯ - ಅಂತಹ ಸಮೂಹಕ್ಕೆ, ಅಹಂ - ನಾನು, ಅಯನಂ – ಗತಿಯು ಪ್ರಾಪ್ಯ ಪ್ರಾಪಕಾಧಾರನು. ತೇನ - ಆಕಾರಣದಿಂದ, ಮುನಿಭಿಃ - ಪ್ರಾಜ್ಞರಾದ ಮನನಶೀಲರಾದ ಋಷಿಗಳಿಂದ, ನಿತ್ಯಂ - ಯಾವಾಗಲೂ, ನಾರಾಯಣ ಇತೀ ರಿತಃ - ನಾರಾಯಣನೆಂದು ಹೇಳಲ್ಪಟ್ಟಿರುವೆನು. ನಾರಶಬ್ದೇನ - ನಾರಶಬ್ದದಿಂದ, ಜೀವಾನಾಂ ಸಮೂಹಃ - ನಿತ್ಯರಾದ ಜೀವಾತ್ಮರ ಸಮೂಹವು, ಬುಧೈಃ – ಜ್ಞಾನಿಗಳಿಂದ, ಪ್ರೋಚ್ಯತೇ - ಹೇಳಲ್ಪಡುತ್ತದೆ; ತೇಷಾಂ–ಅವರಿಗೆ, ಅಯನ ಭೂತತ್ವಾತ್ - ನಾನು ಸರ್ವ ವಿಧದಲ್ಲೂ ಗತಿಯಾದುದರಿಂದ, ಇಹ - ಇಲ್ಲಿ, ನಾರಾಯಣಃ - ನಾರಾಯಣನೆಂದು, ಉಚ್ಯತೇ - ಹೇಳಲ್ಪಡುವೆನು, ತಸ್ಮಾತ್– ಆಕಾರಣದಿಂದ, ವೇದ ವೇದಾಂತ ಪಾರಗಾಃ - ವೇದವೇದಾಂತಗಳ ಕೊನೆ ಯನ್ನು ಮುಟ್ಟಿದವರು ನನ್ನನ್ನು ನಾರಾಯಣನೆಂದೂ (ಪುರುಷಸೂಕ್ತದಲ್ಲಿ,) ಬಂಧುಂ–ಹಿತೈಷಿಯಾದ ಬಂಧುವೆಂದೂ, ಮಾತರಂ - ರಕ್ಷಿಸುವ ತಾಯಿ ಎಂದೂ, ಪಿತರಂ - ಹಿತಪ್ರವರ್ತಕನಾದ ತಂದೆಯೆಂದೂ, ಗುರುಮ್ - ಶಾಸ್ತ್ರೋಪದೇಶ ನಾಗಿ ಅಜ್ಞಾನಾಂಧಕಾರವನ್ನು ಹೋಗಲಾಡಿಸುವ ಗುರುವೆಂದೂ, ನಿವಾಸಂ – ಆಶ್ರಿತರಿಗೆ ಪರಮಾಶ್ರಯ ಭೂತನೆಂದೂ, ಶರಣಂ-ತನ್ನನ್ನು ಹೊಂದಲು ಉಪಾಯ ನೆಂದೂ, ಆಹುಃ-ಹೇಳುತ್ತಾರೆ. ಈ ಸಂದರ್ಭದಲ್ಲಿ "ಏಷಸರ್ವಭೂತಾಂತರಾತ್ಮಾ ಪಹತ ಪಾಪ್ಮಾ ದಿವ್ಯೋದೇವ ಏಕೋನಾರಾಯಣಃ" "ಮಾತಾ ಪಿತಾ ಭ್ರಾತಾ ನಿವಾಸಶ್ಶರಣಂ ಸುಹೃದ್ಗತಿ ರ್ನಾರಾಯಣಃ"(ಸುಬಾ-೬) (೪)"ತ್ವಮೇವ ಮಾತಾ ಚ ಪಿತಾತ್ವಮೇವ ತ್ವಮೇವ ಬಂಧುಶ್ಚ ಗುರುಸ್ತ್ವಮೇವ"

---

[೩] ಶಾಂತಿಪರ್ವ. (೪) ಶರಣಾಗತಿ ಗದ್ಯ.

ಇಙ್ಗು “ರೀಙ್ ಕ್ಷಯೇ” ಎಙ್ಗಿರ ಧಾತುವಿಲೇ ರ ಎನ್ರು ಸ್ವರೂಪವಿಕಾರತ್ತಾಲೇ ಕ್ಷಯಿಷ್ಣುವಾನ ಅಚಿತ್ಪದಾರ್ಥತ್ತೈ ಚ್ಚೊಲ್ಲಿ ಅದಿಲ್ ವೇರುಪಟ್ಟು ಸ್ವರೂಪವಿಕಾರ ರಹಿತಮಾನ ಚೇತನವರ್ಗತ್ತೈ ನಗನ್ನೈಕಾದಿ ಶಬ್ದ

---

“ನಿವಾಸ ವೃಕ್ಷಸ್ಸಾಧೂನಾಮಾಪನ್ನಾನಾಂ ಪರಾಂಗತಿಃ” “ಪಿತಾ ತ್ವಂ ಮಾತಾ ತ್ವಂ ದಯಿತ ತನಯಸ್ತ್ವಂ ಪ್ರಿಯಸುಹೃತ್ತ್ವಮೇವತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಂ”(ಸ್ತೋತ್ರರತ್ನಂ)“ಪಿತಾಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್” ಇತ್ಯಾದಿ ಸಹಸ್ರ ವಚನಗಳು ಅನುಸಂಧೇಯಗಳು.” ಇತ್ಯಾದಿಗಳಿಲ್ ಪಡಿಯೇ ಈ ಮೇಲೆ ಉದಾಹರಿಸಿದ ಪ್ರಮಾಣಗಳಲ್ಲಿ ಹೇಳಿರುವಹಾಗೆ ತತ್ಪುರುಷಸಮಾಸಮಾನಾಲುಮ್-ತತ್ಪುರುಷ ಸಮಾಸವಾದರೂ, ಎಂದರೆ ತತ್ಪುರುಷ ಸಮಾಸಪದದ ಲಿಙ್ಗವು ಉತ್ತರಪದದ ಲಿಙ್ಗಾನುಸಾರವಾಗಿರಬೇಕೆಂಬ ವ್ಯಾಕರಣ ನಿಯಮವಿದ್ದರೂ, ನಿರುಕ್ತಿ ಬಲತ್ತಾಲೇ – ನಾರಾಣಾಂ ಅಯನಂ ನಾರಾಯಣಃ ಎಂದು ಮಹರ್ಷಿಗಳು ನಿರುಕ್ತಿಯನ್ನು ಹೇಳಿರುವ ಬಲದಿಂದ, ಅಯನಶಬ್ದಮ್ ಪುಲ್ಲಿಙ್ಗಂ-ಅಯನ ಶಬ್ದವನ್ನು ಪುಲ್ಲಿಙ್ಗವಾಗಿ ಭಾವಿಸಬಹುದು ಎಂಬ ತಾತ್ಪರ್ಯವು. ನಾರಾಯಣಂ ಎಂದು ಹೇಳದೆ ನಾರಾಯಣಃ ಎಂದು ಮಹರ್ಷಿಗಳು ತೋರಿಸಿರುವದರಿಂದ ನಾರಾಯಣಃ ಎಂಬ ಸಮಾಸ ಪದದಲ್ಲಿ ಅಯನ ಶಬ್ದವು ಪುಲ್ಲಿಙ್ಗವೆಂಬ ಭಾವವು.

ಮುಂದೆ ನಾರಾಣಾಂ ಅಯನಂ ನಾರಾಯಣಃ ಎಂಬ ಷಷ್ಠೀ ತತ್ಪುರುಷ ಸಮಾಸರೀತ್ಯಾ ನಿರ್ವಚನ ಪ್ರಕಾರವಾಗಿ ಪ್ರಾಪ್ತವಾಗುವ ಅರ್ಥಗಳನ್ನು ಉಪಪಾದಿಸುತ್ತಾರೆ.—ಈ ಷಷ್ಠೀ ತತ್ಪುರುಷಮೂಲಕ ಬಹುವ್ರೀಹ್ಯರ್ಥಕ್ಕಿಂತ ವಿಶೇಷಾರ್ಥಗಳು ತೋರಿಬರುವದರಿಂದ, ಈ ನಿರ್ವಚನವು ಪಂಮೋಪಾದೇಯವೆಂಬ ಭಾವದಿಂದ ಉಪನ್ಯಾಸವನ್ನು ಮಾಡುತ್ತಾರೆ. ಬಹುವ್ರೀಹ್ಯರ್ಥದಲ್ಲಿ ನಾರ ಶಬ್ದಕ್ಕೆ, ನಾರವೆಂದರೆ ಪರಮಾತ್ಮನಿಗೆ ಸಂಬಂಧಿಸಿದ ವಸ್ತುಗಳೆಂದು ಅರ್ಥಮಾಡಿದರು. ಇಲ್ಲಿ ನಾರ ಶಬ್ದಕ್ಕೆ ಜೀವಾತ್ಮ ಸಮೂಹವೆಂದು ಅರ್ಥಮಾಡುತ್ತಾರೆ. ಇಙ್ಗು - ಈ ಷಷ್ಠೀತತ್ಪುರುಷ ನಿರ್ವಚನದಲ್ಲಿ, ರೀಙ್ ಕ್ಷಯೇ ಎಙ್ಗಿರ ಧಾತುವಿಲೇ - ರೀಙ್ ಎಂಬುದು ನಾಶವೆಂಬರ್ಥದಲ್ಲಿ ಎಂದು ಹೇಳಲ್ಪಟ್ಟ ಧಾತುವಿನಲ್ಲಿ, ರ ಎನ್ರು ಸ್ವರೂಪ ವಿಕಾರತ್ತಾಲೇ - ರ ಎಂದು, ಸ್ವರೂಪ ವಿಕಾರವನ್ನು-ಹೊಂದುವದರಿಂದ, ಕ್ಷಯಿಷ್ಣುವಾನ - ನಾಶಹೊಂದುವ ಯೋಗ್ಯತೆಯುಳ್ಳ, ಅಚಿತ್ಪದಾರ್ಥತ್ತೈ ಚ್ಚೊಲ್ಲಿ - ಅಚೇತನ ವಸ್ತುವನ್ನು ಹೇಳಿ, ಅದಿಲ್ ವೇರುಪಟ್ಟು - ಅದಕ್ಕಿಂತ ಬೇರೆಯಾಗಿ ಎಂದರೆ ವಿಲಕ್ಷಣವಾಗಿ, ಸ್ವರೂಪ ವಿಕಾರ

ನ್ಪೋಲೇ ನಸಮಾಸಮಾನ ನರಶಬ್ದತ್ತಾಲೇ ಚೊಲ್ಲಿ, ಅದಿನ್ ಸಮೂಹಙ್ಗಳೈ "ನಾರ" ಶಬ್ದತ್ತಾಲೇ ಚೊಲ್ಲಿ, ಇನ್ದ ಸಮೂಹಙ್ಗಳುಕ್ಕು ಆಯನಂ ಎಙ್ಗಿರವಿತ್ತಾಲ್ "ಸ್ವಾಧೀನ ತ್ರಿವಿಧ ಚೇತನಾ ಚೇತನಸ್ವರೂಪ ಸ್ಥಿತಿ ಪ್ರವೃತ್ತಿ ಭೇದ" ನಾನವರ್ ನರಶಬ್ದವಾಚ್ಯರಾನ ತ್ರಿವಿಧಾತ್ಮಾಕ್ಕಳುಡೈಯ ಸಮೂಹಙ್ಗಳುಕ್ಕುಮ್ ಅಪೇಕ್ಷಿತ ಹೇತುವುಮಾಯ್, ಸ್ವಯಂ ಭೋಗ್ಯತೈಯಾಲೇ ಉಪೇಯಮುಮಾಯ್ (೧) "ವಿಷ್ಣ್ವಾಧಾರಂ ಯಥಾ ಚೈತತ್ ತ್ರೈಲೋಕ್ಯಂ ಸಮುಪಸ್ಥಿತಮ್" "ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯ

---

ರಹಿತಮಾನ - ಸ್ವರೂಪ ವಿಕಾರವಿಲ್ಲದಿರುವ, ಚೇತನವರ್ಗತ್ತೈ - ಚೇತನ ಸಮೂಹವನ್ನು, ನಗನ್ಯಕಾದಿ ಶಬ್ದನ್ಪೋಲೆ - ನ, ಗಃ - ನಗಃ, ನ ಏಕಃ - ನೈಕಃ ಎಂಬಲ್ಲಿರುವ ನಗನೈಕ ಮೊದಲಾದ ಶಬ್ದಗಳಹಾಗೆ, ನ ಸಮಾಸ ಮಾನ ನ, ರಃ - ನರಃ ಎಂಬ ನಞ್ ಸಮಾಸವಾದ, ನರ ಶಬ್ದತ್ತಾಲೇ - ನಾಶವಿಲ್ಲದುದು ಎಂದರೆ ಸ್ವರೂಪ ವಿಕಾರವಿಲ್ಲದುದು ಎಂಬರ್ಥವುಳ್ಳ ನರಶಬ್ದದಿಂದ, ಶೊಲ್ಲಿ - ಹೇಳಿ, ಅದಿನ್ ಸಮೂಹಙ್ಗಳೈ - ಆ ಚೇತನ ಸಮೂಹವನ್ನು, ನಾರಶಬ್ದತ್ತಾಲೇಚೊಲ್ಲಿ - ನಾರಶಬ್ದದಿಂದ ಹೇಳಿ, ಇನ್ನರಸಮೂಹಙ್ಗಳುಕ್ಕು ಅಯನಂ ಎಙ್ಗಿರವಿತ್ತಾಲ್ - ಈ ಚೇತನ ಸಮೂಹಕ್ಕೆ ಆಯನವು ಎಂದು ಹೇಳುವದರಿಂದ, ತ್ರಿವಿಧ ಚೇತನಾಚೇತನ ಸ್ವರೂಪಸ್ಥಿತಿ ಪ್ರವೃತ್ತಿ ಭೇದನಾನವರ್ - ನಿತ್ಯಮುಕ್ತ ಬದ್ಧರೆಂಬ ಮೂರು ವಿಧ ಚೇತನರೇನು, ತ್ರಿಗುಣ ಕಾಲ ಶುದ್ಧಸತ್ವ ಎಂಬ ಮೂರು ವಿಧ ಅಚೇತನಗಳೇನು, ಇವುಗಳ ಸ್ವರೂಪ, ಸ್ಥಿತಿ ಪ್ರವೃತ್ತಿ ಭೇದಗಳನ್ನು ಹೊಂದಿರುವ ಪರಮ ಪುರುಷನು (ಇದು ಶ್ರೀ ಯತಿವರ್ಯರ ವೈಕುಂಠಗದ್ಯೋಕ್ತಿಯು ಮತ್ತು ಶ್ರೀ ಯಾಮುನೇಯರ ಆತ್ಮಸಿದ್ಧಿಯಲ್ಲಿರುವ ಉಕ್ತಿಯು) ನರಶಬ್ದ ವಾಚ್ಯರಾನ - ನರಶಬ್ದದಿಂದ ಹೇಳಲ್ಪಡುವ, ತ್ರಿವಿಧಾತ್ಮಾಕ್ಕಳುಡೈಯ - ನಿತ್ಯಮುಕ್ತ ಬದ್ಧರಾದ ಮೂರು ವಿಧ ಜೀವಾತ್ಮರ ಸಮೂಹಗಳಿಗೆ (೧) ಅಪೇಕ್ಷಿತ ಹೇತುವುಮಾಯ್ - ಅಪೇಕ್ಷಿತವಾಗಿರುವವುಗಳಿಗೆ ಕಾರಣಭೂತವಾಗಿಯೂ, ಸ್ವಯಂಭೋಗ್ಯತೆಯಾಲೇ - ಪರಮ ಪುರುಷನು ದಿವ್ಯ ಮಙ್ಗಳ ವಿಗ್ರಹದ ಲಾವಣ್ಯ, ಕಲ್ಯಾಣಗುಣಾಕರತ್ವ, ವಿಭೂತ್ಯೈಶ್ವರ್ಯಾದಿಗಳ ಮೂಲಕ ತಾನೇ ಪರಮ ಭೋಗ್ಯನಾಗಿರುವದರಿಂದ, (೨) ಉಪೇಯಮುಮಾಯ್ - ಉಪೇಯವಾಗಿಯೂ, ಚೇತನಾ ಚೇತನಗಳೆಲ್ಲಕ್ಕೂ ಶ್ರೀಮನ್ನಾರಾಯಣನೇ ಆಧಾರವೆಂಬುದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ, "ಯಥಾ - ಹೇಗೆ, ಏತತ್ ತ್ರೈಲೋಕ್ಯಂ - ಈ ಮೂರು ಲೋಕದ ವಸ್ತುಗಳೆಲ್ಲವೂ,

---

[೧] ವಿ. ಪು. ೨. ೧೩. ೨  [೨] ಗೀ. ೧೫. ೧೭

**ವ್ಯಯ ಈಶ್ವರಃ ।" ಇತ್ಯಾದಿಗಳಿಲ್ ಪಡಿಯೇ ಆಧಾರಮುಮಾಯಿರುಕ್ಕಿರಪಡಿ ಚೊಲ್ಲಪ್ಪಟ್ಟದು. ಎಙ್ಙನೇ ಎನ್ನಿಲ್? "ಇಣ್ ಗತೌ" ಎಙ್ಗಿರ ಧಾತು**

---

ವಿಷ್ಣ್ವಾಧಾರಂ - ವಿಷ್ಣುವನ್ನೇ ಆಧಾರವಾಗಿವುಳ್ಳದ್ದಾಗಿ, ಸಮವಸ್ಥಿತಮ್ - ಆದರಿಂದ ಸತ್ತೆಯನ್ನು ಹೊಂದಿ ಹೇಗೆ ಇರುತ್ತದೋ, ಇದರ ಉತ್ತರಾರ್ಧವು, **"ಪರಮಾರ್ಥಶ್ಚ ಮೇ ಪ್ರೋಕ್ತೋ ಯಥಾಜ್ಞಾನಂ ಪ್ರಧಾನತಃ"**; ಪೂರ್ವಾರ್ಧದಿಂದ ಚಿದಚಿದಾತ್ಮಕವಾದ ಜಗತ್ತೆಲ್ಲಾ ವಿಷ್ಣ್ವಾತ್ಮಕವಾಗಿ ವಿಷ್ಣುವೇ ಆಧಾರವಾಗಿ ಉಳ್ಳವೆಂಬು ಹೇಳಲ್ಪಟ್ಟಿತು. ಹೇಗೆ ಚಿದಂಶವು ನಿಜಸಿದ್ಧವಾದ ಜ್ಞಾನೈಕಾಕಾರತೆಯಿಂದ ನಾಶ ರಹಿತವಾದುದಾಗಿ ಪರಮಾರ್ಥವೋ, ಹಾಗೆಯೇ ಅದು ಪ್ರಧಾನವಾದುದು ಎಂಬುದು ಉತ್ತರಾರ್ಧಾರ್ಥವು. ಚಿತ್ತು ಅಚಿತ್ತೂ ಎರಡೂ ಪರಮ ಪುರುಷನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಆತನ ಸ್ವತ್ತು. ಇವೆರಡರಲ್ಲಿ **"ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇ । ಪರಾಮ್ ಜೀವಭೂತಾಂ"** (ಗೀ. ೭. ೫) ಎಂಬಲ್ಲೂ, **"ಮಮೈವಾಂಶೋ ಜೀವಲೋಕೇ ಜೀವಭೂತ ಸ್ಸನಾತನಃ"** [ಗೀ. ೧೫. ೭] ಎಂಬಲ್ಲೂ ಹೇಳಿರುವಹಾಗೆ ಅಚಿತ್ತಿಗಿಂತ ಪ್ರಧಾನವಾದುದು ಚಿತ್ತು ಎಂಬ ಭಾವವು. ಮತ್ತು **ಯಃ** - ಯಾವ ಪ್ರಸಿದ್ಧನಾದ ವಿಷ್ಣುವೇ, **ಲೋಕತ್ರಯಂ** - ಈ ಮೂರು ಲೋಕದ ವಸ್ತುಗಳನ್ನೆಲ್ಲಾ, ಅಚಿದ್ಮಿಶ್ರವಾದ ಆ ಮೂರು ವಿಧ ಚಿತ್ತುಗಳನ್ನೆಲ್ಲಾ **ಆವಿಶ್ಯ** - "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ" ಎಂದು ಹೇಳಿರುವ ಹಾಗೆ ವ್ಯಾಪಿಸಿ, **ಅವ್ಯಯಃ** - ನಾಶರಹಿತನಾದ ಎಂದರೆ ಯಾವ ವಿಧವಾದ ವಿಕಾರವೂ ಇಲ್ಲದಿರುವ, **ಈಶ್ವರಃ** - ಸರ್ವವೂ ತನ್ನ ಸ್ವತ್ತಾಗಿ ತನಗೆ ಅಪೃಥಕ್ಸಿದ್ಧ ವಿಶೇಷಣವಾಗಿ, ಆ ಕಾರಣದಿಂದ ಸರ್ವವನ್ನು ನಿಯಮಿಸುವ ಶಕ್ತಿಯುಳ್ಳ ನಾರಾಯಣನು, **ಬಿಭರ್ತಿ** - ಧರಿಸಿರುವನೋ, **"ಯೋ ಲೋಕತ್ರಯ ಮಾವಿಶ್ಯ"** ಎಂಬುದರ ಪೂರ್ವಾರ್ಧವು.—**"ಉತ್ತಮ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ** ಎಂಬುದು, ಈ ಮೇಲೆ ಹೇಳಿದ ಕ್ಷರವೆಂದರೆ ಬದ್ಧರು; ಅಕ್ಷರ ರೆಂದರೆ ನಿತ್ಯರೂ ಮುಕ್ತರೂ, ಹೀಗೆ ಎರಡುವಿಧ ಜೀವಾತ್ಮರುಗಳಿಗಿಂತ ಬೇರೆಯಾಗಿ ಸರ್ವೋತ್ಕೃಷ್ಟ ಪುರುಷನಿದ್ದಾನೆ; ಆತನನ್ನು ಪರಮಾತ್ಮನೆಂದು ಹೇಳುವರು ಎಂಬುದು ತಾತ್ಪರ್ಯವು. **ಇತ್ಯಾದಿಗಳಿಲ್ ಪಡಿಯೇ** - ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವಹಾಗೆ [೩] **ಆಧಾರಮುಮಾಯ್** - ಆಧಾರವಾಗಿಯೂ, **ಇರುಕ್ಕಿರಪಡಿ ಚೊಲ್ಲಪ್ಪಟ್ಟದು** - ಇರುವ ರೀತಿಯು ಹೇಳಲ್ಪಟ್ಟಿತು. ಈ ವಾಕ್ಯ ತಾತ್ಪರ್ಯವು ಇಷ್ಟೇ; - ಮೊದಲು ಧಾತುವ್ಯುತ್ಪತ್ತಿಯ ಮೂಲಕ ನರಃ ಎಂಬ ಶಬ್ದಕ್ಕೆ ಅರ್ಥವನ್ನು ಹೇಳಿದರು; ರೀಙ್ ಕ್ಷಯೇ ಎಂಬ ಧಾತುವಿನ ಮೂಲಕ. ರಃ-

**ವಿಲೇ "ಈಯತೇ ಅನೇನ" ಎನ್ರು ಅಯನ ಶಬ್ದತ್ತಿಲ್ ಕರಣವ್ಯುತ್ಪತ್ತಿಯಾಲೇ ಈಶ್ವರನುಪಾಯಮಾಯುಮ್, "ಈಯತೇ ಅಸೌ" ಎನ್ರು ಕರ್ಮವ್ಯುತ್ಪತ್ತಿಯಾಲ್ ಉಪೇಯಮಾಯುಮ್, "ಈಯತೇ ಅಸ್ಮಿನ್" ಎಙ್ಗಿರ ಅಧಿಕರಣ ವ್ಯುತ್ಪತ್ತಿಯಾಲೇ ಆಧಾರಮಾಯುಮ್, ತೋಱ್ರುಗಿರಾನ್. "ಅಯ ಪಯ ಗತೌ" ಎಙ್ಗಿರ ಧಾತುವಿಲುನ್ ಇನ್ನಯನಪದಮ್ ನಿಷ್ಪನ್ನಮಾನ್.**

---

ಸ್ವರೂಪ ವಿಕಾರರೂಪ ನಾಶವುಳ್ಳ ಜಡಪ್ರಕೃತಿಯಾದ ಅಚೇತನವು ಹೇಳಲ್ಪಟ್ಟಿತು. ಅಂತಹ **ನಾಶವಿಲ್ಲದುದು ನರಃ** ಎಂದರೆ ಚೇತನವೆಂಬರ್ಥವಾಯಿತು. ರೂಢಿಯಲ್ಲಿ ನರಶಬ್ದಕ್ಕೆ ಮನುಷ್ಯನೆಂಬರ್ಥವಾದರೂ **ನರ** ಶಬ್ದವು ವ್ಯುತ್ಪತ್ತಿಮೂಲಕ ಚೇತನ ಸಾಮಾನ್ಯವನ್ನು ಬೋಧಿಸುತ್ತದೆ. **ನಾರ** ಶಬ್ದವು ಅಂತಹ ಚೇತನರ ಸಮೂಹವೆಂಬರ್ಥವನ್ನು ಕೊಡುತ್ತದೆ. ಹೀಗೆ **"ನಾರೋ ನರಾಣಾಂ ಸಂಘಾತಃ"** ಎಂಬ ನಿರ್ವಚನಾರ್ಥವನ್ನು ಉಪಪಾದಿಸಿ ಮುಂದೆ **ಅಯನ** ಶಬ್ದದ ನಿರ್ವಚನವನ್ನು ತಿಳಿಸುತ್ತಾರೆ. **ಇಂತಹ ನಾರಾಣಾಂ ಅಯನಂ ನಾರಾಯಣಃ** ಎಂಬ ವ್ಯುತ್ಪತ್ತಿಯ ಮೂಲಕ ಪರಮ ಪುರುಷನು [೧] ಉಪಾಯವೂ [೨] ಉಪೇಯನೂ, [೩] ಆಧಾರನೂ ಎಂಬ ಮೂರರ್ಥಗಳು ಉಂಟಾಗುತ್ತವೆ ಎಂದು ಹೇಳಿದರು. ಮುಂದಿನ ವಾಕ್ಯದಲ್ಲಿ **ಈ** ಮೂರರ್ಥಗಳೂ ಹೇಗೆ ಉಂಟಾಗುತ್ತವೆ ಎಂಬುದನ್ನು **ಅಯನ** ಶಬ್ದದ ವ್ಯುತ್ಪತ್ತಿಯಿಂದ ತೋರಿಸುತ್ತಾರೆ.—ಅಯನ ಶಬ್ದದಿಂದ ಉಂಟಾಗುವ ಅರ್ಥವನ್ನು ಈ ಮೇಲಿನ ವಾಕ್ಯದಲ್ಲೇ ಶ್ರೀ ಯಾಳವಂದಾರ್ ಯತಿವರ್ಯರ ದಿವ್ಯಸೂಕ್ತಿಗಳನ್ನನುಸರಿಸಿ ತ್ರಿವಿಧ ಚೇತನಾಚೇತನಸ್ವರೂಪಸ್ಥಿತಿಪ್ರವೃತ್ತಿ ಭೇದಗಳನ್ನುಳ್ಳವನಾದುದರಿಂದಲೇ ಉಪಾಯೋಪೇಯಾಧಾರನೆಂದು ಹೇಳಿದರು. ಅದನ್ನೇ ಅಯನ **ಶಬ್ದನಿರ್ವಚನ**ದಿಂದ ಮುಂದೆ ತೋರಿಸುತ್ತಾರೆ.

ಎಙ್ಗನೇಎನ್ನಿಲ್ - ಪರಮ ಪುರುಷನಾದ ನಾರಾಯಣನೇ ಉಪಾಯನು, ಉಪೇಯನು, ಆಧಾರನು ಎಂಬ ಅರ್ಥಗಳು ಹೇಗೆ ಉಂಟಾದವು? ಎಂದರೆ, ಅಯನ ಶಬ್ದ ನಿರ್ವಚನದಿಂದ ತಿಳಿಸುತ್ತಾರೆ.—**"ಇಣ್ ಗತೌ"** ಎಙ್ಗಿರ ಧಾತುವಿಲೇ - ಎಂಬ ಧಾತುವಿನ ಗತೌ ಎಂದರೆ ಪ್ರಾಪ್ತೌ ಎಂಬರ್ಥವುಳ್ಳದ್ದು. [೧] **"ಈಯತೇ ಅನೇನ"** ಎನ್ರು - ಈ ನಾರಾಯಣನಿಂದಲೇ ಪ್ರಾಪ್ಯವನ್ನು ಹೋಗಿ ಸೇರುತ್ತಾನೆ, ಹೊಂದಲ್ಪಡುತ್ತಾನೆ ಎಂಬ, **ಕರಣವ್ಯುತ್ಪತ್ತಿಯಾಲೇ**- ತೃತೀಯಾರ್ಥದಿಂದ ಉಂಟಾಗುವ ವ್ಯುತ್ಪತ್ತಿಯ ಮೂಲಕ, **ಈಶ್ವರನುಪಾಯಮಾಯುಮ್** - ಈಶ್ವರನು ಉಪಾಯನಾಗಿಯೂ [೨] **"ಈಯತೇ ಅಸೌ"** ಈ

**ಸಮಾಸದ್ವಯೇನ ಉಪಾಯೋಪೇಯೋಪಯುಕ್ತ ಕಲ್ಯಾಣಗುಣಾಕರತ್ವ ಪರತ್ವ ವ್ಯಾಪ್ತ್ಯಾದೀನಾಂ ಉಪಪಾದನಮ್.**

ಇವ್ವುಪಾಯತ್ತೋಪೇಯತ್ತ್ವಾದಿಗಳುಕ್ಕುಪಯುಕ್ತಮಾನ ಸೌಲಭ್ಯ

---

ಚೇತನನು ನಾರಾಯಣನನ್ನು ಹೊಂದುತ್ತಾನೆ, ಎನ್ರು ಕರ್ಮವ್ಯುತ್ಪತ್ತಿಯಿಂದ-ಎಂದು ದ್ವಿತೀಯಾವಿಭಕ್ತ್ಯರ್ಥದಿಂದ, ಉಪೇಯ ಮಾಯುಮ್ - ಉಪೇಯವಾಗಿಯೂ[೩]"ಈಯತೇ ಅಸ್ಮಿನ್ ಎಙ್ಗಿರ ಅಧಿಕರಣ ವ್ಯುತ್ಪತ್ತಿಯಾಲೇ - ಈ ವಿಶ್ವವೆಲ್ಲಾ ಈತನಲ್ಲಿ ಹೊಂದಿರುತ್ತವೆ ನೆಲಗೊಂಡಿವೆ ಎಂಬ ಸಪ್ತಮ್ಯನ್ತವ್ಯುತ್ಪತ್ತಿಯಿಂದ, ಆಧಾರಮಾಯುಮ್ ತೋತ್ತುಗಿರಾನ್ ಆಧಾರವಾಗಿಯೂ ತೋರಿಬರುತ್ತಾನೆ. ಹೀಗೆ ಅಯನ ಶಬ್ದದಿಂದ ನಾರಾಯಣನು [೧] ಪ್ರಾಪಕನು [೨] ಪ್ರಾಪ್ಯನು [೩] ಆಧಾರನು ಎಂಬ ಮೂರರ್ಥಗಳು ಏರ್ಪಡುತ್ತವೆಂಬ ತಾತ್ಪರ್ಯವು. ಈ ಅರ್ಥಗಳೆಲ್ಲಾ ಇಣ್ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾದವೆಂದು ಹೇಳಿದರು. ಅಯಪಯಗತೌ ಎಂಬ ಧಾತು ವ್ಯುತ್ಪತ್ತಿಯಿಂದಲೂ ಅಯನ ಶಬ್ದಕ್ಕೆ ಅರ್ಥವನ್ನು ಹೇಳಬಹುದೆಂದು ತಿಳಿಸುತ್ತಾರೆ.—ಅಯತೇ ನಿನ್ಱಾರ್ನಾಱರ್ ಎಂಬ ನಿರ್ವಚನವು ಇಣ್‌ಗತೌ ಎಂಬ ಧಾತುವಿನಮೂಲಕ ಸಾಧ್ಯವಿಲ್ಲದಿದ್ದರೆ, ಈ ಅಯ ಪಯ ಗತೌ ಎಂಬ ಧಾತುವಿನ ಮೂಲಕ ಸಾಧ್ಯವೆಂದು ಹೇಳುತ್ತಾರೆ. ಅಯ ಪಯ ಗತೌ ಎಙ್ಗಿರ ಧಾತು ವಿಲುಮ್ ಎಂಬುವ ಧಾತುವಿನ ಮೂಲಕ ಇವ್ವಯನ ಪದಮ್ - ಈ ಅಯನವೆಂಬ ಪದವು ನಿಷ್ಪನ್ನಮಾಮ್ - ವ್ಯುತ್ಪತ್ತಿಮೂಲಕ ಈ ಅಯನ ಪದದಲ್ಲಿರುವ ಧಾತುವು ಬೇರೆ ಎಂದು ಅಭಿಪ್ರಾಯ ಪಟ್ಟರೂ, ಆಗಲೂ ಅದೇ ಅರ್ಥವೇ ಲಭಿಸುತ್ತದೆಂದು ತಿಳಿಸಿದರು.

**ಈ ಎರಡು ಸಮಾಸಗಳಿಂದಲೂ ಉಪಾಯತ್ವ ಉಪೇಯತ್ವಾದಿಗಳಿಗೆ ಉಪಯುಕ್ತವಾದ ಕಲ್ಯಾಣಗುಣಯೋಗ, ಪರತ್ವ, ವ್ಯಾಪ್ತಿ ಮೊದಲಾದವುಗಳ ಉಪಪಾದನೆಯು.**

---

ಇವ್ವುಪಾಯತ್ತೋಪೇಯತ್ತ್ವಾದಿಗಳುಕ್ಕು - ಪರಮಾತ್ಮನು ಸಿದ್ಧೋಪಾಯನಾಗಿ ಪ್ರಾಪ್ಯನಾಗಿ ಇರುವದೇ ಮೊದಲಾದ ಭಾವಗಳಿಗೆ, ಉಪಯುಕ್ತಮಾನ - ಬೇಕಾದ, ಸೌಲಭ್ಯಮುಮ್ - ಸೌಲಭ್ಯವೂ, ಪರತ್ವವೂ, ಇಙ್ಗೇ-ಈ ನಾರಾಯಣ ಶಬ್ದದ ನಿರ್ವಚನದಲ್ಲಿ ಸಿದ್ಧವು. ಪರಮಾತ್ಮನು ಉಪಾಯವಾಗ್ಯ ಬೇಕಾದರೆ ಆಶ್ರಯಕ್ಕೆ ಉಪಯೋಗವಾದ ಗುಣಗಳಿರಬೇಕೆಂದೂ ಅದರಲ್ಲಿ ಮುಖ

ಮುಮ್ ಪರತ್ವಮುಮ್ ಇಜ್ಜ್ಗೇ ಸಿದ್ಧಮ್. ಅಯನಮೆನ್ರು ವಾಸಸ್ಥಾನ ಮಾಯ್, ಅಪ್ಪೋದು ಬಹುವ್ರೀಹಿ ಸಮಾಸತ್ತಾಲೇ ಅಂತರ್ವ್ಯಾಪ್ತಿಯುಮ್ ತತ್ಪುರುಷನಾಲೇ ಬಹಿರ್ವ್ಯಾಪ್ತಿಯುಮ್ ತೋತ್ತುಗಿರದೆನ್ರು ಮನುಸಂಧಿಪ್ಪಾರ್ಗಳ್. ಇವ್ವೈ ಇರಣ್ಡುಮ್ ಶ್ರುತಿ ಸಿದ್ಧಮ್.

---

ವಾದುದು ಸೌಲಭ್ಯವೆಂದೂ,ಪರತ್ವವೆಂದೂ, ಹೇಳಿದರು. ಈ ಸೌಲಭ್ಯವು ವಾತ್ಸಲ್ಯ ಕೌಶಿಕ್ಯ, ಸೌಶೀಲ್ಯಗಳಿಗೂ ಉಪಲಕ್ಷಣಗಳು. ಇದು ಈಯತೇ ಅನೇನ ಎಂಬ ಕರಣ ವ್ಯುತ್ಪತ್ತಿಯಿಂದ ಹೇಳಿದ ಉಪಾಯತ್ವದಿಂದ ಅರ್ಥವಾಗಿ ತೋರುತ್ತದೆ. ಈ ಗುಣಗಳಿಲ್ಲದಿದ್ದರೆ ಅವನು ಉಪಾಯನಾಗಲು ಅರ್ಹನಲ್ಲವು. ಯಾವಾಗ ಉಪಾಯನೋ, ಅದಕ್ಕೆ ಬೇಕಾದ ಗುಣಗಳು ಇದ್ದೇ ಇರಬೇಕೆಂಬ ಭಾವವು. ಈಯಂತೇ ಅಸ್ಮಿನ್ ಎಂಬ ಅಧಿಕರಣ ವ್ಯುತ್ಪತ್ತಿಯಿಂದ, ಪರತ್ವವೂ ಸಂಪೂರ್ಣ ಕಾಮತ್ವವೂ ತೋರಿಬರುತ್ತವೆ. ಬಹುವ್ರೀಹಿ ಸಮಾಸಾರ್ಥದಿಂದ ಅಂತರ್ವ್ಯಾಪ್ತಿಯ, ತತ್ಪುರುಷಾರ್ಥದಿಂದ ಬಹಿರ್ವ್ಯಾಪ್ತಿಯ, ಅರ್ಥಗಳು, ಅಯನ ಶಬ್ದಕ್ಕೆ ರೂಢ್ಯಾವಾಸಸ್ಥಾನವೆಂದು ಅರ್ಥ ಹೇಳುವದರಿಂದ ತೋರಿಬರುತ್ತವೆಂದು ಉಪದೇಶಿಸುತ್ತಾರೆ.—ಅಯನ ಮೆನ್ರು ವಾಸಸ್ಥಾನಮಾಯ್ - ಅಯನವೆಂಬ ಶಬ್ದವು ವಾಸಸ್ಥಾನವೆಂಬರ್ಥ ವುಳ್ಳದಾದರೆ, ಅಪ್ಪೋದು - ಆಗ, ಬಹುವ್ರೀಹಿ ಸಮಾಸದಿಂದ ಅಂತರ್ವ್ಯಾಪ್ತಿಯೂ, ತತ್ಪುರುಷನಾಲೇ - ತತ್ಪುರುಷ ಸಮಾಸದಿಂದ ಬಹಿರ್ವ್ಯಾಪ್ತಿಯೂ, ತೋತ್ತುಗಿರದೆನ್ರು - ತೋರಿಬರುತ್ತದೆಂದು, ಅನುಸಂಧಿಪ್ಪಾರ್ಗಳ್ - ಕೆಲವರು ಅನುಸಂಧಾನವನ್ನು ಮಾಡುವರು. ಹೇಗೆಂದರೆ ನಾರಶಬ್ದವಾಚ್ಯಗಳನ್ನೆಲ್ಲಾ ವಾಸಸ್ಥಾನವಾಗಿವುಳ್ಳವನೆಂದು ಹೇಳುವದರಿಂದ ಅಂತರ್ವ್ಯಾಪ್ತಿಯೂ, ಪ್ರತಿ ವಸ್ತು ಪೂರ್ಣತ್ವವೂ ಸಿದ್ಧವು. ನಾರಶಬ್ದ ವಾಚ್ಯಗಳಿಗೆ ವಾಸಸ್ಥಾನವಾಗಿರುವನು ಎಂಬ ತತ್ಪುರುಷ ಸಮಾಸದಿಂದ ಅವೆಲ್ಲಾ ಇವನಲ್ಲಿ ಅಡಗಿವೆ ಎಂಬರ್ಥವು ತೋರಿಬರುವದರಿಂದ ಬಹಿರ್ವ್ಯಾಪ್ತಿಯುಂಟೆಂದು ಅನುಸಂಧಾನಮಾಡಬಹುದೆಂಬ ತಾತ್ಪರ್ಯವು.

ಹೀಗೆ ಅಂತರ್ವ್ಯಾಪ್ತಿಯ ಅಭಿಪ್ರಾಯವನ್ನು ಬಹುವ್ರೀಹಿ ಸಮಾಸದಿಂದಲೂ ಬಹಿರ್ವ್ಯಾಪ್ತಿಯ ಅಭಿಪ್ರಾಯವನ್ನು ತತ್ಪುರುಷಾರ್ಥದಿಂದಲೂ ಹೇಳುವದು ಸರಿಯೋ? "ಅಂತರ್ಬಹಿಶ್ಚ" ಎಂದು ಒಂದೇ ವಾಕ್ಯದಿಂದಲೇ ಎರಡು ವ್ಯಾಪ್ತಿಗಳನ್ನೂ ಹೇಳುವದು ನ್ಯಾಯವು. ಹೀಗೆ ಬೇರೆ ಬೇರೆಯಾಗಿ ಉಪಪಾದನೆಯು ಸರಿಯೋ? ಎಂದರೆ ಶ್ರುತಿ ಸಿದ್ಧಾರ್ಥಗಳನ್ನು ಹೀಗೆ ಪ್ರಕಟಿಸುವದು ಸಮಂಜಸವೇ ಎಂದು ಹೇಳುತ್ತಾರೆ.—ಇವ್ವೈ ಇರಣ್ಡುಮ್ ಶ್ರುತಿಸಿದ್ಧಮ್ - ಈ ಅಂತ

**ಅಂತರ್ವ್ಯಾಪ್ತಿ ಯಾವದು? ಇವ್ವೈಯುಳ್ಳ ವಿಡತ್ತಿಲ್ ತನ್ನೈ ಇಲ್ಲೈ ಎನ್ನ ವೊಣ್ಣಾದಪಡಿ ಕಲನ್ದು ನಿರ್ಕೈ. ಬಹಿರ್ವ್ಯಾಪ್ತಿಯಾವದು? ಇವ್ವೈ**

---

ರ್ವ್ಯಾಪ್ತಿ ಬಹಿರ್ವ್ಯಾಪ್ತಿಗಳೆರಡೂ, ಶ್ರುತಿಗಳಿಂದ ಸಿದ್ಧವಾದ ಅಭಿಪ್ರಾಯಗಳು. ಆ ಕಾರಣದಿಂದ ಮೇಲೆ ಹೇಳಿದ ಅನುಸಂಧಾನವು ನ್ಯಾಯವಾದುದೇ. ಶ್ರುತಿಗಳಲ್ಲಿ ಎಲ್ಲಿ ಸಿದ್ಧವೆಂದರೆ—"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ" (ತೈ. ನಾರಾ.) ಎಂಬ ಶ್ರುತಿಸಿದ್ಧವೆಂಬ ಭಾವವು.

ಆದರೆ ಈ ಜೀವಾತ್ಮನು ಅಣುಸ್ವರೂಪನೆಂದೂ, ಅಂತಹ ಅಣುಗಳಲ್ಲಿ ಒಳಗೆ ಪ್ರದೇಶವೇ ಇಲ್ಲದಿರುವಾಗ ಜೀವಾತ್ಮನೇ ಮೊದಲಾದ ಅಣುಗಳಲ್ಲಿ ಭಗವಂತನ ಅಂತರ್ವ್ಯಾಪ್ತಿಯನ್ನು ಹೇಳುವದು ಹೇಗೆ? ಹಾಗೆಯೇ ವಿಭುಪದಾರ್ಥಗಳಾದ ಧರ್ಮಭೂತಜ್ಞಾನ ಮೊದಲಾದವುಗಳು ಎಷ್ಟು ಪ್ರದೇಶವಿದೆಯೋ ಅಷ್ಟು ಪ್ರದೇಶವನ್ನೂ ವ್ಯಾಪಿಸಿ, ಅದಕ್ಕಿಂತ ಬಹಿಃ ಪ್ರದೇಶವೇ ಇಲ್ಲದಿರುವಾಗ ಅಂತವುಗಳ ಬಹಿರ್ವ್ಯಾಪ್ತಿಯನ್ನು ಹೇಳುವದು ಹೇಗೆ? ಎಂಬ ಆಕ್ಷೇಪಗಳು ನ್ಯಾಯವಾದವೇ. ಆ ಆಕ್ಷೇಪಗಳಿಗೆ ಮುಂದೆ ಸಮಾಧಾನ ಹೇಳುತ್ತಾರೆ—ಅಂತರ್ವ್ಯಾಪ್ತಿ ಯಾವುದು? ಪರಮಾತ್ಮನಿಗೆ ಅಂತರ್ವ್ಯಾಪ್ತಿಶಕ್ತಿಯುಂಟೆಂದು ಹೇಳುವದರ ಅಭಿಪ್ರಾಯವೇನು? ಇವ್ವೈಯುಳ್ಳ ವಿಡತ್ತಿಲ್ - ಹಾಗೆ ವ್ಯಾಪಿಸಲ್ಪಟ್ಟ ವಸ್ತುಗಳಿರುವ ಸ್ಥಳದಲ್ಲಿ, ತನ್ನೈ ಇಲ್ಲೈ ಯೆನ್ನ ವೊಣ್ಣಾದಪಡಿ - ಪರಮಾತ್ಮನಾಗಿ ವ್ಯಾಪಿಸಿರುವ ತಾನು ಆ ಸ್ಥಳದಲ್ಲಿ ಎಲ್ಲಿಯೂ ಇಲ್ಲದೇ ಇರುವಹಾಗೆ, ಕಲನ್ದು ನಿರ್ಕೈ – ಅವುಗಳೊಂದಿಗೆ ಸಂಪೂರ್ಣವಾಗಿ ಸೇರಿರೋಣವು. ಪದಾರ್ಥವು ಎಷ್ಟು ಪ್ರದೇಶವನ್ನು ಆಕ್ರಮಿಸಿರುತ್ತದೋ, ಅಷ್ಟು ಪ್ರದೇಶವನ್ನೂ ಈ ಪರಮಾತ್ಮನು ಸಂಪೂರ್ಣವಾಗಿ ವ್ಯಾಪಿಸಿರುತ್ತಾನೆಂಬ ಭಾವವು. ಒಂದು ಗುಂಡು ಕಲ್ಲನ್ನು ಪರಮಾತ್ಮನು ಅಂತಃ ವ್ಯಾಪಿಸಿರುತ್ತಾನೆ ಎಂದರೆ ಆ ಕಲ್ಲಿನ ಮಧ್ಯಭಾಗದಲ್ಲಿ ಎಲ್ಲೋ ಒಂದು ಕಡೆ ಇರುತ್ತಾನೆಂಬ ಭಾವವಲ್ಲವು. ಕಲ್ಲು ಎಷ್ಟು ಪ್ರದೇಶವನ್ನು ಆಕ್ರಮಿಸಿರುತ್ತದೋ ಅಷ್ಟು ಸ್ಥಳವನ್ನೂ ಆಕ್ರಮಿಸಿರುತ್ತಾನೆಂಬ ಭಾವವು. ಆ ಗುಂಡುಕಲ್ಲು ಕಲ್ಲಿನ ಅಣುಗಳಿಂದ ಸೇರಿದೆ ಎಂದು ಭಾವಿಸಿ ಆ ಕಣಗಳ ಮಧ್ಯೆ ಮಾತ್ರ ಇರುತ್ತಾನೆಂಬ ಭಾವವೂ ಅಲ್ಲವು; ಕಲ್ಲಿನ ಕಣಗಳಿರುವ ಸ್ಥಳವನ್ನೂ ಅವುಗಳ ಮಧ್ಯೆ ಇರುವ ಸ್ಥಳವನ್ನೂ ಎಲ್ಲವನ್ನೂ ವ್ಯಾಪಿಸಿರುತ್ತಾನೆಂದು ತಿಳಿಯತಕ್ಕದ್ದು. ವಸ್ತುವು ಆಕ್ರಮಿಸಿರುವ ಪ್ರದೇಶವನ್ನೆಲ್ಲಾ ಸಂಪೂರ್ಣವಾಗಿ ವ್ಯಾಪಿಸೋಣವೆಂದು ಅಂತರ್ವ್ಯಾಪ್ತಿ ಲಕ್ಷಣವನ್ನು ಹೇಳಿರುವದರಿಂದ, ಜೀವಾತ್ಮನೇ ಮೊದಲಾದ ಅಣುಪದಾರ್ಥಗಳ ಅಂತರ್ವ್ಯಾಪ್ತಿಯೂ ವಿವರಿಸಿ

**ಇಲ್ಲಾದ ವಿಡತ್ತಿಲುಮ್ ಎಜ್ಞುಮ್ ತಾನುಳನಾಗ್ಕೈ. ವಿಭುಕ್ಕಳಾನ ಕಾಲಾದಿ ಗಳುಕ್ಕು ಬಹಿರ್ವ್ಯಾಪ್ತಿ ಚೊಲ್ಲವೇಣ್ಡಾ.**

---

ದಂತಾಯಿತು. ಅಣುವು ನಿರವಯುವವಾದ ವಸ್ತು. ಅದರೊಳಗೆ ಪ್ರದೇಶ ವಿಲ್ಲವು. ಆ ಸಂದರ್ಭದಲ್ಲಿ ಅಂತರ್ವ್ಯಾಪ್ತಿ ಎಂದರೇನು ಎಂದರೆ, ಆ ಅಣುವು ಎಷ್ಟು ಪ್ರದೇಶವುಳ್ಳದೋ, ಅಷ್ಟನ್ನೂ ವ್ಯಾಪಿಸುವದೇ ಅಂತರ್ವ್ಯಾಪ್ತಿ ಎಂದು ಹೇಳವದಕ್ಕೂ,ಅದಕ್ಕೆ ಅನುಗುಣವಾಗಿ, ವಸ್ತುವನ್ನು ಸ್ವಲ್ಪವೂ ಬಿಡದೆ ಸಂಪೂರ್ಣ ವಾಗಿ ವ್ಯಾಪಿಸೋಣವೇ ಅಂತರ್ವ್ಯಾಪ್ತಿ ಎಂದು ತಿಳಿಸುವದಕ್ಕಾಗಿಯೂ, ವಸ್ತು ವಿರುವ ಸ್ಥಳದಲ್ಲೆಲ್ಲಾ ಪರಮಾತ್ಮನೂ ಸೇರಿರುವದೇ ಅಂತರ್ವ್ಯಾಪ್ತಿ ಎಂದು ಲಕ್ಷಣವನ್ನು ಹೇಳಿದರು.

ಬಹಿರ್ವ್ಯಾಪ್ತಿಯಾವದು - ಪರಮಾತ್ಮನು ವಸ್ತುವಿನ ಬಹಿಯೂ ವ್ಯಾಪಿ ಸೋಣವೆಂದರೇನು ? ಇವೈ ಇಲ್ಲಾದ ವಿಡತ್ತಿಲುಮ್ ಎಜ್ಞುಮ್ ತಾನುಳ ನಾಗ್ಕೈ - ಶ್ರಿಯಃಪತಿಯಲ್ಲದ ಮಿಕ್ಕ ವಸ್ತುಗಳೆಲ್ಲಾ ಪರಿಚ್ಛಿನ್ನವಾದುದರಿಂದ, ಆ ವಸ್ತುಗಳಿಲ್ಲದ ಎಲ್ಲಾ ಸ್ಥಳದಲ್ಲೂ ಪರಮಾತ್ಮನಾದ ತಾನು ಇರೋಣವು. ಆದರೆ ಕೆಲವು ವಸ್ತುಗಳು ಎಷ್ಟು ಪ್ರದೇಶವಿದೆಯೋ ಅಷ್ಟು ಪ್ರದೇಶವನ್ನೂ ವ್ಯಾಪಿಸುವ ನಿತ್ಯನಾದ ವಸ್ತುಗಳುಂಟು. ಧರ್ಮಭೂತಜ್ಞಾನ, ಕಾಲ ಇವುಗಳು ವಿಭುಪದಾರ್ಥ ಗಳು; ಇವುಗಳಿಲ್ಲದ ಸ್ಥಳಗಳೇ ಇಲ್ಲವಲ್ಲಾ, ಅಂತಹ ಸಂದರ್ಭದಲ್ಲಿ ಬಹಿ ರ್ವ್ಯಾಪ್ತಿ ಎಂದರೇನು ? ಅಂತಹ ವಸ್ತುಗಳನ್ನೂ ಪರಿಪೂರ್ಣವಾಗಿ ವ್ಯಾಪಿ ಸೋಣವೇ ಎಂಬ ಭಾವವು. ।ಹಾಗಾದರೆ "ಇವೈ ಇಲ್ಲಾದವಿಡತ್ತಿಲು ಮೆಜ್ಞುಮ್ ತಾನುಳನಾಗ್ಕೈ" ಎಂದು ಹೇಳಿದ ಲಕ್ಷಣವು ಹೇಗೆ ಸಾಧುವು ? ಎಂದರೆ ಅಂತಹ ವಿಭುಪದಾರ್ಥಗಳಿಗೆ ಬಹಿರ್ವ್ಯಾಪ್ತಿಯನ್ನು- ಹೇಳಬೇಕಾದು ದಿಲ್ಲವೆಂದು ಹೇಳುತ್ತಾರೆ.—ವಿಭುಕ್ಕಳಾನ - ಎಲ್ಲಾ ಪ್ರದೇಶವನ್ನು ವ್ಯಾಪಿಸುವ ಶಕ್ತಿಯಿರುವ ವಸ್ತುಗಳಾದ, **ಕಾಲಾದಿಗಳುಕ್ಕು** – ಕಾಲವೇ ಮೊದಲಾದವು ಗಳಿಗೆ, ಇಲ್ಲಿ ಆದಿಪದದಿಂದ ಆತ್ಮಾವಿನ ಧರ್ಮಭೂತಜ್ಞಾನವು ಹೇಳಲ್ಪಟ್ಟಿತು, ಬಹಿರ್ವ್ಯಾಪ್ತಿ ಚೊಲ್ಲವೇಣ್ಡಾ - ಪರಮಾತ್ಮನಿಂದ ಬಹಿರ್ವ್ಯಾಪ್ತಿಯನ್ನು ಹೇಳ ಬೇಕಾದ ಅವಶ್ಯಕವಿಲ್ಲವು. ಏಕೆಂದರೆ ಅದು ಇಲ್ಲದ ಸ್ಥಳವಿಲ್ಲವಾದುದರಿಂದ ಅದಕ್ಕೆ ಬಹಿಃಪ್ರದೇಶವೇ ಇಲ್ಲವು. ಆದುದರಿಂದ ಇವೈ ಇಲ್ಲಾದ ವಿಡತ್ತಿಲುಮ್ ಎಜ್ಞುಮ್ ತಾನುಳನಾಗ್ಕೈ" ಎಂದು ಬಹಿರ್ವ್ಯಾಪ್ತಿ ಲಕ್ಷಣದ ಅಭಿಪ್ರಾಯ ವೇನೆಂದರೆ ಇವೈಇಲ್ಲಾದ ಇಡಂ ಒಂದುವೇಳೆ ಇದ್ದುದೇಯಾದರೆ, ಎಜ್ಞಂ ತಾನುಳನಾಗ್ಕೈ, ಎಂಬುದು ತಾತ್ಪರ್ಯವು.

ಹಿಂದೆ ಅಣುವು ನಿರವಯು ವಸ್ತುವೆಂದೂ,ಅದರೊಳಗೆ ಪ್ರದೇಶವಿಲ್ಲವೆಂದೂ,

**(೧) "ನಾರಾಯಣಂ ಮಣೀಯಾಂಸ ಮಶೇಷಾಣಾ ಮಣೀಯಸಾಮ್" ಎನ್ರದು ಅಂತರ್ವ್ಯಾಪ್ತಿಕ್ಕು ಅನುಗುಣಮಾಯ್ ನಿರ್ಕರಪ್ರತಿಘಾತಾನರ್ಹತ್ವಂ**

ಅಣುವಿನ ಅಂತರ್ವ್ಯಾಪ್ತಿಎಂದರೆ ಅಣುವನ್ನೆಲ್ಲಾ ಸಂಪೂರ್ಣವಾಗಿ ವ್ಯಾಪಿಸೋಣ ವೆಂದೂ ಹೇಳಲ್ಪಟ್ಟಿತಲ್ಲಾ, ಶ್ರುತಿಗಳಾದರೋ, ಕಠ, ಶ್ವೇತಾಶ್ವತರ, ಮತ್ತು ತೈತ್ತರೀಯಗಳಲ್ಲಿ **ಅಣೋರಣೀಯಾನ್** – ಅಣುವಿಗಿಂತ ಪರಮಾತ್ಮನುಸೂಕ್ಷ್ಮ ತರನಾಗಿರುವನೆಂದು ಹೇಳಿರುವದಕ್ಕೆ ಈ ಅಭಿಪ್ರಾಯವು ವಿರೋಧವಾಗುವದಿ ಲ್ಲವೇ? ಹಾಗೆ ವಿರೋಧವಿಲ್ಲದಿದ್ದರೆ, ಆಶ್ರುತಿಯ ಅರ್ಥವೇನು? ಎಂದರೆ ಆ ಶ್ರುತ್ಯರ್ಥವನ್ನೇ ಉಪಪಾದಿಸುವ ಶ್ರೀ ಪರಾಶರ ವಾಕ್ಯವನ್ನುದಾಹರಿಸಿ, ತಿಳಿಸ ತ್ತಾರೆ. (೧) "**ಅಶೇಷಾಣಾಂ**-ಸಮಸ್ತಗಳಾದ, **ಅಣೀಯಸಾಂ** - ಅಲ್ಪಪ್ರಮಾ ಣಗಳಿಗಿಂತಲೂ, **ಅಣೀಯಾಂಸಂ** - ಅಲ್ಪತರ ಪ್ರಮಾಣಯುಕ್ತನಾಗಿ ಅಂತಹ ವ್ಯಾಪಿಸುವ ಶಕ್ತಿಯುಳ್ಳ, ನಾರಾಯಣಂ - ನಾರಾಯಣನನ್ನು, ಮುಂದೆ "**ಸಮ ಸ್ತಾನಾಂ ಗರಿಷ್ಠಂಚ ಭೂರಾದೀನಾಂ ಗರೀಯಸಾಂ**" ಎಂದು ಇರುತ್ತದೆ. ಇದು "**ಅಣೋರಣೀಯಾನ್ ಮಹತೋಮಹೀಯಾನ್**"(ಕಠ. ೨. ೨೦) ಎಂಬ ಶ್ರುತಿಯ ಉಪಬ್ರಹ್ಮಣವು. ಸೂಕ್ಷ್ಮಪದಾರ್ಥಕ್ಕಿಂತಲೂ ಸೂಕ್ಷ್ಮತರನು, ಸ್ಥೂಲಪದಾರ್ಥಕ್ಕಿಂತ ಸ್ಥೂಲತರನು ಎಂಬರ್ಥವು ; **ಎನ್ರದು** – ಎಂದು ಹೇಳಿರು ವದು, **ಅಂತರ್ವ್ಯಾಪ್ತಿಕ್ಕು ಅನುಗುಣಮಾನ** - ಅಂತಹ ಸೂಕ್ಷ್ಮವಸ್ತುವಿನ ಅಂತರ್ವ್ಯಾಪ್ತಿಗೆ ಅನುಗುಣವಾದ ಎಂದರೆ ಆ ವಸ್ತುವನ್ನು ಸಂಪೂರ್ಣವಾಗಿ ಸ್ವಲ್ಪವೂ ಬಿಡದೆ ವ್ಯಾಪಿಸುವದಕ್ಕೆ ಯೋಗ್ಯವಾದ, **ಪ್ರತಿಘಾತಾನರ್ಹತ್ವಂ** - ಏನೊಂದು ತಡೆಯೂ ಇಲ್ಲದೆಇರುವಹಾಗೆ ಪ್ರವೇಶಿಸಿ ವ್ಯಾಪಿಸುವ ಸಾಮರ್ಥ್ಯವು. ಒಂದು ವಸ್ತುವು ಇನ್ನೊಂದನ್ನುಪ್ರವೇಶಿಸಿದರೆ,ಈವಸ್ತುವಿನ ಅಲ್ಪಭಾಗವು ಹೊರಗೆ ಬರಬೇಕಾಗುತ್ತದೆ. ಹೇಗೆಂದರೆ ಒಂದುಬಟ್ಟಲು ತುಂಬಾ ನೀರನ್ನುತುಂಬಿ,ಅದರಲ್ಲಿ ಒಂದು ಕಲ್ಲನ್ನು ಹಾಕಿದರೆ, ಕಲ್ಲಿನಗಾತ್ರದಷ್ಟು ನೀರು ಹೊರಗೆ ಬೀಳುತ್ತದೆ. ಪರ ಮಾತ್ಮನ ಅಂತಃ ಪ್ರವೇಶದಿಂದ ವಸ್ತುಗಳ ಸ್ವಲ್ಪಭಾಗವೂ ಹೊರಗೆ ಬೀಳುವದಿಲ್ಲವು. ಏಕೆಂದರೆ ಆ ಪದಾರ್ಥಕ್ಕೆಲ್ಲಾ ಸಂಪೂರ್ಣವಾಗಿ ಸ್ವಾಮಿಯು ಅಂತರ್ಯಾಮಿಯು. **ಅಣೋರಣೀಯಾನ್** ಎಂಬಲ್ಲಿಯೂ ಮತ್ತು ಈ ಶ್ಲೋಕದಲ್ಲೂ ಅಣು ಶಬ್ದವು ಗೌಣಾರ್ಥವುಳ್ಳದ್ದು. ವಸ್ತುವು ಸೂಕ್ಷ್ಮವಾದರೆ, ಪರಮಾತ್ಮನು ಸೂಕ್ಷ್ಮತರನಾಗಿ, ಪ್ರವೇಶಿಸುವನೆಂಬರ್ಥವು. ಶಾಸ್ತ್ರಗಳಲ್ಲಿ ಹೇಳಿರುವ ಅಂತಃಪ್ರದೇಶ ರಹಿತವಾದ ಅಣುವಲ್ಲವು. "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬುದರ

(೧) ವಿ. ಪು. ೧೯. ೪೧.

ಅಲ್ಲದು ಅಣುಪರಿಮಾಣತ್ವಮನ್ರು. ಇದು ಚೊಲ್ಲುಮಿಡಮ್ ಉಪಾಧ್ಯವ ಚ್ಛೇದತ್ತಾಲೇ ಎನ್ರು ಸೂತ್ರಭಾಷ್ಯಾದಿ ಸಿದ್ಧಮ್. ವ್ಯಾಪ್ತನುಕ್ಕು ಪ್ರತಿ

ಅರ್ಥವೇ ಶ್ರುತಿಯಲ್ಲೇಉಪಪಾದಿತವು. ಹೇಗೆಂದರೆ "ಏಷಮಆತ್ಮಾಂತರ್ಹೃದಯೇ ಅಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ ಶ್ಯಾಮಾಕಾದ್ವಾ ಶ್ಯಾಮಾಕ ತಂಡುಲಾದ್ವೈಷಮ ಆತ್ಮಾಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾ ಜ್ಯಾಯಾನ್ ಅಂತರಿಕ್ಷಾಜ್ಜ್ಯಾಯಾನ್ ದಿವೋಜ್ಯಾಯಾನೇಭ್ಯೋಲೋಕೇಭ್ಯಃ" (ಛಾಂ. ೩.೧೪.೩) ಉಪಾಸಕನ ಅನುಗ್ರಹಾರ್ಥವಾಗಿ ಹೃದಯಾಂತರ್ವರ್ತಿಯಾಗಿ ತುಂಬಾ ಸೂಕ್ಷ್ಮನಾಗಿರುತ್ತಾನೆ, ಭತ್ತ ಗೋಧಿ ಮೊದಲಾದ ಸೂಕ್ಷ್ಮಪದಾರ್ಥ ಗಳಿಗಿಂತ ಸೂಕ್ಷ್ಮತರನು. ಹೀಗೆ ಸೂಕ್ಷ್ಮವಾಗಿ ಹೃದಯದಲ್ಲಿದ್ದರೂ ಬೃಹತ್ತಾದ ಪದಾರ್ಥಗಳಿಗೂ ಬೃಹತ್ತಾದವನು; ಪೃಥಿವಿಗೂ ದೊಡ್ಡವನು, ಅದಕ್ಕೂ ದೊಡ್ಡದಾದ ಅಂತರಿಕ್ಷಕ್ಕೂ ದೊಡ್ಡವನು; ಅದಕ್ಕೂ ದೊಡ್ಡದಾದ ನಿತ್ಯವಿಭೂತಿಗಿಂತ ದೊಡ್ಡವನು; ಅದಕ್ಕಿಂತ ಹಾಗೆಯೇ ಈ ಎಲ್ಲಾ ಲೋಕಗಳಿಗಿಂತಲೂ ದೊಡ್ಡವನೆಂದು ಪರಮಾತ್ಮನ ಅಂತರ್ವ್ಯಾಪ್ತಿ ಬಹಿರ್ವ್ಯಾಪ್ತಿಗಳ ಹೇಳಲ್ಪಟ್ಟವು.

ಆದುದರಿಂದ, ಇದು ಕೊಲ್ಲುಮಿಡುವ್ - ಹೀಗೆ ಪರಮಾತ್ಮನು ಅಣೀಯಾನ್ ಎಂದು ಹೇಳುವ ಪ್ರಮಾಣದಲ್ಲಿ, ಉಪಾಧ್ಯವಚ್ಛೇದತ್ತಾಲೇ - ವಸ್ತುವು ಬಹು ಸೂಕ್ಷ್ಮವಾದ ಪರಿಮಾಣವುಳ್ಳ ಉಪಾಧಿ ಬಲದಿಂದ ಎಂಬುದು ಸೂತ್ರಭಾಷ್ಯಾದಿ ಸಿದ್ಧಮ್ – "ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ. (೧.೨.೭) ಏಷಮ ಆತ್ಮಾಂತರ್ಹೃದಯೇ ಎಂಬ ಛಾಂದೋಗ್ಯ ಶ್ರುತಿಯಲ್ಲಿ ಹೇಳಿರುವವನು ಜೀವಾತ್ಮನೋ ಪರಮಾತ್ಮನೋ ಎಂಬ ಸಂದೇಹದಲ್ಲಿ, ಅಣುಪರಿಮಾಣನು ಎಂದು ಅರ್ಭಕೌಕಸ್ತ್ವವು – ಅಲ್ಪ ಪರಿಮಾಣನೆಂದು ಹೇಳಿರುವದರಿಂದ ಜೀವಾತ್ಮನೇ, ಪರಮಾತ್ಮನಲ್ಲವು ಎಂದು ಪೂರ್ವಪಕ್ಷ ತಂದರೆ; ಇದು ನೇತಿಚೇತ್ ಎಂಬುದರ ಅರ್ಥವು, ನ - ಹಾಗಲ್ಲವು ಏಕೆಂದರೆ ಮುಂದೆ ಅದೇ ವಾಕ್ಯದಲ್ಲೇ ವ್ಯೋಮವತ್ - ನಿತ್ಯ ವಿಭೂತಿಯು ಹಾಗೆ ನಿರತಿಶಯ ಬೃಹತ್ವವೂ ಹೇಳಿರುವದರಿಂದ ಪರಮಾತ್ಮನೇ ವಿನಾ ಜೀವಾತ್ಮನಲ್ಲವು. ಹಾಗಾದರೆ ಅಲ್ಪ ಪರಿಮಾಣತ್ವವನ್ನು ಹೇಳಿದುದು ಏಕೆ? ಎಂದರೆ ನಿಚಾಯ್ಯತ್ವಾದೇವಂ – ಹಾಗೆ ಹೇಳಿದುದು ಉಪಾಸಕನಿಗೆ ಉಪಾಸ್ಯನಾಗಿದ್ದಾನೆಂಬ ಕಾರಣದಿಂದ ಹಾಗೆ ಹೇಳಿದುದು ಎಂಬುದು ಈ ಸೂತ್ರಾರ್ಥವು. ಆದುದರಿಂದ ಅಣೀಯಾನ್ ಎಂಬ ಶಬ್ದವು ಸೂಕ್ಷ್ಮತರತ್ವವೆಂಬ ಲಾಕ್ಷಣಿಕಾರ್ಥವನ್ನು ಸೂಚಿಸುತ್ತದೆಂಬ ಭಾವವು. ಆ ಕಾರಣದಿಂದಲೇ ಅಣುವಿಗೆ ಅಂತರ್ವ್ಯಾಪ್ತಿಯನ್ನು ಒಳಗೆ ಪ್ರದೇಶಾಭಾವದಿಂದ ಹೇಳಬೇಡವೆಂಬ

ವಸ್ತು ಪೂರ್ಣತ್ವಮಾವದು ? ಓರೋರು ಉಪಾಧ್ಯವಚ್ಛಿನ್ನ ಪ್ರದೇಶಮೋ ಸರ್ವತ್ತೈಯುಮ್ ನಿರ್ವಹಿಕ್ಕವಲ್ಲ ಶಕ್ತಿಯುಡೈತ್ತಾ ಯಿರುಕ್ಕೈ. ಅಲ್ಲದು ವಸ್ತುತೋರುಮ್ ಸ್ವರೂಪಸಮಾಪ್ತಿಯನ್ರು. ಇದು ಕೊಳ್ಳಿಲ್ ಬಹಿರ್ವ್ಯಾ

---

ಭಾವದಿಂದ ಅಣುವಿನ ಪೂರ್ಣತ್ವವೇ ಅಂತರ್ವ್ಯಾಪ್ತಿ ಎಂದು, ಹೇಳಲ್ಪಟ್ಟಿತೇ. ಅದರ ಸರಿಯಾದ ಅಭಿಪ್ರಾಯವೇನೆಂಬುದನ್ನು "ವ್ಯಾಪ್ತನುಕ್ಕು" ಎಂದಾರಂಭಿಸುವ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ವ್ಯಾಪ್ತನುಕ್ಕು** - ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ ಎಂಬ ಶ್ರುತಿಯಲ್ಲಿ ಹೇಳಿರುವ ಸರ್ವವಸ್ತುಗಳನ್ನು **ವಸ್ತುಪೂರ್ಣತ್ವಮಾವದು** ? ವಸ್ತುವನ್ನು ಸಂಪೂರ್ಣವಾಗಿ ವ್ಯಾಪಿಸುವದು ಎಂದರೇನು? ವ್ಯಾಪಿಸುವವನಿಗೆ,**ಓರೋರು ಉಪಾಧ್ಯವಚ್ಛಿನ್ನ ಪ್ರದೇಶಮೋ ಸರ್ವತ್ತೈಯುಮ್**-ಪ್ರತಿಯೊಂದು ವಸ್ತುವನ್ನು ಆಕ್ರಮಿಸಿ ಹೀಗೆ ಉಪಾಧಿಯಿಂದ ಪರಿಮಿತವಾದ ಪ್ರದೇಶಗಳೆಲ್ಲವನ್ನೂ ನಿರ್ವಹಿಕ್ಕವಲ್ಲ–ಸಂಪೂರ್ಣವಾಗಿ ವ್ಯಾಪಿಸಿ, ತನ್ಮೂಲಕ ನಿರ್ವಹಿಸುವ, **ಶಕ್ತಿಯುಡೈತ್ತಾಯಿರುಕ್ಕೈ** - ಶಕ್ತಿಯನ್ನು ಹೊಂದಿರೋಣವು. ಅವುಗಳ ಒಳಗೂ ಹೊರಗೊ ಸಹ ಸಂಪೂರ್ಣವಾಗಿ ವ್ಯಾಪಿಸುವ ಶಕ್ತಿಯನ್ನು ಹೊಂದಿರೋಣವು. ಒಳಗೆ ಪ್ರವೇಶಿಸುವ ಶಕ್ತಿಯುಂಟೆಂದರೆ ಸಂಪೂರ್ಣವಾಗಿ ಪ್ರತಿವಸ್ತು ಪೂರ್ಣತ್ವವಿಲ್ಲದೆ ಹೋಗುತ್ತದಲ್ಲವೇ ಎಂವರೆ ಹಾಗಲ್ಲವು ; ವಸ್ತುವು ಎಷ್ಟಿದೆಯೋ ಅಷ್ಟನ್ನೂ ವ್ಯಾಪಿಸುವನೆಂದು ಹೇಳಿದರು. ವಸ್ತುವಿನ ಪ್ರದೇಶವೆಷ್ಟಿದೆಯೋ ಅಷ್ಟೇ ಪರಮಾತ್ಮನು ವ್ಯಾಪಿಸಿರುವದು ಎಂದರೆ ಬಹಿರ್ವ್ಯಾಪ್ತಿಯನ್ನು ಹೇಳಿದ ಹಾಗೆ ಆಗುವದಿಲ್ಲವು. ಬಹಿರ್ವ್ಯಾಪ್ತಿಯೂ ಉಂಟಾಗುವ ಹಾಗೆ ಸಂಪೂರ್ಣವಾಗಿ ವ್ಯಾಪಿಸಿದ್ದಾನೆಂದರೆ, ಅಂತರ್ವ್ಯಾಪ್ತಿಗೆ ಸಂಕೋಚ ಉಂಟಾಗುತ್ತದೆ. ಆದುದರಿಂದಲೇ ಅಂತರ್ಬಹಿಶ್ಚ ತತ್ಸರ್ವಂ ಎಂದು ಶ್ರುತಿಯು ವ್ಯಕ್ತಪಡಿಸಿತು. ಆದುದರಿಂದ ಈ ಜಗದ್ವಸ್ತುಗಳ ವ್ಯಾಪ್ತಿಯನ್ನು ಹೇಳುವಾಗ ವಸ್ತುವು ಆಕ್ರಮಿಸಿರುವ ಪ್ರದೇಶ ಮಾತ್ರ ವ್ಯಾಪ್ತಿಯನ್ನು ಹೇಳತಕ್ಕದ್ದಲ್ಲವೆಂದು ಮುಂದೆ ಉಪದೇಶಿಸುತ್ತಾರೆ.—**ಅಲ್ಲದು ವಸ್ತುತೋರುಮ್** – ಮೇಲೆ ಹೇಳಿದ ಹಾಗೆ ಅಭಿಪ್ರಾಯವಲ್ಲದೆ, **ವಸ್ತುತೋರುಮ್** - ವಸ್ತುವು ಎಷ್ಟಿದೆಯೋ ಅಷ್ಟು ಮಾತ್ರವೇ ವ್ಯಾಪ್ತಿ ಎಂಬುದೇ **ಸ್ವರೂಪಸಮಾಪ್ತಿಯನ್ರು**–ಎಲ್ಲವನ್ನೂ ಮಾತ್ರವ್ಯಾಪಿಸಿರುವ ಭಗವತ್ಸ್ವರೂಪವಲ್ಲವು. ಪ್ರತಿವಸ್ತುಪೂರ್ಣತ್ವಕ್ಕೆ ಅಭಿಪ್ರಾಯವು ವಸ್ತುವಿನ ಪ್ರದೇಶವನ್ನು ಪೂರ್ಣವಾಗಿ ವ್ಯಾಪಿಸಿರೋಣವೆಂಬರ್ಥವಲ್ಲವು ಎಂಬ ಭಾವವು. ಹಾಗೆ ಹೇಳಿದರೆ ವಿರೋಧವೇನು ? ಎಂದರೆ— **ಇದುಕೊಳ್ಳಿಲ್** - ಹೀಗೆ ಅಭಿಪ್ರಾಯಪಟ್ಟರೆ, **ಬಹಿರ್ವ್ಯಾಪ್ತಿಕ್ಕು ವಿರುದ್ಧಮಾಮ್** - ವಸ್ತುಗಳ ಬಹಿಃ ಇರುವ ಪ್ರದೇಶದಲ್ಲಿ ಭಗವದ್ವ್ಯಾಪ್ತಿ

ಪ್ತಿಕ್ಕು ವಿರುದ್ಧವಾಮ್. ಇತ್ತೈ ಅಘಟಿತ ಘಟನಾಶಕ್ತಿಯಾಲೆ ನಿರ್ವಹಿಕ್ಕಿಲ್ ವಿರುದ್ಧ ಸಮುಚ್ಚಯಮ್ ಕೊಳ್ಳುಮ್ ಪರಮತಙ್ಗಳಿನ್ಪಡಿಯಾಮ್.

---

ಯಿಲ್ಲದೆ ಹೋಗುವದರಿಂದ ಶಾಸ್ತ್ರವಿರುದ್ಧವಾಗುತ್ತದೆ. ಏತಕ್ಕೆ ಶಾಸ್ತ್ರವಿರುದ್ಧವು? ಸರ್ವೇಶ್ವರನಿಗೆ ಅಘಟಿತಘಟನಾರೂಪಶಕ್ತಿಯುಂಟೆಂದು ಒಪ್ಪುವದರಿಂದ ತನ್ಮೂಲಕ ವ್ಯಾಪ್ತಿಯುಂಟೆಂದು ಹೇಳಬಹುದಲ್ಲಾ ಎಂದರೆ, ಆಗ ಉಂಟಾಗುವ ವಿರೋಧವನ್ನು ತೋರ್ಪಡಿಸುತ್ತಾರೆ. **ಇತ್ತೈ** - ಕೆಲವು ಭಾಗದ ವ್ಯಾಪ್ತಿಯು ಬಿಟ್ಟುಹೋಗುವದನ್ನು ಪರಮಾತ್ಮನ **ಅಘಟಿತ ಘಟನಾಶಕ್ತಿಯಿಂದ, ನಿರ್ವಹಿಕ್ಕಿಲ್** - ಸರ್ವವ್ಯಾಪ್ತಿಯುಂಟೆಂದು ಸಾಧಿಸುತ್ತೇವೆ ಎಂದರೆ, **ವಿರುದ್ಧ ಸಮುಚ್ಚಯಮ್** - ಸಮಸ್ತ ಪರಸ್ಪರ ವಿರುದ್ಧಭಾವಗಳನ್ನು ಸೇರಿಸಿ ಹೇಳುವ, **ಪರಮತಙ್ಗಳಿನ್ಪಡಿಯಾಮ್** - ಜೈನ, ಭಾಸ್ಕರ, ಯಾದವ ಪ್ರಕಾಶಾದಿ ಇತರ ಮತಗಳ ಹಾಗಾಗುತ್ತದೆ. ಅಸ್ತಿನಾಸ್ತಿ ಎಂದೂ ಭೇದಾಭೇದ ಉಂಟೆಂದೂ, ಸಗುಣನೆಂದೂ ನಿರ್ಗುಣನೆಂದೂ, ಉಪಾಧಿ ಗೃಹೀತನೆಂದೂ ಉಪಾಧಿರಹಿತನೆಂದೂ ಹೇಳುವ ಅಭಿಪ್ರಾಯಗಳ ಹಾಗಾಗುತ್ತದೆಂಬ ಭಾವವು. ಅದು ಹೇಗೆ? ಎಂದರೆ ಪ್ರತಿ ವಸ್ತುವು ಎಷ್ಟು ಪರಿಮಾಣವುಳ್ಳದೋ ಅಷ್ಟನ್ನು ಮಾತ್ರ ಸಂಪೂರ್ಣವಾಗಿ ವ್ಯಾಪಿಸುವ ಶಕ್ತಿಯುಂಟೆಂದು ಹೇಳುವದೂ, ಅಘಟಿತಘಟನಾಶಕ್ತಿಯಿಂದ ಮಿಕ್ಕ ಪ್ರದೇಶದ ವ್ಯಾಪ್ತಿಯುಂಟೆಂದು ಹೇಳುವದೂ ಪರಸ್ಪರ ವಿರುದ್ಧವಾದ ಅಭಿಪ್ರಾಯವೆಂಬುದು ತಾತ್ಪರ್ಯವು. ಆದುದರಿಂದ "ತೇನೇದಂ ಪೂರ್ಣಂ ಪುರುಷೇಣ ಸರ್ವಂ" (ಶ್ವೇ. ೩.೯) ಈ ಸಮಸ್ತವೂ ಪರಮ ಪುರುಷನಿಂದ ಸಂಪೂರ್ಣವಾಗಿ ವ್ಯಾಪಿಸಲ್ಪಟ್ಟಿರುತ್ತದೆ, "ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಪಿವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ" (ಪು. ಸೂ.) "ನಿತ್ಯಂವಿಭುಂ ಸರ್ವಗತಂ ಸುಸೂಕ್ಷ್ಮಂ" (ಮುಂ. ೧೬.೬) ಈ ಪ್ರಮಾಣಗಳೆಲ್ಲಾ ಪ್ರತಿವಸ್ತು ಪೂರ್ಣತ್ವ ಮಾತ್ರವೂ ಅಲ್ಲದೆ ಸರ್ವ ಬಹಿಃಪ್ರದೇಶವ್ಯಾಪ್ತಿಯನ್ನೂ ಬೋಧಿಸುತ್ತವೆ ಎಂದು ಭಾವಿಸತಕ್ಕದ್ದಾಗಿರುತ್ತದೆ.

### ಅಕಾರ, ನರ, ಅಯನ ಪದಗಳಿಂದ ಭಗವಂತನನ್ನು ಹೇಳುವದರಲ್ಲಿ ಪ್ರಯೋಜನವನ್ನು ಹೇಳುತ್ತಾರೆ.

---

ಹಿಂದೆ ಮೂಲಮಂತ್ರದ ಉಪಪಾದನೆಯಲ್ಲಿ ಅಕಾರವೂ, ನಾರಶಬ್ದದಲ್ಲಿರುವ ನರ ವೆಂಬ ಪದವೂ, ಅಯನ ಶಬ್ದವೂ ಸಹ ಭಗವಂತನನ್ನು ಹೇಳುತ್ತವೆ ಎಂದು ಉಪದೇಶಿಸಲ್ಪಟ್ಟಿತು. ಅಕಾರದ ಒಂದರಿಂದ ಭಗವಂತನನ್ನು ಹೇಳಿದರೆ ಸಾಲದೇ? ಇನ್ನೆರಡು ಭಗವದ್ವಾಚಕ ಪದಗಳು ವ್ಯರ್ಥವಲ್ಲವೋ? ಪೌನರುಕ್ತ್ಯವು ದೋಷಾ

**ಆಕಾರ ನಾರಾಯಣ ಶಬ್ದಾನಾಂ ಭಗವತ್ಪ್ರತಿಪಾದನೇ ಪ್ರಯೋಜನಮಾಹ.**

**ಇಪ್ಪ ಪ್ರಥಮಾಕ್ಷರತ್ತಾಲುಮ್, ನಾರಶಬ್ದತ್ತಿಲ್ ಪ್ರಕೃತಿಯಾನ ನರ ಶಬ್ದತ್ತಾಲುಮ್, ಅಯನಶಬ್ದತ್ತಾಲುಮ್, ಸರ್ವೇಶ್ವರನೈ ಚ್ಚೊಲ್ಲುಗಿರ್ಪೋದು, ರಕ್ಷಕತ್ವ, ಕಾರಣತ್ವ, ನಿತತ್ವ, ನೇತೃತ್ವ (ಆಧಾರತ್ವಾಂತರ್ಯಾಮಿತ್ವ) ಉಪಾಯತ್ವ. ಉಪೇಯತ್ವಾದಿಗಳಾನ ಆಕಾರಭೇದಙ್ಗಳಾಲೇ ಮೂನ್ರುಮ್ ಸಪ್ರಯೋಜನಙ್ಗಳ್.**

---

ವಹನಲ್ಲವೋ? ಎಂದರೆ ಈ ಭಗವದ್ವಾಚಕ ಶಬ್ದಗಳು ಪರಮಾತ್ಮನ ಬೇರೆ ಬೇರೆ ಆಕಾರಗಳನ್ನು ಪ್ರದರ್ಶಿಸುವದರಿಂದ ಸಪ್ರಯೋಜನವಾದ ಶಬ್ದಗಳಾದುದರಿಂದ ವೈಯರ್ಥ್ಯವೂ ಇಲ್ಲವು, ಪೌನರುಕ್ತ್ಯವೂ ಇಲ್ಲವು; ಆಕಾರವು ರಕ್ಷಕತ್ವ ಕಾರಣತ್ವ ಶ್ರಿಯಃಪತಿತ್ವ ಶೇಷತ್ವಗಳನ್ನೂ, ನರಶಬ್ದವು ನಿತ್ಯತ್ವನೇತೃತ್ವವನ್ನೂ, ಅಯನಶಬ್ದವೂ ಉಪಾಯತ್ವ ಉಪೇಯತ್ವಗಳನ್ನೂ ಬೋಧಿಸುತ್ತವೆ ಎಂದು ತಿಳಿಸುತ್ತಾರೆ.—ಇಪ್ಪ-ಈ ಮೂಲಮಂತ್ರದಲ್ಲಿ ಅಥವಾ ಅದರ ಅರ್ಥೋಪನ್ಯಾಸದಲ್ಲಿ, **ಪ್ರಥಮಾಕ್ಷರತ್ತಾಲುಮ್** – **ಆಕಾರದಿಂದಲೂ,** **ನಾರಶಬ್ದತ್ತಿಲ್ ಪ್ರಕೃತಿಯಾನ ನರಶಬ್ದತ್ತಾಲುಮ್**–ನಾರ ಎಂಬ ಶಬ್ದದಲ್ಲಿ ಮೂಲಪದವಾದ ನರ ಎಂಬ ಪದದಿಂದಲೂ, **ಅಯನಶಬ್ದತ್ತಾಲುಮ್**-ಅಯನಶಬ್ದದಿಂದಲೂಸಹ, **ಸರ್ವೇಶ್ವರನೈ ಚ್ಚೊಲ್ಲುಗಿರ್ಪೋದು** ಸರ್ವೇಶ್ವರನನ್ನು ಬೋಧಿಸುವಾಗ, **ರಕ್ಷಕತ್ವ ಕಾರಣತ್ವ** - ಆಕಾರದಿಂದ ಆತನ ರಕ್ಷಕತ್ವ ಮತ್ತು ಜಗತ್ಕಾರಣತ್ವ, ನರಶಬ್ದದಿಂದ, **ನಿತ್ಯತ್ವ ನೇತೃತ್ವ**-ಆತನ ನಿತ್ಯತ್ವವನ್ನೂ ಎಲ್ಲವನ್ನೂ ನಿಯಮಿಸುವ ಶಕ್ತಿಯನ್ನೂ, **ಉಪಾಯತ್ವ ಉಪೇಯತ್ವ** - ಅಯನ ಶಬ್ದದಿಂದ ಜೀವಕೋಟಿಗೆ ಉಪಾಯನಾಗಿಯೂ ಉಪೇಯನಾಗಿಯೂ ಇರುವಿಕೆಯನ್ನೂ, (**ಆಧಾರತ್ವ ಅಂತರ್ಯಾಮಿತ್ವ,** ಇವುಗಳೂ ಸಹ ಅಯನ ಶಬ್ದದಿಂದಲೇ ಬೋಧಿತವು, **ಆದಿಗಳಾನ** - ಇವೇ ಮೊದಲಾದ, ಇದರಿಂದ ಕೆಲವು ವಿಶೇಷಣಗಳು ಹೇಳದೇ ಬಿಟ್ಟುಹೋಗಿವೆ ಎಂಬ ಭಾವವು. ಆಕಾರದಿಂದ ಸರ್ವಶಬ್ದವಾಚ್ಯತ್ವ ಶ್ರಿಯಃಪತಿತ್ವ, ಅಯನ ಶಬ್ದದಿಂದ ಸೌಲಭ್ಯತ್ವ, ಪರತ್ವ, ಮೊದಲಾದವುಗಳು ಆದಿಪದದಿಂದ ಸೂಚಿತವು, ಇಂತಹ **ಆಕಾರಭೇದಙ್ಗಳಾಲೇ** - ವಿಶೇಷಣ ಭೇದಗಳನ್ನು ಬೋಧಿಸುವದರಿಂದ, **ಮೂನ್ರುಮ್**- ಆಕಾರ ನರ ಅಯನ ಶಬ್ದಗಳೂ, **ಸಪ್ರಯೋಜನಙ್ಗಳ್** - ಪ್ರಯೋಜನದಿಂದ ಕೂಡಿದವು,ನಿರರ್ಥಕವಾದುವಲ್ಲವು. ಪುನರುಕ್ತಿದೋಷವುಳ್ಳವು ಅಲ್ಲವೆಂಬಭಾವವು. ಅವರಕ್ಷಣೇ ಎಂಬ ಧಾತುವಿನಮೂಲಕ ರಕ್ಷಕತ್ವವು ಹೇಳಲ್ಪಟ್ಟಿತು. ಕಾರಣತ್ವವು ಸಮಸ್ತ ಶಬ್ದಮೂಲತ್ವದಿಂದ ಸೂಚಿತವು. ಹಿಂದೆ ಆಕಾರಕ್ಕೆ ನಾಲ್ಕು

## ೩೫. ಮಕಾರನಾರಪದಯೋಃ ಜೀವಪ್ರತಿಪಾದನೇ ಪ್ರಯೋಜನವಾದಃ.

ಪ್ರಣವತ್ತಿಲ್ ತೃತೀಯಾಕ್ಷರತ್ತಾಲೇ ಚೇತನನೈಪ್ರಕಾಶಿಪ್ಪಿಕ್ಕಚ್ಚೆಯ್‌ದೇ ಇಙ್ಗು ನಾರಶಬ್ದತ್ತಾಲೇ ಮೀಣ್ಡುಮ್ ಚೊಲ್ಲುವಾನೇ ನೆನ್ನಿಲ್ (೧) "ನಾನು

---

ಅರ್ಥಗಳು ಉಪಪಾದಿಸಲ್ಪಟ್ಟವು. ಹೇಗೆಂದರೆ "ಏವಮಕ್ಷರರೂಪೇಣ ಕಾರಣತ್ವ ಮಿಹೋದಿತಮ್ । ರಕ್ಷಕತ್ವಂಚ ಧಾತ್ವರ್ಥತ್ವಾತ್ ಶೇಷಿತ್ವಂ ಪದರೂಪತಃ । ಶ್ರೀಶತ್ವಂ ವಾಚ್ಯಗತ್ಯಾಚ ಯುಜ್ಯತೇ ಪರಮಾತ್ಮನಃ" ಎಂದಿರುತ್ತದೆ. ಹಾಗೆಯೇ ಅಯನ ಶಬ್ದದಲ್ಲಿರುವ ಧಾತು ವ್ಯುತ್ಪತ್ತಿಯಿಂದ ತತ್ಪುರುಷ ಸಮಾಸದಿಂದ ಪ್ರಾಪಕನು, ಪ್ರಾಪ್ಯನು, ಗತಿಯು ಎಂಬರ್ಥಗಳೂ ಬಹುವ್ರೀಹಿಯಿಂದ ಅಂತರ್ಯಾಮಿಯು ಎಂಬ ಅರ್ಥಗಳು ಉಂಟಾಗುತ್ತವೆಂದೂ ಹಿಂದೆಯೇ ಉಪಪಾದಿತವು. ಆಗಲಿ ನರ ಶಬ್ದವು ವಿಷ್ಣುವಾಚಕವೆಂದು ಎಲ್ಲಿ ಹೇಳಲ್ಪಟ್ಟಿತು ? ಎಂದರೆ, ರೀಙ್ ಕ್ಷಯೇ ಎಂಬ ಧಾತ್ವರ್ಥದಪ್ರಕಾರ ನಾಶವಿಲ್ಲದವನಾದುದರಿಂದ ನರ ಶಬ್ದವು ವಿಷ್ಣುವಾಚಕವು. ಆಗಲಿ, ಹಾಗೆ ನರ ಶಬ್ದದಿಂದ ವಿಷ್ಣುವು ಬೋಧಿಸಲ್ಪಟ್ಟಿರುವನೋ? ಎಂದರೆ ಸಹಸ್ರನಾಮದಲ್ಲಿ ಜಹ್ನುರ್ನಾರಾಯಣೋ ನರಃ ಎಂದಿರುವದರಿಂದ ನರಶಬ್ದವು ವಿಷ್ಣುವಾಚಕವು(೨೪೭) ನಾಶವಿಲ್ಲದ ಚಿದಚಿದ್ವಿಭೂತಿ ನಾಯಕನೆಂಬರ್ಥವು.

### ಹಾಗೆಯೇ ಮಕಾರ ನಾರಪದಗಳಿಂದ ಜೀವನನ್ನು ಹೇಳುವದರಲ್ಲಿ ಪ್ರಯೋಜನವನ್ನು ತಿಳಿಸುತ್ತಾರೆ.

ಹಿಂದೆ ಪ್ರಣವದ ಮಕರವು ಜೀವಾತ್ಮನನ್ನು ಬೋಧಿಸುತ್ತದೆಂದೂ, ಅನಂತರ ನಾರಾಯಣಶಬ್ದದ ನಾರ ಶಬ್ದವು "ನಾರೋ ನರಾಣಾಂ ಸಂಘಾತಃ" ಎಂದೂ ನಾರಸ್ತ್ವಿತಿ ಸರ್ವಪುಂಸಾಂ ಇತ್ಯಾದಿ ಉಪನ್ಯಾಸ ಪೂರ್ವಕ ಜೀವಾತ್ಮನು ಹೇಳಲ್ಪಟ್ಟನೆಂದರೆ ಪೌನರುಕ್ತ್ಯವು ಉಂಟಾಗುವದಿಲ್ಲವೇ ? ಎಂದರೆ, ಮಕಾರ ನಾರಶಬ್ದಗಳಿಂದ ಜೀವಾತ್ಮನ ಬೇರೆ ಬೇರೆ ಆಕಾರಗಳು ಬೋಧಿಸಲ್ಪಟ್ಟವೆಂದು ಹೇಳುತ್ತಾರೆ. ಪ್ರಣವತ್ತಿಲ್ ತೃತೀಯಾಕ್ಷರತ್ತಾಲೇ - ಪ್ರಣವದಲ್ಲಿರುವ ಮೂರನೆಯ ಅಕ್ಷರವಾದ ಮಕಾರದಿಂದ, ಚೇತನನೈ ಪ್ರಕಾಶಿಪ್ಪಿಕ್ಕಚ್ಚೆಯ್‌ದೇ - ಜೀವಾತ್ಮನಿಗೆ ಜ್ಞಾನಸ್ವರೂಪತ್ವ ಜ್ಞಾನ ಗುಣಕತ್ವ, ಪ್ರತ್ಯಕ್ತ್ವಗಳುಂಟೆಂದು ಅತನ ಸ್ವರೂಪವನ್ನು ಪ್ರಕಾಶಪಡಿಸಿ, ಇಙ್ಗು ನಾರ ಶಬ್ದತ್ತಾಲೇ - ಇಲ್ಲಿ ನಾರಾಯಣ ಶಬ್ದದ ನಾರವೆಂಬ ಪದದಿಂದ, ಮೀಣ್ಡುಮ್ - ಪುನಃ, ಶೊಲ್ಲುವಾನೇ

---

(೧) ನಾನ್ಮುಗನ್ ತಿರುವಂದಾದಿ ೭.

ನ್ನೈ ಯನ್ರಿಯುಲೇನ್ ಕಣ್ಣಾಯ್ ನಾರಣನೇ ನೀಯೆನ್ನೈ ಯನ್ರಿಯಿಲ್ಲೈ" ಎನ್ರುಮ್, (೨) "ರಾಮಾನುಜಂ ಲಕ್ಷ್ಮಣ ಪೂರ್ವಜಂಚ" ಎನ್ರುಮ್,

---

ನ್ನಿಲ್ - ಹೇಳಬೇಕಾದುದು ಏನು ? ಹೇಳಲು ಕಾರಣವೇನು ಎಂದರೆ ಎರಡು ಪ್ರಮಾಣಗಳನ್ನು ಉದಾಹರಿಸಿ ಅದರಿಂದ ಯಾವ ಯಾವ ಭಾವಗಳು ಪ್ರದರ್ಶಿಸಲ್ಪಟ್ಟವೆಂಬುದನ್ನು ತಿಳಿಸುತ್ತಾರೆ. (೧) ನಾನುನ್ನೈ ಎಂಬ ಪಾಶು ಹಿಂದೆಯೇ ಉದಾಹರಿಸಲ್ಪಟ್ಟಿರುತ್ತದೆ. ೫೩ನೆಯ ಪುಟವನ್ನು ಪರಾಂಬರಿಸಿ. "ಇನ್ರಾಗನಾಳೈ ಯೇಯಾಗ ಇನಿಚ್ಚಿರಿತ್ತುನ್ ನಿನ್ರಾಗ ನಿನ್ನರುಳೆನ್ಪಾಲದೇ-ನನ್ರಾಗ | ನಾನುನ್ನೈಯನ್ರಿಯುಲೇನ್ ಕಣ್ಣಾಯ್-ನಾರಣನೇ ನೀಯೆನ್ನೈ ಯನ್ರಿಯಿಲ್ಲೈ" ಎಂಬುದು ಪೂರಾ ಪಾಶುರವು. ಇನ್ರಾಕ ನಾಳೈಯೇಯಾಗ-ಈವತ್ತೇ ಆಗಲಿ ನಾಳೆಯೇ ಆಗಲಿ, ಇನಿಚ್ಚಿರುತುವ್ - ಸ್ವಲ್ಪಕಾಲ ಕಳೆದನಂತರವೇ ಆಗಲಿ, ನಿನ್ ಅರುಳ್ - ನಿನ್ನ ಕೃಪೆಯು, ಎನ್ಪಾಲದೇ - ನನ್ನ ಪಕ್ಷದಲ್ಲುಂಟು. ಹಾಗೆ ನಿನ್ನ ಕೃಪೆಯು ಇದ್ದೇ ಇರುತ್ತದೆಂದು ಹೇಗೆ ಹೇಳುತ್ತೀಯೇ? ಎಂದರೆ ಓ ನಾರಣನೇ ನಿನ್ನ ನಾಮವಾದ ನಾರಾಯಣಶಬ್ದವೇ ತೋರಿಸುತ್ತದೆ. ನಾರಾಣಾಂ ಅಯನಂ ನಾರಾಯಣಃ ಎಂಬುದರಿಂದ ನನಗೆ ಆಧಾರನು, ಉಪಾಯವು ಉಪೇಯವು. ನಾನುನ್ನೇಯನ್ರಿಯಿಲೇನ್ ಕೆಂಡಾಯ್ - ನೀನಿಲ್ಲದೆ ನಾನು ಜೀವಿಸಲಾರೆನು, ನನಗೆ ನೀನಿಲ್ಲದೆ ಸತ್ತೆಯೇ ಇಲ್ಲವು. ನನಗೆ ನೀನೇ ರಕ್ಷಕನು, ನೀನೇ ಮುಖ್ಯಾಧಾರವು, ನೀನೇ ಮಾರ್ಗತೋರಿಸುವವನು, ನೀನೇ ಈ ದುಃಖಗಳನ್ನೆಲ್ಲಾ ಹೋಗಲಾಡಿಸಿ ನಿನ್ನಲ್ಲೇ ಸೇರಿಸಿಕೊಳ್ಳುವನು,ಅನನ್ಯ ಗತಿಕನಾದುದರಿಂದ ನೀನಿಲ್ಲದೆ ನನಗೆ ಗತಿಯೇ ಇಲ್ಲವು ಎಂಬ ಭಾವವು. ಇದು (ತತ್ಪುರುಷಾರ್ಥವು). ನೀಯೆನ್ನೈ ಯನ್ರಿಯಿಲೇ - ನೀನು ನನ್ನನ್ನು ಬಿಟ್ಟರೂ ನಿನಗೂ ಸ್ವರೂಪವಿಲ್ಲವು. ನಿನಗೆ ಸರ್ವಗತತ್ವ ಪರಿಪೂರ್ಣತ್ವಾದಿ ಸ್ವರೂಪಗಳೂ ಇಲ್ಲವು, ನಿನು ಸರ್ವಾಂತರ್ಯಾಮಿ ಎಂಬುದು ಇಲ್ಲವಾಗುತ್ತದೆಂಬ ಭಾವವು. ಇದು ಬಹು ಪ್ರೀತ್ಯರ್ಥವು. ನಾನಿಲ್ಲದಿದ್ದರೆ ನಿನಗೆ ಸರ್ವ ಶೇಷಿತ್ವ ರೂಪಾಕಾರವೂ ಇಲ್ಲವಾಗುತ್ತದೆ. ನನಗೆ ನೀನು ಸರ್ವವಿಧದಲ್ಲೂ ಆಧಾರವು. ನಾನು ನಿನಗೆ ಆಶ್ರಯವು. ಹೀಗೆ ಪರಸ್ಪರ ಸಂಬಂಧವು ನಮ್ಮಿಬ್ಬರಿಗೂ ಇರುತ್ತದೆ. ಇದು ನಿನ್ನ ನಾಮವಾದ ನಾರಾಯಣ ಶಬ್ದದಿಂದಲೇ ವ್ಯಕ್ತವೆಂಬಭಾವವು. ಇಲ್ಲಿ ನಾನು ಎಂದು ಹೇಳಿರುವದು ಸಮಸ್ತ ಲೋಕದ ಜೀವವರ್ಗಕ್ಕೂ ಉಪಲಕ್ಷಣವಾದುದರಿಂದ ನಾನಿಲ್ಲದೇ ಹೋದರೆ ಎಂದರೆ ಸರ್ವ ಭೂತಗಳೂ ಜಗತ್ತಿನಲ್ಲಿಲ್ಲದಿದ್ದರೆ ನಿನಗೆ ಶೇಷಿತ್ವ

---

(೨) ರಾ. ಸುಂ. ೩೫-೧೦.

ಶೊಲ್ಲುಗಿರಪಡಿಯೇ ಒನ್ರೈ ಯಿಟ್ಟೊನ್ರೈನಿರೂಪಿಯಾ ನಿನ್ರಾಲ್ ಅರ್ಜುನ ರಥಮ್ಬೋಲೆ, ಪ್ರಣವಂ ಶೇಷಪ್ರಧಾನ ಮಾಗೈಯಾಲುಮ್, ರಾಸಮಂಡಲಂ ಪೋಲೆ, ನಾರಾಯಣ ಶಬ್ದಮ್ ಶೇಷಿಪ್ರಧಾನ ಮಾಗೈಯಾಲುಮ್, ಪುನರುಕ್ತಿಯಿಲ್ಲೈ. ಪ್ರಣವನ್ತನ್ನಿಲುಮ್ ಶಾಬ್ದಪ್ರಾಧಾನ್ಯಂ; ಜೀವನುಕ್ಕು ನಾಲುಮ್ ರಕ್ಷಕನಾನ ಶೇಷಿಕ್ಕೇ ಆರ್ಥಂ ಪ್ರಾಧಾನ್ಯಮ್.

---

ಈಶ್ವರತ್ವಗಳೇ ಇಲ್ಲವು-ಸರ್ವರಕ್ಷಕನಾದ ನೀನೇ ಇಲ್ಲದಿದ್ದರೆ ನಮಗೆ ಯಾರಿಗೂ ಸತ್ತೆಯೂ ಇಲ್ಲವು, ಗತಿಯೂ ಇಲ್ಲವೆಂಬ ಭಾವವೂ ತೋರಿಬರುತ್ತದೆ. "ನ ಚ ಸೀತಾ ತ್ವಯಾ ಹೀನಾ ನ ಚಾಹಮಪಿ ರಾಘವ । ಮುಹೂರ್ತಮಪಿ ಜೀವಾವ ಜಲಾನ್ಮತ್ಸ್ಯಾವಿವೋದ್ಧೃತೌ ॥ (ಅಯೋಧ್ಯಾ. ೫೩. ೩೧) ಎಂಬುದು ಅನುಸಂಧೇಯವು. ಹೀಗೆ ತನಗೆ ಪರಮಾತ್ಮ ಸಂಬಂಧವೆಂಬುದು ನಾರ ಶಬ್ದದಿಂದ ವ್ಯಕ್ತವು. (೨) ರಾಮಾನುಜಂ-ರಾಮನಿಗೆ ತಮ್ಮನಾದ ಲಕ್ಷ್ಮಣನನ್ನೂ, ಲಕ್ಷ್ಮಣ ಪೂರ್ವಜಂ ಚ-ಲಕ್ಷ್ಮಣನಿಗೆ ಅಣ್ಣನಾದ ರಾಮನನ್ನೂ ಸಹ, ವಿಸಸರ್ಜ ಮೂಢಾ ಎಂದು ಹಿಂದೆ ಇದೆ. ಇದು ಸೀತಾ ಪ್ರಲಾಪವಾಕ್ಯವು. ಪೂರಾ ಶ್ಲೋಕವು "ನೂನಂ ಸಕಾಲೋ ಮೃಗರೂಪಧಾರೀ ಮಾಮಲ್ಪಭಾಗ್ಯಾಂ ಲುಲುಭೇ ತದಾನೀಮ್ । ಯತ್ರಾರ್ಯಪುತ್ರಂ ವಿಸಸರ್ಜ ಮೂಢಾ ರಾಮಾನುಜಂ ಲಕ್ಷ್ಮಣ ಪೂರ್ವಜಂ ಚ" ಪ್ರಕರಣವೇನೆಂದರೆ.—ಅಶೋಕವನದಲ್ಲಿ ಬಂಧಿಸಲ್ಪಟ್ಟ ತನ್ನ ಪತಿಯನ್ನು ಪುನಃ ಕಾಣುವ ಉಪಾಯ ಯಾವುದೂ ತೋಚದೆ ಪ್ರಾಣತ್ಯಾಗ ಮಾಡುವದೇ ಯುಕ್ತವೆಂದು ಭಾವಿಸಿ ಪ್ರಲಾಪಿಸುತ್ತಾಳೆ. ಆ ಯಮನೇ ಕಾಂಚನಮೃಗ ರೂಪವನ್ನು ಧರಿಸಿ, ಅಲ್ಪ ಭಾಗ್ಯಳಾದ ನನ್ನನ್ನು ರಾವಣನು ಅಪಹರಿಸಿಕೊಂಡು ಹೋಗುವಹಾಗೆ ನನ್ನನ್ನು ವಂಚಿಸಿರಬೇಕು ನಿಶ್ಚಯವು, ಏಕೆಂದರೆ ಮೂಢಳಾಗಿ ಆರ್ಯಪುತ್ರನಾದ ಲಕ್ಷ್ಮಣನಿಗೆ ಅಗ್ರಜನಾದ, ರಾಮನನ್ನೂ, ಮತ್ತು ಅನಂತರ ರಾಮನಿಗೆ ಅನುಜನಾದ ಲಕ್ಷ್ಮಣನನ್ನೂ ಸಹ ಕಳುಹಿಸಿಕೊಟ್ಟೆನೋ, ಎಂಬುದು ಶ್ಲೋಕಾರ್ಥವು. ರಾಮಾನುಜಂ ಎಂಬುದರಿಂದ ಶೇಷಿಪೂರ್ವಕವಾಗಿ ಹೇಳಿದುದರಿಂದ ಶೇಷಿಪ್ರಾಧಾನ್ಯವಾಗಿ ಹೇಳಲ್ಪಟ್ಟಿತು. ಲಕ್ಷ್ಮಣ ಪೂರ್ವಜಂ ಚ ಎಂಬುದರಿಂದ ಶೇಷಪ್ರಾಧಾನ್ಯವಾಗಿ ಹೇಳಲ್ಪಟ್ಟಿತು." ಎನ್ರುಮ್ ಶೊಲ್ಲುಗಿರಪಡಿಯೇ - ಎಂದು ಹೇಳಿರುವ ಹಾಗೆ, ಒನ್ರೈ ಇಟ್ಟೊನ್ರೈ ನಿರೂಪಿಯಾನಿನ್ರಾಲ್ - ಒಂದರ ಮೂಲಕವಾಗಿ ಇನ್ನೊಂದರ ಸಂಬಂಧವನ್ನು ನಿರೂಪಿಸಿದುದಾದರೆ, ಅರ್ಜುನರಥಮ್ಬೋಲೆ - ಅರ್ಜುನ ರಥದಲ್ಲಿರುವಹಾಗೆ, ಮಕಾರವಾಚ್ಯೋಜೀವಃ ಅಸ್ಮೈವ ಎಂಬುದು ಪ್ರಣವಾರ್ಥವಾಗಿ, ಜೀವಾತ್ಮನು ಪರಮಾತ್ಮನಿಗಾಗಿಯೇ ಎಂಬ ಅಭಿಪ್ರಾಯ ಉಂಟಾಗುವದರ ಮೂಲಕ, ಪ್ರಣವಮ್ ಶೇಷ ಪ್ರಧಾನಮಾಗೈಯಾಲುಮ್ - ಪ್ರಣವವು ಜೀವಾತ್ಮನ ಶೇಷತ್ವವನ್ನು

ಮುಖ್ಯವಾಗಿ ಪ್ರದರ್ಶಿಸುವದರಿಂದಲೂ, ರಾಸಮಣ್ಡಲವೊಪ್ಪೇಲೆ - ಗೋಪಿಕಾ ಸ್ತ್ರೀಯರ ಸಮೂಹದೊಂದಿಗೆ ಸೇರಿ ಶ್ರೀ ಕೃಷ್ಣನು "ಅಂಗನಾಮಂಗನಾ ಮಂತರೇ ಮಾಧವಃ" ಎಂದು ಗೋಪಿಕಾ ಗೀತೆಯಲ್ಲಿ ಹೇಳಿರುವ ರಾಸಕ್ರೀಡೆಯಲ್ಲಿ ಮಧ್ಯೆಯಲ್ಲಾಗಲಿ ಪ್ರತಿಯೊಬ್ಬ ಸ್ತ್ರೀಯೊಂದಿಗಾಗಲಿ ನರ್ತನ ಮಾಡುವಾಗ ಹೇಗೋ ಹಾಗೆ, ನಾರಾಯಣಶಬ್ದಮ್ ಶೇಷಿಪ್ರಧಾನಮಾಗೈಯಾಲುಮ್ - ನಾರಾಯಣ ಶಬ್ದವು ಆತನ ಶೇಷಿತ್ವವನ್ನು ಪ್ರಧಾನವಾಗಿ ಪ್ರದರ್ಶಿಸುವದರಿಂದಲೂ ಪುನರುಕ್ತಿಯಿಲ್ಲೈ - ಪುನರುಕ್ತಿಯು ಇಲ್ಲವು. ಪ್ರಣವದ ಮಕಾರವು ಜೀವಾತ್ಮನ ಶೇಷತ್ವವನ್ನು ಮುಖ್ಯವಾಗಿ ಅವಧಾರಣದ ಮೂಲಕ ಪ್ರದರ್ಶಿಸುತ್ತದೆ. ಈ ಜೀವಾತ್ಮನು ಪರಮಾತ್ಮನಿಗೆ ಶೇಷಭೂತನೇವಿನಾ ಇನ್ನು ಯಾರಿಗೂ ಇಲ್ಲವೆಂದು ಜೀವಾತ್ಮನ ಶೇಷತ್ವವನ್ನು ಪ್ರಕಟಿಸುತ್ತದೆ. ನಾರಾಯಣ ಶಬ್ದದಲ್ಲಿರುವ ನಾರಶಬ್ದದ ಮೂಲಕ ಪರಮಾತ್ಮನೇ ಈ ಜೀವಾತ್ಮರಿಗೆಲ್ಲಾ ಶೇಷಿಯು ಎಂಬ ಭಾವವನ್ನೂ, ಇವರಿಲ್ಲದೆ ಅವನಿಗೆ ಶೇಷಿತ್ವಕ್ಕೆ ಅವಕಾಶವಿಲ್ಲವೆಂಬ ಶೇಷಿತ್ವ ಪ್ರಾಧಾನ್ಯವನ್ನು ಸೂಚಿಸುತ್ತದೆಂಬ ಭಾವವು. ಹೀಗೆ ವ್ಯತ್ಯಸ್ತ ಭಾವಗಳು ತೋರಿಬರುವದರಿಂದ ಪುನರುಕ್ತಿಯು ಇಲ್ಲವು. ಶೇಷತ್ವಪ್ರಾಧಾನ್ಯಕ್ಕೆ ಅರ್ಜುನ ರಥವನ್ನು ನಿದರ್ಶನವಾಗಿಯೂ ಶೇಷಿತ್ವಪ್ರಾಧಾನ್ಯಕ್ಕೆ ರಾಸಕ್ರೀಡೆಯನ್ನು ನಿದರ್ಶನವಾಗಿಯೂ ಭಾವಿಸಬಹುದೆಂದು ಹೇಳುತ್ತಾರೆ. ಪ್ರಣವದ ಮಕಾರದಲ್ಲಿ ಜೀವನಿಗಿರುವ ಪರಮಾತ್ಮ ಸಂಬಂಧವು ವ್ಯಕ್ತಪಡುವದರಿಂದಲೂ, ನಾರಾಯಣ ಶಬ್ದದ ನಾರ ಪದದಲ್ಲಿ ಪರಮಾತ್ಮನು ಇವರಿಗೆಲ್ಲಾ ಶೇಷಿ ಎಂಬ ಸಂಬಂಧವು ವ್ಯಕ್ತಪಡುವದರಿಂದಲೂ ಪುನರುಕ್ತದೋಷವಿಲ್ಲವೆಂಬುದು ತಾತ್ಪರ್ಯವು.

ಹೀಗೆ ಪ್ರಣವದಲ್ಲಿ ಜೀವ ಪ್ರಾಧಾನ್ಯವನ್ನು ಹೇಳಿದರೆ, ಪರಮಾತ್ಮ ಪ್ರಾಧಾನ್ಯಕ್ಕೆ ಕುಂದಕ ವಾಗುವದಿಲ್ಲವೋ ಎಂದರೆ ಶಾಬ್ದವಾಗಿ ಜೀವ ಪ್ರಾಧಾನ್ಯ ತೋರಿದರೂ, ಅರ್ಥವಾಗಿ ಈಶ್ವರ ಪ್ರಾಧಾನ್ಯವೂ ತೋರಿಬರುವದರಿಂದ ಬಾಧಕವೇನೂ ಇಲ್ಲವೆಂದು ಮುಂದಿನ ವಾಕ್ಯವಾದ "ಪ್ರಣವಂತನ್ನಿಲುಮ್" ಎಂಬುದರಿಂದ ಉಪದೇಶಿಸುತ್ತಾರೆ. ಪ್ರಣವಂ ತನ್ನಿಲುಮ್ - ಪ್ರಣವದಲ್ಲ, ಶಾಬ್ದಪ್ರಾಧಾನ್ಯಮ್ ಜೀವನಕ್ಕಾನಾಲುಮ್ - ಮಕಾರವಾಚ್ಯನು ಅಕಾರ ವಾಚ್ಯನಿಗೇ ಎಂಬ ಶಬ್ದ ಪ್ರಯೋಗದ ಮೂಲಕ ಜೀವನಿಗೆ ಶೇಷತ್ವ ನಿರೂಪಣೆಯನ್ನು ಹೇಳುವದರ ಮೂಲಕ ಜೀವನಿಗೇ ಪ್ರಾಧಾನ್ಯವು ಬೋಧಿತವಾದರೂ, ರಕ್ಷಕನಾದ ಶೇಷಿಕ್ಕೇ- ಪ್ರಥಮದಲ್ಲೇ ಇರುವ ಅಕಾರದಲ್ಲಿ ಅವರಕ್ಷಣೆ ಎಂಬ ಧಾತುವಿನ ಮೂಲಕ ಅರ್ಥವಾಗಿ ಸರ್ವರಕ್ಷಕನಾದ ಶೇಷಿಗೆ, ಆರ್ಥಂ ಪ್ರಾಧಾನ್ಯಂ, ಅರ್ಥವಾಗಿ ಪ್ರಾಧಾನ್ಯವು ತೋರಿಬರುತ್ತದೆ. ಅಗ್ರತಃ ಪ್ರಯಯೌ ರಾಮೋ ಸೀತಾಮಧ್ಯೇ ಸುಮಧ್ಯಮಾ। ಲಕ್ಷ್ಮಣಸ್ತು ಧನುಷ್ಪಾಣಿಃ ಪೃಷ್ಠತೋಽನುಜಗಾಮಹ" (ರಾ. ಅಯೋಧ್ಯಾ) ಎಂಬಲ್ಲಿ ಹೇಳಿರುವಹಾಗೆ, ಜೀವನಿಗೆ ತಾನು ಸರ್ವವಿಧದಲ್ಲೂ ರಕ್ಷಕ

**ಪ್ರಣವತ್ತಿಲೇ ಸ್ವರೂಪತ್ತಾಲುಮ್ ಗುಣತ್ತಾಲುಮ್ ಜ್ಞಾನಾಕಾರನಾಯ್, ಪ್ರತ್ಯಕ್ತ್ವಾಯ್ ಅಣುವಾಯ್ ತೋತ್ತಿನ ಜೀವನುಕ್ಕು, ನಾರಶಬ್ದಮ್ ಕ್ಷಯಮಿಲ್ಲಾದವನೆನ್ರು ನಿತ್ಯತ್ವಂ ಚೊಲ್ಲುಗೈಯಾಲುಮ್, ನರರುಡೈಯ ಸಮೂಹತ್ತೈ ಚೊಲ್ಲುಗೈಯಾಲೇ ಜೀವರ್‌ಗಳುಡೈಯ ಅನ್ಯೋನ್ಯ ಭೇದ**

---

ನೆಂದು ಆದಿಯಲ್ಲೇ ಅಕಾರವಿರುವದರಿಂದ ಅರ್ಥವಾಗಿ ಈಶ್ವರ ಪ್ರಾಧಾನ್ಯವೂ ವ್ಯಕ್ತವು ಎಂಬ ತಾತ್ಪರ್ಯವು. ಅರ್ಜುನ ರಥದಲ್ಲೂ ರಥಿಯು ಶ್ರೀಕೃಷ್ಣನಾದ ಅರ್ಜುನನಾಗಿ ಅತನಿಗೆ ಪ್ರಾಧಾನ್ಯ ತೋರಿದರೂ, ಸಾರಥಿಯಾದ ಶ್ರೀಕೃಷ್ಣನು ರಕ್ಷಕನಾಗಿ ಮುಂದೆಯೇ ರಥದಲ್ಲಿ ಕುಳಿತಿರುವದರಿಂದಲೂ ಶ್ರೀಕೃಷ್ಣನಿಲ್ಲದೆ ತನ್ನನ್ನು ತಾನು ಯುದ್ಧದಲ್ಲಿ ರಕ್ಷಿಸಿಕೊಳ್ಳಲಾರನಾದುದರಿಂದಲೂ, ಈಶ್ವರ ಪ್ರಾಧಾನ್ಯವೂ ಅರ್ಜುನ ರಥದಲ್ಲೂ ಕೂಡ ವ್ಯಕ್ತವು ಎಂಬುದೂ ಸೂಚಿತವು. "ಅಗ್ರತಃ ಪ್ರಯಯೌ ರಾಮಃ" ಎಂಬಲ್ಲಿ ಶೇಷಿಗೆ ಪ್ರಾಧಾನ್ಯವನ್ನು ಪ್ರದರ್ಶಿಸಿರುವ ಹಾಗೆ, ಶೇಷನಿಗೂ ಪ್ರಾಧಾನ್ಯವನ್ನು ಪ್ರದರ್ಶಿಸಿರುವ ಪ್ರಕರಣವೂ ಉಂಟು. ಅಗ್ರತೋ ಗಚ್ಛ ಸೌಮಿತ್ರೇ ಸೀತಾತ್ವಾ ಮನುಗಚ್ಛತು । ಪೃಷ್ಠತೋಽಹಂ ಗಮಿಷ್ಯಾಮಿ ತ್ವಾಂಚ ಸೀತಾಂಚ ಪಾಲಯನ್॥" (ಅಯೋಧ್ಯಾ. ೫೨ ೯೫) ಎಂಬುದು ಅನುಸಂಧೇಯವು. ಇಲ್ಲಿ ರಕ್ಷಕತ್ವವೂ ವ್ಯಕ್ತವು.

ಹೀಗೆ ಮಕಾರ ನಾರಶಬ್ದಗಳಿಂದುಂಟಾಗುವ ಅರ್ಥಗಳನ್ನು ವಿಸಿಸಿ, ಅವುಗಳಿಂದುಂಟಾಗುವ ಪ್ರಯೋಜನವೇನೆಂಬುದನ್ನು ತಿಳಿಸುತ್ತಾರೆ,—ಮಕಾರದಿಂದಲೂ, ನಾರಶಬ್ದದಿಂದಲೂ ಬೇರೆಬೇರೆ ಅರ್ಥಗಳು ಬೋಧಿತವಾಗುತ್ತವೆಂದು ಹೇಳುತ್ತಾರೆ.—ಮೊದಲು ಪ್ರಣವದ ಮಕಾರದಿಂದ ತೋರಿಬರುವ ಅರ್ಥಗಳ ಪ್ರಯೋಜನವೇನೆಂಬುದನ್ನು ತಿಳಿಸುತ್ತಾರೆ. **ಪ್ರಣವತ್ತಿಲೇ** - ಪ್ರಣವದಲ್ಲಿ, **ಸ್ವರೂಪತ್ತಾಲುಮ್ ಗುಣತ್ತಾಲುಮ್ ಜ್ಞಾನಾಕಾರನಾಯ್** - ಸ್ವರೂಪವೂ ಜ್ಞಾನವಾಗಿ, ಗುಣವೂ ಜ್ಞಾನವಾಗಿ ಇರುವ, **ಪ್ರತ್ಯಕ್ತ್ವಾಯ್** - ಸ್ವಸ್ಮೈಭಾಸಮಾನನಾಗಿ, ಅಹಂ ಎಂದು ತನಗೆ ತಾನೇ ಪ್ರಕಾಶಕನಾಗಿ, "ಏಷೋಽಣುರಾತ್ಮಾ" "ವಾಲಾಗ್ರ ಶತಭಾಗಸ್ಯ" ಇತ್ಯಾದಿ ಪ್ರಮಾಣಗಳಲ್ಲಿ ಹೇಳಿರುವಹಾಗೆ, ಅಣುವಾಗಿ. **ತೋತ್ತಿನ ಜೀವನುಕ್ಕು** - ಮಕಾರಾರ್ಥದಿಂದ ಹೀಗೆ ತೋರಿಬರುವ ಗುಣಗಳುಳ್ಳ ಜೀವನಿಗೆ, **ನರ ಶಬ್ದಮ್** - ನರಶಬ್ದವು, **ಕ್ಷಯಮಿಲ್ಲಾದವನೆನ್ರು** - ನಾಶವಿಲ್ಲದವನೆಂದು, **ನಿತ್ಯತ್ವಂ ಚೊಲ್ಲುಗೈಯಾಲೇ**-ನಿತ್ಯತ್ವವನ್ನು ಬೋಧಿಸುವದರಿಂದ, **ನರರುಡೈಯ ಸಮೂಹತ್ತೈ ಚೊಲ್ಲುಗೈಯಾಲ್** – ಇಂತಹ ನಿತ್ಯರಾದ ಜೀವಾತ್ಮರ ಸಮೂಹವನ್ನು ನಾರಶಬ್ದದಿಂದ ಹೇಳುವದರಿಂದ, **ಜೀವರ್‌ಗಳುಡೈಯ ಅನ್ಯೋನ್ಯ ಭೇದತ್ತೈ** - ಸ್ವರೂಪತಃ ಸ್ವಭಾವತಃ ಸಮರಾಗಿದ್ದರೂ ಜೀವಾತ್ಮರ ಪರಸ್ಪರ ಭೇದವನ್ನು, **ವ್ಯಕ್ತಮಾಕ್ಕುಗೈಯಾಲುಮ್**-

ತ್ತೈ ವ್ಯಕ್ತಮಾಕ್ಕುಗೈಯಾಲುಮ್,ನರಾಜ್ಜಾತಂಗಳ್ ನಾರಜ್ಗಳೆನ್ರಪೋದು, ವಿಶಿಷ್ಟ ವೇಷತ್ತಾಲೇ ಬ್ರಹ್ಮಕಾರ್ಯತ್ವಮ್ ತೋತ್ತುಗೈಯಾಲುಮ್ ಪದ ದ್ವಯುತ್ತುಕ್ಕುಮ್ ಪ್ರಯೋಜನ ಭೇದಮುಣ್ಡು. ನಾರಶಬ್ದಸಮಾನಾಧಿಕರಣ ಮಾನ ಅಯನಶಬ್ದತ್ತಾಲೇ ಇವತ್ತುಕ್ಕು ವ್ಯಾಪ್ಯತ್ವಾದಿಗಳುಮ್ ಕಣ್ಡು ಕೊಳ್ವದು.

---

ವ್ಯಕ್ತಪಡಿಸುವದರಿಂದಲೂ, "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಜೀವ ಬಹುತ್ವವನ್ನು ವ್ಯಕ್ತಪಡಿಸುವದರಿಂದಲೂ ಎಂಬ ಭಾವವು, ನರಾಜ್ಜಾತಂಗಳ್ ನಾರಜ್ಗಳೆನ್ರಪೋದು- "ಜಜ್ಞಿರೇ ನಾರಾಯಣೋನರಃ" ಎಂಬಲ್ಲಿ ಹೇಳಲ್ಪಟ್ಟ ನರಶಬ್ದವಾಚ್ಯನಾದ ವಿಷ್ಣುವಿನಿಂದ ಉಂಟಾದವು ಎಂದು ಹೇಳುವಾಗ, ವಿಶಿಷ್ಟವೇಷತ್ತಾಲೇ-ಈ ಜೀವ ವರ್ಗದೊಂದಿಗೇ ಇದ್ದುಕೊಂಡು ಕರಣಕಳೇಬರಯೋಗವನ್ನು ಉಂಟುಮಾಡುವ ಸೃಷ್ಟಿಕ್ರಮದಲ್ಲಿ,ಬ್ರಹ್ಮಕಾರ್ಯತ್ವಮ್-ಪರಬ್ರಹ್ಮನ ಕಾರ್ಯರೂಪವಾಗಿರುವ ಭಾವವು, ತೋತ್ತುಗೈಯಾಲೇ-ತೋರಿಬರುವದರಿಂದ, ಪದದ್ವಯತ್ತುಕ್ಕುಮ್-ಈ ಮಕಾರ ನಾರಶಬ್ದಗಳೆರಡಕ್ಕೂ ಪ್ರಯೋಜನಭೇದಮುಂಡು-ಬೇರೆ ಬೇರೆ ಅರ್ಥಗಳನ್ನು ಪ್ರದರ್ಶಿಸುವ ಪ್ರಯೋಜನ ಉಂಟು. ನಾರ ಶಬ್ದಸಮಾನಾಧಿಕರಣಮಾನ ಅಯನ ಶಬ್ದತ್ತಾಲೆ-ನಾರಗಳೇ ಯಾರಿಗೆ ಅಯನವೋ ಎಂದು ಹೇಳುವ ಸಮಾ ನಾಧಿಕರಣ್ಯವನ್ನು ಹೇಳುವ ಅಯನ ಶಬ್ದದಿಂದ, ನಾರಗಳೂ ಮತ್ತು ಅಯನವೂ ಒಂದೇ ವಿಭಕ್ತಿಯಾದ ಪ್ರಥಮಾಂತವಾಗಿ ಉಪಯೋಗಿಸುವದು ಸಮಾನಾಧಿಕ ರಣ್ಯವು, ನಾರಗಳೇ ಪರಮಾತ್ಮನಿಗೆ ಅಯನವು ಎಂದು ಹೇಳಿದರೆ ಸಮಾನಾಧಿ ಕರಣ ಹೇಳಿಕೆಯಾಯಿತು, ಇದರಿಂದ ಇವತ್ತುಕ್ಕು ಈ ಜೀವ ಸಮೂಹಕ್ಕೆ ವ್ಯಾಪ್ಯತ್ವಾದಿಗಳುಮ್ - ಭಗವಂತನಿಂದ ವ್ಯಾಪಿಸಲ್ಪಡೋಣ ಎಂದರೆ ಅಂತ ರ್ಯಾಮಿತ್ವ ಮೊದಲಾದವುಗಳನ್ನು ಆದಿ ಶಬ್ದದಿಂದ ನಿಯಾಮ್ಯತ್ವ, ಧಾರ್ಯತ್ವಗ ಳನ್ನೂ, ಕಂಡು ಕೊಳ್ವದು - ತಿಳಿದುಕೊಳ್ಳುವದು. ಪ್ರಣವ ಮಕಾರದಿಂದ ತೋರಿಬರುವ ಅರ್ಥಗಳು ಯಾವುವೆಂದರೆ (೧) ಆತ್ಮನ ಜ್ಞಾನ ಸ್ವರೂಪತ್ವವೂ, ಜ್ಞಾನ ಗುಣಕತ್ವವೂ (೨) ಪ್ರತ್ಯಕ್ತ್ವವೂ (೩) ಅಣುತ್ವವೂ. ನಾರಶಬ್ದದಿಂದ ತೋರುವ ಅರ್ಥಗಳು, (೧) ಜೀವಾತ್ಮರ ನಿತ್ಯತ್ವವೂ (೨) ಪರಸ್ಪರ ಭಿನ್ನತ್ವವೂ (೩) ಸೃಷ್ಟಿ ಕ್ರಮದಲ್ಲಿ ಕರಣ ಕಳೇಬರಯೋಗವೂ, ಎಂದರೆ ಪರಬ್ರಹ್ಮ ಕಾರ್ಯ ತ್ವವೂ (೪) ವ್ಯಾಪ್ಯತ್ವವೂ (೫) ನಿಯಾಮ್ಯತ್ವ (೬)ಧಾರ್ಯತ್ವವೂ,ಹೀಗೆ ಜೀವಾ ತ್ಮನ ವಿಷಯದಲ್ಲಿ ಬೇರೆಬೇರೆ ಅನುಸಂಧಾನ ಉಂಟಾಗುವದರಿಂದ, ಮಕಾರ ನಾರ ಶಬ್ದಗಳಿಂದ ಪುನರುಕ್ತಿ ಇಲ್ಲದೆ ಪ್ರಯೋಜನ ಭೇದವಿರುತ್ತದೆಂಬ ಭಾವವು. ಅದ್ವೈತಿಗಳ ಅಭಿಪ್ರಾಯವು ಆತ್ಮನು ಜ್ಞಾನಸ್ವರೂಪಮಾತ್ರನೇ ವಿನಾ ಜ್ಞಾನ

ಗುಣವುಳ್ಳವನಲ್ಲನೆಂದು ಹೇಳುವರು. ವಿಶಿಷ್ಟಾದ್ವೈತ ಅಭಿಪ್ರಾಯವು ಆತ್ಮನು ಜ್ಞಾನಸ್ವರೂಪನಾಗಿರುವವದಲ್ಲದೆ ಧರ್ಮಭೂತ ಜ್ಞಾನದಿಂದ ಕೂಡಿರುವನೆಂಬುದು. ಆದುದರಿಂದಲೇ ಸ್ವರೂಪತ್ತಾಲುಮ್ ಗುಣತ್ತಾಲುಮ್ ಜ್ಞಾನಾಕಾರನಾಯ್ ಎಂಬ ಪ್ರಯೋಗವು. ಹೇಗೆಂದರೆ ಆದಿತ್ಯವತ್ - ಸೂರ್ಯನ ಹಾಗೆ ಸೂರ್ಯನ ಸ್ವರೂಪವೂ ಗುಣವೂ ಸಹ ಹೇಗೆ ತೇಜೋಮಯವಾದುದೋ ಹಾಗೆಯೇ ಆತ್ಮನ ಸ್ವರೂಪವೂ ಗುಣವೂ ಸಹ ಜ್ಞಾನರೂಪವಾದುದು. ಇದು ತತ್ವತ್ರಯಾಧಿಕಾರದಲ್ಲಿ ವ್ಯಕ್ತವು. ತಾನಲ್ಲದೆ ಇತರ ಪದಾರ್ಥಗಳನ್ನು ತಿಳಿಯಬೇಕಾದರೆ ಧರ್ಮಭೂತ ಜ್ಞಾನದ ಆವಶ್ಯಕತೆಯುಂಟು. ತನ್ನನ್ನು ತಾನು ತಿಳಿಯಬೇಕಾದರೆ ಧರ್ಮಭೂತಜ್ಞಾನದ ಸಹಾಯವು ಬೇಕಿಲ್ಲವು. ಈ ಶಕ್ತಿಯಿಂದ ಜೀವಾತ್ಮನು ಅಚಿತ್ತಿಗಿಂತ ವಿಲಕ್ಷಣನು ಎಂದು ಹೇಳಲ್ಪಟ್ಟಿತು. ಸೃಷ್ಟಿಕಾಲದಲ್ಲಿ ಉಂಟಾಗುವ ಜಗತ್ತು ಪರಬ್ರಹ್ಮನ ಕಾರ್ಯವು. ಆದುದರಿಂದ ಬ್ರಹ್ಮಕಾರ್ಯವೆಂದು ಹೇಳಲ್ಪಟ್ಟಿತು. ಪ್ರಳಯದಲ್ಲಿ ಜೀವಾತ್ಮರಿಗೆ ಸ್ಥೂಲ ದಶೆಯಲ್ಲಿನ ಹಾಗೆ ಕರಣಕಳೇಬರ ಯೋಗವಿಲ್ಲವು. ನಾಮರೂಪಗಳೊಂದೂ ಇಲ್ಲದೆ, ಸೂಕ್ಷ್ಮವಾಗಿ ತಟಸ್ಥರಾಗಿರುವ ದಶೆಯು. ಸೃಷ್ಟಿಕಾಲದಲ್ಲಿ ನಾಮರೂಪಾರ್ಹತೆಯುಂಟಾಗುವ ಹಾಗೆ ಅವರವರುಗಳ ಪೂರ್ವಕರ್ಮಾನುಸಾರ ಶರೀರೇಂದ್ರಿಯಗಳ ಸಂಬಂಧ ಉಂಟಾಗುವದರಿಂದ ವಿಶಿಷ್ಟವೇಷತ್ತಾಲೇ ಎಂಬಪ್ರಯೋಗವು. ಹಿಂದೆ ನಾಮರೂಪಗಳೊಂದೂ ಇಲ್ಲದೆ ಇರುವದರಿಂದ ಸೂಕ್ಷ್ಮವಾಗಿದ್ದು, ಈಗ ದೇಹಪ್ರಾಪ್ತಿಯಿಂದ ಸ್ಥೂಲವಾಗುವದರಿಂದ ನಾಮರೂಪಗಳ ಪ್ರಾಪ್ತಿಯುಂಟಾಗುವದರಿಂದ, ತೋತ್ತಗ್ಯಯಾಲೇ ಎಂಬ ಪ್ರಯೋಗವು. ಹೀಗೆ ಮಕಾರ ನಾರಶಬ್ದಗಳಿಂದ ಬೇರೆ ಬೇರೆ ಅರ್ಥಾನುಸಂಧಾನ ಉಂಟಾಗುವದರಿಂದ, ಪ್ರಯೋಜನ ಭೇದವುಂಡು ಎಂದು ಹೇಳಿದರು. ನಾರಶಬ್ದ ಸಮಾನಾಧಿಕರಣಮಾನ— ನಾರವೇ ಅಯನತ್ತ ಇವನಿಗೆ ಎಂಬರ್ಥದಿಂದ ನಾರಶಬ್ದದೊಂದಿಗೆ ಸಾಮಾನಾಧಿಕರಣ್ಯವನ್ನು ಹೊಂದಿದ, ಅಯನ ಶಬ್ದತ್ತಾಲೇ-ಅಯನಶಬ್ದದಿಂದ, ಇವತ್ತುಕ್ಕು-ಈನಾರಶಬ್ದದಿಂದ ಹೇಳಲ್ಪಡುವ ಎಲ್ಲಾ ಜೀವಾತ್ಮ ಮೊದಲಾದ ನಿತ್ಯವಸ್ತುಗಳಿಗೆ ವ್ಯಾಪ್ತತ್ವಾದಿಗಳುಮ್ – ಅನುಪ್ರವೇಶ, ಅಂತರ್ಯಾಮಿತ್ವಗಳನ್ನು, ಕೇಡುಕೊಳ್ಳದು - ತಿಳಿದುಕೊಳ್ಳುವದು. ನಾರವೇ ಅಯನವು ಯಾರಿಗೋ ಎಂಬಲ್ಲಿ ನಾರಶಬ್ದವೂ ಅಯನ ಶಬ್ದವೂ ಸಮಾನವಾದ ಪ್ರಥಮಾ ವಿಭಕ್ತಿಯುಳ್ಳವಾದುದರಿಂದ ಸಮಾನಾಧಿಕರಣಮಾನ ಎಂಬ ಪ್ರಯೋಗವು, ಇದರಿಂದ ಸರ್ವವ್ಯಾಪಕತ್ವ, ನಿಯಂತೃತ್ವ, ಧಾರ್ಯತ್ವಾದಿಗಳು ಹೇಳಲ್ಪಟ್ಟವು.

ಮೇಲೆ ನಾರಶಬ್ದಬೋಧಿತವಾದ ಅರ್ಥವೇ "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್" ಎಂಬ ಶ್ರುತಿಯಲ್ಲೂ ಬೋಧಿತವೆಂದು ತಿಳಿಸಿ, ಆ ಶ್ರುತ್ಯರ್ಥವನ್ನು ಉಪಪಾದಿಸ

ನಿತ್ಯರಾನ ಫಲಚೇತನರ್ಕ್ಕು ಒರುನಿತ್ಯನಾನ ಚೇತನನ್ ಅಭಿಮತ ಹೇತು ವೆಞ್ಗ್ನರ ಶ್ರುತ್ಯರ್ಥಂ ಇಙ್ಗೇ ಕೆಂಡುಕೊಳ್ಳದು. ನಿತ್ಯನಾಗ ಪ್ರಮಾಣಸಿದ್ಧನಾನ ಜೀವನುಕ್ಕು ಬ್ರಹ್ಮಕಾರ್ಯತ್ವಮ್ ವಿಶೇಷಣ ದ್ವಾರಕಮ್. ಇಪ್ಪಡಿ ನಾರಾ

---

ಶ್ತ್ರರೆ. ನಿತ್ಯರಾನ ಫಲಚೇತನರ್ಕ್ಕು - ನಿತ್ಯರಾದ ಅನೇಕ ಚೇತನರುಗಳಿಗೆ, ಇದು ಶ್ರುತಿಯಲ್ಲಿ "ನಿತ್ಯಾನಾಂ ಬಹೂನಾಂ ಚೇತನಾನಾಂ" ಎಂಬುದರ ಅರ್ಥವು, ಈ ಅರ್ಥವು ಹಿಂದೆಯೇ ನಾರಶಬ್ದದಿಂದ ಬೋಧಿತವೆಂದು ಉಪಪಾದಿತವು, ಒರು ನಿತ್ಯನಾನ ಚೇತನನ್ - ಇದು "ನಿತ್ಯಃ ಏಕಃ ಚೇತನಃ" ಎಂದು ಶ್ರುತಿಯಲ್ಲಿ ರುವದರ ಅರ್ಥವು, ಅಭಿಮತ ಹೇತು - ಅವರ ಇಷ್ಟಾರ್ಥಕ್ಕೆ ಸಾಧನವು, ಇದು ಯೋ ವಿದಧಾತಿ ಕಾಮಾನ್ ಎಂದು ಶ್ರುತಿವಾಕ್ಯದಲ್ಲಿರುವದರ ಅರ್ಥವು, ನಾರಾಣಾಂ ಅಯನಮ್ ಎಂಬುದರಿಂದ ತೋರಿಬರುತ್ತದೆ, ಎಞ್ಗ್ನರ ಶ್ರುತ್ಯರ್ಥಂ ಎಂಬ ಶ್ರುತ್ಯರ್ಥವನ್ನು, ಕೆಂಡುಕೊಳ್ವದು - ಅನುಸಂಧಾನ ಮಾಡತಕ್ಕದ್ದು. ಈ ಶ್ರುತಿಯು ಅದ್ವೈತಾಭಿಪ್ರಾಯಕ್ಕೆ ತುಂಬಾ ವಿರುದ್ಧವಾದುದು. ಇದರಿಂದ ಪುರುಷಾರ್ಥಗಳನ್ನು ಕೊಡುವವನು ಒಬ್ಬನು, ಅವರವರ ಯೋಗ್ಯತಾನುಸಾರವಾಗಿ ಅವುಗಳನ್ನು ಪಡೆಯುವವರು ಅನೇಕರ; ಹೀಗೆ ಜೀವಪರಮಾತ್ಮಭೇದವೂ, ಹಾಗೆಯೇ ಜೀವರು ಚೇತನ ಶಬ್ದದಿಂದ ಸ್ವರೂಪತಃ ಜ್ಞಾನೈಕಾಕಾರವುಳ್ಳವರಾದರೂ, ಬ್ರಹ್ಮವಿಶೇಷಣರಾಗಿ ಬೇರೆಬೇರೆಯಾಗಿ ಬಹುತ್ವವೂ ಹೇಳಿರುವದರಿಂದ ಜೀವಾತ್ಮರ ಪರಸ್ಪರಭೇದವೂ ಸಹ ಬೋಧಿತವು. ಶ್ರುತಿಗಿಂತಲೂ, ನಾರಾಃ ಅಯನಂ ಯಸ್ಯ ಸಃ ಎಂಬಲ್ಲಿ ಇನ್ನೂ ಹೆಚ್ಚು ಅರ್ಥವು ತೋರಿಬರುತ್ತದೆ. ಹೇಗೆಂದರೆ ನಾರ ಶಬ್ದವು ನಿತ್ಯವಾದವುಗಳ ಸಮೂಹವನ್ನು ಬೋಧಿಸುವದರಿಂದ ಬರೀ ನಿತ್ಯವಾದ ಪರಮಾತ್ಮನ ವಿಶೇಷಣವಾದ ಚೇತನವರ್ಗವನ್ನೇ ಆಶ್ರಯವಾಗಿ ಅಲ್ಲದೆ ಹಾಗೆಯೇ ನಿತ್ಯನಾಗಿ ಪರಮಾತ್ಮನ ವಿಶೇಷಣವಾದ ಅಚೇತನವರ್ಗಕ್ಕೂ ಆಧಾರನೆಂಬ ಹೆಚ್ಚು ಅಭಿಪ್ರಾಯವೂ ಉಂಟಾಗುತ್ತದೆ. ಇದನ್ನೇ ಮುಂದೆ ಉಪಪಾದಿಸಿ ತಿಳಿಸುತ್ತಾರೆ. ಅಚಿತ್ತುಗಳೂ ಪ್ರವಾಹತಃ ನಿತ್ಯಗಳೇ. ಶ್ರುತಿಯಲ್ಲೇ ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ ಎಂದು ಹೇಳಲ್ಪಟ್ಟಿದೆ. ಹಾಗೆಯೇ ಗೀತೆಯಲ್ಲೂ "ಪ್ರಧಾನಂ ಪುರುಷಂಚೈವ ವಿದ್ಧ್ಯನಾದೀ ಉಭಾವಪಿ" ನಾರ ಶಬ್ದದಲ್ಲಿ ಪರಮಾತ್ಮನ ನಿತ್ಯತ್ವ ಏಕತ್ವಾದಿಗಳು ಎಲ್ಲಿ ತೋರಿಬರುತ್ತದೆ ಎಂದರೆ ಜಹ್ನುನಾರ್ಣರಂಯುಪೋಸರಃ ಎಂಬಲ್ಲಿ ನರ ಶಬ್ದವು ನಿತ್ಯನಾದ ಪರಮಾತ್ಮನನ್ನು ಬೋಧಿಸಿ, ನರಾಜ್ಜಾತಾನಿ ನಾರಾಃ ಎಂದಾಗುವದರಿಂದ ದ್ಯೋತಿತವು.

ಹೀಗೆ ಜೀವಾತ್ಮರೂ ಪರಮಾತ್ಮನೂ ನಿತ್ಯರು ಎಂದು ಹೇಳಿದ ಬಳಿಕ ಜೀವಾತ್ಮರು ಪರಬ್ರಹ್ಮಕಾರ್ಯವಾಗಿ ಸೃಷ್ಟಿಗೆ ಒಳಪಟ್ಟವರೆಂಬ ಹೇಳಿಕೆಯು ಹೇಗೆ?

ಯಣಾತ್ಮಕಾದಿ ಕಳ್ಪಙ್ಗಳಿಲೇ ಚೊನ್ನ ವ್ಯುತ್ಪತ್ತ್ಯಂತರಙ್ಗಳುಮೆಲ್ಲಾಮಿವ
ತ್ತೋಡು ತುಲ್ಯಮ್. (೧) "ಚೇತನಾಚೇತನಮ್ ಸರ್ವಂ ವಿಷ್ಣೋರ್ವ್ಯತಿ
ರಿಚ್ಯತೇ। ನಾರಂತದಯನಂ ಚೇದಂ ಯಸ್ಯನಾರಾಯಣಸ್ತುಸಃ" ಎನ್ಗೈ
ಯಾಲೇ, (೨) "ಸರ್ವಪುಂಸಾಂ ಸಮೂಹಃ" ಎನ್ರದುವುಮ್ ಉಪಲಕ್ಷಣಮಾ

---

ಎಂದರೆ ತಿಳಿಸುತ್ತಾರೆ. ನಿತ್ಯನಾಗ ಪ್ರಮಾಣ ಸಿದ್ಧನಾನ ಜೀವನುಕ್ಕು –
ನಿತ್ಯೋನಿತ್ಯಾನಾಂ ಎಂದು ಶ್ವೇತಾಶ್ವತರ ಮತ್ತು ಇತರಶ್ರುತಿ ಪ್ರಮಾಣಗಳಿಂದ
ನಿತ್ಯತ್ವವು ಏರ್ಪಟ್ಟ ಜೀವರುಗಳಿಗೆ, ಜೀವನುಕ್ಕು- ಎಂದು ಇಲ್ಲಿ ಜಾತ್ಯೇಕವಚನವು;
ಬ್ರಹ್ಮಕಾರ್ಯತ್ವಂ-ಸೃಷ್ಟಿಮೂಲಕ ಪರಬ್ರಹ್ಮಕಾರ್ಯತ್ವ ಉಂಟೆಂಬುದು, ವಿಶೇಷಣ್ವ
ದ್ವಾರಕಮ್ - ಕರಣ ಕಳೇಬರಯೋಗವನ್ನು ಹೊಂದಿ ಪರಮಾತ್ಮನಿಗೆ ಅಪೃಥ
ಕ್ಸಿದ್ಧ ವಿಶೇಷಣರೂಪವಾಗಿರುವ ಮೂಲಕವಾದುದು ; ಇದರಿಂದ ಜೀವಾತ್ಮರ
ಜ್ಞಾನಸ್ವರೂಪದಲ್ಲಿ ಭೇದವಿಲ್ಲದಿದ್ದರೂ, ಸ್ವಭಾವತಃ ಧರ್ಮಭೂತಜ್ಞಾನ ವಿಕಾಸ
ತಾರತಮ್ಯದಿಂದ ಭಿನ್ನರಾಗಿ ಬದ್ಧದಶೆಯಲ್ಲಿ ತೋರುವರೆಂಬ ಭಾವವು. ಅಚಿತ್ತಿನಲ್ಲಿ
ಬ್ರಹ್ಮಕಾರ್ಯತ್ವವು ಸ್ವರೂಪಾವಸ್ಥೆಯಲ್ಲೇ ಭೇದರೂಪದಲ್ಲಿ ; ಚಿತ್ತಿನಲ್ಲಾದರೋ
ಸ್ವರೂಪತಃ ಭೇದವಿಲ್ಲದೆ, ಕರಣಕಳೇಬರ ಯೋಗಮೂಲಕ ಬದ್ಧದಶೆಯಲ್ಲಿ
ಸ್ವಭಾವತಃ ಭೇದರೂಪದಲ್ಲಿ ಎಂದು ಭಾವಿಸತಕ್ಕದ್ದು. ಮುಕ್ತದಶೆಯಲ್ಲಿ ಸ್ವಭಾವತಃ
ಭೇದವಿಲ್ಲದಿದ್ದರೂ ಆತ್ಮರೆಲ್ಲಾ ಭಿನ್ನರೇ.

ಇಲ್ಲಿ ಹೇಳಲ್ಪಟ್ಟ ವ್ಯುತ್ಪತ್ತಿಗಳ ಮೂಲಕ ನಾರಾಯಣ ಶಬ್ದಕ್ಕೆ ಅನೇಕಾ
ರ್ಥಗಳು ಉಪದೇಶಿಸಲ್ಪಟ್ಟವು. ಕಲ್ಪಸೂತ್ರಗಳಲ್ಲಿ ನಾರಾಯಣ ಶಬ್ದಕ್ಕೆ ವ್ಯುತ
ತ್ತ್ಯಂತರಗಳಿಂದ ಅರ್ಥಗಳನ್ನು ಹೇಳುವವೆಲ್ಲಾ ಈಗ ಉಪಪಾದಿಸಿದ ಅರ್ಥ
ಗಳಿಗೆ ಸಮಾನವಾದವುಗಳೆಂದು ತಿಳಿಸುತ್ತಾರೆ. ಇನ್ನೂ ಇತರ ಕಲ್ಪಗಳಲ್ಲಿ ಬೇ
ವಿಧವಾಗಿ ನಿರ್ವಚನಮಾಡಿ ಹೇಳಿರುವುದು ಹೇಗೆ ಎಂದರೆ ಅಲ್ಲಿ ಹೇಳುವವೆಲ್ಲವೂ
ಈ ಅರ್ಥಗಳಿಗಿಂತ ಬೇರೆ ಅಲ್ಲವೆಂದು ಹೇಳುತ್ತಾರೆ.— ಇಪ್ಪಡಿ- ಈ ರೀತಿಯಲ್ಲಿ
ನಾರಾಯಣಾತ್ಮಕಾದಿ ಕಲ್ಪಙ್ಗಳಿಲೇ– ನಾರಾಯಣ ಶಬ್ದ ನಿರ್ವಚನ ವಿಷಯ
ವಾದ ಕಲ್ಪಾಂತರಗಳಲ್ಲಿ, ಚೊನ್ನ ವ್ಯುತ್ಪತ್ತ್ಯಂತರಙ್ಗಳುಮೆಲ್ಲಾಮ್ ಹೇಳಲ್ಪಟ್ಟಿ
ರುವ ಬೇರೆ ವ್ಯುತ್ಪತ್ತಿಗಳೆಲ್ಲವೂ, 'ಇವತ್ತೋಡು ತುಲ್ಯಮ್' - ಈಗ ನಿರ್ವಚನ
ಮೂಲಕ ಸಾಧಿಸಿದ ಅರ್ಥಗಳಿಗೆ ಸಮಾನವಾದವು. ಇದರಿಂದ ಇಲ್ಲಿ ಉಪ
ಪಾದಿಸಲ್ಪಟ್ಟ ಅರ್ಥಗಳಿಗಿಂತ ಬೇರೆ ಯಾವ ಅರ್ಥಗಳೂ ಅವುಗಳಿಂದ ತೋರಿ
ಬರುವುದಿಲ್ಲವೆಂಬ ತಾತ್ಪರ್ಯವು.

ಹಿಂದೆ ನಾರಶಬ್ದಕ್ಕೆ ನಿತ್ಯರಾದ ಜೀವವರ್ಗಪರವಾಗಿ ಅರ್ಥಮಾಡಿ ನಿತ್ಯೋ

---

(೧) (೨)

**ಗೈಯಾಲ್,ಕ್ಷಯಿಷ್ಣುಕ್ಕಳಲ್ಲಾವೈಯಾಲೇ ಸ್ವರೂಪತ್ತಾಲೆಯಾದಲ್, ಪ್ರವಾಹತ್ತಾಲೆಯಾದಲ್, ನಿತ್ಯಙ್ಗಳಾಯ್ ನರಶಬ್ದವಾಚ್ಯಙ್ಗಳಾನ ಸರ್ವತತ್ವಙ್ಗಳುಡೈಯ ಸಮೂಹಙ್ಗಳುಮ್ ನಾರಙ್ಗಳ್.**

---

ನಿತ್ಯಾನಾಂ" ಎಂಬಲ್ಲಿ ತೋರಿಬರುವ ಅರ್ಥವನ್ನು ವಿವರಿಸಿದರು. ನಾರ ಶಬ್ದದಿಂದ ಅಚೇತನವು ಹೇಳಲ್ಪಡಲಿಲ್ಲವೋ ಎಂದರೆ ಅಚೇತನವೂ ಸಹ ನಾರಶಬ್ದದಲ್ಲೇ ಸೇರಿತುಎಂದುಉಪಪಾದಿಸುತ್ತಾರೆ—ನಾರಶಬ್ದವಾಚ್ಯರಾದ ನಿತ್ಯರಾದ ಚೇತನರಿಗೆ ಆಶ್ರಯವಾಗಿ ಉಳ್ಳವನು ಎಂದು ಹೇಳಿದರೆ ಅಚಿತ್ತಿಗೆ ಆಧಾರನಲ್ಲವೋ? ಅಚಿತ್ತೂ ಸಹ ಪ್ರವಾಹತಃ ನಿತ್ಯವಲ್ಲವೋ ಎಂದರೆ,ನಾರಶಬ್ದವು ನಾಶವಿಲ್ಲದೆ ನಿತ್ಯವಾದವುಗಳನ್ನು ಬೋಧಿಸುವದರಿಂದ ಸ್ವರೂಪತಃ ನಿತ್ಯವಾದ ಚೇತನವರ್ಗವನ್ನೂ ಪ್ರವಾಹತಃ ನಿತ್ಯವಾದ ಅಚೇತನವರ್ಗವನ್ನೂ ನಾರ ಶಬ್ದವು ಬೋಧಿಸುತ್ತದೆಂದು ಹೇಳಿ, ಸರ್ವಾಧಾರತ್ವವನ್ನು ನಾರಾಯಣಶಬ್ದದಿಂದ ಸ್ಥಾಪಿಸುತ್ತಾರೆ. ಪ್ರಥಮತಃ ಚೇತನಾಚೇತನವೆರಡೂ ನಾರಶಬ್ದದಿಂದ ಹೇಳಲ್ಪಟ್ಟವೆಂದು ಪ್ರಮಾಣವನ್ನು ಉದಾಹರಿಸುತ್ತಾರೆ. "ಚೇತನಾಚೇತನಂ ಸರ್ವಂ - ಚೇತನಾಚೇತನ ಸಮಸ್ತವೂ, ಯತ್ - ಯಾವುದು, ವಿಷ್ಣೋಃ - ವಿಷ್ಣುವಿಗಿಂತ, ವ್ಯತಿರಿಚ್ಯತೇ- ಬೇರೆಯಾಗಿರುತ್ತದೋ, ತತ್ ಇದಂ - ಅಂತಹ ಇದು, ನಾರಂ - ನಾರಂ ಎಂದು ಹೇಳಿಸಿಕೊಳ್ಳುವದು, ಯಸ್ಯ - ಯಾವನಿಗೆ, ಅಯನಂ - ಆಶ್ರಯವೋ, ಇರುವದಕ್ಕೆ ಸ್ಥಳವಾಗಿರುತ್ತದೋ, ಸತು - ಅವನಾದರೋ ನಾರಾಯಣಃ - ನಾರಾಯಣನೆಂದು ಹೇಳಿಸಿಕೊಳ್ಳುವನೇ. ಇಲ್ಲಿ ನಾರಶಬ್ದವು ಚೇತನಾಚೇತನ ಸಮೂಹವನ್ನು ಬೋಧಿಸುತ್ತದೆಂದು ಹೇಳಲ್ಪಟ್ಟಿತು." ಎನ್ಗೈಯಾಲೇ-ಎಂದು ಹೇಳಿರುವದರಿಂದ, ಸರ್ವಪುಂಸಾಂ ಸಮೂಹಃ" ಸಮಸ್ತ ಚೇತನರುಗಳ ಸಮೂಹವು ನಾರವೆಂದು ಪಾದ್ಮೋತ್ತರದಲ್ಲಿ ಹೇಳಿರುವದು ಉಪಲಕ್ಷಣಮಾಗೈಯಾಲ್ - ಚೇತನವರ್ಗದೊಂದಿಗೇ ಸೇರಿರುವ ಅಚಿದ್ವರ್ಗಕ್ಕೂ ಉಪಲಕ್ಷಣವಾಗಿ ಹೇಳಿರುವದರಿಂದಲೂ, ಕ್ಷಯಿಷ್ಣುಕ್ಕಳಲ್ಲಾವೈಯಾಲ್ - ರಾಃ ನ(ಭವತೀತಿ) ನರಾಃ ಎಂದಾಗುವದರಿಂದ ರಾಃ - ಎಂದರೆ ಕ್ಷಯಿಷ್ಣುಕ್ಕಳ್—ನಾಶವುಳ್ಳವು, ನರಾಃ — ಎಂದರೆ ನಾಶವಿಲ್ಲದಿರುವದರಿಂದ ಸ್ವರೂಪತ್ತಾಲೇ ಯಾದಲ್—ಸ್ವರೂಪಮೂಲಕವಾಗಿಯಾಗಲಿ, ಪ್ರವಾಹತ್ತಾಲೆಯಾದಲ್ - ಪ್ರವಾಹದಿಂದಲಾಗಲಿ, ನಿತ್ಯಙ್ಗಳಾಯ್—ನಿತ್ಯಗಳಾಗಿರುವ, ಇದರಿಂದ ಕ್ರಮವಾಗಿ ಚೇತನಾಚೇತನಗಳು ಹೇಳಲ್ಪಟ್ಟವು, ನರಶಬ್ದವಾಚ್ಯಗಳಾನ - ನರಶಬ್ದದಿಂದ ಹೇಳಲ್ಪಟ್ಟ ಸರ್ವ ತತ್ವಙ್ಗಳುಡೈಯ ಸಮೂಹಙ್ಗಳ್ ನಾರಙ್ಗಳ್ - ಸಮಸ್ತ ವಿಶ್ವದ ಚೇತನಾಚೇತನ ಸಮೂಹಗಳು ನಾರ ಶಬ್ದದಿಂದ ಹೇಳಲ್ಪಟ್ಟವು.

“ಜಹ್ನು ನಾರ್ರಾಯಣೋನರಃ” ಎನ್ರು ನಾಮಧೇಯಮಾಗ **ಚೊಲ್ಲುಗೈಯಾ** ಲುಮ್, (೨) “ಆಪೋ ನಾರಾಯಣೋದ್ಭೂತಾ ಸ್ತಾ ಏವಾ ಸ್ಯಾಯನಂ ಪುನಃ” ಎಙ್ಗಿರ ವ್ಯಾಸಸ್ಮೃತಿ ವಾಕ್ಯತ್ತಾಲೇ, (೩) ಆಪೋವೈ ನರಸೂ ನವಃ” ಇತ್ಯಾದಿಗಳಿಲ್ ನರಶಬ್ದಮುಮ್ ನಾರಾಯಣನ್ನೈ ಚೊಲ್ಲುಗಿರದೆನ್ನು ಮಿಡಮ್ ಸುವ್ಯಕ್ತಮಾಗೈಯಾಲುಮ್, ನರನೆನ್ರು ನಿತ್ಯನಾಯ್, ಸರ್ವ

---

**ನರಃ** ಎಂದೂ, ರಿಷ ಹಿಂಸಾಯಾಂ ಎಂಬ ಧಾತುವಿನ ಮೂಲಕ **ನರಿಷ್ಯತೀತಿ ನರಃ** ಎಂದರೆ ವಿಕಾರ ರಹಿತನೆಂದೂ, ಹೀಗೆ ಇತರ ಧಾತುಗಳು ಹೇಳಲ್ಪಟ್ಟವು, ಹೀಗೆ ವ್ಯುತ್ಪತ್ತಿಮೂಲಕವಾಗಿ ನರ ಶಬ್ದವು ಪರಮ ಪುರುಷನನ್ನು ಬೋಧಿಸುತ್ತದೆ. ಮುಂದೆ ಪ್ರಯೋಗವೂ ಉಂಟೆಂದು ಹೇಳುತ್ತಾರೆ, **“ಜಹ್ನು ನಾರ್ರಾಯಣೋನರಃ”** ಎನ್ರು-ಎಂಬದಾಗಿ, **ನಾಮಧೇಯ ಮಾಗ ಚೊಲ್ಲುಗೈಯಾ** ಲುಮ್ - ವಿಷ್ಣು ಸಹಸ್ರನಾಮದಲ್ಲಿ ಹೇಳಿರುವದರಿಂದಲೂ (೨) **ಆಪಃ** - ಅಪ್ಪುಗಳೂ, ಇದರಿಂದ ಸಮಸ್ತ ಅಚಿತ್ತೂ ಆದರೊಂದಿಗೆ ಸೇರಿರುವ ಜೀವಾತ್ಮರೂ ಸಹ ಉಪಲಕ್ಷಣವಾಗಿ ಹೇಳಲ್ಪಟ್ಟರು, **ನಾರಾಯಣೋದ್ಭೂತಾಃ** ನಾರಾಯಣನಿಂದ ಸೃಷ್ಟಿಯನ್ನು ಹೊಂದಿದವರು, ಅಸ್ಯ **ಪುಂಸಃ** - ಈ ನಾರಾಯಣ ನಾದ ಪರಮ ಪುರುಷನಿಗೆ, **ತಾ ಏವ** - ಈ ಅಚಿತ್ತೂ ಚಿತ್ತುಗಳೂ, **ಆಯನಂ** - **ವಾಸಸ್ಥಾನವು**” ಎಙ್ಗಿರ **ವ್ಯಾಸಸ್ಮೃತಿ ವಾಕ್ಯತ್ತಾಲೇ** - ಎಂಬ ವ್ಯಾಸ ಸ್ಮೃತಿ ವಾಕದಿಂದ ಎಂದರೆ ವಾಕ್ಯಕ್ಕೆ ಅನುಗುಣವಾಗಿ ಎಂಬರ್ಥವು. (೩) **ಆಪೋವೈ ನರಸೂನವಃ** - ಅಪ್ಪುಗಳು ಎಂದರೆ ಸಮಸ್ತ ಚಿದಚಿತ್ತುಗಳೂ ನರಶಬ್ದವಾಚ್ಯನಾದ ನಾರಾಯಣನಿಂದ ಜನಿಸಿದವು, ಸೃಷ್ಟಿಸಲ್ಪಟ್ಟುವು” **ಇತ್ಯಾದಿಗಳಿಲ್** ಇವೇ ಮೊದಲಾದ ಪ್ರಮಾಣಗಳಲ್ಲಿ. **ನರ ಶಬ್ದವೂ, ನಾರಾಯಣನ್ನೈ ಶೊಲ್ಲುಗಿರದೆನ್ನು ಮಿಡಮ್**-ನಾರಾಯಣನನ್ನೇ ಬೋಧಿಸುತ್ತದೆಂಬುದು, **ಸುವ್ಯಕ್ತಮಾಗೈಯಾಲುಮ್**-ಸುವ್ಯಕ್ತವಾಗುವದರಿಂದಲೂ, **ನರ ನೆನ್ರು**-ನರನೆಂಬದಾಗಿ ನಿತ್ಯನಾಗಿ, (ರೀಙ್ ಕ್ಷಯೇ ಎಂಬ ಧಾತುವಿನಿಂದುಂಟಾದರ್ಥವು) **ಸರ್ವ ನೇತಾವಾನ** - ಸಮಸ್ತಕ್ಕೂ ನಿಯಾಮಕನಾದ (**ಣೃ ನಯೇ** ಎಂಬುದರಿಂದ **ನಯತಿ** ಎಂಬರ್ಥವು) ಸರ್ವೇಶ್ವರನಿಗೆ, **ತಿರುನಾಮ ಮಾಗೈಯಾಲುಮ್** – ನಾಮಧೇಯವಾದುದರಿಂದಲೂ, **ನಾರ** ಎಂಬ ಪದವು ಮುಂದೆ ಹೇಳುವ ಎಲ್ಲಾ ಭಾವಗಳನ್ನೂ, “ಶೊಲ್ಲು ಗಿರದ.” ಎಂಬೀ ಮಹಾ ವಾಕ್ಯವನ್ನು **ಪೂರೈಸುವದಕ್ಕೆ ಮೊದಲು**, ಅಹಿರ್ಬುಧ್ನ್ಯ ಸಂಹಿತೆಯಲ್ಲಿ ಈ ಅರ್ಥಗಳೆಲ್ಲಾ ಉಪಪಾದಿತಗಳೆಂದು ಐದು ಶ್ಲೋಕಗಳನ್ನು ಉದಾಹರಿಸಿ ತಿಳಿಸುತ್ತಾರೆ. ಅವು ಯಾವುವೆಂದರೆ [೪]**ನರಃ** ನರಶಬ್ದವಾಚ್ಯನು, **ಸಃ ಪುರುಷೋತ್ತಮಃ** - ಆ ಪ್ರಸಿದ್ಧನಾದ ಪುರುಷೋತ್ತ

---

[೧] ಭಾರ. ಅನು. ಸಹಸ್ರ. ೨.೪೯ [೨]ವ್ಯಾಸಸ್ಮೃತಿ.[೩] **ಮನುಸ್ಮೃತಿ. ೧.೧೦**

**ನೇತಾವಾನ, ಸರ್ವೇಶ್ವರನುಕ್ಕು ತಿರುನಾಮಮಾಗೈಯಾಲೇ (೪) ನರಸಂಬಂಧಿನೋ ನಾರಾ ನರ ಸ್ಸ ಪುರುಷೋತ್ತಮಃ । ನಯತ್ಯಖಿಲವಿಜ್ಞಾನಂ ನಾಶಯತ್ಯಖಿಲಂ ತಮಃ ॥ ನರಿಷ್ಯತಿ ಚ ಸರ್ವತ್ರ ನರ ಸ್ತಸ್ಮಾತ್ಸನಾತನಃ । ನರ ಸಂಬಂಧಿನ ಸ್ಸರ್ವೇ ಚೇತನಾಚೇತನಾತ್ಮಕಾಃ ॥ ಈಶಿತವ್ಯತಯಾ ನಾರಾ**

---

ಮನು, ಆ ಕಾರಣದಿಂದ ನಾರಾಃ ಎಂದರೆ **ನರ ಸಂಬಂಧಿನಃ** - ನರನಿಗೆ ಶರೀರವಾಗಿ ಅಪೃಥಕ್ಸಿದ್ಧ ವಿಶೇಷಣ ಸಂಬಂಧವುಳ್ಳವು; ಇವು ಸಮಸ್ತ ವಿಶ್ವದ ಚಿದಚಿತ್ತುಗಳು, ಇದರಿಂದ ವಿಶ್ವಶರೀರಕತ್ವವು ಬೋಧಿತವು. **ನಯತ್ಯಖಿಲ ವಿಜ್ಞಾನಮ್** - ಇದು **ನೃ ನಯೇ** ಎಂಬ ಧಾತುವಿನಿಂದ ಬಂದ ಅರ್ಥವು, ಆಶ್ರಿತರಿಗೆ "**ದದಾಮಿ ಬುದ್ಧಿಯೋಗಂತಮ್**" [ಗೀ. ] ಎಂಬಲ್ಲಿ ಹೇಳಿರುವಹಾಗೆ ತನ್ನನ್ನು ಹೊಂದಲು ಬೇಕಾದ ಸರ್ವ ವಿಜ್ಞಾನವನ್ನು ಹೊಂದಿಸುತ್ತಾನೆ, ಇದರಿಂದ ಆಶ್ರಿತನಿಗೆ ಸಿದ್ಧೋಪಾಯನೆಂಬುದೂ ಸೂಚಿತವು. **ನಾಶಯತ್ಯಖಿಲಂ ತಮಃ** - ಇದು **ನಶ್ ಅದರ್ಶನೇ** ಎಂಬ ಧಾತುವಿನಿಂದುಂಟಾದ ಅರ್ಥವು, ಆ ಆಶ್ರಿತರ ಸಕಲ ಅಜ್ಞಾನರೂಪ ಅಂಧಕಾರವನ್ನು ಹೋಗಲಾಡಿಸುವವನು. ಇವುಗಳಿಂದ ಸರ್ವಜ್ಞತ್ವಾದಿ ಸ್ವರೂಪವುಳ್ಳವನಾಗಿ, ಇತರರ ಅಜ್ಞಾನವನ್ನು ಹೋಗಲಾಡಿಸುವ ಶಕ್ತಿಯುಳ್ಳವನೆಂದು ಹೇಳಿದುದರಿಂದ, ಕಲ್ಯಾಣಗುಣಾಕರತ್ವ, ಹೇಯ ಪ್ರತ್ಯನೀಕತ್ವಗಳುಂಟೆಂಬ ಭಾವವು ಬರುವದರಿಂದ, ಅವಿದ್ಯಾದಿ ದೋಷಸಂಬಂಧವು ಪುರುಷೋತ್ತಮನಿಗೆ ಉಂಟೆಂಬ ವಾದವು ಈ ನಾರಾಯಣ ಶಬ್ದಾರ್ಥದಿಂದ ದೂರೀಕೃತವು ಎಂದೂ ಹೇಳಿದಂತಾಯಿತು ; ಆದುದರಿಂದಲೇ **ನರಿಷ್ಯತಿಚ ಸರ್ವತ್ರ**- ಹೀಗೆ ಎಲ್ಲಾ ಕಡೆಯಲ್ಲೂ ಚಿದಚಿತ್ತುಗಳಿಂದ ಸೇರಿದ್ದರೂ **ನರಿಷ್ಯತಿ** - ವಿಕಾರ ಹೊಂದುವದಿಲ್ಲವು, ಇದು **ರಿಷ ಹಿಂಸಾಯಾಂ** ಎಂಬ ಧಾತುವಿನಿಂದುಂಟಾದ ಅರ್ಥವು, **ತಸ್ಮಾತ್** - ಹೀಗೆ ನಿರ್ವಿಕಾರನಾದುದರಿಂದಲೇ, **ಸನಾತನಃ**-ಅನಾದಿ ನಿತ್ಯನಾಗಿ **ನರಃ** - ನರನೆಂದು ಹೇಳಿಸಿಕೊಳ್ಳುವನು, ಇದು ರೀಙ್ ಕ್ಷಯೇ ಎಂಬ ಧಾತುವಿನ ಮೂಲಕ ನಾಶರಹಿತನೆಂಬ ಅರ್ಥದಿಂದುಂಟಾದ ಭಾವವು. ಹಿಂದೆ ಹೇಳಿದ ಅರ್ಥಗಳನ್ನೇ ಉಪಪಾದನೆ ಮಾಡಿ ಹೇಳುತ್ತಾರೆ. **ಸರ್ವೇ ಚೇತನಾ ಚೇತನಾತ್ಮಕಾಃ**-ಚೇತನಾ ಚೇತನರೂಪವಾಗಿರುವ ಎಲ್ಲವೂ, **ನರಸಂಬಂಧಿನಃ** - ಪರಮಾತ್ಮನಿಗೆ ಸಂಬಂಧಿಸಿದ ವಸ್ತುಗಳು, ಹೇಗೆ ಸಂಬಂಧಿಸಿದವುಎಂದರೆ ಮುಂದೆ ತಿಳಿಸುತ್ತಾರೆ. ಹೇಗೆ ಇವು **ನಾರಾಃ** ಎಂದರೆ, **ಈಶಿತವ್ಯತಯಾ** - ನಿಯಮಿಸಲ್ಪಡುವದರಿಂದಲೂ, ಧಾರ್ಯ ಪೋಷ್ಯ [illegible] ಆಧೇಯಗಳಾದುದರಿಂದ ಧರಿಸಲ್ಪಟ್ಟು ಪೋಷಿಸಲ್ಪಡುವದರಿಂದಲೂ, ನರಸಂಬಂಧಿಗಳಾಗಿ ನಾರಗಳು ಎಂಬ ಭಾವವು. ಧಾರ್ಯವೆಂದು ಹೇಳಿದುದು [illegible]

---

[೪] [illegible]

**ಧಾರ್ಯ ಪೋಷತಯಾ ತಥಾ । ನಿಯಮಾವ್ಯತ್ಯಯೇನ ಸೃಜ್ಯತ್ವ ಪ್ರವೇಶ ಭರಣೈಸ್ತಥಾ ॥ ಅಯತೇ ನಿಖಿಲಾನ್ನಾರಾನ್ ವ್ಯಾಪ್ನೋತಿ ಕ್ರಿಯಯಾ ತಥಾ(ಯಾ) ನಾರಾಶ್ಚಾಪ್ಯಯನಂ ತಸ್ಯ ತೈಸ್ಸ್ವರೂಪ ನಿರೂಪಣಾತ್। ನಾರಾಣಾಮಯನಂ ವಾಸಸ್ತೇ ಚ ತಸ್ಯಾಯನಂ ಸದಾ । ಶ ನಾಚಗತಿಸ್ತೇಷಾ ನಾರಾಣಾ**

---

**ಆತನಿಂದಲೇ** ಆಧೇಯವೂ ಅವನಿಗೆ ಶೇಷಭೂತವಾದುವು ಎಂದು **ಹೇಳಿದಂತಾಯಿತು, ಪೋಷತಯಾ**-ಎಂದು ಹೇಳಿದುದರಿಂದ ಸತ್ತಾ ಸ್ಥಿತಿಗಳೆಲ್ಲಾ ಅವನಿಂದಲೇ ಎಂದು ಹೇಳಿದಂತಾಯಿತು ; ಇನ್ನೂ ಹೇಗೆ ಪರಮಾತ್ಮನಿಗೆ ಸಂಬಂಧಿಸಿದವುಗಳಾಗಿ ನಾರಗಳು ಎಂದರೆ, **ನಿಯಮಾವ್ಯತ್ಯೇನ** - ಹೀಗೆ ಹಿಂದೆಹೇಳಿದ **ಈಶಿತವ್ಯ ದಿಂ**ದುಂಟಾದ, ಸೃಜ್ಯತ್ವ-ಸೃಷ್ಟಿಯೂ, ಪ್ರವೇಶ - ತತ್ಸೃಷ್ಟ್ವಾ **ತದೇವಾನುಪ್ರಾವಿಶತ್** ಎಂಬಲ್ಲಿ ಹೇಳಿರುವ ಅಂತಃ ಪ್ರವೇಶ ಮತ್ತು **ಭರಣೈಸ್ತಥಾ**-ಹಾಗೆಯೇ ಸತ್ತಾ ಸ್ಥಿತಿಗಳ ಮೂಲಕ ಭರಿಸುವದರಿಂದ ಎಂದರೆ ಪೋಷಿಸುವದರಿಂದಲೂ, ಚೇತನಾ ಚೇತನರೂಪ ಸಮಸ್ತವೂ ನಾರಗಳು, **ನರಸಂಬಂಧಿ**ಗಳು. ಮುಂದೆ ಈ ನಾರ ಶಬ್ದ ಮತ್ತು ಅಯನ ಶಬ್ದಗಳ ಸಂಬಂಧದಿಂದುಂಟಾಗುವ ಅರ್ಥಗಳು ಉಪಪಾದಿಸಲ್ಪಡುತ್ತವೆ—ಹಿಂದೆ ಹೇಳಿದ ಷಷ್ಠೀ ತತ್ಪುರುಷ ಬಹುವ್ರೀಹ್ಯರ್ಥಗಳು ಮುಂದಿನ ಎರಡುಶ್ಲೋಕಗಳಿಂದ ಹೇಳಲ್ಪಡುವುವು; ಇಂತಹ **ನಿಖಿಲಾನ್ ನಾರಾನ್** ಸಮಸ್ತ ಚೇತನಾಚೇತನ ಸಮೂಹಗಳನ್ನು **ಅಯತೇ** - ನಿಯಮಿಸುತ್ತಾನೆ ಇವರ ಅಭಿಪ್ರಾಯವನ್ನು ವಿವರಿಸುತ್ತಾರೆ.—**ತಯಾ ಕ್ರಿಯಯಾ ವ್ಯಾಪ್ನೋತಿ** - ವ್ಯಾಪನ ಪೋಷಣ ನಿಯಮನಾದಿ ಆ ಕ್ರಿಯೆಯಿಂದಲೇ ವ್ಯಾಪಿಸುತ್ತಾನೆ. ಅದೂ ಅಲ್ಲದೆ ಸರ್ವೇಶ್ವರನ ಜ್ಞಾನಾನಂದಾದಿ ಸಮಸ್ತ ಕಲ್ಯಾಣಗುಣಗಳು ನಾಶರಹಿತಗಳಾಗಿ ನಿತ್ಯಗಳಾದುದರಿಂದ ಇವುಗಳೇ ಚೇತನಾನುಗ್ರಹಕ್ಕೆ ಮುಖ್ಯವಾದುದರಿಂದ, ಅವು ಉಂಟೆಂದು ಇನ್ನೊಂದು ವಿಧವಾಗಿ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. **ನಾರಾಶ್ಚಾಪಿ**-ಈ ನಿತ್ಯಗಳಾದ ಜ್ಞಾನಾನಂದಾದಿಗಳು, ನಾರಾಯಣನಿಗೆ, **ಅಯನಂ** - ಚೇತನಾನುಗ್ರಹ ಮೊದಲಾದವುಗಳಿಗೆ **ಅಯನಂ**-ಸಾಧನವು; ಇದಕ್ಕೆ ಕಾರಣವೇನೆಂದರೆ? **ತೈಃ**-ಆ ನಿತ್ಯಗಳಾದ ಜ್ಞಾನಾನಂದಾದಿಗಳಿಂದ, **ತದ್ಭಾವನಿರೂಪಣಾತ್**-ಪರಮಾತ್ಮನ ಸ್ವರೂಪವನ್ನು "**ಸತ್ಯಂ ಜ್ಞಾನಮನಂತಂ ಬ್ರಹ್ಮ**"ಇತ್ಯಾದಿ ಶೋಧಕ ವಾಕ್ಯಗಳಿಂದ ನಿರೂಪಿಸುವದರಿಂದ. ಇದು ನಾರಾಃ ಅಯನಂ ಯಸ್ಯಸಃ ಎಂದು ಬಹುವ್ರೀಹಿ ಸಮಾಸದಿಂದ ದೊರೆಯುವ ಅರ್ಥವು. ಇಲ್ಲಿ ಸ್ವರೂಪ ನಿರೂಪಕ ಧರ್ಮಗಳು ಮಾತ್ರವಲ್ಲದೆ ನಿರೂಪಿತ ಸ್ವರೂಪ ವಿಶೇಷಣಗಳೂ ಹೇಳಲ್ಪಟ್ಟವು. ಜ್ಞಾನಾನಂದಾಮಲತ್ವಾದಿಗಳು ಸ್ವರೂಪ ನಿರೂಪಕ ಧರ್ಮಗಳು. ಹಾಗೆಯೇ ಶ್ರಿಯಃಪತಿತ್ವವೂ ಸ್ವರೂಪ ನಿರೂಪಕ ಧರ್ಮವು ಶ್ರೀಯೂ ನರಸಂಬಂಧಿಯಾದುದರಿಂದ ನರಶಬ್ದದಲ್ಲೇ ಸೇರಿ

ನಾತ್ಮನಾಂ ಸದಾ ॥" ಎಙ್ಗಿರ ಅಹಿರ್ಬುಧ್ನ್ಯಾದಿಗಳಿಲ್ ನಿರ್ವಚನಂ ಪಣ್ಣಿನ ಪಡಿಯೇ "ನರಸಂಬನ್ಧಿ ನಾರಮ್" ಎಙ್ಗಿರ ವ್ಯುತ್ಪತ್ತಿಯಾಲೇ ಸರ್ವೇಶ್ವರನುಡೈಯ ಸ್ವರೂಪನಿರೂಪಕ ಧರ್ಮಙ್ಗಳುಮ್, ವ್ಯಾಪಾರಙ್ಗಳುಮ್, ವಿಗ್ರಹವಿಶೇಷಙ್ಗಳುಮ್, ಮತ್ತುಮುಳ್ಳ ತ್ರಿವಿಧಚೇತನಾಚೇತನಙ್ಗಳುಮೆಲ್ಲಾಮ್, ನಾರಶಬ್ದಾರ್ಥಮಾನ ಪೋದು, ಸ್ವವ್ಯತಿರಿಕ್ತ ಸರ್ವತ್ತುಕ್ಕುಮ್ ಆಶ್ರಯತ್ವಾದಿ ರೂಪೇಣ ನಿರ್ಕುಮ್ ಪ್ರಕಾರಮ್ ವಿವಕ್ಷಿತಮಾಲೇ ಸ್ವವಿಷಯತ್ವಾದಿಗಳೈ ಚೊಲ್ಲುಗಿರದು.

---

ದವಳು. ನಿರೂಪಿತ ಸ್ವರೂಪ ವಿಶೇಷಣಗಳು ಜ್ಞಾನ ಶಕ್ತಿ, ಸೌಲಭ್ಯ ಸೌಶೀಲ್ಯಾದಿಗಳು ; ಇವುಗಳು ಹಿಂದೆಯೇ ವಿವರಿಸಲ್ಪಟ್ಟಿವೆ. ಭೂಷಣಾಯುಧ ಪರಿಜನಗಳಿಂದ ಸೇರಿರೋಣವೂ ನಿರೂಪಿತ ಸ್ವರೂಪವಿಶೇಷಣದಲ್ಲಿಯೇ ಸೇರಿದುದು. ಮುಂದೆ ಷಷ್ಠೀ ತತ್ಪುರುಷಾರ್ಥವನ್ನು ಹೇಳುತ್ತಾರೆ.— ನಾರಾಣಾಂ ಅಯನಂ ವಾಸಃ-ನಾರಾಯಣನು ನಿತ್ಯರಾದ ಆತ್ಮರುಗಳಿಗೆ ಅಯನವೆಂದರೆ ವಾಸಃ - ಆಧಾರನು, ಆಶ್ರಯನು; ತೇಚ-ಅವರೂ ಕೂಡ, ತಸ್ಯ- ಆ ನಾರಾಯಣನಿಗೆ, ಅಯನಂ- ಅಂತರ್ಯಾಮಿತ್ವೇನ ಇರಲು ವಾಸಸ್ಥಾನವು. ನಾರಾಣಾಂ ಎಂದರೆ ಆತ್ಮನಾಂ ಜೀವಾತ್ಮರುಗಳಿಗೆ, ಸದಾ - ಯಾವಾಗಲೂ ಪರಮಾಗತಿಃ - ಪರಮ ಪ್ರಾಪಕನೂ ಪ್ರಾಪ್ಯನೂ" ಎಙ್ಗಿರ ಅಹಿರ್ಬುಧ್ನ್ಯಾದಿಗಳಿಲ್ ಎಂದು ಹೇಳಿರುವ ಅಹಿರ್ಬುಧ್ನ್ಯ ಮೊದಲಾದ ಪ್ರಮಾಣಗಳಲ್ಲಿ, ಇಲ್ಲಿ ಆದಿಶಬ್ದದಿಂದ ಮಹರ್ಷಿಗಳ ಇತಿಹಾಸ ಪುರಾಣಗಳಲ್ಲೂ ಇಂತಹ ನಾರಾಯಣ ಶಬ್ದ ನಿರ್ವಚನಕ್ಕೆ ಪ್ರಮಾಣಗಳುಂಟೆಂದು ಹೇಳಲ್ಪಟ್ಟಿತು, ನಿರ್ವಚನವನ್ನು, ಪಣ್ಣಿನ ಪಡಿಯೇ - ಮಾಡಿದಹಾಗೆ, "ನರ ಸಂಬಂಧಿ ನಾರಂ, ಎಙ್ಗಿರ ವ್ಯುತ್ಪತ್ತಿಯಾಲೇ - ಎನ್ನುವ ವ್ಯುತ್ಪತ್ತಿಯಿಂದ (೧) ಸರ್ವೇಶ್ವರನ ಸ್ವರೂಪ ನಿರೂಪಕ ಧರ್ಮಗಳೂ ನಿರೂಪಿತ ಸ್ವರೂಪ ವಿಶೇಷಣಗಳೂ,, (೨) ವ್ಯಾಪಾರಂಗಳುಮ್ - ಅವತಾರಗಳ ಸಾಧುಪರಿತ್ರಾಣ ದುಷ್ಟ ನಿಗ್ರಹ ಧರ್ಮ ಸಂಸ್ಥಾಪನೆ ಮೊದಲಾದ ಮತ್ತು ಸೃಷ್ಟ್ಯಾದಿ ದಿವ್ಯ ಚೇಷ್ಟಿತಗಳೂ (೩) ವಿಗ್ರಹ ವಿಶೇಷಙ್ಗಳ್ - ಪರ ವ್ಯೂಹ ವಿಭವ ಮೊದಲಾದ ಐದು ವಿಧ ದಿವ್ಯ ಮಙ್ಗಳ ವಿಗ್ರಹಗಳೂ (೪) ಮತ್ತುಮುಳ್ಳ - ಇದಲ್ಲದೆ, ಇರುವ ತ್ರಿವಿಧ ಚೇತನಾಚೇತನಙ್ಗಳ್ ಎಲ್ಲವೂ, ಇವಕ್ಕೆ ತತ್ತತ್ಪ್ರಯಾಧಿಕಾರವನ್ನು ನೋಡಿ, ನಾರಶಬ್ದಾರ್ಥಮಾನ ಪೋದು - ನಾರಶಬ್ದಕ್ಕೆ ಅರ್ಥವಾದಾಗ, ಸ್ವವ್ಯತಿರಿಕ್ತ - ಸರ್ವೇಶ್ವರನಾದ ತನಗಿಂತ ಬೇರೆಯಾದ ಸರ್ವತ್ತುಕ್ಕುಂ ಆಶ್ರಯತ್ವಾದಿ ರೂಪೇಣ - ಸಮಸ್ತಕ್ಕೂ ಆಧಾರ, ಆದಿಶಬ್ದದಿಂದ ಶೇಷಿತ್ವ ಜೀವಾತ್ಮರಿಗೆ ಉಪಾಯತ್ವ, ರಕ್ಷಕತ್ವ, ಉಪೇಯತ್ವಾದಿಗಳು ಬೋಧಿತವು, ಈ ರೂಪಗಳಲ್ಲಿ ನಿರ್ಕುಂ - ಇರುವ, ಪ್ರಕಾರಂ ವಿವಕ್ಷಿತಮಾಗೈಯಾಲೇ - ಪ್ರಕಾರವು

ಇಲ್ಲಿ ಹೇಳಬೇಕಾಗಿರುವದರಿಂದ ಸ್ವನಿಷ್ಠತ್ವಾದಿಗಳೈ ಚೊಲ್ಲುಗಿರದು-"ಸ್ವೇಮ ಹಿಮ್ನಿ ಪ್ರತಿಷ್ಠಿತಃ" ಎಂದೂ, ಲೋಕದಲ್ಲಿರುವ ಎಲ್ಲವುಗಳಿಗಿಂತ "ಜ್ಯಾಯಾನ್" ಎಂದೂ "ನ ತಸ್ಯೇಶೇ ಕಶ್ಚನ, ತಸ್ಯ ನಾಮ ಮಹದ್ಯಶಃ" [ತ್ರೈ.೧ನೇ ೧. ೨] ಎಂದೂ "ನ ತಸ್ಯ ಕಶ್ಚಿತ್ ಪತಿರಸ್ತಿ" [ಶ್ವೇ. ೬. ೯] ಎಂದೂ, "ನ ತತ್ಸಮ ಶ್ಚಾಭ್ಯಧಿಕಶ್ಚ ದೃಶ್ಯತೇ" ಎಂದೂ [ಶ್ವೇ. ೬. ೮] ಹೇಳಿರುವಹಾಗೆ, ಆತನಿಗೆ ಸಮರೂ ಇಲ್ಲವು, ಅಧಿಕರೂ ಇಲ್ಲವು. ಹೀಗೆ ಇಂತಹ ಮಹಿಮೆಗಳೆಲ್ಲವನ್ನೂ ನಾರಾಯಣ ಶಬ್ದವೂ ಬೋಧಿಸುತ್ತದೆ. ಇದಕ್ಕೆ ಕರ್ತೃ ಪದವು ಯಾವುದೆಂದರೆ ನಾರ ಅಯನ ಶಬ್ದಗಳಿಂದ ವ್ಯುತ್ಪನ್ನವಾದ ನಾರಾಯಣ ಶಬ್ದವೆಂದು ಇಟ್ಟುಕೊಳ್ಳಬೇಕೆಂಬುದು ಸೂಚಿತವು. ಈ ಮೇಲಿನದು ಒಂದು ಮಹಾವಾಕ್ಯವು "ಸರ್ವ ವ್ಯಾಪಕತ್ವಾದಿ" ಎಂದು ಆರಂಭವು; "ಶೊಲ್ಲು ಗಿರದು", ಎಂದು ನಿಗಮನ ಮಾಡಿ ನಾರಾಯಣ ಶಬ್ದಾರ್ಥವು ಉಪಪಾದಿತವು.

ಭಗವನ್ನಾಮಗಳಲ್ಲಿ ಭಗವನ್ಮಾಹಾತ್ಮ್ಯೆಯನ್ನು ಪ್ರಕಾಶಮಾಡಿಸುವ ನಾಮವು ನಾರಾಯಣಶಬ್ದವನ್ನು ಬಿಟ್ಟರೆ ಬೇರೆ ಯಿಲ್ಲವು. ಶ್ರೀ ಯಾಮುನೇಯರ ಪರ ಗೀತಾರ್ಥ ಸಙ್ಗ್ರಹ ಶ್ಲೋಕವಾದ "ಅಚಿನ್ತ್ಯಶಾಪ್ರದ್ವಿಶುದ್ಧಾಚ್ಚ ಚೇತನಾತ್ಪುರುಷೋತ್ತಮಃ। ವ್ಯಾಪನಾದ್ಭರಣಾತ್ಸ್ವಾಮ್ಯಾದನ್ಯಃ ಪಂಚದಶೋದಿತಃ"ಎಬಂಲ್ಲಿ ಹೇಳಿರುವಹಾಗೆ ಆತನಿಗೆ ನಮ್ಮನ್ನು ವ್ಯಾಪಿಸಿ ಭರಿಸಿ, ಸತ್ತಾದಿಗಳನ್ನು ಕೊಡುವ, ಮತ್ತು ನಾವೆಲ್ಲರೂ ಆತನ ಸ್ವತ್ತಾದುದರಿಂದ ನಿಯಮಿಸುವ, ಶಕ್ತಿಗಳು ಇರುವದರಿಂದ, ಆತನು ನಮಗೆ ಈಶ್ವರನು ನಿಯಾಮಕನು ಶೇಷಿಯು; ನಾವೆಲ್ಲಾ ಅವನಿಗೆ ಶೇಷಭೂತರಾಗಿ ದಾಸರಾಗಿರುವ ರಕ್ಷ್ಯವಸ್ತುವು. ಹೀಗೆ ೧೫ನೆಯ ಗೀತಾಧ್ಯಾಯದಲ್ಲಿ ಸ್ಪುಟವಾಗಿ ತೋರಿಬರುತ್ತದೆ. ಈ ಅರ್ಥಗಳೆಲ್ಲಾ ಈ ನಾರಾಯಣ ಶಬ್ದದಿಂದಲೇ ವ್ಯಕ್ತವಾಗಿರುವಾಗ ಅದ್ವೈತಿಗಳು ಅದೇ ಗೀತೆಯಲ್ಲೇ "ಮಮ ಸಾಧರ್ಮ್ಯ ಮಾಗತಾಃ" ಎಂದೂ "ಉತ್ತಮಃ ಪುರುಷಸ್ತ್ವನ್ಯಃ" ಎಂದೂ ಭ್ರಮಕ್ಕೆ ಕಾರಣವೇ ಇಲ್ಲದಹಾಗೆ ವ್ಯಕ್ತವಾಗಿ ಇದ್ದರೂ, ಮತ್ತು ಈ ನಾರಾಯಣ ಶಬ್ದಾರ್ಥವನ್ನೂ ಚನ್ನಾಗಿ ಅನುಸಂಧಾನ ಮಾಡದೆ, ಸ್ವರೂಪೈಕ್ಯವನ್ನು ಹೇಳುತ್ತಾರಲ್ಲಾ ಎಂಬ ಪರಿತಾಪದಿಂದ ಮುಂದಿನ ವಾಕ್ಯವನ್ನು ಹೇಳುತ್ತಾರೆ. ನಿಂದೆಗೋಸ್ಕರ ಹೇಳಿದ ವಾಕ್ಯವು ಸರ್ವಾತ್ಮನಾ ಅಲ್ಲವು. "ತತ್ವಮಸಿ" ಅಯಮಾತ್ಮಾ ಬ್ರಹ್ಮ" ಇತ್ಯಾದಿ ಐಕ್ಯ ಬೋಧಕ ಶ್ರುತಿಗಳ ಅರ್ಥಗಳನ್ನು ಸರಿಯಾಗಿ ಗ್ರಹಿಸದೆ ತಾನೇ ಪರಮಾತ್ಮವೆಂದು ಹೇಳುವದು ಶ್ರೀ ದೇಶಿಕವರ್ಯರಿಗೆ ಕರ್ಣಕಠೋರವಾಕ್ಯವು. ತಾನು ದಾಸನು ಪರಮಾತ್ಮನಿಗೆ ಎಂದು ಹೇಳಿಕೊಳ್ಳಬೇಕೇ ವಿನಾ, ಅದನ್ನು ಬಿಟ್ಟು ತಾನೇ ಪರಮಾತ್ಮನೆಂದು ಹೇಳುವದು ಹೇಗೆ ನ್ಯಾಯವೆಂದು ಪರಿತಾಪದಿಂದ ತಿಳಿಸುತ್ತಾರೆ. ಅವರುಗಳು ಕೆಲವು ಶ್ರುತಿಗಳಿಗೆ ಬಾಧ್ಯಬಾಧಕವನ್ನು ನಿರ್ಣಯಿಸಿ ಸ್ವಸ್ವರೂಪವನ್ನು ಹೇಳಿದರೇ ವಿನಾ, ಅವುಗಳಿಗೆ

## ನಾರಾಯಣ ಶಬ್ದ ವೈಭವೇನ ಸ್ವರೂಪೈಕ್ಯಾದಿ ಭ್ರಮ ನಿವೃತ್ತಿಃ

**ಇಪ್ಪಡಿ ವ್ಯಾಪನ ಭರಣನಿಯಮನ ಸ್ವಾಮ್ಯಾದಿಗಳಾಲೇ ವೇರುಪಟ್ಟಿರುಕ್ಕಿರ ಪುರುಷೋತ್ತಮನುಕ್ಕುಮ್, ತತ್ಸಂಬಂಧಿಗಳುಕ್ಕುಮ್, ಕುದೃಷ್ಟಿಗಳ್ ಚೊನ್ನ ಸ್ವರೂಪೈಕ್ಯಾದಿ ಭ್ರಮಙ್ಗಳ್ ಕಳಿಯುಮ್ಪಡಿ ಸರ್ವಶರೀರತ್ವ ಸರ್ವ ಶಬ್ದ ವಾಚ್ಯತ್ವಾದಿ ವೈಭವಮು ಮಿಙ್ಗೇ ಫಲಿತಮ್.**

---

ಸಮನ್ವಯವನ್ನು ಏರ್ಪಡಿಸಲಿಲ್ಲವೇ ಎಂಬುದೇ ಪರಿತಾಪಕ್ಕೆ ಕಾರಣವು. **ಇಪ್ಪಡಿ** - ಈಗ ಹಿಂದೆ ಅಹಿರ್ಬುಧ್ನ್ಯೋಕ್ತವಾದ ನಿರ್ವಚನದಿಂದ, ಏರ್ಪಟ್ಟಹಾಗೆ, **ವ್ಯಾಪನ ಭರಣ ನಿಯಮನ ಸ್ವಾಮ್ಯಾದಿಗಳಾಲೇ** - ಸರ್ವವನ್ನೂ ವ್ಯಾಪಿಸಿ, ಭರಿಸಿ, ನಿಯಮಿಸಿ, ಮತ್ತು ಎಲ್ಲವೂ ತನ್ನ ಸ್ವತ್ತಾಗಿರುವದರಿಂದ **ವೇರುಪಟ್ಟಿರುಕ್ಕಿರ** - ಇಂತಹ ಶಕ್ತಿಯು ಇನ್ನು ಯಾರಿಗೆ ಇಲ್ಲದಿರುವದರಿಂದ ತಾನೇ ಸರ್ವೇಶ್ವರನಾಗಿ ಎಲ್ಲಕ್ಕೂ ವಿಲಕ್ಷಣನಾಗಿ ಬೇರೆಯಾಗಿರುವ, **ಪುರುಷೋತ್ತಮನಕ್ಕುಮ್** - ಗೀತೆಯಲ್ಲಿ ಕಂಠೋಕ್ತವಾಗಿ **"ಉತ್ತಮಪುರುಷಸ್ತ್ವನ್ಯಃ"** ಎಂದು ವ್ಯಕ್ತವಾಗಿ ವೈಲಕ್ಷಣ್ಯವನ್ನು ಹೇಳಿರುವ ಪುರುಷೋತ್ತಮನಿಗೂ, **ತತ್ಸಂಬಂಧಿಗಳಕ್ಕು** - ಪರಮಾತ್ಮ ಸಂಬಂಧಿಗಳಾಗಿ ಕ್ಷರಾಕ್ಷರ ಶಬ್ದಗಳಿಂದ ಹೇಳಲ್ಪಟ್ಟ ಬದ್ಧ ಮುಕ್ತ ಜೀವರುಗಳಿಗೂ, **ಕುದೃಷ್ಟಿಗಳ್** - ವೇದವಾಕ್ಯಗಳಿಗೆ ಸರ್ವಸಾಮಂಜಸ್ಯವುಂಟಾಗುವಹಾಗೆ ಅರ್ಥ ಹೇಳದೆ ವ್ಯತ್ಯಸ್ತವಾಗಿ ಅರ್ಥಹೇಳುವವರು, **ಚೊನ್ನ** - ಹೇಳಿದ, **ಸ್ವರೂಪೈಕ್ಯಾದಿ ಭ್ರಮಙ್ಗಳ್** - ಪರಮ ಪುರುಷನಿಗೂ ಜೀವಾತ್ಮರಿಗೂ ಸ್ವರೂಪದಲ್ಲಿ ಐಕ್ಯ ಉಂಟೆಂಬ ಭ್ರಮವೇ ಮೊದಲಾದವುಗಳು, ಆದಿ ಶಬ್ದದಿಂದ ಜಗನ್ಮಿಥ್ಯೆ ಎಂಬ, ಪರಬ್ರಹ್ಮ ನಿರ್ಗುಣ ಎಂಬಿವೇ, ಮೊದಲಾದ ಅಭಿಪ್ರಾಯಗಳೂ ಸಂಗ್ರಹಿಸಲ್ಪಟ್ಟಿವೆ; ನಾರಾಯಣ ಶಬ್ದಾರ್ಥದ ಅನುಸಂಧಾನದಿಂದ, ಸ್ವರೂಪೈಕ್ಯವೊಂದೆ ಮಾತ್ರವಲ್ಲದೆ, ಜಗನ್ಮಿಥ್ಯೆ ಎಂಬುದನ್ನೂ, ಪರಬ್ರಹ್ಮ ನಿರ್ಗುಣವೆಂಬುದನ್ನೂ ಸಾಧಿಸುವುದು ಸಾಧ್ಯವಿಲ್ಲವೆಂಬ ಭಾವವು; ಭ್ರಮವು, **ಕಳಿಯುಮ್ಪಡಿ** - ಹೋಗುವಹಾಗೆ, **ಸರ್ವಶರೀರತ್ವ ಸರ್ವಶಬ್ದ ವಾಚ್ಯತ್ವಾದಿ** - ಮೊದಲಾದ, **ವೈಭವಮ್** - ಮಹಾತ್ಮ್ಯವು, **ಇಙ್ಗೇ** - ಈ ನಾರಾಯಣ ಶಬ್ದ ನಿರ್ವಚನದಲ್ಲಿ, **ಫಲಿತಮ್** - ಪ್ರತ್ಯಕ್ಷವಾಗುತ್ತದೆ. ಆದರೆ "ತತ್ತ್ವಮಸಿ" ಸದೇವ ಸೋಮ್ಯೇದಮಗ್ರ ಆಸೀತ್ "ಏಕಮೇವಾದ್ವಿತೀಯಂ" "ಬ್ರಹ್ಮವೇದ ಬ್ರಹ್ಮೈವ ಭವತಿ," "ಅಹಂ ಬ್ರಹ್ಮಾಸ್ಮಿ" "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯಾದಿ ಐಕ್ಯ ಬೋಧಕ ವಾಕ್ಯಗಳಿಗೆ ಗತಿಯೇನು ಎಂದು ಆಕ್ಷೇಪಿಸಿದರೆ ಇವುಗಳಿಗೆ ಅರ್ಥವನ್ನು ಹೇಳುವಾಗ ದ್ವೈತ ಶ್ರುತಿಗಳಿಗೂ, ಘಟಕ ಶ್ರುತಿಗಳಿಗೂ ಮೊದಲಾದವುಗಳಿಗೆ ವಿರೋಧವಿಲ್ಲದಹಾಗೆ ಅರ್ಥಮಾಡುವದೇಗ

ಪ್ರಾಜ್ಞತೆಯು. ಶಾಸ್ತ್ರಜ್ಞರು ಇವುಗಳಿಗೆ ಹೇಗೆ ಅರ್ಥವನ್ನು ಮಾಡಿದ್ದಾರೆಂಬು ದಕ್ಕೆ ಹಿಂದೆ ೧೯೦೦ ನೆಯ ಪುಟಗಳನ್ನು ನೋಡಿ. **ಸರ್ವಶಬ್ದವಾಚ್ಯತ್ವಾದಿ** ಎಂಬಲ್ಲಿ ಒಂದು ಆದಿಪದವಿರುತ್ತದೆ, ಇದರಿಂದ ಸರ್ವಕರ್ಮಾರಾಧ್ಯತ್ವ, ಸರ್ವಯಜ್ಞ ಭೋಕ್ತೃತ್ವಾದಿಗಳು ಹೇಳಲ್ಪಟ್ಟವು. ಸರ್ವ **ಶರೀರತ್ವವೂ ಸರ್ವಶಬ್ದವಾಚ್ಯ ತ್ವವೂ** ನಾರಾಯಣಶಬ್ದದಿಂದ ಹೇಗೆ ಗ್ರಹಿಸಬಹುದು ? ಎಂದರೆ,ನಾರಶಬ್ದವಾಚ್ಯ ಗಳಾದ ಚೇತನಾಚೇತನಗಳಿಗೂ ಆಧಾರನೂ ಶೇಷಿಯೂ ಎಂಬರ್ಥವನ್ನು, **ಯಸ್ಯ ಪೃಥಿವೀ ಶರೀರಂ, ಯಸ್ಯಾತ್ಮಾ ಶರೀರಮ್, ಯಸ್ಯ ಸರ್ವಾಣಿಭೂತಾನಿ ಶರೀರಂ,** ಇತ್ಯಾದಿ ಶ್ರುತಿಪ್ರಮಾಣ ಬಲಗಳಿಂದ ಹೇಳಿರುವದರಿಂದ ತೋರಿಬರುತ್ತ ದೆಂಬ ಭಾವವು. ಯಾವಾಗ ಸರ್ವಶರೀರಿತ್ವ ಉಂಟಾಯಿತೋ ಆಗ ಶರೀರಿ ಶರೀರಗಳಿಗೆ ಸಾಮಾನಾಧಿಕರಣ್ಯವು ಕೂಡುತ್ತದೆ. ಆ ಸಾಮಾನಾಧಿಕರಣ್ಯದಿಂದ ಸರ್ವಶಬ್ದ ವಾಚ್ಯತ್ವವೂ ಉಂಟಾಗುತ್ತದೆ. ಸ್ವಾಮಿದೇಶಿಕರವರು ಈ ಅರ್ಥಗಳ ನ್ನೆಲ್ಲಾ ಹಿಂದೆಯೂ ಉಪಪಾದಿಸಿರುತ್ತಾರೆ. ಇಲ್ಲಿ ಮುಖ್ಯವಾಗಿ ವ್ಯಾಪನ,ಭರಣ, ನಿಯಮನ, ಸ್ವಾಮ್ಯಗಳನ್ನು ಹೇಳುವದು ಸರ್ವ ಶರೀರಿತ್ವವೂ ಸರ್ವನಿಯಮ ನತ್ವವೂ ತನ್ಮೂಲಕ ಸರ್ವೇಶ್ವರತ್ವವೂ, ಇವುಗಳಿಂದ ಸಿದ್ಧವೆಂಬ ಅಭಿಪ್ರಾಯ ದಿಂದವೆಂದು ಭಾವಿಸತಕ್ಕದ್ದು. ಈಗಿನ ಶಂಕರಾಭಿಪ್ರಾಯಶೋಧಕರು ಶಂಕರಾ ಚಾರ್ಯರು ಸ್ವರೂಪೈಕ್ಯವನ್ನು ಅವರು ಬೋಧಿಸಲಿಲ್ಲವೆಂದೂ, ಸಾಯುಜ್ಯ ಶಬ್ದಕ್ಕೆ ಅವರು ಹಾಗೆ ಅರ್ಥಮಾಡಲಿಲ್ಲವೆಂದೂ,ಅವರ ಮತಾವಲಂಬಿಗಳೇ ಅವರ ಅಭಿಪ್ರಾ ಯವನ್ನು ಸರಿಯಾಗಿ ಗ್ರಹಿಸಿದೆ ಸ್ವರೂಪೈಕ್ಯವನ್ನು ಹೇಳಿದರೆಂದು ಭಾವಿಸುವರು. ಇದು ಸರಿಯಲ್ಲವೆಂದೂ, ಅವರ ಮುಕ್ತಿಯು ಭಾವನೆಯು ಹೇಗೆ ಎಂಬುದಕ್ಕೆ ಒಂದು ದೃಷ್ಟಾಂತವನ್ನು ಕೊಟ್ಟಿರುತ್ತಾರೆ, ಹೇಗೆಂದರೆ "ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ" ಎಂಬುದು ಅವರ ದೃಷ್ಟಾಂತವು. ಮತ್ತು ಮುಕ್ತ ನಿಗೆ ಅಪ್ರಾಕೃತ ಶರೀರಾವಯವಗಳುಂಟೆಂದು, ಆತನ ಜ್ಞಾನವು ಪರಿಶುದ್ಧವಾಗಿ ಪೂರ್ಣವಾಗುತ್ತದೆಂದೂ, "ಏತೇನೈವಮನಸಾ ಕಾಮಾನ್ಪಶ್ಯನ್ ರಮತೇ" ಎಂದು (ಛಾಂ. ೮. ೧೨. ೫)ರಲ್ಲಿ ಭಾಷ್ಯ ಬರೆದಿರುತ್ತಾರೆ. ಹೀಗಿರುವಾಗ ಶ್ರೀಮ ಚ್ಛಂಕರಾಚಾರ್ಯರು ಸ್ವರೂಪೈಕ್ಯವನ್ನು ಬೋಧಿಸಿದರೆಂದು ಹೇಳಲು ಹೇಗಾಗು ತ್ತದೆ? ಅವರು ಹೇಳಿದುದು ಸರ್ವಾತ್ಮಭಾವ ವೆಂದು ಹೇಳಿರುತ್ತಾರೆ. ಇದು ಶ್ರುತಿ ಯಲ್ಲಿ "ಸ್ವೇನರೂಪೇಣಾಭಿ ನಿಷ್ಪದ್ಯತೇ" ಎಂಬಲ್ಲಿ ಹೇಳಿರುವ ಭಾವವಾಗಿ ತೋರಿಬರುತ್ತದೆ. "ಸಮಸ್ತ ಆತ್ಮರಿಗೂ ಇರುವ ಸಮಾನ ಭಾವ"ವೆಂದಾಗ ಬಹುದು. ಇದರ ವ್ಯಾಖ್ಯಾನದಲ್ಲಿ ಕೋಕಿಲೇಶ್ವರ ಶಾಸ್ತ್ರಿಗಳೆಂಬ ಕಲ್ಕತ್ತಾಕಾಲೇ ಜಿನ ಅದ್ವೈತಸಿದ್ಧಾಂತಿಗಳು "This is also not the absorption of Ego in Brahmin" ಮುಕ್ತಿಯು ಸ್ವರೂಪೈಕ್ಯವಲ್ಲ ವೆಂದು ವ್ಯಕ್ತ ವಾಗಿ ತೋರಿಸಿರುತ್ತಾರೆ.

**ಅಥ ಶೋಧಕ ಕಾರಣೋಪಾಸನ ಫಲ ಬೋಧಕಾರ್ಥಾ ಅಪಿ ನಾರಾಯಣ ಪದೇ ಸಂತಿ.**

---

**ನರಶಬ್ದತ್ತಾಲೇ ಶೋಧಕವಾಕ್ಯಾರ್ಥಮುಮ್, ನಾರಶಬ್ದತ್ತಾಲೆ "ನರಾಜ್ಜಾತಾನಿ ತತ್ತ್ವಾನಿ ನಾರಾಣಿ" ಎಙ್ಗಿೖಯಾಲೇ ಕಾರಣ ವಾಕ್ಯಾರ್ಥಮುಮ್, "ಅಯನ" ಶಬ್ದತ್ತಾಲೇ ಅವ್ವೋ ಉಪಾಸನ ವಾಕ್ಯಾರ್ಥಙ್ಗಳ್ ಎಲ್ಲಾಮ್, ಇಙ್ಗೇ ಪ್ರಕಾಶಿತಙ್ಗಳಾಗಿರನ.**

---

**ಶೋಧಕ ಕಾರಣ ಉಪಾಸನ ಫಲಗಳನ್ನು ಬೋಧಿಸುವ ಅರ್ಥಗಳೆಲ್ಲಾ ನಾರಾಯಣ ಪದದಲ್ಲಿವೆ.**

---

ಅನಂತರ ಶೋಧಕ ಶ್ರುತಿಗಳೂ, ಜಗತ್ಕಾರಣತ್ವವನ್ನು ಬೋಧಿಸುವ ಶ್ರುತಿಗಳೂ ಉಪಾಸನಾದಿ ಉಪಾಯತ್ವ ಬೋಧಕ ಶ್ರುತಿಗಳೂ, ಫಲವನ್ನು ಬೋಧಿಸುವ ಶ್ರುತಿಗಳ ಅರ್ಥಗಳೂ ಇವೆಲ್ಲವನ್ನೂ ನಾರಾಯಣ ಪದದಿಂದ ಗ್ರಹಿಸಬಹುದೆಂದು ತಿಳಿಸುತ್ತಾರೆ. ಬ್ರಹ್ಮಸೂತ್ರಗಳಲ್ಲಿ ನಾಲ್ಕು ಅಧ್ಯಾಯಗಳಿಂದಲೂ ಬೋಧಿತಾರ್ಥಗಳನ್ನೂ ಸಙ್ಗ್ರಹವಾಗಿ ಈ ನಾರಾಯಣ ಪದದಲ್ಲಿ ಗ್ರಹಿಸಬಹುದೆಂದು ಹೇಳುತ್ತಾರೆ ಅಲ್ಲಿ ಪ್ರಥಮಾಧ್ಯಾಯದಲ್ಲಿ ಜಗತ್ಕಾರಣತ್ವವೂ, ಎರಡನೆಯ ಅಧ್ಯಾಯದಲ್ಲಿ ಇತರ ಸಿದ್ಧಾಂತಗಳಿಂದ ಅಬಾಧ್ಯತ್ವವೂ, ಮೂರನೆಯ ಅಧ್ಯಾಯದಲ್ಲಿ ಉಪಾಸನಾದಿ ಉಪಾಯತ್ವವೂ, ನಾಲ್ಕನೆಯದರಲ್ಲಿ ಫಲರೂಪದಲ್ಲಿ ಉಪೇಯತ್ವವೂ ಹೇಳಲ್ಪಟ್ಟಿವೆ. ಇವೆಲ್ಲಾ ಈ ನಾರಾಯಣ ಶಬ್ದದಲ್ಲೇ ಬೋಧಿತವು ಎಂದು ತಿಳಿಸುತ್ತಾರೆ.— **ನರಶಬ್ದತ್ತಾಲೇ** - ಹಿಂದೆ ಜಹ್ನುರ್ನಾರಾಯಣೋನರಃ ಎಂಬಲ್ಲಿ ನರ ಶಬ್ದವು ನಾರಾಯಣವಾಚಕವೆಂದೇ ಹೇಳಲ್ಪಟ್ಟಿತು; ಇದಕ್ಕೆ ವ್ಯುತ್ಪತ್ತಿ ಕ್ರಮೇಣ ನರಿಷ್ಯತೀತಿ ನರಃ ಎಂಬುವರಿಂದ ದೋಷರಹಿತನು, ಹೇಯ ಪ್ರತ್ಯನೀಕನು ಎಂಬ ಅರ್ಥ ಉಂಟಾಗುವದರಿಂದ "ಸತ್ಯಂಜ್ಞಾನಮನಂತಬ್ರಹ್ಮ" "ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ" "ನಿಷ್ಕಳಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಂಜನಂ" "ಅಸ್ಥೂಲಮನಣ್ವಹ್ರಸ್ವಮ್" ಇತ್ಯಾದಿ ಶೋಧಕವಾಕ್ಯಗಳಲ್ಲಿ ಹೇಳಿರುವ ಸ್ವರೂಪ ನಿರೂಪಕ ಧರ್ಮಗಳೂ, ಹಾಗೆಯೇ ನಿರೂಪಿತ ಸ್ವರೂಪ ವಿಶೇಷಣಗಳೂ ಸಹ ಬೋಧಿತವಾಗುವದರಿಂದ, ಹೀಗೆ ನರಶಬ್ದದಿಂದ **ಶೋಧಕವಾಕ್ಯಾರ್ಥಮುಮ್** - ಸ್ವರೂಪ ಶೋಧಕ ಶ್ರುತಿವಾಕ್ಯಗಳ ಅರ್ಥವೂ, **ನಾರಶಬ್ದತ್ತಾಲೇ** - ನಾರಶಬ್ದದಿಂದ, "ನರಾಜ್ಜಾತಾನಿ ನಾರಾಣಿ" **ಎಙ್ಗಿೖಯಾಲೇ** - ಭಗವಂತನಿಂದ ಉತ್ಪನ್ನವಾದವು ತತ್ತ್ವವೋ, ಅವು ನಾರಾಣಿ ಎಂದು ಹೇಳುವವರಿಂದ ಕಾರಣವಾಕ್ಯಾರ್ಥಮುಮ್, ವ್ಯಾಪ

**ನಾರಾಯಣಶಬ್ದೇನ ಅನ್ಯದೇವತಾ ವ್ಯವಚ್ಛೇದೇನ ಸ ಏವ ಪರತತ್ತ್ವಮ್**

**ಸುಬಾಲೋಪನಿಷತ್ಪ್ರಭೃತಿಗಳಿಲೇ ಸರ್ವಾನ್ತರ್ಯಾಮಿಯುಮಾಯ್ ಸರ್ವವಿಧ ಬಂಧುವುಮಾಯಿರುಕ್ಕಿರ ಸರ್ವೇಶ್ವರ್ ನಾರಾಯಣಶಬ್ದತ್ತಾಲೇ**

---

ಸೂತ್ರಗಳಲ್ಲಿ ಬೋಧಿತವಾಗಿರುವ **"ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯನ್ತ್ಯಭಿಸಂವಿಶನ್ತಿ"** (ತೈ. ಭೃಗು.) **"ಆತ್ಮನ ಆಕಾಶಸ್ಸಂಭೂತಃ" "ನಾರಾಯಣಾದ್ಬ್ರಹ್ಮಾ ಜಾಯತೇ, ನಾರಾಯಣಾದ್ರುದ್ರೋ ಜಾಯತೇ" "ಸದೇವ ಸೋಮ್ಯೇದಮಗ್ರ ಆಸೀತ್"** ಇತ್ಯಾದಿಗಳಲ್ಲಿ ತೋರುವ ಪರಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುವ ಅರ್ಥವು ತೋರಿಬರುವದರಿಂದ, **ಕಾರಣವಾಕ್ಯಾರ್ಥವೂ**- ನಾರಾಯಣನೇ ಜಗತ್ಕಾರಣನೆಂಬ ಅರ್ಥವು, ಇದು **ಅಬಾಧ್ಯಾರ್ಥಕ್ಕೊ** ಉಪಲಕ್ಷಣವು ; ಹೇಗೆಂದರೆ ನಾರಾಯಣನು ಯಾವಾಗ ಜಗತ್ಕಾರಣನಾಯಿತೋ, ಆಗ ಆತನಿಂದ ಸೃಷ್ಟಿಸಲ್ಪಟ್ಟ ಪ್ರಕೃತಿ ಪುರುಷರು ಜಗತ್ಕಾರಣರಲ್ಲವೆಂಬುದು ಸ್ವತಸ್ಸಿದ್ಧವು, ಇವು ಶಾರೀರಕ ಸೂತ್ರಗಳ ಪ್ರಥಮಾಧ್ಯಾಯ ದ್ವಿತೀಯಾಧ್ಯಾಯಾರ್ಥಗಳು. **ಅಯನಶಬ್ದತ್ತಾಲೇ ಉಪಾಸನ ವಾಕ್ಯಾರ್ಥವೂ**- **ಈಯತೇ ಅನೇನೇತಿ** ಕರಣ ವ್ಯುತ್ಪತ್ತಿಯಿಂದ ತಾನೇ ಪ್ರಾಪಕನು, ಸಿದ್ಧೋಪಾಯನು ಎಂಬರ್ಥವು ಬೋಧಿತವಾಗಿ ಅವಕ್ಕಾಗಿ ಸಿದ್ಧೋಪಾಯನಾಗಿ ಉಪಾಸನೆಯನ್ನು ಮಾಡುವಹಾಗೆ ಮಾಡುವನೆಂಬ ಅರ್ಥವಾಗಲಿ ಅಥವಾ ಈಯತೇ ಇತ್ಯಯನಂ ಎಂಬ ಕರ್ಮಣಿ ವ್ಯುತ್ಪತ್ತಿಯಿಂದ ಪ್ರಾಪ್ಯವಾಚಿಯಾಗುವದರಿಂದ **"ಅಮೃತಸ್ಯೈಷ ಸೇತುಃ" "ತಮೇವಂ ವಿದ್ವಾನಮೃತ ಇಹ ಭವತಿ" "ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ" "ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ"** ಇತ್ಯಾದಿ ಶ್ರುತ್ಯರ್ಥವೆಂಬ ಭಾವವು, ಇಪ್ಪತ್ತೇ- **ಈ** ನಾರಾಯಣಪದದಲ್ಲಿ, ಪ್ರಕಾಶಿಕ್ಕಾಗಿರನ-ವ್ಯಕ್ತವಾಗಿ ದ್ಯೋತಿತವು.

**ನಾರಾಯಣ ಶಬ್ದದಿಂದ ಆತನೇ ಪರತತ್ತ್ವವು ಅನ್ಯದೇವತೆಗಳಲ್ಲವು ಎಂಬುದೂ ತೋರಿಬರುತ್ತದೆ.**

---

**ಸುಬಾಲೋಪನಿಷತ್ಪ್ರಭೃತಿಗಳಿಲೇ** - ಸುಬಾಲೋಪನಿಷತ್ತು ಮೊದಲಾದವುಗಳಲ್ಲಿ, **ಸರ್ವಾನ್ತರ್ಯಾಮಿಯುಮಾಯ್** ಸರ್ವಾನ್ತರ್ಯಾಮಿಯಾಗಿಯೂ, **ಸರ್ವವಿಧ ಬಂಧುವುಮಾಯಿರುಕ್ಕಿರ**- ಆಗಿರುವ **ಸರ್ವೇಶ್ವರನು** ನಾರಾಯಣಶಬ್ದದ ಮೂಲಕವಾಗಿ **ದೇವತಾನ್ತರ ವ್ಯಾವೃತ್ತನಾಗ** - ಬ್ರಹ್ಮರುದ್ರೇಂದ್ರಾದಿ ಇತರ ದೇವತೆಗಳಿಗಿಂತಲೂ ವಿಲಕ್ಷಣನಾಗಿ ಬೇರೆಯಾಗಿರುವನಾಗಿ, **ಪ್ರತಿಪಾದಿತನಾನ್** - ಪ್ರತಿಪಾದಿಸಲ್ಪಟ್ಟವನಾದನು. ಸುಬಾಲೋಪನಿಷತ್ತಿನಲ್ಲಿ ಹೇಳಿರುವ ವಾಕ್ಯಗಳು ಯಾವುವೆಂದರೆ

**ದೇವತಾನ್ತರ ವ್ಯಾವೃತ್ತನಾಗ ಪ್ರತಿಪಾದಿತನಾನಾರ್. ಲೋಕತ್ತಿಲುಳ್ಳ ಸರ್ವ ಬಂಧುಕ್ಕಳುಮ್ ಭಗವತ್ಸಙ್ಕಲ್ಪತ್ತಾಲೇ ಬಂಧುಕ್ಕಳಾನಾರ್ಗಳ್.**

---

"ಏಷ ಸರ್ವಭೂತಾನ್ತರಾತ್ಮಾಽಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ" "ಮಾತಾಪಿತಾ ಭ್ರಾತಾ ನಿವಾಸಃ ಶರಣಂ ಸುಹೃನ್ನಾರಾಯಣಃ" ಎಂಬುವು. ಮೇಲಿನ ವಾಕ್ಯದಿಂದ ಸರ್ವಾಂತರ್ಯಾಮಿತ್ವವು, ಎರಡನೆಯ ವಾಕ್ಯದಿಂದ ಸರ್ವವಿಧ ಬಂಧುತ್ವವೂ ಉಪದೇಶಿಸಲ್ಪಟ್ಟು, ಅಂತಹ ಅಂತರ್ಯಾಮಿಯೂ, ಮತ್ತು ಸರ್ವವಿಧ ಬಂಧುವೂ, ನಾರಾಯಣನೇ ಎಂದು ಶ್ರುತಿಯು ಹೇಳಿತು. ತಾಯಿಯು ಹೇಗೆ ಸ್ತನ್ಯವನ್ನು ಕೊಟ್ಟು ವಾತ್ಸಲ್ಯದಿಂದ ಸಲಹುವಳೋ, ಹಾಗೆಯೇ ಸ್ವಾಮಿಯೂ ಸತ್ತೆಯನ್ನು ಕೊಟ್ಟು ಕಾಪಾಡುವನು. ತಂದೆಯು ಹೇಗೆ ಹಿತಪ್ರವರ್ತಕನೋ ಹಾಗೆಯೇ ಸರ್ವೇಶ್ವರನು. ಭ್ರಾತಾ-ಅವನ ಹಾಗೆ, ಪರಮಾತ್ಮನು ಹಿತಚಿಂತಕನು. ನಿವಾಸವೃಕ್ಷಸ್ಸಾಧೂನಾಂ ಎಂದು ಹೇಳಿರುವ ಮೇರೆಗೆ ಆಶ್ರಿತರಿಗೆ ಆವಾಸ ಸ್ಥಾನವು. ಶರಣಂ - ಕೃಷ್ಣಂ ಧರ್ಮಂ ಸನಾತನಂ ಎಂದು ಹೇಳಿರುವ ಹಾಗೆ ಸಿದ್ಧೋಪಾಯನು, ಮಾರ್ಗದರ್ಶಿಯು, ಸುಹೃತ್ - ಕಷ್ಟದಶೆಯಲ್ಲೂ ಕಾಪಾಡುವವನು, ಇಂತವನು ನಾರಾಯಣನು. ಹೀಗೆ ಸರ್ವವಿಧ ಬಂಧುವು ಶ್ರೀಮನ್ನಾರಾಯಣನು ಎಂಬುದು, ಏನಾದರೂ ಒಂದು ಉಪಾಧಿಮೂಲಕವೋ, ಎಂದರೆ ನಿರುಪಾಧಿಕ ಸರ್ವವಿಧ ಬಂಧುವು. ಇಂತಹ ಸರ್ವವಿಧ ಬಂಧುತ್ವವು ಸಹಜವಾದುದಾಗಿ ಯಾವಾಗಲೂ ಶಾಶ್ವತವಾಗಿರತಕ್ಕದ್ದು. ಸತ್ಯಸಙ್ಕಲ್ಪನ ಸ್ಥಿರಸಙ್ಕಲ್ಪದಿಂದಲೇ ನಮಗೂ ಆತನಿಗೂ, ಈ ವಿಧ ಬಂಧುತ್ವಗಳು ಏರ್ಪಟ್ಟಿವೆ. ಈ ಲೋಕದ ಪಿತೃತ್ವಾದಿ ಬಂಧುತ್ವಗಳೆಲ್ಲಾ ಸೋಪಾಧಿಕವಾಗಿ ಏರ್ಪಟ್ಟವು. ಇವೂ ಸತ್ಯ ಸಙ್ಕಲ್ಪನ ಸಙ್ಕಲ್ಪದಿಂದಲೇ ಏರ್ಪಟ್ಟವುಗಳಾದರೂ, ಅನಿತ್ಯವಾಗಿರಲಿ ಎಂಬ ಸಙ್ಕಲ್ಪದಿಂದ ಉಂಟಾದವು. ಆದುದರಿಂದ ಸೋಪಾಧಿಕಗಳು. ಆ ಉಪಾಧಿಯು ಯಾವುದೆಂದರೆ, ಈ ಜೀವಾತ್ಮನ ಪೂರ್ವಜನ್ಮಗಳಲ್ಲಿ ಮಾಡಿದ ಸುಕೃತ ದುಷ್ಕೃತ ಮೂಲಕವಾಗಿ ಉಂಟಾದವು. ಇದನ್ನೇ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಲೋಕತ್ತಿಲುಳ್ಳ ಸರ್ವಬಂಧುಕ್ಕಳುಮ್** - ಲೋಕದಲ್ಲಿ ತಂದೆ ತಾಯಿ ಮಗ ಅಣ್ಣ ಇತ್ಯಾದಿ ಸಮಸ್ತ ಬಂಧುಗಳ ಸಮುದಾಯವು, **ಭಗವತ್ಸಙ್ಕಲ್ಪತ್ತಾಲೇ** - ಕರ್ಮಮೂಲಕ ಪ್ರೇರಿತನಾದ ಭಗವಂತನ ಅನಿತ್ಯ ಸಙ್ಕಲ್ಪದಿಂದ, **ಬಂಧುಕ್ಕಳಾನಾರ್** - ಸೋಪಾಧಿಕ ಪರಸ್ಪರ ಬಂಧುಗಳಾದರು. ಶ್ರೀಮದ್ರಾಮಾಯಣದಲ್ಲಿ, ಶ್ರೀರಾಮನನ್ನು ಕುರಿತ ಲಕ್ಷ್ಮಣವಾಕ್ಯವು, ಐಹಿಕ ಬಂಧುತ್ವವು ಸೋಪಾಧಿಕ ಬಂಧುತ್ವವೆಂದೂ, ಪರಮಾತ್ಮನೇ ನಿರುಪಾಧಿಕವಾದ ಸರ್ವವಿಧ ಬಂಧುವೆಂದು ಬೋಧಿಸುತ್ತದೆ. "ಅಹಂ ತಾವನ್ಮಹಾರಾಜೇ ಪಿತೃತ್ವಂ ನೋಪಲಕ್ಷಯೇ ಭರ್ತಾ ಬಂಧುಶ್ಚ ಭ್ರಾತಾ ಚ ಪಿತಾ ಚ ಮಮ ರಾಘವಃ" [illegible]

ರಾಯನಲ್ಲಿ ನನಗೆ ಪಿತೃಭಾವವು ಸ್ವಲ್ಪವೂ ತೋರಿಬರಲಿಲ್ಲವು; ಸೋಪಾಧಿಕವಾದುದ ರಿಂದ ಆತನು ಶಾಶ್ವತ ಪಿತಾವಲ್ಲವು, ಏಕೆಂದರೆ ಆತನು ಶಾಶ್ವತ ಪಿತಾವಾಗಿದ್ದರೆ ನಮ್ಮಿಬ್ಬರನ್ನು ಎಂದಿಗೂ ಕಾಡಿಗೆ ಅಟ್ಟಲಾರನು, ಹಾಗಾದರೆ ನಿನಗೆ ಶಾಶ್ವತ ಪಿತಾಮಾತ್ರವಲ್ಲದೆ ಸರ್ವವಿಧ ಬಂಧುವು ಯಾರು ಎಂದು ಕೇಳುತ್ತೀಯೋ? ಎಲ್ಲವೂ ಪರತತ್ವನಾದ ರಾಮನೇ ಎಂದು ಮುಂದೆ ಹೇಳುತ್ತಾರೆ. ಸರ್ವಾಪರಾಧಗಳನ್ನು ಕ್ಷಮಿಸಿ ರಕ್ಷಿಸುವನು, ಕಷ್ಟದಶೆಯಲ್ಲಿ ಬಂಧುವು, ಹಿತೈಷಿಯಾದ ಭ್ರಾತಾವೂ, ಹಿತಮಾರ್ಗಪ್ರದರ್ಶಿಯಾದ ಪಿತಾವೂ ಎಲ್ಲವೂ, ನಮ್ಮ ರಾಘವನಾದ ಶ್ರೀ ರಾಮನೇ ಎಂದು, ಸುಮಂತ್ರನಲ್ಲಿ ಲಕ್ಷ್ಮಣನು ಕೋಪಗೊಂಡು, ಕೈಕೇಯಿಯ ಮಾತಿಗೆ ಕಟ್ಟುಬಿದ್ದು ಶ್ರೀರಾಮನಿಗೆ ಇಂತಹ ಕಷ್ಟವನ್ನುಂಟುಮಾಡಿದವನು ಹೇಗೆ ತಂದೆಯಾದಾನು ಎಂದು ಹೇಳುವ ವಾಕ್ಯವು. ತಂದೆ ಮಗ ಇತ್ಯಾದಿ ಬಂಧುತ್ವವು ಶರೀರಮೂಲಕವಾಗಿ ಕರ್ಮಕೃತವಾದುದು. ಆತ್ಮಸ್ವರೂಪವನ್ನು ಮನಸ್ಸಿನಲ್ಲಿಟ್ಟರೆ ಇಂತಹ ಸಂಬಂಧಗಳು ಯಾವುವು ಪ್ರಕೃತಿ ವಿಯುಕ್ತ ದಶೆಯಲ್ಲಿಲ್ಲವು. ದ್ವೈತ ಸಿದ್ಧಾಂತಿಗಳು ಇಲ್ಲದ ಗಂಡ ಹೆಂಡರ ಸಂಬಂಧವು ಮುಕ್ತ ದಶೆಯಲ್ಲಿಯೂ ಉಂಟೆಂದು ಹೇಳುವದಕ್ಕೆ ಯಾವ ಆಧಾರವಿಲ್ಲವು. ಪತಿ ಪತ್ನೀ ಸಂಬಂಧವೂ ಕೂಡ, ಪ್ರಕೃತಿ ಸಂಬಂಧವು ಯಾವಾಗ ತೊಲಗಿತೋ ಆಗ ಇಂತಹ ಸಂಬಂಧವೂ ಆಗ ತೊಲಗಿತು ಎಂದೇ ಭಾವಿಸತಕ್ಕದ್ದು. ಪಿತಾ, ಮಾತಾ, ಭ್ರಾತಾ, ಭರ್ತಾ, ಸ್ವಾಮಿ ಇತ್ಯಾದಿಗಳಲ್ಲಿ ತೋರುವ ಸಂಬಂಧವು ಎಲ್ಲಿ ನಿರುಪಾಧಿಕವಾಗಿ ತೋರುತ್ತದೆ ಎಂದರೆ ಪರಮ ಪುರುಷನಾದ ಒಬ್ಬನಲ್ಲಿ ಮಾತ್ರವೆಂದರಿಯತಕ್ಕದ್ದು. ಹಾಗೆಯೇ "ಗತಿರ್ಭರ್ತಾ ಪ್ರಭು ಸಾಕ್ಷೀ ನಿವಾಸಶ್ಶರಣಂ ಸುಹೃತ್" (ಗೀತಾ ೯-೧೮) ಇತ್ಯಾದಿ ಇತರ ಪ್ರಮಾಣಗಳೂ ಉಂಟು.

ಲೋಕದಲ್ಲಿ ಒಬ್ಬ ಆತ್ಮಾವಿಗೆ ಈತನು ತಂದೆ, ಇವಳು ತಾಯಿ, ಈಕೆಯು ಹೆಂಡತಿ, ಇವರು ಮಕ್ಕಳು, ಈತನು ಸ್ವಾಮಿಯು, ಈತನು ಭೃತ್ಯನು ಇತ್ಯಾದಿ ಸಂಬಂಧಿಗಳನ್ನೆಲ್ಲಾ ಏರ್ಪಡಿಸಿದವನು, ಸರ್ವೇಶ್ವರನೇ. ಈತನೂ ಇವರುಗಳೂ ಸಹ ಅವರವರುಗಳ ಕರ್ಮಾನುಸಾರ ಸುಖದುಃಖಾನುಭವಕ್ಕಾಗಿ ಸರ್ವೇಶ್ವರನ ಸಙ್ಕಲ್ಪದಿಂದ ಉಂಟಾದ ಬಂಧುತ್ವಗಳು ಇವು, ಎಂದು 'ಲೋಕತ್ತಿಲುಳ್ಳ' ಎಂದು ಆರಂಭಿಸಿದ ವಾಕ್ಯದಿಂದ ಹೇಳಲ್ಪಟ್ಟಿತು. ಈ ವಾಕ್ಯದಿಂದ ಬೃಹದಾರಣ್ಯಕದ (೬. ೫. ೬) ನವಾ ಅರೇಪತ್ಯುಃ ಕಾಮಾಯ ಪತಿಃ ಪ್ರಿಯೋಭವತಿ, ಆತ್ಮನಸ್ತು ಕಾಮಾಯ ಪತಿ ಪ್ರಿಯೋಭವತಿ" ಎಂದಾರಂಭಿಸಿ "ನವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ, ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ" ಈ ವಾಕ್ಯಗಳಲ್ಲಿ ಉಪಪಾದಿಸಿದ ಅರ್ಥವು ಇಲ್ಲಿ ವ್ಯಕ್ತಗೊಳಿಸಲ್ಪಟ್ಟಿತು. ಗಂಡನು ಪ್ರಿಯನಾಗಬೇಕು ಎಂದು ಹೆಂಡತಿಯು ಅಪೇಕ್ಷಿಸಿದರೆ ಗಂಡನು ಪ್ರಿಯನಾಗುವದಿಲ್ಲವು; ಪರಮಾತ್ಮನು ಸಙ್ಕಲ್ಪಿಸಿ ಅಪೇಕ್ಷಿ

ದರೆ ಆಗ ಗಂಡನು ಪ್ರಿಯನಾಗುವನು, ಹಾಗೆಯೇ ಸಮಸ್ತವೂ ಪ್ರಿಯವಾಗಿರು ವದು ಪರಮಾತ್ಮನ ಸಙ್ಕಲ್ಪಾಧೀನವು ಎಂಬ ತಾತ್ಪರ್ಯವು.

ಮುಂದೆ ಪರಮಾತ್ಮನು ಸರ್ವವಿಧ ಬಂಧುವು ಎಂಬ ಪ್ರಮಾಣವೂ, ಆಳ್ವಾರಾ ಚಾರ್ಯಾದಿಗಳ ಸಾಂಪ್ರದಾಯಿಕೋಕ್ತಿಯೂ ಉಂಟೋ? ಎಂದರೆ, ಉಂಟು ಎಂದು ಉದಾಹರಿಸುತ್ತಾರೆ. (೧) ತ್ವಮೇವ ಮಾತಾಚ ಪಿತಾತ್ವಮೇವ ತ್ವ ಮೇವಬಂಧುಶ್ಚ ಗುರುಸ್ತ್ವಮೇವ । ತ್ವಮೇವ ವಿದ್ಯಾದ್ರವಿಣಂ ತ್ವಮೇವ ತ್ವಮೇವ ಸರ್ವಂ ಮಮದೇವದೇವ" ತ್ವಮೇವ ಮಾತಾ-ನೀನೇ ತಾಯಿಯು, ಮಗುವನ್ನು ಗರ್ಭದಲ್ಲಿಟ್ಟು ಕಾಪಾಡುವಹಾಗೆ ಪ್ರಳಯದಲ್ಲಿ ಉದರದಲ್ಲಿಟ್ಟು ಕಾಪಾ ಡುವನೂ ಸೃಷ್ಟ್ಯನಂತರ ಜೀವನೋಪಾಯವನ್ನು ಕಲ್ಪಿಸಿ ರಕ್ಷಿಸುವವನೂ ನೀನೇ; ಪಿತಾತ್ವಮೇವ - "ಅಹಂಬೀಜ ಪ್ರದಃ ಪಿತಾ" ಎಂಬಲ್ಲಿ ಹೇಳಿ ರುವ ಹಾಗೆ ಕಾರಣಭೂತನಾಗಿ ಹಿತಪ್ರವರ್ತಕನಾಗಿರುವ ತಂದೆಯೂ ನೀನೇ, ತಾಯಿ ತಂದೆಗಳ ಹಾಗೆ ಪ್ರಯೋಜನದ ಕಾಂಕ್ಷೆಯಿಲ್ಲದೆ, ನಿರುಪಾಧಿಕವಾದ ಸ್ವತಂತ್ರ ಪ್ರವೃತ್ತಿಯುಳ್ಳವನೆಂಬಭಾವವು ತೋರಿಬರುತ್ತದೆ. ತ್ವಮೇವ ಬಂಧುಃ- ಕಷ್ಟಕಾಲಗಳಲ್ಲಿ ಹಿತೈಷಿಯಾಗಿ ಸಹಾಯಮಾಡುವ ಸರ್ವವಿಧ ಬಂಧುವಾದ ಕಳತ್ರ ಸುತ ಮಿತ್ರ ಮೊದಲಾದವರೆಲ್ಲವೂ ನೀನೇ, ಗುರುಸ್ತ್ವಮೇವ - ಗುರು ವಿನ ಹಾಗೆ ತತ್ತ್ವಹಿತ ಪುರುಷಾರ್ಥಗಳ ಯಥಾರ್ಥಜ್ಞಾನವನ್ನು ಕೊಟ್ಟು ಅಜ್ಞಾ ನಾಂಧಕಾರವನ್ನು ಹೋಗಲಾಡಿಸಿ ಉಪಾಯಾನುಷ್ಠಾನವನ್ನು ಮಾಡಿಸುವ ಗುರುವೂ ನೀನೇ, ತ್ವಮೇವ ವಿದ್ಯಾ - ಬ್ರಹ್ಮವಿದ್ಯಾ ಪ್ರವರ್ತಕನಾದ ಸಿದ್ಧೋ ಪಾಯನೂ ಫಲಪ್ರದನೂ ನೀನೇ, ದ್ರವಿಣಂ ತ್ವಮೇವ - ದ್ರವಿಣವು ಹೇಗೆ ಎಂದರೆ "ಅಮೃತಂ ಸಾಧನಂ ಸಾಧ್ಯಂ ಯಂ ಪಶ್ಯನ್ತಿ ಮನಿಷಿಣಃ" ಎಂಬಲ್ಲಿ ಹೇಳಿರುವಹಾಗೆ, ಶಾಶ್ವತಪದಕ್ಕೆ ಸಾಧಕನೂ ಸಾಧ್ಯನು ಎಂದು ಪ್ರಾಜ್ಞರು ಹೇಳಿರುವ ಹಾಗೆ ಸರ್ವವನ್ನೂ ಸಂಪಾದಿಸಿಕೊಡುವ ಧನವೂ ನೀನೇ, ಆದುದ ರಿಂದ ತ್ವಮೇವಸರ್ವಂ - ವಾಸುದೇವ ಸ್ಸರ್ವಮಿತಿ ಸಮಹಾತ್ಮಾ ಸುದುರ್ಲಭಃ ಎಂಬಲ್ಲಿ ಹೇಳಿರುವಹಾಗೆ ನೀನೇ ಸರ್ವವೂ, ಎಂಬರ್ಥವು.

(೨) ಈ ಪೂರಾ ಪಾಶುರವು ಯಾವುದೆಂದರೆ.—

ಎಮ್ಬಿರಾನೆನ್ತಂದೈಯೆನ್ನುಡೈಚ್ಚುತ್ತಮೆನಕ್ಕರಶೆನ್ನುಡೈವಾನಾಳ್ ।
ಅಮ್ಬಿನಾಲರಕ್ಕರವೆರುಕ್ಕೊಳನೆರುಕ್ಕಿಯವರುಯಿರ್ ಶೆಗುತ್ತವೆಮ್ಮಣ್ಣಲ್ ।
ವಮ್ಬುಲಾಂ ಶೋಲೈ ಮಾಮದಿಳ್ ತಂಜಮಾಮಣಿಕ್ಕೋಯಿಲೇವಣಙ್ಗಿ ।
ನಮ್ಬಿಕಾಳುಯ್ಯನಾರ್ಕಣ್ಡುಕೊಂಡೇನ್, ನಾರಾಯಣಾವೆನ್ನುಮ್ ನಾಮಮ್ ॥

(೧) ಗಾಂಧಾರಿ ವಾಕ್ಯ. (೨) ಪೆರಿಯ ತಿರು. ೧. ೧. ೬.

**(೩) "ಪಿತಾತ್ವಂ ಮಾತಾತ್ವಂ" ಇತ್ಯಾದಿಗಳಿರ್ಪಡಿಯೇ ನಿರುಪಾಧಿಕ ಸರ್ವವಿಧ ಬಂಧು ಸರ್ವೇಶ್ವರ ನೊರುವನುವೇ.**

---

**ಅರ್ಥ.—ನಮ್ಬಿಕಾಳ್** - ಭಗವದ್ಗುಣಾನುಭವದಿಂದ ಪೂರ್ಣರಾಯಿರುವ ಮಹಾನುಭಾವಗಳಿರಾ, **ಎಂಬಿರಾ** - ನನಗೆ ಮಹೋಪಕಾರಕನಾಗಿರುವ, **ಎನ್ ತಂದೈ** - ನನಗೆ ಕಾರಣಭೂತನಾದ, **ಎನ್ನುಡೈಚ್ಚುತ್ತಂ** - ನನಗೆ ಸರ್ವ ವಿಧ ಸಂಬಂಧವೂ, ಬಂಧುವೂ ಆದ, **ಎನಕ್ಕು ಅರಶು** - ನನ್ನನ್ನಾಳುವ, **ಎನ್ನುಡೈ ಯವಾಳ್ನಾಳ್** - ನಾನು ಬದುಕುವ ಆಯಸ್ಸೂ ಸಹ ಆದ ಮತ್ತು **ಅರಕ್ಕರ್**-ರಾಕ್ಷಸರನ್ನು, **ನೆರುಕ್ಕೊಳ** - ಭಯಪಡುವಹಾಗೆ, **ಅಂಬಿನಾಲ್** - ಬಾಣದಿಂದ **ನೆರುಕ್ಕಿ** - ಹತಮಾಡಿ, **ಅವರ್ ಉಯಿರ್** - ಅವರುಗಳ ಪ್ರಾಣಗಳನ್ನು, **ಶೆಗುತ್ತ** - ಹೋಗಲಾಡಿಸಿದ, **ಎಮ್ ಅಣ್ಣಲ್** - ಸ್ವಾಮಿಯಾದ ಸರ್ವೇಶ್ವರನು ನಿತ್ಯವಾಸವನ್ನು ಮಾಡುವ, **ವಂಬು** - ಪರಿಮಳವನ್ನು **ಉಲಾವುಮ್** - ಬೀರುತ್ತಿರುವ, **ಶೋಲೈ** - ಊರುಗಳನ್ನೂ, **ಮಾ** - ಎತ್ತರವಾದ, **ಮದಿಳ್**—ಮಿದ್ದೆಗಳುಳ್ಳ, **ತಂಜಮಾಮಣಿ ಎಂಬ ಕೋಯಿಲೆ** - ದೇವಸ್ಥಾನವನ್ನು, **ವಣಙ್ಗಿ**- ನಮಸ್ಕರಿಸಿ, **ನಾನ್ ಉಯ್ಯ** - ನಿಮ್ಮಹಾಗೆ ನಾನೂ ಕೂಡ ಉಜ್ಜೀವಿಸುವಹಾಗೆ **ನಾರಾಯಣವೆನ್ನುಂ ನಾಮಂ** - ನಾರಾಯಣನೆಂಬ ನಾಮ ಸ್ವಾರಸ್ಯವನ್ನು, **ಕಣ್ಡುಕೊಂಡೇನ್** - ಗುರುಗಳ ಮಹಿಮೆಯಿಂದ ತಿಳಿದುಕೊಂಡೆನು. ಮೂಲ ಮಂತ್ರದ ನಾರಾಯಣ ಶಬ್ದದಲ್ಲಿ ತೋರಿಬರುವ ಅರ್ಥವಾದ ಸುಬಾಲೋಪನಿಷತ್ತಿನಲ್ಲಿ ಪ್ರತಿಪಾದಿತವಾಗಿರುವ "**ಮಾತಾ ಪಿತಾ ಭ್ರಾತಾ ನಿವಾಸಂ ಶರಣಂ ಸುಹೃದ್ಗತಿರ್ನಾರಾಯಣಃ**" ಎಂಬುವರ ಅರ್ಥವನ್ನು ಲೋಕ ಗುರುವಾದ ನಿನ್ನ ಕೃಪೆಯಿಂದ ತಿಳಿದೆನು ಎಂಬ ಭಾವವು.

೩. "**ಪಿತಾತ್ವಂ ಮಾತಾತ್ವಂ ದಯಿತ ತನಯಸ್ತ್ವಂ ಪ್ರಿಯಸುಹೃತ್ತ್ವಮೇವತ್ವಂ ಮಿತ್ರಂ ಗುರುರಸಿಗತಿಶ್ಚಾಸಿ ಜಗತಾಮ್। ತ್ವದೀಯಸ್ತ್ವದ್ಭೃತ್ಯಸ್ತ್ವಪರಿಜನಸ್ತ್ವದ್ಗತಿರಹಂ ಪ್ರಪನ್ನಶ್ಚೈವಂ ಸತ್ಯಹಮಪಿ ತವೈವಾಸ್ಮಿಹಿಭರಃ॥**" ಎಂಬುದು ಪೂರಾ ಶ್ಲೋಕವು. ಇದರ ಅರ್ಥವೇನೆಂದರೆ. ಜಗತ್ತಿಗೆಲ್ಲಾ ಕಾರಣಭೂತನಾಗಿಯೂ ಸಿದ್ಧೋಪಾಯನಾಗಿ ಹಿತಪ್ರವರ್ತಕನಾಗಿಯೂ ಇರುತವನು ಮತ್ತು ಅನಂತರ ದಾಯಧನದ ಹಾಗೆ ವೈಕುಂಠ ಸುಖವನ್ನಿತ್ತು ಕಾಪಾಡುವನು ನೀನೇ, **ಮಾತಾತ್ವಂ** - ತಾಯಿಯು ಮಗುವನ್ನು ಗರ್ಭದಲ್ಲಿರುವದನ್ನು ರಕ್ಷಿಸುವಹಾಗೆ ಪ್ರಳಯಕಾಲದಲ್ಲೂ ಜನನಿಯ ಜಠರದಲ್ಲಿರುವವಾಗಲೂ ಪರೀಕ್ಷಿತ್ತನ್ನು ರಕ್ಷಿಸಿದಹಾಗೆ ರಕ್ಷಿಸಿ, ತಾಯಿಯು ಸ್ತನ್ಯಪಾನಾದಿಗಳಿಂದ ರಕ್ಷಿಸುವಹಾಗೆ ಇಲ್ಲಿಯೂ ರಕ್ಷಿಸಿ, ಐಹಿಕ ಶ್ರೇಯಸ್ಸನ್ನೆಲ್ಲಾ ಉಂಟುಮಾಡುವನೂ ನೀನೇ, ಪ್ರೇಮ ಪಾತ್ರನಾದ ಮಗನು ಹೇಗೆ ತಂದೆಗೆ ವಿಧೇಯನೋ, ಹಾಗೆಯೇ ಅಂಬ

(೧) "ಯಸ್ಯಪ್ರಸಾದೇ ಸಕಲಾಃ ಪ್ರಸೀದೇಯುರಿಮಾಃ ಪ್ರಜಾಃ"

---

ಶೇಷ ಪ್ರಹ್ಲಾದಾದಿ ಭಕ್ತರಿಗೆ ತುಂಬಾ ಪ್ರೇಮಯುಕ್ತನಾಗಿಯೂ ಭಕ್ತಪರಾಧೀನ
ನಾಗಿಯೂ ಇರುವವನು ನೀನೇ. ಅರ್ಜುನಾದಿಗಳಿಗೆ ಪ್ರಿಯ ಸುಹೃತ್ತಾಗಿ ಕಷ್ಟ
ಕಾಲಕ್ಕೆ ತನ್ನಿವಾರಕನಾಗಿರುವವನು ನೀನೇ; ದೇಹಾವಸಾನಾನಂತರ ತನಗೆ ಸಮ
ನೆಂದು ಭಾವಿಸಿ ತನಗೆ ಸಮಾನವಾದ ಆನಂದವನ್ನುಂಟುಮಾಡುವವನೂ ನೀನೇ.
ಹಂಸ ಮತ್ಸ್ಯ ರಾಮ ಕೃಷ್ಣಾದ್ಯವತಾರಗಳಲ್ಲಿ ಧರ್ಮಗಳನ್ನು ಬೋಧಿಸಿದ
ಲೋಕ ಗುರುವೂ ನೀನೇ, ನಿನಗೆ ಶೇಷಭೂತನು ನಾನೇ, ನೀನೇ ನಾಥನಾಗಿ ನಿನಗೆ
ದಾಸಭೂತನು ನಾನು ; ಆದುದರಿಂದ ನಿನಗೆ ಕೈಙ್ಕರ್ಯವನ್ನೆಸಗುವನೂ ನಾನೇ,
ನೀನಲ್ಲದೆ ನನಗೆ ಇನ್ನೂ ಯಾರೂ ಗತಿಯಿಲ್ಲವು, ಹೀಗೆ ನಿನಗೂ ನನಗೂ ಸಂಬಂಧ
ವಿರುವದರಿಂದ, ನೀನೇ ನನ್ನನ್ನು ರಕ್ಷಿಸತಕ್ಕದ್ದೆಂದು, ಸರ್ವ ಭರವನ್ನು ನಿನ್ನಲ್ಲಿ
ಸಮರ್ಪಿಸಿರುತ್ತೇನೆಂಬುದುಅರ್ಥವು. ದಾಸನು ಬರೆದಿರುವ ಸ್ತೋತ್ರರತ್ನ ೬೦ನೆಯ
ಶ್ಲೋಕದ ಅರ್ಥ, ಉಪಪಾದನೆಗಳನ್ನು ಪರಾಬರಿಸಿ. ಇತ್ಯಾದಿಗಳಿರ್ಪಡಿಯೋ-
ಇವೇ ಮೊದಲಾದವುಗಳಲ್ಲಿ ಹೇಳಿರುವಹಾಗೆ, ನಿರುಪಾಧಿಕ ಸರ್ವವಿಧ ಬಂಧುವು,
ಸರ್ವೇಶ್ವರನೊರುವನುವೇ- ಸರ್ವೇಶ್ವರನೊಬ್ಬನೇವಿನಾ ಇನ್ಯಾರೂ ಆಗುವದಿಲ್ಲವು.
ಲೋಕದ ಪಿತಾ, ಮಾತಾ, ಬಂಧು, ಸ್ನೇಹಿತ ಗುರು ಇಂತಹ ಸಂಬಂಧವೆಲ್ಲವೂ
ಸೋಪಾಧಿಕವೇ ವಿನಾ ನಿರುಪಾಧಿಕವಾದ ಸಂಬಂಧವಲ್ಲವೆಂಬ ಭಾವವು.

ಮೇಲೆ ಸುಬಾಲೋಪನಿಷದ್ವಾಕ್ಯದ ಉಪಬೃಹ್ಮಣವಾಗಿ ಆಳ್ವಾರಾಚಾರ್ಯ
ದಿವ್ಯ ಸೂಕ್ತಿಗಳನ್ನು ಉದಾಹರಿಸಿದರು. ಆ ಉಪನಿಷದ್ವಾಕ್ಯಾರ್ಥವನ್ನೇ ಮುಂದಿನ
ವಾಕ್ಯಗಳಿಂದ ಉಪಪಾದಿಸುತ್ತಾರೆ. (೧) ಇದು ಲಕ್ಷ್ಮಣನು ಆಂಜನೇಯನನ್ನು
ಪ್ರಥಮತಃ ಕಂಡು ಹೇಳುವ ವಾಕ್ಯವು. ಆಂಜನೇಯನು ಮಹಾ ಪ್ರಾಜ್ಞನಾದುದ
ರಿಂದ ಆತನಿಗೆ ಶ್ರೀ ರಾಮ ಮಾಹಾತ್ಮ್ಯೆಯು ತೋರಿಬರಲಿ ಎಂದು ಹೇಳುವ
ಸರಸವಾದ ಲಕ್ಷ್ಮಣೋಕ್ತಿಯು. ಹೀಗೆ ಪಾದಚಾರಿಯಾಗಿ ವನವಾಸದಲ್ಲಿದ್ದರೂ
ತನ್ನ ಅಣ್ಣನ ಮಹಿಮೆಯು ನಿರುಪಮ ವಾದುದೆಂದು ಹೇಳುತ್ತಾನೆ. ಯಸ್ಯ -
ಯಾವ ಪ್ರಸಿದ್ಧನಾದ ಶ್ರೀರಾಮನ, ಪ್ರಸಾದೇ - ಪ್ರಸನ್ನತೆಯು, ಅನುಗ್ರಹವು
ಉಂಟಾಗಲಾಗಿ, ಸಕಲಾಃ - ಸಮಸ್ತರಾದ, ಇಮಾಃ ಪ್ರಜಾಃ - ಬ್ರಹ್ಮಾದಿ
ಸಕಲ ಪ್ರಜೆಗಳು, ಪ್ರಸೀದೇಯುಃ - ಸಕಲ ಪುರುಷಾರ್ಥಗಳನ್ನೂ ಹೊಂದುವ
ದರಮೂಲಕ ಪ್ರಸನ್ನಚಿತ್ತರಾಗುವರೋ ಶಾಂತ ಚಿತ್ತರಾಗುವರೋ, ಮುಂದೆ ಇದರ
ಉತ್ತರಾರ್ಧವು "ಸರಾಮೋ ವಾನರೇಂದ್ರಸ್ಯ ಪ್ರಸಾದಮಭಿಕಾಂಕ್ಷತಿ" ಅಂತಹ
ಸರ್ವಶಕ್ತನಾಗಿ ಸ್ವತಂತ್ರನಾದ ಸರ್ವೇಶ್ವರನಾದ ರಾಮನು, ವಾನರರಿಗೆ ಸ್ವಾಮಿ
ಯಾದ ಸುಗ್ರೀವನ ಅನುಗ್ರಹವನ್ನು ಎಂದರೆ ಸಹಾಯವನ್ನು, ಎದರು ನೋಡು

---

(೧) ರಾಮಾ. ಕಿಷ್ಕಿಂಧಾ. ೪. ೨೧.

ಎನ್ರುಮ್ (೨) "ಪ್ರಸನ್ನಮಭವತ್ತಸ್ಮೈ ಪ್ರಸನ್ನಾಯ ಚರಾಚರಮ್" (೩) "ಪ್ರಸನ್ನೇ ದೇವದೇವೇಶೇ" ಎನ್ರುಮ್ ಚೊಲ್ಲುಗೈಯಾಲೇ ಅವರ್ ಪ್ರಸನ್ನ

ನ್ನಾನೆ, ಅಪೇಕ್ಷಿಸುತ್ತಾನೆಂಬ ಭಾವವು. ಈ ಅವತಾರ ಕಾಲಗಳಲ್ಲಿ ಎಂತಹ ಸೌಲಭ್ಯ ಸೌಶೀಲ್ಯಗಳನ್ನು ಪ್ರದರ್ಶಿಸಿ ಲೋಕ ವಿಡಂಬನವನ್ನು ವ್ಯಕ್ತಪಡಿಸಿರುತ್ತಾನೆ! ಎಂಬ ಭಾವವು. ಸಾಧಾರಣವಾದ ಅರ್ಥವೂ ಸಹ ಇಲ್ಲಿ ತೋರಿಬರುತ್ತದೆ. ಈ ಕಿಷ್ಕಿಂಧೆಯು ಇಕ್ಷ್ವಾಕು ವಂಶೀಯರಿಗೇನೇ ಸೇರಿದ ಪ್ರದೇಶವು. ಶ್ರೀರಾಮನು ದಶರಥನ ಜೇಷ್ಠಪುತ್ರನಾದುದರಿಂದ ರಾಜನಾಗಬೇಕಾಗಿತ್ತು. ಹಾಗೆ ರಾಜನಾಗಿ, **ಯಸ್ಯ ಪ್ರಸಾದೇ** - ಅನುಗ್ರಹ ಉಂಟಾಗಿರಲಾಗಿ, **ಸಕಲಾಃ ಇಮಾಃ ಪ್ರಜಾಃ** - ಈ ಪ್ರದೇಶದ ಸಕಲ ಪ್ರಜೆಗಳಿಗೂ, ಹಾಗೆಯೇ ಈಗ ಆರ್ತನಾಗಿರುವ ಸುಗ್ರೀವನಿಗೂ ಸಹ ವಿಶೇಷಪ್ರಯೋಜನವುಂಟಾಗುತ್ತಿತ್ತು. ಅಂತಹ ಶ್ರೀರಾಮನು ಈಗ ನಿನ್ನ ಸಹಾಯವನ್ನು ಪ್ರಾರ್ಥಿಸುತ್ತಾನೆಂಬ ಸಾಮಾನ್ಯಾರ್ಥವೂ ತೋರಿಬರುತ್ತದೆ. ಇಲ್ಲಿ ನಿಗಮಾಂತರವರಿಗೆ ಬೇಕಾದ ಅರ್ಥವು ಪರತ್ವ ಸೂಚಕವಾದುದು. ಆದುದರಿಂದ ಮೊದಲಿನ ಅರ್ಥವನ್ನೇ ಇಟ್ಟುಕೊಳ್ಳತಕ್ಕದ್ದು. ಈ ವಿಧವಾಗಿಯೇ ಲಕ್ಷ್ಮಣನು ಹಿಂದಿನ ಎರಡು ಶ್ಲೋಕಗಳಲ್ಲೂ **ಲೋಕನಾಥಃ ಪುರೋಭೂತ್ವಾ ಸುಗ್ರೀವಂ ನಾಥಮಿಚ್ಛತಿ"** ಎಂದೂ **"ಸರ್ವಲೋಕಸ್ಯ ಧರ್ಮಾತ್ಮಾ ಶರಣ್ಯಶ್ಶರಣಂ ಪುರಾ। ಗುರುರ್ಮೇ ರಾಘವಸ್ಸೋಽಯಂ ಸುಗ್ರೀವಂ ಶರಣಂ ಗತಃ"** ಎಂದೂ ಹೇಳಿರುತ್ತಾನೆ. ಎಲ್ಲಾ ಲೋಕಕ್ಕೂ ತಾನೇ ಹಿಂದೆ ಸ್ವಾಮಿಯಾಗಿದ್ದುಕೊಂಡು, ಈಗ ವಾನರಾಧಿಪತಿಯನ್ನು ತನಗೆ ಸ್ವಾಮಿಯಾಗಿರಬೇಕೆಂದು ಅಪೇಕ್ಷಿಸುತ್ತಾನೆ; ಸರ್ವಲೋಕಕ್ಕೂ ತಾನೇ ಯಾವಾಗಲೂ ರಕ್ಷಕನಾಗಿದ್ದುಕೊಂಡು, ಧರ್ಮದಲ್ಲೇ ಪ್ರತಿಷ್ಠಿತವಾದ ಮನಸ್ಸುಳ್ಳ ಇಂತಹ ಶ್ರೀರಾಮನು ಈ ಅಲ್ಪನಾದ ಸುಗ್ರೀವನನ್ನು ರಕ್ಷಕನಾಗಿ ಭಾವಿಸಿರುವನು" ಎಂಬುದು ಈಶ್ಲೋಕಗಳತಾತ್ಪರ್ಯವು; ಇದು ಎಂತಹ ಸೌಶೀಲ್ಯವು ಎಂಬ ಭಾವವು.

(೨) "**ತಸ್ಮೈ ಪ್ರಸನ್ನಾಯ** - ಭಗವತ್ಪ್ರಸನ್ನತೆ ಎಂದರೆ ಭಗವದನುಗ್ರಹ ಉಂಟಾದಂಥವನಿಗೆ, **ಚರಾಚರಂ** - ಜಙ್ಗಮ ಸ್ಥಾವರ ರೂಪದಲ್ಲಿರುವ ಸಮಸ್ತವೂ **ಪ್ರಸನ್ನಮಭವತ್** - ಪ್ರತಿಕೂಲವು ಯಾವುದೂ ಇಲ್ಲದೆ ಅನುಕೂಲವಾದುದಾಗುತ್ತದೆ," (೩) "**ದೇವದೇವೇಶೇ** - ಸಮಸ್ತ ದೇವತೆಗಳಿಗೂ ಅವರುಗಳಿಗೆ ಸ್ವಾಮಿಗಳೂ ಆದ ಚತುರ್ಮುಖ ಬ್ರಹ್ಮ, ರುದ್ರ ಇಂದ್ರಾದಿಗಳಿಗೂ ಸ್ವಾಮಿಯಾದವನ **ಪ್ರಸನ್ನೇ** - ಅನುಗ್ರಹಿಸುವವನಾಗಲಾಗಲಿ, ಮುಂದೆ **ಪ್ರಸನ್ನಂ ಸ್ಯಾತ್ ಜಗತ್ರಯಮ್** ಎಂದು ಇರುತ್ತದೆ. ಮೂರು ಲೋಕವೂ ಅಂತವನಿಗೆ ಅನು

(೨) ಇತಿಹಾಸಸಮುಚ್ಚಯಂ ೩೩. ೧೪೧. (೩) ನಾರಸಿಂಹ ಪುರಾಣವಾಕ್ಯನೆಂದು ಶಿಟ್ಟಿಲೂರು ನರಸಿಂಹಾಚಾರ್ಯರು ಬರೆದಿರುತ್ತಾರೆ.

ನಾನಾಲ್ ಪ್ರತಿಕೂಲರಾವಾ ರೊರುವರು ಮಿಲ್ಲೈ. ಇವ್ವೀಶ್ವರನುಕ್ಕು
(೪)"ಸುಹೃದಂ ಸರ್ವಭೂತಾನಾಂ" ಎಙ್ಗಿರ ವಾಕಾರಮ್ ಸ್ವಭಾವಸಿದ್ಧಮ್.

---

ಕೂಲವಾಮವೇ ಆಗುತ್ತದೆ, ಪ್ರತಿಕೂಲವೇ ಇರುವದಿಲ್ಲವೆಂಬ ಭಾವವು" ಎನ್ಗೈ ಯಾಲೇ - ಎಂದು ಹೇಳಿರುವದರಿಂದ, ಅವನ್ ಪ್ರಸನ್ನನಾನಾಲ್ ಆತನು ಪ್ರಸನ್ನನಾಗಿ ಅನುಗ್ರಹಿಸುವನಾದರೆ, ಪ್ರತಿಕೂಲರಾವಾರ್—ಈ ಮೂರು ಲೋಕ ದಲ್ಲೂ ಅವನ ಅನುಗ್ರಹ ಸಙ್ಕಲ್ಪಕ್ಕೆ ವಿರೋಧವಾಗಿ ಆಚರಿಸುವವರು, ಒರುವರು ಮಿಲ್ಲೈ - ಒಬ್ಬರೂ ಇಲ್ಲವು; ಪ್ರತಿಕೂಲಮಾಡುವ ಶಕ್ತಿಯು ಯಾರಿಗೂ ಇರುವ ದಿಲ್ಲವೆಂಬ ಭಾವವು. ಅಪ್ರಕಾಶವಾಗಿ "ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯ ಲಭ್ಯಮ್" ಎಂಬಲ್ಲಿ ಹೇಳಿರುವಹಾಗೆ ಸರ್ವ ಶ್ರೇಯಸ್ಸೂ ಲಭಿಸುತ್ತದೆ; ಲಭಿ ಸದೇ ಇರುವದು ಯಾವುದೂ ಇಲ್ಲವೆಂಬ ಭಾವವು ತೋರಿಬರುತ್ತದೆ. ಭಗವದ ನುಗ್ರಹವಿದ್ದುದರಿಂದ ಅಂಬರೀಷನಿಗೆ ದೂರ್ವಾಸರಿಂದಲೂ, ಅರ್ಜುನನಿಗೂ ದ್ರೌಪದಿಗೂ ದುರ್ಯೋಧನ ದುಶ್ಶಾಸನಾದಿಗಳಿಂದಲೂ, ಪ್ರಹ್ಲಾದನಿಗೆ ತನ್ನ ತಂದೆ ಯಿಂದಲೂ, ಪ್ರತಿಕೂಲಗಳು ಕಾರ್ಯಕಾರಿಗಳಾಗಲಿಲ್ಲವು. ಹಾಗೆಯೇ ಭಗವಂತನು ಚೇತನನ ವಿರುದ್ಧಾಚರಣೆಯಿಂದ ನಿಗ್ರಹಸಙ್ಕಲ್ಪವುಳ್ಳವನಾದರೆ, ಆಗಲೂ ಪ್ರತಿಕೂ ಲವಾಗಿ ನಡೆದು ಅಂತವನನ್ನು ರಕ್ಷಿಸಲು ಸರ್ವರೂ ಅಸಮರ್ಥರೆಂಬುದು "ಬ್ರಹ್ಮಾ ಸ್ವಯಂಭೂಶ್ಚತುರಾನನೋ ವಾ"(ರಾ.ಸುಂ.)ಎಂಬಲ್ಲಿ ಉಪಪಾದಿಸಿರುವ ಅರ್ಥವೂ ಇಲ್ಲಿ ಅರ್ಥವಾಗಿ ತೋರಿಬರುತ್ತದೆ. ಇವ್ವೀಶ್ವರನುಕ್ಕು - ಈ ಸರ್ವೇಶ್ವರನಿಗೆ, (೪) "ಸುಹೃದಂ ಸರ್ವ ಭೂತಾನಾಂ"ಸಮಸ್ತ ಪ್ರಾಣಿವರ್ಗಕ್ಕೂ ನಿರುಪಾಧಿಕ ಪರಮ ಸಹೃತ್ತು, ಎಙ್ಗಿರ ಆಕಾರಮ್ ಎಂದು ಹೇಳಿರುವ ವಿಶೇಷಣವು, ಸ್ವಭಾ ವಸಿದ್ಧಮ್ - ಕಲ್ಯಾಣ ಗುಣಾಕರನಾಗಿ ಕೃಪಾ, ಸರ್ವ ಶಕ್ತಿತ್ವ, ಸ್ವಾತಂತ್ರ್ಯ, ಸೌಲಭ್ಯ, ಸೌಶೀಲ್ಯಾದಿ ಗುಣಗಳುಳ್ಳ ಸ್ವಭಾವದಿಂದ ಸಿದ್ಧವಾದುದು. ಆದುದರಿಂದ ಶ್ರೀಕೃಷ್ಣ ಭಗವಾನರವರು ತಾವೇ ಸ್ವತಃ ಸುಬಾಲೋಪನಿಷದ್ವಾಕ್ಯಾರ್ಥ ವನ್ನು ವ್ಯಕ್ತಪಡಿಸಿರುವದರಿಂದ ಸಿದ್ಧವಾದುದು. ಆತನೇ ಸರ್ವವಿಧ ನಿರುಪಾಧಿಕ ಬಂಧುವು.

ಈ ಸಂದರ್ಭದಲ್ಲಿ ಕೆಲವರಿಗೆ ಒಂದು ಪೂರ್ವಪಕ್ಷವು ಒಡನೆಯೇ ಉಂಟಾಗ ಬಹುದು. ಹೇಗೆಂದರೆ ಹೀಗೆ ಪರಮ ಪುರುಷನು ಪರಮ ಸುಹೃತ್ತಾಗಿದ್ದ ಪಕ್ಷದಲ್ಲಿ ಎಲ್ಲರಿಗೂ ಅನುಗ್ರಹಿಸಿ ಒಳ್ಳೇದನ್ನು ಮಾಡಬೇಡವೋ? ದುಃಖ ಭಾಕ್ಕುಗಳೇ ಲೋಕದಲ್ಲಿ ಕಾಣಬರುತ್ತಾರಲ್ಲ ಎಂದರೆ "ಸುಹೃದಂ ಸರ್ವಭೂತಾನಾಂ" ಎಂಬು ದಕ್ಕೆ ಮುಂದೆ ಇರುವ ಶ್ರೀಕೃಷ್ಣ ಭಗವಾನರವರ ಉಕ್ತಿಯೇ ಸಮಾಧಾನವನ್ನು ಹೇಳು ತ್ತದೆ — "ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ"ಎಂದು ಮುಂದೆ ಇರುತ್ತದೆ. ಪರಮ

---

(೪) ಗೀ ೫. ೨೯.

**ಆಕಾರಾಂತರಮ್ ಚೇತನದುಶ್ಶಕ್ಯಮ್ ನಾಜ್ಞಾತಿಲಂಘನಮಾಗಿರ ಉಪಾಧಿಯಡಿಯಾಗವನ್ನದು ; ಅದುವುಮ್ ಅಲ್ಪವ್ಯಾಜತ್ತಾಲೇ ಮಾರುಮ್.**

---

ಸುಹೃತ್ತೆಂದು ಭಾವಿಸಿ ಆಶ್ರಯಿಸಿದರೆ ಪರಮ ಸುಹೃತ್ತೇ ಸರಿ, ಹಾಗೆ ಭಾವನೆ ಇಲ್ಲದೆ ವಿಮುಖರಾಗಿರುವವರಿಗೆ ಹೇಗೆ ಸುಹೃತ್ತು? ಆದುದರಿಂದ ಕ್ಲೇಶಪಡುತ್ತಿರುತ್ತಾರೆ. ಯಾರೇ ಆಗಲಿ, ಎಂತವನೇ ಆಗಲಿ, ಪರಮ ಸುಹೃತ್ತೆಂದು ಭಾವಿಸಿ ಆಶ್ರಯಿಸಿದರೆ,ಅವರೆಲ್ಲರಿಗೂ ಏನೊಂದೂ ವ್ಯತ್ಯಾಸವಿಲ್ಲದೆ ಅನುಗ್ರಹಿಸುವ ಪರಮ ಸುಹೃತ್ತೇ ಆಗುವನು. ಇದನ್ನೇ ರಾಮಾವತಾರಿಯಾಗಿ ಹೇಳಿಕೊಂಡಿರುತ್ತಾರೆ. "ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ" ನಾನು ಪರಮ ಸುಹೃತ್ತೆಂದು ಭಾವಿಸಿ ನನ್ನನ್ನು ಆಶ್ರಯಿಸಿದವನನ್ನು ಎಂದಿಗಾದರೂ ಬಿಟ್ಟೇನೋ? ಎಂದು ಹೇಳಿರುತ್ತಾರೆ. (ರಾಮಾ. ೧೮-೩) ಹಾಗೆಯೇ ಸೀತೆಯು ರಾವಣನಿಗೆ ಬುದ್ಧಿಯನ್ನು ಹೇಳಿರುತ್ತಾಳೆ.—"ತೇನ ಮೈತ್ರೀ ಭವತು ತೇ ಯದಿ ಜೀವಿತುಮಿಚ್ಛಸಿ" (ರಾ. ಸುಂ. ೨೧-೨೧) ನೀನು ಸರ್ವ ಶ್ರೇಯಸ್ಸನ್ನೂ ಹೊಂದಿ ಬದುಕಬೇಕಾದ ಅಪೇಕ್ಷೆ ಇದ್ದರೆ, ಶ್ರೀರಾಮನನ್ನು ಪರಮ ಸುಹೃತ್ತೆಂದು ಭಾವಿಸಿ ಆತನನ್ನು ಆಶ್ರಯಿಸು ; ಸರ್ವಾನುಗ್ರಹವೂ ನಿನಗುಂಟು ಎಂದು ಉಪದೇಶಿಸಿರುತ್ತಾಳೆ. ಆದುದರಿಂದ ಪರಮ ಸುಹೃತ್ತೆಂದು ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ಎಂದು ಹೇಳಲ್ಪಟ್ಟಿತು.

ಈ ಮೇಲಿನ ಪೂರ್ವಪಕ್ಷವನ್ನೇ ಶ್ರೀನಿಗಮಾಂತದೇಶಿಕರವರೂ ಮನಸ್ಸಿನಲ್ಲಿಟ್ಟೇ ಮುಂದಿನವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ. ಆತನು ಸ್ವಭಾವಸಿದ್ಧವಾಗಿ ಸಕಲರಿಗೂ ಅನುಗ್ರಹಮಾಡುವನಾಗಿ "ಸುಹೃದಂ ಸರ್ವಭೂತಾನಾಂ" ಎಂದು ಹೇಳಲ್ಪಟ್ಟಿತಲ್ಲಾ, ಅಂತಹ ಸ್ವಭಾವಸಿದ್ಧವಾದ ಆಕಾರವು ಅನೇಕ ಸಂದರ್ಭದಲ್ಲಿ ತೋರಿಬರದೆ ಆಕಾರಾಂತರವಾದ ಎಂದರೆ ಬೇರೇ ವಿಧವಾದ ನಿಗ್ರಹರೂಪ ಸ್ವಭಾವವು ತೋರುತ್ತದಲ್ಲಾ ಅದು ಏಕೆ? ಎಂಬಾಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ.—ಆಕಾರಾಂತರಮ್ - ಅನುಗ್ರಹರೂಪಾಕಾರಕ್ಕೆ ಬದಲಾಗಿ ನಿಗ್ರಹರೂಪ ಆಕಾರವು, ಚೇತನದುಶ್ಶಕ್ಯಮ್ - ಚೇತನರ, ಆಜ್ಞಾತಿಲಂಘನಮಾಗಿರ - ಶಾಸ್ತ್ರದಲ್ಲಿ ವಿಧಿಸಿರುವ ಶಾಸನಗಳನ್ನು ಅತಿಕ್ರಮಿಸಿ ಅಕೃತ್ಯಕರಣ, ಕೃತ್ಯಾಕರಣರೂಪವಾದ, ಉಪಾಧಿಯುಡಿಯಾಗ - ಕಾರಣ ಮೂಲಕವಾಗಿ, ವನ್ನದು - ಉಂಟಾಗುವುದು. ಸಹಜವಾಗಿ ಎಲ್ಲರಿಗೂ ಪರಮ ಸುಹೃತ್ತೇ ಸರಿ. ಆತನ ಶಾಸನಗಳಿಗೆ ಒಳಪಟ್ಟು, ಆತನ ಆಜ್ಞಾನುಸಾರವಾಗಿ ನಡೆದು ಆತನನ್ನು ಆಶ್ರಯಿಸಿ ಮೆಚ್ಚಿಸಿದರೆ ಸರ್ವವೂ ಅನುಕೂಲವಾದ ಶ್ರೇಯಸ್ಸಿನ ಪರಂಪರೆಗಳು ಉಂಟಾಗುತ್ತವೆ. ಹಾಗಲ್ಲದೆ ಆತನ ಶಾಸನಕ್ಕೆ ವಿರುದ್ಧವಾಗಿ ನಡೆದರೆ ಅಂತವನನ್ನು ಶಿಕ್ಷಿಸಬೇಕಾದ ಉಪಾಧಿಯು ಅಡ್ಡವಾಗಿ ಬರುವುದರಿಂದ, ಆಗ ಆತನ ಸರ್ವ

## ಅಥ ನಾರಾಯಣ ಪದಸ್ಯ ಚತುರ್ಥ್ಯರ್ಥಾನಾಹ.

---

**ಇನ್ನಾರಾಯಣ ಶಬ್ದತ್ತಿಲ್ ಚತುರ್ಥಿಯಾಲೇ ಮೇಲ್ ಶೊಲ್ಲಪ್ಪುಕುಗಿರ ವಾಕ್ಯಾರ್ಥಙ್ಗಳುಕ್ಕೀಡಾಗತ್ತಾದರ್ಥ್ಯಾದಿಗಳ್ ಕಾಟ್ಟಪ್ಪಡುಗಿನ್ರನ. ಸ್ಥೂಲಾನುಸಂಧಾನತ್ತಿಲ್ ಚತುರ್ಥೀ ನಮಶ್ಶಬ್ದ ಯೋಗತ್ತಾಲುಮ್ ಕೊಳ್ಳಲಾಮ್;**

---

ಅರ್ಥಗಳನ್ನೆಲ್ಲಾ ತಿಳಿಸಿದರು. ಚತುರ್ಥಿ ವಿಭಕ್ತಿಯಿಂದ ತೋರುವ ಅರ್ಥಗಳನ್ನು ವ್ಯಕ್ತಪಡಿಸುತ್ತಾರೆ—**ಇನ್ನಾರಾಯಣ ಶಬ್ದತ್ತಿಲ್** - ಈ ಮೂಲ ಮಂತ್ರದ ನಾರಾಯಣ ಶಬ್ದದಲ್ಲಿ, **ಚತುರ್ಥಿಯಾಲೇ ಶೊಲ್ಲಪ್ಪುಗುಗಿರ** - ಚತುರ್ಥಿಯಿಂದ ಮುಂದೆ ಹೇಳಲ್ಪಡುವ, **ವಾಕ್ಯಾರ್ಥಙ್ಗಳುಕ್ಕೀಡಾಗ** - ವಾಕ್ಯಾರ್ಥಗಳಿಗೆ ಅನುಗುಣವಾಗಿ, **ತಾದರ್ಥ್ಯಾದಿಗಳ್** - ಆ ಪರಮಾತ್ಮನ ಪ್ರಯೋಜನಕ್ಕಾಗಿಯೇ ಎಂಬಿವೇ ಮೊದಲಾದವು, ಆದಿಶಬ್ದದಿಂದ ಸಂಪ್ರದಾನಾರ್ಥವು ಹೇಳಲ್ಪಟ್ಟಿತು, **ಕಾಟ್ಟಪ್ಪಡುಗಿನ್ರನ** - ಪ್ರದರ್ಶಿಸಲ್ಪಡುವುವು. ಮುಂದೆ ಚತುರ್ಥೀ ವಿಭಕ್ತಿಯ ಅರ್ಥಗಳನ್ನು ವಿಸ್ತರಿಸಿ ಹೇಳುವೆವು ಎಂಬ ಪ್ರತಿಜ್ಞಾ ವಾಕ್ಯವು. **ಸಂಪ್ರದಾನ** ವೆಂದರೆ ಇನ್ನೊಬ್ಬನಿಗೋಸ್ಕರವಾಗಿ ಎಂದು ಕೊಟ್ಟು ಬಿಡೋಣ ವೆಂಬ ಚತುರ್ಥಿಯಿಂದ ತೋರುವ ಅರ್ಥವು. ಪರಮ ಪುರುಷನಿಗೆ ತಾನು ದಾಸಭೂತನಾಗಿರುವವರಿಂದ ಶೇಷವೃತ್ತಿ ಕೈಙ್ಕರ್ಯವೆಲ್ಲಾ ಆತನಿಗೇನೇ ಎಂಬರ್ಥವನ್ನು ಹೇಳುವಾಗ ತಾದರ್ಥ್ಯವು, ತನ್ನ ಆತ್ಮಾ ಪರಮಾತ್ಮನದಾಗಿ ಅದನ್ನು ಪರಮಾತ್ಮನಿಗೆ ಹವಿಸ್ಸನುರ್ಪಣರೂಪದಲ್ಲಿ ಸಮರ್ಪಿಸುವ ಅರ್ಥವನ್ನು ಹೇಳುವಾಗ ಸಂಪ್ರದಾನಾರ್ಥವು, ಎಂದು ತಿಳಿಯತಕ್ಕದ್ದು.

**ಸ್ಥೂಲಾನುಸಂಧಾನತ್ತಿಲ್** - ನಮಶ್ಶಬ್ದದ ಸ್ಥೂಲ ಯೋಜನೆಯ ಅನುಸಂಧಾನದಲ್ಲಿ, ಇದು ಹಿಂದೆಯೇ ಹೇಳಲ್ಪಟ್ಟಿತು, ನಮಶ್ಶಬ್ದವು ಪಪರಿಕರವಾದ ಆತ್ಮಸಮರ್ಪಣಪರವೆಂಬ ಅನುಸಂಧಾನದಲ್ಲಿ, **ಚತುರ್ಥೀ ನಮಶ್ಶಬ್ದಯೋಗತ್ತಾಲುಮ್ ಕೊಳ್ಳಲಾಮ್** - ನಮಃ ನಾರಾಯಣಾಯ ಎಂದು ಎರಡು ಪದಗಳನ್ನು ಸಂಬಂಧಿಸಿಯೂ ಅರ್ಥಹೇಳಬಹುದು. ಆತ್ಮ ಸಮರ್ಪಣೆಯು ನಾರಾಯಣನಿಗಾಗಿ ಎಂದು ಇಷ್ಟುಮಾತ್ರ ಅರ್ಥ ಉಂಟಾಗುತ್ತದೆ. ಈ ಅರ್ಥವು ನಮಃ ಎಂಬ ಶಬ್ದದಿಂದಲೇ ತೋರಿಬರುವವರಿಂದ ಹೆಚ್ಚು ಸ್ವಾರಸ್ಯಾರ್ಥವೇನೂ ಉಂಟಾಗಲಿಲ್ಲವೆಂದು ಮುಂದೆ ಹೇಳುತ್ತಾರೆ. ವಾಕ್ಯಾರ್ಥವೇನೋ ವ್ಯಾಕರಣರೀತ್ಯಾ ಸರಿಹೋಯಿತು; ಹೆಚ್ಚು ಸ್ವಾರಸ್ಯವೇನೂ ಉಂಟಾಗಲಿಲ್ಲವೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ. **ಅಪ್ಪೋದು** - ಹಾಗೆ ಅರ್ಥ ಹೇಳಿದ ಸಂದರ್ಭದಲ್ಲಿ **ಚತುರ್ಥಿಕ್ಕು** ನಾರಾಯಣಾಯ ಎಂಬ ಚತುರ್ಥೀ ವಿಭಕ್ತಿಗೆ, **ಪ್ರಯೋಜನಾತಿಶಯಮಿಲ್ಲೈ** - ಹೆಚ್ಚು ಪ್ರಯೋಜನವು ಎಂದರೆ ಹೆಚ್ಚು ಸ್ವಾರಸ್ಯವಿಲ್ಲವು.

**ಅಪ್ಪೋದಿ ಚ್ಚತುರ್ಥಿಕ್ಕು ಪ್ರಯೋಜನಾತಿಶಯಮ್ ಇಲ್ಲೈ. (೧) "ಷಷ್ಠಂ ಪಂಚದಶಾದ್ವರ್ಣಾತ್ ಕೇವಲ ವ್ಯಂಜನೀಕೃತಾತ್ । ಉತ್ತರೋ ಮನ್ತ್ರಶೇಷಸ್ತು ಶಕ್ತಿರಸ್ಯ ಕಥ್ಯತೇ" ಎನ್ಗೈಯಾಲೇ ಇದು ತಿರುಮನ್ತ್ರತ್ತಿಲ್ ಫಲಸಿದ್ಧಿ ಹೇತುವಾನ ಪ್ರದೇಶಮ್. ಯೋಜನಾ ವಿಶೇಷಙ್ಗಳಿಲ್ ಫಲ**

---

ಹಾಗಾದರೆ ನಮಶ್ಶಬ್ದಯೋಗವಿದ್ದರೂ ಈ ಚತುರ್ಥಿಗೆ ಯಾವ ಅರ್ಥವನ್ನು ಹೇಳಿದರೆ ಸ್ವಾರಸ್ಯ ಉಂಟಾಗುತ್ತದೆಂಬುದನ್ನು ವ್ಯಕ್ತಪಡಿಸುತ್ತಾರೆ. ಮಂತ್ರದಲ್ಲಿ ಸ್ವಾರಸ್ಯಾರ್ಥವು ಯಾವುದು ಎಂದರೆ ಮಂತ್ರಶಕ್ತಿಯಾದ ಫಲಸಿದ್ಧಿಯನ್ನು ಬೋಧಿಸುವ ಸ್ಥಳವೇ, ಮಂತ್ರದ ಸಾರಾಂಶಭಾಗವು. ಈ ನಾರಾಯಣಾಯ ಎಂಬಲ್ಲಿರುವ ಚತುರ್ಥಿಯೇ ಮಂತ್ರದ ವೈಭವವನ್ನು ಬೋಧಿಸುವ ಸ್ಥಳವೆಂದು ಬೋಧಿಸುತ್ತಾರೆ. ಅದಕ್ಕಾಗಿ ನಾರದೀಯ ಕಲ್ಪಪ್ರಮಾಣವನ್ನು ಉದಾಹರಿಸುತ್ತಾರೆ — **ಷಷ್ಠಂ ಪಂಚದಶಾದ್ವರ್ಣಾತ್** - ನಮಶ್ಶಬ್ದದಿಂದ ಷಷ್ಠವೆಂದರೆ ಆರನೆಯ ಅಕ್ಷರವು ಣ ಎಂದಾಗುತ್ತದೆ ಹಾಗೆಯೇ **ಪಂಚ ದಶಾತ್** - ವರ್ಣಮಾಲೆಯಲ್ಲಿ ಕಕಾರದಿಂದ ಎಣಿಸಿದರೆ ೧೫ನೆಯ ಅಕ್ಷರವಾಗುವ ಣ ಕಾರದಿಂದ, **ಕೇವಲವ್ಯಂಜನೀಕೃತಾತ್** - ಕೇವಲ ವ್ಯಂಜನವಾದ ಣ್ ಎಂಬುವದಕ್ಕಿಂತ **ಉತ್ತರಃ** - ಮುಂದಕ್ಕಿರುವ, **ಮನ್ತ್ರಶೇಷಸ್ತು** - ಮಂತ್ರಶೇಷವಾದ ಆಯ ಎಂಬುವದಾದರೋ **ಅಸ್ಯ** - ಈ ಮೂಲಮನ್ತ್ರದ, **ಶಕ್ತಿಃ** - ಫಲಸಿದ್ಧಿಯನ್ನು ಬೋಧಿಸುವ ಸ್ಥಳವೆಂದು, **ಕಥ್ಯತೇ** - ಹೇಳಲ್ಪಡುತ್ತದೆ" ಎನ್ಗೈಯಾಲೇ - ಆಯ ಎಂದಾಗುವದರಿಂದ ಶೇಷನಾದ ತಾನು ಮಾಡುವದೆಲ್ಲಾ ಶೇಷಿಯಾದವನಿಗೆ ಕೈಂಕರ್ಯರೂಪವಾದುದೆಂಬ ಅರ್ಥವು ದೊರೆಯುವದರಿಂದ, ಮಂತ್ರದ ಫಲಸಿದ್ಧಿಯು ಪರಮಾತ್ಮನಿಗೆ ಮಾಡುವ ನಿತ್ಯ ಕೈಂಕರ್ಯವೆಂಬ ಅರ್ಥವು ಈ ಚತುರ್ಥಿಯಿಂದ ಏರ್ಪಡುವದರಿಂದ ಮಂತ್ರದ ವೈಭವವನ್ನು ಪ್ರದರ್ಶಿಸುವ ಸ್ಥಳವೇ ಈ ನಾರಾಯಣ ಶಬ್ದದ ಚತುರ್ಥಿಯು ಎಂದು ಹೇಳಿದರು. ಶ್ಲೋಕತಾತ್ಪರ್ಯವು ಇಷ್ಟೇ. ನಮಶ್ಶಬ್ದದಿಂದ ಆರನೆಯ ಅಕ್ಷರವೂ, ಕಕಾರದಿಂದ ೧೫ನೆಯ ಅಕ್ಷರವೂ, ಣ ಕಾರವಾಗುತ್ತದೆ. ಇದು ಮಂತ್ರದ ನಾರಾಯಣಾಯ ಎಂಬ ಪದದಲ್ಲಿರುತ್ತದೆ. ಅದರ ಕೇವಲ ವ್ಯಂಜನ ಭಾಗವಾದ ಣ್ ಎಂಬುದನ್ನು ಬಿಟ್ಟು, ಮುಂದಿನ ಮಂತ್ರಭಾಗವು ಆಯ ಎಂದಾಗುತ್ತದೆ. ಇದರಿಂದ ಶೇಷನು ಮಾಡುವ ಕೈಂಕರ್ಯವು ಶೇಷಿಗೆ ಎಂಬರ್ಥ ಉಂಟಾಗುವದರಿಂದ, ಫಲಸಿದ್ಧಿರೂಪ ನಿತ್ಯಕೈಂಕರ್ಯಪ್ರಾಪ್ತಿಯನ್ನು ಈ ಚತುರ್ಥಿಯು ಬೋಧಿಸುತ್ತದೆಂಬುದು ತಾತ್ಪರ್ಯವು. ಷಷ್ಠಂ ಪಂಚದಶಾತ್ ಎಂದು ಹೀಗೆಲ್ಲಾ ಬಹು ಗೂಢವಾಗಿ ಈ [illegible] ಏಕೆ [illegible]? ನೇರವಾಗಿ ನಾರಾಯಣಾಯ ಎಂಬ ಪದದ ಕಡೆಯಲ್ಲಿರುವ ಆಯ ಎಂದು ಏಕೆ ಹೇಳ

---

(೧) ನಾರದೀಯ ೧. ೫೯.

**ಪ್ರಾರ್ಥನೈಯುಮ್ ಇನ್ನಿಡತ್ತಿಲೇ ಯಾಗಿರುದು. "ಅರ್ಥಾತ್ಪ್ರಕರಣಾಲ್ಲಿಂಗಾದೌಚಿತ್ಯಾದ್ದೇಶಕಾಲತಃ । ಶಬ್ದಾರ್ಥಾಃ ಪ್ರವಿಭಜ್ಯಂತೇ ನ ಶಬ್ದಾದೇವ ಕೇವಲಾತ್" ಎಙ್ಗಿರಪಡಿಯೇ ಒರು ಶಬ್ದತ್ತುಕ್ಕೇ ಪ್ರಕರಣಾದಿಗಳುಕ್ಕೇಡಾಗ ಅರ್ಥ ಭೇದಮ್ ಕೊಳ್ಳುಗೈ ಸರ್ವಸಮ್ಮತಮ್.**

---

ಕೂಡದು ಎಂದರೆ "ಮನ್ತ್ರಂ ಯತ್ನೇನ ಗೋಪಯೇತ್" ಎಂದಿರುವಾಗ ಮಂತ್ರ ಶಕ್ತಿಯನ್ನು ವ್ಯಕ್ತವಾಗಿ ಹೇಳುವದು ನ್ಯಾಯುವಲ್ಲವೆಂದು ಗೂಢವಾಗಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಇದೀಗ ತಾದರ್ಥ್ಯವನ್ನು ಬೋಧಿಸುವ ಚತುರ್ಥ್ಯರ್ಥವು.

ಮುಂದೆ ಇತರ ಸಂಪ್ರದಾನರೂಪ ಚತುರ್ಥ್ಯರ್ಥದಲ್ಲೂ ಇಂತಹ ಫಲ ಸಿದ್ಧಿ ಪ್ರಾರ್ಥನಾರೂಪ ಅರ್ಥವನ್ನೂ ಕಾಣಬಹುದೆಂದು ಉಪದೇಶಿಸುತ್ತಾರೆ.— **ಯೋಜನಾ ವಿಶೇಷಙ್ಗಳಿಲ್** - ಚತುರ್ಥಿಯ ಇತರ ಯೋಜನೆಗಳಲ್ಲಿ, ಹಿಂದೆ ತಾದರ್ಥ್ಯ ಚತುರ್ಥ್ಯರ್ಥವು ಹೇಳಲ್ಪಟ್ಟಿದ್ದರಿಂದ ಇಲ್ಲಿ ಸಂಪ್ರದಾನಾರ್ಥವು **ಉದ್ದೇಶ್ಯವು; ಫಲಪ್ರಾರ್ಥನೈಯುಮ್** - ಫಲಪ್ರಾರ್ಥನೆಯೂ, **ಇನ್ನಿಡತ್ತಿಲೇ ಯಾಗಿರದು** - ಈ ತಾದರ್ಥ್ಯ ಹೇಳಿದ ಚತುರ್ಥಿಯಿಂದಲೇ ಸಿದ್ಧಿಸುತ್ತದೆ, ಬರೀ ಶಾಬ್ದವಾಗಿಯೇ ಪದಗಳಿಗೆ ಅರ್ಥ ಹೇಳಿದರೆ ಸಾಲದು; ಆರ್ಥವಾಗಿಯೂ, ಪ್ರಕರಣಾದಿಗಳಿಗನುಗುಣವಾಗಿಯೂ,ಅರ್ಥ ಹೇಳತಕ್ಕದ್ದಾಗಿರುತ್ತದೆಂಬ ಪ್ರಮಾಣವನ್ನು ಉದಾಹರಿಸುತ್ತಾರೆ.—**ಅರ್ಥಾತ್** - ಪ್ರಯೋಜನ ವಿಶೇಷದಿಂದಲೂ, **ಪ್ರಕರಣಾತ್** - ಈಗ ಹೇಳಬೇಕಾಗಿರುವ ಸಂದರ್ಭದಿಂದಲೂ, **ಲಿಂಗಾತ್** - ಚಿಹ್ನ ಅಥವಾ ಕಾರಣದಿಂದಲೂ, **ಔಚಿತ್ಯಾತ್** - ಸಾಮಂಜಸ್ಯ ಉಂಟಾಗುವದರಿಂದಲೂ, **ದೇಶಕಾಲತಃ** - ದೇಶಕ್ಕೂ ಕಾಲಕ್ಕೂ ಅನುಗುಣವಾಗಿಯೂ, **ಶಬ್ದಾರ್ಥಾಃ** – ಒಂದು ಶಬ್ದಕ್ಕೆ ಅರ್ಥಗಳು, **ಪ್ರವಿಭಜ್ಯಂತೇ** - ವ್ಯತ್ಯಸ್ತವಾದವುಗಳಾಗುತ್ತವೆ. **ಕೇವಲಾತ್ ಶಬ್ದಾದೇವ** - ಕೇವಲ ಶಬ್ದಮಾತ್ರದಿಂದಲೇ, **ನ** – ಅಲ್ಲವು ಎಂದರೆ ಹೇಳಲಾಗುವದಿಲ್ಲವು." **ಎಙ್ಗಿರಪಡಿಯೇ** - ಎಂದು ಹೇಳಿರುವಹಾಗೆ, **ಒರು ಶಬ್ದತ್ತುಕ್ಕು** - ಒಂದು ಶಬ್ದಕ್ಕೆ, **ಪ್ರಕರಣಾದಿಗಳುಕ್ಕೇಡಾಗ** - ಸಂದರ್ಭವೇ ಮೊದಲಾದವುಗಳಿಗೆ ಅನುಗುಣವಾಗಿ, **ಅರ್ಥಭೇದಮ್ ಕೊಳ್ಳುಗೈ** – ಅರ್ಥ ಭೇದವನ್ನು ಅಂಗೀಕರಿಸಬೇಕಾದವು, **ಸರ್ವ ಸಮ್ಮತಮ್** - ಸರ್ವರಿಗೂ ಸಮ್ಮತವಾದುದು, ಎಲ್ಲರೂ ಒಪ್ಪತಕ್ಕದ್ದೇ ಎಂಬ ಭಾವವು. **ಬ್ರಹ್ಮವೇದ ಬ್ರಹ್ಮೈವ ಭವತಿ** ಎಂಬಲ್ಲಿ ಶಬ್ದತಃ ಬ್ರಹ್ಮವಿತ್ತು ಪರಬ್ರಹ್ಮನೇ ಆಗುತ್ತಾನೆ ಎಂಬರ್ಥ ಉಂಟಾದರೂ, ಬ್ರಹ್ಮವಿತ್ತೇ ಬೇರೆ, ಪರಬ್ರಹ್ಮವೇ ಬೇರೆ, ಎಂದು ಭೇದ ಶ್ರುತಿಗಳಿಗೆ ವಿರುದ್ಧವಾಗದಿರುವ ಪ್ರಯೋಜನಕ್ಕಾಗಿ, ಅರ್ಥಾತ್ ಬ್ರಹ್ಮತುಲ್ಯನಾಗುತ್ತಾನೆಂದು ಸಾಮ್ಯ ಶ್ರುತ್ಯನುಸಾರ ಅರ್ಥಮಾಡತಕ್ಕದ್ದಾಗಿರುತ್ತದೆ. ಗೀತಾ ಜನೆಯ

ಅಧ್ಯಾಯದ ೧೦ನೆಯ ಶ್ಲೋಕದಲ್ಲಿರುವ **ಬ್ರಹ್ಮಣ್ಯಾಧಾಯ ಕರ್ಮಾಣಿ** - ಬ್ರಹ್ಮ ಶಬ್ದಕ್ಕೆ ಪರಮಾತ್ಮಾದಿ ಅರ್ಥಗಳಿದ್ದರೂ ಪ್ರಕರಣಾನುಗುಣವಾಗಿ ಪ್ರಕೃತಿ ಎಂದು ಅರ್ಥಮಾಡಬೇಕಾಗಿರುತ್ತದೆ. ನಾರಾಯಣನೇ ಪರತತ್ತ್ವವೆಂದು ಹೇಳಲ್ಪಡುತ್ತದೆ ಏಕೆಂದರೆ "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬ ಲಿಙ್ಗ ಸಾಮರ್ಥ್ಯದಿಂದ. ಮುಂದೆ ೧೮ನೇ ಅಧ್ಯಾಯದಲ್ಲಿ ೬೩ನೆಯ ಶ್ಲೋಕದಲ್ಲಿ **ಯಥೇಚ್ಛಸಿ ತಥಾ ಕುರು** ಎಂದು ಶ್ರೀಕೃಷ್ಣನು ಹೇಳುವ ಸಂದರ್ಭದಲ್ಲಿ ನಾನು ಹೇಳಬೇಕಾದುದನ್ನೆಲ್ಲಾ ಹೇಳಿದೆನು; ನೀನು ಹಾಗೆ ಮಾಡದೇ ಹೋದರೆ, ನಿನ್ನ ಇಷ್ಟಾನುಸಾರ ಮಾಡು ಎಂದು ಅರ್ಥಹೇಳಿದರೆ, ಶ್ರೀಕೃಷ್ಣನಿಗೆ ಔದಾಸೀನ್ಯವನ್ನಾಗಲಿ, ಕೋಪವನ್ನಾಗಲಿ ಆರೋಪಿಸಬೇಕಾಗುತ್ತದೆ. ಹಿಂದಿನ ಶ್ಲೋಕದಲ್ಲೂ ಪರಮಕೃಪೆಯನ್ನು ಮುಂದಿನ ಶ್ಲೋಕದಲ್ಲೂ ಅತ್ಯರ್ಥ ಕೃಪಾ ಭಾವವನ್ನು ತೋರಿಸುವಾಗ, ಈ ಮಧ್ಯ ಶ್ಲೋಕದಲ್ಲಿ ಔದಾಸೀನ್ಯವಾಗಲಿ ಕೋಪವಾಗಲಿ ಉಚಿತವಾದುದಲ್ಲವಾದುದರಿಂದ **ಔಚಿತ್ಯಾತ್** ಅರ್ಥಭೇದ ಹೇಗೆಂದರೆ, ನೀನು ಪ್ರಾಜ್ಞನಾಗಿ ನಾನು ಹಿಂದಿನ ಶ್ಲೋಕದಲ್ಲಿ ಉಪದೇಶಿಸಿದ ಹಾಗೆ ಅನಿಷ್ಟ ನಿವೃತ್ತಿಯನ್ನೂ ಇಷ್ಟಪ್ರಾಪ್ತಿಯನ್ನೂ ಬಯಸುವನಾಗಿ, ಯಥಾ ಇಚ್ಛಸಿ ತಥಾ ಅಂತರ ಪ್ರಾಜ್ಞತೆಯಿಂದಲೇ ಕುರು - ನಾನು ಹಿಂದೆ ಉಪದೇಶಿಸಿದ ಎಲ್ಲವನ್ನೂ ಅನುಷ್ಠಿಸು ಎಂಬುದು ಸಮಂಜಸವಾದ ಅರ್ಥವು. **ನಿಮಂತ್ರಣ** ಶಬ್ದವು ಸಾಧಾರಣವಾಗಿ ದಕ್ಷಿಣದೇಶದಲ್ಲಿ ಶ್ರಾದ್ಧದಲ್ಲಿ ಅನ್ವಯವನ್ನು ಬೋಧಿಸುತ್ತದೆ. ಉತ್ತರದೇಶದಲ್ಲಿ ಹೀಗೆ ಶಬ್ದಾರ್ಥವಿಲ್ಲದುದರಿಂದ ಸಾಧಾರಣ ಸಹಪಂಕ್ತಿ ಭೋಜನಕ್ಕೆ ಆಹ್ವಾನವೆಂಬರ್ಥದಲ್ಲಿ ಪ್ರಯೋಗವುಂಟು. **ಸೈಂಧವ ಮಾನಯ** ಎಂದರೆ ಕುದುರೆಯನ್ನು ತೆಗೆದುಕೊಂಡು ಬಾ ಎಂಬ ಶಬ್ದಾರ್ಥವಾದರೂ, ಭೋಜನಕಾಲದಲ್ಲಿ ಹಾಗೆ ಪ್ರಯೋಗಿಸಿದರೆ ಕಾಲವಶಾತ್ ಬೇರೆ ಅರ್ಥಮಾಡಿ ಉಪ್ಪನ್ನು ತೆಗೆದುಕೊಂಡು ಬಾ ಎಂಬುದಾಗಿ ತಿಳಿಯತಕ್ಕದ್ದಾಗಿರುತ್ತದೆ. ಹೀಗೆ ಈ ಕಾರಣಗಳಿಂದಲೂ ಶಬ್ದಕ್ಕೆ ಅರ್ಥವು ವ್ಯತ್ಯಸ್ತವಾಗಬಹುದು ಎಂಬ ತಾತ್ಪರ್ಯವು ಹೀಗೆ ಹೇಳಿದುದರಿಂದ ಸಂಪ್ರದಾನಾರ್ಥವನ್ನೂ ಕೂಡ ಔಚಿತ್ಯದಿಂದ ಹೇಳಬಹುದು ಎಂಬುದಕ್ಕೆ ಮೇಲೆ ಹೇಳಿದುದು [illegible]. ಸಂಪ್ರದಾನಾರ್ಥವನ್ನು ಹೇಗೆ ಹೇಳಬಹುದು, ಎಂದರೆ, ಈ ಅಷ್ಟಾಕ್ಷರದಲ್ಲಿಯೂ ನಾರಾಯಣನಿಗೋಸ್ಕರವೇ, ನಾರಾಯಣಾಯ ಎಂಬುದಾಗಿ ಅವರ [illegible]ವಾಗಿರುವ ಸ್ವತ್ತನ್ನು ಇನ್ನೊಬ್ಬರಿಗೆ ಸಮರ್ಪಿಸಿದರೆ ಸಂಪ್ರದಾನವಾಗುತ್ತದೆ. ಈ ಆತ್ಮ ಪರಮಾತ್ಮನ ಸ್ವತ್ತು; "ಸ್ವತ್ತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಂ" ಎಂದಿರುವಾಗ ಅವನ ಸ್ವತ್ತನ್ನೇ ಅವನಿಗೆ ಕೊಡುವುದು ಹೇಗೆ ಸಂಪ್ರದಾನವಾಗುತ್ತದೆಂದಾಕ್ಷೇಪಿಸಿದರೆ ಅದಕ್ಕೆ ಸಮಾಧಾನವು ಹೇಗೆ? [illegible] ಈ ಸಂಪ್ರದಾನಾರ್ಥವನ್ನು ಬೋಧಿಸುವುದು ಹೇಗೆ? ಎಂದರೆ, [illegible] ಸಂದರ್ಭದಲ್ಲಿ ಔಚಿತ್ಯದಿಂದ ಅರ್ಥಮಾಡುವುದು ನ್ಯಾಯವೆಂದು ಹೇಳಿ, ಸ್ವರೂಪ ಸಮರ್ಪಣೆಯನ್ನು

**ಆಗೈಯಾಲೇ “ದೀಯಮಾನಾರ್ಥ ಶೇಷಿತ್ವಂ ಸಂಪ್ರದಾನಾರ್ಥ ಮಿಷ್ಯತೇ” ಇತ್ಯಾದಿ ಗಳಿರ್ಪಡಿಯೇ ಪರಸ್ವತ್ವಾಪಾದನ ಮಿವ್ವಿಡತ್ತಿಲ್ ಕೂಡಾದಾಗಿಲುಮ್ ಈಶ್ವರನ್ ತನಕ್ಕು ಶೇಷಮಾನ ವಸ್ತುವೈ ತಾನೇ ರಕ್ಷಿತ್ತುಕ್ಕೊಳ್ಳುಂಪಡಿ ಸಮರ್ಪಿಕ್ಕಿರ ವಳ ವೈಪ್ಪತ್ತ ವಿವ್ಯಾಪಕಮನ್ತ್ರಙ್ಗಳಿಲ್ ಚತುರ್ಥಿಯೈ ಸಂಪ್ರದಾನಾರ್ಥಯಾಗ ಅಹಿರ್ಬುಧ್ನ್ಯನ್ ವ್ಯಾಖ್ಯಾನಂಪಣ್ಣಿನಾನ್.**

---

ಹೇಳಿದರೆ ಇಂತಹ ಆಕ್ಷೇಪ ಬರುವದರಿಂದ, ರಕ್ಷ್ಯವಸ್ತುವಾಗಿ ಸಮರ್ಪಣೆಯೆಂದು ಭಾವಿಸಿ, ಸಂಪ್ರದಾನಾರ್ಥವನ್ನು ಹೇಳುವದು ಉಚಿತವೆನ್ನುತ್ತಾರೆ. **ಆಗೈಯಾಲೇ** - ಆಕಾರಣದಿಂದ, ಶಬ್ದಗಳಿಗೂ ವಾಕ್ಯಗಳಿಗೂ ಮೇಲಿನ ಕಾರಣಗಳಿಂದ ಬೇರೆ ಅರ್ಥವನ್ನು ಹೇಳುವದು ನ್ಯಾಯವಾದುದರಿಂದ, **“ದೀಯಮಾನಾರ್ಥಶೇಷಿತ್ವಂ**-ಕೊಡಲು ಯೋಗ್ಯವಾದ ವಸ್ತುವಿಗೆ ತಾನು ಶೇಷಿಯಾಗಿರುವ ಭಾವವೇ, **ಸಂಪ್ರದಾನತ್ವ ಮಿಷ್ಯತೇ** - ಸಂಪ್ರದಾನತ್ವವೆಂದು ಹೇಳಲ್ಪಡುತ್ತದೆ,” **ಇತ್ಯಾದಿಗಳಿರ್ಪಡಿಯೇ** - ಇವೇ ಮೊದಲಾದ ಹೇಳಿಕೆಗಳಿಗನುಸಾರವಾಗಿ, **ಪರಸ್ವತ್ವಾಪಾದನಮ್** - ಇತರರ ಸ್ವತ್ತನ್ನೇ ಇತರರಿಗೆ ಕೊಡಬಹುದು; ಹಾಗಲ್ಲದೆ ಇತರನ ಸ್ವತ್ತನ್ನು ಇತರನಿಗೇನೇ ಕೊಡುವದು ಎಂದರೆ ಭಗವಂತನ ಸ್ವತ್ತನ್ನು ಭಗವಂತನಿಗೇ ಕೊಡುವದು, **ಇವ್ವಿಡತ್ತಿಲ್ ಕೂಡಾದಾಗಿಲುಮ್**- ಈ ಸಂದರ್ಭದಲ್ಲಿ ಸರಿಯಲ್ಲವಾದರೂ, ಪರಮಾತ್ಮನ ಸ್ವತ್ತಾದ ಈ ಆತ್ಮಾವನ್ನು ಅವನಿಗೇ ಸಮರ್ಪಿಸುವದು ಸಂಪ್ರದಾನ ಹೇಗಾದೀತು ಎಂದು ಆಕ್ಷೇಪ ತಂದರೂ, **ಈಶ್ವರನ್**-ಸರ್ವೇಶ್ವರನು, **ತನಕ್ಕುಶೇಷಮಾನವಸ್ತುವೇ**-ತನಗೆಸೇರಿದವಸ್ತುವನ್ನು, ಅಥವಾ **ಈಶ್ವರನ್ ತನಕ್ಕು** ಎಂದು ಒಂದು ಪದವಾದರೆ, ಈಶ್ವರನಿಗೇನೇ, **ಶೇಷಮಾನ ವಸ್ತುವೈ** – ಶೇಷವಾದ ವಸ್ತುವನ್ನು ಎಂದು ಅರ್ಥ ಹೇಳಬಹುದು. **ತಾನೇ ರಕ್ಷಿತ್ತುಕ್ಕೊಳ್ಳುಂಪಡಿ** - ತಾನೇ ರಕ್ಷಿಸಿಕೊಳ್ಳಬೇಕೆಂಬದಾಗಿ, **ಸಮರ್ಪಿಕ್ಕಿರವಳವೈಪ್ಪತ್ತೆ** – ಸಮರ್ಪಿಸುವ ಪ್ರಕ್ರಿಯ ಮಾತ್ರವನ್ನು ಕುರಿತು, **ಇವ್ವೀವ್ಯಾಪಕಮನ್ತ್ರಙ್ಗಳಿಲ್**– ಅಷ್ಟಾಕ್ಷರ ಷಡಕ್ಷರ ದ್ವಾದಶಾಕ್ಷರ ಮನ್ತ್ರಗಳಲ್ಲಿ, **ಚತುರ್ಥಿಯೈ** - ಚತುರ್ಥಿಯನ್ನು ನಾರಾಯಣಾಯ, ವಿಷ್ಣವೇ, ವಾಸುದೇವಾಯ ಎಂಬಲ್ಲಿರುವ ಚತುರ್ಥಿಯನ್ನು, **ಸಂಪ್ರದಾನಾರ್ಥಮಾಗ** - ಸಂಪ್ರದಾನಾರ್ಥವನ್ನು ಬೋಧಿಸುತ್ತದೆಂದು, **ಅಹಿರ್ಬುಧ್ನ್ಯನ್** – ಸಂಹಿತಾಕರ್ತರು, **ವ್ಯಾಖ್ಯಾನಂ ಪಣ್ಣಿನಾನ್** - ವ್ಯಾಖ್ಯಾನವನ್ನು ಮಾಡಿದರು. ವಸ್ತುವು ತನ್ನದಾಗಿ ಇನ್ನೊಬ್ಬರಿಗೆ ಸಂಪ್ರದದೇನಮಮ ಎಂದು ಸಮರ್ಪಿಸಿದರೆ ಸಂಪ್ರದಾನವಾಗುತ್ತದೆ. ಹಾಗಲ್ಲದೆ, ಈ ಆತ್ಮ ಎಂಬ ಸ್ವತ್ತು ಪರಮಾತ್ಮನದು. ಅದನ್ನು ಅವನಿಗೇ ಸಮರ್ಪಿಸುವದು ಹೇಗೆ ಸಂಪ್ರದಾನವಾದೀತು? ಎಂದರೆ, ಈ ಮುಮುಕ್ಷುವಿನ ಆತ್ಮ ಸಮರ್ಪಣೆಯು ಈ ಸಂದರ್ಭದಲ್ಲಿ ಸ್ವರೂಪತಃ ಸಮರ್ಪಣೆಯಲ್ಲವೆಂದು ಭಾವಿಸಬಹುದು. ಆದರೆ ಈ ಮುಮುಕ್ಷುವು.

(೧) **"ನೀಚೀ ಭಾವೇನ ಸಂದ್ಯೋತ್ಯತೇಽತ್ಮನೋ ಯತ್ಸಮರ್ಪಣಂ। ವಿಷ್ಣ್ವಾದಿಷು ಚತುರ್ಥೀ ತತ್ (ಸಾ) ಸಂಪ್ರದಾನ ಪ್ರದರ್ಶಿನೀ। ನೀಚೀಭೂತೋಽಹ್ಯಸಾವಾತ್ಮಾ ಯತ್ಸಂರಕ್ಷ್ಯತಯಾರ್ಪ್ಯತೇ। ತತ್ಕಸ್ಮಾ ಇತ್ಯಪೇಕ್ಷಾಯಾಂ ವಿಷ್ಣವೇ ಸ ಇತೀರ್ಯತೇ" ಎನ್ನ ವಚನತ್ತಿಲ್, "ವಿಷ್ಣ್ವಾದಿಷು" ಎನ್ನೈಯಾಲೇ ನಾರಾಯಣಾದಿ ಶಬ್ದಙ್ಗಳಿಲ್ ಚತುರ್ಥಿಯುಡೈಯ ವ್ಯಾಖ್ಯಾನಂ ಪಣ್ಣಪಟ್ಟದು.**

---

ಸಮರ್ಪಿಸುವ ಸಂದರ್ಭದಲ್ಲಿ ಹೇಗೆ ಸಮರ್ಪಿಸುವನು ಎಂದರೆ ಈ ಆತ್ಮಾವನ್ನು ರಕ್ಷಿಸಲು ತನಗೆ ಸರ್ವಾತ್ಮನಾ ಯೋಗ್ಯತೆ ಇಲ್ಲವು, ನೀನೇ ರಕ್ಷಿಸಲು ಶಕ್ತನಾದುದರಿಂದಲೂ ಸಮರ್ಪಿಸುತ್ತೇನೆಂಬಭಾವದಿಂದ; ಹೀಗೆ ಸಂಪ್ರದಾನಾರ್ಥವು ಸಿದ್ಧಿಸುತ್ತೆಂಬುದು ತಾತ್ಪರ್ಯವು.

ಮುಂದೆ ಅಹಿರ್ಬುಧ್ನ್ಯರು ಹಾಗೆಯೇ ಸಂಪ್ರದಾನಾರ್ಥವನ್ನು ಎಂದರೆ ಸಮರ್ಪಣಾರ್ಥವನ್ನುವ್ಯಕ್ತಪಡಿಸಿರುತ್ತಾರೆ ಎಂದು ಪ್ರದರ್ಶಿಸುವದಕ್ಕಾಗಿ ಇವರ ಸಂಹಿತಾವಾಕ್ಯವನ್ನುಉದಾಹರಿಸುತ್ತಾರೆ. ಆದರೆ"ತತ್ಕಸ್ಮಾ ಇತ್ಯಪೇಕ್ಷಾಯಾಂ ವಿಷ್ಣವೇ ಇತೀರ್ಯತೇ"ಎಂದು ಇರುವದರಿಂದ, ಇವರು ವಿಷ್ಣು ಷಡಕ್ಷರ ಮಂತ್ರವನ್ನುದ್ದೇಶಿಸಿ ಹೇಳಿದ್ದರೂ ಅದು ಅಷ್ಟಾಕ್ಷರದ ನಾರಾಯಣಾಯ ಎಂಬವಕ್ಕೂ ದ್ವಾದಶಾಕ್ಷರದ ವಾಸುದೇವಾಯ ಎಂಬದಕ್ಕೂ ವಿಷ್ಣ್ವಾದಿಷು ಎಂಬಲ್ಲಿರುವ ಆದಿಪದದಿಂದ ಅನ್ವಯಿಸುತ್ತದೆಂದು ತಿಳಿಸುತ್ತಾರೆ. (೧) ನೀಚೀಭಾವೇನ-ಶೇಷಭಾವದಿಂದ, ಆತ್ಮನಃ-ಜೀವಾತ್ಮನ, ಯತ್ - ಯಾವ, ಸಮರ್ಪಣಮ್-ಸಮರ್ಪಣವು, ಸಂದ್ಯೋತ್ಯತೇ-ತೋರಿಸಲ್ಪಟ್ಟಿರುತ್ತದೋ, ಪ್ರದರ್ಶಿಸಲ್ಪಟ್ಟಿರುತ್ತದೋ ತತ್ - ಅದು, ವಿಷ್ಣ್ವಾದಿಷು - ಷಡಕ್ಷರ ಮಂತ್ರದ ವಿಷ್ಣವೇ ಮೊದಲಾದವುಗಳಲ್ಲಿ, ಇಲ್ಲಿ ಆದಿ ಶಬ್ದದಿಂದ ಇತರ ವ್ಯಾಪಕಮನ್ತ್ರಗಳಲ್ಲಿರುವ ನಾರಾಯಣಾಯ ವಾಸುದೇವಾಯ ಎಂಬ ಎಂಬ ಪದಗಳಲ್ಲಿರುವ, ಎಂಬರ್ಥವೂ ಸೂಚಿತವು, ಚತುರ್ಥೀ - ಚತುರ್ಥೀವಿಭಕ್ತಿಯಾಗಿ, ಸಂಪ್ರದಾನ ಪ್ರದರ್ಶನೀ - ಸಂಪ್ರದಾನಾರ್ಥವನ್ನು ಪ್ರದರ್ಶಿಸುತ್ತದೆ. ಇಲ್ಲಿನ ಸಂಪ್ರದಾನಾರ್ಥವು ಸ್ವಲ್ಪವೈಲಕ್ಷಣ್ಯವುಳ್ಳದೆಂಬುವನ್ನು ಮುಂದೆ ತಿಳಿಸುತ್ತಾರೆ. ಸಂಪ್ರದಾನಾರ್ಥವುಳ್ಳದು ವಿಷ್ಣವೇ ಎಂಬುದು ಎಂದು ಹೇಳುವದಕ್ಕೆ ಕಾರಣವನ್ನು ಹೇಳುತ್ತಾರೆ, ಹಿ - ಯಾವ ಕಾರಣದಿಂದ ಎಂದರೆ ನೀಚೀಭೂತೋಽಸೌ - ಈ ಶೇಷಭೂತನಾದ ಆತ್ಮನು, ಸಂರಕ್ಷ್ಯತಯಾ - ನಿನ್ನ ನ್ನು ನೀನೇ ರಕ್ಷಿಸಿಕೊಳ್ಳತಕ್ಕದ್ದೆಂಬ ಸಮರ್ಪಣೆಯ ಭಾವದಿಂದ, ಅರ್ಪ್ಯತೇ-ಸಮರ್ಪಿಸಲ್ಪಟ್ಟಿತೆಂಬುದು, ಯತ್-ಯಾವುದೋ, ತತ್-ಅದು, ಕಸ್ಮೈ ಇತ್ಯಪೇಕ್ಷಾಯಾಂ ಯಾರಿಗೆ ಸಮರ್ಪಿಸಲ್ಪಟ್ಟಿತೆಂಬ ಅಪೇಕ್ಷೆಯಲ್ಲಿ. ವಿಷ್ಣವೇ - ವಿಷ್ಣುವಿಗಾಗಿ

(೧) ಅಹಿರ್. ೫೨-೩೫, ೩೬.

### ಮೂಲಮನ್ತ್ರೇ ನಕಾರಾದಿ ಸಪ್ತ ವರ್ಣಾರ್ಥಾಃ ಪೂರ್ವಾಚಾರ್ಯೋಪದಿಷ್ಟಾಃ ಸಂಗೃಹ್ಣಾತಿ.

ಇತ್ತಿರುಮನ್ತ್ರತ್ತಿಲ್ ನಕಾರಮ್ ಮುದಲಾನ ಏಳು ತಿರುವಕ್ಷರಙ್ಗಳುಕ್ಕುಮ್ ಪ್ರತ್ಯೇಕಂ ಮನ್ತ್ರಸ್ಮೃತಿಗಳಿಲ್ ಸೊನ್ನ ಅರ್ಥಙ್ಗಳ್ "ನಾಯಕತ್ವಂಚ ಸರ್ವೇಷಾಂ ನಾಮನತ್ವಂ ಪರೇಪದೇ । ನಾಶಕತ್ವಂ ವಿರುದ್ಧಾನಾಂ ನಕಾರಾರ್ಥಃ ಪ್ರಕೀರ್ತಿತಃ ॥ ಮಙ್ಗಳತ್ವಂ ಮಹತ್ವಂಚ ಮಹನಂಚ ಕರೋತಿ

---

ಸಮರ್ಪಿಸಲ್ಪಟ್ಟಿತೆಂದು, ಇತೀರ್ಯತೇ - ಎಂದು ಹೇಳಲ್ಪಡುತ್ತದೆ," ಎನ್ಗಿರ ವಚನತ್ತಿಲ್" - ಎನ್ನುವ ವಾಕ್ಯದಲ್ಲಿ, "ವಿಷ್ಣ್ವಾದಿಷು" ಎನ್ಗೈಯಾಲೇ - ವಿಷ್ಣ್ವಾದಿಷು ಎಂದು ಆದಿಪದವನ್ನು ಪ್ರಯೋಗಿಸಿರುವದರಿಂದ, ನಾರಾಯಣ ಶಬ್ದಙ್ಗಳಿಲ್ - ಮೂಲ ಮಂತ್ರದ ನಾರಾಯಣಾಯ ಎಂಬ ಮತ್ತು ಆದಿ ಪದದಿಂದ ದ್ವಾದಶಾಕ್ಷರದ ವಾಸುದೇವಾಯ ಎಂಬ ಶಬ್ದಗಳಲ್ಲೂ, ಚತುರ್ಥಿಯೂ ವ್ಯಾಖ್ಯಾನಂ ಪಣ್ಣಪಟ್ಟದು - ವ್ಯಾಖ್ಯಾನಮಾಡಲ್ಪಟ್ಟಿತು. ಆದುದರಿಂದ ರಕ್ಷ್ಯವಸ್ತುವಾಗಿ ಸಮರ್ಪಿಸೋಣವೂ ಕೂಡ ಸಂಪ್ರದಾನಾರ್ಥವಾಗಬಹುದು ಎಂಬ ಭಾವವು.

### ಮೂಲಮಂತ್ರದ ನಕಾರಾದಿ ಏಳು ಅಕ್ಷರಗಳಿಗೆ ಪೂರ್ವಾಚಾರ್ಯರು ಸಙ್ಗ್ರಹಿಸಿದ ಅರ್ಥಗಳನ್ನು ಹೇಳುತ್ತಾರೆ.

ಮುಂದೆ, ನಮೋನಾರಾಯಣಾಯ ಎಂಬ ಏಳು ಅಕ್ಷರಗಳಿಗೂ ಪೂರ್ವಾಚಾರ್ಯರು ಸಙ್ಗ್ರಹಿಸಿ ಹೇಳಿದ ಮಂತ್ರ ಸ್ಮೃತಿಗಳ ಅರ್ಥಗಳನ್ನು ತಿಳಿಸುತ್ತಾರೆ.— ನಮಃ ಎಂಬಲ್ಲಿ ನ ಕಾರದಿಂದ ತೋರುವ ಮೂರು ಅರ್ಥಗಳು ಹೇಳಲ್ಪಡುವುವು; ಸರ್ವೇಷಾಂ - ಸಮಸ್ತ ಶ್ರೇಯಸ್ಸುಗಳ, ನಾಯಕತ್ವಂ - ಎಂದರೆ ಪ್ರಾಪಕತ್ವಂ- ಹೊಂದಿಸೋಣವೂ, ಪರೇಪದೇ - ಸರ್ವೋತ್ಕೃಷ್ಟವಾದ ಪರಮ ಪದದಲ್ಲಿ, ನಾಮನತ್ವಂ - ಪ್ರಾವಣ್ಯವನ್ನುಂಟುಮಾಡುವದೂ, ವಿರುದ್ಧಾನಾಂ - ಅನಾತ್ಮಗುಣಗಳ ನಾಶಕತ್ವಂ - ನಾಶವಾಗೋಣವೂ, ಹೀಗೆ ನಕಾರಾರ್ಥಃ ಪ್ರಕೀರ್ತಿತಃ - ನಕಾರದ ಮೂರು ಅರ್ಥಗಳು, ಶ್ಲಾಘಿಸಲ್ಪಟ್ಟವು ಎಂದರೆ ಹೇಳಲ್ಪಟ್ಟವು. ಮುಂದೆ ನಮಃ ಎಂಬಲ್ಲಿರುವ ಮಕಾರಾರ್ಥವು ಹೇಳಲ್ಪಡುತ್ತದೆ. ಆಶ್ರಿತಾನಾಂ ಮಙ್ಗಳತ್ವಂ - ಪರಮಾತ್ಮನನ್ನು ಆಶ್ರಯಿಸಿದವರಿಗೆ ಮಙ್ಗಳವನ್ನುಂಟುಮಾಡೋಣವನ್ನೂ, ಮಹತ್ವಂ - ಧರ್ಮಭೂತಜ್ಞಾನದ ವಿಕಾಸವನ್ನೂ, ಮಹನಂಚ - ಪೂಜೆಯನ್ನೂ, ಆತನಿಗೆ ನಿತ್ಯಕೈಙ್ಕರ್ಯ ಮಾಡುವ ಪ್ರಾಪ್ತಿಯನ್ನೂ ಸಹ, ಕರೋತಿ ಯತ್ - ಮಾಡುತ್ತದೆಂಬುದು ಯಾವುದೋ, ತತಃ - ಆ ಕಾರಣದಿಂದ, ಬುಧೈಃ - ಪಂಡಿತರುಗಳಿಂದ, ಮಕಾರಾರ್ಥಃ - ಮಕಾರದ ಅರ್ಥವು,

ಯೋಗೋದ್ಯೋಗಃ ಫಲಂಚಾಶು ಯಕಾರಾತ್ಪ್ರಾಪ್ಯತೇ ಬುಧೈಃ । ವರ್ಣ
ನಂಚ ತಥಾ ವಿಷ್ಣೋರ್ವಾಣೀ ಸಿದ್ಧಿರ್ಣಕಾರತಃ ॥ ಯಕ್ಷರಾಕ್ಷಸ ವೇತಾಳ
ಭೂತಾದೀನಾಂ ಭಯಾಯ ಯಃ । ಏವ ಮಕ್ಷರ ನಿರ್ವಾಹೋ ಮನ್ತ್ರವಿದ್ಭಿಃ
ಪ್ರಕೀರ್ತಿತಃ' ಇತ್ಯಾದಿಗಳಾಲೇ ಶಿಲ ವಾಚಾರ್ಯರ್ಗಳ್ ಸಙ್ಗ್ರಹಿತ್ತಾರ್ಗಳ್.

---

ದಿಂದ ಎರಡರ್ಥಗಳೂ, ಣಕಾರದಿಂದ ಎರಡರ್ಥಗಳೂ ಹೇಳಲ್ಪಡುವುವು — **ಯೋಗೋ
ದ್ಯೋಗಃ** - ಭಗವಂತನನ್ನು ಹೊಂದುವ ಉಪಾಯಾನುಷ್ಠಾನದಲ್ಲಿ ತ್ವರೆಯೂ,
ಫಲಂ ಚಾಶು - ಅದರಿಂದ ಶೀಘ್ರವಾಗಿ ಉಂಟಾಗುವ ಫಲವೂ ಸಹ, **ಯಕಾ
ರಾತ್ ಪ್ರಾಪ್ಯತೇ** - ಯಕಾರಾನುಸಂಧಾನದಿಂದುಂಟಾಗುತ್ತದೆ, (ಇತಿ) **ಬುಧೈಃ**
(ಪ್ರಕೀರ್ತಿತಃ) ಎಂದು ತಿಳಿದುಕೊಳ್ಳತಕ್ಕದ್ದು, ಎಂಬದಾಗಿ ಪಂಡಿತರಿಂದ ಹೇಳ
ಲ್ಪಟ್ಟಿತು. ತಥಾ - ಹಾಗೆಯೇ, ವಿಷ್ಣೋಃ - ವಿಷ್ಣುವಿನ, **ವರ್ಣನಂ** - ಭಗವಂ
ತನ ಸ್ವರೂಪ, ರೂಪ ಕಲ್ಯಾಣಗುಣ, ವಿಭವ ಮತ್ತು ದಿವ್ಯ ಚೇಷ್ಟಿತಗಳನ್ನು ವರ್ಣಿ
ಸುವ ಶಕ್ತಿಯೂ ಮತ್ತು ವಾಣೀ ಸಿದ್ಧಿಃ - ಅದಕ್ಕೆ ಬೇಕಾದ ಯೋಗ್ಯವಾದ
ವಾಕ್ಸಿದ್ಧಿಯೂ ಸಹ, ಣಕಾರಾತ್ - ಣ ಕಾರದ ಅನುಸಂಧಾನದಿಂದ ಪ್ರಾಪ್ಯತೇ
ಎಂದು ಕ್ರಿಯಾಪದವು ಹಿಂದೆ ಇದೆ, ಉಂಟಾಗುತ್ತದೆ. ಮುಂದೆ ನಾರಾಯ
ಣಾಯ ಎಂಬಲ್ಲಿರುವ ಕೊನೆಯ ಯಕಾರಕ್ಕೆ ಒಂದು ಅರ್ಥವು ಹೇಳಲ್ಪಡುತ್ತದೆ.—
**ಯಃ** - ಯ ಎಂಬ ಅಕ್ಷರದ ಅನುಸಂಧಾನವು, **ಯಕ್ಷರಾಕ್ಷಸ ವೇತಾಳಭೂತಾ
ದೀನಾಂ** - ಯಕ್ಷ ರಾಕ್ಷಸ ಪಿಶಾಚ ಭೂತ ಮೊದಲಾದವುಗಳ, **ಭಯಾಯ** –
ಭಯಕ್ಕಾಗಿ, ಉಂಟಾದುದು ಎಂದರೆ, ಭಯನಿವಾರಣಕ್ಕಾಗಿ ಅದರ ಅನುಸಂಧಾ
ನವು ಎಂಬ ಭಾವವು. ಈ ಪ್ರಪನ್ನನು ಮಾಡುವ ನಿತ್ಯ ನೈಮಿತ್ತಿಕ ಭಗವದಾ
ರಾಧನೆ ಮೊದಲಾದವುಗಳನ್ನು ಭಗವತ್ಪ್ರೀತಿಗಾಗಿ ಅನುಷ್ಠಿಸುವಾಗ, ಈ ಭೂತ
ಪಿಶಾಚಾದಿಗಳು ತೊಂದರೆ ಮಾಡುವುದಿಲ್ಲನೆಂಬ ಭಾವವು. **ಏವಂ** - ಈ ಪ್ರಕಾರ
ವಾಗಿ, ಅಕ್ಷರ ನಿರ್ವಾಹಃ - ಈ ಏಳಕ್ಷರಗಳಿಂದುಂಟಾಗುವ ಅರ್ಥವು, **ಮಂತ್ರ
ವಿದ್ಭಿಃ** - ಮಂತ್ರಾರ್ಥಗಳನ್ನು ತಿಳಿದ ಪ್ರಾಜ್ಞರಿಂದ, **ಪ್ರಕೀರ್ತಿತಃ** - ಕೊಂಡಾಡ
ಲ್ಪಟ್ಟಿರುತ್ತದೆ" ಇತ್ಯಾದಿಗಳಾಲೇ - ಇವೇ ಮೊದಲಾದ ವಚನಗಳಿಂದ, **ಶಿಲ
ವಾಚಾರ್ಯರ್ಗಳ್**-ಮಂತ್ರಮಾಹಾತ್ಮ್ಯೆಯನ್ನು ಅರಿತ ಕೆಲವು ಆಚಾರ್ಯರುಗಳು,
ಸಙ್ಗ್ರಹಿತ್ತಾರ್ಗಳ್ - ಸಙ್ಗ್ರಹಿಸಿದರು. ಇದಕ್ಕೆ ಕರ್ಮಪದವು ಮನ್ತ್ರಸ್ಮೃತಿ,
ಗಳ್ ಚೊನ್ನ ಅರ್ಥಙ್ಗಳೈ ಎಂದು ಹಿಂದೆ ವಾಕ್ಯದಿಯಲ್ಲಿ ಇದೆ.

ಈಗ ಮೂಲಮಂತ್ರದ ಪ್ರಣವ, ನಮಸ್ಸು, ನಾರಾಯಣಾಯ ಎಂಬ ಮೂರು
ಪದಗಳಿಂದ ತೋರುವ ಸಮಸ್ತ ಅರ್ಥಗಳನ್ನು ಧಾತು ಪ್ರಕೃತಿಗಳ ಮತ್ತು ವ್ಯಾಕ
ರಣ ನಿಯಮಗಳ ಮೂಲಕ ಉಂಟಾಗುವ ಅರ್ಥಗಳನ್ನೆಲ್ಲಾ ವಿಶದವಾಗಿ
ತಿಳಿ, ಈ ಸಂಗ್ರಹದ ವಾಕ್ಯದ ಮೂಲಕ, ಈ ಮಂತ್ರಾರ್ಥ ಬಲದಿಂದ ಇತ್ಯರ್ಥ

**ಇಪ್ಪಡಿ ಪದಙ್ಗಳನುಡೈಯ ವ್ಯಾಕರಣ ನಿರುಕ್ತಾದಿ ಸಿದ್ಧವ್ಯುತ್ಪತ್ತಿ ಪರಾಮರ್ಶತ್ತಾಲೇ ಪರವಾದಿ ಮೂಲಮಾನ ಮರುಳ್ ಮಾಶರವಿಳಕ್ಕಪ್ಪಟ್ಟ ತಿರುಮನ್ತ್ರಮಾಗಿರ ಕಣ್ಣಾಡಿ ಪರಸ್ವರೂಪಾದಿಗಳೈಯುಮ್, ಸ್ವಸ್ವರೂಪತ್ತಿಲ್ ಕಾಣವರಿಯ ನಿಲಙ್ಗಳೈಯುಮೆಲ್ಲಾಮ್ ಸುವ್ಯಕ್ತಮಾಗಕ್ಕಾಟ್ಟುಮ್.**

---

ಅಪಸಿದ್ಧಾಂತಾರ್ಥಗಳೆಲ್ಲಾ ತೊಲಗಿ, ಪರಮಾತ್ಮನ ಸ್ವರೂಪವನ್ನೂ, ತನ್ನ ಸ್ವರೂಪವನ್ನೂ, ತಾನು ಅನುಷ್ಠಿಸುವ ಉಪಾಯವನ್ನೂ, ಫಲವನ್ನೂ, ಸಹ ಎಲ್ಲವನ್ನೂ ಈ ಮೂಲಮಂತ್ರವಾದ ಚಿಕ್ಕ ಕನ್ನಡಿಯಲ್ಲಿ ಕಾಣಬಹುದು ಎಂದು ಹೇಳುತ್ತಾರೆ.— **ಇಪ್ಪಡಿ** - ಮೇಲೆ ವಿಸ್ತಾರವಾಗಿ ಉಪಪಾದಿಸಿ ಹೇಳಿದ ರೀತಿಯಲ್ಲಿ, **ಪದಙ್ಗಳುಡೈಯ** - ಪದಗಳ. **ವ್ಯಾಕರಣ ನಿರುಕ್ತಾದಿ ವ್ಯುತ್ಪತ್ತಿ ಪರಾಮರ್ಶತ್ತಾಲೇ** - ವ್ಯಾಕರಣ ನಿರುಕ್ತ ಮೊದಲಾದವುಗಳಿಂದುಂಟಾಗುವ ವಿವೇಚನೆಯಿಂದ ಇಲ್ಲಿ ಆದಿ ಪದದಿಂದ ಅಕ್ಷರ ನಿಘಂಟು. ಮಂತ್ರ ಸ್ಮೃತಿಗಳೆಲ್ಲವೂ ಹೇಳಲ್ಪಟ್ಟವು. **ಪರವಾದಿ** - ಇತರ ಸಿದ್ಧಾನ್ತಿಗಳ ಮೂಲಕ ಪ್ರಾಪ್ತವಾಗುವ, **ಮಾಶರ ವಿಳಕ್ಕಪ್ಪಟ್ಟ** - ಅಪಾರ್ಥಗಳೆಂಬ ಮಲಗಳೆಲ್ಲಾ ಕಳೆದುಹೋಗುವ ಹಾಗೆ, ಎಂದರೆ ಅಪಾರ್ಥಗಳ ನಿರಸನ ಉಂಟಾಗುವ ಹಾಗೆ, **ತಿರುಮನ್ತ್ರಮಾಗಿರ ಕಣ್ಣಾಡಿ** - ಈ ಮೂಲಮಂತ್ರವೆಂಬುವ ಕನ್ನಡಿಯು, **ಪರಸ್ವರೂಪಾದಿಗಳೈಯುಮ್** - ಪರಮಾತ್ಮನ ಸ್ವರೂಪ. ಆದಿಶಬ್ದದಿಂದ, ರೂಪ ಗುಣ ವಿಗ್ರಹ ವಿಭೂತಿಗಳನ್ನೂ, **ಸ್ವಸ್ವರೂಪತ್ತಿಲ್** - ಜೀವಾತ್ಮನಾದ ತನ್ನ ಸ್ವರೂಪದಲ್ಲಿ, **ಕಾಣವರಿಯ ನಿಲಙ್ಗಳೈಯುಮ್ ಎಲ್ಲಾಮ್** - ವಿಮರ್ಶಿಸಿ ತಿಳಿಯಬೇಕಾದ ಅಂಶಗಳೆಲ್ಲವನ್ನೂ, **ಸುವ್ಯಕ್ತಮಾಗಕಾಟ್ಟುಮ್** - ಬಹು ಸ್ಫುಟವಾಗಿ ತೋರಿಸುತ್ತದೆ. ಇತರ ಸಿದ್ಧಾಂತಿಗಳು ಹೇಳುವ ಜೀವ ಪರಮಾತ್ಮ ಐಕ್ಯವೂ, ಪರಬ್ರಹ್ಮವು ನಿರ್ಗುಣವು, ವಿಭೂತಿಯೆಲ್ಲಾ ಮಿಥ್ಯವೂ, ಅಥವಾ ಶೂನ್ಯವು, ಪರಮಾತ್ಮನಿಗೇನೇ ಅವಿದ್ಯಾಗೃಹೀತತ್ವವು ಇತ್ಯಾದಿ ವಾದಗಳೆಲ್ಲಾ ಭ್ರಮವನ್ನುಂಟುಮಾಡುವದರಿಂದ ಮನಸ್ಸಿಗೆ ಮಾಲಿನ್ಯ ಉಂಟುಮಾಡುವದನ್ನು ಈ ಮೂಲಮಂತ್ರವು ಹೋಗಲಾಡಿಸುವದರಿಂದ **ಮಾಶಿರವಿಳಕ್ಕಪ್ಪಟ್ಟ** ಎಂಬ ಪ್ರಯೋಗವು. ಹಿಂದೆ ಉಪಪಾದಿಸಲ್ಪಟ್ಟ, ಈ ಮೂಲಮಂತ್ರದ ಮೂರು ಪದಗಳಿಂದ ಸುವ್ಯಕ್ತವಾಗಿ ತೋರಿಬರುವ ಅರ್ಥಗಳನ್ನೆಲ್ಲಾ ಅನುಸಂಧಾನಮಾಡಿದುದಾದರೆ ವೇದ ವಾಕ್ಯಗಳಿಗೆ ಸರಿಯಾದ ಅರ್ಥಗಳನ್ನು ಹೇಳದವರ ಮತ್ತು ವೇದಬಾಹ್ಯರವರ ಭ್ರಮಜ್ಞಾನಗಳೆಲ್ಲಾ ಹೊರಟುಹೋಗಿ, ಯಥಾರ್ಥಜ್ಞಾನವು ಪ್ರಾಪ್ತವಾಗುವದೆಂಬುದು ನಿಸ್ಸಂದೇಹವೆಂಬ ತಾತ್ಪರ್ಯವು. ಆ ಅರ್ಥಗಳೆಲ್ಲಾ ಹಿಂದೆಯೇ ಉಪಪಾದಿತನಾಗಿದ್ದರೂ, **ದೇಶಿಕೋಮೇ ದಯಾಳುಃ** ಎಂದು ಹೇಳಿರುವ ಮೇರಿಗೆ ತಾವೇ ಪರಮ ಕೃಪೆಯಿಂದ ಮುಂದೆ ಈ ಮೂಲಮಂತ್ರದಲ್ಲಿ ತೋರಿಬರುವ ಜೀವ ಸ್ವರೂಪ ಸ್ವಭಾವಾದಿಗ

## ಮೂಲಮನ್ತ್ರೇ ಅನುಸನ್ಧೇಯ ಭಗವತ್ಸ್ವರೂಪ ಸ್ವಭಾವಕಥನಮ್.

ಇದುಕ್ಕು ಪ್ರತಿಪಾದ್ಯ ದೇವತೈಯಾಯ್ ಪ್ರಾಪ್ಯಮುಮಾನ ಪರಸ್ವರೂಪತ್ತೈ ಇತ್ತಿರುಮನ್ತ್ರತ್ತಿಲ್ ಶಾಬ್ದಙ್ಗಳಾಯುಮ್, ಆರ್ಥಙ್ಗಳಾಯುಮುಳ್ಳ ಪ್ರಕಾರಙ್ಗಳೋಡೆ ಕೂಡ ಯಥಾಪ್ರಮಾಣಂ ಅನುಸಂಧಿಕ್ಕಂ ಪೋದು । ರಕ್ಷಕತ್ವಮ್, (೨) ಅದಿನುಡೈಯ ಸ್ವಭಾವಸಿದ್ಧತ್ವಮುಂ, (೩) ಅದಿನ್ ಸರ್ವ

---

ಳನ್ನು ಪರಸ್ವರೂಪ ಸ್ವಭಾವಗಳನ್ನೂ ಎಲ್ಲವನ್ನೂ ಕ್ರಮವಾಗಿ ವ್ಯಕ್ತಪಡಿಸಿ, "ಸರ್ವಂ ಅಷ್ಟಾಕ್ಷರಾಂತಸ್ಥಂ" ಸಮಸ್ತಾರ್ಥವೂ ಅಷ್ಟಾಕ್ಷರದಲ್ಲಿದೆ ಎಂಬುದನ್ನು ಸ್ಥಾಪಿಸುತ್ತಾರೆ. ಮೊದಲು ಪ್ರಣವದ ಅಕಾರದಿಂದುಂಟಾಗುವ ಪರಸ್ವರೂಪಾದಿ ೧೭ ಅರ್ಥಗಳನ್ನು ತಿಳಿಸುತ್ತಾರೆ.

ಇದುಕ್ಕು - ಈ ಮೂಲ ಮಂತ್ರಕ್ಕೆ, ಪ್ರತಿಪಾದ್ಯ ದೇವತೈ ಯಾಯ್ - ಪ್ರತಿಪಾದಿಸಲ್ಪಟ್ಟ ದೇವತೆಯಾಗಿ, ಅದು ಯಾವುದೆಂದರೆ ಪರಮಾತ್ಮಾ ನಾರಾಯಣೋ ದೇವತಾ ಎಂದು ಹೇಳಿರುವವರಿಂದ ನಾರಾಯಣನಾಗಿ, ಪ್ರಾಪ್ಯಮಾನ ಪರಸ್ವರೂಪತ್ತೈ - ಪ್ರಾಪ್ಯನಾಗಿರುವ ಪರಸ್ವರೂಪವನ್ನು, ಇತ್ತಿರುಮನ್ತ್ರತ್ತಿಲ್ - ಈ ಮೂಲಮಂತ್ರದಲ್ಲಿ ಶಾಬ್ದಙ್ಗಳಾಯುಮ್, ಆರ್ಥಙ್ಗಳಾಯುಮ್ - ಶಾಬ್ದವಾಗಿಯೂ ಆರ್ಥವಾಗಿಯೂ, ಉಳ್ಳ - ತೋರಿಬರುವ, ಪ್ರಕಾರಙ್ಗಳೋಡೆ - ವಿಶೇಷಣಗಳೊಂದಿಗೆ, ಯಥಾ ಪ್ರಮಾಣಂ - ಶಾಸ್ತ್ರಗಳಲ್ಲಿ ಹೇಳಿರುವಹಾಗೆ, ಅದಕ್ಕೆ ಅನುಗುಣವಾದ ಪ್ರತ್ಯಕ್ಷಾನುಮಾನ ಪ್ರಮಾಣಗಳೂ ಸಹ ಇಲ್ಲಿ ವಿವಕ್ಷಿತವು, ಅನುಸಂಧಿಕ್ಕಪ್ಪೋದು - ಅನುಸಂಧಾನವನ್ನು ಮಾಡುವ ಕಾಲದಲ್ಲಿ ಯಾವ ಯಾವ ಆಕಾರಙ್ಗಳನ್ನು ಗ್ರಹಿಸಬಹುದೆಂಬುದನ್ನು ಒಂದೊಂದಾಗಿ ಹೇಳುತ್ತಾರೆ.

### ಮೂಲಮನ್ತ್ರದಲ್ಲಿ ಅನುಸಂಧೇಯವಾದ ಭಗವಂತನ ಸ್ವರೂಪ ಸ್ವಭಾವಗಳ ಕಥನವು.

(೧) ರಕ್ಷಕತ್ವಂ - "ರಕ್ಷಿತಾ ಜೀವಲೋಕಸ್ಯ" ಎಂದು ಹೇಳಿರುವಹಾಗೆ ಪ್ರಣವಾಕಾರದ ಅವರಕ್ಷಣೆ ಎಂಬ ಧಾತುವಿನಿಂದ ಉಂಟಾದರ್ಥವೆಂದೂ ಹೇಳಿದ ರಕ್ಷಕತ್ವವೂ, (೨) ಅದಿನುಡೈಯ ಸ್ವಭಾವಸಿದ್ಧತ್ವಂ - ಆ ರಕ್ಷಿಸುವ ಸ್ವಭಾವವು ಪರಮಾತ್ಮನಿಗೆ ಸ್ವತಸ್ಸಿದ್ಧವಾದುದು ಎಂಬುದು. ಮೇಲಿನ ರಾಮಾಯಣ ಪ್ರಮಾಣವೇ ಇದನ್ನೂ ಬೋಧಿಸುತ್ತದೆ. ಉಪಾಧಿರಹಿತವಾಗಿರುವುದರಿಂದ ಸ್ವಭಾವ ಸಿದ್ಧವೆಂಬ ಭಾವವು. (೩) ಅದಿನ್ ಸರ್ವವಿಷಯತ್ವಮ್ - ಬದ್ಧಮುಕ್ತನಿತ್ಯರಾದ ಸರ್ವಚೇತನ ರಕ್ಷಕತ್ವವು "ಲಕ್ಷ್ಮ್ಯಾ ಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ । ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷು ಚ ಗೀಯತೇ" ಎಂಬ

ವಿಷಯತ್ವಮ್, (೪) ರಕ್ಷ್ಯವಸ್ತು ವಿಶೇಷಾನುರೂಪಮಾಗ ರಕ್ಷೈಯನು ಡೈಯ ನಾನಾಪ್ರಕಾರತ್ವಮ್, (೫) ಸರ್ವದಾ ರಕ್ಷಕತ್ವಮ್, ೬. ಸರ್ವತ ರಕ್ಷಕತ್ವಮ್, (೭) ಸರ್ವಪ್ರಕಾರ ರಕ್ಷಕತ್ವಮ್, (೮) ಸ್ವಾರ್ಥ ರಕ್ಷಕತ್ವಮ್ರ

---

ಪ್ರಮಾಣವೂ ಅನುಸಂಧೇಯವು. ಸ್ವಜನಸ್ಯಚರಕ್ಷಿತಾ ಎಂಬಲ್ಲಿ ಮುಕ್ತ ನಿತ್ಯರ ರಕ್ಷಣೆಯು ಆತನಿಗೇ ಸೇರಿದುದು ಎಂಬುದು ವ್ಯಕ್ತವು. "ವಿದಧಾತಿ ಕಾಮಾನ್" ಎಂಬಲ್ಲಿ ಬದ್ಧರ ಸಂರಕ್ಷಣೆಯೂ ವ್ಯಕ್ತವು. ಇದರಿಂದ ಬದ್ಧ ಮುಕ್ತ ನಿತ್ಯರುಗಳ ಯೋಗ್ಯವಾದ ರೀತಿಯಲ್ಲಿ ಸಂರಕ್ಷಣೆಯು ಅರ್ಥವಾಗಿತೋರ ಬರುತ್ತದೆ. (೪) ರಕ್ಷ್ಯವಸ್ತು ವಿಶೇಷಾನುರೂಪ ಮಾಗ ರಕ್ಷೈಯನುಡ್ಯೆಯ ನಾನಾಪ್ರಕಾರತ್ವಂ - ರಕ್ಷಿಸಲು ಯೋಗ್ಯರಾದ ಚೇತನ ವಿಶೇಷರು ಇವರು ನಿತ್ಯ ಮುಕ್ತಬದ್ಧರು, ಅವರಿಗೆ ಅನುಗುಣವಾದ ರಕ್ಷೆಯು ನಾನಾವಿಧವಾಗಿರುವದನು ಹೊಂದಿರಬೇಕಾಗಿದೆ. ನಿತ್ಯ ಮುಕ್ತರಿಗೆ ಯಾವವಿಧವಾದ ರಕ್ಷಣೆಯೋ ಅದನ್ನೂ ಮತ್ತು ಬದ್ಧರಿಗೆ ಮುಖ್ಯವಾಗಿ ಅಭಿಲಾಷೆಯು ನಾನಾ ವಿಧವಾಗಿರುವದರಿಂದ ಅವುಗಳನ್ನೆಲ್ಲಾ ಕೊಟ್ಟು ರಕ್ಷಿಸೋಣವು. ನಿತ್ಯ ಮುಕ್ತರಿಗೆ ಬೇಕಾದವು ಪರಿ ಪೂರ್ಣ ಬ್ರಹ್ಮಾನುಭವ ಜನಿತಾನಂದವು, ಕೈಙ್ಕರ್ಯವೂ ಇವುಗಳನ್ನು ಕೊಟ್ಟು ರಕ್ಷಿಸೋಣವು, ಬದ್ಧರಿಗಾದರೋ ನಾನಾವಿಧ ಕೋರಿಕೆಗಳು, ಐಹಿಕೋಪಭೋಗ ಸ್ವರ್ಗ ಸುಖ, ಕೈವಲ್ಯಪ್ರಾಪ್ತಿ, ಪರಮಾತ್ಮಪ್ರಾಪ್ತಿ ಹೀಗೆ ನಾನಾಪ್ರಕಾರವಾಗಿವೆ, ಅವುಗಳನ್ನೆಲ್ಲಾ ಕೊಟ್ಟು ಕಾಪಾಡೋಣವು. [೫. ೬. ೭] ಸರ್ವದಾರಕ್ಷಕತ್ವವು, ಸರ್ವತ್ರ ರಕ್ಷಕವು, ಸರ್ವಪ್ರಕಾರ ರಕ್ಷಕತ್ವವು.—ಸಮಸ್ತಕಾಲದೇಶ ಅವಸ್ಥೆಗ ಳಲ್ಲೂ ರಕ್ಷಿಸೋಣವೂ. ಅಂಬರೀಷನಿಗೆ ತನ್ನ ಚಕ್ರದ ಮೂಲಕ ರಕ್ಷಿಸಿರುತ್ತಾನೆ. ಸರ್ವತ್ರ, ಸರ್ವ ಪ್ರದೇಶ ರಕ್ಷಣೆಗೆ ಪಾಂಡವರು ನಿದರ್ಶನವು. ವನವಾಸದಲ್ಲೂ ಅಜ್ಞಾತವಾಸದಲ್ಲೂ, ಯುದ್ಧದಲ್ಲೂ ಹೀಗೆ ಸರ್ವದಾ ಸರ್ವತ್ರ ಸರ್ವಪ್ರಕಾರವಲ್ಲೂ ರಕ್ಷಕತ್ವವು ಕಾಣಬರುತ್ತದೆ. ಇಂತಹ ರಕ್ಷಣೆಯನ್ನು ಸಂಪಾದಿಸಿಕೊಳ್ಳುವದಕ್ಕೆ ಆತನನ್ನು ಆಶ್ರಯಿಸತಕ್ಕದ್ದು. [೮] ಸ್ವಾರ್ಥರಕ್ಷಕತ್ವ - ತನ್ನ ಲೀಲಾ ಪ್ರಯೋ ಜನಕ್ಕಾಗಿಯೇ ರಕ್ಷಿಸೋಣವು. ಪರಿಪೂರ್ಣ ಕಾಮನಿಗೆ ಲೀಲೆಯೇ ಪ್ರಯೋಜ ನವು. ಇದು "ಲೋಕವತ್ತು ಲೀಲಾಕೈವಲ್ಯಂ" ಎಂಬ ಬ್ರಹ್ಮಸೂತ್ರದಲ್ಲಿ [ಬ್ರ. ಸೂ. ೨. ೧. ೩೩] ವ್ಯಕ್ತವು. [೯] ಹಿಂದೆ ಹೇಳಿದವೆಲ್ಲವೂ ಅಕಾರದಲ್ಲಿ ಶಾಬ್ದವಾಗಿಯೇ ರಕ್ಷಕತ್ವದ ಪ್ರಕಾರವಾಗಿ ತೋರುವ ಅರ್ಥಗಳು, ಅರ್ಥವಾಗಿ ತೋರುವ ಅರ್ಥಗಳು ಯಾವುವೆಂದರೆ.—(೧) ಸರ್ವ ರಕ್ಷಕತ್ವಾಪೇಕ್ಷಿತಮಾನ ಸರ್ವ ಜ್ಞತ್ವಮ್ - ಸರ್ವರನ್ನೂ ಅವರವರ ಯೋಗ್ಯತೆ ಅಪೇಕ್ಷೆ ಮೊದಲಾದವುಗಳಿಗೆ ಅನುಗುಣವಾಗಿ ರಕ್ಷಿಸುವದಕ್ಕೆ ಬೇಕಾದ ಸರ್ವಜ್ಞತ್ವವು, ಸಮಸ್ತವನ್ನೂ ಸಾಕ್ಷಾ ತ್ಕರಿಸುವ ಜ್ಞಾನರೂಪ ಶಕ್ತಿಯು, "ಯಸ್ಸರ್ವಜ್ಞಸ್ಸರ್ವವಿತ್" ಎಂಬಲ್ಲಿ ತೋರಿ

**(೯) ಸರ್ವರಕ್ಷಕತ್ವಾಪೇಕ್ಷಿತವಾದ ಸರ್ವಜ್ಞತ್ವವುಮ್, (೧೦) ಸರ್ವಶಕ್ತಿತ್ವವುಮ್, (೧೧) ಸ್ವೇಚ್ಛಾವ್ಯತಿರಿಕ್ತಾ ನಿವಾರ್ಯತ್ವವುಮ್, (೧೨) ಅನತಿಕ್ರಮಣೀಯ ರಕ್ಷಣ**

---

ಬರುವ ಶಕ್ತಿಯು, ಇದು ಇಲ್ಲದಿದ್ದರೆ ವೈಷಮ್ಯಾದಿಗಳಿಗೆ ಅವಕಾಶವಿಲ್ಲದಹಾಗೆ ರಕ್ಷಿಸೋಣವು ಸಾಧ್ಯವಿಲ್ಲವು. **ಸರ್ವಶಕ್ತಿತ್ವವು** - ಸರ್ವ ಶಕ್ತಿಯನ್ನು ಹೊಂದಿರೋಣವು, ತನ್ನನ್ನು ಆಶ್ರಯಿಸಿದವರ ರಕ್ಷಣೆಗೆ ಅನೇಕ ಪ್ರತಿಬಂಧಕಗಳಿರಬಹುದು. ಅವುಗಳನ್ನೆಲ್ಲಾ ಹೋಗಲಾಡಿಸುವ ಶಕ್ತಿಯು. ಲಂಕೆಯನ್ನು ದಾಟುವದಕ್ಕೆ ಮುಂಚಿತವಾಗಿಯೇ ವಿಭೀಷಣನಿಗೆ ಲಂಕಾರಾಜ್ಯ ಪಟ್ಟಾಭಿಷೇಕವನ್ನು ಮಾಡಿಸಿದುದೂ ಲೀಲಾ ಸಾರಥಿಯಾಗಿಯೇ ಅರ್ಜುನ ಶತ್ರುಗಳ ನಿರಸನವೂ; ಮಹಾಪರಾಧಿಗಳಾದ ಕ್ಷತ್ರಬಂಧು ಮೊದಲಾದವರ ಪಾಪರಾಶಿಯನ್ನೆಲ್ಲಾ ನಿರ್ಮೂಲ ಮಾಡಿದುದೂ; ಇವೆಲ್ಲವು ರಕ್ಷಣೆಗೆ ಬೇಕಾದ ಸರ್ವ ಶಕ್ತಿತ್ವವನ್ನು ಸೂಚಿಸುತ್ತವೆ. ತನ್ನ ಆಶ್ರಿತರ ವಿರೋಧಿಗಳನ್ನೆಲ್ಲಾ ಲೀಲಾಜಾಲವಾಗಿ ನಿರಸನಮಾಡೋಣವು. ಅದನ್ನು "ಅಂಗುಳ್ಯಗ್ರೇಣ ತಾನ್ ಹನ್ಯಾಮಿಚ್ಛನ್ ಹರಿಗಣೇಶ್ವರ" ಅಂತವರನ್ನೆಲ್ಲಾ ಒಂದು ಬೆರಳಿನ ತುದಿಯಿಂದ ಕೊಂದುಹಾಕಲು ಶಕ್ತಿಯುಳ್ಳವನೆಂದು ತಾನೇ ಹೇಳಿಕೊಂಡಿರುತ್ತಾರೆ. ಹಾಗೆಯೇ ಋಷಿಗಳಿಗೆ ತೊಂದರೆ ಕೊಡುತ್ತಿದ್ದ ಖರದೂಷಣಾದಿ ೧೪೦೦೦ ರಾಕ್ಷಸರನ್ನು ಅರ್ಧಾಧಿಕ ಮುಹೂರ್ತದಲ್ಲಿ ಕೊಂದ ಸರ್ವಶಕ್ತನು. "ಅರ್ಧಾಧಿಕಮುಹೂರ್ತೇನ ರಾಮೇಣ ನಿಶಿತೈಶ್ಶರೈಃ। ಚತುರ್ದಶ ಸಹಸ್ರಾಣಿ ರಕ್ಷಸಾಂ ಕಾಮರೂಪಿಣಾಮ್। ಖರದೂಷಣ ಮುಖ್ಯಾನಿ ನಿಹತಾನಿ ಮಹಾಹವೇ॥" [ರಾ. ಅರ. ೩೦. ೩೪. ೫] ಎಂಬುದು ಅನುಸಂಧೇಯವು. [೧೧] ಸ್ವೇಚ್ಛಾವ್ಯತಿರಿಕ್ತಾನಿವಾರ್ಯತ್ವಂ - ತನ್ನ ಸಙ್ಕಲ್ಪಕ್ಕೆ ವ್ಯತಿರಿಕ್ತವಾದವುಗಳು ಎಂದರೆ ಪ್ರತಿಬಂಧಕಗಳಾದವುಗಳಿಂದ ನಿವಾರಿಸಲ್ಪಡದಿರುವಿಕೆಯು, ಎಂದರೆ ತನ್ನ ಸಙ್ಕಲ್ಪಕ್ಕೆ ವಿರೋಧವಾದವನ್ನೆಲ್ಲಾ ನಿರ್ಮೂಲ ಮಾಡೋಣವು. ತಾನು ರಕ್ಷಿಸಬೇಕೆಂಬ ಸತ್ಯಸಙ್ಕಲ್ಪಕ್ಕೆ ವಿಘ್ನವಿಲ್ಲದಿರುವಿಕೆಯು; ಅಂಬರೀಷನು ತನ್ನನ್ನು ಆಶ್ರಯಿಸಿದುದರಿಂದ ಅಂತವನು ಸರ್ವದಾ ಸರ್ವತ್ರ ಸರ್ವಪ್ರಕಾರದಿಂದಲೂ ರಕ್ಷ್ಯನೆಂಬ ಸತ್ಯ ಪ್ರತಿಜ್ಞೆಯುಂಟಾಯಿತು. ಇದಕ್ಕೆ ಪ್ರತಿಯಾಗಿ ದೂರ್ವಾಸರ ಆರ್ಭಟವೂ ಕೃತ್ಯೆ ನಿರ್ಮಾಣವೂ ಯಾವುದೂ ಕಾರ್ಯಕಾರಿಯಾಗಲಿಲ್ಲವು. ಹಾಗೆಯೇ ತನ್ನನ್ನು ಆಶ್ರಯಿಸಿದ ದ್ರೌಪದಿಯ ರಕ್ಷಣೆಗೆ ವಿರುದ್ಧವಾದ ದುಶ್ಶಾಸನಾದಿಗಳ ಪ್ರಯತ್ನವೂ ಸಾಗಲಿಲ್ಲವು. ಇದರಿಂದ ರಕ್ಷ್ಯವಸ್ತುವಲ್ಲವೆಂದೂ, ಸಾಧ್ಯನೆಂದೂ, ಅವರುಗಳ ದುಷ್ಕೃತ್ಯಗಳಿಂದ, ಪ್ರತಿಜ್ಞೆಮಾಡಲ್ಪಟ್ಟಾಗ ಅವಶ್ಯಾ ಪ್ರತಿಯಾಗಿ ಅವರುಗಳನ್ನು ಉಳಿಸಲು ಸಹ ಯಾರಿಗೂ ಯೋಗ್ಯತೆ ಇಲ್ಲವೆಂಬುದೂ ಇಲ್ಲಿ ಬೋಧಿತವು. ಇದಕ್ಕೆ ಬ್ರಹ್ಮಾಸ್ತ್ರಯಂಭೂತ್ಸ್ವತುರಾಸನೋವಾ ಎಂಬ ಸುಂದರ ಕಾಂಡದ ಆಂಜನೇಯವಾಕ್ಯವು ನಿದರ್ಶನವು. (೧೨) ಅನತಿ

ಶ್ರಮಣೀಯ ರಕ್ಷಣ ಸಂರಂಭತ್ವಮ್ - ತನ್ನಿಂದಲೂ ಕೂಡ ಅತಿಕ್ರಮಿಸಲು ಸಾಧ್ಯವಿಲ್ಲದ ಆಶ್ರಿತರಕ್ಷಣದಲ್ಲಿರುವ ಉದ್ಯೋಗದಸಡಗರವು ಅಥವಾ ಸಂಭ್ರಮವು ಸಂರಂಭ ಶಬ್ದಕ್ಕೆ ಪ್ರತಿಜ್ಞೆಯೆಂದು ಸಾರದೀಪ ವ್ಯಾಖ್ಯಾನವಿರುತ್ತದೆ. ಇದನ್ನು ಪಾಂಡವರ ಸಂರಕ್ಷಣೆಯಲ್ಲೂ ಸುಗ್ರೀವ ಸಂರಕ್ಷಣೆಯಲ್ಲೂ, ವಸುದೇವ ದೇವಕಿಯರ ಸಂರಕ್ಷಣೆಯಲ್ಲೂ ಕಾಣಬಹುದು. [೧೩] ಪರಮ ಕಾರುಣಿಕತ್ವಮ್ - ಆಶ್ರಿತ ರಕ್ಷಣೆಗೆ ತುಂಬಾ ಉಪಯುಕ್ತವಾದ ಗುಣವು. ಸರ್ವಜ್ಞತ್ವ ಸರ್ವ ಶಕ್ತಿತ್ವ ಸ್ವಾತಂತ್ರ್ಯಾದಿ ಅನೇಕ ಗುಣಗಳಿದ್ದರೂ ಈ ಪರಮ ಕಾರುಣಿಕತ್ವವಿಲ್ಲದಿದ್ದರೆ ಜೀವನಿಗೆ ಅನಿಷ್ಟ ನಿವೃತ್ತಿಯೂ ಇಷ್ಟಪ್ರಾಪ್ತಿಯೂ ಸಿದ್ಧಿಸದು. ಆದುದರಿಂದ, ಶ್ರೀ ದೇಶಿಕರವರು ದಯಾ ಶತಕದಲ್ಲಿ "ವೃಷಗಿರಿ ಗೃಹಮೇಧಿ ಗುಣಾ ಬೋಧ ಬಲೈಶ್ವರ್ಯ ವೀರ್ಯಶಕ್ತಿಮುಖಾಃ । ದೋಷಾಭವೇಯು ರೇತೇ ಯದಿ ನಾಮ ದಯೇ ತ್ವಯಾ ವಿನಾ ಭೂತಾಃ" ಎಂಬಲ್ಲಿ ಸರ್ವೇಶ್ವರನಲ್ಲಿ ದಯಾಗುಣ ಒಂದಿಲ್ಲದೆ ಹೋಗಿದ್ದರೆ ಬೇರೆ ಎಲ್ಲಾ ಗುಣಗಳೂ ದೋಷಯುಕ್ತವಾಗುತ್ತಿದ್ದವೆಂದು ಹೇಳಿದ್ದಾರೆ; ಆದುದರಿಂದ ಆಶ್ರಿತ ರಕ್ಷಣೆಯಲ್ಲಿ ಇದು ಮುಖ್ಯವಾದ ಗುಣವಾದುದರಿಂದ ಆಕಾರದಲ್ಲಿ ಅರ್ಥವಾಗಿ ತೋರುತ್ತದೆಂಬ ಭಾವವು. "ಉದಾರಾಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತಮ್" ಎಂಬಲ್ಲೂ "ದದಾಮಿ ಬುದ್ಧಿಯೋಗಂತಂ ಯೇನ ಮಾ ಮುಪಯಾನ್ತಿ ತೇ" ಎಂಬಲ್ಲೂ "ಸರ್ವಗುಹ್ಯತಮಂ ಭೂಯಶ್ಶೃಣು ಮೇ ಪರಮಂ ವಚಃ। ಇಷ್ಟೋಽಸಿ ಮೇ ದೃಢ ಇತಿ ತತೋ ವಕ್ಷ್ಯಾಮಿ ತೇ ಹಿತಮ್" ಇತ್ಯಾದಿ ಸ್ಥಳಗಳಲ್ಲಿ ಅಪಾರಕಾರುಣ್ಯ ಮಹೋದಧಿ ಎಂಬುದನ್ನು ಗ್ರಹಿಸಬಹುದು. ಇದಕ್ಕೆ ನಿದರ್ಶನಗಳಾಗಿ ಗಜೇಂದ್ರಮೋಕ್ಷ, ಪ್ರಹ್ಲಾದ ಪರಿಪಾಲನೆ ದ್ರೌಪದಿಯ ಮಾನರಕ್ಷಣೆ ಇವೇ ಮೊದಲಾದ ವೃತ್ತಾಂತಗಳನ್ನು ಹೇಳಬಹುದು. (೧೪) ಅವಸರಪ್ರತೀಕ್ಷತ್ವಮ್ - ಬದ್ಧ ಚೇತನನು ಯಾವಾಗ ನನ್ನನ್ನು ಆಶ್ರಯಿಸುವನೋ ಎಂದು ಕಾಲನಿರೀಕ್ಷಣೆಯನ್ನು ಮಾಡುತ್ತಿರುವಿಕೆಯು. ಇದರಿಂದ ಯೋಗ್ಯನು ಯಾರು ಎಂದು ತಿಳಿದು ಅತನು ಹೇಗಾದರೂ ಮಾಡಿ ಆಶ್ರಯಿಸಲಿ ಎಂದು ಕಾದುಕೊಂಡಿರುವನೆಂಬ ಭಾವವು ಸೂಚಿತವು. "ಮದ್ಭಕ್ತಾ ಯಾನ್ತಿ ಮಾಮಪಿ" ಎಂಬಲ್ಲಿಯೂ, "ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ । ವಿಭೀಷಣೋ ವಾ ಸುಗ್ರೀವ ಯದಿ ವಾ ರಾವಣಸ್ಸ್ವಯಮ್" ಎಂಬಲ್ಲಿಯೂ ಅವಸರ ಪ್ರತೀಕ್ಷೆಯು ತೋರಿಬರುತ್ತದೆ. ಇಂತಹ ಅವಸರ ಪ್ರತೀಕ್ಷೆಯು ಇದ್ದುದರಿಂದಲೇ, ಜಾನಶ್ರುತಿಯೂ, ಜನಮೇಜಯನೂ ಕ್ರಮವಾಗಿ ಆಚಾರ್ಯರುಗಳಾದ ರೈಕ್ವರ ಮತ್ತು ವೈಶಂಪಾಯನರ ಮೂಲಕ ಪರಮಾತ್ಮನನ್ನು ಹೊಂದುವ ಮಾರ್ಗದ ಉಪದೇಶವನ್ನು ಹೊಂದಿದರು. [೧೫] ವ್ಯಾಜಮಾತ್ರ

**ತ್ವಮ್, ೧೫. ವ್ಯಾಜಮಾತ್ರಸಾಪೇಕ್ಷತ್ವಮ್, ೧೬. ಆಶ್ರಿತ ಸುಲಭತ್ವಮ್ ೧೭. ವಿಶ್ವಸನೀಯತ್ವಮ್, ೧೮. ಸಾಪರಾಧಘಟನಾದ್ಯನುಗುಣವಿಶೇಷಣ**

---

**ಸಾಪೇಕ್ಷತ್ವಮ್** ರಕ್ಷಣೆಗೆ ಸಾಧ್ಯೋಪಾಯಗಳಲ್ಲಿ ಒಂದಾದ ಸ್ವತಂತ್ರಪ್ರಪತ್ತಿಯನ್ನಾಗಲಿ ಭಕ್ತಿಯೋಗವನ್ನಾಗಲಿ ಅನುಷ್ಠಿಸುವ ವ್ಯಾಜವನ್ನು ಅಪೇಕ್ಷಿಸುವಿಕೆಯು. ಇದನ್ನು ಶ್ರೀ ದೇಶಿಕರು **"ಪ್ರಪನ್ನಾದನ್ಯೇಷಾಂ ನದಿಶತಿ ಮುಕುಂದೋ ನಿಜ ಪದಮ್"** ಎಂಬಲ್ಲಿ ಉಪಪಾದಿಸಿರುತ್ತಾರೆ. ಸರ್ವೇಶ್ವರನೇ ಈ ವ್ಯಾಜಗಳು ಆವಶ್ಯಕವೆಂದು ಹೇಳಿರುತ್ತಾರೆ.—**"ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾ ವಾ ಮಹಾಮತೇ। ಪ್ರಾಪ್ಯೋಽಹಂ ನಾನ್ಯಥಾಪ್ರಾಪ್ಯೋ ಮಮ ಕೈಙ್ಕರ್ಯಲಿಪ್ಸುಭಿಃ"** ಇವು ವ್ಯಾಜಗಳು ಏಕೆಂದರೆ ನಿಮಿತ್ತ ಮಾತ್ರವಾದುದರಿಂದ, ಫಲಕೊಡುವವನು ಭಗವಂತನಾದುದರಿಂದ; ಈ ವ್ಯಾಜಗಳನ್ನು ಏಕೆ ಎದುರುನೋಡಬೇಕೆಂದರೆ, ಹಾಗಿಲ್ಲದೆ ರಕ್ಷಿಸಿದರೆ ವೈಷಮ್ಯ ನೈರ್ಘೃಣ್ಯರೂಪ ಅಪವಾದಗಳಿಗೆ ಗುರಿಯಾಗುವನು, ಆದುದರಿಂದ ಸಾಧ್ಯೋಪಾಯಾನುಷ್ಠಾನರೂಪ ವ್ಯಾಜವನ್ನು ಅಪೇಕ್ಷಿಸುವನು. (೧೬) **ಆಶ್ರಿತ ಸುಲಭತ್ವಮ್** - ಆಶ್ರಿತರಿಗೆ ಸುಲಭನಾಗಿರುವಿಕೆಯು, ಇದಕ್ಕೆ ಸೌಲಭ್ಯವೆಂಬ ಹೆಸರು, ಎಲ್ಲರೂ ಆಶ್ರಯಿಸಲೆಂದೇ ಅನೇಕ ವಿಭವಾವತರಗಳನ್ನೆತ್ತಿ ಲೋಕದ ಜನರಿಗೆ ದೃಗ್ಗೋಚರನಾಗಿ ಸಾಕ್ಷಾನ್ಮನ್ಮಥಮನ್ಮಥನಹಾಗೆ ಇರುತ್ತಾನೆ. ಹಾಗೆಯೇ ಅರ್ಚಾವತಾರಿಯಾಗಿ ಪರಮ ಸೌಲಭ್ಯವನ್ನು ತೋರಿಸಿರುತ್ತಾನೆ. ಕಾರುಣ್ಯವಿರುವದರಿಂದ ಸೌಲಭ್ಯವೂ ಉಂಟು. ಇದು ಅಕಾರದಿಂದ ಅರ್ಥವಾಗಿ ತೋರುತ್ತದೆ. (೧೭) **ವಿಶ್ವಸನೀಯತ್ವಂ** - ರಕ್ಷಿಸುವನೆಂಬ ಪೂರ್ಣವಿಶ್ವಾಸವನ್ನಿಡಲು ಯೋಗ್ಯತೆಯುಳ್ಳೋಣವು. ಈ ಗುಣವಿಲ್ಲದಿದ್ದರೆ ಶರಣಾಗತಿಗೆ ಮುಖ್ಯಾಙ್ಗವಾದ ಮಹಾವಿಶ್ವಾಸವೇ ಉಂಟಾಗುವದಿಲ್ಲವು. ಆಶ್ರಿತ ರಕ್ಷಣೆಯಲ್ಲಿ ಬದ್ಧಕಂಕಣನಾಗಿ, **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ"** ಎಂದು ಹೇಳಿಕೊಂಡಿರುವದರಿಂದಲೇ ವಿಶ್ವಸನೀಯತ್ವವು ಉಂಟು. ಜೀವಾತ್ಮರು ಯಾವಾಗ ಉಪಾಯಾನುಷ್ಠಾನವನ್ನು ಮಾಡುವರೋ ಎಂಬು ಈತನು ಅವಸರ ಪ್ರತೀಕ್ಷೆಮಾಡುತ್ತಿದ್ದುಕೊಂಡು, ಅಂತವರಿಗೆ ಅಭಯ ಪ್ರದಾನವೇ ತನ್ನ ಮುಖ್ಯ ವ್ರತವೆಂದೂ ಹೇಳಿಕೊಂಡಿರುವದರಿಂದ ವಿಶ್ವಸನೀಯತ್ವವು, ವಿಶ್ವಾಸವನ್ನಿಡಲು ಯೋಗ್ಯನಾಗಿರುವಿಕೆಯು. (೧೮) **ಸಾಪರಾಧಘಟನಾದ್ಯನುಗುಣ ವಿಶೇಷಣವತ್ವಮ್** - ಸಾಪರಾಧರೆಂದರೆ ಅನೇಕಾಪರಾಧಮಾಡಿದ ಚೇತನರನ್ನೂ ಸಹ ಘಟಿಸವೆಂದರೆ ಪರಮಾತ್ಮನಲ್ಲಿ ಸೇರಿಸುವ ಉಪಾಯತ್ವ ಪುರುಷಕಾರತ್ವಗಳಿಗೆ, ಅನುಗುಣವಾದ ವಿಶೇಷಣವಾದ ಲಕ್ಷ್ಮೀದೇವಿಯನ್ನು ಅಪೃಥಕ್ಸಿದ್ಧವಿಶೇಷಣವಾಗಿ ನಿತ್ಯಸಹಾಯಿನಿಯನ್ನಾಗಿ ಹೊಂದಿರೋಣವು. ಇದು "ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ। ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಽಪಿ ಚ ಗೀಯತೇ॥"

**ವತ್ವಮ್, ೧೯. ಶೇಷಿತ್ವಮ್ ೨೦. ಆದಿನುಡ್ಯೆಯ ನಿರುಪಾಧಿಕತ್ವ ನಿತ್ಯತ**

ಎಂಬ ಲಕ್ಷ್ಮೀತಂತ್ರ ಪ್ರಮಾಣಾರ್ಥದಲ್ಲೂ ವ್ಯಕ್ತವು. ಇದೂ ಅಕಾರದಲ್ಲೇ ಅಥವಾ ಉಕಾರದಿಂದಲೂ, ವ್ಯಕ್ತವು. ವಾಕ್ಕೂ ಅರ್ಥವೂ ಹೇಗೆ ಯಾವಾಗಲೂ ಒಟ್ಟಿಗೆ ಇರುತ್ತವೋ, ಹಾಗೆಯೇ ಲಕ್ಷ್ಮೀನಾರಾಯಣರು ಎಂದೂ, ನಾರಾಯಣನು ಶ್ರುತಿಯಲ್ಲಿ ಹೇಳಲ್ಪಟ್ಟರೆ ಲಕ್ಷ್ಮಿಯು ಹೇಳಲ್ಪಡುವ ಆವಶ್ಯಕವಿಲ್ಲವೆಂದೂ "ನಪೃಥಗಭಿದತ್ತೇ ಶ್ರುತಿರಪಿ" ಎಂಬಲ್ಲಿ ಹೇಳಲ್ಪಟ್ಟಿತು. "ಅನನ್ಯಾಹಿ ಮಯಾ ಸೀತಾ ಭಾಸ್ಕರೇಣ ಪ್ರಭಾ ಯಥಾ". [ರಾ. ಯುದ್ಧ. ೧೧೮. ೧೮.] ಎಂಬ ಶ್ರೀರಾಮಚಂದ್ರ ಪ್ರಭುವಿನ ವಾಕ್ಯವು ಇಲ್ಲಿ ಅನುಸಂಧೇಯವು. ಇಲ್ಲಿಗೆ ೧೮ಗುಣಗಳು ಹೇಳಲ್ಪಟ್ಟವು. ಸಾರದೀಪರೂ ಸಾರಾಸ್ವಾದಿನಿಯವರೂ ಮೊದಲಿನ ರಕ್ಷಕತ್ವವಾದ ಸಾಧಾರಣ ಗುಣವನ್ನು ಬಿಟ್ಟು ಈ ೧೭ ಗುಣಗಳೂ ಅಕಾರದ ಪ್ರಕೃತಿಭಾವದಿಂದ ತೋರುವ ಗುಣಗಳೆಂದು ಹೇಳಿರುತ್ತಾರೆ.

**ಮುಂದೆ ೧೧ ಗುಣಗಳು ಲುಪ್ತ ಚತುರ್ಥಿಯಿಂದ ತೋರುವುವೆಂದು ಹೇಳಲ್ಪಡುವುವು.**

೧೯. ಶೇಷಿತ್ವಂ - ಇದು ಆಯ ಎಂಬಲ್ಲಿನ ಲುಪ್ತ ಚತುರ್ಥಿಯಲ್ಲಿ ತೋರಿಬರುತ್ತದೆ. "ದಾಸಭೂತಾ ಸ್ವತಸ್ಸರ್ವೇ" ಎಂಬ ಪ್ರಮಾಣದಲ್ಲಿ ವ್ಯಕ್ತವು. ಪುರುಷಸೂಕ್ತದಲ್ಲಿ "ಪತಿಂ ವಿಶಸ್ಯ" ಎಂಬಲ್ಲೂ ಸ್ಫುಟವು. ಮಕಾರವಾಚ್ಯನು ಅಕಾರವಾಚ್ಯನಿಗೇ ಎಂಬರ್ಥ ಬರುವದರಿಂದ ಚನ್ನಾಗಿ ತೋರಿಬರುತ್ತದೆ. "ನಂತವ್ಯಃ ಪರಮಶ್ಶೇಷೀ ಶೇಷಾನಂತಾರಕಾರಿತಾಃ ಎಂಬುದು ಅನುಸಂಧೇಯವು. ಅಥವಾ ಎಲ್ಲಕ್ಕೂ ಕಾರಣನಾಗಿ ಎಲ್ಲಕ್ಕೂ ಶೇಷಿ ಎಂದು ಅಕಾರದಿಂದಲೇ ಗ್ರಹಿಸಬಹುದು. ೨೦. ಆದಿನುಡ್ಯೆಯ ನಿರುಪಾಧಿಕತ್ವಂ-ನಮ್ಮ ಸತ್ತಾಸ್ಥಿತಿ ನಿಯಮನಾದಿಗಳೆಲ್ಲಾ ಆತನಿಗೇನೇ ಅಧೀನವಾದುದರಿಂದ ಆವನಿಗೆ ಮಾತ್ರವೇ ಸ್ವತಃ ಶೇಷಿತ್ವವು. ಇದು ಮೇಲಿನ ಪ್ರಮಾಣದ "ದಾಸಾಭೂತಾಸ್ಸ್ವತಃ" ಎಂಬಲ್ಲಿರುವ ಸ್ವತಃ ಎಂಬ ಶಬ್ದದಿಂದ ತೋರಿಬರುತ್ತದೆ. ನಮ್ಮ ತಂದೆ ತಾಯಿ ಮೊದಲಾದವರಿಗೆ ಶೇಷತ್ವವು ಸೋಪಾಧಿಕವಾದುದು. ನಾವು ಸ್ವಾಮಿಯ ಸ್ವತ್ತು; ಪರಮಾತ್ಮನೇ ನಮಗೆ ಸ್ವಾಮಿಯು; ಅದುದರಿಂದಲೇ "ಸ್ವತ್ವಮಾತ್ಮನಿಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಮ್" ಎಂಬ ಪ್ರಯೋಗವು, ಸಂಜಾತಂ ಸ್ಥಿತಂ ಎಂಬ ಪದಗಳು ಸ್ವಾರಸ್ಯವಾಗಿ ಪ್ರಯೋಗಿಸಲ್ಪಟ್ಟಿವೆ. ೨೧. ಆದಿನುಡ್ಯೆಯ ನಿತ್ಯತ್ವಂ – ಆ ಶೇಷಿತ್ವವು ನಿತ್ಯವಾಗಿರೋಣವು. ಸೋಪಾಧಿಕವಾಗಿದ್ದರೆ ಉಪಾಧಿಯು ತೊಲಗಿದ ಒಡನೆಯೇ ಶೇಷಿತ್ವವು ಕಳೆದು ಹೋಗುತ್ತಿತ್ತು; ಹಾಗಲ್ಲದೆ ಪರಮಾತ್ಮ ಶೇಷಿತ್ವವು ಶಾಶ್ವತವಾದುದು. ೨೨. ಆದಿನುಡ್ಯೆಯ ಸರ್ವವಿಷಯತ್ವಂ - ಒಬ್ಬರನ್ನು ಬಿಡದೆ ಸಮಸ್ತ ಚೇತನಾಚೇತನರಿಗೂ ಶೇಷಿಯಾಗಿರೋಣವು. ಇಗಾವಲಿ ಲಕ್ಷ್ಮಿಗೂ ಶೇಷಿಯೇ ಎಂದರೆ ಎಲ್ಲವೂ ಲಕ್ಷ್ಮೀನಾರಾಯಣರಿಬ್ಬರಿಗೂ ಶೇಷನಾಗಿದ್ದರೂ

ಸರ್ವನಿಯಂತೃತ್ವಙ್ಗಳ್, ೨೩. ಅನನ್ಯ ಶೇಷತ್ವಮ್, ೨೪. ಗುಣಕೃತ (ಪಾರಾರ್ಥ್ಯಮ್) ಶೇಷತ್ವಮ್, ೨೫. ಸಪತ್ನೀಕ ಶೇಷಿತ್ವಂ, ೨೬. ಸಮಾಭ್ಯಧಿಕ

---

ಲಕ್ಷ್ಮಿಯು ಪರಮಾತ್ಮನಿಗೆ ಶೇಷಭೂತಳು. "ಮಚ್ಛೇಷಭೂತಾ ಸರ್ವೇಷಾಂ ಈಶ್ವರೀ ವಲ್ಲಭಾ ಮಮ" ಎಂಬಲ್ಲಿಯೂ "ಭರ್ತಾ ಹಿ ಮಮ ದೈವತಮ್" ಎಂಬ ಸೀತಾವಾಕ್ಯದಲ್ಲೂ, ವ್ಯಕ್ತವು. ೨೩. ಅನನ್ಯಶೇಷತ್ವಂ - ಹೀಗೆ ಎಲ್ಲಾ ಚೇತನರಿಗೆ ಶೇಷಿ ಎಂದು ಯಾವಾಗ ಆಯಿತೋ ಆಗ ತನಗೆ ಯಾರೂ ನಿರುಪಾಧಿಕ ಶೇಷಿಯಾಗಿ ಇಲ್ಲವೆಂಬುದು ವ್ಯಕ್ತವು. ಹೀಗೆ ಆತನು ಯಾರಿಗೂ ಶೇಷಭೂತನಲ್ಲದಿರೋಣವು. "ನ ತಸ್ಯ ಕಶ್ಚಿತ್ ಪತಿರಸ್ತಿ" ಎಂಬ ಶ್ವೇತಾಶ್ವತರ (೬-೯) ವಾಕ್ಯವು ಅನುಸಂಧೇಯವು. ಹಾಗೆಯೇ "ನ ತಸ್ಯೇಶೇ ಕಶ್ಚನ [ತೈ. ನಾರಾ.] ವಾಕ್ಯವೂ ಹೇಳುತ್ತದೆ. ೨೪. ಗುಣಕೃತಶೇಷತ್ವಂ - ಹೀಗೆ ಯಾರಿಗೂ ಶೇಷನಲ್ಲದಿದ್ದರೂ, ಭಕ್ತರಿಗೆ ತನ್ನಲ್ಲಿರುವ ಪ್ರೇಮಾತಿಶಯ ಗುಣದಿಂದ ತಾನೇ ಉಂಟುಮಾಡಿಕೊಂಡ ಶೇಷತ್ವವುಂಟು ; ಅಹಂ ಭಕ್ತ ಪರಾಧೀನಃ - ಎಂದು ಅಂಬರೀಷೋಪಾಖ್ಯಾನದಲ್ಲಿ ದುರ್ವಾಸರಿಗೆ ಹೇಳಿದುದೂ, ಜ್ಞಾನೀತ್ವಾತ್ಮೈವ ಮೇಮತಮ್ ಎಂದು ಅರ್ಜುನ ಸಾರಥಿಯಾಗಿ ಹೇಳಿದುದೂ, "ಲೋಕನಾಥಃ ಪುರೋಭೂತ್ವಾ ಸುಗ್ರೀವಂ ನಾಥ ಮಿಚ್ಛತಿ" ಎಂಬಲ್ಲಿ ಹೇಳಿರುವ ಸುಗ್ರೀವನನ್ನು ತನಗೆ ಸ್ವಾಮಿಯಾಗಿ ಪ್ರಾರ್ಥಿಸಿದುದೂ ಇವೆಲ್ಲವೂ ಗುಣಕೃತ ಶೇಷತ್ವವು. "ಉದಾರಾಸ್ಸರ್ವ ಏವೈತೇ" ಎಂದು ನಾಲ್ಕು ಜನರು ಭಕ್ತರು ತನಗೆ ದಾನಶೀಲರೆಂದು ಹೇಳಿದುದೂ ಕೂಡ ಗುಣಕೃತವಾದ ಶೇಷತ್ವವು; ಗುಣಕೃತ ಪಾರಾರ್ಥ್ಯಂ ಎಂದು ಪಾಠಾಂತರವು. ಅರ್ಥಭೇದವಿಲ್ಲವು. ೨೫. ಸಪತ್ನೀಕ ಶೇಷಿತ್ವಂ - ಸರ್ವಕ್ಕೂ ತಾನು ಪತ್ನಿಯೊಂದಿಗೆ ಸೇರಿಯೇ ಶೇಷಿಯಾಗಿರೋಣವು ; ಈ ಶೇಷಿತ್ವವು "ಉಭಯಾಧಿಷ್ಠಾನಂ ಚೈಕಶೇಷಿತ್ವಂ" ಎಂದು ಸೋಮೇಶಯಾಂಡಾರ್ ರವರ ಶಾಸ್ತ್ರಸಮ್ಮತವಾದ ಅಭಿಪ್ರಾಯವು. ಶ್ರದ್ಧಯಾದೇವೋ ದೇವತ್ವಮಶ್ನುತೇ ಎಂಬ ಶ್ರುತಿಯು ಇದನ್ನು ಪ್ರತಿಪಾದಿಸುತ್ತದೆ; ಶ್ರೀ ವ್ಯಾಸಮಹರ್ಷಿಯೂ "ವಿದ್ಯಾಸಹಾಯವಾನ್ ಎಂಬಲ್ಲಿ ಇದನ್ನೇ ಉಪಪಾದಿಸಿರುತ್ತಾರೆ. ಹಾಗೆಯೇ ಶ್ರೀ ಪರಾಶರರೂ ಯಥಾಸರ್ವಗತೋವಿಷ್ಣು ಸ್ತಥೈವೇಯಂ ದ್ವಿಜೋತ್ತಮ" ಎಂಬಲ್ಲೂ, ನಾನಯೋರ್ವಿದ್ಯತೇ ಪರಮ್" ಎಂಬಲ್ಲೂ, ಸೂಚಿಸಿರುತ್ತಾರೆ. ೨೬. ಸಮಾಭ್ಯಧಿಕ ರಾಹಿತ್ಯಂ ನಾರಾಯಣನಿಗೆ ಸಮರಾಗಲಿ ಅಧಿಕರಾಗಲಿ ಇಲ್ಲದಿರೋಣವು. ಇದು ನಿಸ್ಸಮಾಭ್ಯಧಿಕ ಶ್ರುತಿಯಾದ "ನತತ್ಸಮಶ್ಚಾಭ್ಯಧಿಕೋಽಪಿ ದೃಶ್ಯತೇ" [ಶ್ವೇತಾ. ೬. ೮.] ಎಂಬುದರಿಂದಲೇ ಮೇಲೆ ಉದಾಹರಿಸಿರುವ ಇತರ ಪ್ರಮಾಣಗಳಿಂದಲೂ ಸಿದ್ಧವು. ೨೭. ಆತ್ಮ ಹವಿರುದ್ದೇಶಾರ್ಹತ್ವಂ - ಈ ಆತ್ಮವೂ ಅವನ

**ರಾಹಿತ್ಯವಮ್, ೨೭. ಆತ್ಮಹವಿರುದ್ದೇಶಾರ್ಹತ್ವಮ್, ೨೮. ಅಚಿದ್ಬದ್ಧಮುಕ್ತ ನಿತ್ಯವಿಲಕ್ಷಣತ್ವಮ್, ೨೯. ಪರಶೇಷಿತ್ವಹೇತುತ್ವಮ್,**

---

ಸ್ವತ್ತಾಗಿ ಆತನದೇಯಾಗಿರುವದರಿಂದ, ಪ್ರಪನ್ನನು ಹವಿಸ್ಸಿನರೂಪದಲ್ಲಿ ಓಮಿತ್ಯಾ ತ್ಮಾನಂ ಯುಂಜೀತ" [ತೈ. ನಾ] ಎಂಬಲ್ಲಿ ಹೇಳಿರುವಹಾಗೆ ಆತ್ಮಾವನ್ನು ಸಮರ್ಪಿ ಸುವದಕ್ಕೆ ಉದ್ದೇಶ್ಯವಾಗಿರುವದಕ್ಕೆ ಯೋಗ್ಯತೆಯನ್ನು ಪರಮಾತ್ಮನು ಹೊಂದಿ ದೋಣವು. ೨೮. **ಅಚಿದ್ಬದ್ಧಮುಕ್ತನಿತ್ಯವಿಲಕ್ಷಣತ್ವಂ** - ಅಚಿತ್ತು ಮತ್ತು ಬದ್ಧರು, ಮುಕ್ತರು, ನಿತ್ಯರು, ಇವೆಲ್ಲಕ್ಕಿಂತಲೂ ವಿಲಕ್ಷಣನಾಗಿದೋಣವು. ಯಾ ವಾಗ ಪ್ರಣವದ ಮಕಾರವು ಜೀವನನ್ನು ಬೋಧಿಸುತ್ತದೆಂತಾಯಿತೋ, ಆವಾಗ ಈ ಮೂರು ಚೇತನರಿಗಿಂತಲೂ ವಿಲಕ್ಷಣನೆಂದಾಯಿತು, ಸ್ವರೂಪಸ್ವಭಾವಗಳ ವಿಕಾರ ವಿಲ್ಲದುದರಿಂದ ಅಚಿತ್ತಿಗಿಂತಲೂ ವಿಲಕ್ಷಣನು ಎಂದು ಹೇಳಲ್ಪಟ್ಟಿತು. ಅಚಿತ್ತಿಗೆ ಸ್ವರೂಪಸ್ವಭಾವವಿಕಾರಗಳಿರುವದರಿಂದಲೂ, ಬದ್ಧಚೇತನರಿಗೆ ಸ್ವರೂಪವಿಕಾರವಿದಿಲ್ಲ ದ್ದರೂ ಸ್ವಭಾವ ವಿಕಾರವಿರುವದರಿಂದಲೂ, ಮುಕ್ತರಿಗೆ ಬದ್ಧ ದಶೆಯಲ್ಲಿ ಸ್ವಭಾವ ವಿಕಾರವಿದ್ದುದರಿಂದಲೂ, ನಿತ್ಯರು ನಿತ್ಯರಾಗಿರಬೇಕೆಂಬ ಸಙ್ಕಲ್ಪಕ್ಕೆ ಅಧೀನರಾದು ದರಿಂದಲೂ, ಸ್ವಾಮಿಯು ಇವೆಲ್ಲಕ್ಕಿಂತಲೂ ವಿಲಕ್ಷಣನು. ಇಷ್ಟು ವೈಲಕ್ಷಣ್ಯವನ್ನು ಶ್ರೀ ಪರಾಶರರು ಒಂದು ಶ್ಲೋಕಾರ್ಧದಿಂದ ಹೇಳಿರುತ್ತಾರೆ. **"ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ"** ಅಚಿತ್ತಿನಹಾಗೆಯೋ ಪರಮಾತ್ಮನು? ಎಂದರೆ, **ಅವಿಕಾರಾಯ** - ಅಚಿತ್ತಿನಹಾಗೆ ಸ್ವರೂಪಸ್ವಭಾವ ವಿಕಾರವಿಲ್ಲದ ವನು, ಹಾಗಾದರೆ ಬದ್ಧರಹಾಗೋ? ಎಂದರೆ **ಶುದ್ಧಾಯ** - ಬದ್ಧರಹಾಗೆ ಹೇಯ ಪ್ರಕೃತಿ ಸಂಬಂಧದಿಂದ ಸ್ವಭಾವ ವಿಕಾರವಿಲ್ಲದೆ ವಿಲಕ್ಷಣನಾಗಿರುವವನು; ಹಾಗಾ ದರೆ ಮುಕ್ತರ ಹಾಗೋ? ಎಂದರೆ, **ನಿತ್ಯಾಯ** - ಮುಕ್ತರಿಗಾದರೂ ಒಂದು ಕಾಲ ದಲ್ಲಿ ಸ್ವಭಾವ ವಿಕಾರವಿತ್ತು, ಹಾಗಿಲ್ಲದೆ ವಿಲಕ್ಷಣನು; ಹಾಗಾದರೆ ನಿತ್ಯರ ಹಾಗೋ? ಅವರಿಗೆ ಯಾವಾಗಲೂ ಪ್ರಕೃತಿ ಸಂಬಂಧವೇ ಇಲ್ಲವಲ್ಲಾ? ಎಂದರೆ, **ಪರಮಾತ್ಮನೇ** - ಅವರಿಗೂ ಸತ್ತಾದಾಯಕನಾಗಿ ಸರ್ವೋತ್ಕೃಷ್ಟನಾದ ಆತ್ಮನು ಹೀಗೆ ಅಚಿತ್ತು ಬದ್ಧಮುಕ್ತ ನಿತ್ಯರಿಗಿಂತ ವಿಲಕ್ಷಣನಾಗಿರುವವನು. ೨೯. **ಪರ ಶೇಷಿತ್ವ ಹೇತುತ್ವಮ್** - **ಪರೇಷಾಂ** - ಇತರರಾದ ಜೀವಾತ್ಮರಿಗೆಲ್ಲಾ ಅವರೂ ತನ್ನ ವಸ್ತುವಾದರೂ ಅಂತವರಿಗೆ ಸೋಪಾಧಿಕವಾದ ಇತರ ಶೇಷಿತ್ವವನ್ನುಂಟು ಮಾಡುವದಕ್ಕೆ ಕಾರಣನಾಗಿರುವಿಕೆಯು, ಅವರುಗಳ ಕರ್ಮಾನುಸಾರವಾಗಿ ದೇಹ ಸಂಬಂಧ ಜನ್ಮಗಳನ್ನುಂಟುಮಾಡಿ ಸೋಪಾಧಿಕ ಶೇಷಿತ್ವವನ್ನುಂಟುಮಾಡಲು ಕಾರಣನಾಗಿರುವಿಕೆಯು.

**ಅನಂತರ ಮಕಾರದಲ್ಲೂ ನಮಸ್ಸಿನಲ್ಲೂ ತೋರುವ ಜೀವಸ್ವರೂಪದಿಂದ ಪರಮಾತ್ಮನ ಇಪ್ಪತ್ತು ಗುಣಗಳು ಹೇಳಲ್ಪಡುವುವು.**

**೩೦. ಸ್ವತಃ ಕರ್ತೃತ್ವಮ್** - ಆತ್ಮಸಮರ್ಪಣೆಯನ್ನು ಮಾಡುವಹಾಗೆ

**ಅಥ ಮಕಾರೇ ನಮಸಿಚ ಜೀವಸ್ವರೂಪ ಕಥನೇನ ವಿಂಶತಿಗುಣಾನಾಹ.**

**೩೦. ಸ್ವತಃ ಕರ್ತೃತ್ವಮ್, ೩೧. ಶಕ್ತ್ಯಾಧಾಯಕತ್ವಂ, ೩೨. ಪ್ರೇರಕತ್ವಮ್, ೩೩. ಅನನ್ಯ ಪ್ರೇರ್ಯತ್ವಮ್, ೩೪. ಅನುಮನ್ತೃತ್ವಂ, ೩೫ ಕರ್ಮಸಾಕ್ಷಿತ್ವಮ್, ೩೬. ಸಹಕಾರಿತ್ವಮ್, ೩೭. ಪ್ರಿಯಪ್ರವರ್ತಕತ್ವಮ್,**

---

ಆತನಿಗೆ ಪ್ರಥಮ ಸಙ್ಕಲ್ಪವನ್ನುಂಟುಮಾಡೋಣವು. ಇದು "ಕರ್ತಾ ಶಾಸ್ತ್ರಾರ್ಥವತ್ವಾತ್" ಎಂಬಲ್ಲಿ ಉಪಪಾದಿತವು. ೩೧. ಶಕ್ತ್ಯಾಧಾಯಕತ್ವಮ್ - ಜೀವಾತ್ಮರಿಗೆ ಜ್ಞಾನತ್ವ ಕರ್ತೃತ್ವಾದಿಗಳುಂಟಾಗುವ ಶಕ್ತಿಯನ್ನುಂಟುಮಾಡೋಣವು, ಈ ಶೇಷಿತ್ವಜ್ಞಾನವೂ ತನ್ಮೂಲಕ ಆತ್ಮ ಸಮರ್ಪಣೆಯೂ ಎಲ್ಲವೂ ಪ್ರಾಪ್ತವಾಗುವ ಶಕ್ತ್ಯಾದಾಯಕನು ಅವನು;ಅಂತಹ ಸಹಾಯವಿಲ್ಲದಿದ್ದರೆ ಜೀವಾತ್ಮನು ಏನೂ ಮಾಡಲಾರನೆಂಬ ಭಾವವು ಸೂಚಿತವು. ೩೨. ಪ್ರೇರಕತ್ವಮ್- ಹಾಗೆಲ್ಲಾ ಮಾಡುವಹಾಗೆ ಪ್ರೇರಿಸುವವನು. ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ" ಸರ್ವೇಶ್ವರನು ಈ ಬದ್ಧನ ಹೃದಯ ಗುಹೆಯಲ್ಲೇ ಇರುವವನಾಗಿ ಆತನನ್ನು ಪ್ರೇರಿಸುವನೆಂದು ಇಲ್ಲಿ ಹೇಳಲ್ಪಟ್ಟಿರುತ್ತದೆ; ಆತನ ಪ್ರೇರಣೆಯಿಲ್ಲದೆ ಪ್ರಮಶ್ಯಬ್ಧದಲ್ಲಿ ತೋರುವ ಶರಣಾಗತಿಯನ್ನನುಷ್ಠಿಸನು. ೩೩. ಅನನ್ಯಪ್ರೇರ್ಯತ್ವಮ್ - ತಾನು ಯಾರಿಂದಲೂ ಪ್ರೇರಿಸಲ್ಪಡದೇ ಇರುವಿಕೆಯು. ಚತುರ್ಮುಖಾದಿ ಸರ್ವ ಆತ್ಮರಿಗೆಲ್ಲಾ ತಾನೇ ಪ್ರೇರಕನೆಂದು ಯಾವಾಗ ಏರ್ಪಟ್ಟಿತೋ, ಅನನ್ಯ ಪ್ರೇರ್ಯತ್ವವೂ ಸ್ವತಃ ಪ್ರಾಪ್ತವು. ಇದೂ ಅರ್ಥವಾಗಿ ತೋರಿಬರುತ್ತದೆ. ಆತನಿಗೆ ನಿಯಾಮಕನು ಯಾರೂ ಇಲ್ಲವು. ೩೪. ಅನುಮನ್ತೃತ್ವಂ - ಸಮಸ್ತ ಜೀವ ಪ್ರವೃತ್ತಿಯಲ್ಲೂ ಅನುಮತಿಯನ್ನು ಕೊಡುವಿಕೆಯು. ಇಂತಹ ಅನುಮತಿಯಿಲ್ಲದೆ ಜೀವನ ಯಾವ ಪ್ರವೃತ್ತಿಯೂ ನಡೆಯುವದಿಲ್ಲವು. ಆದರೆ ಜೀವನು ಮಾಡುವ ಕರ್ಮದ ಪ್ರಥಮ ಸಙ್ಕಲ್ಪದಲ್ಲಿ ಸ್ವಾಮಿಯು ಆತನನ್ನು ಸ್ವತಂತ್ರನಾಗಿ ಬಿಟ್ಟು, ಅನಂತರ ಆತನ ಕರ್ಮಾನುಸಾರ ಪ್ರೇರಿಸುವವನು. ಆನಂತರ ಆತನು ಮಾಡಿದುದನ್ನ ಅನುಮೋದಿಸುವನು. ಇದು "ಕೃತಪ್ರಯತ್ನಾಪೇಕ್ಷಸ್ತು" (ಬ್ರ.ಸೂ ೨-೩-೪೧) ಎಂಬಲ್ಲಿಉಪಪಾದಿತವು. ೩೫. ಕರ್ಮಸಾಕ್ಷಿತ್ವಂ-ಯಾವಾಗಲೂ ನಮ್ಮ ಹೃದಯ ಗುಹೆಯಲ್ಲೇ ಇರುವದರಿಂದ, ಸಮಸ್ತ ಪ್ರವೃತ್ತಿಗೂ ಸಾಕ್ಷೀಭೂತನಾಗಿರುವಿಕೆಯು."ಯೋವೇದಿತಾಕರ್ಮಣಃಪಾಪಕಸ್ಯ"ಎಂದುಹೇಳಲ್ಪಟ್ಟಿರುತ್ತದೆ. ಜೀವಾತ್ಮನು ಮಾಡುವ ಸರ್ವ ಕರ್ಮವನ್ನೂ ಭಗವಂತನೇ ಹೃದಯ ಗುಹೆಯಲ್ಲಿದ್ದುಕೊಂಡು ನೋಡುವವನು. ೩೬. **ಸಹಕಾರಿತ್ವಮ್** - ಚೇತನರ ಸುಕೃತ ದುಷ್ಕೃತಗಳಿಗೆ ಅನುಗುಣವಾದ ಫಲಗಳನ್ನನುಭವಿಸಲು ಯೋಗ್ಯವಾದ ಪ್ರವೃತ್ತಿಗೆ ಸಹಕಾರಿಯಾಗಿರೋಣವು. ೩೭. ಪ್ರಿಯ ಪ್ರವರ್ತಕತ್ವಮ್ - ಸಾಧಾರಣ

೩೮. ಹಿತಪ್ರವರ್ತಕತ್ವಮ್ ೩೯. ನಿರುಪಾಧಿಕನಂತವ್ಯತ್ವಮ್, ೪೦. ವಶೀಕಾರ್ಯತ್ವಮ್, ೪೧. ಸಿದ್ಧೋಪಾಯತ್ವಮ್, ೪೨. ಸಾಧ್ಯೋಪಾಯ ಹೇತುತ್ವಮ್ ೪೩. ಶ್ರುತಿಸ್ಮೃತಿರೂಪಾಜ್ಞಾವತ್ವಮ್, ೪೪. ದಂಡಧರತ್ವಮ್, ೪೫. ಸರ್ವ

---

ವಾಗಿ ಲೌಕಿಕ ಜನರಿಗೆಲ್ಲಾ ಐಹಿಕಾದಿ ಸುಖಗಳು ತುಂಬಾ ಪ್ರಿಯವಾಗಿ ಅಪೇಕ್ಷಿಸುವ ರಾದುದರಿಂದ, ಆದಕ್ಕಾಗಿ ತನ್ನನ್ನು ಆಶ್ರಯಿಸಿದರೆ ಅಂತವರ ಇಷ್ಟಪ್ರಾಪ್ತಿಗೆ ಅನುಗುಣವಾಗಿ ಪ್ರವೃತ್ತಿಸುವಹಾಗೆ ಮಾಡೋಣವು. ೩೮. ಹಿತಪ್ರವರ್ತಕತ್ವಮ್– ಹಿತವು ಯಾವುದೆಂದರೆ ಮೋಕ್ಷೋಪಾಯಕ್ಕೆ ಸಾಧನವಾದ ಅನುಷ್ಠಾನವು. ಸುಕೃತಿಯಾಗಿ ಆಶ್ರಿತನಾದಪಕ್ಷದಲ್ಲಿ, ಸಾಧ್ಯೋಪಾಯಾನುಷ್ಠಾನಕ್ಕೆ ಬೇಕಾದ ಗುರೂಪಸಪಸಾದಿಗಳನ್ನುಂಟುಮಾಡೋಣವು. ೩೯. ನಿರುಪಾಧಿಕನಂತವ್ಯತ್ವಮ್–ಯಾವ ಉಪಾಧಿಯು ಇಲ್ಲದೆ ಸ್ವತಃ ನಂತವ್ಯನಾಗಿರೋಣವು. ಹಿಂದೆ ಅಹಿರ್ಬುಧ್ನ್ಯಸಂಹಿತೆಯ ವಾಕ್ಯವಾದ "ನಂತವ್ಯಃಪರಮಶ್ಶೇಷೀ" ಎಂಬಲ್ಲಿ ನಮಶ್ಶಬ್ದದಲ್ಲಿ ಉಪಪಾದಿತವೆಂದು ಹೇಳಲ್ಪಟ್ಟಿರುತ್ತದೆ. ೪೦. ವಶೀಕಾರ್ಯತ್ವಮ್ - ಯಾವಾಗ ಚೇತನನು ಸುಕೃತಿಯಾಗಿ ಆಶ್ರಯಿಸಿದನೋ, ಆತನಲ್ಲಿ ಪೂರ್ಣ ಕೃಪೆಯುಂಟಾಗಿ ತನ್ನನ್ನು ಹೊಂದುವ ಮಾರ್ಗವನ್ನು ಅವಲಂಬಿಸುವಹಾಗೆ ವಶಮಾಡಿಕೊಳ್ಳುವಿಕೆಯು. ಇದಕ್ಕೆ ಜಾನುಶ್ರುತಿಯ ವೃತ್ತಾಂತವು ನಿದರ್ಶನವು. ಇದು ನಂತವ್ಯತ್ವದಿಂದುಂಟಾದುದು. "ಸರ್ವಸ್ಯ ವಶೀಸರ್ವಸ್ಯೇಶಾನಃ" ಎಂಬ (ಬೃ. ೬. ೪. ೨೨) ವಾಕ್ಯವು ಅನುಸಂಧೇಯವು. ಆತನ ವಶೀಕಾರ್ಯತ್ವಕ್ಕೆ ಹೇತುವಾಗಿ ನಾವು ಸ್ವಲ್ಪಮಟ್ಟಿಗೆ ಸುಕೃತಪರಿಪಾಕವನ್ನು ಹೊಂದಿರಬೇಕು. ಆತನ ವಶೀಕಾರ್ಯತ್ವಕ್ಕೆ ಹೇತುವಾಗಿರುವದು ನಮ್ಮ ಶರಣಾಗತಿಯೇ. ೪೧. ಸಿದ್ಧೋಪಾಯತ್ವಮ್ - ಹೀಗೆ ನಿರುಪಾಧಿಕ ನಂತವ್ಯತ್ವ ವಶೀಕಾರ್ಯತ್ವವಿರುವದರಿಂದಲೇ ಆತನು ಸಿದ್ಧೋಪಾಯನಾಗಿರುವಿಕೆಯು. ನಮಶ್ಶಬ್ದದಲ್ಲಿ ತೋರುವ ಸಾಙ್ಗ ಶರಣಾಗತ್ಯನುಷ್ಠಾನಮಾಡಿಸುವ ಸಿದ್ಧೋಪಾಯನು ಕೃಷ್ಣಂ ಧರ್ಮಂ ಸನಾತನಂ ಎಂದು ಹೇಳಿರುವಹಾಗೆ ಭಗವಂತನೇ. "ನಯಾಮಿ ಪರಮಾಂಗತಿಂ" ಎಂದು ಹೇಳಿಕೊಂಡಿರುತ್ತಾನೆ. ೪೨. ಸಾಧ್ಯೋಪಾಯ ಹೇತುತ್ವಂ - ಚೇತನನು ಸಾಧ್ಯೋಪಾಯವನ್ನು ಅನುಷ್ಠಿಸುವದಕ್ಕೆ ಕಾರಣವಾಗಿರುವಿಕೆಯು. ಯಾವಾಗ ಸಿದ್ಧೋಪಾಯನಾದನೋ, ಆಗ ಸಾಧ್ಯೋಪಾಯ ಹೇತುತ್ವವೂ ಉಂಟು. ಇದನ್ನು ಜಾನುಶ್ರುತಿ, ಕ್ಷತ್ರಬಂಧು, ಪುಂಡರೀಕ ವೃತ್ತಾಂತಗಳಲ್ಲಿ ಕಾಣಬಹುದು. ೪೩. ಶ್ರುತಿಸ್ಮೃತಿರೂಪಾಜ್ಞಾವತ್ವಮ್–ಶ್ರುತಿ ಸ್ಮೃತಿರ್ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ। ಆಜ್ಞಾಚ್ಛೇದೀ ಮಮದ್ರೋಹೀ ಎಂದು ಹೇಳಿರುವದರಿಂದ, [illegible] ಪ್ರತ್ಯಭಿಹಿತ" ವಾಗಿರುವಹಾಗೆ ಆಜ್ಞಾರೂಪ ಪ್ರವೃತ್ತಿಗಳಿಗೆ ಕಾರಣನಾಗಿರೋಣವು. ಅದೂ ಅಲ್ಲದೆ, ಪ್ರಪನ್ನನಾದ ಅನಂತರ ಉತ್ತ–

ಸಮತ್ವಮ್, ೪೬, ಆಶ್ರಿತ ಪಕ್ಷಪಾತಿತ್ವಮ್. ೪೭. ಅವಿದ್ಯಾದಿ ಹೇತುತ್ವಮ್ ೪೮. ಅವಿದ್ಯಾದ್ಯನರ್ಹತ್ವಮ್, ೪೯. ಆಶ್ರಿತಾವಿದ್ಯಾದಿ ನಿವರ್ತಕತ್ವಮ್,

---

ಕೃತ್ಯಗಳಾಗಿ ತನಗೆ ಶ್ರುತಿ ಸ್ಮೃತಿಗಳಲ್ಲಿ ಆಜ್ಞಾರೂಪವಾಗಿ ವಿಹಿತಕರ್ಮಗಳನ್ನು ವಿಧಿಸಿರೋಣವು. ಇದು ನಮುಶ್ಶಬ್ದಾರ್ಥವು. ೪೪. **ದಂಡಧರತ್ವಮ್** - ಮೇಲೆಹೇಳಿದಹಾಗೆ ಆ ವಿಹಿತ ಕರ್ಮಗಳನ್ನು ಮಾಡದೇ ಹೋದರೆ ಅಂತಹ ಆಜ್ಞೋಲ್ಲಂಘನರೂಪವಾದ ಅಕೃತ್ಯಕರಣ, ಕೃತ್ಯಾಕರಣ ದೋಷಗಳಿಗಾಗಿ ದಂಡಿಸೋಣವು. ೪೫. **ಸರ್ವತ್ರ ಸಮತ್ವಮ್** - ಏನೊಂದೂ ಪಕ್ಷಪಾತಾದಿಗಳಿಗೆ ಕಾರಣವಿಲ್ಲದಹಾಗೆ ಅವರುಗಳ ಕರ್ಮಾನುಸಾರ ಫಲಪ್ರದ ಮಾಡುವದರಿಂದ, "**ಸಮೋಹಂ ಸರ್ವಭೂತೇಷು**" ಎಂಬಲ್ಲಿ ಹೇಳಿರುವಹಾಗೆ ಎಲ್ಲರಲ್ಲೂ ಸಮಭಾವವನ್ನು ತೋರಿಸೋಣವು ; ಆಶ್ರಿತರಿಗೆಲ್ಲಾ ಒಂದೇ ವಿಧ ಪ್ರೀತಿಯನ್ನು ತೋರುವವನು. ಆತನ ಕುಲಗೋತ್ರ ಗುಣ ವ್ಯಾಪಾರಾದಿಗಳಲ್ಲಿ ಯಾವುದನ್ನೂ ಪರಿಗಣಿಸದೇ ಸಮನಾಗಿ ಫಲಕೊಡುವವನು. ವಿಭೀಷಣನನ್ನು ಐದನೆಯ ಭ್ರಾತಾವಾಗಿ ಭಾವಿಸಿದವನು. "**ತಸ್ಮಾತ್ ಕ್ಷಿಪ್ರಂ ಸಹಾಸ್ಮಾಭಿ ಸ್ತುಲ್ಯೋ ಭವತು ರಾಘವ । ವಿಭೀಷಣೋ ಮಹಾಪ್ರಾಜ್ಞಸ್ಸಖಿತ್ವಂ ಚಾಭ್ಯುಪೈತುನಃ**" ಎಂದು ಶ್ರೀರಾಮಹೃದಯಾನುಸರಿತ ಸುಗ್ರೀವನ ಉಕ್ತಿಯು ಇಲ್ಲಿ ಅನುಸಂಧೇಯವು. ಇದನ್ನು ಮನ್ತ್ರದ ಮೂರನೆಯ ಪದದಲ್ಲಿ ಕಾಣಬಹುದು. ೪೬. **ಆಶ್ರಿತಪಕ್ಷಪಾತಿತ್ವಮ್** - ಸಾಧಾರಣವಾಗಿ ಎಲ್ಲರಲ್ಲೂ ಸಮಭಾವನೆ ಇದ್ದರೂ ಯಾವಾಗ ಆಶ್ರಯಿಸಿ ತನ್ನವನಾದನೋ, ಆಗ ಆತನು ಸ್ವಲ್ಪ ಅಪರಾಧಿಯಾದರೂ ಅಲ್ಪ ದಂಡನೆಯನ್ನು ಕೊಟ್ಟು ರಕ್ಷಿಸುವನಾದುದರಿಂದ ಆಶ್ರಿತರಲ್ಲಿ ಮಾತ್ರ ಪಕ್ಷಪಾತವನ್ನು ತೋರಿಸುವಿಕೆಯು ಶ್ರೀಮದ್ರಾಮಾಯಣದಲ್ಲಿ "**ಸ್ವಜನಸ್ಯ ಚ ರಕ್ಷಿತಾ**" ಎಂಬ ಪ್ರಯೋಗದಲ್ಲಿ ವ್ಯಕ್ತವು. ಆಶ್ರಯಿಸಿದವರನ್ನು ಮಮಜನರೆಂದೂ, ತನಗೆ ಆತ್ಮಾ ಎಂದೂ ಹೀಗೆ ಪಕ್ಷಪಾತವನ್ನು ಪ್ರದರ್ಶಿಸಿರುತ್ತಾರೆ. ಅಂತವರಿಗೆ ಅಪರಾಧಮಾಡಿದರೆ ಸಹಿಸನು. ೪೭. **ಅವಿದ್ಯಾದಿ ಹೇತುತ್ವಮ್** - ಮಕಾರವು ಅಸ್ಮಚ್ಛಬ್ದದಿಂದ ಬಂದುದಾದುದರಿಂದ ಅಹಂಭಾವಕ್ಕೆ ಯೋಗ್ಯವಾದ ಕರ್ಮವಾಸನಾದಿಗಳುಳ್ಳವರಿಗೆ ದೇಹಾತ್ಮಭ್ರಮ, ಸ್ವತಂತ್ರಾತ್ಮಭ್ರಮ, ಜೀವೇಶೈಕ್ಯ ಭ್ರಮರೂಪ ಅಜ್ಞಾನಕ್ಕೂ ಅದಿಪದದಿಂದ ಕರ್ಮವಾಸನಾ ಪ್ರಕೃತಿ ಸಂಬಂಧಗಳಿಗೂ, ಕಾರಣವಾಗಿರೋಣವು. "ಸಮಾನೇವೃಕ್ಷೇ ಪುರುಷೋ ನಿಮಗ್ನೋ ಅನೀಶಯಾಶೋಚತಿ" ಎಂಬ ಶ್ರುತಿವಾಕ್ಯವೂ, "ಅನಾತ್ಮನ್ಯಾತ್ಮ ಬುದ್ಧಿರ್ಯಾ ಅಸ್ವೇ ಸ್ವ ಮಿತಿ ಯಾ ಮತಿಃ। ಅವಿದ್ಯಾತರುಸಂಭೂತಬೀಜ ಮೇತದ್ದ್ವಿಧಾ ಸ್ಥಿತಃ" ಎಂಬ ವಾಕ್ಯವೂ ಅನುಸಂಧೇಯವುಳ್ಳು. ೪೮. **ಅವಿದ್ಯಾದ್ಯನರ್ಹತ್ವಮ್** ಪರಮಾತ್ಮನು ಕರ್ಮವಶ್ಯನಲ್ಲದೆ ಬದ್ಧಜೀವಾತ್ಮನಿಗಿರುವ ಯಾವ ದುರ್ದಶೆಯೂ ಇಲ್ಲದುದರಿಂದ, ಹೇಯ ಪ್ರತ್ಯನೀಕ

**೫೦ ಸ್ವರೂಪಾನ್ಯಥಾಭಾವ ರಾಹಿತ್ಯಂ।೫೧ ಸ್ವಭಾವಾನ್ಯಥಾಭಾವರಾಹಿತ್ಯಮ್। ೫೨. ಸರ್ವನೇತೃತ್ವಂ, ೫೩. ಸರ್ವ ಜಗದ್ವ್ಯಾಪಾರ ಲೀಲತ್ವಂ.**

---

ನಾಗಿ ಮೇಲೆ ಹೇಳಿದ ಭ್ರಮ ಜ್ಞಾನಾದಿಗಳೊಂದೂ ಇಲ್ಲದಿರುವದರಿಂದ, ಅಂತಹ ಅವಿದ್ಯಾದಿಗಳಿಗೆ ಯೋಗ್ಯನಲ್ಲದಿರುವಿಕೆಯು. ಅಥವಾ ಇದನ್ನು ಮಕಾರಾರ್ಥವಾಗಿ ಭಾವಿಸಿದರೆ ಅಹಂಕಾರ ಭಾವವೂ ಅವಿದ್ಯಾದಿಗಳೂ ಇರುವ ಜೀವನೊಂದಿಗೆ ಸೇರಿದ್ದರೂ ಆತನ ಹೇಯಗುಣ ಸಂಬಂಧವು ಪರಮಪುರುಷನಿಗೆ ಇಲ್ಲದಿರೋಣವು, ಆದರೂ, ಮಕಾರದಿಂದ ಹೇಳಲ್ಪಡುವ ಜೀವನು ಮನಜ್ಞಾನೇ ಎಂಬ ಧಾತುವಿನಿಂದ ಸರ್ವಜ್ಞತ್ವಾದಿ ಗುಣಗಳುಳ್ಳ ಪರಿಶುದ್ಧ ಸ್ವರೂಪನು ಪ್ರಕೃತಿ ವಿಯುಕ್ತ ದಶೆಯಲ್ಲಿ ಲಭಿಸುವದರಿಂದ, ಆತನಿಗೆ ಮುಂದೆ ಅವಿದ್ಯಾದ್ಯನರ್ಹತ್ವವನ್ನುಂಟುಮಾಡುವವನು ೪೯. ಆಶ್ರಿತಾವಿದ್ಯಾದಿ ನಿವರ್ತಕತ್ವಮ್ - ಯಾವಾಗ ತನ್ನನ್ನು ಆಶ್ರಯಿಸಿಬಿಟ್ಟನೋ ಆಗ ಹಿತಪ್ರವರ್ತನೆಯು ತನಗೆ ಸೇರಿದುದರಿಂದ ಅವನಲ್ಲಿರುವ ಭ್ರಮಜ್ಞಾನ ಮೊದಲಾದವುಗಳ ನಿವರ್ತನೆಗಾಗಿ "ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾನ್ತಿ ತೇ" ಎಂದು ಬುದ್ಧಿಯೋಗವನ್ನು ಕೊಟ್ಟು ಅವು ಯಾವುವೂ ಇಲ್ಲದಹಾಗೆ ಮಾಡೋಣವು. ೫೦. ಸ್ವರೂಪಾನ್ಯಥಾ ಭಾವ ರಾಹಿತ್ಯಮ್ - ನರಶಬ್ದವು ನಾರಾಯಣಸನ್ನೋ ಜಹ್ನು ನಾರ್ಯರಾಯಣೋ ನರಃ ಎಂಬಲ್ಲಿ ಹೇಳುವದರಿಂದ, ಆತನ ಸಂಬಂಧವಾದುದು ನಾರ ವೆಂದು ಹೇಳಲ್ಪಡುವ ಸ್ವರೂಪ ರೂಪಗುಣಾದಿಗಳು ನಿತ್ಯವಾದುವಾದ ದರಿಂದ, ಆತನ ಸ್ವರೂಪಕ್ಕೆ ಅನ್ಯಥಾಭಾವವಿಲ್ಲದಿರೋಣವು, ಎಂದರೆ ವಿಕಾರಶೂನ್ಯತ್ವವು. ಸತ್ಯಂ ಜ್ಞಾನ ಮನಂತಂ ಬ್ರಹ್ಮ ಎಂಬ ಉಪನಿಷದ್ವಾಕ್ಯವೂ, ಮತ್ತು "ಅವಿಕಾರಾಯ ನಿತ್ಯಾಯ" ಎಂಬ ಮಹರ್ಷಿವಾಕ್ಯವೂ ಅನುಸಂಧೇಯಗಳು. ೫೧. ಸ್ವಭಾವಾನ್ಯಥಾ ಭಾವರಾಹಿತ್ಯಮ್ - ಸ್ವರೂಪದಹಾಗೆ ಸ್ವಭಾವವೂ ಶಾಶ್ವತವಾಗಿ ಕಲ್ಯಾಣಗುಣಾಕರನೆಂಬುದು ನಾರ ಶಬ್ದದಲ್ಲಿ ತೋರಿಬರುವದರಿಂದ ಸ್ವಭಾವ ವಿಕಾರವಿಲ್ಲದಿರೋಣವು. ೫೨. ಸರ ನೇತೃತ್ವಮ್ - ಸರ್ವ ನಿರ್ವಾಹಕತ್ವವು, ನರಸಂಬಂಧವಾದುವೆಲ್ಲಾ ನಾರವಾದುದರಿಂದ ಸರ್ವಜಗತ್ಪ್ರವೃತ್ತಿಯನ್ನೆಲ್ಲಾ ಹೊಂದಿರುವಿಕೆಯು. ೫೩. ಸರ್ವಜಗದ್ವ್ಯಾಪಾರಲೀಲತ್ವಮ್ - ಯಾವಾಗ ಸರ್ವನೇತೃತ್ವವು ಸಿದ್ಧಿಸಿತ್ತೋ ಆಗ ಸಮಸ್ತ ಜಗತ್ತಿನ ವ್ಯಾಪಾರವೂ ಉಂಟಾಗಿ ಆತನು ಪರಿಪೂರ್ಣಕಾಮನಾಗಿದ್ದರೂ ಜಗದ್ವ್ಯಾಪಾರಗಳಲ್ಲಿ ಲೀಲಾಪ್ರಯೋಜನವನ್ನುಳ್ಳೋಣವು. ಇದು ಲೋಕವತ್ತು ಲೀಲಾಕೈವಲ್ಯಮ್ ಎಂಬ ವ್ಯಾಸ ಸೂತ್ರದಲ್ಲಿ ಉಪಪಾದಿತವು. ಹಾಗೆಯೇ ಕ್ರೀಡತೋಬಾಲಕಸ್ಯೇವ ಚೇಷ್ಟಾಂ ತಸ್ಯ ನಿಶಾಮಯ" (ವಿ. ಪು. ೧. ೨. ೧೮) "ಕ್ರೀಡಾಹರೇರಿದಂ ಸರ್ವಂ" (ಭಾರ. ಶಾನ್ತಿ) ಬಾಲಃ ಕ್ರೀಡನಕೈ ರಿವ" (ಭಾರ. ಸಭಾ) ಇತ್ಯಾದಿ ಪ್ರಮಾಣಗಳು ಅನು

ಅಥ ಅಖಂಡ ನಾರಾಯಣಶಬ್ದಸಿದ್ಧಾರ್ಥ ಏಕೋನ ತ್ರಿಂಶದ್ಗುಣಾನಾಹ.

೫೪. ಸರ್ವ ವೇದಾನ್ತ ಪ್ರಧಾನ ಪ್ರತಿಪಾದ್ಯತ್ವಂ, ೫೫. ಸರ್ವೋಪಾದಾನತ್ವಂ, ೫೬. ಸರ್ವನಿಮಿತ್ತತ್ವಮ್, ೫೭. ಸತ್ಯಸಙ್ಕಲ್ಪತ್ವಮ್, ೫೮. ಸರ್ವಶರೀರಿತ್ವಮ್,

---

ಸಂಧೇಯವು. ಈ ಜಗತ್ತು ನಾರ ವೆಂದರೆ ನರಸಂಬಂಧವಾದುದು ಪರಮಾತ್ಮ ಸಂಬಂಧವಾದುದು ಎಂದಾಗುವದರಿಂದ ಸರ್ವಜಗದ್ವ್ಯಾಪಾರ ಲೀಲತ್ವವು ಅರ್ಥ ವಾಗಿ ತೋರುತ್ತದೆ.

ಮುಂದೆ ನಾರಾಯಣ ಶಬ್ದದಿಂದ ಸಿದ್ಧವಾದ ೨೯ ಗುಣಗಳು ಹೇಳಲ್ಪಡುವುವು,

೫೪. ಸರ್ವವೇದಾನ್ತಪ್ರಧಾನ ಪ್ರತಿಪಾದ್ಯತ್ವಮ್ - ಸರ್ವಶಬ್ದ ವಾಚ್ಯ ತ್ವವೂ ಪರಮಾತ್ಮನಿಗೆ ಸಲ್ಲುತ್ತದೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ, ಮುಂದೆಯೂ ಹೇಳಲ್ಪಡುತ್ತದೆ, ಇದರಿಂದಲಾಗಲಿ ಅಥವಾ "ಸರ್ವೇ ವೇದಾ ಯತ್ಪದ ಮಾಮನನ್ತಿ" (ಕಠ. ೧. ೨. ೧೫) ಎಂಬ ಶ್ರುತಿವಾಕ್ಯದಿಂದ ಸಮಸ್ತ ವೇದವೂ ಪರಬ್ರಹ್ಮವನ್ನು ಪ್ರತಿಪಾದಿಸುವದರಿಂದ, ಸಮಸ್ತ ವೇದಾನ್ತಗಳಲ್ಲೂ ಮುಖ್ಯವಾಗಿ ಪರಮಾತ್ಮನು ಪ್ರತಿಪಾದಿಸಲ್ಪಟ್ಟಿರೋಣವು. ಈತನು ಕಲ್ಯಾಣ ಗುಣಮಹೋದಧಿಯೆಂದೂ, ಹೇಯ ಪ್ರತ್ಯನೀಕನೆಂದೂ ಆತನ ಸ್ವರೂಪವು ಮಹ ತ್ತಾದುದೆಂಬೂ ಮಹತ್ತಾದ ವಿಭೂತಿ ದ್ವಯನಾಯಕನೆಂದೂ, ಹೀಗೆಲ್ಲಾ ನಾರ ಶಬ್ದ ಬೋಧಿತ ಅರ್ಥಗಳನ್ನು ವೇದಾಂತವು ಪ್ರತಿಪಾದಿಸುವದರಿಂದ ಸರ್ವವೇದಾನ್ತ ಪ್ರಧಾನಪ್ರತಿಪಾದ್ಯತ್ವವು. ೫೫. ಸರ್ವೋಪಾದಾನತ್ವಂ- ಸಮಸ್ತಕ್ಕೂ ಉಪಾದಾನ ಕಾರಣನಾಗಿರುವಿಕೆಯು; ನರನಿಂದ ಉಂಟಾದವು, ಸೃಷ್ಟಿಯನ್ನು ಹೊಂದಿದವು ಜಗತ್ತು ಎಂಬರ್ಥವು, ನಾರ ಶಬ್ದದಿಂದ ತೋರಬರುವದರಿಂದ, "ಯತೋವಾ ಇಮಾನಿ ಭೂತಾನಿ ಜಾಯನ್ತೇ" (ತೈ. ಭೃಗು) ಎಂಬ ಶ್ರುತ್ಯರ್ಥದಪ್ರಕಾರ ನಾರಾಯಣನು ಜಗತ್ತಿಗೆ ಉಪಾದಾನ ಕಾರಣನು. ಬ್ರಹ್ಮವನಂ ಬ್ರಹ್ಮ ಸ ವೃಕ್ಷ ಆಸೀದ್ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ" (ಅಷ್ಟಕ. ೨. ೨. ೮) ಎಂಬುದೂ ಅನುಸಂಧೇಯವು. ೫೬. ಸರ್ವನಿಮಿತ್ತತ್ವಂ- ಸಮಸ್ತ ಸೃಷ್ಟಿಯೂ "ತದೈಕ್ಷತಬಹುಸ್ಯಾಂ" (ಛಾಂ. ೬.೨.೩) "ಸೋಽಕಾಮಯತ" (ತೈ.ಆನಂ.೬) ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವಹಾಗೆ ಶ್ರೀಮನ್ನಾರಾಯಣನ ಸಙ್ಕಲ್ಪಾಧೀನವಾದುದ ರಿಂದ,ಸಮಸ್ತಕ್ಕೂ ನಿಮಿತ್ತಕಾರಣನಾಗಿರುವದು. ಹೀಗೆ ಉಪಾದಾನ ನಿಮಿತ್ತ ಕಾರ ಣನೂ ಆತನೇ ಎಂದು "ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾ ದ್ವಿತೀಯಂ" (ಛಾಂ. ೬. ೨. ೧) ಎಂಬಲ್ಲೂ ಮತ್ತು "ಯಥೋರ್ಣನಾಭಿ ಸ್ಸೃಜತೇಗೃಹ್ಣತೇಚ"(ಮುಂ.೧.೧.೭)ಜಾಡರಹುಳವು ಹೇಗೆ ತನ್ನ ಗೂಡನ್ನು ರಚಿ

ಸುವದರಲ್ಲೂ ಅದನ್ನೇ ನುಂಗಿಬಿಡುವದರಲ್ಲೂ, ತಾನೇ ಉಪಾದಾನ ನಿಮಿತ್ತ ಕಾರಣವೋ, ಹಾಗೆಯೇ ಪರಮಾತ್ಮನೂ ನಿಮಿತ್ತೋಪಾದಾನ ಕಾರಣನು. ಈ ಅರ್ಥವು ಉಭಯ ವಿಭೂತಿಯು ನರನಿಂದುಂಟಾದುದು ಆದುದರಿಂದ ನಾರ ವೆಂದು ಹೇಳಿಸಿಕೊಳ್ಳುತ್ತದೆಂಬರ್ಥದಿಂದ ಸರ್ವನಿಮಿತ್ತತ್ವವೂ ಉಂಟು. ೫೭. ಸತ್ಯಸಙ್ಕಲ್ಪತ್ವಮ್ - ಸರ್ವೋಪಾದನತ್ವ ನಿಮಿತ್ತತ್ವಗಳು ಪರಮಾತ್ಮನ ಅಪ್ರತಿಹತವಾದ ಸ್ಥಿರವಾದ ಸಙ್ಕಲ್ಪಮೂಲಕ ಉಂಟಾದವಾದುದರಿಂದ ಸತ್ಯಸಙ್ಕಲ್ಪತ್ವವು. ಸಮುದ್ರವನ್ನು ದಾಟುವದಕ್ಕೆ ಮುಂಚಿತವಾಗಿಯೇ ವಿಭೀಷಣನಿಗೆ ಲಂಕಾರಾಜ್ಯಪಟ್ಟವನ್ನು ಕಟ್ಟುವದೂ, ದುರ್ಯೋಧನಾದಿಗಳು ಹತವಾಗುವದಕ್ಕೆ ಮುಂದೆಯೇ ಅರ್ಜುನನಿಗೆ ಅವರುಗಳು ತನ್ನ ವಿಶ್ವರೂಪದ ಹಲ್ಲುಗಳಲ್ಲಿ ಸಿಕ್ಕಿ ನಾಶವಾಗುವದನ್ನು ತೋರ್ಪಡಿಸಿದುದೂ, ಇತ್ಯಾದ್ಯನೇಕೇತಿಹಾಸಗಳು ಸ್ವಾಮಿ ಸತ್ಯ ಸಙ್ಕಲ್ಪತೆಯನ್ನು ಸ್ಥಾಪಿಸುತ್ತವೆ. ೫೮. ಸರ್ವಶರೀರಿತ್ವಂ - ಸಮಸ್ತವನ್ನೂ ವ್ಯಾಪಿಸಿ ಎಲ್ಲಕ್ಕೂ ಆತ್ಮವಾಗಿ ಸರ್ವಾಂತರ್ಯಾಮಿಯಾಗಿರುವ ಭಾವವು; ಸರ್ವವೂ ಆತನಿಗೆ ಶರೀರವಾಗಿ ಆತನು ಶರೀರಿ ಎಂದರೆ ಆತ್ಮವಾಗಿರುವ ಭಾವವು ವ್ಯಕ್ತವು. "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ಉ.) "ಯಸ್ಯಪೃಥಿವೀಶರೀರಂ" "ಯಸ್ಯಾತ್ಮಾ ಶರೀರಂ" "ಯಸ್ಯ ಸರ್ವಾಣಿ ಭೂತಾನಿ ಶರೀರಂ" (ಬೃ. ೫. ೭. ಸುಬಾಲ. ೭.) "ಏಷ ಆತ್ಮಾನ್ತರ್ಯಾಮ್ಯಮೃತಃ" (ಬೃ. ೫. ೭. ೨೨.) ಇದು ನಾರಾಯಣ ಶಬ್ದದ ಬಹುವ್ರೀಹ್ಯರ್ಥವು. ೫೯. ಸರ್ವಶಬ್ದ ವಾಚ್ಯತ್ವಮ್ - ಯಾವಾಗ ಸರ್ವಶರೀರತ್ವವು ಸ್ಥಾಪಿತವೋ, ಆಗ ಶರೀರವನ್ನು ಬೋಧಿಸುವಶಬ್ದಗಳಿಗೆ ಶರೀರಿವರೆಗೂ ವಾಚ್ಯತ್ವವುಂಟು. ಹೇಗೆಂದರೆ ಮನುಷ್ಯನೆಂಬ ಶರೀರ ಸಂಬಂಧ ವ್ಯವಹಾರವು, ಶರೀರಿಯಾದ ಜೀವಾತ್ಮನಿಗೂ ಹೇಗೆ ಅನ್ವಯಿಸುತ್ತದೋ ಹಾಗೆ ನಾರಾಯಣ ಶಬ್ದದಿಂದ ಸರ್ವಶರೀರಿತ್ವ ಉಂಟಾದರೆ ಸರ್ವಶಬ್ದ ವಾಚ್ಯತ್ವವೂ ಉಂಟು. ೬೦. ಸರ್ವಕರ್ಮಸಮಾರಾಧ್ಯತ್ವಮ್–ಹಿಂದೆ ಸರ್ವವೇದಾನ್ತ ಪ್ರಧಾನ ಪ್ರತಿಪಾದ್ಯತ್ವವು ಉಪಪಾದಿಸಲ್ಪಟ್ಟಿತು, ಅಂತಹ ಭಗವಂತನ ಪ್ರೀತ್ಯರ್ಥವಾಗಿ ಆ ವೇದಾಂತಗಳಲ್ಲಿ ವಿಹಿತ ಕರ್ಮಗಳನ್ನು ಅನುಷ್ಠಿಸತಕ್ಕದ್ದೆಂದು ವಿಧಿಸಿರುವದರಿಂದ, ಅಂತಹ ಸಮಸ್ತ ವಿಹಿತಕರ್ಮಗಳಿಂದ ಆತನೇ [illegible] ಆರಾಧಿಸಲ್ಪಡುವಿಕೆಯು. "ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ[illegible] [illegible]" (ಗೀ. ೩. ೩೦) ಎಂಬಲ್ಲಿ ಇದು [illegible] ಅಥವಾ ಆತನು ಎಲ್ಲಾ[illegible]ದಲ್ಲೂ ವ್ಯಾಪಿಸಿರುವದರಿಂದಲೇ ಈ ಚೇತನರ ಸರ್ವ ಪ್ರವೃತ್ತಿಯೂ ಉಂಟಾ[illegible] ವದರಿಂದ, ಅವುಗಳಿಂದ ಆತನನ್ನೇ ಆರ್ಚಿಸಬೇಕೆಂಬ ವಿಧಿ ಇರುವದರಿಂದ ಸರ್ವ ಕರ್ಮ ಸಮಾರಾಧ್ಯತ್ವವು. ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವ[illegible]

ಫಲಪ್ರದತ್ವಮ್. ೬೨ ಸರ್ವವಿಧಬಂಧುತ್ವಮ್, ೬೩ ಸರ್ವವ್ಯಾಪಕತ್ವಮ್,೬೪ ನಿರತಿಶಯ ಸೂಕ್ಷ್ಮತ್ವಮ್, ೬೫. ಸರ್ವಾಧಾರತ್ವಂ, ೬೬. ಸ್ವನಿಷ್ಠತ್ವಮ್, ೬೭.

---

ಮಿದಂತತಮ್ । (ಇದು ನಾರಾಯಣ ಶಬ್ದಾರ್ಥವು) ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂವಿಂದತಿ ಮಾನವಃ" ಎಂಬುದು ಇದಕ್ಕೆ ಪ್ರಮಾಣವು. ೬೧. ಸರ್ವಫಲ ಪ್ರದತ್ವಮ್ - ಯಾವಾಗ ಸರ್ವಕರ್ಮಸಮಾರಾಧ್ಯತ್ವವು ಸ್ಥಾಪಿತವೋ, ಆಗ ಆ ಕರ್ಮಗಳಿಂದ ಪ್ರೀತನಾಗಿ ಆ ಕರ್ಮಗಳಿಂದ ಪ್ರಾರ್ಥಿಸಲ್ಪಟ್ಟ ಫಲ ವನ್ನು ಕೊಡುವಿಕೆಯು ಏರ್ಪಟ್ಟಿತು."ವಿದಧಾತಿ ಕಾಮಾನ್"(ಕಠ. ೨.೫.೧೩)ಎಂಬ ಶ್ರುತ್ಯರ್ಥವು ಬೋಧಿತವು. ಆ ಕರ್ಮಗಳಿಂದ ಫಲವನ್ನು ಕೋರದೆ ಇದ್ದ ಪಕ್ಷದಲ್ಲಿ ಅವುಗಳಿಂದ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳನ್ನುಹೋಗಲಾ ಡಿಸಿ, ಆತನು ದಯಪಾಲಿಸಿದ ಬುದ್ಧಿಯೋಗದಿಂದ ಆತನನ್ನಾಶ್ರಯಿಸಿದುದರಿಂದ ನಿರತಿಶಯ ಸುಖರೂಪ ಮುಕ್ತಿಯನ್ನು ಕೊಡೋಣವು. "ತಸ್ಮಿನ್ಪ್ರಸನ್ನೇ ಕಿಮಿಹಾಸ್ತ್ಯಲಭ್ಯಮ್" (ವಿ. ಪು). ಆದುದರಿಂದ ಸರ್ವ ಫಲಪ್ರದತ್ವವು. ೬೨. ಸರ್ವ ವಿಧ ಬಂಧುತ್ವವು - ನಿರುಪಾಧಿಕವಾದ ಸರ್ವವಿಧ ಬಂಧುವಾಗಿರೋ ಣವು. "ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್" ಎಂಬ "ಪಿತಾತ್ವಂ ಮಾತಾತ್ವಂ" ಎಂಬ, "ತ್ವಮೇವ ಮಾತಾಚ ಪಿತಾತ್ವಮೇವ" ಎಂಬ, "ವಾಸುದೇವಸ್ಸರ್ವಮಿತಿ ಸಮಹಾತ್ಮಾಸುದುರ್ಲಭಃ"[ಗೀ.೭-೧೯] ಎಂಬ ಪ್ರಮಾಣಗಳು ಅನುಸಂಧೇಯಗಳು. ಈಸರ್ವವಿಧಬಂಧುತ್ವವು ಸರ್ವಫಲಪ್ರದತ್ವ ಮೂಲಕವೇ ಉಂಟಾದುದೆಂದು ಭಾವಿಸಬಹುದು. ಅಥವಾ ನಾರಾಯಣ ಪದದ ಷಷ್ಠೀ ತತ್ಪುರುಷಾರ್ಥವೆಂದೂ ಭಾವಿಸಬಹುದು. ಹಿಂದೆ ಅದನ್ನುಉಪಪಾದಿಸಿರುವ ಸ್ಥಳವನ್ನು ನೋಡಿ. ೬೩. ಸರ್ವ ವ್ಯಾಪಕತ್ವಮ್ - ಸಮಸ್ತವನ್ನು ವ್ಯಾಪಿ ಸೋಣವು. ನಾರಾಯಣ ಶಬ್ದದ ಬಹುವ್ರೀಹ್ಯರ್ಥವು. ತತ್ಸೃಷ್ಟ್ವಾ ತದೇ ವಾನುಪ್ರಾವಿಶತ್" ಎಂಬುದು ಪ್ರಮಾಣವು. ೬೪. ನಿರತಿಶಯಸೂಕ್ಷ್ಮತ್ವಂ— ಸರ್ವವನ್ನು ವ್ಯಾಪಿಸುವಾಗ ಸೂಕ್ಷ್ಮತರ ವಸ್ತುಗಳನ್ನೂ ವ್ಯಾಪಿಸುವ ಶಕ್ತಿ ಇರು ವದರಿಂದ "ಅಣೋರಣೀಯಾನ್" ಎಂಬಲ್ಲಿ ಹೇಳಿರುವ ಹಾಗೆ ಎಲ್ಲಾವಸ್ತುಗಳ ಗಿಂತಲೂ ಸೂಕ್ಷ್ಮವಾಗಿರೋಣವು. ಸರ್ವ ವಸ್ತುಗಳ ಅಂತರ್ವ್ಯಾಪ್ತಿಯು ಇಲ್ಲಿ ಹೇಳಲ್ಪಟ್ಟಿತು. ೬೫ ಸರ್ವಾಧಾರತ್ವಂ - ಸಮಸ್ತಕ್ಕು ಆಧಾರನಾಗಿ ಸಮಸ್ತ ವನ್ನು ಆಧೇಯವಾಗಿ [illegible]ದಿರುವವನು. ಇದು ಸರ್ವಕ್ಕೂ ಆತ್ಮಾವಾಗಿರುವದರಿಂ ದಲೇ ಏರ್ಪಡುತ್ತದೆ. ನಾರಾಯಣ ಶಬ್ದದ ತತ್ಪುರುಷಾರ್ಥದಿಂದ ಏರ್ಪಡುತ್ತದೆ. ೬೬. ಸ್ವನಿಷ್ಠತ್ವಮ್ - ಯಾವಾಗ [illegible]ಮಸ್ತಕ್ಕೂ ತಾನೇ ಆಧಾರನೋ, ತನಗೆ ಯಾವುದೂ ಆಧಾರವಲ್ಲವೆಂಬದು ಏರ್ಪಟ್ಟಿತು. ಇದೇ ಸ್ವನಿಷ್ಠತೆಯು - ಹೀಗೆ ಆಧೇಯನಲ್ಲದೆ ತಾನು ಸ್ವತಂತ್ರನಾಗಿರುವಿಕೆಯು. ೬೭. ೬೮. ೬೯. ಸತ್ಯ

**ಸತ್ಯತ್ವಮ್, ೧೮. ಜ್ಞಾನತ್ವಮ್ ೧೯. ಅನಂತತ್ವಮ್, ೨೦. ಆನಂದತ್ವಮ್. ೨೧ ಅಮಲತ್ವಂ,೨೨. ನಿರೂಪಿತ ಸ್ವರೂಪವಿಶೇಷಣಾಪುಕ್ತಾನಂತಗುಣವತ್ವಂ**

---

ತ್ವಂ, ಜ್ಞಾನತ್ವಂ, ಅನಂತತ್ವಮ್ - ಮೊದಲಿನ ಮೂರೂ ಸ್ವರೂಪ ಶೋಧಕ ವಾಕ್ಯವಾದ ಸತ್ಯಂ ಜ್ಞಾನ ಮನಂತಂ ಬ್ರಹ್ಮ ಎಂಬ ಆನಂದವಲ್ಲಿಯಲ್ಲಿ ಹೇಳಲ್ಪಟ್ಟ ಸ್ವರೂಪ ಶೋಧಕ ಗುಣಗಳು ಸತ್ಯತ್ವವೆಂದರೆ ನಿರುಪಾಧಿಕವಾದ ಸತ್ತೆಯನ್ನು ಹೊಂದಿರೋಣವು. ಸ್ವರೂಪ ಸ್ವಭಾವಗಳಲ್ಲಿ ಯಾವ ಕಾರಣದಿಂದಲೂ ವಿಕಾರವಿಲ್ಲದಿರೋಣವು. ಜ್ಞಾನತ್ವ ವೆಂದರೆ ಶಾಶ್ವತವಾಗಿ ಯಾರಿಗೂ ಅಧೀನವಾಗದೆ ಎಲ್ಲಾ ದೇಶಕಾಲಾವಸ್ಥೆಗಳಲ್ಲೂ ಸಂಕೋಚವಿಲ್ಲದಿರುವ ಜ್ಞಾನವನ್ನು ಹೊಂದಿರೋಣವು. ಅನಂತತ್ವ ವೆಂದರೆ.—ಈ ದೇಶದಲ್ಲಿ ಉಂಟು, ಅನ್ಯದೇಶದಲ್ಲಿಲ್ಲ, ಈ ಕಾಲದಲ್ಲಿ ಉಂಟು, ಮಿಕ್ಕಕಾಲದಲ್ಲಿಲ್ಲ, ಈ ವಸ್ತುವಿನಲ್ಲಿ ಉಂಟು, ಮಿಕ್ಕ ವಸ್ತುವಿನಲ್ಲಿ ಇಲ್ಲ, ಹೀಗೆ ದೇಶಕಾಲ ವಸ್ತುಗಳ ಪರಿಚ್ಛೇದವಿಲ್ಲದಿರೋಣವು. ಇವು ನರಸಂಬಂಧಿನೋನಾರಾಃ ಎಂಬ ವ್ಯುತ್ಪತ್ತಿಯಿಂದಲೇ ಸ್ವರೂಪನಿರೂಪಕಧರ್ಮಗಳೂ,ನಿರೂಪಿತಸ್ವರೂಪ ವಿಶೇಷಣಗಳೂ,ಇವುಗಳಿಂದ ಸೇರಿರುವಿಕೆಯುವ್ಯಕ್ತವು. ೨೦. **ಆನಂದತ್ವಮ್** ಆನಂದಮಯನಾಗಿರೋಣವು. "**ರಸೋ ವೈ ಸಃ ರಸಂ ಹ್ಯೇವಾ ಯಂ ಲಬ್ಧ್ವಾನಂದೀಭವತಿ**" (ತೈ. ಆನಂದ. ೭) ಎಂಬಲ್ಲಿ ಹೇಳಿರುವಹಾಗೆ ಆನಂದಸ್ವರೂಪ ಆನಂದಗುಣಕನಾಗಿ ಈ ಪುರುಷನಿಗೂ ತನಗೆ ಸಮವಾದ ಆನಂದವನ್ನುಂಟುಮಾಡುವವನು. ೨೧. **ಅಮಲತ್ವಮ್** - ಯಾವಾಗ ಸತ್ಯತ್ವಾದಿಗಳಿಂದ ಸ್ವರೂಪವು ಏರ್ಪಟ್ಟಿತೋ ಆಗ ಹೇಯ ಪ್ರತ್ಯನೀಕತ್ವವು ಸ್ವತಸ್ಸಿದ್ಧವು. "ತೇಜೋಬಲೈಶ್ವರ್ಯ ಮಹಾವಬೋಧ ಸುವೀರ್ಯ ಶಕ್ತ್ಯಾದಿ ಗುಣೈಕರಾಶಿಃ । ಪರಃ ಪರಾಣಾಂ ಸಕಲಾ ನ ಯತ್ರ ಕ್ಲೇಶಾದಯಸ್ಸಂತಿ ಪರಾವರೇಶೇ" [ವಿ. ಪು. ೬.೫.೮೫] ಸಮಸ್ತ ಹೇಯರಹಿತಂ ವಿಷ್ಣ್ವಾಖ್ಯಂ ಪರಮಂ ಪದಂ" [ವಿ. ಪು] ನಿಷ್ಕಲೋ ನಿರಂಜನಃ" ಇತ್ಯಾದಿಗಳು ಪ್ರಮಾಣಗಳು. ಸತ್ಯತ್ವದಿಂದಲೇ ಅಮಲತ್ವವೂ ಸಹ ಉಂಟಾಗುತ್ತದೆ. ಇದು ನಾರಶಬ್ದದಲ್ಲಿ ಸೇರಿದ ಕಲ್ಯಾಣಗುಣಗಳಲ್ಲಿ ಸೇರಿದೆ. ೨೨. **ನಿರೂಪಿತ ಸ್ವರೂಪ ವಿಶೇಷಣಾನುಕ್ತ ಅನಂತಗುಣವತ್ವಮ್** - ನಿರೂಪಿತ ಸ್ವರೂಪ ವಿಶೇಷಣಗಳಲ್ಲಿ ಹೇಳಲ್ಪಡದೇ ಇರುವ ಅಸಂಖ್ಯೇಯವಾದ ಕಲ್ಯಾಣಗುಣಗಳನ್ನು ಹೊಂದಿರೋಣವು. ವ್ಯುತ್ಪತ್ತಿಯಿಂದ ಸ್ವರೂಪವನ್ನು [illegible] ಗುಣಗಳು ಹೇಗೆ ಬೋಧಿತವೋ, ಹಾಗೆಯೇ ನಿರೂಪಿತ ಸ್ವರೂಪ ವಿಶೇಷಣಗಳನ್ನು ಹೊಂದಿರುವನೆಂಬುದು ಆ ನರಸಂಬಂಧಿನೋ ನಾರಾಃ ಎಂಬ ವ್ಯುತ್ಪತ್ತಿಯಿಂದಲೇ ಸಿದ್ಧವು. ಜ್ಞಾನಬಲ ವೀರ್ಯ ಶಕ್ತಿ ತೇಜಸ್ಸು [illegible] ಕಲ್ಯಾಣಗುಣಗಳನ್ನು ಹೊಂದಿರೋಣವು. ೨೩. ನಿತ್ಯದಿವ್ಯ [illegible] ತ್ವಮ್ - ಯಾವಾಗಲೂ ಎನ್ನ

**೭೩. ನಿತ್ಯದಿವ್ಯ ಮಂಗಳ ವಿಗ್ರಹತ್ವಮ್, ೭೪. ಪರವ್ಯೂಹಾದ್ಯವಸ್ಥಾವತ್ವಂ, ೭೫. ಸತ್ಯಾವತಾರತ್ವಂ(ಅಜಹತ್ಸ್ವಸ್ವಭಾವತ್ವಂ) ೭೬. ಅಪ್ರಾಕೃತಾವತಾರತ್ವಂ ೭೭. ಅಕರ್ಮವಶ್ಯಾವತಾರತ್ವಮ್, ೭೮. ಅಕಾಲನಿಯಮಾವತಾರತ್ವಮ್.**

---

ಮಙ್ಗಳ ವಿಗ್ರಹವನ್ನು ಹೊಂದಿರೋಣವು. ಪರ ವ್ಯೂಹ ವಿಭವ ಹಾರ್ದ ಅರ್ಚಾವತಾರ ರೂಪದಲ್ಲಿ ಯಾವಾಗಲೂದಿವ್ಯಮಙ್ಗಳ ವಿಗ್ರಹವನ್ನು ಹೊಂದಿರೋಣವು; ವಿಭವಾವತಾರದಲ್ಲೂ, ಅರ್ಚಾವತಾರದಲ್ಲೂ ನಿತ್ಯವಾಗಿಲ್ಲವು. ಯದಾ ಯದಾಹಿ ಧರ್ಮಸ್ಯಗ್ಲಾನಿರ್ಭವತಿ ಭಾರತ (ಗೀ. ೪.೭) ಎಂಬಲ್ಲಿ ಹೇಳಿರುವಹಾಗೆ ಧರ್ಮ ಹಾನಿ ಉಂಟಾಗಿ ಅಧರ್ಮವು ತುಂಬಾ ತಲೆ ಎತ್ತಿದರೆ ಆಗಮಾತ್ರ ಹೊಂದುವ ಅವತಾರ ರೂಪವು. ಇದೂ ದಿವ್ಯಮಙ್ಗಳವಿಗ್ರಹವೇ, ಇದೂ ನಾರಾಯಣ ಶಬ್ದದಿಂದಲೇ ತೋರಿಬರುತ್ತದೆ. ೭೪. ಪರವ್ಯೂಹಾದ್ಯವಸ್ಥಾವತ್ವಂ– ಮೇಲೆ ನಿತ್ಯ ದಿವ್ಯಮಙ್ಗಳ ವಿಗ್ರಹತ್ವವು ಯಾವಾಗ ಸ್ಥಾಪಿತವೋ, ಆಗ ಇದೂ ಉಂಟಾಯಿತೆಂದ ಭಾವಿಸತಕ್ಕದ್ದಾಗಿರುತ್ತದೆ. ಪರರೂಪವು ಶಂಖ ಚಕ್ರ ಗದಾದಿಗಳಿಂದ ಭೂಷಿತನಾಗಿ ಚತುರ್ಭುಜನಾಗಿ ಪರವಾಸುದೇವ ರೂಪದಲ್ಲಿ ನಿತ್ಯವಾಗಿ ನಿತ್ಯಮುಕ್ತರುಗಳಿಂದ ಸೇವಿತನಾದ ರೂಪವು. ವ್ಯೂಹಾದಿ ರೂಪಗಳ ವಿಷಯಕ್ಕೆ ತತ್ವತ್ರಯಾಧಿಕಾರವನ್ನು ಪರಾಂಬರಿಸಿ. ಇಂತಹ ದಿವ್ಯ ಮಙ್ಗಳ ವಿಗ್ರಹವನ್ನು ಹೊಂದಿರೋಣವು. ಆದಿ ಶಬ್ದವು ವಿಭವ ಹಾರ್ದ, ಅರ್ಚಾವತಾರ ರೂಪಗಳನ್ನು ಬೋಧಿಸುತ್ತದೆ. ೭೫. ಸತ್ಯಾವತಾರತ್ವಮ್ ಎಂದರೆ ಅಜಹತ್ಸ್ವಸ್ವಭಾವತ್ವವು. ಅವತಾರಕಾಲದಲ್ಲೂ ತನ್ನ ಸ್ವಭಾವಗಳನ್ನು ಬಿಡದೇ ಇರೋಣವು. "ಬಹೂನಿಮೇವ್ಯತೀತಾನಿ ಜನ್ಮಾನಿ ತವಚಾರ್ಜುನ। ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥ ಪರಂತಪ(ಗೀ.೪.೫)ಎಂಬಲ್ಲಿಉಪಪಾದಿತವು. ಇದುನರಸಂಬಂಧಿನೋನಾರಾಃ ಎಂಬುದರಿಂದಲೇ ಉಂಟಾಮದು. ೭೬. ಅಪ್ರಾಕೃತಾವತಾರತ್ವಮ್ ಪ್ರಾಕೃತವಾದ ಹೇಯ ದೇಹವಲ್ಲದೆ, ಅಪ್ರಾಕೃತವಾಗಿ ದಿವ್ಯವಾದ ದೇಹವುಳ್ಳ ಅವತಾರವನ್ನುಳ್ಳೋಣವು. "ಸಮಸ್ತ ಕಲ್ಯಾಣ ಗುಣಾತ್ಮಕೋಸೌ ಸ್ವಶಕ್ತಿ ಲೇಶಾವೃತಭೂತ ಸಂಘಃ। ಇಚ್ಛಾಗೃಹೀತಾ ಭಿಮತೋ ರುದೇಹ ಸ್ಸಂಸಾಧಿತಾಶೇಷ ಜಗದ್ಧಿತೋಯಃ" (ವಿ. ಪು. ೬. ೫. ೮೪) ಎಂದೂ "ನತಸ್ಯ ಪ್ರಾಕೃತಾಮೂರ್ತಿರ್ಮಾಂಸಮೇದೋಸ್ಥಿ ಸಂಭವಾ" ಎಂದೂ "ನಭೂತ ಸಙ್ಘಸಂಸ್ಥಾನೋ ದೇಹೋಸ್ಯ ಪರಮಾತ್ಮನಃ" [ಭಾರ. ಶಾನ್ತಿ. ೨೦೬. ೬೦] ಎಂದೂ ಪ್ರಮಾಣಗಳು ಹಿಂದೆಯೇ ಉದಾಹರಿಸಲ್ಪಟ್ಟವೆ. ೩೬೨–೩ನೆಯ ಪುಟಗಳನ್ನು ನೋಡಿ. ೭೭. ಅಕರ್ಮವಶ್ಯಾವತಾರತ್ವಮ್ – ಕರ್ಮವಶ್ಯವಲ್ಲದಿರುವ ಅವತಾರವನ್ನು ಹೊಂದಿರೋಣವು. ಇದು "ಜನ್ಮ ಕರ್ಮ ಚ ಮೇ ದಿವ್ಯಮ್" [ಗೀ. ೪. ೯] ಎಂಬಲ್ಲಿ ಉಪಪಾದಿತವು. ಇವೆಲ್ಲಾ ನಾರಶಬ್ದದಿಂದ ತೋರುವ

**೭೯ ಆಶ್ರಿತಾರ್ಥಗುಣಪರಿವಾಹಾವತಾರತ್ವಮ್. ೮೦. ಸರ್ವಾವಸ್ಥ ಶುಭಾಶ್ರಯತ್ವಮ್, ೮೧. ಸರ್ವಾವಸ್ಥ ಲಕ್ಷ್ಮೀ ಸಹಚರ್ಯತ್ವಮ್, ೮೨. ದಿವ್ಯಭೂಷಣಾಯುಧ ಪರಿಜನ ಪರಿಚ್ಛದ ದ್ವಾರಪಾಲ ಪಾರ್ಷದಾದಿಮತ್ವಮ್,**

---

ಭಾವಗಳೇ. ೭೮. **ಅಕಾಲ ನಿಯಮಾವತಾರತ್ವಮ್** - ಇಂತಹ ಕಾಲದಲ್ಲೇ ಅವತರಿಸಬೇಕಾದ ನಿಯಮವಿಲ್ಲದಿರೋಣವು. ಈ ವಿಷಯದಲ್ಲಿ ಆತನು ಸ್ವತಂತ್ರನು, ಅಧರ್ಮದ ಏಳಿಗೆ ಬಹುವಾಗಿ ಹೆಚ್ಚಿದಾಗ ಸಜ್ಜಲ್ಪಿಸಿ ಅವತರಿಸುವಿಕೆ ಎಂಬಭಾವವು. "**ಯದಾ ಯದಾಹಿ ಧರ್ಮಸ್ಯ**" ಎಂಬ [ಗೀತೆ. ೪. ೭.] ಶ್ಲೋಕವು ಅನುಸಂಧೇಯವು. ನೃಸಿಂಹ, ಕೂರ್ಮ, ವರಾಹ, ವಾಮನ ಮೊದಲಾದ ಅವತಾರಗಳಿಗೆ ಕಾಲ ನಿಯಮವಿಲ್ಲದೆ ಆವಶ್ಯಕ ಉಂಟಾದ ಒಡನೆಯೇ ಅವತಾರಗಳು. ತುಂಬಾ ಅವತಾರಗಳಲ್ಲೂ ಹಾಗೆಯೇ ಕಾಲನಿಯಮದ ಅಭಾವವು ತೋರಿ ಬರುತ್ತದೆ. ೭೯. **ಆಶ್ರಿತಾರ್ಥಗುಣ ಪರಿವಾಹಾವತಾರತ್ವಮ್** - ಅವತಾರವು ಆಶ್ರಿತ ಸಾಧು ಪರಿತ್ರಾಣಕ್ಕಾದುದರಿಂದ, ಅವರಿಗಾಗಿ ವಾತ್ಸಲ್ಯ ಸೌಲಭ್ಯ ಸೌಶೀಲ್ಯಾದಿ ಗುಣಗಳ ಪ್ರವಾಹವುಳ್ಳ ಅವತಾರವನ್ನು ಹೊಂದಿರುವಿಕೆಯು "ಪರಿತ್ರಾಣಾಯ ಸಾಧೂನಾಂ" ಎಂಬಲ್ಲಿ ಹೇಳಿರುವ ಭಾವವು ದ್ಯೋತಿತವು [ಗೀ. ೪. ೮] ೮೦. **ಸರ್ವಾವಸ್ಥ ಶುಭಾಶ್ರಯತ್ವಮ್** - ಸಮಸ್ತಾವಸ್ಥೆಗಳಲ್ಲೂ ದಿವ್ಯ ಮಙ್ಗಳ ವಿಗ್ರಹವನ್ನು ಹೊಂದಿರೋಣವು. ಆತನ ರೂಪಗಳೆಲ್ಲಾ ಅಪ್ರಾಕೃತವಾದುವೇ ೮೧. **ಸರ್ವಾವಸ್ಥಲಕ್ಷ್ಮೀಸಹಚರ್ಯತ್ವಂ** - ಸಮಸ್ತ ಅವಸ್ಥೆಗಳಲ್ಲೂ ಲಕ್ಷ್ಮಿಯನ್ನು ಸಹಚರಿಯಾಗಿ ಹೊಂದಿರೋಣವು. ಸೃಷ್ಟಿ ಸ್ಥಿತಿ ಲಯಾದಿಗಳಲ್ಲೂ, ಅವತಾರಕಾಲದಲ್ಲೂ, ಉಪಾಯ ದಶೆಯಲ್ಲೂ, ಉಪೇಯ ದಶೆಯಲ್ಲೂ, ಹೀಗೆ ಎಲ್ಲಾ ಅವಸ್ಥೆಗಳಲ್ಲೂ ಲಕ್ಷ್ಮಿಯು ಸಹಚರಿಯಾಗಿರೋಣವು. "ಆನೀತವಾದಗ್ಂ ಸ್ವಧಯಾ ತದೇಕಮ್" "ಶ್ರದ್ಧಯಾದೇವೋ ದೇವತ್ವಮಶ್ನುತೇ" "ರಾಘವತ್ವೇ ಭವೇತ್ಸೀತಾ", "ಸಹಧರ್ಮಚರೀತವ" ಇತ್ಯಾದ್ಯನೇಕ ಪ್ರಮಾಣಗಳು ಇದನ್ನು ಬೋಧಿಸುತ್ತವೆ. ನರಸಂಬಂಧಿನೋ ನಾರಾಃ ಎಂಬುದರಿಂದ ನರ ಶಬ್ದದಲ್ಲೇ ಲಕ್ಷ್ಮಿಯೂ ಅಂತರ್ಗತಳು. ೮೨. **ದಿವ್ಯ ಭೂಷಣಾಯುಧ ಪರಿಜನ ಪರಿಚ್ಛದ ದ್ವಾರಪಾಲ ಪಾರ್ಷದಾದಿ ಮತ್ವಮ್** ಇವು ನರ ಶಬ್ದದಲ್ಲೇ ಸೇರಿದವು. ಪರಿಜನ - ಅನಂತ ಗರುಡ ವಿಷ್ವಕ್ಸೇನಾದಿಗಳು, ಪರಿಚ್ಛದ - ಶಂಖ ಚಕ್ರಾದಿ ದಿವ್ಯಾಯುಧ ಭೂಷಣಗಳು ಕೌಸ್ತುಭ ವನಮಾಲಾ ಸಿಂಹಾಸನಾದಿಗಳೂ, ಚಂಡ ಪ್ರಚಂಡಾದಿ ದ್ವಾರಪಾಲಕರು ಪಾರ್ಷದರು ನಿತ್ಯಮುಕ್ತರು ಇವರುಗಳಿಂದೆಲ್ಲಾ ಕೂಡಿಕೊಂಡಿರುವಿಕೆಯು. ಇವು ನರ ಸಂಬಂಧಿನೋ ನಾರಾಃ ಎಂಬ ವ್ಯುತ್ಪತ್ತಿಯಿಂದ ತೋರುತ್ತವೆ.

ಅಥ ನಾರಾಯಣಪದಚತುರ್ಥ್ಯನುಸಂಧೇಯಾಃ ಸಪ್ತವಿಂಶತಿಗುಣಾನಾಹ

---

೮೩. ಸ್ಥೂಲಶರೀರ ವಿಶ್ಲೇಷಕತ್ವಮ್, ೮೪. ವಿಶ್ರಮಸ್ಥಾನತ್ವಂ, ೮೫. ಅನುಗ್ರಹ ವಿಶೇಷವತ್ತ್ವಮ್, ೮೬. ಬ್ರಹ್ಮನಾಡೀದ್ವಾರ ಪ್ರಕಾಶಕತ್ವಮ್ ೮೭. ತತ್ಪ್ರವೇಶಕತ್ವಂ, ೮೮. ಬ್ರಹ್ಮರಂಧ್ರೋತ್ಕ್ರಾಂತಿಹೇತುತ್ವಂ. ೮೯. ಅರ್ಚಿರಾದ್ಯಾತಿವಾಹಿಕ ನಿಯೋಕ್ತೃತ್ವಮ್ ೯೦. ಸೂರ್ಯದ್ವಾರಾದಿ ನೇತೃತ್ವಂ,

---

ಮುಂದೆ ನಾರಾಯಣ ಪದದ ಚತುರ್ಥಿಯಲ್ಲಿ ಅನುಸಂಧಾನಮಾಡುವ ೨೭ ಗುಣಗಳು.

೮೩. **ಸ್ಥೂಲಶರೀರವಿಶ್ಲೇಷಕತ್ವಮ್** - ಜೀವಾತ್ಮನಿಗೆ ಸ್ಥೂಲ ಶರೀರವು ಬಿಟ್ಟು ಹೋಗುವಹಾಗೆಮಾಡೋಣವು, ಇದರಿಂದ ನಿರ್ಯಾಣದಲ್ಲಿ ಸೂಕ್ಷ್ಮಶರೀರಪ್ರಾಪ್ತಿಯುಂಟಾಗುವಹಾಗೆಮಾಡೋಣವು; ಚತುರ್ಥಿಯಿಂದ ತೋರಿಬರುವ ನಿತ್ಯಕೈಙ್ಕರ್ಯ ಪ್ರಾಪ್ತಿಗೆಪೂರ್ವ ಭಾವಿಯಾಗಿ ಪರಮಾತ್ಮನು ನಡೆಸುವ ಕಾರ್ಯಗಳು ಹೇಳಲ್ಪಡುತ್ತವೆ. ೮೪. ವಿಶ್ರಮಸ್ಥಾನತ್ವಮ್-ಜೀವಾತ್ಮನಿಗೆ ನಿರ್ಯಾಣಕಾಲದಲ್ಲಿ ಉಂಟಾದ ಆಯಾಸ ಪರಿಹಾರಕ್ಕಾಗಿ ವಿಶ್ರಮಿಸಿಕೊಳ್ಳುವದಕ್ಕೆ ಹಾರ್ದರೂಪನಾಗಿರೋಣವು. ೮೫. ಅನುಗ್ರಹ ವಿಶೇಷವತ್ತ್ವಮ್ - ತಾದರ್ಥನಗೃಹೀತ ಶತಾಧಿಕಯಾ ಎಂದು ಬ್ರಹ್ಮಸೂತ್ರದಲ್ಲಿ ಹೇಳಿರುವ ಹಾಗೆ ಮೋಕ್ಷಕ್ಕೆ ಹೋಗುವವನಿಗೆ ಅನುಗ್ರಹ ವಿಶೇಷವಾದ ಬ್ರಹ್ಮನಾಡಿಯಮೂಲಕ ಹೋಗುವಹಾಗೆ ಮಾಡೋಣವು. ಇವೆಲ್ಲವೂ ನಿತ್ಯಕೈಙ್ಕರ್ಯ ಪ್ರಾಪ್ತಿಗೆ ಪೂರ್ವಭಾವಿಯಾದ ಅನುಗ್ರಹ ವಿಶೇಷಗಳಾದುದರಿಂದ ಚತುರ್ಥಿಯಲ್ಲಿ ಅರ್ಥವಾಗಿ ಬೋಧಿತವು. ೮೬. ಬ್ರಹ್ಮನಾಡೀದ್ವಾರ ಪ್ರಕಾಶಕತ್ವಮ್ - ಹಿಂದೆ ಹೇಳಿದ ಅನುಗ್ರಹವು ಯಾವುದೆಂಬುದು ಇಲ್ಲಿ ವ್ಯಕ್ತಪಟ್ಟಿತು. ಬ್ರಹ್ಮನಾಡೀಮೂಲಕ ಹೋಗುವಹಾಗೆ, ನಿರ್ಯಾಣಹೊಂದಿ ಸೂಕ್ಷ್ಮಶರೀರವನ್ನು ಹಿಡಿದ ಮೋಕ್ಷಗಾಮಿಗೆ ಪ್ರಕಾಶಪಡಿಸಿ ತೋರಿಸುವಿಕೆಯು. ಇದೇ ಪರಮಾತ್ಮನ ಅನುಗ್ರಹವು. ೮೭. ತತ್ಪ್ರವೇಶಕತ್ವಮ್ - ಇತರ ನೂರುನಾಡಿಗಳನ್ನು ತ್ಯಜಿಸಿ ಈ ಬ್ರಹ್ಮನಾಡೀದ್ವಾರ ಪ್ರವೇಶಿಸಿ ಹೋಗುವ ಹಾಗೆ ಮಾಡೋಣವು ೮೮. ಬ್ರಹ್ಮರಂಧ್ರೋತ್ಕ್ರಾಂತಿ ಹೇತುತ್ವಮ್ - ಅಲ್ಲಿಂದ ಬ್ರಹ್ಮರಂಧ್ರದ ಮೂಲಕ ಸ್ಥೂಲಶರೀರವನ್ನು ಬಿಟ್ಟು ಜೀವನು ಹೊರಗೆ ಬರುವದಕ್ಕೆ ಕಾರಣವಾಗಿರುವಿಕೆಯು ೮೩ರಿಂದ೮೮ರವರೆಗೂ ಇರುವ ವಿಷಯವೆಲ್ಲಾ ನಿರ್ಯಾಣಾಧಿಕಾರದಲ್ಲಿ ಹೇಳಿದ ವಿಷಯಗಳು. ಅದನ್ನು ಪರಾಂಬರಿಸಿ. ೮೯. ಅರ್ಚಿರಾದ್ಯಾತಿವಾಹಿಕ ನಿಯೋಕ್ತೃತ್ವಮ್ - ೧೨ ಅರ್ಚಿರಾದಿ ಆತಿವಾಹಿಕರನ್ನು, ಈ ಮೋಕ್ಷನನ್ನು ಕುರಿತು ನಿತ್ಯಕೈಙ್ಕರ್ಯ ಪ್ರಾಪ್ತಿಗಾಗಿ ಹೋಗುವವನಿಗೆ, ಮಾರ್ಗತೋರಿಸುವಹಾಗೆ ನಿಯಮಿಸೋಣವು. ತೇಽರ್ಚಿಷಮಭಿಸಂಭವನ್ತಿ" ಎಂಬ ಛಾಂದೋಗ್ಯವಾಕ್ಯವು

೯೧. ಅಣ್ಡಾವರಣ ಪ್ರಕೃತಿ ಮಂಡಲಾತಿಕ್ರಮತ್ವಮ್. ೯೨. ವಿರಜಾತೀರ ಪ್ರಾಪಕತ್ವಮ್, ೯೩. ಸೂಕ್ಷ್ಮಶರೀರ ವಿಶ್ಲೇಷತ್ವಮ್, ೯೪, ಅಪ್ರಾಕೃತ ದೇಹಪ್ರದತ್ವಮ್ ೯೫. ದಿವ್ಯಾಪ್ಸರಸ್ಸತ್ಕಾರಾದಿ ಪ್ರಯೋಜಕತ್ವಂ, ೯೬ ಬ್ರಹ್ಮಗಂಧಾದಿ ಪ್ರವೇಶಕತ್ವಮ್, ೯೭. ನಿತ್ಯಮುಕ್ತಸತ್ಕಾರ ವಿಶೇಷ

---

ಅನುಸಂಧೇಯವು. ೯೦ ಸೂರ್ಯದ್ವಾರಾದಿ ನೇತೃತ್ವಮ್ "ಸ ಆದಿತ್ಯಮಾಗಚ್ಛತಿ" ಎಂಬ ಬೃಹದಾರಣ್ಯದ [೭. ೧೦. ೧] ನೆಯ ವಾಕ್ಯದಲ್ಲಿ ಹೇಳಿರುವ ಹಾಗೆ, ಸೂರ್ಯನನ್ನು ಹೊಂದಿ, ಅಲ್ಲಿ ಆಡಂಬರವೆಂಬ ವಾದ್ಯ ವಿಶೇಷದಷ್ಟು ರಂಧ್ರದ ಮೂಲಕವಾಗಿ ಕರೆದುಕೊಂಡು ಹೋಗುವಹಾಗೆಮಾಡೋಣವು. ಆದಿತ್ಯಸ್ಯಸಾಯುಜ್ಯಂ ಗಚ್ಛತಿ" (ತೈ. ನಾರಾ.) ೯೧. ಅಂಡಾವರಣ ಪ್ರಕೃತಿ ಮಂಡಲಾತಿಕ್ರಮತ್ವಮ್ – ಅಂಡಾವರಣದ ಪ್ರಕೃತಿ ಮಂಡಲವನ್ನು ಅತಿಕ್ರಮಿಸಿ ಹೋಗೋಣವು. ಇದು ವಿರಜಾವಗಾಹನದಿಂದ ಉಂಟಾಗುತ್ತದೆ. ೯೨. ವಿರಜಾತೀರಪ್ರಾಪಕತ್ವಮ್-ಯಾವಾಗ ಪ್ರಕೃತಿಮಂಡಲವು ದಾಟಿ ಹೋದನೋ, ಒಡನೆ ವಿರಜಾತೀರವು ಸಿಕ್ಕುವದರಿಂದ, ಅದನ್ನು ಹೊಂದಿಸುವಿಕೆಯು. ೯೩. ಸೂಕ್ಷ್ಮಶರೀರ ವಿಶ್ಲೇಷಕತ್ವಂ - ನಿರ್ಯಾಣಗತಿಗಾಗಿಯೂ ಮತ್ತು ಅರ್ಚಿರಾದಿಗಳ ಪ್ರದೇಶ ಗಮನಕ್ಕಾಗಿಯೂ ಪ್ರಾಪ್ತವಾಗಿದ್ದ ಸೂಕ್ಷ್ಮಶರೀರವು, ವಿರಜಾವಗಾಹನದಿಂದ ಬಿಟ್ಟು ಹೋಗುವದರಿಂದ ಅಂತಹ ಶರೀರದ ಬಿಡುಗಡೆಯನ್ನುಂಟುಮಾಡೋಣವು. ೯೪. ಅಪ್ರಾಕೃತ ದೇಹಪ್ರದತ್ವಂ - ಯಾವಾಗ ಸೂಕ್ಷ್ಮಶರೀರವು ಬಿಟ್ಟುಹೋಯಿತೋ, ಒಡನೆ ಮುಂದೆ ಗಮನಕ್ಕಾಗಿ ಅಪ್ರಾಕೃತ ದಿವ್ಯಶರೀರಪ್ರಾಪ್ತಿಯನ್ನುಂಟು ಮಾಡೋಣವು. ೯೫. ದಿವ್ಯಾಪ್ಸರಸ್ಸತ್ಕಾರಾದಿ ಪ್ರಯೋಜಕತ್ವಂ - ಅಪ್ರಾಕೃತ ದೇಹ ಉಂಟಾದ ಒಡನೆಯೇ ಮಾರ್ಗದಲ್ಲಿ ದಿವ್ಯಾಪ್ಸರಸ್ಸುಗಳಿಂದ ಅಲಂಕರಿಸಲ್ಪಟ್ಟು ಸತ್ಕಾರವನ್ನು ಹೊಂದುವಹಾಗೆ ಮಾಡೋಣವು. ೯೬. ಬ್ರಹ್ಮಗಂಧಾದಿ ಪ್ರವೇಶಕತ್ವಮ್-ಪರಮಾತ್ಮನ ಸಭೆಯನ್ನು ಹೋಗಿ ಸೇರಲು ಅರ್ಹನಾಗುವದಕ್ಕಾಗಿ ಕೌಷೀತಕೀಯಲ್ಲಿ ಹೇಳಿರುವ ಹಾಗೆ ಬ್ರಹ್ಮಗಂಧವೂ ಬ್ರಹ್ಮರಸವೂ, ಬ್ರಹ್ಮತೇಜಸ್ಸೂ ಸಹ ಈ ಮೋಕ್ಷ ಹೊಂದುವವನನ್ನು ಬಂದು ಪ್ರವೇಶಿಸುವಹಾಗೆ ಮಾಡೋಣವು. (೧೭೮ನೆಯ ಪುಟವನ್ನು ನೋಡಿ.) ೯೭. ನಿತ್ಯಮುಕ್ತಸತ್ಕಾರ ವಿಶೇಷ ಹೇತುತ್ವಮ್ – ದಿವ್ಯ ವೈಕುಂಠದಲ್ಲಿ ನಿತ್ಯಮುಕ್ತರುಗಳಿಂದ ಸತ್ಕಾರ ವಿಶೇಷವನ್ನು ಹೊಂದುವದಕ್ಕೆ ಯೋಗ್ಯನನ್ನಾಗಿ ಮಾಡೋಣವು. (೧೭೯ನೆಯ ಪುಟವನ್ನು ನೋಡಿ ೮೮ರಿಂದ ೯೬ರವರೆಗೂ ಹೇಳಿರುವವೆಲ್ಲಾ ಗತಿಚಿಂತನಾಧಿಕಾರದಲ್ಲಿ ಉಪಪಾದಿತವು. ಇವೂ ಸಹ ನಾರಾಯಣಾಯ ಎಂಬಲ್ಲಿ ಚತುರ್ಥಿಯಿಂದ ತೋರಿಬರುವ ನಿತ್ಯಕೈಂಕರ್ಯ ಪ್ರಾಪ್ತಿಗೆ ಪೂರ್ವಭಾವಿಯಾಗಿ ಉಂಟಾಗುವ ಪರಮಾತ್ಮಾನುಗ್ರಹಗಳು. ೯೮.

ಹೇತುತ್ವಮ್, ೯೮. ಪರ್ಯಂಕಾಧಿರೋಹಣ ಪರ್ಯಂತಾದರವತ್ತ್ವಮ್, ೯೯. ಪರಿಪೂರ್ಣಾನುಭವ ಹೇತುತ್ವಮ್, ೧೦೦. ಪ್ರಧಾನಪ್ರಾಪ್ಯತ್ವಮ್ ೧೦೧. ಸದೇಹ ವಿದೇಹ ಬಹುದೇಹ ಕೃತ ಸರ್ವವಿಧ ಕೈಙ್ಕರ್ಯ ಪ್ರತಿಸಂಬಂಧಿತ್ವಮ್, ೧೦೨. ಅವಾಪ್ತ ಸಮಸ್ತ ಕಾಮತ್ವಮ್, ೧೦೩. ನಿರತಿಶಯಾನಂದವತ್ತ್ವಂ, ೧೦೪. ನಿರತಿಶಯ ಭೋಗ್ಯತ್ವಂ, ೧೦೫. ಸರ್ವ ಪ್ರಕಾರ ಭೋಗ್ಯತ್ವಮ್. ೧೦೬. ಸರ್ವದಾ

---

**ಪರ್ಯಂಕಾಧಿರೋಹಣಪರ್ಯನ್ತಾದರವತ್ತ್ವಮ್** - ಶ್ರೀ ಪರವಾಸುದೇವನು ಲಕ್ಷ್ಮಿಯೊಂದಿಗೆ ಸಭೆಯಲ್ಲಿ ಪರ್ಯಂಕಾಸನವನ್ನು ಅಲಂಕರಿಸಿರುವಾಗ ಆತನ ದಿವ್ಯಪರ್ಯಂಕವನ್ನು ಹತ್ತಿ ಆ ದಿವ್ಯ ದಂಪತಿಗಳಿಗೆ ನಮಸ್ಕರಿಸುವವರೆಗೂ ಪೂರ್ಣಾದರದಿಂದ ನೋಡೋಣವು. ೯೯. **ಪರಿಪೂರ್ಣಾನುಭವಹೇತುತ್ವಮ್**-ಸ್ವರೂಪ ರೂಪಗುಣ, ಕಲ್ಯಾಣಗುಣ ವಿಭೂತ್ಯೈಶ್ವರ್ಯಾದಿಗಳಿಂದ ಪರಿಪೂರ್ಣನಾದ ಪರಬ್ರಹ್ಮವನ್ನು ಅನುಭವಿಸುವ ಆನಂದಕ್ಕೆ ಹೀಗೆ ಕಾರಣನಾಗಿರೋಣವು. ೧೦೦ **ಪ್ರಧಾನಪ್ರಾಪ್ಯತ್ವಮ್** - ಪ್ರಧಾನನಾಗಿ ಪರಮ ಪ್ರಾಪ್ಯನಾದ ಶ್ರಿಯಃಪತಿಯಾದ ತನ್ನನ್ನೇ ಹೊಂದುವಹಾಗೆ ಮಾಡೋಣವು ಅಥವಾ ದಿವ್ಯ ವೈಕುಂಠದಲ್ಲಿ ಈ ಜೀತನನಿಗೆ ಭೋಗ್ಯವಾದುದು ಯಾವುದೆಂದರೆ ಶೇಷಭೂತನು ಶೇಷಿಗೆ ಮಾಡುವ ಸರ್ವವಿಧ ಕೈಙ್ಕರ್ಯವೇ, ಅದನ್ನು ಹೊಂದಿಸೋಣವು ಎಂದೂ ಅರ್ಥಮಾಡಬಹುದು. ೧೦೧. **ಸದೇಹ ವಿದೇಹ ಬಹುದೇಹ ಕೃತ ಸರ್ವವಿಧ ಕೈಙ್ಕರ್ಯ ಪ್ರತಿಸಂಬಂಧಿತ್ವಮ್** - ಅಪ್ರಾಕೃತ ದೇಹಯುಕ್ತರಾಗಿಯಾಗಲಿ, ಅಥವಾ ದೇಹವಿಲ್ಲದೆ ಬರೀ ಸ್ತುತಿರೂಪವಾಗಿಯಾಗಲಿ, ಅಥವಾ ಛಾಂದೋಗ್ಯದಲ್ಲಿ "ಸ ಏಕಧಾ ಭವತಿ ತ್ರಿಧಾಭವತಿ. ಎಂಬಲ್ಲಿ ಹೇಳಿರುವಹಾಗೆ ಸಙ್ಕಲ್ಪಮಾತ್ರದಿಂದ ಅನೇಕ ರೂಪಗಳನ್ನು ತಾಳಿ ಕೈಙ್ಕರ್ಯಗಳನ್ನು ಮಾಡಿದುದನ್ನು ಸ್ವೀಕರಿಸುವ ಪ್ರತಿಸಂಬಂಧಿತ್ವವನ್ನು ಹೊಂದಿರೋಣವು. ೧೦೨ ಅವಾಪ್ತಸಮಸ್ತಕಾಮತ್ವಂ ನಾರಶಬ್ದದಿಂದ ತೋರುವ ಪರಿಪೂರ್ಣ ಸರ್ವವಿಧ ಕಾಮನಾಗಿರುವಿಕೆಯು. ೧೦೩ **ನಿರತಿಶಯಾನಂದವತ್ತ್ವಮ್** - ಆದುದರಿಂದಲೇ ನಿರತಿಶಯ ಆನಂದವನ್ನು ಹೊಂದಿರೋಣವು; ಇತರರು ಕೈಙ್ಕರ್ಯಮಾಡುವ ಆವಶ್ಯಕತೆಏನಾದರೂಉಂಟೋ ಎಂಬಾಕ್ಷೇಪಕ್ಕೆ ಆವಶ್ಯಕತೆ ಏನೂ ಇಲ್ಲವಾದರೂ ಅವುಗಳಿಂದ ಪ್ರೀತನಾಗುವನು, ಏಕೆಂದರೆ ಆತನೇ ನಿರತಿಶಯಾನಂದ ಯುಕ್ತನು. ಎಂದು ಹೇಳಿರುವದು ಅನುಸಂಧೇಯವು. ೧೦೪. "ನಿರತಿಶಯ ಭೋಗ್ಯತ್ವಂ" - ಆದುದರಿಂದಲೇ ನಿತ್ಯಮುಕ್ತರುಗಳಿಗೆ ನಿರತಿಶಯ ಭೋಗ್ಯಭೂತನಾಗಿ ಪರಿಪೂರ್ಣನಾದ ತನ್ನ ಅನುಭವವನ್ನುಂಟುಮಾಡೋಣವು. ೧೦೫. **ಸರ್ವಪ್ರಕಾರ ಭೋಗ್ಯತ್ವಮ್** - ಈಷದಪಿ ನ್ಯೂನತೆ ಇಲ್ಲದೆ ಸರ್ವಪ್ರಕಾರದಿಂದಲೂ ಭೋಗ್ಯನಾಗಿರೋಣವು, ಅಥವಾ ಪರ ವ್ಯೂಹ ವಿಭವಾದಿ ಐದು ವಿಧ ರೂಪಗಳಿಂದಲೂ ಭೋಗ್ಯನಾಗಿರೋಣವು. ೧೦೬-

ನುಕೂಲ ಸ್ವಭಾವತ್ವಮ್, ೧೦೭ ಅತ್ಯನ್ತತುಲ್ಯ ಭೋಗಪ್ರದತ್ವಮ್. ೧೦೮. ಆಶ್ರಿತವಿಶ್ಲೇಷಾ ಸಹತ್ವಮ್, ೧೦೯. ಅಪುನರಾವೃತ್ತಿ ಹೇತುತ್ವಮ್,

ಎನ್ರು ಇವೈ ಪ್ರಧಾನಮಾಗ ಮುತ್ತುಮ್ ಇವತ್ತೈ ತುವಕ್ಕವರುವ ವಿಶೇಷಙ್ಗಳುಮೆಲ್ಲಾಮ್ ಅಡೈವೇ ಅನುಸಂಧೇಯಙ್ಗಳ್.

---

೧೦೯ ವರೆಗೂ, ನಾರಾಯಣ ಶಬ್ದದಲ್ಲಿ ನರರ ಸಮೂಹಕ್ಕೆಲ್ಲಾ ಅಯನಂ ಪ್ರಾಪ್ಯನ ಎಂಬರ್ಥಮೂಲಕ ಅರ್ಥವಾಗಿ ತೋರುವ ಗುಣಗಳು ಹೇಳಲ್ಪಟ್ಟಿರುತ್ತವೆ ೧೦೬. ಸರ್ವದಾನುಕೂಲಸ್ವಭಾವತ್ವಮ್ - ಹೀಗೆ ಪ್ರಾಪ್ಯವನ್ನು ಹೊಂದಿದ ಮುಕ್ತನಿಗೆ ಯಾವಾಗಲೂ ಅನುಕೂಲವಾಗಿರುವ ಸ್ವಭಾವ ಉಳ್ಳೋಣವು; ಅತ್ಯರ್ಥ ಪ್ರಿಯನಾದ ತನ್ನ ಭಕ್ತನನ್ನು ತನ್ನಲ್ಲಿಗೆ ಬರಮಾಡಿಕೊಂಡನಂತರ ಪ್ರತಿಕೂಲ ಸ್ವಭಾವವನ್ನು ತೋರಿಸುವನೇ? ಎಂದಿಗೂ ಇಲ್ಲವೆಂಬ ಭಾವವು. ೧೦೭ ಅತ್ಯನ್ತತುಲ್ಯ ಭೋಗಪ್ರದತ್ವಮ್ - ತನ್ನ ಭೋಗಕ್ಕೆ ಅತ್ಯಂತ ಸಮಾನವಾದ ಭೋಗವನ್ನು ಮುಕ್ತನಿಗೆ ಕೊಡೋಣವು. ಅತ್ಯಂತ ಶಬ್ದದಿಂದ ದ್ವೈತ ಸಿದ್ಧಾಂತಿಗಳು ಹೇಳುವ ಹಾಗೆ ಭೋಗದಲ್ಲಿ ತಾರತಮ್ಯ ಉಂಟೆಂಬ ಭಾವವನ್ನು ನಿರಾಕರಿಸಿರುತ್ತಾರೆ. ನಿರಂಜನಃಪರಮಂ ಸಾಮ್ಯಮುಪೈತಿ ಎಂಬಲ್ಲಿರುವ ಪರಮಂ ಸಾಮ್ಯಂ ಎಂಬುದನ್ನನುಸರಿಸಿ ಅತ್ಯನ್ತತುಲ್ಯ ವೆಂಬ ಪ್ರಯೋಗವು. ೧೦೮. ಆಶ್ರಿತವಿಶ್ಲೇಷಾಸಹತ್ವಮ್ - ಆದುದರಿಂದ ಆಶ್ರಯಿಸಿ ಬಂದವನಿಂದ ಪ್ರತ್ಯೇಕಿಸಿರುವುದನ್ನು ಸಹಿಸದಿರುವಿಕೆಯು. ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ ಎಂದಲ್ಲವೇ ಹೇಳಿದ ಮಹನೀಯನು. ೧೦೯. ಅಪುನರಾವೃತ್ತಿ ಹೇತುತ್ವಮ್- ಮುಕ್ತಿಯನ್ನು ಹೊಂದಿದನಂತರ ನಚ ಪುನರಾವರ್ತತೇ, ನಚಪುನರಾವರ್ತತೇ ಎಂದು ಶ್ರುತಿಯು ಹೇಳಿರುವಹಾಗೆ ಇಂತಹ ಅಪುನರಾವೃತ್ತಿಯುಳ್ಳ ದಶೆಯನ್ನು ಹೊಂದಲು ಕಾರಣನಾಗಿರುವಿಕೆಯು. ಹೀಗೆ ಈ ೧೦೯ ಪರಮಾತ್ಮ ಸ್ವರೂಪ ಸ್ವಭಾವಗಳನ್ನೂ, ಇವೈಪ್ರಧಾನ ಮಾಹ ಮುತ್ತುಮ್ ಇವತ್ತೈತುವಕ್ಕಿ ವರುಮ್ ವಿಶೇಷಙ್ಗಳುಮೆಲ್ಲಾಮ್ - ಮತ್ತು ಈಗ ಹೇಳಿದವುಗಳನ್ನೇ ಮುಖ್ಯವಾಗಿಟ್ಟುಕೊಂಡು ಅವುಗಳಿಗೆ ಸಂಬಂಧಿಸಿಕೊಂಡು ಬರುವ ಇತರ ಮಾಹಾತ್ಮ್ಯಗಳೆಲ್ಲವನ್ನೂ, ಅಡೈವೇ - ಹೊಂದೋಣವು, ಅನುಸಂಧೇಯಗಳು. ಈ ಮೂಲ ಮಂತ್ರಾನುಸಂಧಾನದಿಂದ ಉಂಟಾಗುವ, ಪರಮಾತ್ಮನ ಮಹಿಮೆಯನ್ನು ಬೋಧಿಸುವ ೧೦೯ ಗುಣಗಳನ್ನು ಪ್ರದರ್ಶಿಸಿದರು. ಇದನ್ನೇ ಮೂಲಮಂತ್ರೋಪದಿಷ್ಟ ಶ್ರೀಮನ್ನಾರಾಯಣಾಷ್ಟೋತ್ತರ ಶತ ನಾಮಾವಳಿಃ ಎಂದು ದೇವತಾರ್ಚನೆಯ ಕಾಲದಲ್ಲಿ ಅನುಕೂಲಿಸುವಹಾಗೆ ಚತುರ್ಥ್ಯಂತ ಪದಗಳನ್ನಾಗಿ ಮುದ್ರಿಸಬಹುದು. ಮುಮುಕ್ಷುಗಳಿಗೆ ಮೂಲಮಂತ್ರದಲ್ಲಿ ಈ ೧೦೯ ಅರ್ಥಗಳಿವೆ ಎಂದು ಬಹು

ತೇಷು ಅತ್ಯಂತ ಪ್ರಧಾನ ಗುಣಾನ್ ಕಾರಿಕಯಾ ಸಂಗೃಹ್ಣಾತಿ.

---

**ಇಹ ಸಙ್ಗ್ರಹತಃ ಶ್ರೀಮಾನ್ ಗೋಪ್ತಾ ಶೇಷೀ ಸಮಾಧಿಕದರಿದ್ರಃ ।**
**ಶರಣಂ ಸರ್ವಶರೀರೀ ಪ್ರಾಪ್ಯಸ್ಸೇವ್ಯಶ್ಚ ಸಾಧುಭಿರ್ಭಾವ್ಯಃ ॥೮೨॥**

---

ಶೀಘ್ರವಾಗಿ ಮೂಲಮಂತ್ರ ಜಪಕಾಲದಲ್ಲಿ ಅನುಸಂಧಾನ ಮಾಡುವ ಶಕ್ತಿಯುಂಟು. ಆದರೆ ಸಾಧಾರಣರಾದವರಿಗೆ ಆ ಶಕ್ತಿಯಿಲ್ಲವೇ? ಎಂದರೆ ಅಂತಹ ಜಪಕಾಲದಲ್ಲಿ ಪ್ರಧಾನವಾದವುಗಳನ್ನಾದರೂ ಅನುಸಂಧಾನ ಮಾಡಲಿ ಎಂಬ ಕೃಪೆಯಿಂದ ಒಂದು ಕಾರಿಕೆಯ ಮೂಲಕ ಮುಖ್ಯವಾದ ಭಾವಗಳನ್ನು ತಿಳಿಸುತ್ತಾರೆ.

**ಮೇಲೆ ಹೇಳಿದವುಗಳಲ್ಲಿ ತುಂಬಾ ಮುಖ್ಯವಾದವುಗಳನ್ನು ಕಾರಿಕೆಯ ಮೂಲಕ ಸಙ್ಗ್ರಹಿಸಿ ಹೇಳುತ್ತಾರೆ.—**

ಮೇಲೆ ವಿಸ್ತಾರವಾಗಿ "ಸರ್ವಮಷ್ಟಾಕ್ಷರಾಂತಸ್ಥಮ್" ಎಂದು ಹೇಳಿಕೆಗನುಸಾರವಾಗಿ ಅನೇಕ ಭಗವದ್ಗುಣಗಳನ್ನು ಅನುಸಂಧಾನ ಮಾಡಬಹುದೆಂದು ಹೇಳಿದರು. ಆದರೆ ಮಂತ್ರ ಜಪಕಾಲದಲ್ಲಿ ಇಷ್ಟನ್ನೂ ಅನುಸಂಧಾನ ಮಾಡಿದರೆ ಕಾಲವಿಳಂಬವು ಹೆಚ್ಚಾಗುವದರಿಂದ, ಕ್ರಮವಾಗಿ ಅಕಾರ ಮಕಾರಾದಿಗಳಿಂದ ಮುಖ್ಯವಾಗಿ ಅನುಸಂಧೇಯಗಳಾದ ಪ್ರಸಿದ್ಧಾರ್ಥಗಳನ್ನು ಮಾತ್ರ ಸಙ್ಗ್ರಹಿಸಿ ಹೇಳುತ್ತಾರೆ. **ಇಹ** - ಈ ಮೂಲಮಂತ್ರದಲ್ಲಿ, **ಸಾಧುಭಿಃ** - ಸಾಧುಕಾರಿಗಳಾದ ಸುಕೃತಿಗಳಿಂದ ಪ್ರಪದನಾನುಷ್ಠಾನಮಾಡಿ ಕೃತಕೃತ್ಯರಾದವರಿಂದ, **ಸಙ್ಗ್ರಹತಃ ಭಾವ್ಯಃ** - ಸಙ್ಗ್ರಹವಾಗಿ ಅನುಸಂಧಾನ ಮಾಡುವುಗಳಾಗಿವೆ ಯಾವುವು ಎಂದರೆ ಹೇಳುತ್ತಾರೆ. **ಶ್ರೀಮಾನ್** - ಪರಮಾತ್ಮನು ಲಕ್ಷ್ಮೀಯುಕ್ತನಾಗಿಯೇ ಯಾವಾಗಲೂ ಎಂದರೆ ಉಪಾಯನಾಗಿರುವಾಗಲೂ ಉಪೇಯನಾಗಿರುವಾಗಲೂ "ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾ ಕಾರುಣ್ಯ ರೂಪಯಾ । ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷು ಚ ಗೀಯತೇ" ಎಂದು ಹೇಳಿರುವಹಾಗೆ. ಸದಾ ಲಕ್ಷ್ಮೀ ಯುಕ್ತನು. ಇದು ಪ್ರಣವದ ಅಕಾರದಿಂದಲೂ, ಉಕಾರದಿಂದಲೂ ಮತ್ತು ನಾರಾಯಣಾಯ ಎಂಬಲ್ಲಿನ ನಾಥ ಶಬ್ದದಿಂದಲೂ ವ್ಯಕ್ತವು. ೨. **ಗೋಪ್ತಾ** - ಅವ ರಕ್ಷಣೆ ಎಂಬ ಧಾತುವಿನ ಮೂಲಕ ಸರ್ವತ್ರ, ಸರ್ವದಾ, ಸರ್ವಾವಸ್ಥೆಯಲ್ಲೂ ನಿರುಪಾಧಿಕ ರಕ್ಷಕನು. ಈ ಎರಡು ಅರ್ಥಗಳೂ. ಪ್ರಣವದ ಪ್ರಕೃತಿಯಾದ ಅಕಾರದಿಂದ ಬೋಧಿತವೆಂದು ಹೇಳಲ್ಪಟ್ಟಿತು. ೩. **ಸಮಾಧಿಕದರಿದ್ರಃ** - ಅಕಾರದಿಂದ ಜಗತ್ಕಾರಣನೆಂದು ತೋರುವದರಿಂದ ಇಂತಹ ಜಗತ್ತಿನ ಸೃಷ್ಟಿರಕ್ಷಣಗಳನ್ನು ನಡೆಸುವ ಶಕ್ತಿಯು ಇನ್ನು ಯಾರಲ್ಲೂ ಇಲ್ಲದುದರಿಂದ ನಿಸ್ಸಮಾಭ್ಯಧಿಕನು. ಇದು ಚತುರ್ಥಿಯಿಂದ ತೋರುವ ಅರ್ಥವು. ಇತರರಾದ ಎಲ್ಲರೂ ಆತನ ಸೃಷ್ಟಿ ಕ್ರಮಕ್ಕೆ ಸೇರಿದವರಾದುದರಿಂದ ಆತನಿಗೆ ಸಮರೂ ಅಧಿ

ಕರೂ ಇಲ್ಲವು. ಲಕ್ಷ್ಮಿಯು ಸ್ವತಃ ಪತಿಗೆ ಶೇಷಭೂತಳು. ೪. ಶೇಷಿತ್ವಂ-ಇದು ಅಕಾರ ಲುಪ್ತ ಚತುರ್ಥಿಯಿಂದಲೂ ಉಕಾರ ಮಕಾರಾರ್ಥಗಳಿಂದಲೂ ತೋರಿ ಬರುವ ಅರ್ಥವು. ಜೀವಾತ್ಮನೂ ಅವನೊಂದಿಗೆ ಸೇರಿರುವ ಅಚಿತ್ತೂ, ಹೀಗೆ ಇವುಗಳಿಂದ ಕೂಡಿದ ಸರ್ವಜಗತ್ತೂ ಅಂಶ್ಯವ - ಭಗವಂತನಿಗೇಸೇವಿನಾ ಇನ್ನೂ ಯಾರಿಗೂ ಇಲ್ಲವೆಂಬುದರಿಂದ ನಿರುಪಾಧಿಕ ಶೇಷಿತ್ವವು ಪರಮಾತ್ಮನಲ್ಲಿ ಉಂಟಾಯಿತು. ಈ ಶೇಷಿತ್ವವು "ಉಭಯಾಧಿಷ್ಠಾನಂ ಚೈಕಶೇಷಿತ್ವಮ್" ಎಂದು ಹೇಳಲ್ಪಟ್ಟಿರುವದರಿಂದಲೂ, ಶ್ರೀಮಾನ್ ಎಂದು ಲಕ್ಷ್ಮಿಯ ನಿತ್ಯಯೋಗವು ಪ್ರಥಮದಲ್ಲೇ ಹೇಳಲ್ಪಟ್ಟಿರುವದರಿಂದಲೂ, ಲಕ್ಷ್ಮಿಯೊಂದಿಗೆ ಶೇಷಿ ಎಂಬರ್ಥವೂ ಉಂಟಾಗುತ್ತದೆ. ಅಥವಾ ಉಕಾರವು ಲಕ್ಷ್ಮಿಯನ್ನು ಬೋಧಿಸುತ್ತದೆಂದು ಭಾವಿಸಿದರೂ ಶೇಷಿತ್ವವು ಉಭಯಾಧಿಷ್ಠಾನವಾದುದೆಂದೇ ಏರ್ಪಡುತ್ತದೆ. ೫. ಶರಣಮ್ - ಆತನೇ ನಮಗೆ ಮಾರ್ಗ ತೋರಿಸುವ ಸಿದ್ಧೋಪಾಯನು. ಹಿಂದೆ ಪಸ್ಥಾನಕಾರ ಉದ್ದಿಷ್ಟೋ ಮಃ ಪ್ರಧಾನ ಉದೀರತಃ। ವಿಸರ್ಗಃ ಪರಮೋ ಶಸ್ತು ಎಂದು ಹೇಳಲ್ಪಟ್ಟ ನಿರುಕ್ತಿಯನ್ನು ಮನಸ್ಸಿನಲ್ಲಿಟ್ಟರೆ ಈ ಭಾವನೆಯುಂಟಾಗುತ್ತದೆ. ಅದೂ ಅಲ್ಲದೆ ತನಗೆ ಯಾವ ಸ್ವಾತಂತ್ರ್ಯವೂ ತನಗಿಲ್ಲವು; ಮಃ ವ ಎಂಬುದರಿಂದ ತನ್ನನ್ನು ತಾನು ರಕ್ಷಿಸಿಕೊಳ್ಳೋಣವೆಂಬುದು ತನಗಿಲ್ಲವೆಂದು ಏರ್ಪಡುತ್ತದೆ. ಸಾಧ್ಯೋಪಾಯವನ್ನು ಮಾಡಿಸುವ ಹಾಗೆ ಮಾಡಿ, ಅನಂತರವೂ ಕಾಪಾಡಿ ನಿರ್ಯಾಣ ಮತ್ತು ಅರ್ಚಿರಾದಿ ಗತಿಯನ್ನುಂಟುಮಾಡಿ, ಹೀಗೆ ಸರ್ವವಿಧದಲ್ಲೂ ಉಪಕಾರಕನಾಗಿ ಶರಣನು.

೬. ಸರ್ವಶರೀರೀ—ನಾರಾಃ ಅಯನಂ ಯಸ್ಯ ಎಂಬ ಬಹುವ್ರೀಹಿ ವ್ಯುತ್ಪತ್ತಿ ಮೂಲಕ ಸರ್ವಕ್ಕೂ ಶ್ರೀಮನ್ನಾರಾಯಣನು ಆತ್ಮಾ; ಆದುದರಿಂದ ಸರ್ವಶರೀರಿಯು, ೭. ಪ್ರಾಪ್ಯಃ—ಇದು ನಾರಾಣಾಂ ಅಯನಂ ಎಂಬ ಷಷ್ಠೀ ತತ್ಪುರುಷ ವ್ಯುತ್ಪತ್ತಿಯಿಂದ ಶ್ರೀಮನ್ನಾರಾಯಣನೇ ಪ್ರಾಪ್ಯನು. ೮. ಸೇವ್ಯಃ—ಇದು ನಾರಾಯಣಾಯ ಎಂಬಲ್ಲಿರುವ ವ್ಯಕ್ತ ಚತುರ್ಥಿಯ ಅರ್ಥವು. ದಿವ್ಯವೈಕುಂಠದಲ್ಲಿ ನಿತ್ಯಕೈಙ್ಕರ್ಯವನ್ನು ಹೊಂದಿ ಪರಿಪೂರ್ಣಬ್ರಹ್ಮಾನುಭವರೂಪಾನಂದವನ್ನುಂಟುಮಾಡುವವನು. ಹೀಗೆ ಅಷ್ಟಾಕ್ಷರದಲ್ಲಿ ಈ ಮಹತ್ತಾದ ಅಷ್ಟಾರ್ಥಗಳನ್ನಾದರೂ ಮನ್ತ್ರೋಪಾಸನಕಾಲದಲ್ಲಿ ಭಾವಿಸತಕ್ಕದ್ದೆಂದು ಹೇಳಲ್ಪಟ್ಟಿತು.

ಶ್ರೀ ಪರಾಶರ ಭಟ್ಟರ ಅಷ್ಟಶ್ಲೋಕಿಯಲ್ಲಿ ನಾಲ್ಕು ಶ್ಲೋಕಗಳಿಂದ ಮೂಲಮನ್ತ್ರಾರ್ಥದ ಮುಖ್ಯಾರ್ಥಗಳನ್ನು ಹೇಳಿರುತ್ತಾರೆ. ಅಲ್ಲಿ ಹೇಳಿರುವ ಪ್ರಕಾರ, ಅರ್ಥಗಳು ಯಾವುವೆಂದರೆ.

೧. ಅಕಾರದಿಂದ ವಿಷ್ಣುವು ಜಗತ್ತಿನ ಸೃಷ್ಟಿಸ್ಥಿತಿಲಯಗಳ ಅಧಿಕಾರಿಯು, ೨. ಮಕಾರ ವಾಚ್ಯಜೀವನು ಆತನ ಸ್ವತ್ತು; ೩. ಆತನು ಶ್ರಿಯಃಪತಿಯು, ೪ ಜೀವನು ಪರಮಪುರುಷನಿಗೆ ಶೇಷಭೂತನು. ೫ ಜೀವಾತ್ಮರೂ ಮತ್ತು ಶುದ್ಧ ಸತ್ವ ಮಿಶ್ರಸತ್ವ

### ಅಥ ಮೂಲಮನ್ತ್ರೇ ಅನುಸಂಧೇಯ ಜೀವಗುಣಾನಾಹ

ಇಪ್ಪಡಿ ಪ್ರಾಪ್ಯನಾನ ಪರಮಾತ್ಮಾವೈ ಪ್ರಾಪಿಕ್ಕುಮ್ ಜೀವಾತ್ಮಾ ಇತ್ತಿರುಮನ್ತ್ರತ್ತಾಲೇ ಅನುಸಂಧೇಯನಾಮ್ಪೋದು, ೧. ಶ್ರೀಮದ್ರಕ್ಷ್ಯತ್ವಂ

---

ಸತ್ವಶೂನ್ಯಗಳಾದ ತ್ರಿವಿಧ ಅಚೇತನಗಳೂ ಆತನಿಗೆ ಶೇಷಭೂತವು. ೬. **ನಮ** ಶ್ಶಬ್ದದಿಂದ ಜೀವಾತ್ಮನು ಲಕ್ಷ್ಮೀನಾರಾಯಣರಿಗೇ ಶೇಷಭೂತನು; ಅದರಿಂದ ಸ್ವಶೇಷತ್ವ ನಿವೃತ್ತಿಯು. ೭. ಸ್ವರಕ್ಷಣೋಪಾಯವು ತನಗಿಲ್ಲವು. ಪರಮಾತ್ಮನಿಗೇ, ಅನನ್ಯಾರ್ಹಶೇಷತ್ವವು ಬೋಧಿತವು, ಅನನ್ಯಶರಣತ್ವವು. ೮. ಮಾಡುವ ಸತ್ಕರ್ಮಗಳೆಲ್ಲಾ ಕೈಙ್ಕರ್ಯರೂಪದಲ್ಲಿ ಪರಮಾತ್ಮನಿಗೇನೇ, ತನಗಲ್ಲವು. **ನಾರಾಯಣ** ಶಬ್ದದಿಂದ ಅನನ್ಯಭೋಗ್ಯತ್ವವು, ೯. ನಿತ್ಯವಾದವುಗಳಿಗೆಲ್ಲಾ ಆಧಾರನು, ಪ್ರಾಪ್ಯನು, ಪ್ರಾಪಕನು. ೧೦. ನಿತ್ಯವಾದವುಗಳನ್ನೆಲ್ಲಾ ಪ್ರವೇಶಿಸಿ ಅಂತರಾತ್ಮಾವಾಗಿರುವವನು. ೧೧. ಜ್ಞಾನಸ್ವರೂಪಜ್ಞಾಗುಣಕನಾದ ಜೀವಾತ್ಮನು ದೇಹಕ್ಕಿಂತ ಬೇರೆಯಾಗಿ ವಿಲಕ್ಷಣನು. ೧೨. ಜೀವಾತ್ಮನು ಸ್ವತಂತ್ರನಲ್ಲವು, ಸರ್ವರಕ್ಷಕನಾಗಿ ಸರ್ವಕಾರಣನಾಗಿ ಕಲ್ಯಾಣಗುಣಮಹೋದಧಿಗೆ ಶೇಷಭೂತನು.

### ಮುಂದೆ ಮೂಲ ಮಂತ್ರದಲ್ಲಿ ಅನುಸಂಧಾನಮಾಡಬಹುದಾದ ಜೀವಾತ್ಮನ ಗುಣಗಳನ್ನು ಹೇಳುತ್ತಾರೆ.

---

ಹಿಂದೆ ಪ್ರಾಪ್ಯನಾದ ಶ್ರೀಮನ್ನಾರಾಯಣನ ೧೦೮ ಗುಣಗಳನ್ನು ಮೂಲಮನ್ತ್ರದಲ್ಲಿ ಅನುಸಂಧಾನ ಮಾಡಬಹುದೆಂದೂ, ಅಷ್ಟನ್ನೂ ಜ್ಞಾಪಕದಲ್ಲಿಡಲು ಕಷ್ಟವಾದರೆ ಮುಖ್ಯವಾದ ಎಂಟನ್ನಾದರೂ ಇಡತಕ್ಕದ್ದೆಂದೂ ಹೇಳಿ, ಸುಲಭವಾಗಿ ಜ್ಞಾಪಕದಲ್ಲಿಡುವದಕ್ಕಾಗಿ ಕಾರಿಕೆಯನ್ನೂ ಅನುಗ್ರಹಿಸಿದರು. "ಸರ್ವಂ ಅಷ್ಟಾಕ್ಷರಾಂತಸ್ಥಮ್" ಎಂಬ ಹೇಳಿಕೆಯನ್ನು ಮನಸ್ಸಿನಲ್ಲಿಟ್ಟು ಪ್ರಾಪ್ತಾವಾದ ಜೀವಾತ್ಮನ ಯಾವ ಗುಣಜಾತವನ್ನೆಲ್ಲಾ ಅಷ್ಟಾಕ್ಷರದಿಂದ ಗ್ರಹಿಸಬಹುದೆಂಬುದನ್ನೂ ಕ್ರಮವಾಗಿ ಹೇಳುತ್ತಾರೆ.—ಪ್ರಣವದ ಅಕಾರದಿಂದ **ತೋರುವ** ಐದು ಗುಣಗಳನ್ನು ಮೊದಲು ತಿಳಿಸುತ್ತಾರ.—ಇಪ್ಪಡಿ - ಮೇಲೆ ತಿಳಿಸಿದ ರೀತಿಯಲ್ಲಿ; **ಪ್ರಾಪ್ಯನಾದ ಪರಮಾತ್ಮನನ್ನು.** ಪ್ರಾಪಿಕ್ಕುಮ್ ಜೀವಾತ್ಮ – ದಿವ್ಯ ವೈಕುಂಠದಲ್ಲಿ ಹೋಗಿ ಸೇರುವ ಜೀವಾತ್ಮನು, ಇತ್ತಿರುಮನ್ತ್ರತ್ತಾಲೇ ಅನುಸಂ**ಧೇಯನಾಂ ಪೋದು** – ಈ ಮೂಲಮನ್ತ್ರದಲ್ಲಿ ಅನುಸಂಧಾನ ಮಾಡಲ್ಪಡುವಾಗ, **ಯಾವ** ಯಾವುವು ತೋರಿಬರುತ್ತವೆ ಎಂದರೆ ಹೇಳುತ್ತಾರೆ.—ಅಕಾರದಿಂದ ಅನುಸಂಧೇಯವಾದ ಐದು ಗುಣಗಳು.

೧. ಶ್ರೀಮದ್ರಕ್ಷ್ಯತ್ವಂ—ಲಕ್ಷ್ಮೀಯುಕ್ತನಾದ ನಾರಾಯಣನಿಂದ ರಕ್ಷಿಸಲ್ಪಡಲು ಯೋಗ್ಯನಾಗಿರುವಿಕೆಯು. "ಲಕ್ಷ್ಮ್ಯಾ ಸಹ **ಹೃಷೀಕೇಶೋ ದೇವ್ಯಾ**

೨ ಅನನ್ಯರಕ್ಷ್ಯತ್ವಂ, ೩ ಸರ್ವತ್ರ ಸರ್ವದಾ ಸರ್ವಪ್ರಕಾರ ರಕ್ಷ್ಯತ್ವಂ, ೪ ಸುಶೀಲ ರಕ್ಷಕವತ್ತ್ವಮ್, ೫. ಪುರುಷಕಾರವತ್ತ್ವಂ, ೬. ಮಹಾವಿಶ್ವಾಸಯೋಗಿತ್ವಂ ೭. ಸಲಕ್ಷ್ಮೀಕದಾಸತ್ವಮ್, ೮. ನಿತ್ಯದಾಸತ್ವಂ ೯. ನಿರುಪಾಧಿಕ ದಾಸತ್ವಂ ೧೦. ಅನನ್ಯಾರ್ಹ (ಶೇಷತ್ವಂ) ದಾಸತ್ವಮ್. ೧೧. ಜ್ಞಾನತ್ವಮ್, ೧೨. ಆನಂದತ್ವಂ, ೧೩. ಸ್ವಯಂ ಪ್ರಕಾಶತ್ವಮ್ ೧೪ ಸ್ವಸ್ಮೈ ಭಾಸಮಾನತ್ವಂ

---

ಕಾರುಣ್ಯರೂಪಯಾ । ರಕ್ಷಕಃ" ಎಂಬ ಪ್ರಮಾಣವು ಅನುಸಂಧೇಯವು- ಲಕ್ಷ್ಮಿಯ ಉಪಾಯತ್ವ ಪುರುಷಕಾರತ್ವಗಳು ಹೇಳಲ್ಪಟ್ಟವು. ೨. **ಅನನ್ಯರಕ್ಷ್ಯತ್ವಂ** ಶ್ರಿಯಃಪತಿಯಲ್ಲದೆ ಇನ್ನು ಯಾರಿಂದಲೂ ರಕ್ಷಿಸಲ್ಪಡಲು ಯೋಗ್ಯನಲ್ಲದಿರುವಿಕೆಯು. ೩. **ಸರ್ವತ್ರ ಸರ್ವದಾ ಸರ್ವಪ್ರಕಾರರಕ್ಷ್ಯತ್ವಂ**—ಇವು ಮೇಲಿನ ಎರಡು ಗುಣಗಳಿಂದುಂಟಾಗುವ ಭಾವವು; ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ ರಕ್ಷಿಸಲ್ಪಡುವಿಕೆಯು. ೪. **ಸುಶೀಲರಕ್ಷಕವತ್ತ್ವಮ್**—ಸದಾಚಾರಶೀಲನಾಗಿ ಸಾಧುವಾಗಿದ್ದರೇನೇ ರಕ್ಷಿಸಲ್ಪಡೋಣವು. ೫. **ಪುರುಷಕಾರವತ್ವಂ**—ಲಕ್ಷ್ಮಿಯು ಪುರುಷಕಾರರೂಪಸಹಾಯವನ್ನು ಹೊಂದಿರೋಣವು. ಮುಂದೆ ಲುಪ್ತಚತುರ್ಥಿಯಿಂದ ತೋರಿಬರುವ ನಾಲ್ಕು ಗುಣಗಳು ಹೇಳಲ್ಪಡುವವು- ೬. **ಮಹಾವಿಶ್ವಾಸಯೋಗಿತ್ವಮ್**—ಶ್ರೀಮನ್ನಾರಾಯಣನು ರಕ್ಷಿಸಿಯೇ ರಕ್ಷಿಸುವನೆಂಬ ಸಂಪೂರ್ಣ ವಿಶ್ವಾಸವನ್ನು ಹೊಂದಿರೋಣವು. ಇದು ಉಕಾರಾರ್ಥವು. ೭. **ಸಲಕ್ಷ್ಮೀಕ ದಾಸತ್ವಮ್**—ಲಕ್ಷ್ಮಿಯೊಂದಿಗಿರುವ ಪರಮಾತ್ಮನಿಗೇ ತಾನು ದಾಸನು, ಶೇಷನು ಎಂಬ ಭಾವು, ಇದು ಉಕಾರಾರ್ಥವು. ೮. **ನಿತ್ಯದಾಸತ್ವಮ್**—"ದಾಸಭೂತಾಸ್ಸ್ವತಸ್ಸರ್ವೇ" ಎಂಬಲ್ಲಿ ಹೇಳಿರುವ ಹಾಗೆ ಸದಾ ಪರಮಾತ್ಮನಿಗೆ ತಾನು ದಾಸನಾಗಿರುವದು. ೯. **ನಿರುಪಾಧಿಕದಾಸತ್ವಮ್**—ಲೋಕದ ದಾಸತ್ವದ ಹಾಗೆ ಉಪಾಧಿಯುಕ್ತವಾಗಿರದೆ ನಿರುಪಾಧಿಕ ದಾಸತ್ವವು. ೧೦. **ಅನನ್ಯಾರ್ಹಶೇಷತ್ವಮ್ ದಾಸತ್ವಂ**—ಇನ್ನು ಯಾರಿಗೂ ಯೋಗ್ಯವಲ್ಲದ ದಾಸತ್ವವು.

ಮುಂದೆ ಮಕಾರದಿಂದ ತೋರುವ ೧೪ ಗುಣಗಳನ್ನು ಉಪದೇಶಿಸುತ್ತಾರೆ.-

೧೧. **ಜ್ಞಾನತ್ವಂ**—ಜ್ಞಾನಸ್ವರೂಪನಾಗಿಯೂ ಜ್ಞಾನಗುಣಕನಾಗಿಯೂ ಇರುವಿಕೆಯು. ಇದರಿಂದ ೨೪ ಅಚೇತನ ತತ್ತ್ವಕ್ಕಿಂತ ವೈಲಕ್ಷಣ್ಯವು ಹೇಳಲ್ಪಟ್ಟಿತು. ೧೨. **ಆನಂದತ್ವಂ**—ಯಾವಾಗ ಜ್ಞಾನಸ್ವರೂಪನೋ ಆಗ ಎಲ್ಲವೂ ಅನುಕೂಲವಾಗಿ, ದುಃಖಸಂಬಂಧವಿಲ್ಲದೆ ಆನಂದಸ್ವರೂಪನಾಗಿರುವಿಕೆಯು. ಇದರಿಂದ ಅಮಲತ್ವವೂ ಏರ್ಪಟ್ಟಿತು. ಇದನ್ನು ಮುಂದೆ ಹೇಳುತ್ತಾರೆ. ೧೩. **ಸ್ವಯಂಪ್ರಕಾಶತ್ವಮ್**—ಸ್ವತಃ ಪ್ರಕಾಶನಾಗಿರೋಣವು. ೧೪. **ಸ್ವಸ್ಮೈಭಾಸಮಾನತ್ವಂ**—ಆದುದರಿಂದಲೇ, ತನಗೆ ತಾನೇ ಅಹಂ ಎಂದು ತೋರೋಣವು. ಇದಕ್ಕೆ ಪ್ರತ್ಯಕ್ತ್ವವೆಂದೂ ಹೆಸರು. ೧೫ ಆದುದರಿಂದಲೇ, ಅಹಂಶಬ್ದವಾಚ್ಯತ್ವಂ-

**೧೫. ಅಹಂ ಶಬ್ದವಾಚ್ಯತ್ವಂ, ೧೬. ಅಣುಪರಿಮಾಣತ್ವಂ, ೧೭. ಸೂಕ್ಷ್ಮತ್ವಂ (೧೮) ಛೇದನಾದ್ಯನರ್ಹತ್ವಂ, ೧೯. ಚತುರ್ವಿಂಶತಿ ತತ್ವ ವಿಲಕ್ಷಣತ್ವಂ. ೨೦ ಅಮಲತ್ವಮ್ ೨೧। ಈಶ್ವರಾದನ್ಯತ್ವಮ್, ೨೨ ಜ್ಞಾತೃತ್ವಮ್**

---

ಅಹಂ ಅಹಂ ಎಂದು ತೋರಿಬರುವವರಿಂದ ಅಹಂಶಬ್ದದಿಂದ ವ್ಯವಹರಿಸಲ್ಪಡೋಣವು. ೧೬, **ಅಣುಪರಿಮಾಣತ್ವಂ**—"ಏಷೋಽಣುರಾತ್ಮಾ," "ವಾಲಾಗ್ರಶತ ಭಾಗಸ್ಯ" ಇತ್ಯಾದ ಶ್ರುತಿಗಳಲ್ಲಿ ಹೇಳಿರುವ ಹಾಗೆ ಅಣುವಿನಷ್ಟು ಪರಿಮಾಣವನ್ನು ಹೊಂದಿರೋಣವು. ಈ ಅರ್ಥವು ಹೇಗೆ ಉಂಟಾಯಿತೆಂಬ ಸಂದರ್ಭದಲ್ಲಿ "ಮಸ ಪರಿಮಾಣೇ" ಎಂಬ ಧಾತುವಿನಿಂದ ಉಂಟಾಯಿತೆಂದು ಹೇಳಲ್ಪಟ್ಟಿರುತ್ತದೆ. ಇದರಿಂದ ಭಗವಂತನಿಗಿಂತ ವ್ಯತ್ಯಾಸವು ಹೇಳಲ್ಪಟ್ಟಿತು. ೧೭. ಆ ಕಾರಣದಿಂದ **ಸೂಕ್ಷ್ಮತ್ವಂ**—ಅತಿಸೂಕ್ಷ್ಮವಾಗಿರೋಣವು. ೧೮. ಆದುದರಿಂದಲೇ **ಛೇದನಾದ್ಯನರ್ಹತ್ವಂ**—ಅತಿ ಸೂಕ್ಷ್ಮವಾದುದರಿಂದ ಈ ಆತ್ಮನನ್ನು ಭಗವಂತನಲ್ಲದೆ ಯಾವ ವಸ್ತುವೂ ವ್ಯಾಪಿಸಲಾರದಾದುದರಿಂದ ಅಚ್ಛೇದ್ಯನಾಗಿರೋಣವು, ಎಂದರೆ ಕತ್ತರಿಸಲು ಸಾಧ್ಯನಲ್ಲದಿರೋಣವು. ಆದಿಶಬ್ದವು ಗೀತೆಯಲ್ಲಿ "ಅಚ್ಛೇದ್ಯೋಽಹಂ ಅದಾಹ್ಯೋಽಯಂ ಅಕ್ಲೇದ್ಯೋಽಶೋಷ್ಯ ಏವಚ" ಎಂಬಲ್ಲಿ ಹೇಳಿರುವ ಹಾಗೆ ದಹಿಸಲ್ಪಡಲು, ತೋಯಿಸಲ್ಪಡಲು, ಶೋಷಿಸಲ್ಪಡಲೂ ಸಾಧ್ಯವಿಲ್ಲದಿರೋಣವು ಹೇಳಲ್ಪಟ್ಟಿತು. ೧೯. **ಚತುರ್ವಿಂಶತಿ ತತ್ವವಿಲಕ್ಷಣತ್ವಮ್**—ಜ್ಞಾನತ್ವದಿಂದ ಏರ್ಪಟ್ಟ ಲಕ್ಷಣವೆಂಬು ಮೇಲೆಯೇ ಹೇಳಲ್ಪಟ್ಟಿರುತ್ತದೆ. ಆದುದರಿಂದ ೨೪ ಜಡ ಪ್ರಕೃತಿಗಳಿಗಿಂತಲೂ ವಿಲಕ್ಷಣನಾಗಿರೋಣವು. ೨೦. **ಅಮಲತ್ವಂ**—ಇಂತಹ ಹೇಯವಾದ ಪ್ರಕೃತಿಸಂಬಂಧವಿಲ್ಲದುದರಿಂದಲೂ ಸ್ವರೂಪತಃ ಪರಿಶುದ್ಧನಾಗಿರುವಿಕೆಯು; ಆದುದರಿಂದ ಆತ್ಮನು ಪುಮಾನ್ ಎಂದು ಹೇಳಲ್ಪಡುವನು. "ಪುಮಾನ್ **ನ ದೇವೋ ನನರೋ**" ಎಂಬ ವಿ. ಪು. ಶ್ಲೋಕವು ಅನುಸಂಧೇಯವು. ೨೧. **ಈಶ್ವರಾನ್ಯತ್ವಂ** - ಸರ್ವೇಶ್ವರನಿಗಿಂತ ಬೇರೆಯಾದವನು; ಮಕಾರವಾಚ್ಯನು ಅಕಾರವಾಚ್ಯನಿಗೇ ಶೇಷಭೂತನೆಂಬರ್ಥದಿಂದ ವ್ಯಕ್ತವು. "**ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ**" (ಶ್ವೇ. ೧.೬) ಎಂಬ ಶ್ರುತಿಯು, ಮತ್ತು ಗೀತೆಯಲ್ಲಿ **ಉತ್ತಮಃ ಪುರುಷಸ್ತ್ವನ್ಯಃ**" ಎಂಬುದರಿಂದಲೂ ಸುವ್ಯಕ್ತವು. ಜೀವಾತ್ಮನು ಅಣುವಾದುದರಿಂದ ವಿಭುವಾದ ಪರಮಾತ್ಮನಿಗಿಂತ ಭಿನ್ನನು; ಜಗದ್ವ್ಯಾಪಾರ **ವರ್ಜಮ್** ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಹಾಗೆ ಜಗದ್ವ್ಯಾಪಾರಗಳಾದ ಸೃಷ್ಟಿ ಸ್ಥಿತಿ ಲಯವ್ಯಾಪಾರಗಳಿಲ್ಲದವನು. ೨೨. **ಜ್ಞಾತೃತ್ವಮ್**-ಜ್ಞಾತಾವಾಗಿರುವಿಕೆಯು, ಪರಮಾತ್ಮನು "ಪ್ರಾಜ್ಞೋಽಯಮ್" ಇವನು ಜ್ಞಾತಾ "ಜ್ಞೋಽತಏವ" ಎಂಬ ಬ್ರಹ್ಮಸೂತ್ರದಲ್ಲಿ ಇದು ಉಪಪಾದಿತವು. "**ಘ್ರಾಣಮುಹಂಜಾನಾಮಿ**" ಎಂಬುದರಿಂದ ಈತನು ಜ್ಞಾತಾ. ಮನಜ್ಞಾನೇ ಎಂಬ ಧಾತ್ವರ್ಥದಿಂದುಂಟಾಗುವ

**ಆನುಕೂಲ್ಯಾದಿ ಯೋಗ್ಯತ್ವಮ್, ೨೪. ಪರಮಪುರುಷಾರ್ಥಾಪೇಕ್ಷತ್ವಮ್ ೨೫ ನಿಯೋಗ ಯೋಗ್ಯತ್ವಮ್, ೨೬. ಕೈಂಕರ್ಯಯೋಗ್ಯತ್ವಮ್, ೨೭ ಸರ್ವ ಸಾಕ್ಷಾತ್ಕಾರಯೋಗ್ಯತ್ವಮ್, ೨೮. ನಿರತಿಶಯಾನಂದಯೋಗ್ಯತ್ವಮ್, ೨೯. ಪರಾಪೇಕ್ಷಕರ್ತೃತ್ವಮ್, ೩೦. ಸೋಪಾಧಿಕಸ್ವಾಮಿತ್ವಮ್, ೩೧. ಭಾಗವತ**

---

ಅರ್ಥವು. ಯಾವಾಗ ಜ್ಞಾನಸ್ವರೂಪ ಜ್ಞಾನಗುಣಕನೋ, ಆಗ ಕರ್ತೃವ್ಯುತ್ಪತ್ತಿ ಯಿಂದ ಜ್ಞಾತಾವು ಹೌದು. ೨೩. **ಅನುಕೂಲ್ಯಾದಿ ಯೋಗ್ಯತ್ವಮ್** - ಯಾವಾಗ ಪ್ರಕೃತಿ ಸಂಬಂಧ ತೊಲಗಿ ಪರಿಶುದ್ಧನಾದನೋ, ಆಗ ಆತನಿಗೆ ಸರ್ವವೂ ಅನುಕೂಲವೇ; ಇಂತಹ ಸ್ಥಿತಿಗೆ ಯೋಗ್ಯನು. ಆದಿ ಪದದಿಂದ ಪ್ರಾತಿ ಕೂಲ್ಯ ನಿವೃತ್ತಿಯು ಬೋಧಿತವು. ೨೪. **ಪರಮಪುರುಷಾರ್ಥಾಪೇಕ್ಷಾರ್ಹ ತ್ವಮ್** – ಹೀಗೆ ಜ್ಞಾತಾವಾದುದರಿಂದ ಪರಮಪುರುಷಾರ್ಥದ ಮಹಿಮೆಯನ್ನು ಗ್ರಹಿಸಿ ಅದನ್ನು ಅಪೇಕ್ಷಿಸುವ ಯೋಗ್ಯತೆಯನ್ನು ಹೊಂದಿರೋಣವು. ೨೫. **ನಿಯೋಗಯೋಗ್ಯತ್ವಮ್** – ಶಾಸ್ತ್ರದ ವಿಧಿ ನಿಷೇಧ ವಾಕ್ಯಗಳ ನಿಯಮನಾನು ಸಾರ ನಡೆಯುವ ಅರ್ಹತೆಯು, ಅಥವಾ ಪರಿಶುದ್ಧಾತ್ಮ ಸ್ವರೂಪ ಪ್ರಾಪ್ತಿಯಲ್ಲಿ ಪ್ರಾಪ್ಯದ ನಿಯಮನಾನುಸಾರವಾಗಿ ನಡೆಯುವ ಯೋಗ್ಯತೆಯು.. ೨೬. **ಕೈಙ್ಕರ್ಯ ಯೋಗ್ಯತ್ವಮ್** - ಭಗವಂತನ ನಿತ್ಯ ಕೈಙ್ಕರ್ಯಪ್ರಾಪ್ತಿಯೇ ಪರಮಪುರುಷಾರ್ಥ ವೆಂದು ತಿಳಿದುದರಿಂದ ಅಂತಹ ಕೈಙ್ಕರ್ಯವನ್ನು ಮಾಡುವದಕ್ಕೆ ಅರ್ಹನಾಗಿರು ವಿಕೆಯು. ೨೭. **ಸರ್ವಸಾಕ್ಷಾತ್ಕಾರ ಯೋಗ್ಯತ್ವಮ್** - ಹೀಗೆ ನಿತ್ಯ ಕೈಙ್ಕರ್ಯ ವನ್ನು ಮಾಡುವ ಮುಕ್ತಿ ದಶೆಯಲ್ಲಿ ಸರ್ವಜ್ಞತ್ವಾದಿಗಳನ್ನು ಹೊಂದಿರುವ ಸ್ಥಿತಿಯು **"ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್"** ಎಂಬ ಬ್ರಹ್ಮಸೂತ್ರದಲ್ಲೂ **"ಸ್ವೇನ ರೂಪೇಣಾಭಿ ನಿಷ್ಪದ್ಯತೇ"** ಎಂಬ ಶ್ರುತಿಯಲ್ಲೂ ಹೇಳಿರುವ ಸಮಸ್ತ ವನ್ನೂ ಏಕ ಕಾಲದಲ್ಲೇ ಸಾಕ್ಷಾತ್ಕರಿಸುವ ಯೋಗ್ಯತೆಯನ್ನು ಹೊಂದೋಣವು. ೨೮. "**ನಿರತಿಶಯಾನಂದ ಯೋಗ್ಯತ್ವಮ್** - ಆನಂದವಲ್ಲಿಯಲ್ಲಿ ಮುಕ್ತನಾದ ದಶೆಯಲ್ಲಿ ಜೀವಾತ್ಮನ ಆನಂದವು ಪರಮಾತ್ಮನ ಆನಂದಕ್ಕೆ ಸಮಾನವಾಗುತ್ತ ದೆಂದು **ನಿರಂಜನಃ ಪರಮಂ ಸಾಮ್ಯಮುಪೈತಿ** ಎಂಬ ಶ್ರುತಿಯಲ್ಲಿ ಹೇಳಿರುವದ ರಿಂದ ಅಂತಹ ನಿರತಿಶಯಾನಂದವನ್ನು ಹೊಂದಲು ಯೋಗ್ಯತೆಯು, ಮೇಲಿನ ಇವೆಲ್ಲಾ ಆತ್ಮಾ ಮಕಾರವಾಚ್ಯನಾಗಿ ಜ್ಞಾನೈಕ ರೂಪನಾಗಿರುವದರಿಂದ ಉಂಟಾ ಗುವುವು. ಇನ್ನು ಮುಂದೆ ನಮಶ್ಶಬ್ದದಿಂದ ತೋರಿಬರುವ ಮಃ ಎಂಬುದರಿಂದ ೪ ಗುಣಗಳೂ ಹೇಳಲ್ಪಡುವುವು. ನಮಃ ಎಂಬುದರಿಂದ ೬ ಗುಣಗಳೂ ಹೇಳ ಲ್ಪಡುತ್ತೆ. ೨೯. **ಪರಾಪೇಕ್ಷ ಕರ್ತೃತ್ವಮ್**–ಪರಮಾತ್ಮಾಧೀನವಾದ ಕರ್ತೃ ತ್ವವು. **"ಪರಾತ್ತು ತಚ್ಛ್ರುತೇಃ"** (೨. ೩. ೪೦) ಎಂಬ ಬ್ರಹ್ಮ ಸೂತ್ರ ದಲ್ಲೂ, **ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ ಮತ್ತಸ್ಸ್ಮೃತಿರ್ಜ್ಞಾನಮಪೋ**

**ಶೇಷತ್ವಮ್ ೩೨ ಭಾಗವತ ಕಿಂಕರತ್ವಮ್, ೩೩. ಅನನ್ಯೋಪಾಯತ್ವಮ್ ೩೪. ಅವಿದ್ಯಾದಿಮತ್ತ್ವಂ, ೩೫. ಕರಣಾದಿ ಸಾಪೇಕ್ಷ ಜ್ಞಾನವಿಕಾಸತ್ವಮ್ ೩೬. ಸಂಸಾರ ಭಯಾಕ್ರಾನ್ತತ್ವಮ್, ೩೭. ಅವಿದ್ಯಾನಿವೃತ್ತಿಸಾಪೇಕ್ಷತ್ವಮ್,**

---

**ಹನಂಚ** (ಗೀ. ೧೫. ೧೫) ಎಂಬ ಗೀತಾ ವಾಕ್ಯದಲ್ಲೂ, "**ಅನ್ತಃಪ್ರವಿಷ್ಟ ಶ್ಶಾಸ್ತಾ ಜನಾನಾಂ ಸರ್ವಾತ್ಮಾ**" (ಯ. ಆ. ೩. ೧೧) ಎಂಬ ಶ್ರುತಿಯಲ್ಲೂ ವ್ಯಕ್ತವು. ಇದು ನಮಸ್ಸಿನ **ನಮಮ** ಎಂಬರ್ಥದಿಂದ ದ್ಯೋತಿತವು. ೩೦. **ಸೋಪಾಧಿಕ ಸ್ವಾಮಿತ್ವಮ್** - ಶೇಷಿಯಾದ ಭಗವಂತನಿಂದ ಉಪಾಧಿಯಾದ ಕರ್ಮಾನುಭವದ ಅನುಗುಣವಾಗಿ ಶೇಷನಿಗೆ ಅನುಗ್ರಹಿಸಲ್ಪಟ್ಟ ಕ್ಷೇತ್ರಗೃಹ ವಸ್ತು ಮೊದಲಾದವುಗಳ ಮತ್ತು ಪುತ್ರ ಕಳತ್ರ ಭೃತ್ಯಾದಿಗಳ ವಿಷಯದಲ್ಲಿ ಸ್ವಾಮಿತ್ವವು. **ನಮಮ** ಎಂಬುದರ ವ್ಯಾಖ್ಯಾನದಲ್ಲಿ ಬೋಧಿತವು. ೩೧. **ಭಾಗವತ ಶೇಷತ್ವಮ್** - ತಾನು ಭಾಗವತನಿಗೆ ಶೇಷಭೂತನೆಂಬ ಭಾವವು; ಯಾವಾಗ, **ನಮಮ ತಾನು** ತನಗಲ್ಲವು, ಪರಮಾತ್ಮನಿಗೇನೆ ಎಂದಾಯಿತೋ ಆಗ ಭಗವಂತನ ಸಂಬಂಧಿಗಳಾದ ಭಾಗವತರಿಗೂ ಶೇಷಭೂತನೆಂದಾಯಿತು. ೩೨. **ಭಾಗವತ ಕಿಂಕರತ್ವಮ್** - ಯಾವಾಗ ಭಾಗವತರಿಗೆ ಶೇಷಭೂತನೋ, ಆಗ ಅವರಿಗೆ ಅಭಿಮತವಾದ ಕೈಙ್ಕರ್ಯವನ್ನು ಮಾಡುವ ದಾಸನು ಎಂದಾಗುತ್ತದೆ; ಅಂತಹ ಕೈಙ್ಕರ್ಯದಿಂದ ಸ್ವಾಮಿಯು ಪ್ರೀತನಾಗುವದರಿಂದ ಭಾಗವತ ಕಿಂಕರತ್ವವೂ ಏರ್ಪಟ್ಟಿತು. ಇದೂ **ನಮಮ** ಎಂಬ ಅರ್ಥದಲ್ಲಿ ಸೂಚಿತವು. ೩೩. **ಅನನ್ಯೋಪಾಯತ್ವಮ್** - ಅಸ್ವತಂತ್ರನು, ಅಸಮರ್ಥನು ಎಂಬ ಅರ್ಥಗಳು ನಮಸ್ಸಿನಿಂದ ಉಂಟಾಗುವದರಿಂದ ಪರಮಾತ್ಮನಲ್ಲದೆ ತನಗೆ ಬೇರೇ ಉಪಾಯವಿಲ್ಲವೆಂಬುದು ಉಂಟಾಗುತ್ತದೆ. ೩೪. **ಅವಿದ್ಯಾದಿಮತ್ತ್ವಂ**- ಅಜ್ಞಾನ, ಆದಿ ಶಬ್ದದಿಂದ ಅನಾದಿಯಾಗಿ ಶುಭಾಶುಭ ಕರ್ಮ, ವಾಸನಾದಿಗಳು ಹೇಳಲ್ಪಟ್ಟವು; ಇವುಗಳಿಂದ ಕೂಡಿರೋಣವು ಇದು ನ, ಮಃ ಎಂಬಲ್ಲಿ ಮಃ ಎಂಬುದು **ಮಮ** ಎಂಬ ಷಷ್ಠ್ಯಂತವಾದುದರಿಂದ ಪರಮಾತ್ಮನದನ್ನು ನನ್ನದು ಎಂಬ ಅಹಂಭಾವವು ತೋರಿ ಬರುವದರಿಂದ ಅವಿದ್ಯಾದಿ ಮತ್ವವು. ೩೫. **ಕರಣಾದಿ ಸಾಪೇಕ್ಷಜ್ಞಾನವಿಕಾಸತ್ವಮ್**–ಮೇಲೆ ಹೇಳಿದ ರೀತಿಯಲ್ಲಿ ಆತ್ಮನ ಧರ್ಮಭೂತಜ್ಞಾನವು ತಿರೋಹಿತವಾಗಿರುವದರಿಂದ, ಇಂದ್ರಿಯ ಮನಸ್ಸುಗಳಾದ ಕರಣಾದಿಗಳ ಮೂಲಕವಾಗಿಯೇ ಜ್ಞಾನವಿಕಾಸವನ್ನು ಹೊಂದಿರುವಿಕೆಯು ; ಇದೂ **ಮಃ ನ** ಎಂಬುದರ ಅರ್ಥವು. ೩೬. **ಸಂಸಾರ ಭಯಾಕ್ರಾನ್ತತ್ವಮ್** - ಹೀಗೆ ಇಂದ್ರಿಯಗಳಿಗೆ ವಶವಾದ ಜ್ಞಾನವುಳ್ಳವನಾದುದರಿಂದ ಅವುಗಳ ಹಾವಳಿಗೆ ಸಿಕ್ಕಿ ಮತ್ತು ಅವಿದ್ಯಾ ವಾಸನಾದಿಗಳಿಗೆ ಸಿಕ್ಕಿರುವದರಿಂದಲೂ ಸಂಸಾರ ಭಯದಿಂದ ಕೂಡಿರೋಣವು. ೩೭. **ಅವಿದ್ಯಾ ನಿವೃತ್ತಿಸಾಪೇಕ್ಷತ್ವಮ್** . ಅಂತಹ ಅಜ್ಞಾನ

**೩೮. ಅಕಿಂಚನತ್ವಮ್, ೩೯. ಈಶ್ವರ ಸೌಹಾರ್ದಾದಿಮತ್ತ್ವಮ್, ಸದಾಚಾರ್ಯ ಪ್ರಾಪ್ತಿಮತ್ತ್ವಮ್, ೪೧ ಸಾಧ್ಯೋಪಾಯಾನುಷ್ಠಾನಾರ್ಹತ್ವಮ್, ೪೨. ಉಪಾಯ ನಿಷ್ಠತ್ವಮ್ ೪೩. ಮಹಾ ಪ್ರಭಾವತ್ವಮ್ ೪೪. ವಿಶಿಷ್ಟ ವೇಷತ್ತಾಲೇ ಸೃಷ್ಟಿ**

---

ಮತ್ತು ಉಪಲಕ್ಷಣವಾಗಿ ಕರ್ಮ ವಾಸನಾದಿಗಳಿಂದ ಬಿಡುಗಡೆಯ ಅಪೇಕ್ಷೆಯುಳ್ಳೋಣವು.

ಮುಂದೆ ಪುನಃ ಅಖಂಡ ನಮಸ್ಸಿನಿಂದ ತೋರುವ ಆರು ಗುಣಗಳು ಹೇಳಲ್ಪಡುವುವು.

---

೩೮. **ಅಕಿಂಚನತ್ವಮ್** - "**ಭಗವಾನ್ ಮೇ ಪರೋ ನಿತ್ಯಂ ಅಹಂ ಪ್ರತ್ಯವರ ಸ್ಸದಾ**"ಎಂಬ ಮತ್ತು "**ಪುರುಷಂ ಪರಮುದ್ದಿಶ್ಯ ನಮೋ ಸಿದ್ಧಿ ರಿತೋನ್ಯಥಾ**" ಎಂಬಲ್ಲೂ ನಮಶ್ಯಬ್ದಾರ್ಥವಿವರಣೆಯಲ್ಲಿ ಹೇಳಿರುವಹಾಗೆ ತನಗೆ ಇನ್ನು ಯಾರೂ ಗತಿಯಿಲ್ಲವೆಂಬ ಅಕಿಂಚಿನಭಾವವು. ಮೇಲೆಹೇಳಿದ ಅವಿದ್ಯಾನಿವೃತ್ತಿಯನ್ನುಂಟುಮಾಡಿಕೊಳ್ಳುವದಕ್ಕೆ ತನಗೂ ಶಕ್ತಿಯಿಲ್ಲವು; ಪರಮಾತ್ಮಾನುಗ್ರಹವಿಲ್ಲದೆ ಸಾಧ್ಯವೇ ಇಲ್ಲವೆಂಬ ಕಾರ್ಪಣ್ಯವು. ೩೯. **ಈಶ್ವರ ಸೌಹಾರ್ದಾದಿಮತ್ತ್ವಮ್** - ಹೀಗೆ ಆತನೇ ಗತಿಯಾದನಂತರ, ಅಂತಹ ಈಶ್ವರನಲ್ಲಿ ಆಶ್ರಯಿಸಲು ಉಪಯುಕ್ತಗಳಾದ ಸೌಹಾರ್ದ, ಆದಿಶಬ್ದದಿಂದ ಕಾರುಣ್ಯ, ವಾತ್ಸಲ್ಯ ಸೌಶೀಲ್ಯಾದಿ ಗುಣಗಳಿಂದ ಕೂಡಿರುವವನೆಂಬ ಭಾವನೆಯು. ೪೦. **ಸದಾಚಾರ್ಯಪ್ರಾಪ್ತಿ ಮತ್ವಮ್**-ನಮಶ್ಯಬ್ದವು ಶರಣಾಗತಿಪರವಾಗಿ ಅದು ಸದಾಚಾರ್ಯ ಕಟಾಕ್ಷದಿಂದಲೇ ಸಾಧ್ಯವಾದುದೆಂದು "**ಆಚಾರ್ಯ ವತ್ತಯಾಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್**" ಎಂಬಲ್ಲಿ ಹೇಳಿರುವದರಿಂದ ಸದಾಚಾರ್ಯರ ಪ್ರಾಪ್ತಿಯನ್ನು ಹೊಂದೋಣವು. ೪೧. **ಸಾಧ್ಯೋಪಾಯಾನುಷ್ಠಾನಾರ್ಹತ್ವಮ್** - ನಮಶ್ಯಬ್ದವು ಶರಣಾಗತಿರೂಪ ಪ್ರಪ್ತೀಭಾವವನ್ನು ಬೋಧಿಸುವದರಿಂದ ಅಂತಹ ಉಪಾಯವನ್ನು ಅನುಷ್ಠಿಸಲು ಯೋಗ್ಯತೆಯುಳ್ಳೋಣವು. ೪೨. **ಉಪಾಯ ನಿಷ್ಠತ್ವಮ್** - ಆದುದರಿಂದ "**ನಮಸ್ಕೃರ್ಜನಾರ್ದನಂ**" ಎಂಬಲ್ಲಿ ವ್ಯಕ್ತವಾಗುವಹಾಗೆ ಉಪಾಯವಾದ ಶರಣಾಗತಿಯಲ್ಲಿ ನಿಷ್ಠೆಯುಳ್ಳೋಣವು. ೪೩. **ಮಹಾಪ್ರಭಾವತ್ವಮ್** - ಹಾಗೆ ಉಪಾಯವನ್ನನುಷ್ಠಿಸಿದ ಕೃತಕೃತ್ಯನು ಪರಮಾತ್ಮನಿಗೆ ಅತ್ಯಂತ ಪ್ರಿಯನಾಗುವದರಮೂಲಕವೂ, ಅನಂತರ ಆತನ ಕೃಪೆಯಿಂದ ಹೇಯ ಪ್ರಕೃತಿ ಸಂಬಂಧವು ತೊಲಗಿ **ಸ್ವೇನರೂಪೇಣಾಭಿ ನಿಷ್ಪದ್ಯತೇ** ಎಂದು ಹೇಳಿರುವಹಾಗೆ ಪ್ರಕಾಶಿಸುವದರಿಂದ ಮಹಾ ಪ್ರಭಾವವುಳ್ಳ ಸ್ವರೂಪದಿಂದ ಕೂಡಿರೋಣವು.

ಸಂಹಾರ ವಿಷಯತ್ವಮ್, ೪೫. ಅಕ್ಷಯತ್ವಮ್, ೪೬. ಸ್ವತೋ ಬಹುತ್ವಮ್, ೪೭. ಅಸಂಖ್ಯಾತತ್ವಂ, ೪೭. ಈಶ್ವರವ್ಯಾಪ್ಯತ್ವಂ ೪೯. ಈಶ್ವರ ನಿಯಾಮ್ಯತ್ವಮ್,೫೦ ಈಶ್ವರ ಧಾರ್ಯತ್ವಮ್ ೫೧. ಇವತ್ತಿನ್ ನಿಯಮುಮುಡಿಯಾಗವನ್ದ

---

**ಮುಂದೆ ನಾರ ಶಬ್ದದಿಂದ ಅನುಸಂಧೇಯಗಳಾದ**
**೧೪ ಗುಣಗಳು ಹೇಳಲ್ಪಡುವುವು.**

೪೪. **ವಿಶಿಷ್ಟ ವೇಷತ್ತಾಲೇ ಸೃಷ್ಟಿ ಸಂಹಾರ ವಿಷಯತ್ವಮ್** - ಶರೀರದೊಂದಿಗೆ ಸೇರಿರುವದರಿಂದಲೇ ಸೃಷ್ಟಿ ಸಂಹಾರಗಳಿಗೆ ವಿಷಯವಾಗಿರೋಣವು. ಕರ್ಮವೂ ನಶಿಸಿ ಹೋಗಿ ಪ್ರಕೃತಿ ಸಂಬಂಧವೂ ತೊಲಗಿ ಹೋದರೆ, ಆಗೀಗ ಈ ಸೃಷ್ಟಿ ಸಂಹಾರಾದಿಗಳಿಗೆ "**ಸರ್ಗೇಽಪಿ ನೋಪಜಾಯನ್ತೇ ಪ್ರಳಯೇ ನವ್ಯಥನ್ತಿ ಚ**" ಎಂಬಲ್ಲಿ ಹೇಳಿರುವಹಾಗೆ ಒಳಪಡುವದಿಲ್ಲವು. ಈ ಅರ್ಥವು ರೀಙ್ ಕ್ಷಯೇ ಎಂಬ ಧಾತುವಿನ ಮೂಲಕ ಉಂಟಾಗುವ ನರ ಶಬ್ದದಲ್ಲಿ ಅಂತರ್ಗತವು ೪೫. **ಅಕ್ಷಯತ್ವಮ್** ಹೀಗೆ ಜನನ ಮರಣಗಳಿಲ್ಲದೆಯೂ, ಸೃಷ್ಟಿ ಪ್ರಳಯಗಳಿಗೆ ಸಿಕ್ಕದೆಯೂ ನಿತ್ಯವಾದ ಸ್ವರೂಪವುಳ್ಳವನಾದುದರಿಂದ ಕ್ಷಯವನ್ನು ಹೊಂದದೆ ಇರುವ ಸ್ವರೂಪವುಳ್ಳವನು. ನರ ಶಬ್ದಾರ್ಥವು. ೪೬. **ಸ್ವತಃ ಬಹುತ್ವಮ್** - ಜೀವಾತ್ಮರು ಬಹುತ್ವವನ್ನು ಹೊಂದಿರೋಣವು. ಇದು "**ನಿತ್ಯೋ ನಿತ್ಯಾನಾಂ**" ಎಂಬ ಶ್ರುತಿಯಿಂದ ವ್ಯಕ್ತವು. ಮತ್ತು "**ನಾರಸ್ತ್ವಿತಿ ಸರ್ವ ಪುಂಸಾಂ ಸಮೂಹಃ ಪರಿಕೀರ್ತಿತಃ**" (ಪಾದ್ಮ ಪುರಾಣ) ಎಂಬ ಮಹರ್ಷಿ ವಾಕ್ಯದಿಂದಲೂ ಸಿದ್ಧವು.ಇದು ನಾರಶಬ್ದಾರ್ಥವು. ೪೭. **ಅಸಂಖ್ಯಾತತ್ವಮ್** ಬಹುತ್ವವೆಂದರೆ ೮,೧೦ ಮಾತ್ರವಲ್ಲವು. ಲೆಖ್ಖಮಾಡಲು ಸಾಧ್ಯವಿಲ್ಲದಷ್ಟು ಅಸಂಖ್ಯಾತವಾಗಿರೋಣವು. "**ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ**" ಎಂಬಲ್ಲಿ ವ್ಯಕ್ತವು. (ಛಾಂ. ೩. ೧೪. ೧) ೪೮. **ಈಶ್ವರ ವ್ಯಾಪ್ಯತ್ವಮ್** - ನಾರವರ್ಗವನ್ನೆಲ್ಲಾ ಅಯನವಾಗಿವುಳ್ಳವನೆಂಬ ಬಹುವ್ರೀಹ್ಯರ್ಥದಿಂದ ಈಶ್ವರನಿಂದ ಜೀವಾತ್ಮನು ಅಂತರ್ಯಾಮಿಯಾಗಿ ವ್ಯಾಪಿಸಲ್ಪಟ್ಟಿರುವಿಕೆಯು ; ಈಯತೇ ಇತ್ಯಯನಂ ಎಂಬ ವ್ಯುತ್ಪತ್ತಿಯಿಂದಲಾಗಲಿ ಈಯತೇ ತಸ್ಮಿನ್ ಎಂಬ ವ್ಯುತ್ಪತ್ತಿಯಿಂದಲಾಗಲಿ ಉಂಟಾಗುವ ಅರ್ಥವು. ೪೯. **ಈಶ್ವರ ನಿಯಾಮ್ಯತ್ವಮ್** - ಈಶ್ವರನಿಂದ ನಿಯಮಿಸಲು ಯೋಗ್ಯನಾಗಿರುವಿಕೆಯು. ಯಾವಾಗ ಅಂತರಾತ್ಮಾವಾಗಿ ವ್ಯಾಪಿಸಿರುತ್ತಾನೋ ಆ ಕಾರಣದಿಂದ ಈಶ್ವರ ನಿಯಾಮ್ಯತ್ವವೂ ಉಂಟಾಗುತ್ತದೆ. "**ಪ್ರೇರಿತಾರಂಚಮತ್ವಾ**" ಎಂಬುದು ಅನುಸಂಧೇಯವು. ೫೦. **ಈಶ್ವರ ಧಾರ್ಯತ್ವಮ್** - ಈಶ್ವರನಿಂದ ಧರಿಸಲ್ಪಡಲು ಯೋಗ್ಯನು ಎಂದರೆ ಆಧೇಯನು. ಹೀಗೆ ನಿಯಮಿಸಲು ಹೇಗೆ ಯೋಗ್ಯನು ಎಂದರೆ ಅದಕ್ಕೆ ಆತ್ಮಾವಾಗಿ ನಿಯನ್ತಾವಾಗಿರುವದರಂದ ಆತನಿಗೆ ಶರೀರವಾದುದರಿಂದ ಅತ

ಈಶ್ವರ ಶರೀರತ್ವಮ್' ೫೨. ಈಶ್ವರಲೀಲಾರಸಹೇತುತ್ವಮ್,೫೩. ಈಶ್ವರ ಭೋಗೋಪಕರಣತಾರ್ಹತ್ವಮ್, ೫೪. ತದಧೀನಗತಿತ್ವಮ್, ತದಧೀನ ತತ್ಪ್ರಾಪ್ತಿತ್ವಮ್. ೫೬. ಐಶ್ವರ್ಯ ಕೈವಲ್ಯ ನಿರಪೇಕ್ಷತ್ವಂ, ೫೭. ಭಗವ

---

ನಿಂದಲೇ ಧಾರ್ಯನು. ಅಥವಾ ಷಷ್ಠೀ ತತ್ಪುರಷದಿಂದ ಜೀವನಿಗೆ ಆಧಾರಭೂತನು ೫೧. ಇವತ್ತಿನಡಿಯಾಗ ವಂದ ಈಶ್ವರ ಶರೀರತ್ವಮ್ - ಯಾವಾಗ ಆತ್ಮಾವಾಗಿದ್ದುಕೊಂಡು ವ್ಯಾಪಿಸಿ ನಿಯಮಿಸಿ ಧರಿಸಲ್ಪಡಲು ಯೋಗ್ಯವಾಯಿತೋ ಆಗ ಇದಕ್ಕೆಲ್ಲಾ ಕಾರಣಭೂತವಾದ ಈಶ್ವರನಿಗೆ ಶರೀರವಾಗಿರೋಣವು ಇದ್ದೇ ಇರಬೇಕೆಂಬುದು ಏರ್ಪಟ್ಟಿತು. "ಯಸ್ಯ ಆತ್ಮಾ ಶರೀರಮ್" ಬೃ. ೫. ೭. ೨- ಎಂಬುದು ಅನುಸಂಧೇಯವು. ೫೨. ಈಶ್ವರ ಲೀಲಾರಸ ಹೇತುತ್ವಮ್ ೨ ಈಶ್ವರನ ಲೀಲಾನುಭವಕ್ಕೆ ಕಾರಣನಾಗಿರುವಿಕೆಯು. ಹೀಗೆ ಶರೀರವಾಗಿರವ ಈ ಜೀವಾತ್ಮರುಗಳನ್ನು ಕರ್ಮಾನುಗುಣವಾಗಿ ನಿಯಮಿಸಿ ಪ್ರವೃತ್ತಿಗಳನ್ನುಂಟುಮಾಡು ವದರಲ್ಲಿ ಪರಿಪೂರ್ಣ ಕಾಮನಾದ ಸರ್ವೇಶ್ವರನಿಗೆ "ಲೋಕವತ್ತು ಲೀಲಾ ಕೈವಲ್ಯಮ್" ಎಂಬಲ್ಲಿ (ಶಾ. ೨. ೧. ೩೩) ಹೇಳಿರುವಹಾಗೆ ಲೀಲೆಯಾದುದರಿಂದ ಅಂತಹ ಲೀಲೆಗೆ ಈ ಜೀವಾತ್ಮನು ಕಾರಣನಾಗಿರುವಿಕೆಯು. ೫೩. ಈಶ್ವರ ಭೋಗೋಪಕರಣಾರ್ಹತ್ವಂ - ಯಾವಾಗ ಚೇತನ ವ್ಯಾಪಾರಗಳೆಲ್ಲಾ ಭಗವಂತನಿಗೆ ಲೀಲೆಯಾಯಿತೋ, ಆಗ ಈತನು "ಮೋದತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈರಿವ" (ಭಾರ. ಸಭಾ) ಎಂದರೆ ಬಾಲನು ಆಟದ ಸಾಮಾನುಗಳೊಂದಿಗೆ ಕ್ರೀಡಿಸುವಹಾಗೆ ಪ್ರಾಣಿವರ್ಗಗಳನ್ನೇ ಭೋಗೋಪಕರಣಗಳನ್ನಾಗಿ ಮಾಡಿಕೊಂಡು ಈಶ್ವರನು ಆನಂದಿಸುವನೆಂದು ಹೇಳಿರುವಹಾಗೆ ಸರ್ವೇಶ್ವರನಿಗೆ ಭೋಗೋಪಕರಣವಾಗಿರಲು ಯೋಗ್ಯನಾಗಿರುವಿಕೆಯು. ೫೪. ತದಧೀನ ಗತಿತ್ವಮ್ - ಸರ್ವೇಶ್ವರನಿಗೆ ಶರೀರವಾದುದರಿಂದಲೇ ಆತನಿಗೆ ಅಧೀನವಾದ ಗತಿಯನ್ನು ಹೊಂದಿರುವಿಕೆಯು "ಪರಾತ್ತು ತಚ್ಛ್ರುತೇಃ" (ಶಾ.ಸೂ.೨-೩-೪೦) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ೫೫. ತದಧೀನ ಪ್ರಾಪ್ತಿತ್ವಂ-ಹಾಗೆ ಸರ್ವೇಶ್ವರನಿಗೆ ಶರೀರವಾಗಿರುವುದರಿಂದಲೇ ತನ್ನ ಗತಿಯು ತದಧೀನವಾದುದರಿಂದ ಆತನಗೆ ಅಧೀನವಾದ ತನ್ನ ಪ್ರಾಪ್ತಿಯನ್ನು ಹೊಂದಿರುವಿಕೆಯು. ೫೬. ಐಶ್ವರ್ಯ ಕೈವಲ್ಯ ನಿರಪೇಕ್ಷತ್ವಂ - ಆತನ ಪ್ರಾಪ್ತಿಯೇ ಆತನಿಂದುಂಟಾಗುವ ಸಂದರ್ಭದಲ್ಲಿ ತುಚ್ಛವಾದ ಐಶ್ವರ್ಯದ ಮತ್ತು ವಿಳಂಬವನ್ನುಂಟುಮಾಡುವ ಕೈವಲ್ಯದ ಅಪೇಕ್ಷೆ ಇಲ್ಲದಿರೋಣವು. ೫೭ ಭಗವತ್ಪ್ರಾಪ್ತ್ಯರ್ಥಿತ್ವಂ - ಆಕಾರಣದಿಂದಲೇ ಆ ಐಶ್ವರ್ಯ ಕೈವಲ್ಯಗಳೆಂಬ ಅಲ್ಪಾರ್ಥಗಳನ್ನು ತ್ಯಜಿಸಿ ಭಗವತ್ಪ್ರಾಪ್ತಿಯನ್ನೇ ಅಪೇಕ್ಷಿಸೋಣವು.

ತ್ವಾಪ್ರಾಪ್ತ್ಯರ್ಥಿತ್ವಮ್, ೫೮. ಸರ್ವಾವಿದ್ಯೋನ್ಮುಕ್ತತ್ವಮ್, ೫೯. ಆವಿರ್ಭೂತ ಸ್ವರೂಪತ್ವಮ್ ೬೦. ಸರ್ವ ದ್ರಷ್ಟೃತ್ವಮ್, ೬೧. ಸರ್ವ ಪ್ರಕಾರ ಭಗವದನು ಭವೈಕ ಭೋಗತ್ವಮ್. ೬೨. ನಿರತಿಶಯಾನಂದವತ್ವಮ್, ೬೩. ಭಗವ ದ್ಭೋಗಾರ್ಥ ಭೋಕ್ತೃತ್ವಮ್, ೬೪ ಐಚ್ಛಿಕವಿಗ್ರಹಾದಿ ಮತ್ವಮ್

---

ಮುಂದೆ ನಾರಾಯಣಾಯ ಎಂಬಲ್ಲಿರುವ ವ್ಯಕ್ತ ಚತುರ್ಥಿ ಯಿಂದ ತೋರಿಬರುವ ೧೦ ಅರ್ಥಗಳು ಹೇಳಲ್ಪಡುತ್ತವೆ-

೫೮. **ಸರ್ವಾವಿದ್ಯೋನ್ಮುಕ್ತತ್ವಮ್** - ಸರ್ವ ಪ್ರಕಾರದಿಂದಲೂ ಅವಿದ್ಯೆಯಿಂದ, ಅಜ್ಞಾನಾದಿಗಳಿಂದ ಬಿಡಲ್ಪಡೋಣವು. ಚತುರ್ಥಿಯಿಂದ ತೋರುವ ನಿತ್ಯ ಕೈಙ್ಕರ್ಯರೂಪವಾದ ಇಷ್ಟಪ್ರಾಪ್ತಿಗೆ ಈ ಅನಿಷ್ಟವಾದ ಅವಿದ್ಯಾ ನಿವೃತ್ತಿಯೂ,ಅವಿದ್ಯೆಗೆ ಕಾರಣವಾದ ಪ್ರಕೃತಿಸಂಬಂಧ ನಿವೃತ್ತಿಯೂ ಅವಶ್ಯಕವು ೫೯. **ಆವಿರ್ಭೂತ ಸ್ವರೂಪತ್ವಮ್** "ಅಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿ ರುಪಸಂಪದ್ಯ ಸ್ವೇನರೂಪೇಣಾಭಿ ನಿಷ್ಪದ್ಯತೇ"(ಛಾ. ೮.೧೨.೨) ಎಂದು ಶ್ರುತಿಯಲ್ಲೂ, ಸಂಪದ್ಯಾವಿರ್ಭಾವ ಸ್ವೇನ ಶಬ್ದಾತ್" (ಶಾ) ಸೂ. ೪. ೪. ೧) ಎಂಬ ಸೂತ್ರದಲ್ಲೂ ಹೇಳಿರುವ ಹಾಗೆ, ಪ್ರಕೃತಿ ಸಂಬಂಧವು ತೊಲಗಿದ ಒಡನೆಯೇ ತನ್ನ ನೈಜವಾದ ಸ್ವರೂಪವನ್ನು ಹೊಂದೋಣವು. ೬೦. **ಸರ್ವದ್ರಷ್ಟೃತ್ವಂ** - ಯಾವಾಗ, ಪ್ರಕೃತಿ ಸಂಬಂಧವು ತೊಲಗಿದುದರಿಂದ ಜ್ಞಾನ ಸಂಕೋಚವೂ ಸಹ ತೊಲಗಿತೋ. ಆಗ ಎಲ್ಲವನ್ನೂ ಏಕಕಾಲದಲ್ಲೇ ಸಾಕ್ಷಾ ತ್ಕರಿಸುವ ಶಕ್ತಿಯು ಆವಿರ್ಭವಿಸುತ್ತದೆ. ೬೧. **ಸರ್ವಪ್ರಕಾರ ಭಗವದನು ಭವೈಕ ಭೋಗತ್ವಮ್** - ಆ ಕಾರಣದಿಂದ ಎಲ್ಲವೂ ಅನುಕೂಲವಾಗಿಯೇ ತೋರಿ ಭಗವಂತನು ಸ್ವರೂಪ ರೂಪಗುಣ ವಿಭವೈಶ್ವರ್ಯಾದಿಗಳಿಂದ ಯುಕ್ತನಾಗಿ ತೋರು ವದರಿಂದ ಅಂತಹ ಪರಿಪೂರ್ಣ ಬ್ರಹ್ಮಾನುಭವದ ಭೋಗವನ್ನು ಹೊಂದಿರೋ ಣವು. ೬೨. **ನಿರತಿಶಯಾನಂದವತ್ವಂ** - ಅಂತಹ ಸರ್ವಜ್ಞತೆಯುಂಟಾಗ ವದರಿಂದಲೇ ಪರಮಾತ್ಮನು ಆನಂದ ಸ್ವರೂಪನಾಗಿ ತೋರಿ, ತನ್ನನ್ನು ಆನಂದಿ ಸುವಹಾಗೆ ಮಾಡುವದರಿಂದ ನಿರತಿಶಯವಾದ ಆನಂದವನ್ನು ಹೊಂದಿರೋ ಣವು. "ಆನಂದಯಾತಿ" ಎಂಬ ಆನಂದವಲ್ಲಿಯ ವಾಕ್ಯದಿಂದ ವ್ಯಕ್ತವು. ೬೩. **ಭಗವದ್ಭೋಗಾರ್ಥ ಭೋಕ್ತೃತ್ವಂ** - ಆದರಿಂದ ತಾನೂ ಭಗವಂತ ನಿಗೆ ಭೋಗಾರ್ಥವಾಗಿಯೇ ಎಂಬ ಭಾವನೆಯಿಂದ ತಾನೂ ಆನಂದಿಸೋಣವು. ೬೪. **ಐಚ್ಛಿಕವಿಗ್ರಹಾದಿ ಮತ್ವಂ** - ಸತ್ಯಸಙ್ಕಲ್ಪನಾಗುವದರಿಂದ ತನ್ನ ಇಷ್ಟಾನುಸಾರ ದಿವ್ಯ ವಿಗ್ರಹವನ್ನು ಹೊಂದೋಣವು. ಆದಿ ಶಬ್ದದಿಂದ **ಸ ಏಕಧಾಭವತಿ ತ್ರಿಧಾ ಭವತಿ** ಎಂದು ಶ್ರುತಿಯಲ್ಲಿ (ಛಾಂ. ೭-೨೬.೨ ಹೇಳಿರುವಹಾಗೆ ತನ್ನ ಇಷ್ಟಾನುಸಾರ, ಧರ್ಮಭೂತಜ್ಞಾನದ ಮೂಲಕ ಅನೇಕ

**೬೫ ಇಚ್ಛಾವಿಘಾತ ರಹಿತತ್ವಮ್ ೬೬ ಈಶ್ವರಲಕ್ಷಣ ವ್ಯತಿರಿಕ್ತ ಪರಮಸಾಮ್ಯ ವತ್ವಮ್, ೬೭. ಅಶೇಷಕೈಂಕರ್ಯೈಕರತಿತ್ವಮ್ ೬೮. ಅಪುನರಾವೃತ್ತಿಮತ್ವಮ್' ಎನ್ರು ಇವೈ ಪ್ರಧಾನಙ್ಗಳಾಗಕ್ಕೊಂಡು ಇವತ್ತೈ ತುವಕ್ಕಿವರುಮ್ ಮತ್ತುಳ್ಳ ಪ್ರಾಮಾಣಿಕಾರ್ಥಙ್ಗಳುಮೆಲ್ಲಾಮ್ ಇಪ್ಪದಙ್ಗಳಿಲ್ ಅಡೈವೆ ಶಬ್ದಸಾಮರ್ಥ್ಯತ್ತಾಲುಮ್, ಅರ್ಥಸ್ವಭಾವತ್ತಾಲುಮ್, ಅನುಸಂಧೇಯಙ್ಗಳ್.**

---

ರೂಪಗಳನ್ನು ಹೊಂದೋಣವು ಹೇಳಲ್ಪಟ್ಟಿತೆಂದು ಭಾವಿಸಬಹುದು; ಅಥವಾ ದಿವ್ಯ ವಿಗ್ರಹವನ್ನು ಹೊಂದುವದು ಮಾತ್ರವೇ ಅಲ್ಲದೆ "**ಜಕ್ಷತ್ ಕ್ರೀಡನ್ ರಮಮಾಣಃ**" ಎಂಬಲ್ಲಿ ಹೇಳಿರುವ, ಮತ್ತು "**ಕಾಮಚಾರೋಭವತಿ**" ಎಂಬಲ್ಲಿಯೂ ಹೇಳಿರುವ ಪ್ರವೃತ್ತಿಗಳನ್ನು ಹೊಂದೋಣವೂ ಸೂಚಿತವು. ೬೫. **ಇಚ್ಛಾವಿಘಾತ ರಹಿತತ್ವಂ**- ಭಗವದನುಮತಿಗನುಸಾರವಾಗಿ ನಡೆಯುವ ಸತ್ಯಸಙ್ಕಲ್ಪನಾಗುವದರಿಂದ, ತನ್ನ ಸಙ್ಕಲ್ಪಕ್ಕೆ ವಿಘಾತವಿಲ್ಲದಿರೋಣವು. "**ಸಙ್ಕಲ್ಪಾದೇವ ತಚ್ಛ್ರುತೇಃ**" ಎಂಬ ಸೂತ್ರವು ಇದನ್ನು ಬೋಧಿಸುತ್ತದೆ. ೬೬. **ಈಶ್ವರಲಕ್ಷಣ ವ್ಯತಿರಿಕ್ತ ಪರಮ ಸಾಮ್ಯವತ್ವಂ** - "**ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ**" (ಮು. ೩-೧.೩) ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಪರಮಾತ್ಮನೊಂದಿಗೆ ಸಾಮ್ಯವನ್ನು ಹೊಂದೋಣವು. ಆದರೆ ಆ ಸಾಮ್ಯವು ಈಶ್ವರ ಲಕ್ಷಣಕ್ಕೆ ಬೇರೆಯಾದ ವಿಷಯದಲ್ಲಿ ಮಾತ್ರ ಗುಣಾಷ್ಟಕ ಪ್ರಾಪ್ತಿಯಲ್ಲೂ ಆನಂದದಲ್ಲೂ ಸಾಮ್ಯವು. ಆದರೆ ಈಶ್ವರ ಲಕ್ಷಣವು ಯಾವುದು ಎಂದರೆ ಎಲ್ಲವನ್ನೂ ಸೃಷ್ಟಿಸಿ, ಸ್ಥಾಪಿಸಿ, ಅವುಗಳಿಗೆ ನಿಯಾಮಕನಾಗಿ, ಸ್ವಾಮಿಯಾಗಿ ಧಾರಕನಾಗಿ ಲಯಕ್ಕೂ ಕಾರಣನಾಗಿರೋಣವು ಈಶ್ವರ ಲಕ್ಷಣವು. ಈ ಅಭಿಪ್ರಾಯಗಳನ್ನೇ "**ಭೋಗಮಾತ್ರಸಾಮ್ಯಲಿಙ್ಗಾಚ್ಚ**" ಎಂಬ ಮತ್ತು "**ಜಗದ್ವ್ಯಾಪಾರವರ್ಜಂ**" ಎಂಬೆರಡು ಸೂತ್ರಗಳ ಅಭಿಪ್ರಾಯವು ಇಲ್ಲಿ ಹೇಳಲ್ಪಟ್ಟಿತು. ೬೭. **ಅಶೇಷ ಕೈಂಕರ್ಯೈಕ ರತಿತ್ವಮ್** - ಭಗವಂತನಿಗೆ ಮಾಡತಕ್ಕ ಸಮಸ್ತ ಕೈಙ್ಕರ್ಯಗಳನ್ನು ಎಸಗುವದರಲ್ಲಿಯೇ ಮುಖ್ಯವಾದ ಆಶೆಯಿರೋಣವು. ಇದು ಚತುರ್ಥಿಯ ಪ್ರಧಾನಾರ್ಥವು. ಲಕ್ಷ್ಮಣನೇನೋ **ಅಹಂಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವಪತಶ್ಚತೇ**" ಎಂದು ತಾನೊಬ್ಬನೇಯಾದುದರಿಂದ ಹೇಳಿದನು. ಅನೇಕ ಮುಕ್ತರಿರುವಾಗ ಎಲ್ಲರೂ ಎಲ್ಲಾ ಕೈಙ್ಕರ್ಯವನ್ನು ಸದಾಮಾಡೋಣವು ಹೇಗೆ? ಎಂಬ ಶಂಕೆಯಲ್ಲಿ ಹಾಗೆ ವಿವಿಧ ಕೈಂಕರ್ಯಗಳನ್ನು ಮಾಡುವವರ ಸಾನ್ನಿಧ್ಯದಲ್ಲಿದ್ದುಕೊಂಡು ತನ್ನ ಅನ್ವಯವನ್ನೂ ಪ್ರದರ್ಶಿಸೋಣವು, ತಾನೂ ಕೈಙ್ಕರ್ಯವನ್ನು ಮಾಡಿದ ಹಾಗೆಯೇ ಭಾವಿಸಬಹುದೆಂದು ಉಪದೇಶಿಸಲ್ಪಟ್ಟಿರುತ್ತದೆ. ೬೮. **ಅಪುನರಾವೃತ್ತಿಮತ್ವಮ್** - ಮುಕ್ತನಾದವನು ಪುನಃ ಈ ಲೋಕದ ಬಂಧಕ್ಕೆ ಬಾರದಿರೋಣವು. ಮುಕ್ತನಿಗೆ ಈ ಲೋಕದ ದುಃಖಗಳೂ ತನ್ಮೂಲಕ ಹೇಯ

## ಇಹಾತ್ಯನ್ತಾವಶ್ಯಾನುಸಂಧೇಯ ಸಾರತಮ ಗುಣಾಃ ಸಂಗೃಹ್ಯಾಹ.

**ಕಾ. ಪದತ್ರಯೇತ್ರ (೧) ಸಂಕ್ಷೇಪಾದ್ಭಾವ್ಯಾನನ್ಯ ಶೇಷತಾ ।**
**ಅನನ್ಯೋಪಾಯತಾ ಸ್ವಸ್ಯ ತಥಾ ನನ್ಯಪ್ರಯೋಜನತಾ ॥೮೩॥**

---

ತ್ವವೂ ವಿದಿತವಾಗಿರುವಾಗ ಪುನರಾವೃತ್ತಿಯನ್ನು ಅಪೇಕ್ಷಿಸನು. ಕರುಣಾನಿಧಿಯು ತನಗೆ ಅತ್ಯಂತ ಪ್ರಿಯನಾದ ಈ ಚೇತನನನ್ನು ತನ್ನಲ್ಲಿಗೆ ಬರಮಾಡಿಕೊಂಡು ಪುನಃ ಅಲ್ಲಿಂದ ಇಲ್ಲಿಗೆ ದಬ್ಬುವನಲ್ಲವು. ಆದುದರಿಂದ **ನ ಚ ಪುನರಾವರ್ತತೇ ನ ಚ ಪುನರಾವರ್ತತೇ**" (ಛಾಂ.) ಎಂದು ಹೇಳಿರುತ್ತದೆ. ಇದನ್ನೇ ಸೂತ್ರವು "ಅನಾವೃತ್ತಿಶ್ಶಬ್ದಾತ್ ಅನಾವೃತ್ತಿಶ್ಶಬ್ದಾತ್" ಎಂಬ ಕೊನೆಯ ಸೂತ್ರದಲ್ಲಿ ವ್ಯಕ್ತವು. **ಎನ್ರು** - ಎಂಬದಾಗಿ, '**ಇವೈ ಪ್ರಧಾನಙ್ಗಳಾಗಕ್ಕೊಂಡು**- ಈ ಮೇಲೆಹೇಳಿದ ಮೂಲಮಂತ್ರದಲ್ಲಿ ಮುಖ್ಯವಾದ ಗುಣಗಳಾಗಿಯೂ, **ಇವತ್ತೈ** - ಈ ಗುಣಗಳನ್ನು, **ತುವಕ್ಕಿ ವರುಮ್** - ಸಂಬಂಧಿಸಿಕೊಂಡು ಬರುವ, **ಮತ್ತುಳ್ಳ** - ಇನ್ನು, ಬೇರೆ, **ಪ್ರಾಮಾಣಿಕಾರ್ಥಗಳು ಮೆಲ್ಲಾಮ್** - ಶಾಸ್ತ್ರಸಿದ್ಧಗಳಾಗಿ ಯಥಾರ್ಥಗಳಾದ ಅಭಿಪ್ರಾಯಗಳೆಲ್ಲಾ, **ಇಪ್ಪದಙ್ಗಳಿಲ್** – ಈ ಮೂಲಮಂತ್ರದ ಮೂರು ಪದಗಳಲ್ಲಿ, **ಶಬ್ದ ಸಾಮರ್ಥ್ಯತ್ತಾಲುಮ್** - ಶಬ್ದವ್ಯುತ್ಪತ್ತಿಮೂಲಕವಾಗಿಯೂ, **ಅರ್ಥ ಸ್ವಭಾವತ್ತಾಲುಮ್** - ಅರ್ಥವಾಗಿ ಊಹಿಸಬಹುದಾದರಮೂಲಕನಾಗಿಯೂ, **ಅನುಸಂಧೇಯಂಗಳು.**

**ಈ ಸಂದರ್ಭದಲ್ಲಿ ಮುಖ್ಯವಾಗಿ ಅನುಸಂಧಾನಮಾಡತಕ್ಕ**
**ಸಾರತಮವಾದ ಮೂರು ಗುಣಗಳು ಹೇಳಲ್ಪಡುತ್ತವೆ.**

ಮೂಲಮಂತ್ರದಿಂದ ತೋರಿಬರುವ ಈ ೬೮ ಗುಣಗಳನ್ನೂ ಅನುಸಂಧಾನ ಮಾಡಲು ಕಷ್ಟತರವಾಗಿ ತೋರಿ ಬಂದರೆ, ಆಗ ಈ ಕಾರಿಕೆಯಲ್ಲಿ ಉಪಪಾದಿಸಿರುವ ಮೂರು ಸಾರತಮ ಗುಣಗಳನ್ನಾದರೂ ಆವಶ್ಯಕವಾಗಿ ಅನುಸಂಧಾನ ಮಾಡತಕ್ಕದ್ದೆಂದು ಒಂದು ಕಾರಿಕೆಯ ಮೂಲಕ ತಿಳಿಸುತ್ತಾರೆ.—**ಪದತ್ರಯೇಣ**-**ಓಂ ನಮಃ ನಾರಾಯಣಾಯ** ಎಂಬ ಮೂರು ಪದಗಳಿಂದಲೂ ಕ್ರಮವಾಗಿ, ಸಂಕ್ಷೇಪಾತ್ - ಮೇಲೆ ಹೇಳಿದ ರೀತಿಯಲ್ಲಿ ಬಹುವಾಗಿ ಅರ್ಥಗಳು ತೋರಿಬಂದರೂ, ಸಂಕ್ಷೇಪವಾಗಿ, **ಭಾವ್ಯಾ** - **ಭಾವಿಸತಕ್ಕವು**; ಯಾವುವೆಂದರೆ, **ಅನನ್ಯ ಶೇಷತಾ** - ತಾನು ಶ್ರಿಯಃಪತಿಗಲ್ಲದೆ ಇನ್ನು ಯಾರಿಗೂ ಶೇಷನಲ್ಲವು, ಉಕಾರವು ಅವಧಾರಣಾರ್ಥಕವಾದುದರಿಂದ, ಮಕಾರ ವಾಚ್ಯನಾದ ಜೀವನು, **ಆಯ್ಯೈವ** – ಪರಮಾತ್ಮನಿಗೇ ಶೇಷಭೂತನೇ ವಿನಾ ಇನ್ನು ಯಾರಿಗೂ ಅಲ್ಲವೆಂಬರ್ಥವು ; **ಪದತ್ರಯೇತ್ರ** ಎಂಬ ಪಾಠವಾದರೆ, **ಅತ್ರ** ಎಂದರೆ ಈ ಮೂಲಮಂತ್ರದಲ್ಲಿ ಎಂಬರ್ಥವು (೨) **ಸ್ವಸ್ಯ** - **ಅನನ್ಯೋಪಾಯತಾ** - ಶ್ರಿಯಃಪತಿಯೇ

**ಏವಂ ಮನ್ತ್ರಾರ್ಥಾನುಸಂಧಾಯಿ ಸಹವಾಸಿನಾಮಪಿ ಬಾಹ್ಯಕುದೃಷ್ಟಿ ವಾದೈರ್ಮತಿಕಾಲುಷ್ಯಂ ನಜಾಯತ ಇತ್ಯಾಹ.**

**ಇಪ್ಪಡಿ (೧) "ಸರ್ವಮಷ್ಟಾಕ್ಷರಾಂತಸ್ಥಮ್" ಎನ್ನುಮ್ಪಡಿ ಇರುಕ್ಕಿರ ಇತ್ತಿರುಮನ್ತ್ರತ್ತಿಲೇ ಚಿದಚಿದೀಶ್ವರ ಸ್ವರೂಪಙ್ಗಳುಮ್, ಜೀವರ್**

---

ಉಪಾಯವಲ್ಲದೆ ಇನ್ನು ಯಾರೂ ಇಲ್ಲವು. ಇದು ನಮಸ್ಸಿನಿಂದುಂಟಾದ ಭಾವವು. ಅಖಂಡ ನಮಸ್ಸು ಸಪರಿಕರವಾದ ಶರಣಾಗತಿಯ ಪರವು. ಸಖಂಡ ನಮಸ್ಸಿನಿಂದ ತನಗೆ ಸಾಮರ್ಥ್ಯ ಸ್ವಾತಂತ್ರ್ಯಗಳಿಲ್ಲವೆಂದು ಏರ್ಪಡುವದರಿಂದ, **ಅನನ್ಯೋಪಾಯತೆಯು** ಸಿದ್ಧವು, (೩) ತಥಾ - ಹಾಗೆಯೇ **ಅನನ್ಯಪುರುಷಾರ್ಥತಾ**- **ನಾರಾಯಣಾಯ** ಎಂಬಲ್ಲಿರುವ ವ್ಯಕ್ತ ಚತುರ್ಥಿಯಿಂದ **ಸರ್ವವಿಧ ಕೈಙ್ಕರ್ಯವೂ** ಶೇಷಭೂತನಾದ **ತನಗೆ** ಯುವರಾಜಪಟ್ಟಕ್ಕೆ ಸಮಾನವೆಂದು ತೋರಿಬರುವದರಿಂದಲೂ, ಹಾಗೆಯೇ ಮಹರ್ಷಿಯೂ, **"ಲಕ್ಷ್ಮಣೋ ಲಕ್ಷ್ಮಿ ವರ್ಧನಃ"** ಎಂಬಲ್ಲೂ **"ಅಂತರಿಕ್ಷಗತಃಶ್ರೀಮಾನ್"** ಎಂದು ವಿಭೀಷಣರನ್ನು ಕುರಿತು, **"ಸತು ನಾಗವರ ಶ್ರೀಮಾನ್"** ಎಂದು ಗಜೇಂದ್ರನನ್ನು ಕುರಿತು, ಉಪಪಾದಿಸಿದವರುರಿಂದ, ಅದೇ ನಿರತಿಶಯ ಪುರುಷಾರ್ಥವು, ಅದಕ್ಕಿಂತ ಬೇರೇ ಪುರುಷಾರ್ಥವಿಲ್ಲವೆಂಬ ಹೀಗೆ ಈ ಮೂರು ಅರ್ಥಗಳು, **ಭಾವ್ಯಾ** - ಭಾವಿಸಲು, ಅನುಸಂಧಾನ ಮಾಡಲು ಯೋಗ್ಯವಾದವು. ಇದರಿಂದ ಮೂಲಮಂತ್ರದಿಂದ ಗ್ರಹಿಸತಕ್ಕ ಮೂರು ಅಂಶಗಳು ಯಾವುವು ಎಂದರೆ ಶ್ರಿಯಃಪತಿಯೇ ತನಗೆ ಪರಮ ಶೇಷಿಯು ಇನ್ನು ಯಾರೂ ಇಲ್ಲವು; ಆತನೇ ಸಿದ್ಧೋಪಾಯನಾಗಿ ನಿಂತು ಆತ್ಮ ನಿಕ್ಷೇಪ ರೂಪ ಶರಣಾಗತಿಯನ್ನು ಅನುಷ್ಠಿಸುವಹಾಗೆ ಮಾಡಬೇಕು; ಇನ್ನು ಯಾರೂ ಉಪಾಯವಾಗಲಾರರು. ತಾನು ಶೇಷನಾದುದರಿಂದ ಆತನಿಗೆ ಪರಮ ಪದದಲ್ಲಿ ನಿತ್ಯ ಕೈಙ್ಕರ್ಯವನ್ನು ಮಾಡುವದೇ ಪರಮ ಪುರುಷಾರ್ಥವು; ಅದಕ್ಕಿಂತ ಹೆಚ್ಚಿನದಿಲ್ಲವು ಎಂಬ ಮೂರು ಅನುಸಂಧಾನಗಳು.

**ಹೀಗೆ ಮೂಲಮನ್ತ್ರಾರ್ಥಾನುಸಂಧಾನ ಮಾಡುವರೊಂದಿಗೆ ವಸಿಸುವರಿಗೂ ಕೂಡ ಬಾಹ್ಯಕುದೃಷ್ಟಿಗಳ ವಾದಗಳಿಂದ ಮತಿಭ್ರಂಶವು ಉಂಟಾಗುವದಿಲ್ಲವು.**

**ಇಪ್ಪಡಿ** - ಹೀಗೆ, ಎಂದರೆ ಮೂಲಮಂತ್ರದಿಂದ ೧೦ಲ ಪರಮ ಪುರುಷನ ಗುಣಗಳನ್ನೂ ೬ಲ ಜೀವಾತ್ಮನ ಗುಣಗಳನ್ನೂ, ಅನುಸಂಧಾನ ಮಾಡುವದರ ಮೂಲಕ (೧) **"ಸರ್ವಮಷ್ಟಾಕ್ಷರಾಂತಸ್ಥಮ್"** ಸಮಸ್ತ ಅಭಿಪ್ರಾಯಗಳೂ ಅಷ್ಟಾಕ್ಷರ ಮಂತ್ರದಲ್ಲಿ ಅಡಗಿವೆ, **ಎನ್ನುಮ್ಪಡಿಯಿರುಕ್ಕಿರ** - ಎನ್ನುವಹಾಗೆ ಇರುವ, **ಇತ್ತಿರುಮನ್ತ್ರತ್ತಿಲೇ** - ಈ ಮಂತ್ರರತ್ನದಲ್ಲಿ, **ಚಿದಚಿದೀಶ್ವರ ಸ್ವರೂಪಙ್ಗಳುಮ್** - ಪ್ರಣವದಲ್ಲೇ ಚಿತ್ತು, ಅಚಿತ್ತು, ಈಶ್ವರನೆಂಬ ತತ್ವತ್ರಯಗಳ

**ಗಳುಡೈಯ ವನ್ಯೋನ್ಯ ಭೇದಮುಮ್, ಶೇಷಶೇಷಿಭಾವಾದಿಗಳಾಲೇ ನಿರು ಪಾಧಿಕ ಜೀವೇಶ್ವರ ಭೇದಮುಮ್, ನಿಖಿಲ ಜಗನ್ನಿಮಿತ್ತೋಪಾದಾನ ಭೂತ ಪರದೇವತಾ ವಿಶೇಷ ನಿರ್ಧಾರಣಾದಿಗಳುಮ್, ಸಿದ್ಧಿಕ್ಕೈಯಾಲ್**

---

ಸ್ವರೂಪಗಳೂ, **ಜೀವರ್‌ಗಳುಡೈಯ ಅನ್ಯೋನ್ಯ ಭೇದಮುಮ್**-ನಾರಶಬ್ದ ದಿಂದ ಜೀವಾತ್ಮರ ಪರಸ್ಪರ ಭೇದವೂ, **ಶೇಷಶೇಷಿ ಭಾವಾದಿಗಳಿಂದ ನಿರುಪಾಧಿಕ ಜೀವೇಶ್ವರ ಭೇದಮುಮ್** - ಅವಿದ್ಯಾಉಪಾಧಿಗಳ ಮೂಲಕ ಜೀವನಿಗೂ ಈಶ್ವರನಿಗೂ ಭೇದ ತೋರುತ್ತದೆಯೇ ವಿನಾ ಇಬ್ಬರೂ ಒಂದೇ ಎಂದು ಶಾಂಕರ ಭಾಸ್ಕರಾದಿಗಳು ಹೇಳುವಹಾಗೆ ಇಲ್ಲದೆ ಏನೊಂದೂ ಉಪಾಧಿಯೇ ಇಲ್ಲದೇನೇ ಆದಿಪದದಿಂದ ಅಣುವಾದ ಜೀವನಿಗೂ,ವಿಭುವಾದ ಈಶ್ವರನಿಗೂಇರುವಭೇದವೂ, (ಇದುಪ್ರಣವದಲ್ಲೇವ್ಯಕ್ತವು)**ನಿಖಿಲಜಗನ್ನಿಮಿತ್ತೋಪಾದಾನಭೂತಪರದೇವತಾ ವಿಶೇಷ ನಿರ್ಧಾರಣಾದಿಗಳುಮ್** - **"ಯಥೋರ್ಣನಾಭಿ ಸ್ಸೃಜತೇ ಗೃಹ್ಣತೇಚ"** (ಮು. ೧-೧.೭.) ಜೇಡರ ಹುಳವು ಹೇಗೆ ತನ್ನ ತಂತುವನ್ನೇ ಸೃಷ್ಟಿಸಿ ಅದನ್ನೇ ನುಂಗುತ್ತದೋ ಎಂಬ ಶ್ರುತಿವಾಕ್ಯದಲ್ಲಿ ಉಪಾದಾನ ನಿಮಿತ್ತ ಸಹಕಾರಿ ಕಾರಣಗಳಿವೆಯೋ, ಹಾಗೆಯೇ ಸಮಸ್ತ ಜಗತ್ತಿಗೂ ನಿಮಿತ್ತ ಉಪಾದಾನ, ಸಹಕಾರಿ, ರೂಪ ಸರ್ವವಿಧ ಕಾರಣನಾದ ಪರದೇವತಾ ವಿಶೇಷವುಶ್ರಿಯಃಪತಿಯೇ ಎಂಬ ನಿರ್ಧಾರಣವೇ ಮೊದಲಾದವುಗಳು (ಇದು ಅಕಾರಾರ್ಥವು) **ಸಿದ್ಧಿಕ್ಕೈಯಾಲ್** - ಸಿದ್ಧಿಸುವದರಿಂದ, ಹೀಗೆ ನಮ್ಮ ಸಿದ್ಧಾಂತಾರ್ಥಗಳೆಲ್ಲಾ ಬಹುಸ್ಪಷ್ಟವಾಗಿ ಮೂಲಮಂತ್ರದಲ್ಲಿ ತೋರಿಬರುವದರಿಂದ, ಇದಕ್ಕೆ ವ್ಯತಿರಿಕ್ತಗಳಾದ ಅನ್ಯ ಸಿದ್ಧಾಂತಗಳೆಲ್ಲಾ ನಿರಸ್ತವೆಂದು ಹೇಳಲು ಹೊರಟು, ಮೂಲ ಮಂತ್ರಾರ್ಥಗಳನ್ನು ಅನುಸಂಧಾನಮಾಡುವವರಿಗೆ ಇಂತವರ ಶಾಸ್ತ್ರ ಸಮ್ಮತವಲ್ಲದ ವಾದಗಳಿಂದ ಚಿತ್ತಭ್ರಮೆಯುಂಟಾಗುವದಿಲ್ಲವೆಂಬುದು ಹಾಗಿರಲಿ; ಮೂಲಮಂತ್ರಾರ್ಥಗಳನ್ನು ಅನುಸಂಧಾನ ಮಾಡುವವರ ಊರಲ್ಲಿರುವವರಿಗೂ ಕೂಡ ಯಾವ ಭ್ರಮಜ್ಞಾನವೂ ಉಂಟಾಗುವದಿಲ್ಲವೆಂದು ಹೇಳುತ್ತಾರೆ. **"ಸರ್ವಮಷ್ಟಾಕ್ಷರಾಂತಸ್ಥಮ್"** ಸಮಸ್ತ ಸಿದ್ಧಾಂತಾಭಿಪ್ರಾಯಗಳು ಮೂಲ ಮಂತ್ರದಲ್ಲಿ ಅಡಗಿವೆ ಎಂಬುದನ್ನು ಇಷ್ಟುದೂರ ವಿಸ್ತರಿಸಿ ಹೇಳಿದರು. ಇಂತಹ ಅನುಸಂಧಾನದಿಂದ ಅಪಸಿದ್ಧಾಂತಗಳು ಯಾವುವು ಮನಸ್ಸಿನ ಚಾಂಚಲ್ಯಕ್ಕೆ ಕಾರಣವಾಗುವದಿಲ್ಲವು ಇದು ಹೇಗೆಂದರೆ **"ಪಂಕಚ್ಛಿದಃ ಫಲಸ್ಯೇವ ನಿಘರ್ಷೇಣಾ ವಿಲಂಪಯಃ"** ಕೆಂಪಗಿರುವ ಕೆರೆಯನೀರಿರುವ ಪಾತ್ರೆಯ ಒಂದುಕಡೆಯಲ್ಲಿ ಚಿಲ್ಲದ ಬೀಜವನ್ನು ತೇದು ಹಚ್ಚಿದರೆ ಎಲ್ಲಾ ನೀರೂ ತತ್ಸಂಬಂಧದಿಂದ ಶುದ್ಧಿಯನ್ನು ಹೇಗೆ ಹೊಂದುತ್ತದೋ ಹಾಗೆ ಎಂಬ ಭಾವವು. ಈ ಮೂಲ ಮಂತ್ರಾರ್ಥದ ಅನುಸಂಧಾನ ಒಂದು ಸಾಕು, ಎಲ್ಲಾ ಅಪಸಿದ್ಧಾಂತಗಳೂ ಓಡಿಹೋಗುತ್ತವೆ ಎ ಮುಂದೆಂದು

**ಇಪ್ಪಡಿ ಅನುಸಂಧಿಪ್ಪಾರಿರುನ್ದ ವೂರಿಲಿರುಕ್ಕುಮವರ್‌ಗಳುಕ್ಕುಮ್.**
**೧. ಈಶ್ವರನ್ ಇಲ್ಲೈಎನ್ರುಮ್, ೨. ನಿರ್ವಿಶೇಷನೆನ್ರುಮ್, ೩. ಆತ್ಮನ್ತ್ರ್ಯೋದಾಸೀನನೆನ್ರುಮ್, ೪. ಪ್ರತಿಫಲನ ತುಲ್ಯೈಶ್ವರ್ಯನೆನ್ರುಮ್, ೫. ಕರ್ಮವಿಶೇಷ ಸಿದ್ಧೈಶ್ವರ್ಯನೆನ್ರುಮ್, ೬. ಕದಾಚಿತ್ಕವರ್ಣಾದಿ ಪರವಶನೆನ್ರುಮ್**

---

ತಿಳಿಸುತ್ತಾರೆ;—ಇಪ್ಪಡಿಯೋ-ಹೀಗೆ ವಿಸ್ತರಿಸಿಯೂ ಸಙ್ಗ್ರಹವಾಗಿಯೂ, **ಅನುಸಂಧಿಪ್ಪಾರಿರುನ್ದ** - ಅನುಸಂಧಾನಮಾಡುವವರಿರುವ **ಊರಿಲಿರುಕ್ಕುಮವರ್‌ಗಳುಕ್ಕುಮ್** - ಊರಲ್ಲಿ ಇರುವವರಿಗೂ ಕೂಡ, ಅಂತವರ ಸಂಬಂಧವು ಇವರಿಗೂ ಇರುವದರಿಂದ ಎಂಬ ಭಾವವು. ವಾಕ್ಯದ ಕೊನೆಯಲ್ಲಿ **ಕಲಕ್ಕಂ ವಾರಾದ** ಎಂದು ೩೭ ಅಪಸಿದ್ಧಾನ್ತಗಳನ್ನು ಹೇಳಿ, ಕೆಂನೆಗೆ ಅಂತಹ ಭ್ರಮಗಳುಂಟಾಗುವದಿಲ್ಲವೆಂದು ಹೇಳುತ್ತಾರೆ.—(೧) **ಈಶ್ವರನ್ ಇಲ್ಲೈ ಎನ್ರುಮ್** - ಲೋಕಾಯತಿಕ ಮಾಧ್ಯಮಿಕ ಮೀಮಾಂಸಕರು ಹೇಳುವಹಾಗೆ ಸರ್ವೇಶ್ವರನೇ ಇಲ್ಲವು ಎಂದು **"ಸದೇವಸೋಮ್ಯೇದಮಗ್ರ ಆಸೀತ್" "ಸರ್ವಂ ಖಲ್ವಿದಂ ಬ್ರಹ್ಮ"** ಇತ್ಯಾದ್ಯನೇಕ ಶ್ರುತಿಗಳಿಗೆ ವಿರುದ್ಧಾಭಿಪ್ರಾಯವು. (೨) **ನಿರ್ವಿಶೇಷ ನೆನ್ರುಮ್** – ಶಂಕರರು ಹೇಳುವಹಾಗೆ ಪರಬ್ರಹ್ಮನು ವಿಶೇಷಗಳಿಲ್ಲದವನೆಂದೂ **"ತೇಜೋಬಲೈಶ್ವರ್ಯ ಮಹಾವಬೋಧಸುವೀರ್ಯ ಶಕ್ತ್ಯಾದಿ ಗುಣೈಕರಾಶಿಃ"** (ವಿ. ಪು. ೬. ೫. ೮೫) **"ತಥಾಗುಣಾಶ್ಚ ದೇವಸ್ಯ ಹ್ಯಸಂಖ್ಯೇಯಾಹಿ ಚಕ್ರಿಣಃ"** (ವಾ. ಪು. ೭೪. ೭೦) ಇತ್ಯಾದಿಗಳಿಗೆ ವಿರುದ್ಧವು. (೩) **ಆತ್ಮನ್ತ್ರ್ಯೋದಾಸೀನನೆನ್ರುಮ್** - ಸಾಂಖ್ಯರು ಹೇಳುವಹಾಗೆ ಪರಮಾತ್ಮನು ತುಂಬಾ ಉದಾಸೀನನಾಗಿರುವನೆಂದೂ **"ವರ್ತ ಏವಚ ಕರ್ಮಣಿ"** (ಗೀ. ೩–೨೨) ಶ್ಲೋಕಕ್ಕೆ ವಿರುದ್ಧವು. (೪) **ಪ್ರತಿಫಲನ ತುಲ್ಯೈಶ್ವರ್ಯ ನೆನ್ರುಮ್** - ಜ್ಞಾನದ ಸ್ಫುರಣಕ್ಕನುಗುಣವಾದ ವಸ್ತುವ್ಯವಹಾರವುಳ್ಳವನೆಂದೂ, ಇದು **ಯೋಗಾಚಾರನ** ವಾದವು, ಈತನಿಗೆ ಜ್ಞಾನಮಾತ್ರ ಸತ್ಯವು, ಜ್ಞಾತಾವೂ ಇಲ್ಲವು, ಜ್ಞೇಯ ವಸ್ತುವೂ ಇಲ್ಲವು ಎಂದು ಹೇಳುವನು, ಜ್ಞಾನವೈಚಿತ್ರ್ಯದಿಂದಲೇ ವಸ್ತುವೈಚಿತ್ರ್ಯವೆನ್ನುವನು; ಮಕಾರದಿಂದ ತೋರುವ ವಸ್ತುವೈಚಿತ್ರ್ಯಯಿಂದ ಜ್ಞಾನವೈಚಿತ್ರ್ಯಯುಂಟಾಗುವದನ್ನು ಅಪಲಾಪಿಸಿ ಹಾಗೆಹೇಳುವನು. ಅವರು ಜ್ಞಾತಾಜ್ಞೇಯಗಳಿಲ್ಲವೆಂದು ಶಾಂಕರರು ಹೇಳುವಹಾಗೆ ಹೇಳುವನು. ಇದು **"ನಾಭಾವ ಉಪಲಬ್ಧೇಃ"** ಎಂಬ ಬ್ರಹ್ಮ ಸೂತ್ರದಲ್ಲಿ ಖಂಡಿಸಲ್ಪಟ್ಟಿರುತ್ತದೆ. ಅಥವಾ ವಾಸ್ತವವಾಗಿ ಪರಮಾತ್ಮನಿಗೆ ಐಶ್ವರ್ಯವೇನೂ ಇಲ್ಲವು; ಅವರೆ ಭಾವಿಸಿದುದಕ್ಕೆ ಅನುಗುಣವಾಗಿ ಐಶ್ವರ್ಯ ಉಂಟೆಂದು ಪ್ರತಿಫಲಿಸುತ್ತದೆಂಬ ವಾದವು. (೫) **ಕರ್ಮ ವಿಶೇಷಸಿದ್ಧೈಶ್ವರ್ಯ ನೆನ್ರುಮ್**-ಪ್ರಾಭಾಕರ ಮತದಲ್ಲಿ ಈತನು ಮಾಡುವ ಕರ್ಮವಿಶೇಷದಿಂದುಂಟಾದ ಅಪೂರ್ವರೂಪ ಐಶ್ವ

---

(೧) ನಾರದೀಯ ಕಲ್ಪ. ೧. ೯.

**೭. ತ್ರಿಮೂರ್ತಿಗಳುಮ್ ಸಮರೆನ್ರುಮ್, ೮. ಏಕರೆನ್ರುಮ್, ೯. ತ್ರಿಮೂರ್ತ್ತ್ಯುತ್ತೀರ್ಣನ್ ಪರತತ್ವಮೆನ್ರುಮ್, ೧೦. ಬ್ರಹ್ಮಾದಿಗಳಿಲೇ ಒರುವರ್ ಈಶ್ವರನೆನ್ರುಮ್, ೧೧. ಸ್ವರೂಪಪರಿಣಾಮ ವಾನೆನ್ರುಮ್, ೧೨. ನಿಮಿತ್ತೋಪಾದಾನೈಕ್ಯಂ ಕೊಳ್ಳವೊಣ್ಣಾದೆನ್ರುಮ್, ೧೩. ಜೀವೇಶ್ವರರ್‌ಗಳ್ ಏಕಾತ್ಮಾ**

---

ರ್ಯವೇ ಪರಬ್ರಹ್ಮವು; ಇವರಿಗೆ ಅಪೂರ್ವವೇ ಪರಬ್ರಹ್ಮವು ಬೇರೆ ಪರಬ್ರಹ್ಮವಿಲ್ಲವೆಂಬ ಭಾವವು. ಅದೇ ಫಲವನ್ನು ಕೊಡುತ್ತದೆಂದು ಹೇಳುವರು. ಇವರು ಮೀಮಾಂಸಕರೆಂದೂ ಹೇಳಲ್ಪಡುವರು. (೬) **ಕದಾಚಿತ್ಕರ್ಮಾದಿಪರವಶನೆನ್ರುಮ್**—ಒಂದಾನೊಂದು ಕಾಲದಲ್ಲಿ ಕರ್ಮಕ್ಕೆ ಪರವಶನಾಗುವನೆಂದೂ ಪರಮಾತ್ಮನು ಅಕರ್ಮವಶ್ಯನೆಂದು ಹೇಳುವ ಶ್ರುತಿಗೆ ವಿರುದ್ಧವು. **ಅನಶ್ನನನ್ಯೋ ಅಭಿಚಾಕಶೀತಿ"** ಇತ್ಯಾದಿ ಶ್ರುತಿಗಳಿಗೆ ವಿರುದ್ಧವು. (೭) ತ್ರಿಮೂರ್ತಿಗಳ ವಿಷಯದಲ್ಲಿ ೫. ಭೇದಗಳು :—**ತ್ರಿಮೂರ್ತಿಗಳುಮ್ ಸಮರ್** - ಚತುರ್ಮುಖ ಬ್ರಹ್ಮ, ವಿಷ್ಣು, ರುದ್ರ ಮೂವರೂ ಸಮವೆಂದೂ, ನಿಸ್ಸಮಾಭ್ಯಧಿಕ ಶ್ರುತಿಗೆ ವಿರುದ್ಧಾಭಿಪ್ರಾಯವು, (೮) **ಏಕರೆನ್ರುಮ್** - ಆ ಮೂವರೂ, ಒಬ್ಬನೇ ಹಾಗೆ ಬೇರೆಬೇರೆಯಾಗಿ ತೋರುತ್ತಾನೆಂದೂ ಇದು ಪರಾಶರ ವ್ಯಾಸ ಮನು, ವಾಲ್ಮೀಕಿ ಮೊದಲಾದ ಮಹರ್ಷಿಗಳ ವಚನಗಳಿಗೆಲ್ಲಾ ವಿರುದ್ಧವು. (೯) **ತ್ರಿಮೂರ್ತ್ತ್ಯುತ್ತೀರ್ಣಂ ಪರತತ್ವಮೆನ್ರುಮ್** - ತ್ರಿಮೂರ್ತಿಗಳಿಗೂ ಅಧಿಕನಾದ ಪರಶಿವನೇ ಪರತತ್ವವೆಂದೂ, ಅವರುಗಳಲ್ಲಿ ವಿಷ್ಣುವು ಪರತತ್ವವೆಂದು ವೇದಾದಿಯಾದ ಪ್ರಣವದ ಅಕಾರವೇ ತಿಳಿಸುತ್ತದೆ ಇದಕ್ಕೆ ವಿರುದ್ಧವು. (೧೦) **ಬ್ರಹ್ಮಾದಿಗಳಿಲೇ ಒರುವರ್ ಈಶ್ವರನೆನ್ರು** - ಆ ಮೂವರಾದ ಬ್ರಹ್ಮಾದಿಗಳಲ್ಲಿ ಒಬ್ಬನಾದ ಬ್ರಹ್ಮನಾಗಲಿ ರುದ್ರನಾಗಲಿ ಈಶ್ವರನೆಂದೂ, ಹೀಗೆ ಎರಡು ಮತಗಳು (೧೧) **ಸ್ವರೂಪ ಪರಿಣಾಮವಾನೆನ್ರುಮ್** - ಸ್ವರೂಪ ವಿಕಾರವುಳ್ಳವನು ಪರಮಾತ್ಮನೆಂದೂ (ಯಾದವ ಪ್ರಕಾಶಮತವು) ಇವರು ಪರಮಾತ್ಮನೇ ಸ್ವರೂಪ ಪರಿಣಾಮಹೊಂದಿ ಜಗತ್ತಿನ ಚಿತ್ತೂ ಅಚಿತ್ತೂ ಆಗುವನೆಂದು ಹೇಳುವರು. ಇದು ನಿರ್ವಿಕಾರಶ್ರುತಿಗೆ ವಿರುದ್ಧವು. (೧೨) **ನಿಮಿತ್ತೋಪಾದಾನೈಕ್ಯಂ ಕೊಳ್ಳವೊಣ್ಣಾದೆನ್ರುಮ್**. ನಿಮಿತ್ತ ಕಾರಣನು ಉಪಾದಾನ ಕಾರಣನೂ ಒಬ್ಬನೇ ಎಂದು ಅಂಗೀಕರಿಸಕೂಡದೆಂದೂ, ಹೀಗೆ ನೈಯಾಯಿಕರೂ ಮಾಧ್ವರೂ ಹೇಳುವರು, ಆಕಾರದಿಂದ ಸರ್ವಕಾರಣನು ಪರಮಾತ್ಮನೇ ಎಂಬುದು ನಮ್ಮಗಳ ಅಭಿಪ್ರಾಯವು **"ಯಥೋರ್ಣನಾಭಿ ಸೃಜತೇ ಗೃಹ್ಣತೇಚ"** ಎಂಬ ಶ್ರುತಿಯು ಸರ್ವ ಕಾರಣತ್ವವನ್ನು ಬೋಧಿಸುತ್ತದೆ. (೧೩) **ಜೀವೇಶ್ವರರ್‌ಗಳ್ ಏಕಾತ್ಮಾ ವೆನ್ರುಮ್** - ಜೀವಾತ್ಮನೂ ಪರಮಾತ್ಮನೂ ಒಂದೇ ಎಂದೂ ಇದು ಶಾಂಕರ ಭಾಸ್ಕರ, ಯಾದವ ಪ್ರಕಾಶ ಮತಗಳು. ಇದು **"ಪೃಥಗಾತ್ಮಾನಂ ಪ್ರೇರಿತಾ**

ವೆನ್ನುವರ್, ೧೪. ಉಪಾಧಿಸಿದ್ಧ ಭೇದರೆನ್ನುವರ್, ೧೫. ನಿತ್ಯಭಿನ್ನಾಭಿನ್ನರೆನ್ನುವರ್, ೧೬. ಜೀವಃ ಕರ್ಮಮಾತ್ರಾಧೀನ ಶೇಷಭಾವನೆನ್ನುವರ್, ೧೭. ಅನಿಯತ ಶೇಷಭಾವನೆನ್ನುವರ್, ೧೮. ಜಡನೆನ್ನುವರ್, ೧೯. ಜ್ಞಾನಮಾತ್ರ

---

ರಂಚ ಮತ್ವಾ" (ಶ್ವೇ ೧-೬) "ದ್ವಾಸುಪರ್ಣಾ" (ಮುಂ. ೩-೧.೧) ಇತ್ಯಾದ್ಯನೇಕ ಶ್ರುತಿಗಳಿಗೆ ವಿರುದ್ಧವು. (೧೪) **ಉಪಾಧಿ ಸಿದ್ಧಭೇದರೆನ್ನುವರ್**-ಸಿತ್ಯವಾದ ಉಪಾಧಿಯಿಂದ ಭೇದವಾಗಿ ತೋರುತ್ತಾರೆ ವಿನಾ, ಇರುವದು ಒಂದೇ ಆತ್ಮಾ ಎಂದು ಹೇಳೋಣವು. ಇದು ಭಾಸ್ಕರೀಯರ ಅಭಿಪ್ರಾಯವು. ಇದೂ ಮೇಲಿನ ಶ್ರುತಿಗಳಿಗೆಲ್ಲಾ ವಿರುದ್ಧವು. (೧೫) **ನಿತ್ಯ ಭಿನ್ನಾಭಿನ್ನರೆನ್ನುವರ್** – ಯಾಪಾಗಲೂ ಭಿನ್ನರಾಗಿಯೂ ಅಭಿನ್ನರಾಗಿಯೂ ಆತ್ಮರುಗಳು ಇದ್ದಾರೆಂಬುದು ಯಾದವಪ್ರಕಾಶಮತವು. ೨೨ನೆಯ ಪುಟವನ್ನು ನೋಡಿ. ಇವರುಗಳು ಅಭಿನ್ನನಾದ ಪರಮಾತ್ಮನೇ ಸತ್ಯೋಪಾಧಿಯಿಂದ ಚಿದಚಿತ್ತಾಗಿ ತೋರುವನೆಂದು ಹೇಳುವರು. ಪರಸ್ಪರ ದೋಷಯುಕ್ತವಾದ ಅಭಿಪ್ರಾಯವು.

**ಮುಂದೆ ಜೀವಾತ್ಮನ ವಿಷಯದಲ್ಲಿ ೨೨ ಭ್ರಮಯುಕ್ತವಾದಗಳನ್ನು ಹೇಳುತ್ತಾರೆ.**

(೧೬) **ಜೀವಃ ಕರ್ಮಮಾತ್ರಾಧೀನ ಶೇಷಭಾವನೆನ್ನುವರ್** - ಜೀವನು ಕರ್ಮಕ್ಕೆ ಮಾತ್ರ ಅಧೀನವಾದ ಶೇಷಭಾವವನ್ನುಳ್ಳವನೆಂದೂ, ಇದು ಕರ್ಮಮೀಮಾಂಸಕರ ಅಭಿಪ್ರಾಯವು. ಇದು "**ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ**" ಎಂಬ ಪ್ರಮಾಣಕ್ಕೆ ವಿರುದ್ಧವು. **ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ**" ಎಂಬುದಕ್ಕೂ ವಿರುದ್ಧವು. (ಗೀ.೧೫-೭) ಮಾತ್ರಶಬ್ದದಿಂದ ಈಶ್ವರನಿಲ್ಲವೆಂಬುದು ಅವರ ಅಭಿಪ್ರಾಯವು. (೧೭) **ಅನಿಯತ ಶೇಷಭಾವನೆನ್ನುವರ್** - ಜೀವನಿಗೆ ಶೇಷಭಾವವು ನಿಯತವಾದುದಲ್ಲವೆಂದೂ ಇದು ಶಾಂಕರ, ಭಾಸ್ಕರ, ಯಾದವ ಪ್ರಕಾಶಾದಿ ಮತವು. "**ದ್ವಾವಜೌ ಈಶನೀಶೌ**" ಎಂಬ ಶ್ರುತಿಗೆ ವಿರುದ್ಧವು. (೧೮) **ಜಡ ನೆನ್ನುವರ್** - ಜೀವಾತ್ಮನು ಕಲ್ಲಿನಹಾಗೆ ಸುಮ್ಮನಿರುವನೆಂದೂ, ಕೆಲಸಮಾಡುವದಿಲ್ಲವೂ ಆತನ ಶರೀರವೆಂದೂ ಇದು ಸಾಂಖ್ಯರ ಅಭಿಪ್ರಾಯವು. ಜಪಾಕುಸುಮ (ಕೆಂಪು ದಾಸವಾಳದ ಹೂವು) ವನ್ನು ಸ್ಫಟಿಕದ ಹತ್ತಿರ ಇಟ್ಟರೆ, ಸ್ಫಟಿಕವು ಕೆಂಪಗೆ ಹೇಗೆ ತೋರುತ್ತದೋ, ಅದೇರೀತಿಯಲ್ಲಿ ಪ್ರಕೃತಿಯ ಪ್ರವೃತ್ತಿಗಳನ್ನು ಜೀವಾತ್ಮನು ತನ್ನದೆಂದು ಆರೋಪಿಸಿಕೊಳ್ಳುವನೆಂಬುದು ಅವರ ಸಿದ್ಧಾಂತವು. ೨೧೮ನೆಯ ಪುಟವನ್ನು ನೋಡಿ. "**ಕರ್ತಾ ಶಾಸ್ತ್ರಾರ್ಥವತ್ವಾತ್**" ಎಂಬ ಬ್ರಹ್ಮಸೂತ್ರಕ್ಕೂ, "**ನಹಿಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್**" ಎಂಬ ಗೀತಾಚಾರ್ಯ ವಾಕ್ಯಕ್ಕೂ ವಿರುದ್ಧವು ಈ ಕ್ಷೇತ್ರಜ್ಞನು ಒಂದು ಕ್ಷಣಕೂಡಲ ಕೆಲಸಮಾಡದಿರು ಸಾಧ್ಯವೇ ಇಲ್ಲವೆಂದು

**ಸ್ವರೂಪನೆನ್ನುಮ್, ೨೦. ನಿತ್ಯಮುಕ್ತನೆನ್ನುಮ್, ೨೧. ಆರೋಪಿತ ಭೋಗನೆನ್ನುಮ್ ೨೨. ಕರ್ತ್ತವಲ್ಲನೆನ್ನುಮ್. ೨೩. ಈಶ್ವರನಿರಪೇಕ್ಷ ಕರ್ತ್ತಾವೆನ್ನುಮ್**

---

ಹೇಳಲ್ಪಟ್ಟಿರುತ್ತದೆ. (೧೯) **ಜ್ಞಾನಮಾತ್ರ ಸ್ವರೂಪನೆನ್ನುಮ್** - ಇದು ಶಾಂಕರ, ಬೌದ್ಧರ ಒಂದು ಪಂಗಡದವರಾದ ಯೋಗಾಚಾರ ಮೊದಲಾದವರುಗಳ ಮತವು. ಸಾಂಖ್ಯರೂ ಆತ್ಮಾವಿಗೆ ಜ್ಞಾತೃತ್ವವಿಲ್ಲವೆಂದು ಮೇಲಿನವರಹಾಗೆಯೇ ಹೇಳುವರು. **ಜ್ಞೋತಏವ** ಎಂಬ ಬ್ರಹ್ಮ ಸೂತ್ರದಲ್ಲಿ ಈ ಅಭಿಪ್ರಾಯವು **ಖಂಡಿಸಲ್ಪಟ್ಟಿರು**ತ್ತದೆ. **"ಏಷ ಹಿ ದ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮನ್ತಾ ಬೋದ್ಧಾ ಕರ್ತ್ತಾ ವಿಜ್ಞಾನಾತ್ಮಾ ಪುರುಷಃ"** (ಪ್ರ. ೪. ೯) ಎಂಬಲ್ಲಿ ಜ್ಞಾತಾ ಎಂಬುದು ಮುಖಾರದಿಂದ ವ್ಯಕ್ತವು. (೨೦) **ನಿತ್ಯಮುಕ್ತನೆನ್ನುಮ್**-ಇದೂ ಸಾಂಖ್ಯರ ಅಭಿಪ್ರಾಯವು. ಆತ್ಮವು ಪ್ರಕೃತಿಯ ಸಾನ್ನಿಧ್ಯದಲ್ಲಿದ್ದರೂ ಆತನು ಏನನ್ನೂ ಮಾಡದೆ ಪಾಷಾಣದಹಾಗೆ ಇದ್ದಾನೆಂದೂ ಇಂತಹ ಮುಕ್ತನೆಂಬ ಜ್ಞಾನ ಉಂಟಾಗುವದೇ ಮುಕ್ತಿಯಾದುದರಿಂದ ಜೀವಾತ್ಮನು ಯಾವಾಗಲೂ ನಿತ್ಯಮುಕ್ತನೇ. ತಾನು ಸಂಸಾರಿ ಎಂಬುದು ಬರೀ ಭ್ರಮಜ್ಞಾನವೆನ್ನುವರು. ೨೧೮. ೯ ಪುಟಗಳನ್ನು ನೋಡಿ. ಬದ್ಧ ದಶೆಯಲ್ಲಿ ಮುಕ್ತನೇಂಬುದು ಪ್ರತ್ಯಕ್ಷಕ್ಕೇ ವಿರುದ್ಧವು. ಬೇವಿನಕಾಯಿ ಸಿಹಿಯಾಗಿದೆ ಎಂದು ಹೇಳಿದಹಾಗೆ. (೨೧) **ಆರೋಪಿತಭೋಗನೆನ್ನುಮ್** - ಅದ್ದರಿಂದ ತಾನು ಜಗತ್ತನ್ನು ಅನುಭವಿಸುವನೆಂಬ ಭಾವನೆಯಾದುದರಿಂದ, ತಾನು ಭೋಕ್ತಾ ಎಂದು ಆರೋಪಿಸಿಕೊಳ್ಳುವನೆಂದೂ, ಇದು ಸಾಂಖ್ಯಮತವೇ. ೨೧೦ನೆಯ ಪುಟವನ್ನು ನೋಡಿ. **"ಭೋಕ್ತಾ ಭೋಗ್ಯಂ ಪ್ರೇರಿತಾರಂಚಮತ್ವಾ** ಎಂಬಲ್ಲಿ ಭೋಕ್ತೃತ್ವವು ಕಂಠೋಕ್ತವು. (೨೨) **ಕರ್ತ್ತಾವಲ್ಲನೆನ್ನುಮ್** – ಯಾವಾಗ ಭೋಕ್ತೃತ್ವವಿಲ್ಲವೋ, ಆಗ ಕರ್ತೃತ್ವವೂ ಇಲ್ಲದೇ ಇರಬೇಕು. ಇದೂ ಸಾಂಖ್ಯರ ಅಭಿಪ್ರಾಯವು. **"ಕರ್ತ್ತಾ ಶಾಸ್ತ್ರಾರ್ಥವತ್ವಾತ್"** ಎಂಬ ( ) ಬ್ರಹ್ಮಸೂತ್ರಕ್ಕೆ ವಿರುದ್ಧವು, ಹಾಗೆಯೇ **"ಯಜೇತ" "ಉಪಾಸೀತ"** ಇತ್ಯಾದ್ಯನೇಕ ವಿಧ್ಯುಕ್ತಿಗಳಿಗೂ ವಿರುದ್ಧವು. ಕರ್ತ್ತಾವಲ್ಲವು ಎಂದರೆ ಶಾಸ್ತ್ರವೈಯರ್ಥ್ಯವೂ, ಗುರೂಪದೇಶದ ನೈರರ್ಥಕ್ಯವೂ ಉಂಟಾಗುತ್ತದೆ. (೨೩) **ಈಶ್ವರನಿರಪೇಕ್ಷ ಕರ್ತ್ತಾವೆನ್ನುಮ್** - ಈಶ್ವರನಿಗೆ ಅಧೀನವಲ್ಲದ ಕರ್ತ್ತಾ ಜೀವಾತ್ಮನು ಎಂದು ನಿರೀಶ್ವರ ಮೀಮಾಂಸಕರು ಹೇಳುವರು. ಕರ್ಮದಿಂದ ಒಂದು ಅಪೂರ್ವವೆಂಬುದು ಉಂಟಾಗಿ ಅದೇ ಫಲವನ್ನು ಕೊಡುತ್ತದೆ. ಫಲ ಕೊಡಲು ಒಬ್ಬ ಈಶ್ವರನೇನೂ ಬೇಕಾಗಿಲ್ಲವೆಂದು ಹೇಳುವರು. **"ಪ್ರೇರಿತಾರಂಚ ಮತ್ವಾ" "ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ" ಪರಾತು ತಚ್ಛ್ರುತೇಃ" "ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ" "ಯ ಆತ್ಮಾನ ಮನ್ತರೋಯಮಯತಿ"** ಇತ್ಯಾದಿ ಪ್ರಮಾಣಗಳಿಗೆ ವಿರುದ್ಧಾಭಿಪ್ರಾ

**೨೪. ಆಪ್ರಳಯಸ್ಥಾಯಿ ಎನ್ನುವುಮ್, ೨೫. ಆಮೋಕ್ಷಸ್ಥಾಯಿ ಎನ್ನುವುಮ್ ೨೬. ಏಕನೆನ್ನುವುಮ್, ೨೭. ಸ್ವನಿಷ್ಠನೆನ್ನುವುಮ್, ೨೮. ಸ್ವರೂಪತಃ ಕಾರ್ಯಭೂತ**

---

ಯುವು. (೨೪) **ಆಪ್ರಳಯಸ್ಥಾಯಿ ಎನ್ನುವುಮ್** - ಜೀವನು ಪ್ರಳಯದವರೆಗೆ ಮಾತ್ರ ಇರುವನೆಂದು ಕೆಲವರು ಹೇಳುವರು ಎಂದರೆ ಅನಂತರವಿಲ್ಲವೆಂಬುದು ಅವರ ಅಭಿಪ್ರಾಯವಾಗಿ ತೋರುತ್ತದೆ. "ಶಾಶ್ವತೋಽಯಂ ಪುರಾಣಃ (ಗೀ. ೨-೨೦) ಎಂಬುದಕ್ಕೆ ವಿರುದ್ಧವು. (೨೫) **ಆಮೋಕ್ಷಸ್ಥಾಯಿ ಎನ್ನುವುಮ್** - ಮೋಕ್ಷವು ಉಂಟಾಗುವವರೆಗೂ ಈ ಆತ್ಮನು ಬೇರೆಯಾಗಿ ತೋರುವನೆಂದೂ ಅನಂತರ ಪರಮಾತ್ಮನೊಂದಿಗೆ ಸ್ವರೂಪೈಕ್ಯವನ್ನು ಹೊಂದುವನು ಎಂದೂ, ಇದು ಶಾಂಕರ ಭಾಸ್ಕರ ಯಾದವ ಪ್ರಕಾಶಾದಿಗಳ ಅಭಿಪ್ರಾಯವು. ಮೋಕ್ಷವಾದನಂತರವೂ ಬೇರೆ ಇರುವರೆಂದು, "ಸದಾಪಶ್ಯನ್ತಿ ಸೂರಯಃ" ಎಂದೂ "ಕಾಮಚಾರೋ ಭವತಿ" ಎಂದೂ "ಸ ಏಕಧಾ ಭವತಿ, ತ್ರಿಧಾ ಭವತಿ" "ಮಮ ಸಾಧರ್ಮ್ಯಮಾಗತಾಃ" ಎಂದೂ ಹೀಗೆ ಅನೇಕ ಪ್ರಮಾಣಗಳಿರುವದರಿಂದ ವಿರುದ್ಧವು. ಇದು ಶಾಂಕರರ ಅಭಿಪ್ರಾಯವೇ ವಿನಾ, ಶ್ರೀಮಚ್ಛಂಕರಾಚಾರ್ಯರ ಅಭಿಪ್ರಾಯವಲ್ಲವು. ಜೀವಾತ್ಮನು ಮುಕ್ತದಶೆಯಲ್ಲಿ ಹೇಗಿರುತ್ತಾನೆಂಬುದಕ್ಕೆ ದೃಷ್ಟಾಂತವಾಗಿ ನಿರತಿಶಯ ಪ್ರೀತಿಯಿಂದ ಕೂಡಿದ ಹೆಂಡತಿಯು ಬಹುಕಾಲ ಅಗಲಿ ಅನಂತರ ಗಂಡನೊಂದಿಗೆ ಸೇರಿರುವಹಾಗೆ ಎಂದು ಹೇಳಿರುವದರಿಂದ ನಮ್ಮಹಾಗೆ ಸಾಯುಜ್ಯವೇ ಅವರ ಅಭಿಪ್ರಾಯವು. ಅವರ ಈಚಿನವರ ಅಭಿಪ್ರಾಯವೀಗ ಭಿನ್ನವು. ಘಟಾಕಾಶವು ಪರಮಾಕಾಶವನ್ನು ಸೇರುವ, ಮತ್ತು ನದಿಗಳು ಸಮುದ್ರವನ್ನು ಹೋಗಿ ಸೇರುವ ಶಾಸ್ತ್ರ ದೃಷ್ಟಾಂತಗಳಿಗೆ ಸರಿಯಾದ ಅರ್ಥವನ್ನು ಹೇಳಲಾರರು; ಮತ್ತು ತೈತ್ತಿರೀಯದ ಬ್ರಹ್ಮವಿತ್ತು ಬ್ರಹ್ಮೈವ ಭವತಿ, ಅಹಂ ಬ್ರಹ್ಮಾಸ್ಮಿ, ಎಂಬೀವಾಕ್ಯಗಳಿಗೂ ಅವರುಗಳು ಸರಿಯಾದ ಅರ್ಥವನ್ನು ಹೇಳಲಾರರು. ಹಾಗೆಯೇ "ತತ್ತ್ವಮಸಿ" ಎಂಬುದಕ್ಕೂ ಸಹ. "ಬ್ರಹ್ಮವಿದಾಪ್ನೋತಿ ಪರಂ" ಎಂಬುದಕ್ಕೂ "ಪರಮಂ ಸಾಮ್ಯಮುಪೈತಿ" "ಜಕ್ಷತ್ಕ್ರೀಡನ್ ರಮಮಾಣಃ" ಇತ್ಯಾದ್ಯನೇಕ ವಾಕ್ಯಗಳಿಗೆ ವಿರುದ್ಧವಾಗುತ್ತದೆ. (೨೬) **ಏಕನೆನ್ನುವುಮ್** - ಜೀವಾತ್ಮರೆಲ್ಲಾ ಒಂದೇ ಆತ್ಮಾ ಎಂದೂ ಹೀಗೆ ಹೇಳುವರು ಮೀಮಾಂಸಕರು. ಬಹುವೆಂದು ಹೇಳುವ ಶ್ರುತಿಗಳಿಗೆ ವಿರುದ್ಧವಾದ ಅಭಿಪ್ರಾಯವು. "ನಿತ್ಯೋ ನಿತ್ಯಾನಾಂ" ಎಂಬ ಶ್ರುತಿಗೆ ವಿರುದ್ಧವು. (೨೭) **ಸ್ವನಿಷ್ಠನೆನ್ನುವುಮ್** - ಈಶ್ವರನಿಗೆ ವಿಶೇಷಣಭೂತನಲ್ಲವು, ಸ್ವತಂತ್ರನೆಂದೂ, ಹೀಗೆ ಹೇಳುವರೂ ಮೀಮಾಂಸಕರೇ. "ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ" ಎಂದು "ಸೂತ್ರೇ ಮಣಿಗಣಾಇವ" ಇತ್ಯಾದಿ ಪ್ರಮಾಣಗಳಿಗೆ ವಿರುದ್ಧವು. (೨೮) **ಸ್ವರೂಪತಃ ಕಾರ್ಯಭೂತನೆನ್ನುವುಮ್** - ಸ್ವರೂಪತಃ ಪರಿಣಾಮವನ್ನು ಹೊಂದಿ

**ನೆನ್ರುಮ್, ೨೯. ಕಾರ್ಯತ್ವ ಪ್ರಸಙ್ಗರಹಿತನೆನ್ರುಮ್, ೩೦. ಕರ್ಮಮಾತ್ರೋಪಾಯನೆನ್ರುಮ್, ೩೧. ಮುಕ್ತದಶೈಯಿಲ್ ಪಾಷಾಣ ಕಲ್ಪನೆನ್ರುಮ್, ೩೨. ಸ್ವಾತ್ಮಾನಂದಮಾತ್ರ ತೃಪ್ತನೆನ್ರುಮ್, ೩೩ ಅತ್ಯನ್ತ ಸ್ವತನ್ತ್ರ ನಾನೆ**

---

ಕಾರ್ಯಭೂತನು ಜೀವಾತ್ಮನೆಂದೂ, ಇದು ಯಾದವ ಪ್ರಕಾಶೀಯ ಮತವು. ಸ್ವರೂಪನಾಶವು ಜೀವಾತ್ಮನಿಗಿಲ್ಲವೆಂದು ಹೇಳುವ ಶ್ರುತಿ ಸ್ಮೃತಿವಾಕ್ಯಗಳಿಗೆ ವಿರುದ್ಧವು. "ಅಚ್ಛೇದ್ಯೋಽಯಂ" ಎಂಬ ಮತ್ತು "ಅವಿನಾಶೀ" ಇತ್ಯಾದಿ ಗೀತಾವಾಕ್ಯಗಳಿಗೂ ವಿರುದ್ಧವು. ಜೀವ ಸ್ವರೂಪ ಪರಿಣಾಮವಾದವು ಜೈನಮತ ಖಂಡನದಲ್ಲಿ ಸೂತ್ರಭಾಷ್ಯದಲ್ಲಿ ಖಂಡಿಸಲ್ಪಟ್ಟಿರುತ್ತದೆ, ಮತ್ತು "ನಾತ್ಮಾ ಶ್ರುತೇಃ" ಎಂಬ ಸೂತ್ರದಲ್ಲೂ ಸ್ವರೂಪ ಪರಿಣಾಮವುಳ್ಳ ಉತ್ಪತ್ತಿಯು ನಿಷೇಧಿಸಲ್ಪಟ್ಟಿರುತ್ತದೆ. (೨೯) **ಕಾರ್ಯತ್ವ ಪ್ರಸಙ್ಗರಹಿತ ನೆನ್ರುಮ್** - ಕಾರ್ಯತ್ವದ ಪ್ರಸಙ್ಗವೇ ಇಲ್ಲದವನೆಂದೂ, ಹೀಗೆ ಹೇಳುವವರು ಮೀಮಾಂಸಕಾದಿಗಳು. ಸೃಷ್ಟಿಗೆ ಸೇರಿ ಸ್ವಭಾವ ಪರಿಣಾಮವುಳ್ಳವನಾದುದರಿಂದ, ಈ ಅಭಿಪ್ರಾಯವು ವಿರುದ್ಧವು; ಮುಕ್ತದಶೆಯಲ್ಲಿ ಸ್ವಭಾವ ಪರಿಣಾಮವು ತೊಲಗಿ **ಸ್ವೇನರೂಪೇಣಾಭಿ ನಿಷ್ಪದ್ಯತೇ"** ಎಂದು ಹೇಳಲ್ಪಟ್ಟಿರುತ್ತದೆ. ೩೦. **ಕರ್ಮಮಾತ್ರೋಪಾಯನೆನ್ರುಮ್** - ಫಲಸಿದ್ಧಿಗೆ ಕರ್ಮ ಮಾತ್ರವೇ ಉಪಾಯವಾಗಿ ಉಳ್ಳವನೆಂದೂ, ಹೀಗೆ ಹೇಳುವವರು ಮೀಮಾಂಸಕರೇ, ಫಲವನ್ನು ಕೊಡುವದು ಕರ್ಮವೇ ಎಂದೂ, ಆ ಕರ್ಮದಿಂದ ಅಪೂರ್ವವು ಉಂಟಾಗುತ್ತದೆಂದೂ ಅದು ಫಲವನ್ನು ಕೊಡುತ್ತದೆಂದೂ ಹೇಳುವರು, ಮಾತ್ರ ಶಬ್ದದಿಂದ ಈಶ್ವರನು ಬೇಕಾಗಿಲ್ಲವು, ಫಲಕೊಡಲು ಆತನೇನೂ ಬೇಕಾಗಿಲ್ಲವು ಎಂಬುದು ಹೇಳಲ್ಪಟ್ಟಿತು. **ಏಕೋಬಹೂನಾಂ ವಿದಧಾತಿಕಾಮಾನ್"** ಎಂಬ ಶ್ರುತಿಗೆ ವಿರುದ್ಧವು. ಜಡವಾದ ಕರ್ಮವು ಹೇಗೆ ಫಲವನ್ನು ಕೊಟ್ಟೀತು ಎಂಬ ಪ್ರಶ್ನೆಯು ನಿರುತ್ತರವಾಗುವದು. (೩೧) **ಮುಕ್ತದಶೈಯಿಲ್ ಪಾಷಾಣಕಲ್ಪ ನೆನ್ರುಮ್** - ಮುಕ್ತ ದಶೆಯಲ್ಲಿ ಜೀವಾತ್ಮನು ಕಲ್ಲಿನಹಾಗೆ ನಿರ್ವ್ಯಾಪಾರಿಯಾಗಿರುವನು ಎಂದೂ, ಇದು ನೈಯಾಯಿಕ ಸಿದ್ಧಾಂತವು. **"ಜಕ್ಷತ್ಕ್ರೀಡನ್ ರಮಮಾಣಃ" "ಸದಾಪಶ್ಯನ್ತಿ ಸೂರಯಃ" "ತದಾ ಏಕಧಾ ಭವತಿ ತ್ರಿಧಾಭವತಿ"** ಇತ್ಯಾದಿ ಪ್ರಮಾಣಗಳಿಗೆ ವಿರುದ್ಧವು. (೩೨) **ಸ್ವಾತ್ಮಾನಂದ ಮಾತ್ರತೃಪ್ತನೆನ್ರುಮ್** - ತನ್ನ ಆತ್ಮಾವಿಗೆ ಆನಂದವುಂಟಾದರೆ ಅದರಿಂದಲೇ ಆತ್ಮಾ ತೃಪ್ತನೆಂದೂ, ಹೀಗೆ ಹೇಳುವವರು ಮೀಮಾಂಸಕರು. ಪರಮಾತ್ಮನಿಗೆ ಸಮಾನವಾದ ಆನಂದ ಪ್ರಾಪ್ತಿ ಎಂದು ಹೇಳುವ ಶ್ರುತಿವಾಕ್ಯಕ್ಕೆ ವಿರುದ್ಧವು. (೩೩) **ಅತ್ಯನ್ತ ಸ್ವತಂತ್ರನಾನೆನ್ರುಮ್** - ಜೀವಾತ್ಮನು ಮುಕ್ತದಶೆಯಲ್ಲಿ ಸರ್ವ ಸ್ವತಂತ್ರನೆಂದೂ ಇದು ಪಾಶುಪತರ ಅಭಿಪ್ರಾಯವು. **"ದಾಸಭೂತಾಸ್ಸ್ವತಸ್ಸರ್ವೇ"** ಎಂಬುದಕ್ಕೆ ವಿರುದ್ಧವು.

**ನ್ರುಮ್ ೩೪ ಈಶ್ವರನೋಡೆ ಏಕೀ ಭೂತನಾ ಮೆನ್ರುಮ್, ೩೫. ವ್ಯಾಪಾರಾದಿ ರಹಿತನಾಮೆನ್ರುಮ್, ೩೬. ವಿಭಾಗಾ ವಿಭಾಗಾದಿ ಶಕ್ತಿಮಾನೆನ್ರುಮ್, ೩೭, ಆನಂದತಾರತಮ್ಯ ವಾನೆನ್ರುಮ್, ೩೮. ವ್ಯವಸ್ಥಿತ ಸಾಲೋಕ್ಯಾದಿ ಭೇದವಾನೆನ್ರುಮ್, ಮತ್ತು ಮಿಪ್ಪುಡೈಗಳಿಲುಳ್ಳ ಬಾಹ್ಯಕುದೃಷ್ಟಿ ಮತಙ್ಗಳಿನಾಲುಮ್ ಕಲಕ್ಕಮ್ ವಾರಾದು.**

---

೩೪. **ಈಶ್ವರನೋಡೆ ಏಕೀಭೂತನಾಮೆನ್ರು**-ಪರಮಾತ್ಮನೊಂದಿಗೆ ಮೋಕ್ಷದಶೆಯಲ್ಲಿ ಸ್ವರೂಪೈಕ್ಯವನ್ನು ಹೊಂದುವನೆಂದೂ. ಇದು ಶಾಂಕರರ ಅಭಿಪ್ರಾಯವು. "**ಪರಮಂ ಸಾಮ್ಯಮುಪೈತಿ**" (ಮುಂ. ೩-೧.೩) "**ಜಗದ್ವ್ಯಾಪಾರ ವರ್ಜಮ್**" (ವ್ಯಾ ಸೂ. ೪-೪-೧೭) "**ಮಮ ಸಾಧರ್ಮ್ಯಮಾಗತಾಃ**" (ಗೀ. ೧೪-೨) "**ಸದಾ ಪಶ್ಯನ್ತಿ ಸೂರಯಃ**" (ಸುಬಾ. ೬) "**ಕಾಮಚಾರೋ ಭವತಿ**" "**ಜಕ್ಷತ್ಕ್ರೀಡನ್ ರಮಮಾಣಃ**" (ಛಾಂ. ೮-೧೨-೩) ಇತ್ಯಾದ್ಯನೇಕ ಪ್ರಮಾಣಗಳಿಗೆ ವಿರುದ್ಧವು. ಹಿಂದೆ ೧೮೮-೯೩ **ಪುಟಗಳನ್ನು** ನೋಡಿ. (೩೫) **ವ್ಯಾಪಾರಾದಿ ರಹಿತನೆನ್ರುಮ್** - ಮುಕ್ತ ದಶೆಯಲ್ಲಿ ವ್ಯಾಪಾರ ರಹಿತನೆಂದೂ, ಇದು ನೈಯಾಯಿಕರ ಮತವು. ಮೇಲಿನ ಪ್ರಮಾಣಗಳಿಗೆ ಇದೂ ವಿರುದ್ಧವು. (೩೬) **ವಿಭಾಗಾವಿಭಾಗಾದಿ ಶಕ್ತಿಮಾನ್ ಎನ್ರುಮ್** - ಜೀವಾತ್ಮನು ಪರಮಾತ್ಮನಿಗಿಂತ ವಿಭಕ್ತನಾಗಿಯೂ ಅವಿಭಕ್ತನಾಗಿಯೂ ಇರುವ ಶಕ್ತಿಯುಳ್ಳವನು; ಇದು ಯಾದವಪ್ರಕಾಶ ಮತವು. (೩೭) **ಆನಂದ ತಾರತಮ್ಯವಾನ್ ಎನ್ರುಮ್** -ಮುಕ್ತದೆಶೆಯಲ್ಲಿ ಭಿನ್ನರಾದ ಜೀವಾತ್ಮರು ಹೊಂದುವ ಆನಂದದಲ್ಲಿ ಪರಮಾತ್ಮನಿಗಿಂತಲೂ ಬೇರೆಯಾಗಿ ತಾರತಮ್ಯ ಉಂಟೆಂದೂ; ಇದು ದ್ವೈತ ಸಿದ್ಧಾಂತಿಗಳ ಅಭಿಪ್ರಾಯವು. ಇದು "**ಪರಮಂ ಸಾಮ್ಯಮುಪೈತಿ**" (ಮುಂ. ೩-೧-೩) "ಮಮ ಸಾಧರ್ಮ್ಯ **ಮಾಗತಾಃ**" (ಗೀ. ೧೪-೨) "**ಭೋಗಮಾತ್ರಸಾಮ್ಯಲಿಙ್ಗಾಚ್ಚ**" (ಶಾ. ಸೂ. ೪-೪-೨೧) ಎಂಬೀ ಪ್ರಮಾಣಗಳಿಗೆ ವಿರುದ್ಧವು. ಹಿಂದೆ ಇದು ಉಪಪಾದಿತವು. ೧೫೮೭-೮ನೆಯ **ಪುಟಗಳನ್ನು** ನೋಡಿ. ೩೮. ವ್ಯವಸ್ಥಿತ **ಸಾಲೋಕ್ಯಾದಿ ಭೇದವಾನ್ ಎನ್ರುಮ್** - ಜೀವಾತ್ಮರಿಗೆ **ಸಾಲೋಕ್ಯ**ಮೊದಲಾದ ತಾರತಮ್ಯವು ವ್ಯವಸ್ಥಿತವಾದುದು ಎಂದೂ; ಇದೂ ದ್ವೈತ ಸಿದ್ಧಾಂತಾಭಿಪ್ರಾಯವು. **ಮೋಕ್ಷವು ಸಾಯುಜ್ಯ**ವಾದುದರಿಂದ ಇದು ಸಮಂಜಸಾರ್ಥವಲ್ಲವು. ಸಾಯುಜ್ಯದಲ್ಲೇ ಸಾಲೋಕ್ಯಾದಿಗಳು ಅಂತರ್ಗತವು. ಮತ್ತು ಇಷ್ಟು ಮಾತ್ರವೇ ಅಲ್ಲದೆ ಇನ್ನೂ, **ಮತ್ತು ಇಪ್ಪುಡೈಗಳಿಲುಳ್ಳ** - ಹೀಗೆಯೇ ಈ ಪ್ರಕಾರಗಳಾದ, **ಬಾಹ್ಯಕುದೃಷ್ಟಿ ಮತಙ್ಗಳಿನಾಲುಮ್** - ವೇದ ಪ್ರಮಾಣವನ್ನು ಅಂಗೀಕರಿಸದ, ಮತ್ತು ವೇದ ವಾಕ್ಯಗಳಿಗೆ ಅಪಾರ್ಥಗಳನ್ನು ಹೇಳುವ ಮತಗಳ ಅಭಿಪ್ರಾಯಗಳು ಯಾವುದರಿಂದಲೂ, **ಕಲಕ್ಕಮ್ ವಾರಾದು** - ಭ್ರಮ ಅಥವಾ ಸ್ಖಾಲಿತ್ಯವು ಬರಲಾರದು.

**ಮನ್ತ್ರಾರ್ಥಾಭಿಜ್ಞಸ್ಯ ಸ್ವನಿಷ್ಠಾ ವಿರೋಧಿನೋ ವಿನಿವರ್ತನ್ತ ಇತ್ಯಾಹ.**

**ಇಪ್ಪಡಿಯೇ ರಕ್ಷಕನಾನ ಶ್ರಿಯಃಪತಿಯೈಪ್ಪತ್ತು ೧. ವಿಶ್ವಾಸಮಾನ್ದ್ಯ**

ಯಾಂಗೆ ಬರಲಾರದು ಎಂದರೆ ಹಿಂದೆ ಮೂಲಮಂತ್ರಾರ್ಥಗಳನ್ನು ಚನ್ನಾಗಿ **"ಅನುಸಂಧಿಪ್ಪಾರಿರುನ್ದ ಊರಿಲ್ಲಿರುಕ್ಕೆಮವರ್‌ಗಳುಕ್ಕುಮ್"** - ಅನುಸಂಧಾನ ಮಾಡುವವರಿಗೆ ಮಾತ್ರವೇ ಅಲ್ಲದೆ ಅಂತವರ ಊರಲ್ಲಿರುವವರಿಗೂಬರಲಾರದು ಎಂಬ ಭಾವವು. ಊರಲ್ಲಿರುವವರಿಗೂ ಬರಲಾರದೆಂಬುದರಿಂದ ಸುಮ್ಮನೆ ಊರಲ್ಲಿದ್ದವರಿಗೂ ಬರುವದಿಲ್ಲವೆಂದರೆ ಅತಿಶಯೋಕ್ತಿಯಾಗುತ್ತದೆ; ಆದುದರಿಂದ ಮೂಲಮಂತ್ರಾರ್ಥವಿತ್ತುಗಳ ಸಂಬಂಧವಿರುವವರಿಗೆ ಎಂದು ಅರ್ಥಮಾಡಬೇಕಾಗಿರುತ್ತದೆ. ಮೂಲ ಮಂತ್ರದಲ್ಲಿ ಮೇಲೆಹೇಳಿದ ಅಷ್ಟ ಶಾಸ್ತ್ರಾರ್ಥಗಳೂ, **ಸರ್ವಮಷ್ಟಾಕ್ಷರಾಂತಸ್ಥಮ್** ಎಂದು ಹೇಳಿರುವಹಾಗೆ ಅಡಗಿರುವದರಿಂದ ಈಗ ಹೇಳಿದ ಅಪಸಿದ್ಧಾಂತಗಳೂ, ಹೇಳದೇ ಬಿಟ್ಟಿರುವುವೂ ಸಹ, ಅಂತಹ ಅಧಿಕಾರಿಯ ಮತ್ತು ತತ್ಸಂಬಂಧಿಗಳ ಹತ್ತಿರ ಕೂಡ ಬರಲಾರವು, ಎಂದು ಮೂಲಮಂತ್ರದ ಮಾಹಾತ್ಮ್ಯೆಯನ್ನು ಉಪದೇಶಿಸಿರುತ್ತಾರೆ. ಇಲ್ಲಿ **ಊರಲ್ಲಿರುಕ್ಕುಮವರ್ಕುಮ್** ಎಂದು ಹೇಳಿರುವದು, **"ಯತ್ರಾಷ್ಟಾಕ್ಷರ ಸಂಸಿದ್ಧೋ ಮಹಾಭಾಗೋ ಮಹೀಯತೇ। ನ ತತ್ರ ಸಂಚರಿಷ್ಯನ್ತಿ ವ್ಯಾಧಿದುರ್ಭಿಕ್ಷತಸ್ಕರಾಃ"** ಎಂಬುದನ್ನು ಸ್ಮರಿಸುವಹಾಗೆ ಮಾಡುತ್ತದೆ. ಅಷ್ಟಾಕ್ಷರಾನುಸಂಧಾನಸಿದ್ಧಿಯುಳ್ಳವನು ಇರುವ ಸ್ಥಳದಲ್ಲಿ ವ್ಯಾಧಿ ದುರ್ಭಿಕ್ಷ ಕಳವುಗಳು ಯಾವುದೂ ಇರುವದಿಲ್ಲವು. ಈ ಶ್ಲೋಕವೇಮುಂದೆ ಉದಾಹರಿಸಲ್ಪಟ್ಟು, ವ್ಯಾಧಿ ಎಂದರೆ ಕಾಮಕ್ರೋಧಾದಿ ರೋಗಗಳೂ, ದುರ್ಭಿಕ್ಷವೆಂದರೆ ಜ್ಞಾನ ದುರ್ಭಿಕ್ಷ, ಜ್ಞಾನ ಸಂಕೋಚವು. ತಸ್ಕರವೆಂದರೆ ಆತ್ಮಾಪಹಾರಾದಿಗಳು ಇವರ ಹತ್ತಿರ ಬರುವದಿಲ್ಲವೆಂದು ಮುಂದೆ ಅರ್ಥಮಾಡಿರುತ್ತಾರೆ.

**ಮನ್ತ್ರಾರ್ಥಾಭಿಜ್ಞನಿಗೆ ಸ್ವನಿಷ್ಠೆಗೆ ವಿರೋಧಿಗಳಾದಭ್ರಮಾದಿಗಳೆಲ್ಲಾ ತೊಲಗುತ್ತವೆಂದು ಹೇಳುತ್ತಾರೆ.**

ಇದುವರೆಗೂ ಬಾಹ್ಯ ಕುದೃಷ್ಟಿಗಳ ಅಭಿಪ್ರಾಯಗಳಿಂದ ಮೂಲ ಮಂತ್ರಾರ್ಥತತ್ವವಿತ್ತಿಗೂ, ತತ್ಸಂಬಧೀಯರುಗಳಿಗೂ, ಏನೊಂದು ಶಜ್ಕೆಉಂಟಾಗುವದಿಲ್ಲವೆಂದು ಹೇಳಿ, ಈ ಮುಂದಿನ ವಾಕ್ಯದಿಂದ ತನಗೇನೇ ಸ್ವತಂತ್ರವಾಗಿ ಉಂಟಾಗಬಹುದಾದ ಅಜ್ಞಾನ, ಅನ್ಯಥಾ ಜ್ಞಾನ, ವಿಪರೀತಜ್ಞಾನಗಳೆಲ್ಲ ಈ ಮೂಲಮಂತ್ರಾರ್ಥಾನುಸಂಧಾನದಿಂದ ತೊಲಗುವುವೆಂದು ಒಂದೊಂದಾಗಿ ಹೇಳುತ್ತಾರೆ.

**ಇಪ್ಪಡಿಯೇ** - ಮೇಲೆ ಹೇಳಿದ ರೀತಿಯಲ್ಲೇ, ಎಂದರೆ ಮೂಲಮಂತ್ರಾರ್ಥಾನುಸಂಧಾನದಿಂದಲೇ, **ರಕ್ಷಕನಾನ ಶ್ರಿಯಃಪತಿಯುಪ್ಪತ್ತು** - ರಕ್ಷಕನಾಗಿರುವ

**ಮುಮ್, ೨. ರಕ್ಷಕಾನ್ತರಾನ್ವೇಷಣಮುಮ್, ೩. “ತ್ವಂ ಮೇ ಹಂ ಮೇ” ಎನ್ರು ಪಿಣಕ್ಕುಮ್, ೪. ನಿರುಪಾಧಿಕಾನ್ಯ ಶೇಷತ್ವ ಭ್ರಮುಮುಮ್, ೫. ದೇವತಾನ್ತರ ಪ್ರಾವಣ್ಯಮುಮ್, ೬. ತದ್ಭಕ್ತ ಸಂಸರ್ಗಮುಮ್, ೭. ಮತ್ತುಮುಳ್ಳ ಅಸೇವ್ಯ ಸೇವಾರುಚಿಯುಮ್, ೮. ದೇಹಾತ್ಮ ಭ್ರಮಾದಿಗಳುಮ್,**

---

ಶ್ರಿಯಃಪತಿಯನ್ನು ಕುರಿತ (ಇವೆರಡರ್ಥಗಳೂ ಅಕಾರದಿಂದ ಬೋಧಿತವು.) ೧. **ವಿಶ್ವಾಸಮಾಂದ್ಯಮುಮ್** - ಆತನು ಖಂಡಿತವಾಗಿಯೂ ರಕ್ಷಿಸುವನೆಂಬ ಮಹಾ ವಿಶ್ವಾಸದಲ್ಲಿ ನ್ಯೂನತೆಯು, ಇವುಗಳಿಗೆ ಕ್ರಿಯಾಪದವು ಮುಂದೆ, **ಒನ್ರುಮ್ ಪಿನ್ನಾಡಾದು**-ಹಿಂದೆ ಅನುಸರಿಸಿ ಬರಲಾರವು ಎಂದಿರುತ್ತದೆ. ಇದು ಅಕಾರಾರ್ಥ ದಿಂದ ಲಕ್ಷ್ಮೀಪತಿಯಾಗಿ ಭಗವಂತನು ಸರ್ವರಕ್ಷಕನೆಂಬ ಅನುಸಂಧಾನದಿಂದ ತೊಲಗುತ್ತದೆ. ಈ ವಿಶ್ವಾಸ ಮಾಂದ್ಯವು ಐದು ಶಜ್ಞಾಗಳಿಗೆ ಹೇತುವೆಂದು ಮುಂದೆ ಹೇಳಲ್ಪಟ್ಟಿರುತ್ತದೆ. ೨. **ರಕ್ಷಕಾನ್ತರಾನ್ವೇಷಣಮುಮ್** - ಆ ವಿಶ್ವಾಸ ಮಾಂದ್ಯದಿಂದ ಬೇರೇ ರಕ್ಷಕನನ್ನು ಹುಡುಕಿಕೊಂಡು ಹೋಗೋಣವು. ಮೇಲಿನ ಅನುಸಂಧಾನದಿಂದ ಇದೂ ತೊಲಗುತ್ತದೆ. ೩. **“ತ್ವಂ ಮೇ ಹಂ ಮೇ” ಎನ್ರು ಪಿಣಕ್ಕುಮ್** - ತಾನು ಸ್ವತಂತ್ರನು ತಾನೇ ರಕ್ಷಿಸಿಕೊಳ್ಳಲು ಶಕ್ತನೆಂಬ, **ಪಿಣಕ್ಕುಮ್** - ವಿವಾದವು, ಇದೂ ಭ್ರಮೆಯು- ಮೇಲೆ ಹೇಳಿದ ಮೂರು ಶಜ್ಞಾಗಳೂ ಅಕಾರಾರ್ಥಾನುಸಂಧಾನದಿಂದ ತೊಲಗುವುವು. **“ತ್ವಂ ಮೇಹಂ ಮೇ”** ಎಂಬ ಶ್ಲೋಕಾಭಿಪ್ರಾಯಕ್ಕೆ ೪೨೨ನೆಯ ಪುಟವನ್ನು ಪರಾಂಬರಿಸಿ. ೪. **ನಿರುಪಾಧಿಕಾನ್ಯಶೇಷತ್ವ ಭ್ರಮುಮುಮ್** - ನಿರುಪಾಧಿಕವಾಗಿಹೇ ಪರಮಾತ್ಮನಿಗಲ್ಲದೆ ಅನ್ಯ ದೇವತೆಗೂ ಕೂಡ ತಾನು ಶೇಷಭೂತನೆಂಬ ಭ್ರಮವೂ, ಈ ೨; ೩, ೪ ಇವೆಲ್ಲವೂ ಪ್ರಣವದ ಉಕಾರಾರ್ಥಾನುಸಂಧಾನದಿಂದ ತೊಲಗುವುವು. ಆಯ್ಯೈವ-ಶ್ರೀ ಮಹಾ ವಿಷ್ಣುವಿಗೇ ಶೇಷಭೂತನೆಂಬ ಅನ್ಯಯೋಗ ವ್ಯವಚ್ಛೇದದಿಂದ ಇದು ತೊಲಗುತ್ತದೆ. ಹಾಗೆಯೇ ಮುಂದೆ ಹೇಳುವ ಮೂರು ಭ್ರಮಗಳೂ ಸಹ ತೊಲಗುವುವು. ೫. **ದೇವತಾನ್ತರ ಪ್ರಾವಣ್ಯವುಮ್**-ನಿರುಪಾಧಿಕಾನ್ಯಶೇಷತ್ವ ಭ್ರಮವಿರುವದರಿಂದಲೇ ಪರಮಾತ್ಮನಲ್ಲದೆ ಅನ್ಯದೇವತೆಯ ವಿಷಯದಲ್ಲಿ ವಿಶ್ವಾಸವೂ, ತದ್ಭಕ್ತ ಸಂಸರ್ಗಮುಮ್ - ಆ ಕಾರಣದಿಂದ ಆ ಅನ್ಯ ದೇವತಾ ಭಕ್ತರೊಂದಿಗೆ ಸಂಬಂಧವೂ, ೭. ಮತ್ತುಮುಳ್ಳ ಅಸೇವ್ಯಸೇವಾ ರುಚಿಯುಮ್- ಅಷ್ಟುಮಾತ್ರವೇ ಅಲ್ಲದೆ, ಸೇವಿಸಲು ಯೋಗ್ಯವಲ್ಲದವರನ್ನು ಸೇವಿಸುವದರಲ್ಲಿ ಆಸಕ್ತಿಯೂ, ಇದೂ ಉಕಾರಾರ್ಥಾನು ಸಂಧಾನದಿಂದಲೇ ತೊಲಗುತ್ತದೆ. ೮. **ದೇಹಾತ್ಮಭ್ರಮಾದಿಗಳುಮ್** - ದೇಹವೇ ಆತ್ಮಾ ಎಂಬ ಭ್ರಮೆಯೇ ಮೊದಲಾದವೂ, ಇವು ಮಕಾರಾರ್ಥಾನುಸಂಧಾನದಿಂದ ತೊಲಗುತ್ತದೆ, ದೇಹವು ಜಡವು ; ಮನಜ್ಞಾನೇ ಎಂಬ ಧಾತುವಿನಿಂದ ಮಕಾರವಾಚ್ಯನಾದ ಜೀವಾತ್ಮನು

ಜ್ಞಾನವುಳ್ಳವನು ಎಂಬುದರಿಂದ ದೇಹಕ್ಕಿಂತ ವಿಲಕ್ಷಣನು ಎಂಬ ಜ್ಞಾನ ಉಂಟಾ ಗುತ್ತದೆ. ಈ ಅಭಿಪ್ರಾಯವನ್ನು ಶ್ರೀ ಪರಾಶರಭಟ್ಟರು ಅಷ್ಟಶ್ಲೋಕಿಯಲ್ಲಿ ಈ ಮುಂದಿನ ಶ್ಲೋಕದಲ್ಲಿ ವ್ಯಕ್ತಪಡಿಸಿರುತ್ತಾರೆ.—**"ದೇಹಾಸಕ್ತಾತ್ಮಬುದ್ಧಿರ್ಯದಿ ಭವತಿಪದಂಸಾಧುವಿದ್ಯಾತ್ತೃತೀಯಂ ಸ್ವಾತಂತ್ರ್ಯಾಂಧೋಯದಿಸ್ಯಾತ್ಪ್ರಥಮ ಮಿತರಶೇಷತ್ವಧೀಶ್ಚೇದ್ದ್ವಿತೀಯಮ್ । ಆತ್ಮತ್ರಾಣೋನ್ಮುಖಶ್ಚೇನ್ನಮ ಇತಿಚ ಪದಮ್ ಬಾಂಧವಾಭಾಸಲೋಲಶ್ಶಬ್ದಂ ನಾರಾಯಣಾಖ್ಯಂ ವಿಷಯ ಚಪಲಧೀಶ್ಚೇ ಚ್ಚತುರ್ಥೀಂ ಪ್ರಪನ್ನಃ"** ಇದರರ್ಥವೇನೆಂದರೆ—**ಪ್ರಪನ್ನಃ** - ಶರಣಾಗತನು, **ದೇಹಾಸಕ್ತಾತ್ಮ ಬುದ್ಧಿಃ**-ದೇಹದಲ್ಲೇ ಸೇರಿ ಆತ್ಮಬುದ್ಧಿಯುಳ್ಳ ವನು ಎಂದರೆ ದೇಹವೇ ಆತ್ಮಾ ಎಂಬ ಭ್ರಮೆಯುಳ್ಳವನು, **ಭವತಿಯದಿ**- ಆದರೆ, ತದಾ – ಆಗ, **ತೃತೀಯಪದಂ** - ಮೂರನೆಯ ಅಕ್ಷರವಾದ ಮಕಾರವನ್ನು, **ಸಾಧು** - ಚನ್ನಾಗಿ, **ವಿದ್ಯಾತ್** - ಅನುಸಂಧಾನಮಾಡತಕ್ಕದ್ದು. **ಮನಜ್ಞಾನೇ ಮದೀಹರ್ಷೇ, ಮನಅವಬೋಧನೇ** ಮಸಿಪರಿಮಾಣೇ, ಈ ಧಾತುಗಳಿಂದ ಜಡತ್ವ, ಅಚೇತನತ್ವ, ಸ್ಥೂಲತ್ವ, ದುಃಖರೂಪತ್ವವೇ ಮೊದಲಾದವುಗಳಿಂದ ಕೂಡಿದ ದೇಹಕ್ಕಿಂತ, ಜ್ಞಾನಾನಂದ ಸ್ವರೂಪ ಮತ್ತು ಗುಣಗಳುಳ್ಳವನಾಗಿ ಅಣುವಾಗಿರುವದರಿಂದ ಜೀವಾತ್ಮನು ವಿಲಕ್ಷಣನೆಂಬ ಜ್ಞಾನವುಂಟಾಗುತ್ತದೆ. ಅದ ರಿಂದ ದೇಹಾತ್ಮಭ್ರಮವು ನಿವರ್ತಿಸುತ್ತದೆ. **ಸ್ವಾತಂತ್ರ್ಯಾಂಧಃ**-ತಾನು ಸ್ವತಂತ್ರ ನೆಂಬ ಭ್ರಮದಿಂದ ಜ್ಞಾನವು ತಿರೋಹಿತವಾಗಿ ಕುರುಡನಹಾಗಿರುವವನು, **ಯದಿ ಸ್ಯಾತ್** - ಆದರೆ, ತಾನು ಭಗವಂತನಿಗೆ ಶೇಷಭೂತನಲ್ಲವು. ತಾನು ಸ್ವತಂತ್ರನೆಂಬ ಭ್ರಮ ಉಂಟಾದರೆ, **ಪ್ರಥಮಂ**-ಪ್ರಣವದಲ್ಲಿ ಮೊದಲಿನ ಅಕ್ಷರವಾದ ಅಕಾರ ವನ್ನು, **ಸಾಧುವಿದ್ಯಾತ್** – ಚನ್ನಾಗಿ ಅನುಸಂಧಾನ ಮಾಡತಕ್ಕದ್ದು. **ಅವರಕ್ಷಣ ಗತಿಹಿಂಸಾದಿಷು** ಎಂಬ ಧಾತ್ವರ್ಥಗಳ ವ್ಯುತ್ಪತ್ತಿಯಿಂದ ಶ್ರೀ ಮಹಾ ವಿಷ್ಣುವಿಗೆ ಸರ್ವಕಾರಣತ್ವ ಸರ್ವ ರಕ್ಷಕತ್ವ ಸರ್ವಸಂಹಾರಕತ್ವ ಲಕ್ಷ್ಮೀ ಪತಿತ್ವ ಸರ್ವಶೇಷಿತ್ವ ಸರ್ವ ಕಲ್ಯಾಣ ಗುಣಾಕರತ್ವಗಳುಂಟೆಂದು ಏರ್ಪಟ್ಟು, ಆ ಅಕಾರದ ಲುಪ್ತ ಚತು ರ್ಥಿಯಿಂದ ಮಕಾರವಾಚ್ಯ ಜೀವನು ಅಂತಹ ವಿಷ್ಣುವಿಗೇನೇ, ಶೇಷಭೂತನೆಂದು ಏರ್ಪಡುವದರಿಂದ ಸ್ವತಂತ್ರಾತ್ಮಭ್ರಮವು ತೊಲಗುತ್ತದೆಂಬ ಭಾವವು. **ಇತರ ಶೇಷತ್ವಧೀಶ್ಚೇತ್** - ಇತರರಿಗೆ ಎಂದರೆ ವಿಷ್ಣುವಿಗೂ ಲಕ್ಷ್ಮಿಗೂ ಇವರುಗಳ ಭಕ್ತರಾದ ಭಾಗವತರಿಗೂ ತಾನು ಶೇಷಭೂತನೆಂಬ ಜ್ಞಾನವಿಲ್ಲದೆ ಅನ್ಯದೇವತೆ ಗಳಿಗೆ ತಾನು ಶೇಷಭೂತನೆಂಬ ಬುದ್ಧಿಯುಂಟಾದರೆ, ಆಗ ಪ್ರಣವದ **ದ್ವಿತೀಯಂ ಪದಂ ಸಾಧು ವಿದ್ಯಾತ್** . ಪ್ರಣವದ ಎರಡನೆಯ ಅಕ್ಷರವಾದ ಉಕಾರಾರ್ಥವನ್ನು ಚನ್ನಾಗಿ ಅನುಸಂಧಾನಮಾಡತಕ್ಕದ್ದು. ಜೀವಾತ್ಮ ಪರಮಾತ್ಮರಿಗೆ ಈ ಅವ ಧಾರಣದಿಂದ ಏರ್ಪಟ್ಟು ಜೀವಾತ್ಮನು ಪರಮಾತ್ಮನಿಗೇನೇ ಶೇಷಭೂತನು, ಇತ ರರಿಗಲ್ಲವೆಂಬ ಅನನ್ಯಾರ್ಹಶೇಷತ್ವಾರ್ಥವು ಉಂಟಾಗುವದರಿಂದ, **ನಿರುಪಾಧಿ**

೯. ಸ್ವತಂತ್ರಾತ್ಮಭ್ರಮಾದಿಗಳುಮ್ ೧೦, ಸ್ವಾರ್ಥ ಪರಿಗ್ರಹಮುಮ್, ೧೧.

---

ಕಾನ್ಯಶೇಷತ್ವ ಭ್ರಮವೂ ದೇವತಾಂತರ ಪ್ರಾವಣ್ಯವೂ ತದ್ಭಕ್ತ ಸಂಸರ್ಗವೂ ಅಸೇವ್ಯಸೇವಾರುಚಿ ಮೊದಲಾದ ಭ್ರಮೆಗಳೆಲ್ಲಾ ನಿವರ್ತಿಸಿಹೋಗುವುವು. ಆತ್ಮತ್ರಾಣೋನ್ಮುಖಃ – ತನ್ನ ರಕ್ಷಣದಲ್ಲಿ ತನಗೆ ಶಕ್ತಿಯುಂಟೆಂದು ಸ್ವರಕ್ಷಕತ್ವ ಭ್ರಮವು, ಯದಿಸ್ಯಾತ್ – ಉಂಟಾದರೆ, ತದಾ ನಮ ಇತಿ ಪದಂ ವಿದ್ಯಾತ್– ಆಗ ನಮಃ ಎಂಬ ಪದದ ಅರ್ಥಾನುಸಂಧಾನವನ್ನು ಮಾಡತಕ್ಕದ್ದು. ಹೇಗೆಂದರೆ ನಮಃ ಎಂದರೆ ಅನನ್ಯಶರಣತ್ವವನ್ನು ಪ್ರತಿಪಾದಿಸುವ ಉಪಾಯದಲ್ಲಿ ಮಃ ನ ನನಗೆ ಅಧಿಕಾರವಿಲ್ಲ. ಭಗವಂತನೇ ಉಪಾಯಾನುಷ್ಠಾನಮಾಡಿಸಿ ರಕ್ಷಿಸಬೇಕೇ ವಿನಾ ನಾನು ನನಗೆ ರಕ್ಷಕನಲ್ಲವು. ಬಾಂಧವಾಭಾಸಲೋಲಃ - ಸ್ವತಃ ಬಂಧುಗಳಲ್ಲದೆ ಬಂಧುಗಳಹಾಗೆ ತೋರುವವರು ಬಾಂಧವರು. ಸಂಪತ್ತಿನ ಕಾಲದಲ್ಲಿ ಸರ್ವವನ್ನೂ ಅಪಹರಿಸುತ್ತಾ, ಆಪತ್ಕಾಲದಲ್ಲಿ ತ್ಯಜಿಸುವವರು; ಇಂತವರು ಈ ಸೋಪಾಧಿಕ ಬಾಂಧವರಾಗಿ ಆಗ ತೋರುವವರಲ್ಲಿ ಆಸಕ್ತನಾದವನು, ಯದಿಸ್ಯಾತ್- ಆದರೆ, ಶಬ್ದಂ ನಾರಾಯಣಾಖ್ಯಂ ವಿದ್ಯಾತ್ - ನಾರಾಯಣ ಪದವನ್ನು ಅನುಸಂಧಾನಮಾಡತಕ್ಕದ್ದು. ಇದರಿಂದ ಶ್ರೀಮನ್ನಾರಾಯಣನೇ ನಿರುಪಾಧಿಕ ಸಕಲವಿಧ ಬಂಧುವೆಂಬರ್ಥವು ಉಂಟಾಗುತ್ತದೆಂದು ಹಿಂದೆಯೇ ಹೇಳಲ್ಪಟ್ಟಿತು. ಹೇಗೆಂದರೆ, ತತ್ಪುರುಷ ಸಮಾಸವಾದ ನಾರಾಣಾಂ ಅಯನಂ ಎಂಬಲ್ಲಿ ಕರ್ಮಣಿ ವ್ಯುತ್ಪತ್ತಿಯಿಂದ ಪರಮಾತ್ಮನೇ 'ಮಾತಾ ಪಿತಾಭ್ರಾತಾ ನಿವಾಸ ಶ್ಶರಣಂ ಸುಹೃದ್ಗತಿ ರ್ನಾರಾಯಣಃ" ಎಂಬಲ್ಲಿ ಹೇಳಿರುವ ಹಾಗೆ ನಿರುಪಾಧಿಕ ಸರ್ವವಿಧ ಬಂಧುವು ಅವನೇ ಎಂಬರ್ಥವು ಉಂಟಾಗುತ್ತದೆ. ಇದರಿಂದ ಬಾಂಧವಾಂತರ ಪರಿಗ್ರಹವೆಂದು ಮುಂದೆ ಹೇಳುವ ಭ್ರಮೆಯು ನಿವರ್ತಿಸುತ್ತದೆ. ವಿಷಯಚಪಲಧೀಶ್ಚೇತ್ ವಿಹಿತವಾದುದೇ ಆಗಲಿ, ನಿಷಿದ್ಧವಾದುದೇ ಆಗಲಿ ಇರುವ ವಿಷಯೋಪಭೋಗಗಳಲ್ಲಿ ಚಪಲಚಿತ್ತನಾದರೆ, ಆಗ ಚತುರ್ಥೀಂ-ನಾರಾಯಣಾಯ ಎಂಬಲ್ಲಿ ಚತುರ್ಥಿಯನ್ನು, ಸಾಧು ವಿದ್ಯಾತ್ - ಚನ್ನಾಗಿ ಅನುಸಂಧಾನಮಾಡತಕ್ಕದ್ದು. ಅಲ್ಲಿ ತೋರುವ ಕೈಙ್ಕರ್ಯ ಸಾಮ್ರಾಜ್ಯದ ಮುಂದೆ ಇಂತಹ ನಶ್ವರ ಭೋಗಗಳೆಲ್ಲಾ ಕಳೆದುಹೋಗುತ್ತವೆಂಬ ಭಾವವು. ಇದನ್ನೇ ಮುಂದೆ ಸಂಸಾರಾನುವೃತ್ತಿ ರುಚಿಯುಮ್, ಪ್ರಯೋಜನಾಂತರ ರುಚಿಯುಮ್ ಎಂದು ಹೇಳುತ್ತಾರೆ. ಕೈಂಕರ್ಯವೆಲ್ಲಾ ಶ್ರಿಯಃಪತಿಗಾಗಿಯೇ ವಿನಾ ತನಗಾಗಿ ಯಾವುದೂ ಇಲ್ಲವೆಂಬ ಜ್ಞಾನದಿಂದ ಅಂತಹ ಭ್ರಮವೆಲ್ಲವೂ ನಿವರ್ತಿಸುತ್ತವೆಂಬ ಭಾವವು.

೯. ಸ್ವತನ್ತ್ರಾತ್ಮಭ್ರಮಾದಿಗಳುಮ್-ತನ್ನ ಆತ್ಮಾ ಸ್ವತಂತ್ರವೆಂಬ ಭ್ರಮವೆ ಮೊದಲಾದವುಗಳೂ; ಆದಿಶಬ್ದದಿಂದ ಸ್ವರಕ್ಷಕತ್ವ ಭ್ರಮವೂ ಹೇಳಲ್ಪಟ್ಟಿತು. ಇದು ಪ್ರಣವಶಬ್ದಾರ್ಥದಿಂದ ನಿವರ್ತಿಸುತ್ತದೆ. ಆದಿಶಬ್ದದಿಂದ ಸ್ವರಕ್ಷಕತ್ವ ಭ್ರಮ

**ಭಾಗವತಾಪಚಾರಮುಮ್, ೧೨. ಆಕಿಂಚನ್ಯ ವಿಸ್ಮೃತಿಯುಮ್ ೧೩. ಸಂಸಾ ರಾನು ವೃತ್ತಿರುಚಿಯುಮ್, ೧೪. ಆತ್ಮನಾಶಾದಿ ಭಯಮುಮ್, ೧೫, ಅಸ**

---

ಮುಮ್ ಇವೆಲ್ಲಾ ಸ್ಫುಟವಾಗಿ ಮೇಲಿನ ಶ್ಲೋಕವ್ಯಾಖ್ಯಾನದಲ್ಲಿ ಉಪಪಾದಿತವು. ೧೦. **ಸ್ವಾರ್ಥಪರಿಗ್ರಹಮುಮ್** - ಎಲ್ಲಾ ಪ್ರವೃತ್ತಿಯೂ ತನ್ನ ಪ್ರಯೋಜನಕ್ಕಾಗಿಯೇ ಎಂಬ ಭಾವನೆಯು; ತನ್ನ ಪ್ರವೃತ್ತಿಗಳೆಲ್ಲಾ ಭಗವಂತನಿಗಾಗಿಯೇ ಎಂಬ ಭಗವಚ್ಛೇಷತ್ವಜ್ಞಾನದಿಂದ ನಿವರ್ತಿಸುತ್ತದೆ. ಭಗವಚ್ಛೇಷತ್ವವು ಪ್ರಣವದ ಉಕಾರದಿಂದ ಏರ್ಪಟ್ಟಿತು. "**ಉಕಾರೋನಸ್ವಾರ್ಹಮ್**"ಎಂಬ ಶ್ರೀ ಪರಾಶರಭಟ್ಟರ ವಾಕ್ಯದಿಂದ ವ್ಯಕ್ತವು. (ಅಷ್ಟ. ೧) ೧೧. **ಭಾಗವತಾಪಚಾರಮುಮ್** - ಭಾಗವತರಿಗೆ ಅಪರಾಧಮಾಡಿ ಅಪಚಾರವನ್ನು ಹೊಂದುವದು; ಯಾವಾಗ ಭಗವಚ್ಛೇಷನೆಂದು ಏರ್ಪಟ್ಟಿತೋ, ಆಕಾರಣದಿಂದ ಭಾಗವತ ಶೇಷತ್ವವೂ ಉಂಟಾಯಿತು. ಈ ಭಾಗವತಾಪರಾಧವು ಭಗವದಪರಾಧಕ್ಕಿಂತ ಪ್ರಬಲವಾದುದರಿಂದ, ಸರ್ವಾತ್ಮನಾ ಇದಕ್ಕೆ ಪ್ರಪನ್ನನು ಗುರಿಯಾಗಕೂಡದು "**ಶ್ರೀ ವಿಷ್ಣೋರವಮಾನನಾತ್ ಗುರುತರಂ ಶ್ರೀ ವೈಷ್ಣವೋಲ್ಲಂಘನಮ್**" ಎಂದು ಹೇಳಲ್ಪಟ್ಟಿರುತ್ತದೆ. ಸರ್ವೇಶ್ವರನು ತನಗೆ ಮಾಡಿದ ಅಪರಾಧವನ್ನಾದರೂ ಮನ್ನಿಸಿಬಿಡುವನು. ಆದರೆ ತನ್ನಭಕ್ತರಿಗೆ ಮಾಡಿದ ಅಪರಾಧವನ್ನು ಎಂದಿಗೂ ಮನ್ನಿಸನು. ಇದಕ್ಕೆ ಜಯವಿಜಯರ, ಅಂಬರೀಷ, ಪ್ರಹ್ಲಾದ, ದ್ರೌಪದಿ ಇತ್ಯಾದ್ಯನೇಕ ವೃತ್ತಾಂತಗಳಿಂದ ಗ್ರಹಿಸಬಹುದು. ೧೨. **ಆಕಿಂಚಿನ್ಯ ವಿಸ್ಮೃತಿಯುಮ್** – ತಾನು ಆಕಿಂಚಿನನೆಂಬುದನ್ನು ಮರೆಯೋಣವೂ; ತನ್ನನ್ನು ರಕ್ಷಿಸಿಕೊಳ್ಳಲು ತನಗೆ ಯೋಗ್ಯತೆ ಇಲ್ಲವೆಂಬ ಜ್ಞಾನವು ನಮುಶ್ಯಬ್ದಾರ್ಥದಿಂದ ಉಂಟಾಗುತ್ತದೆಂದು, ಹಿಂದೆಯೇ ಹೇಳಲ್ಪಟ್ಟಿತು. ಅಂತಹ ಅನುಸಂಧಾನದಿಂದ ಈ ಆಕಿಂಚನ್ಯ ವಿಸ್ಮೃತಿಯು ತೊಲಗುತ್ತದೆ. ೧೩. **ಸಂಸಾರಾನುವೃತ್ತಿರುಚಿಯುಮ್**- ಸಂಸಾರ ಭೋಗಗಳನ್ನು ಅನುಭವಿಸುತ್ತಿರಬೇಕೆಂಬ ಆಶೆಯೂ; ಇದು ನಮಸ್ಸಿನ ಅರ್ಥಾನು ಸಂಧಾನದಿಂದ ಅಹಂಕಾರಾದಿಗಳು ನಿವರ್ತಿಸುವದರಿಂದ ತೊಲಗುತ್ತದೆ. ಈ ಸಂಸಾರದಿಂದ ತನ್ನ ಜ್ಞಾನತ್ವ ಆನಂದತ್ವಾದಿಗಳು ತಿರೋಹಿತವಾಗಿರುತ್ತದೆಂಬ ಪ್ರಕೃತಿ ವಿಯುಕ್ತ ದಶೆಯಲ್ಲಿ ತನ್ನ ಜ್ಞಾನತ್ವಾನಂದತ್ವಾದಿಗಳು ನೈಜ ಸ್ವರೂಪವನ್ನುಹೊಂದುತ್ತವೆಂಬ, ಅನುಸಂಧಾನವು ಪ್ರಣವದ ಮಕಾರದಿಂದ ತೋರಿಬರುವದರಿಂದ, ಅಂತಹ ಅನುಸಂಧಾನದಿಂದ ನಿವರ್ತಿಸುತ್ತದೆಂದೂ ಭಾವಿಸಬಹುದು. ೧೪. **ಆತ್ಮನಾಶಾದಿ ಭಯಮುಮ್** – ಆತ್ಮವು ನಾಶವನ್ನು ಹೊಂದುತ್ತದೆಂಬ ಭಯವೂ, ಇದು **ನಾರಾಯಣ** ಶಬ್ದದಲ್ಲಿರುವ **ನಾರ** ಶಬ್ದದ ಅರ್ಥಾನುಸಂಧಾನದಿಂದ ನಿವರ್ತಿಸುತ್ತದೆ. **ರೀಙ್ ಕ್ಷಯೇ** ಎಂಬ ಧಾತುವ್ಯುತ್ಪತ್ತಿಯಿಂದ ನಾಶವಿರುವವು **ರಾಃ** ಎಂದೂ, ನಾಶವಿಲ್ಲದವು **ನರಾಃ** ಎಂದಾಗುವ

ದಾಚಾರ ರುಚಿಯುಮ್, ೧೬. ಶತ್ರುಮಿತ್ರಾದಿ ವಿಭಾಗ ನಿರೂಪಣಮುಮ್. ೧೭ ಬಾಂಧವಾಂತರಪರಿಗ್ರಹಮುಮ್, ೧೮. ಪ್ರಯೋಜನಾಂತರರುಚಿಯುಮ್ ೧೯. ಪರಮಪ್ರಯೋಜನ ವೈಮುಖ್ಯಮ್. ಮತ್ತುಮ್ ೨೦. ಸ್ವನಿಷ್ಠಾ ವಿರೋಧಿಗಳೊನ್ರುಮ್. ಪಿನ್ನಾಡಾದು.

---

ದರಿಂದ, ಆತ್ಮವರ್ಗವು ನಾಶವಿಲ್ಲದುದೆಂದು ಏರ್ಪಟ್ಟಿತು. ೧೫. **ಅಸದಾಚಾರ ರುಚಿಯುಮ್** - ಸದಾಚಾರವು, ಪರಮಾತ್ಮನ ಶಾಸ್ತ್ರದ ವಿಧಿನಿಷೇಧ ವಾಕ್ಯಗಳಿಗೆ ಅನುಸಾರವಾಗಿ ನಡೆಯೋಣವು, ಹಾಗೆ ನಡೆಯದೆ, ಸದಾಚಾರಕ್ಕೆ ವಿರುದ್ಧಾಚಾರದಲ್ಲಿ ವಿಶ್ವಾಸವೂ; ಇದು ಭಗವನ್ನಿಗ್ರಹಕ್ಕೆ ವಿರುದ್ಧವಾದುದೂ ಎಂಬುದರಿಂದಲೂ, ಸರ್ವ ವಿಧಬಂಧುವೆಂಬುದು ನಾರಾಯಣ ಶಬ್ದದ ಅನುಸಂಧಾನದಿಂದ ತನಗೆ ಪರಮ ಸುಹೃತ್ತು ನಾರಾಯಣನೆಂಬ ಭಾವನೆಯುಂಟಾಗುವದರಿಂದಲೂ, ಇದು ನಿವರ್ತಿಸುತ್ತದೆ. ೧೬. **ಶತ್ರುಮಿತ್ರಾದಿ ವಿಭಾಗ ನಿರೂಪಣಮುಮ್** - ಕೆಲವರು ತನಗೆ ಶತ್ರುಗಳು, ಕೆಲವರು ಮಿತ್ರರು, ಇವೇ ಮೊದಲಾದ ವಿಭಾಗಮಾಡಿ ಹೇಳೋಣವೂ; ಇದೂ ನಾರಾಯಣ ಶಬ್ದದಿಂದ ತೋರಿಬರುವ ಸರ್ವವಿಧ ಬಂಧುವು ಸರ್ವೇಶ್ವರನೆಂಬ ಅನುಸಂಧಾನದಿಂದ ಹಾಗೆ ಸರ್ವೇಶ್ವರನಿಗೆ ಮಿತ್ರರಾದವರಲ್ಲಿ ಶತ್ರುತ್ವಾದಿ ವಿಭಾಗವು ಸರಿಯಲ್ಲವೆಂದುತೋರಿಬರುವದರಿಂದ ನಿವರ್ತಿಸುತ್ತದೆ. ೧೭. **ಬಾಂಧವಾನ್ತರ ಪರಿಗ್ರಹಮುಮ್** - ಪರಮಾತ್ಮನಿಗಿಂತ ಬೇರೆಯಾಗಿ ತನಗೆ ಬಂಧು ಉಂಟೆಂಬ ಭಾವನೆಯು. ಇದೂ ನಾರಾಯಣ ಶಬ್ದಾನುಸಂಧಾನದಿಂದಲೇ ನಿವರ್ತಿಸುತ್ತದೆ ೧೮. **ಪ್ರಯೋಜನಾಂತರ ರುಚಿಯುಮ್** - ಭಗವತ್ಕೈಂಕರ್ಯಪ್ರಾಪ್ತಿಗಿಂತ ಇತರವಾದ ಪ್ರಯೋಜನದಲ್ಲಿ ಅಭಿರುಚಿಯೂ, ಇದು **ನಾರಾಯಣಾಯ** ಎಂಬಲ್ಲಿರುವ ವ್ಯಕ್ತ ಚತುರ್ಥಿಯಿಂದ ಮೋಕ್ಷದೆಶೆಯಲ್ಲಿ ಭಗವತ್ಕೈಂಕರ್ಯಪ್ರಾಪ್ತಿಯೇ ತನಗೆ ಪರಮಪ್ರಯೋಜನವೆಂಬ ಭಾವನೆಯು ಉಂಟಾಗುವದರಿಂದ ಇತರ ಪ್ರಯೋಜನದಲ್ಲಿ ರುಚಿಯು ನಿವರ್ತಿಸುತ್ತದೆ. ೧೯. **ಪರಮ ಪ್ರಯೋಜನ ವೈಮುಖ್ಯಮ್** - ಮೇಲಿನ ಕಾರಣದಿಂದಲೇ ಪರಮ ಪ್ರಯೋಜನವಾದ ಭಗವಂತನಿಗೆ ಮಾಡುವ ಕೈಙ್ಕರ್ಯ ಸಾಮ್ರಾಜ್ಯದಿಂದ ವಿಮುಖನಾಗಿರೋಣವು. ಈ ವ್ಯಕ್ತ ಚತುರ್ಥಿಯಲ್ಲಿ ತೋರಿಬರುವ ಕೈಙ್ಕರ್ಯ ಸಾಮ್ರಾಜ್ಯಕ್ಕಿಂತ ಅತಿಶಯ ಪ್ರಯೋಜನವೇ ಇಲ್ಲವೆಂಬ ಅನುಸಂಧಾನದಿಂದ ಅದರ ನಿವೃತ್ತಿಯು. ೨೦. **ಮತ್ತುಮ್ ಸ್ವನಿಷ್ಠಾ ವಿರೋಧಿಗಳೊನ್ರುಮ್**-ಮತ್ತು ಅಂತಹ ಕೈಙ್ಕರ್ಯಪ್ರಾಪ್ತಿಯು. ತನಗೆ ಪ್ರಯೋಜನವಾದುದೆಂಬ ಭಾವನೆಯೂ, ಆ ಪ್ರಾಪ್ತಿಯನ್ನುಂಟುಮಾಡಿಕೊಂಡವನು ತಾನು ಎಂಬ ಕರ್ತೃತ್ವವೂ, ಇವೆಲ್ಲಾ ಸ್ವನಿಷ್ಠೆಗೆ ಎಂದರೆ ಪ್ರಪನ್ನನ ಮಹತ್ವಾದ ನಿಷ್ಠೆಗಳಿಗೆ ವಿರುದ್ಧವಾದುವು.

**ಪಿನ್ನಾಡಾದು** - ಈ ಪ್ರಪನ್ನನನ್ನು ಅನುಸರಿಸಿ ಬರುವದಿಲ್ಲವು. ಆದುದ

**ಕಾ. ಇಹ ನಿಜಪಕ್ಷವಿರುದ್ಧೈ ರೀದೃಶನಿಷ್ಠಾ ವಿರೋಧಿಭಿ ಶ್ಚಾನ್ಯೈಃ।**
**ದ್ವಿಚತುಷ್ಕ ಸಾರವೇದೀ ಗಂಗಾಹ್ರದ ಇವ ನ ಗಚ್ಛತಿ ಕ್ಷೋಭಮ್॥೮**

---

ರಿಂದ ಮೂಲಮನ್ತ್ರದ ಮಾಹಾತ್ಮ್ಯೆ ಇಷ್ಟೆಂದು ಹೇಳಲು ಸಾಧ್ಯವಿಲ್ಲವೆಂಬ ಭಾವವು. ಈ ಮೂಲಮನ್ತ್ರದ ಅರ್ಥಗಳನ್ನು ಮಾತ್ರವೇ ಅನುಸಂಧಾನ ಮಾಡಿದರೆ ಸಾಕು. ಅಪಸಿದ್ಧಾನ್ತಗಳೆಲ್ಲಾ ತೊಲಗುವುವು. ಭ್ರಮಜ್ಞಾನಗಳೆಲ್ಲವೂ ತೊಲಗುವುವು ಎಂದು ಹೇಳಿ ಮುಗಿಸಿರುತ್ತಾರೆ. ಸ್ವನಿಷ್ಠೆ ಎಂಥಾದ್ದೆಂಬುದು ಸ್ವನಿಷ್ಠಾಭಿಜ್ಞಾನಾಧಿಕಾರದಲ್ಲಿ ಉಪದೇಶಿಸಲ್ಪಟ್ಟಿರುತ್ತದೆ.

ಈ ಭ್ರಮಜ್ಞಾನಗಳೊಂದೂ ಅಷ್ಟಾಕ್ಷರಾರ್ಥಾನುಸಂಧಾನದಿಂದ ಹಿಂಬಾಲಿಸಿ ಬರುವದಿಲ್ಲವೆಂಬ ಸಾರಭೂತಾರ್ಥವನ್ನು ಒಂದು ಕಾರಿಕೆಯ ಮೂಲಕ ಸಙ್ಗ್ರಹಿಸಿ ಹೇಳತ್ತಾರೆ.

**ಕಾರಿಕೆಯ ಅರ್ಥವು**—ಹೀಗೆ ಮೂಲಮನ್ತ್ರಾರ್ಥಗಳನ್ನೆಲ್ಲಾ ಚನ್ನಾಗಿ ಅನುಸಂಧಾನ ಮಾಡಿದವರಿಗೆ ನಮ್ಮ ಸಿದ್ಧಾನ್ತಕ್ಕೆ ವಿರುದ್ಧಾಭಿಪ್ರಾಯಗಳಿಂದಲೂ,ಭ್ರಮಜ್ಞಾನಗಳಿಂದಲೂ, ಸ್ವನಿಷ್ಠೆಗೆ ವಿರುದ್ಧವಾದ ಅಭಿಪ್ರಾಯಗಳಿಂದಲೂ,ಕ್ಷೋಭೆಯುಂಟಾಗುವದಿಲ್ಲವೆಂದು ಉಪದೇಶಿಸುತ್ತಾರೆ. ತನ್ಮೂಲಕ ಮೂಲಮನ್ತ್ರ ಮಾಹಾತ್ಮ್ಯೆಯನ್ನು ಕೊಂಡಾಡುತ್ತಾರೆ.—ಇಹ - ಈಸಂದರ್ಭದಲ್ಲಿ, ಅಥವಾ ಈ ದೋಷದುಷ್ಟವಾದ ಆಹಾರ ಸೇವನೆಗಳಿಂದಲೂ, ನಾನಾವಿಧ ಅಪಸಿದ್ಧಾಂತಗಳಿಂದ ತುಂಬಿರುವ ಈ ಜಗತ್ತಿನಲ್ಲಿ, ಅಥವಾ ಈ ಕಲಿಪ್ರಾಬಲ್ಯವಿರುವ ಜಗತ್ತಿನಲ್ಲಿ, ನಿಜಪಕ್ಷವಿರುದ್ಧೈಃ - ನಮ್ಮ ಸ್ವಕೀಯ ಸಿದ್ಧಾಂತವಾದ ಯತಿವರ್ಯರಿಂದ ಸ್ಥಿರೀಕರಿಸಲ್ಪಟ್ಟ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ವಿರುದ್ಧಗಳಾದ ಎಂದರೆ ಅವರು ಶ್ರೀ ಭಾಷ್ಯದಲ್ಲಿ ಖಂಡಿಸಿರುವ ಚಾರ್ವಾಕ, ಬೌದ್ಧ, ಜೈನ, ತಾರ್ಕಿಕ, ನಿರೀಶ್ವರಸೇಶ್ವರ ಸಾಂಖ್ಯ, ಅದ್ವೈತ, ಭೇದಾಭೇದವಾದ, ಬ್ರಹ್ಮಪರಿಣಾಮವಾದ, ಶೈವ, ದ್ವೈತ, ಮೊದಲಾದವರುಗಳ ಈಮಂತ್ರಾರ್ಥಗಳಿಗೆ ವಿರುದ್ಧಗಳಾದ ಅಭಿಪ್ರಾಯದಿಂದಲೂ, ಈದೃಶನಿಷ್ಠಾ ವಿರೋಧಿಭಿಃ - ಇಂತಹ ನಿಷ್ಠೆಗಳಿಗೆ ವಿರೋಧಿಗಳಾದ ಅಭಿಪ್ರಾಯದಿಂದಲೂ, ಕೆಲವರು ಇಲ್ಲಿರುವ ಈದೃಶಶಬ್ದವನ್ನು ನಿಷ್ಠಾಶಬ್ದಕ್ಕೆ ಅನ್ವಯಿಸಿ ವಿಲಕ್ಷಣವಾದ ಪ್ರಪನ್ನನ ಸ್ವನಿಷ್ಠೆಗೆ ವಿರೋಧಗಳಾದವುಗಳಿಂದಲೂ ಎಂದು ಅರ್ಥಮಾಡಿರುತ್ತಾರೆ; ಅಥವಾ ಈದೃಶ ಶಬ್ದವನ್ನು ವಿರೋಧಿಭಿಃ ಎಂಬುವದರೊಂದಿಗೆ ಅನ್ವಯಿಸಿದರೆ, ಈ ಮೇಲೆ ಹೇಳಿದ ಅಪಸಿದ್ಧಾಂತಗಳಿಗೆ ಅನುಗುಣವಾದ, ಸ್ವನಿಷ್ಠೆಗೆ ವಿರೋಧಗಳಾದ, ಅಭಿಪ್ರಾಯಗಳಿಂದಲೂ, ಎಂದಾದರ ಅರ್ಥಮಾಡಬಹುದು; ಎಂದರೆ, ಮಂತ್ರಾಂತರ ದೇವತಾಂತರ, ಪ್ರಯೋಜನಾಂತರ ಸಂಬಂಧಗಳಾದ ವಿರುದ್ಧಾಭಿಪ್ರಾಯಗಳಿಂದಲೂ ಮತ್ತು ವಿಷಯಾಂತರರೂಚಿಏನು, ಇಚ್ಛಾದ್ವೇಷಗಳೇನು, ಇವುಗಳಿಂದುಂಟಾದ ವಿರುದ್ಧಾಭಿಪ್ರಾಯಗ

## ಅಥ ಮೂಲಮನ್ತ್ರೇ ವಾಕ್ಯಾರ್ಥಾ ನಾಹ

**ಇತ್ತಿರುಮನ್ತ್ರತ್ತಿಲ್ ವಾಕ್ಯಮುಮ್ ವಾಕ್ಯಾರ್ಥಮುಮ್ ಇರುಕ್ಕುಮ್ಪಡಿ ಎಙ್ಙನೇ ಎನ್ನಿಲ್? ಇತ್ತೈ ಏಕವಾಕ್ಯ ಮೆನ್ರುಮ್ ವಾಕ್ಯದ್ವಯಮೆನ್ರುಮ್ ವಾಕ್ಯತ್ರಯಮೆನ್ರುಮ್ ಅವ್ವೋ ಸಂಪ್ರದಾಯಙ್ಗಳಾಲೇ ಅನುಸಂಧಿಪ್ಪಾರ್ಗಳ್.**

---

ಳೇನು, ಇವುಗಳಿಂದ, **ದ್ವಿಚತುಷ್ಕಸಾರವೇದೀ** – ದ್ವಿಚತುಷ್ಕವೆಂದರೆ ಎಂಟು, ಆದುದರಿಂದ ಅಷ್ಟಾಕ್ಷರ ಮಂತ್ರದ ಸಾರವತ್ತಾದ ಅರ್ಥಗಳನ್ನೆಲ್ಲಾ ಅನುಸಂಧಾನ ಮಾಡುವವನು, ತಿಳಿದವನು, **ಗಂಗಾಹ್ರದ ಇವ** – ಗಂಗಾನದಿಯ ಮಡುವು ಹೇಗೆ ಗಂಭೀರವಾಗಿದೆಯೋ ಹಾಗೆ, **ಕ್ಷೋಭಂ ನಗಚ್ಛತಿ** - ಮನಸ್ಸಿನ ಕ್ಷೋಭೆಯನ್ನು ಹೊಂದುವದಿಲ್ಲವು; ಎಂದರೆ ಎಂದಿಗೂ ಈ ಆಪ್ತಸಿದ್ಧಾಂತಗಳಿಂದ ಮನಸ್ಸು ಚಾಂಚಲ್ಯವಿಲ್ಲದೆ, ನಮ್ಮ ಸಿದ್ಧಾಂತಾಭಿಪ್ರಾಯಗಳು ಸ್ಥಿರವಾಗಿ ಮನಸ್ಸಿನಲ್ಲಿ ಸ್ಥಾಪಿತವಾಗುತ್ತವೆ ಎಂಬ ಭಾವವು. ನಮ್ಮ ಸಿದ್ಧಾಂತಾಭಿಪ್ರಾಯಗಳು ಸ್ಥಿರವಾಗಿ ನಿಲ್ಲಲು, ಮೂಲಮಂತ್ರದಲ್ಲಿ ತೋರಿಬರುವ ಅಭಿಪ್ರಾಯಗಳೇ ಸಾಕು ಎಂಬ ಭಾವವು. **"ನಪ್ರಹರ್ಷಯತಿ ಸಮ್ಮಾನೇ ನಾವಮಾನೇಽನುತಪ್ಯತೇ। ಗಂಗಾಹ್ರದ ಇವಕ್ಷೋಭೋ ಯಸ್ಸಪಂಡಿತ ಉಚ್ಯತೇ"** ಎಂಬ ಶ್ಲೋಕವು ಈ ಸಂದರ್ಭದಲ್ಲಿ ವಿವಕ್ಷಿತವು. ಸಮ್ಮಾನದಿಂದ ಆನಂದಿಸದೇ ಅವಮಾನದಿಂದ ಅನುತಾಪವಿಲ್ಲದೆಯೂ ಯಾವನು ಗಂಗಾಮಡುವಿನಹಾಗೆ ಕ್ಷೋಭವನ್ನು ಹೊಂದದೇ ಇರುವವನೋ, ಅವನೇ ಪಂಡಿತನೆಂದೆಣಿಸಲ್ಪಡುವನು.

### ಮುಂದೆ ಮೂಲಮನ್ತ್ರದಲ್ಲಿ ವಾಕ್ಯಾರ್ಥಗಳನ್ನು ದಯಪಾಲಿಸುತ್ತಾರೆ.

ಹಿಂದೆ ವರ್ಣ ಮತ್ತು ಪದಗಳಿಂದ ತೋರಿಬರುವ ಅರ್ಥಗಳನ್ನೆಲ್ಲಾ ಉಪಪಾದಿಸಿ ಹೇಳಿದರು. ಮುಂದೆ ಮಂತ್ರದ ವಾಕ್ಯಗಳನ್ನೂ ವಾಕ್ಯಾರ್ಥಗಳನ್ನೂ ವಿವರಿಸುತ್ತಾರೆ. ಮೂಲಮಂತ್ರವನ್ನು ಒಂದು ವಾಕ್ಯವುಳ್ಳದೆಂದೂ, ಎರಡು ವಾಕ್ಯಉಳ್ಳದೆಂದೂ, ಮೂರು ವಾಕ್ಯ ಉಳ್ಳದ್ದೆಂದೂ, ಭಾವಿಸುವದರಿಂದ ಉಂಟಾಗುವ ನಾನಾರ್ಥಗಳನ್ನು ಉಪಪಾದಿಸುತ್ತಾರೆ. **ಇತ್ತಿರುಮನ್ತ್ರತ್ತಿಲ್** - ಈ ಮೂಲ ಮಂತ್ರದಲ್ಲಿ, **ವಾಕ್ಯವೂ ವಾಕ್ಯಾರ್ಥವೂ, ಇರುಕ್ಕುಮ್ಪಡಿ ಎಙ್ಙನೇ ಎನ್ನಿಲ್** - ಇರುವ ಪ್ರಕಾರವು ಹೇಗೆ ಎಂದರೆ; **ಇತ್ತೈ** - ಈ ಮಂತ್ರವನ್ನು ಒಂದೇ ವಾಕ್ಯವೆಂದೂ, ಎರಡು ವಾಕ್ಯವೆಂದೂ, ಮೂರು ವಾಕ್ಯವೆಂದೂ, **ಅವ್ವೋ ಸಂಪ್ರದಾಯಙ್ಗಳಾಲೇ** - ಆಯಾ ಗುರೂಪದೇಶರೀತ್ಯಾ. **ಅನುಸಂಧಿಪ್ಪಾರ್ಗಳ್** – ಅನುಸಂಧಾನಮಾಡುತ್ತಾರೆ. **ಏಕವಾಕ್ಯವಾದರೆ**—೧ ಉಪಾಯ ಪರವಾಗಿಯೂ ೨ ಉಪೇಯಪರವಾಗಿ ಎರಡು ಯೋಜನೆಗಳು; **ವಾಕ್ಯದ್ವಯವಾ**

**ಏವಂ ದಶವಿಧಯೋಜನಾ ಉಚ್ಯನ್ತೆ**

**ಇಪ್ಪಡಿ ವಾಕ್ಯಾರ್ಥತ್ರೈಯುಮ್ ಬಹುಪ್ರಕಾರಮಾಗವಕುತ್ತನು. ಸಂಧಾನಮ್ ಪಣ್ಣುವಾರ್‍ಗಳ್. ಏಕವಾಕ್ಯಮಾನ ಪೋದು ೧. ತಸ್ಯವಾಚಕಃ ಪ್ರಣವಃ" ಇತ್ಯಾದಿಗಳಿರ್‍ಪಡಿಯೇ ಪ್ರಣವ ಪ್ರತಿಪಾದ್ಯ ಸವಿಭಾವಶಿಷ್ಟಾಯ ನಾರಾಯಣಾಯ ನಮಃ" ಎನ್ರು ಅನ್ವಯಮಾಮ್.**

---

ದರೆ—೧ ಸ್ವರೂಪ ಪರವಾಗಿಯೂ, ೨. ಸಪರಿಕರಾತ್ಮಸಮರ್ಪಣ ರೂಪೋಪಾಯ ಪರವಾಗಿಯೂ ೩. ಇಷ್ಟಪ್ರಾಪ್ತ್ಯ ನಿಷ್ಟನಿವೃತ್ತಿರೂಪ ಪುರುಷಾರ್ಥ ಪ್ರಾರ್ಥನಾಪರವಾಗಿಯೂ, ಹೀಗೆ ಮೂರು ಯೋಜನೆಗಳು.

**ವಾಕ್ಯತ್ರಯವಾದರೆ**—೧ ಪ್ರಣವ ನಮಸ್ಸುಗಳು ಸ್ವರೂಪ ಪರವಾಗಿ ತೃತೀಯ ಪದ ಪುರುಷಾರ್ಥ ಪ್ರಾರ್ಥನಾಪರವಾಗಿಯೂ. ೨. ಪ್ರಣವ ಸ್ವರೂಪ ಪರವಾಗಿ ದ್ವಿತೀಯ ತೃತೀಯ ಪದಗಳು ಉಪಾಯ ಪರವಾಗಿಯೂ, ೩. ಪ್ರಣವವು ಭರನ್ಯಾಸಪರವಾಗಿ, ಎರಡೂ ಮೂರನೆಯ ಪದಗಳು ಕ್ರಮವಾಗಿ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಪರವಾಗಿಯೂ. ೪ ಪ್ರಣವವು ಸ್ವರೂಪಪರವಾಗಿ, ದ್ವಿತೀಯ ತೃತೀಯ ಪದಗಳು ಉಪಾಯಪರವಾಗಿ, ೫. ಪ್ರಣವಮ್ ಸ್ವರೂಪಪರವಾಗಿ ದ್ವಿತೀಯಂ ಉಪಾಯಪರವಾಗಿ, ತೃತೀಯಂ ಪುರುಷಾರ್ಥಪರವಾಗಿ, ಹೀಗೆ ಐದು ಯೋಜನೆಗಳುಂಟು. ಇವುಗಳನ್ನೆಲ್ಲಾ ಒಟ್ಟು ಸೇರಿಸಿದರೆ, ದಶವಿಧ ಯೋಜನೆಯು ಈ ಮೂರು ವಿಧ ವಾಕ್ಯಾರ್ಥಗಳಿಂದ ಏರ್ಪಡುವುವು ಎಂದು ಉಪದೇಶಿಸುತ್ತಾರೆ.—

**ಹೀಗೆ ಹತ್ತು ವಿಧ ಯೋಜನೆಗಳು ಹೇಳಲ್ಪಡುವುವು.**

**ಇಪ್ಪಡಿ** - ಮೇಲೆ ಹೇಳಿದ ರೀತಿಯಲ್ಲಿ ಮೂಲಮಂತ್ರದ ವಾಕ್ಯಾರ್ಥವನ್ನೂ **ಬಹುಪ್ರಕಾರವಾಗಿ, ವಕುತ್ತು** - ವಿಭಾಗಿಸಿ, **ಅನುಸಂಧಾನಮ್ ಪಣ್ಣುವರ್‍ಗಳ್** – ಅನುಸಂಧಾನವನ್ನು ಮಾಡುವರು.

**ಏಕವಾಕ್ಯಮಾನಪೋದು**-ಮೂಲಮಂತ್ರದ ಮೂರು ಪದವೂ ಸೇರಿ ಒಂದೇ ವಾಕ್ಯವೆಂಬ ಭಾವಸಿಯಾದರೆ, "**ತಸ್ಯ ವಾಚಕಃ ಪ್ರಣವಃ**" ಆ ಪರಮಾತ್ಮನನ್ನು ಬೋಧಿಸುವುದು ಪ್ರಣವವು, ಎಂದರೆ ಪ್ರಣವಕ್ಕೆ ಸರ್ವೇಶ್ವರನೆಂಬರ್ಥವೆಂಬಭಾವವು" '**ಇತ್ಯಾದಿಗಳಿರ್‍ಪಡಿಯೇ**-ಇವೇ ಮೊದಲಾದವುಗಳಲ್ಲಿ ಹೇಳಿರುವಹಾಗೆ, **ಪ್ರಣವ ಪ್ರತಿಪಾದ್ಯ ಸ್ವಭಾವವಿಶಿಷ್ಟಾಯ**-ಇದು **ಓಂ** ಎಂಬುದರರ್ಥವು;"**ಓಮಿತಿಬ್ರಹ್ಮ**" ಎಂಬ ತೈತ್ತರೀಯ ಪ್ರಯೋಗದಿಂದಲೂ, **ಓಂತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧ ಸ್ಸ್ಮೃತಃ**" ಎಂಬ (ಗೀ ೧೮-೨೩) ವಾಕ್ಯದಿಂದಲೂ ಪ್ರಣವದಿಂದ ಭಗವಂತನೇ ಹೇಳಲ್ಪಡುವನಾದುದರಿಂದ, ಪ್ರಣವದಿಂದ ಪ್ರತಿಪಾದಿಸಲ್ಪಡುವ

---

(೧) ಪಾತಂಜಲಿ. ೧. ೧. ೨೭.

ಸ್ವಭಾವಯುಕ್ತನಾದ - **ನಾರಾಯಣಾಯ ನಮಃ** - ನಾರಾಯಣನಲ್ಲಿ ಶರಣಾಗತಿ ರೂಪ ನಮಸ್ಕಾರವು, **ಎನ್ರು ಅನ್ವಯ ಮೂವರ್** - ಎಂದು ಅನ್ವಯವಾಗುತ್ತದೆ. ಇದರಿಂದ ಏಕ ವಾಕ್ಯಕ್ಕೆ ಅನ್ವಯ ಹೇಗೆಂದರೆ **"ಓಂ ನಾರಾಯಣಾಯ ನಮಃ"** ಪ್ರಣವ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನಿಗೆ ಈ ತಾನುಮಾಡುವ ನಮಸ್ಕಾರ ರೂಪ ಶರಣಾಗತಿಯು, ಎಂಬದಾಗಿ. ಇಲ್ಲಿ ಓಂ ಎಂಬುದೂ ಭಗವದ್ವಾಚಕವಾಗಿ, ಅನಂತರ ನಾರಾಯಣಾಯ ಎಂಬುದೂ ಭಗವದ್ವಾಚಕವಾಗಿ ಪುನರುಕ್ತಿದೋಷವುಳ್ಳದು ಈ ಯೋಜನೆಯಾಗುವದಿಲ್ಲವೋ ? ಎಂದರೆ ವಿಶೇಷಣ ವಿಶೇಷ್ಯ ಭಾವವನ್ನು ತೋರಿಸಿ ಪುನರುಕ್ತಿದೋಷ ನಿವಾರಣಕ್ಕಾಗಿ, **"ಪ್ರಣವ ಪ್ರತಿಪಾದ್ಯ ಸ್ವಭಾವ ವಿಶಿಷ್ಟಾಯ ನಾರಾಯಣಾಯ"** ಎಂಬ ಪ್ರಯೋಗವು. ಆದುದರಿಂದ ಓಂ ಎಂಬ ವಿಶೇಷಣದಿಂದ ತೋರುವ ಅರ್ಥವು ಅವರಕ್ಷಣೆ ಧಾತುವಿನ ಮೂಲಕ, ಸರ್ವರಕ್ಷಕನಾದ ನಾರಾಯಣಾಯ ನಮಃ ಎಂಬರ್ಥವನ್ನುಳ್ಳದ್ದಾಗುತ್ತದೆ ಇಲ್ಲಿ **ಆಯ ನಾರಾಯಣಾಯ** ನಮಃ ಎಂದು ಏಕವಾಕ್ಯವಾಗಿ ಅನ್ವಯಿಸಿದರೆ, ಅಕಾರವಾಚ್ಯನಾದ ನಾರಾಯಣನಿಗೆ ನಮಸ್ಕಾರವೆಂದು ಅರ್ಥ ಹೇಳಿ ಪ್ರಣವವನ್ನು ನಾರಾಯಣಶಬ್ದಕ್ಕೆ ವಿಶೇಷಣವಾಗಿ ಹೇಳುವದರಿಂದ ಪುನರುಕ್ತಿ ಇಲ್ಲದಿದ್ದರೂ, **ಆಯ** ಎಂಬಲ್ಲಿ ಲುಪ್ತಚತುರ್ಥಿಯಿಂದ ಶೇಷತ್ವ ಅರ್ಥವನ್ನು ಹೇಳಿ, ನಾರಾಯಣಾಯ ಎಂಬ ಚತುರ್ಥಿಯಿಂದಲೂ ಶೇಷತ್ವವನ್ನು ಉಪಪಾದಿಸಿದರೆ ಆಗಲೂ ಪುನರುಕ್ತಿಯಾಗಲಿಲ್ಲವೇ? ಎಂಬ ಆಕ್ಷೇಪ ತಂದರೆ, ಆಗಲೂ ಪುನರುಕ್ತಿ ಇಲ್ಲವು. ಹೇಗೆಂದರೆ ಆಗ ಆಯ ಎಂಬುದು ಯಾವಾಗ ನಾರಾಯಣಾಯ ಎಂಬುದಕ್ಕೆ ವಿಶೇಷಣವಾಯಿತೋ, ಆಗ ಆಯ ಎಂಬಲ್ಲಿರುವ ಚತುರ್ಥಿಯೂ ಕೂಡ ಕೇವಲ ವಿಶೇಷಣವಾಗಿ ಭಾವಿಸತಕ್ಕದ್ದೇವಿನಾ ಶೇಷತ್ವವನ್ನು ಬೋಧಿಸುತ್ತದೆಂಬರ್ಥವಲ್ಲವು ಎಂಬುದು ಸಮಾಧಾನವು. **ಪ್ರಣವ ಪ್ರತಿಪಾದ್ಯ ಸ್ವಭಾವ ವಿಶಿಷ್ಟಾಯ** ಎಂಬುದರಿಂದ **ಕ್ಲೇಶಕರ್ಮ ವಿಪಾಕಾಶಯೈರಪರಾಮೃಷ್ಟಃ ಪುರುಷ ವಿಶೇಷಃ ಈಶ್ವರಃ ತಸ್ಯ ವಾಚಕಃ ಪ್ರಣವಃ"** ಎಂಬಲ್ಲಿ ಹೇಳಿರುವಹಾಗೆ ಪ್ರಣವವು ಈಶ್ವರವಾಚಕವು ಮತ್ತು ಅತನ ಸ್ವಭಾವವಾದ ಹೇಯ ಪ್ರತ್ಯನೀಕತ್ವ ವಾಚಕವು ಎಂದೂ ಭಾವಿಸತಕ್ಕದ್ದು. ಓಂ ಎಂಬುದು ಭಗವದ್ವಾಚಕವು ಹೇಗೆಂದರೆ **ಅವತಿ ರಕ್ಷತೀತಿ ಓಮ್** ಎಂಬ ವ್ಯುತ್ಪತ್ತಿಯು. ಅದು ವಿಶೇಷಣ ಹೇಗೆಂದರೆ ಓಂ ಎಂಬುದರಿಂದ ರಕ್ಷಕತ್ವಾದಿ ವಿಶಿಷ್ಟಾಯ ಎಂಬರ್ಥವು. ಮುಂದಿನ ವಾಕದಿಂದ **ಓಂ ನಾರಾಯಣಾಯ** ಎಂಬುದರಿಂದ ಪುನರುಕ್ತಿದೋಷವಿಲ್ಲವೆಂಬುದನ್ನು ಪ್ರಮಾಣಮೂಲಕ ಉಪಪಾದಿಸುತ್ತಾರೆ. **ಇಪ್ಪ್ರಣವಂ ತಾನೇ** - ಈ ಪ್ರಣವವೇ, **ಸಾಮಮಾಗವೈತ್ತಾಯ್ ನಿರ್ಕ** - ಭಗವನ್ನಾಮವಾಗಿರುವಾಗ, ನಾರಾಯಣಾಯ ಎಂಬ ಬೇರೇ ಭಗವನ್ನಾಮವು ಏತಕ್ಕೆ ಎಂದು ಆಕ್ಷೇಪಣೆಯನ್ನು ತಂದರೆ ಅದಕ್ಕೆ ಪ್ರಮಾಣದೊಂದಿಗೆ ಸಮಾಧಾನವನ್ನು ಹೇಳುತ್ತಾರೆ. ೨. ಅವ್ಯಕ್ತಾ

ಇಪ್ಪ್ರಣವನ್ತಾನೇ ನಾಮವಾಗವತ್ತಾಯ್‌ನಿರ್ಕ (೨) ಅವ್ಯಕ್ತಾ ರ್ಥತಯೋಙ್ಕಾರಃ ಕೇವಲಂ ನೈವಸಾಧಕಃ" ಎನ್ರು ಶಾಣ್ಡಿಲ್ಯಾದ್ಯುಕ್ತ ಪ್ರಕ್ರಿ ಯೈಯಾಲೇ ವ್ಯಾಪಕಮನ್ತ್ರಙ್ಗಳಿಲ್ ನಾಮಾನ್ತರಮ್ ವ್ಯಕ್ತ್ಯರ್ಥಮ್. ಇನ್ದ ಯೋಜನಾವಿಶೇಷಮ್ ಅಹಿರ್ಬುಧ್ನ್ಯಾದ್ಯುಕ್ತಮಾನ ಸ್ಥೂಲಾನು ಸಂಧಾನ ಪ್ರಕಾರತ್ತೈ ಪ್ಪಾರ್‌ತ್ತಾಲ್ ಉಪಾಯಪರಮ್. ಇಪ್ಪಡಿಯಾನಾ ಲುಮ್ ಸ್ವರೂಪಪುರುಷಾರ್ಥಙ್ಗಳ್ ಇದಿಲೇಅಂತರ್ಗತಙ್ಗಳ್ (೩). "ಬದ್ಧಾಂ

---

ರ್ಥತಯಾ - ಓಂಕಾರವು ಭಗವನ್ನಾಮವನ್ನು ವ್ಯಕ್ತವಾಗಿ ತಿಳಿಸದೇ ಇರುವದ ರಿಂದ, ಓಙ್ಕಾರಃ - ಪ್ರಣವವು, ಕೇವಲಂ ನೈವಸಾಧಕಃ - ಬರೀ ಅದೇ ಭಗ ವಂತನನ್ನು ಬೋಧಿಸಲಾರದು" ಎನ್ರು - ಎಂಬದಾಗಿ, ಶಾಂಡಿಲ್ಯಾದ್ಯುಕ್ತ ಪ್ರಕ್ರಿಯೈ ಯಾಲೇ - ಶಾಂಡಿಲ್ಯ ಸ್ಮೃತಿ ಮೊದಲಾದವುಗಳಲ್ಲಿ ಹೇಳುವರೀತಿಯಲ್ಲಿ ವ್ಯಾಪಕ ಮನ್ತ್ರಙ್ಗಳಿಲ್ - ಮುಖ್ಯಮಂತ್ರಗಳಾದ ಮೂಲಮಂತ್ರ, ವಾಸುದೇವ ಮಂತ್ರ, ವಿಷ್ಣುಮಂತ್ರಗಳಲ್ಲಿ, ನಾಮಾನ್ತರಮ್ - ನಾರಾಯಣಾಯ, ವಾಸುದೇ ವಾಯ, ವಿಷ್ಣವೇ ಎಂಬದಾಗಿ ಬೇರೇ ಭಗವನ್ನಾಮವು ಎಂದರೆ, ಬೇರೆ ನಾಮ ವನ್ನು ಮಂತ್ರದಲ್ಲಿ ಹೇಳಿರುವದು, ವ್ಯಕ್ತ್ಯರ್ಥಮ್ - ಸ್ಪಷ್ಟವಾಗಿ ತಿಳಿಸುವದ ಕ್ಕಾಗಿ ಎಂದು ಭಾವಿಸತಕ್ಕದ್ದು. ಈ ಯೋಜನೆಯು ಉಪಾಯ ಪರವೆಂದು ಮುಂ ದಿನ ವಾಕ್ಯದಿಂದ ಹೇಳುತ್ತಾರೆ.—ಇನ್ದ ಯೋಜನಾ ವಿಶೇಷಮ್ - ಈ ಯೋ ಜನಾವಿಶೇಷವು, ಅಹಿರ್ಬುಧ್ನ್ಯ ದ್ಯುಕ್ತಮಾನ - ಅಹಿ ಬುಧ್ನ್ಯ ಸಂಹಿತಾ ಮೊದಲಾದವುಗಳಲ್ಲಿ ಹಿಂದೆ ಹೇಳಲ್ಪಟ್ಟ, ಸ್ಥೂಲಾನುಸಂಧಾನ ಪ್ರಕಾರತ್ತೈ— ಸ್ಥೂಲಯೋಜನೆಯ ಅನುಸಂಧಾನ ಪ್ರಕಾರವನ್ನು, ಪಾರ್‌ತ್ತಾಲ್ - ಪರಿಶೀಲಿಸಿ ದರೆ, ಉಪಾಯ ಪರಮ್ - ಉಪಾಯಪರನಾದ ಅರ್ಥವುಂಟಾಗುತ್ತದೆ. ಒಂದು ವಾಕ್ಯವಾದಾಗ ಈ ಮಂತ್ರದ ಅರ್ಥವೇನೆಂದರೆ-ಪ್ರಣವಪ್ರತಿಪಾದ್ಯನಾಗಿ ರಕ್ಷಕ ತ್ವಾದಿ ಧರ್ಮವಿಶಿಷ್ಟನಾದ ನಾರಾಯಣನನ್ನುದ್ದೇಶಿಸಿ ನಮನವು-ಭರ ಸಮರ್ಪ ಣವು ಎಂಬದಾಗಿ ವಾಕ್ಯಾರ್ಥವು. ಹೀಗೆ ಏಕವಾಕ್ಯವಾಗಿ ಭಾವಿಸುವದರಿಂದ ಉಪಾಯಪರವಾದ ಅರ್ಥವು ತೋರಿಬಂದರೂ, ಉಪೇಯಪರವಾದ ಅರ್ಥವೂ ಜೀವಾತ್ಮನಾದ ತನಗೆ ಸ್ವರೂಪವಾದ ಶೇಷಭೂತನೆಂಬ ಭಾವವೂ ಅದರಲ್ಲೇ ಅಂತರ್ಗತವೆಂದು ಮುಂದೆ ಉಪಪಾದಿಸುತ್ತಾರೆ. ಇಪ್ಪಡಿ ಯಾನಾಲುಮ್ – ಹೀಗೆ ಏಕವಾಕ್ಯವಾಗಿ ಉಪಾಯಪರವೆಂಬರ್ಥ ಉಂಟಾದರೂ, ಸ್ವರೂಪ ಪುರು ಷಾರ್ಥಗಳು, ಇದಿಲೇ,-ಈ ಏಕವಾಕ್ಯ ಯೋಜನೆಯಲ್ಲೇ, ಅಂತರ್ಗತವು. ಹೇಗೆ ಎಂಬುದನ್ನು ಪ್ರಮಾಣಪೂರ್ವಕವಾಗಿತಿಳಿಸುತ್ತಾರೆ.- (೩) ಬದ್ಧಾಂಜಲಿಪುಟಾಃ-

---

(೨) ಶಾಂಡಿಲ್ಯ- ೫. ೭೧. (೩) ಭಾರ. ಶಾಂತಿ. ೩೪೪. ೪೫.

**ಜಲಿ ಪುಟಾಹೃಷ್ಟಾ ನಮ ಇತ್ಯೇವ ವಾದಿನಃ" ಇತ್ಯಾದಿಗಳೈ ಪ್ಪಾರ್ತು ಪ್ರಾಪ್ಯಾನ್ತರ್ಗತ ಶೇಷವೃತ್ತಿ ಪರಮಾಗವು ಮನುಸಂಧಿಪ್ಪಾರ್ಗಳ್. ಇವ್ವೃತ್ತಿ ವಿಶೇಷಮುಮ್ ಸ್ವರೂಪಾನು ಸಂಧಾನ ಪೂರ್ವಕಮ್. ಇದು**

---

ಅಂಜಲಿಯನ್ನು ಮಾಡಿಕೊಂಡಿರುವ, **ಹೃಷ್ಟಾಃ** - ಸಂತೋಷಚಿತ್ತರಾದ, **ನಮ ಇತ್ಯೇವ ವಾದಿನಃ**- **ನಮಃ** ಎಂದು ಉಚ್ಚರಿಸುತ್ತಿರುವವರು ಯಾರು ಎಂದರೆ **ತೇ ಮಾನವಾಃ** ಎಂದು ಪೂರ್ವಾರ್ಧದಲ್ಲಿ ಇರುತ್ತದೆ. ಇದು ಉಪರಿಚರವಸುವು ಬೃಹಸ್ಪತಿಯು ಮೂಲಕ ಯಜ್ಞವನ್ನು ಮಾಡುವಾಗ ಶ್ರೀಹರಿಯು ಕಾಣದೇ ಬಂದು ಹವಿಸ್ಸನ್ನು ತೆಗೆದುಕೊಂಡು ಹೋದುದರಿಂದ ಕುಪಿತನಾದ ಬೃಹಸ್ಪತಿಯನ್ನು ಸಮಾಧಾನವನ್ನುಮಾಡುವದಕ್ಕಾಗಿ ಏಕತಾದಿ ಋಷಿಗಳಿಂದ ಹೇಳಲ್ಪಟ್ಟ ಶ್ವೇತದ್ವೀಪ ವರ್ಣನದಲ್ಲಿ ಬರುವ ವಾಕ್ಯವು; ಶ್ವೇತದ್ವೀಪದ ತೇಜಸ್ಸಿನಿಂದ ತಮಗೆಲ್ಲಾ ಕಣ್ಣುಮುಚ್ಚಿಹೋಗಿ, ಅಲ್ಲಿನ ನಿವಾಸಿಗಳು ಬದ್ಧಾಂಜಲಿಗಳಾಗಿ **ನಮಃ** ಎಂದು ಹೇಳುತ್ತಿದ್ದುದು ನಮಗೆ ಕೇಳುತ್ತಿತ್ತು; ಅವರುಗಳು **ಜಿತನ್ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ । ನಮಸ್ತೇಸ್ತು ಹೃಷೀಕೇಶ ಮಹಾ ಪುರುಷ ಪೂರ್ವಜ**" ಎಂದು ಹೇಳುವಾಗ ನಮಗೆ **ನಮಃ ನಮಃ** ಎಂದು ಹೇಳುತ್ತಿರುವ ಶಬ್ದವು ಮಾತ್ರ ಕೇಳುತ್ತಿತ್ತು ಎಂದು ಹೇಳುವ ಪ್ರಕರಣದಲ್ಲಿ ಬರುತ್ತದೆ." **ಇತ್ಯಾದಿಗಳೈಪ್ಪಾರ್ತ್ತು** - ಇವೇ ಮೊದಲಾದ ಪ್ರಮಾಣಗಳನ್ನು ನೋಡಿದರೆ, **ಪ್ರಾಪ್ಯಾನ್ತರ್ಗತ ಶೇಷವೃತ್ತಿ ಪರಮಾಕವುಮ್** - ಪ್ರಾಪ್ಯನಾದ ಸರ್ವೇಶ್ವರನಿಗೆ ಶೇಷವೃತ್ತಿಯನ್ನು ಕುರಿತೂ ಕೂಡ, **ಅನುಸಂಧಿಪ್ಪಾರ್ಗಳ್** - ಅನುಸಂಧಾನ್ನ ಮಾಡುವರು ಯಾರು; ಎಂದರೆ ಮೂಲ ಮಂತ್ರಾರ್ಥಗಳನ್ನು ಪರಿಶೀಲಿಸಿದ ಪ್ರಾಜ್ಞರು ಎಂಬ ಭಾವವು. **ಓಂ ನಾರಾಯಣಾಯ ನಮಃ** ಎಂದು ಏಕವಾಕ್ಯವಾಗಿ ಅನ್ವಯಿಸುವದರಿಂದ ಉಪಾಯಪರವಾದ ಅರ್ಥವು ಯಾವಾಗ ಬೋಧಿತವೋ, ಅದರಲ್ಲೇ ಉಪೇಯಪರ ಅರ್ಥವೂ, ಶೇಷವೃತ್ತಿ ಎಂದರೆ ಕೈಂಕರ್ಯ ಪ್ರಾಪ್ತಿಯ ಭಾವನೆಯೂ ಅಂತರ್ಗತವೆನ್ನುತ್ತಾರೆ. ಹೇಗೆಂದರೆ **ನಮಃ** ಎಂಬುದರಿಂದ ಉಪಾಯಪರವಾದ ಪ್ರಣಾಮವು ಯಾವಾಗ ಹೇಳಲ್ಪಟ್ಟಿತೋ, ಆ ಪ್ರಣಾಮವು ಯಾರಿಗೆ ಎಂದರೆ, ಉಪೇಯನಾಗಿ ಪ್ರಾಪ್ಯನಾಗಿರುವ ಶ್ರಿಯಃಪತಿಗೇ ಎಂಬ ಭಾವವು ಅಂತರ್ಗತವು; ನಮಶ್ಶಬ್ದದಿಂದ ಅಂಜಲಿಯಾಗಲಿ ಪ್ರಣಾಮವಾಗಲಿ ಮಾಡುವದರಿಂದ ಈತನ ಸ್ವರೂಪವಾದ ಶೇಷವೃತ್ತಿಯೂ ಸಹ ಆ ನಮಃ ಎಂಬುದರಲ್ಲೇ ಅಂತರ್ಗತವು ಎಂಬ ಭಾವವು. ಹೀಗೆ ಏಕವಾಕ್ಯಾನ್ವಯದಿಂದ (೧) ಉಪಾಯ (೨) ಉಪೇಯ (೩) ಸ್ವರೂಪ ಹೀಗೆ ಮೂರೂ ವ್ಯಕ್ತವೆಂಬ ತಾತ್ಪರ್ಯವು. ಸ್ವರೂಪವು ಅಂತರ್ಗತವೆಂದು ಹೇಳಲ್ಪಟ್ಟಿತಲ್ಲಾ, ಅದು ಹೇಗೆ?

ವುಮ್ ಕೃತೋಪಾಯರ್‌ಕ್ಕಿವ್ವಳವು ರಸಿಕ್ಕು ಮವಸ್ಥೈ ಇಲುಪಜೀವ್ಯಮ್.

---

ಎಂದರೆ ಅದನ್ನು ವ್ಯಕ್ತಪಡಿಸುತ್ತಾರೆ.—ಸ್ವರೂಪವು ಯಾವುದು ಎಂದರೆ ಭಗವಂತನಿಗೆ ತನ್ನಶೇಷತ್ವಜ್ಞಾನವೇ ಎಂದು ಹೇಳುತ್ತಾರೆ. **ಇವೃತ್ತಿ ವಿಶೇಷಮುಮ್**– ಈ ನಮಃ ಎಂಬುದರೊಂದಿಗೆ ಅಂಜಲಿ ಮಾಡುವದಾಗಲಿ, ಪ್ರಣಾಮವಾಗಲಿ ಅಥವಾ ಬಾಯಲ್ಲಿ ಉಚ್ಚರಿಸುವದಾಗಲಿ, ಇಂತಹ ವೃತ್ತಿ ವಿಶೇಷವು, **ಸ್ವರೂಪಾನುಸಂಧಾನ ಪೂರ್ವಕಮ್** - ತನ್ನ ಶೇಷವೃತ್ತಿಯ ಅನುಸಂಧಾನಪೂರ್ವಕವಾದುದು. ಹೀಗೆ ಏಕವಾಕ್ಯಾನ್ವಯದಿಂದ ಉಪಾಯಪರವಾದ ಅರ್ಥವು ಬೋಧಿತವಾದರೂ, ಆರ್ಥವಾಗಿ ಪ್ರಾಪ್ಯರೂಪ ಫಲವೂ, ಪ್ರಪನ್ನನ ಸ್ವರೂಪವಾದ ಸ್ವಾಭಾವಿಕ ಶೇಷವೃತ್ತಿಯ ಮಾಹಾತ್ಮ್ಯೆಯೂ ಎರಡೂ ತೋರಿಬರುತ್ತವೆಂದು ಹೇಳಿದರು, ಪ್ರಣವಾರ್ಥಭೂತಾಯ ನಾರಾಯಣಾಯನಮಃ ಎಂಬುದು ಏಕವಾಕ್ಯಾನ್ವಯವು. ನಮಃ ಎಂಬುದು ಮೇಲೆ ಉದಾಹರಿಸಿದ ಪ್ರಮಾಣರೀತ್ಯಾ ಕರಣತ್ರಯದಿಂದಲೂ ಮಾಡಲ್ಪಟ್ಟ ಪ್ರಹ್ವೀಭಾವ ರೂಪೋಪಾಯವು. ಇದರಲ್ಲೇ ಪ್ರಾಪ್ಯಾಂತರ್ಗತ ಶೇಷವೃತ್ತಿಯೂ ಉಂಟೆಂದು ತೋರಿಸಿದರು. ಈ ಶೇಷವೃತ್ತಿಯು ಎಲ್ಲಾ ಜೀವಾತ್ಮರ ವಿಷಯದಲ್ಲೂ ಇರತಕ್ಕದ್ದಾದರೂ, ಪ್ರಪನ್ನನಿಗೆ ಪ್ರಪದನೋತ್ತರಾವಸ್ಥೆಯಲ್ಲಿ ಅದರ ಮಾಹಾತ್ಮೆಯನ್ನು ತಿಳಿದವನಾದುದರಿಂದ ಮೋಕ್ಷಪ್ರಾಪ್ತಿಯಲ್ಲಿ ಹೇಗೋ ಹಾಗೆ, ಇಲ್ಲಿಯೂ "ಅಮೃತ ಇಹ ಭವತಿ" ಎಂಬಲ್ಲಿ ಹೇಳಿರುವಹಾಗೆ ಆನಂದಿಸುವನು ಎಂದು ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ. ಅಂತಹ ಅನುಸಂಧಾನವು ಅತ್ಯಂತ ಸುಖದಾಯಕವಾಗಿ ಭೋಗ್ಯವಾದುದು ಎನ್ನುತ್ತಾರೆ. **ಅದುವುಮ್** - ಶೇಷವೃತ್ತಿಯಿಂದ ಸೇರಿದ ಪ್ರಾಪ್ಯಪ್ರಾಪ್ತ್ಯನುಸಂಧಾನವು, **ಕೃತೋಪಾಯರ್ಕ್ಕು** - ಭರನ್ಯಾಸವನ್ನನುಷ್ಠಿಸಿದ ಪ್ರಪನ್ನರಿಗೆ, **ಇವ್ವಳವುರಸಿಕ್ಕು ಮವಸ್ಥೆಯಿಲ್** - ಮೋಕ್ಷ ದಶೆಯಲ್ಲಿ ಉಂಟಾಗುವ ಆನಂದಪಷ್ಟು ಇಲ್ಲದ್ದಿರೂ ಸ್ವಲ್ಪಮಟ್ಟಿಗೆ ಅಂತಹ ಅನುಭವ ಉಂಟಾಗುವ ಉತ್ತರಾವಸ್ಥೆಯಲ್ಲಿ, **ಉಪಜೀವ್ಯಮ್** - ಭೋಗ್ಯಭೂತವಾಗಿರುತ್ತದೆ. ಹೀಗೆ ಏಕವಾಕ್ಯದಿಂದ ಉಪಾಯಪರವಾದ ಮತ್ತು ಉಪೇಯ ಪರವಾದ ಎರಡು ಅರ್ಥಗಳು ಉಪಪಾದಿಸಲ್ಪಟ್ಟವು. ಕೃತೋಪಾಯರ್ಕ್ಕು ಇವ್ವಳವು ರಸಿಕ್ಕುಮ್ ಅವಸ್ಥೈ ಎಂದು ಹೇಳಿರುವದಕ್ಕೆ ಕಾರಣವೇನೆಂದರೆ ಭರನ್ಯಾಸವನ್ನನುಷ್ಠಿಸಿದ ಪ್ರಾಜ್ಞನಿಗೆ ಶೇಷವೃತ್ತಿಯ ಪಾರಮ್ಯವನ್ನು ತಿಳಿದು ಆನಂದಿಸುವನು; ಹಾಗೆ ಭರನ್ಯಾಸವನ್ನು ಅನುಷ್ಠಿಸದ ಅಕೃತೋಪಾಯನಿಗೆ ಇಂತಹ ರಸಿಕ್ಕುಂ ಅವಸ್ಥೆಯು ಎಂದಿಗೂ ಇರುವದಿಲ್ಲವೆಂಬುದು ವ್ಯಕ್ತವು. ಶೇಷವೃತ್ತಿಯ ಮಾಹಾತ್ಮ್ಯೆಯನ್ನು ಅಂತವನಿಗೀಗ ಇಂತಹ ರಸಿಕ್ಕುಂ ಅವಸ್ಥೆಯು ಉಂಟೆಂಬ ಭಾವವು ತೋರಿಬರುತ್ತದೆ.

ವಾಕ್ಯದ್ವಯಪಕ್ಷೇ ಸ್ವರೂಪಪರ ಇತಿ ಪ್ರಥಮ ಯೋಜನಾ.

---

ಇವ್ವಿರಣ್ಡು ಅನುಸಂಧಾನಮುಮ್ ಪ್ರತಿಷ್ಠಿತಮಾನ್ಪೋದು ಸ್ವರೂಪ ವಿವೇಕಮ್ ವೇಣುಮ್. ಅದರ್ಕಾಗ ವಾಕ್ಯದ್ವಯಮಾಗ ಅನುಸಂಧಿಕ್ಕುಮ್ ಪೋದು, ಅಕಾರ ನಾರಾಯಣ ಶಬ್ದ ವಾಚ್ಯ ಸರ್ವ ರಕ್ಷಕತ್ವ ಸರ್ವಾಧಾರತ್ವಾದಿ ವಿಶಿಷ್ಟನಾನವನುಕ್ಕೇ ನಾನ್ ನಿರುಪಾಧಿಕಾನನ್ಯಾರ್ಹಶೇಷಭೂತನ್; ಎನಕ್ಕು ರಿಯೋನಲ್ಲೇನ್, ಒನ್ರೈಪಱ್ಱ ನಿರುಪಾಧಿಕಸ್ವಾಮಿಯುಮ್ ಮಲ್ಲೇನ್; ನಿರ

---

ಎರಡು ವಾಕ್ಯವೆಂದು ಭಾವಿಸಿ ಮೊದಲನೆಯದಾದ ಸ್ವರೂಪ ಪರಯೋಜನೆಯು.

---

ಮುಂದೆ ಎರಡು ವಾಕ್ಯವಾಗಿ ಭಾವಿಸಿ, ಮೂರು ಯೋಜನೆಯ ಮೂಲಕ ವಾಗಿ ಮೂರರ್ಥಗಳನ್ನು ಉಪಪಾದಿಸುತ್ತಾರೆ.—ಈ ಉಪಾಯಪರವಾದ ಮತ್ತು ಫಲರೂಪವಾದ ಉಪೇಯ ಪರವಾದ ಈ ಎರಡು ಅನುಸಂಧಾನಗಳಿಗೂ ಮೇಲೆ ಹೇಳಿದ ತನ್ನ ಶೇಷವೃತ್ತಿರೂಪಸ್ವರೂಪದ ಅನುಸಂಧಾನವು ಆವಶ್ಯಕವೆಂದ ಹೇಳಿ, ಎರಡು ವಾಕ್ಯವೆಂಬ ಭಾವನೆಯಿಂದ ಇಂತಹ ಸ್ವರೂಪಾನುಸಂಧಾನವು ಪ್ರಾಪ್ತವಾಗುತ್ತದೆಂದು ತಿಳಿಸುತ್ತಾರೆ.—**ಇವ್ವಿರಂಡನುಸಂಧಾನಮುಮ್**—ಈ ಉಪಾಯೋಪೇಯ ರೂಪವಾದ ಎರಡು ವಿಧ ಅನುಸಂಧಾನವೂ, **ಪ್ರತಿಷ್ಠಿತ ಮಾಂಪೋದು** - ಪ್ರಪನ್ನನಲ್ಲಿ ಚನ್ನಾಗಿ ನೆಲಿಸುವ ಸಂದರ್ಭದಲ್ಲಿ, **ಸ್ವರೂಪ ವಿವೇಕ ವೇಣುಮ್** - ತಾನು ಪರಮಾತ್ಮನಿಗೆ ಶೇಷಭೂತವಾದ ಸ್ವರೂಪವುಳ್ಳವ ನೆಂಬ ವಿವೇಕ ಜ್ಞಾನವು ಆವಶ್ಯಕವು. ಹಿಂದೆ ಅರ್ಥವಾಗಿ ಭಾವಿಸಿದುದರಿಂದ ಈಗ ಶಾಬ್ದವಾಗಿಯೇ ಸ್ವರೂಪವು ಬೋಧಿತವಾಗುವಹಾಗೆ ಅರ್ಥಮಾಡುವದು ಆವಶ್ಯಕವೆಂಬ ಭಾವವು. **ಅದರ್ಕಾಹ** – ಅದಕ್ಕಾಗಿ, **ವಾಕ್ಯದ್ವಯಮಾಗ ಅನುಸಂಧಿಕ್ಕುಮ್‌ಪೋದು**–ಎರಡುವಾಕ್ಯವುಳ್ಳದುಎಂದು ಭಾವಿಸುವ ಸಂದರ್ಭ ದಲ್ಲಿ, **ಅಕಾರನಾರಾಯಣ ಶಬ್ದವಾಚ್ಯ** - ಅಕಾರ ಮತ್ತು ನಾರಾಯಣ ಶಬ್ದಗ ಳಿಂದ ಹೇಳಲ್ಪಟ್ಟ, ಸರ್ವರಕ್ಷಕತ್ವ ಸರ್ವಾಧಾರತ್ವಾದಿ ವಿಶಿಷ್ಟನಾದವನಿಗೆ ನಾನು- ನಾನು, ನಿರುಪಾಧಿಕಾನನ್ಯಾರ್ಹ **ಶೇಷಭೂತನ್** ಎನೊಂದೂ ಉಪಾಧಿ ಯಿಂದಲ್ಲದೆಯೂ, ಇನ್ನು ಯಾರಿಗೂ ಅಲ್ಲದೆ ಭಗವಂತನಿಗೇನೆ ಶೇಷಭೂತನು. ಇದು **ಓಂ ನಾರಾಯಣಾಯ** ಎಂಬುದನ್ನು ಒಂದು ವಾಕ್ಯವಾಗಿ ಭಾವಿಸುವದ ರಿಂದುಂಟಾಗುವ ಅರ್ಥವು ಎಂಬ ಭಾವವು, ಓಂ ಎಂಬದನ್ನು ನಾರಾಯಣಾಯ ಎಂಬುದಕ್ಕೆ ವಿಶೇಷಣವಾಗಿ ಭಾವಿಸುವದರಿಂದ, ಸರ್ವರಕ್ಷಕತ್ವ ಸರ್ವಾಧಾರತ್ವಾದಿ ವಿಶಿಷ್ಟನಾದ, **ನಾರಾಯಣಾಯ** - ನಾರಾಯಣನಿಗೇ ಶೇಷಭೂತನೂ, ಇನ್ನು

**ಪೇಕ್ಷ ಸ್ವತಂತ್ರನುಮಲ್ಲೇನ್, ಎನ್ರದಾಮ್. ಅಕಾರನಾರಾಯಣ ಶಬ್ದಙ್ಗಳಿರಣ್ಡುಮ್ ಭಗವನ್ನಾಮಮಾಗೈಯಾಲೇ ಪುನರುಕ್ತಿವಾರಾದೋವೆನ್ನಿಲ್? ಅಪ್ಪೋದು ವ್ಯುತ್ಪತ್ತಿ ವಿಶೇಷ ಸಿದ್ಧಮಾನ ಅರ್ಥವಿಶೇಷತ್ತೈ ವಿವಕ್ಷಿತ್ತು ಒನ್ರು ವಿಶೇಷಣ ಮಾಗಕ್ಕಡವದು.**

---

ಯಾರಿಗೂ ಅಲ್ಲವೆಂಬರ್ಥವು ಉಂಟಾಗುವದರಿಂದ, ನಿರುಪಾಧಿಕಾನನ್ಯಾರ್ಹಶೇಷತ್ವಾನುಸಂಧಾನವುಂಟಾಗುತ್ತದೆ. **ನಮಃ** ಎಂಬುದೇ ಎರಡನೆಯ ವಾಕ್ಯವು. ಇದರ ಅರ್ಥಾನುಸಂಧಾನ ಹೇಗೆ ಎಂಬುದನ್ನು ತಿಳಿಸುತ್ತಾರೆ.—**ಎನಕ್ಕುರಿಯೇನಲ್ಲೇನ್**- ನನ್ನನ್ನು ರಕ್ಷಿಸಿಕೊಳ್ಳಲು ನಾನು ಸಮರ್ಥನಲ್ಲವು, ಇದರಿಂದ ಅಹಂಕಾರ ನಿವೃತ್ತಿಯು. **ಓನ್ರುಕ್ಕುಮ್ ನಿರುಪಾಧಿಕ ಸ್ವಾಮಿಯುಂ ನಲ್ಲೇನ್** - ಒಂದು ವಸ್ತುವಿಗೂ ಕೂಡ ನಾನು ನಿರುಪಾಧಿಕವಾದ ಸ್ವಾಮಿಯು ಅಲ್ಲವು. ಇಲ್ಲಿ ಮಮಕಾರ ನಿವೃತ್ತಿಯು. ಎಲ್ಲಕ್ಕೂ ಸ್ವಾಮಿಯು ಪರಮಾತ್ಮನೇ. **ನಿರಪೇಕ್ಷ ಸ್ವತಂತ್ರನುಮಲ್ಲೇನ್** ಪರಮಾತ್ಮನ ಅಪೇಕ್ಷೆಯಿಲ್ಲದಹಾಗೆ ಸ್ವತಂತ್ರನೂ ಅಲ್ಲವು, **ಎನ್ರದಾಮ್** - ಎಂಬರ್ಥವುಂಟಾಗುತ್ತದೆ. ಈ ನಮಃ ಎಂಬ ಎರಡನೆಯ ವಾಕ್ಯದಿಂದ ಈ ಮೂರು ಅರ್ಥಗಳೂ ತೋರಿಬರುತ್ತವೆಂಬ ಭಾವವು. ಈ ಮೂರು ಅರ್ಥಗಳೂ **ಮಃ ನ** ಎಂಬ ಯೋಜನೆಯಿಂದ ಉಂಟಾಗುತ್ತದೆಂದು ಹಿಂದೆಯೇ ಅಹಿರ್ಬುಧ್ನ್ಯ ಸಂಹಿತಾವಾಕ್ಯಗಳಿಂದ ಉಪಪಾದಿಸಲ್ಪಟ್ಟಿರುತ್ತದೆ. ಆ ಶ್ಲೋಕಗಳ ಅರ್ಥವನ್ನು ಪರಾಂಬರಿಸಿ.

ಹೀಗೆ ಓಂ ನಾರಾಯಣಾಯ ಎಂದು ಮೊದಲನೆಯ ವಾಕ್ಯವಾಗಿಯೂ, **ನಮಃ** ಎಂದು ಎರಡನೆಯ ವಾಕ್ಯವಾಗಿಯೂ ಭಾವಿಸಿದರೆ, ಓಂ ಎಂಬ ಪದದಲ್ಲಿರುವ ಅಕಾರಾಯ ನಾರಾಯಣಾಯ ಎಂದು ಅರ್ಥಮಾಡಿದರೆ ಪುನರುಕ್ತಿಯುಂಟಾಗುವದಿಲ್ಲವೇ ? ಎಂದು ಪೂರ್ವ ಪಕ್ಷವನ್ನು ಮಾಡಿ ಸಮಾಧಾನವನ್ನು ಹೇಳುತ್ತಾರೆ.—**ಅಕಾರನಾರಾಯಣ ಶಬ್ದಗಳಿರಡೂ ಭಗವನ್ನಾಮ ಮಾಗೈಯಾಲೇ** – ಭಗವಂತನ ನಾಮವಾಗಿರುವಾಗ, **ಪುನರುಕ್ತಿವಾರಾದೋ ವೆನ್ನಿಲ್?** ಪುನರುಕ್ತಿದೋಷ ಬರಲಿಲ್ಲವೋ? ಎಂದರೆ **ಅಪ್ಪೋದು** - ಆ ಸಂದರ್ಭದಲ್ಲಿ, **ವ್ಯುತ್ಪತ್ತಿ ವಿಶೇಷತ್ತೈ** - ಧಾತು ವ್ಯುತ್ಪತ್ತಿ ಮೂಲಕ ಉಂಟಾಗುವ ಸರ್ವರಕ್ಷಕತ್ವ, ಸರ್ವ ಕಾರಣತ್ವ, ಸರ್ವಾಧಾರತ್ವಾದಿ ವಿಶೇಷಾರ್ಥಗಳನ್ನು, **ವಿವಕ್ಷಿತ್ತು** - ಹೇಳುತ್ತದೆ ಎಂದು ಇಟ್ಟುಕೊಂಡು, **ಒನ್ರು** - ಒಂದು ಎಂದರೆ, ಪ್ರಣವದ ಅಕಾರವು, **ವಿಶೇಷಣ ಮಾಗಕ್ಕಡವದು** – ನಾರಾಯಣಾಯ ಎಂಬ ಶಬ್ದಕ್ಕೆ ವಿಶೇಷಣವಾಗುತ್ತದೆ, ಹಾಗೆ ಭಾವಿಸಬಹುದು ಎಂಬ ತಾತ್ಪರ್ಯವು. ಅದನ್ನೇ ವಿಶದೀಕರಿಸಿ ಹೇಳುತ್ತಾರೆ. **ಅಕಾರ ವಾಚ್ಯನಾನ** - ಸರ್ವರಕ್ಷಕತ್ವ ಸರ್ವ ಕಾರಣತ್ವಾದಿ ಗುಣಗಳುಳ್ಳವನಾಗಿರುವದರಿಂದ ಅಕಾರವಾಚ್ಯನಾದ, **ನಾರಾಯಣನು**

**ಅಕಾರವಾಚ್ಯನಾನ ನಾರಾಯಣನುಕ್ಕೆನ್ರುಮ್ ಪುನರುಕ್ತಿ ಪರಿಹರಿಕ್ಕಲಾಮ್. ಭಗವಚ್ಛಬ್ದಮುಮ್ ನಾಮಧೇಯಮಾಯಿರುಕ್ಕ ವಾಸುದೇವಾದಿ ಶಬ್ದತ್ತೋಡೆ ಸಮಾನಾಧಿಕರಣಮಾಕನಿನ್ರದಿರೇ.**

---

**ಕ್ಕೆನ್ರುಮ್ ಪುನರುಕ್ತಿ ಪರಿಹರಿಕ್ಕಲಾಮ್** - ನಾರಾಯಣನಿಗೆ ಎಂದು ಪುನರುಕ್ತಿ ದೋಷವನ್ನು ಪರಿಹರಿಸಬಹುದು. ಈ ಎರಡು **ಅಯ** ನಾರಾಯಣಾಯ ಎಂಬ ನಾಮಗಳಲ್ಲಿ ಅಕಾರವನ್ನಾಗಲಿ, ನಾರಾಯಣ ಶಬ್ದವನ್ನಾಗಲಿ ವಿಶೇಷಣವಾಗಿ, ವ್ಯುತ್ಪತ್ತಿ ಮೂಲಕ ಅರ್ಥವುಳ್ಳದ್ದಾಗಿ ಭಾವಿಸಬಹುದು ಎಂಬ ಭಾವವನ್ನು ತೋರಿಸುವುದಕ್ಕಾಗಿ ಹಿಂದಿನ ವಾಕ್ಯದಲ್ಲಿ ಒನ್ರು - ಯಾವುದಾದರೂ **ಒಂದು, ವಿಶೇಷಣವಾಗಕ್ಕಡವದು** - ವಿಶೇಷಣವಾಗಬಹುದು. ಇದರಿಂದ **ಅಕಾರ ವಾಚ್ಯನಾದ** ನಾರಾಯಣಾಯ ಎಂದಾಗಲಿ, **ನಾರಾಯಣ ಶಬ್ದವಾಚ್ಯನಾದ ಅಯ**-ವಿಷ್ಣುವಿಗೆ ಎಂದಾಗಲಿ, ಅನ್ವಯಿಸಬಹುದು. ಹೀಗೆ ಅಕಾರವೂ ನಾರಾಯಣ ಶಬ್ದವೂ ಸಹ ಮೂಲಮಂತ್ರದಲ್ಲಿ ಭಗವದ್ವಾಚಕಗಳಾದರೂ ಪುನರುಕ್ತಿದೋಷವಿಲ್ಲವೆಂದು ಉಪಪಾದಿಸಿದರು. ಹಾಗೆಯೇ ದ್ವಾದಶಾಕ್ಷರ ಮಂತ್ರದಲ್ಲೂ "**ಭಗವತೇ ವಾಸುದೇವಾಯ**" ಎಂದು ಎರಡು ಭಗವಂತನನ್ನು ಬೋಧಿಸುವ ಶಬ್ದಗಳಿದ್ದರೂ ಒಂದನ್ನು ವ್ಯುತ್ಪತ್ತಿಮೂಲಕ ವಿಶೇಷಣವನ್ನಾಗಿಯೂ, ಇನ್ನೊಂದನ್ನು ವಿಶೇಷ್ಯವಾಗಿಯೂ, ಭಾವಿಸುವದರಿಂದ ಪುನರುಕ್ತಿದೋಷವಿರುವದಿಲ್ಲವೆಂದು ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ.—**ಭಗವಚ್ಛಬ್ದಮುಮ್** - ಭಗವಚ್ಛಬ್ದವೂ, **ನಾಮಧೇಯಮಾಯಿರುಕ್ಕ** - ಪರಮ ಪುರುಷನ ಹೆಸರಾಗಿರುವಾಗ, ವಾಸುದೇವ **ಶಬ್ದತ್ತೋಡೇ** - ವಾಸುದೇವ ಶಬ್ದದೊಂದಿಗೆ, **ಸಮಾನಾಧಿಕರಣಮಾಗಾ** - ಸಮಾನಾಧಿಕರಣ್ಯವಾಗಿ, **ನಿನ್ರದಿರೇ** - ನಿಂತಿದೆಯಷ್ಟೇ, **ಭಗವತೇ ವಾಸುದೇವಾಯ** ಎಂದು ಮಂತ್ರದಲ್ಲಿರುವದರಿಂದ, ಈ ಎರಡು ಶಬ್ದಗಳಿಗೆ **ಭಿನ್ನಪ್ರವೃತ್ತಿ** ಇರುವದರಿಂದಲೂ, ಎರಡಕ್ಕೂ ಪರಮ ಪುರುಷನಾದ ಒಬ್ಬನಲ್ಲೇ ಅನ್ವಯವಿರುವದರಿಂದಲೂ, **ಭಗವತೇ ವಾಸುದೇವಾಯ** ಎಂಬೆರಡು ಸಮಾನ ವಿಭಕ್ತಿಯಿರುವ ಶಬ್ದಗಳಿಗೆ ಸಾಮಾನಾಧಿಕರಣ್ಯವು ಕೂಡುತ್ತದೆ ಎಂಬ ಭಾವವು. "**ಭಿನ್ನಪ್ರವೃತ್ತಿ ನಿಮಿತ್ತಾನಾಂ ಶಬ್ದಾನಾ ಮೇಕಸ್ಮಿನ್ ಅರ್ಥೇ ವೃತ್ತಿಸ್ಸಾಮಾನಾಧಿಕರಣ್ಯಂ**" ಎಂದು ಸಾಮಾನಾಧಿಕರಣ್ಯಕ್ಕೆ ಲಕ್ಷಣವಾಗಿ ಹೇಳಲ್ಪಟ್ಟಿರುತ್ತದೆ. ಹೀಗೆ ಹೇಳುವ ಪದಗಳು ಮೂರು ವಿಧವಾಗಿ ಭಾಗಿಸಲ್ಪಟ್ಟಿವೆ. (೧) **ಘಟಃ ಕುಂಭಃ** ಎಂಬ ಪದಗಳಿಗೆ ಏಕವಸ್ತುವಿನಲ್ಲೇನೋ ಅನ್ವಯ ಉಂಟು. ಭಿನ್ನಪ್ರವೃತ್ತಿ ನಿಮಿತ್ತವಾದವಲ್ಲವು, ಬೇರೆ ಬೇರೆ ಅರ್ಥಗಳುಳ್ಳವಲ್ಲವು; (೨) **ಅಶ್ವಃ ಗಜಃ**-ಭಿನ್ನಪ್ರವೃತ್ತಿ ನಿಮಿತ್ತಗಳುಳ್ಳವು; ಅರ್ಥಗಳೇನೋ ಬೇರೆಯೇ, ಆದರೆ ಒಂದರಲ್ಲೇ ಅನ್ವಯವಿಲ್ಲವು; ಆದುದರಿಂದ ಇವುಗಳಿಗೆ ಸಾಮಾನಾಧಿಕರಣ್ಯವಿಲ್ಲವು (೨) **ನೀಲೋಘಟಃ** ಎಂಬಲ್ಲಿ ನೀಲ

ಶಬ್ದವೂ ಘಟಶಬ್ದವೂ ಭಿನ್ನಾರ್ಥಗಳುಳ ವುಗಳಾಗಿ ಒಂದರಲ್ಲೇ ಅನ್ವಯವಿರುವದ ರಿಂದ ಈ ಶಬ್ದಗಳಿಗೆ ಮಾತ್ರ ಸಾಮಾನಾಧಿಕರಣ್ಯ ಉಂಟು. ಆದುದರಿಂದ ವಿಶೇ ಷಣ ವಿಶೇಷ್ಯಗಳಿಗೆ ಸಾಮಾನಾಧಿಕರಣ್ಯ ವುಂಟು. ಏಕೆಂದರೆ ಅಪೃಥಕ್ಸಿದ್ಧ ವಿಶೇಷಣ ವಿಶೇಷ್ಯ ಶಬ್ದಗಳು ಬೋಧಿಸುವ ಅರ್ಥಗಳು ಬೇರೆ ಬೇರೆಯಾದವು. ಆದರೆ ಅವುಗಳೆರಡೂ ಒಂದರಲ್ಲೇ ಇರುವದರಿಂದ ಸಾಮಾನಾಧಿಕರಣ್ಯವು ಕೂಡುತ್ತದೆ. ಆದುದರಿಂದ ಭಗವಚ್ಛಬ್ದಕ್ಕೂ, ವಾಸುದೇವ ಶಬ್ದಕ್ಕೂ ಬೇರೆ ಬೇರೆ ಅರ್ಥಗಳುಂಟು. ಆದರೆ ಅನ್ವಯವು ಪರಮ ಪುರುಷನೊಬ್ಬನಲ್ಲೇ ವಾದುದರಿಂದ ಸಾಮಾನಾಧಿಕರಣ್ಯ ಸಿದ್ಧಿಯುಂಟೆಂಬ ಭಾವವು. ಹಾಗಾದರೆ ಭಗವಚ್ಛಬ್ದಕ್ಕೆ ಅರ್ಥವೇನು ? ವಾಸುದೇವ ಶಬ್ದಕ್ಕೆ ಅರ್ಥವೇನು ? ಎರಡೂ ಹೇಗೆ ಭಿನ್ನಾರ್ಥವುಳ್ಳವು ? ಎಂದರೆ—ಭಗವಚ್ಛಬ್ದಕ್ಕೆ ಹೇಯಪ್ರತ್ಯನೀಯಕನೆಂದೂ ಷಾಡ್ಗುಣ್ಯ ಪರಿಪೂರ್ಣನೆಂದೂ ಅರ್ಥವು. ಇದಕ್ಕೆ ಪ್ರಮಾಣವು "ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯತೇಜಾಂಸ್ಯ ಶೇಷತಃ । ಭಗವಚ್ಛಬ್ದ ವಾಚ್ಯಾನಿ ವಿನಾ ಹೇಯೈ ರ್ಗುಣಾದಿಭಿಃ" (ವಿ. ಪು.೬-೫.೭೯) ಹಾಗೆಯೇ ವಾಸುದೇವ ಶಬ್ದಕ್ಕೆ ಅರ್ಥವೇ ನೆಂದರೆ ಪರಮಾತ್ಮನು ಎಲ್ಲಾದರಲ್ಲೂ, ಇವೆಲ್ಲವೂ ತನ್ನಲ್ಲೂ, ಇರಿಸಿಕೊಂಡಿರುವ ವನೆಂಬರ್ಥವು. ಇದಕ್ಕೆ ಪ್ರಮಾಣವು. "ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇ ತಿ ವೈ ಯತಃ । ತತ ಸ್ಸವಾಸುದೇವೇ ತಿ ವಿದ್ವದ್ಭಿಃ ಪರಿಪಠ್ಯತೇ" (ವಿ. ಪು) ಹೀಗೆ ಇವೆರಡು ಭಿನ್ನಾರ್ಥಗಳೂ ಒಬ್ಬನಾದ ಪರಮಾತ್ಮನಲ್ಲಿ ಇರುವದರಿಂದ ಇವೆ ರಡು ಶಬ್ದಗಳಿಗೂ ಸಾಮಾನಾಧಿಕರಣ್ಯವು ಕೂಡುತ್ತದೆ. ಎರಡು ಶಬ್ದಗಳನ್ನು ಸಾಮಾನಾಧಿಕರಣ್ಯದಿಂದ ಒಂದೇ ವಸ್ತುವಿನಲ್ಲಿ ಅನ್ವಯಿಸುವಾಗ ಒಂದನ್ನು ಯೋಗರೂಪವಾಗಿಯೂ ಇನ್ನೊಂದನ್ನು ರೂಢಿ ರೂಪವಾಗಿಯೂ ಅನ್ವಯಿಸಬಹು ದೆಂಬ ಭಾವವು. ಆದುದರಿಂದ ಭಗವಂತನಾದ ವಾಸುದೇವನೆಂದಾಗಲಿ, ವಾಸುದೇವ ನಾದ ಭಗವಂತನೆಂದಾಗಲಿ ಅರ್ಥಮಾಡುವದರಿಂದ ಪುನರುಕ್ತಿ ದೋಷವಿಲ್ಲವೆಂಬ ತಾತ್ಪರ್ಯವು. ಹಾಗೆಯೇ ಅಕಾರವಾಚ್ಯಾಯ ನಾರಾಯಣಾಯ ಎಂದಾಗಲಿ, ನಾರಾಯಣ ವಾಚ್ಯಾಯ ಅಕಾರಾಯ ಎಂದಾಗಲಿ ಸಮಾನಾಧಿಕರಣೋಕ್ತಿಯು ಸಾಧ್ಯವು. ಪುನರುಕ್ತಿಯು ಇರುವದಿಲ್ಲವು. "ಯದ್ವೇದಾದೌಸ್ವರಃಪ್ರೋಕ್ತೋ" ಎಂದಾರಂಭಿಸಿ ಪ್ರಣವದಲ್ಲಿನ ಅಕಾರ ಮಾಹಾತ್ಮ್ಯೆಯನ್ನು ಹೇಳುವಾಗ ಶ್ರುತಿಯು, "ಯಃ ಪರ ಸ್ಸ ಮಹೇಶ್ವರಃ" ಎಂದು ಸಾಮಾನಾಧಿಕರಣ್ಯದಿಂದ ಹೇಳಿದಾಗ ಪರ ತತ್ವವಿಷಯದಲ್ಲಿ ವಿಷ್ಣುವೋ, ಶಂಕರನೋ ಎಂಬ ಶಜ್ಕಾವಿಗೆ ಸ್ವಲ್ಪ ಆಸ್ಪದ ವಿರುವ ಹಾಗೆ ತೋರಬಹುದು; ಆದರೆ ಈ ಮೂಲ ಮಂತ್ರದ ಸಾಮಾನಾಧಿಕರಣ್ಯ ದಿಂದ ನಾರಾಯಣನೇ ಪರತತ್ವವೆಂಬ ನಿರ್ಣಯವು ನಿಸ್ಸಂಶಯವು ಎಂಬುದೂ ತೋರಿಬರುತ್ತದೆ.

**ಅಥ ಅನೇನ ವಾಕ್ಯದ್ವಯಾನುಸಂಧಾನೇನ ಪ್ರಾಪ್ತಪ್ರಯೋಜನಾನ್ಯಾಹ.**

---

**ಸರ್ವಬೀಜಾಕ್ಷರವಾಚ್ಯಮಾನ ಸರ್ವಕಾರಣಮ್ ದೇವತಾನ್ತರನೋ ವೆನ್ರು ಶಙ್ಕಿಯಾದಪಡಿ ನಾರಾಯಣನೆನ್ರು, ವಿಶೇಷಿಕ್ಕೈ (ಯುಮ್) ಯಾಲುಮ್ ಸ ಪ್ರಯೋಜನಮ್.**

---

**ಅನಂತರ ಇದು ಎರಡು ವಾಕ್ಯವೆಂಬ ಅನುಸಂಧಾನದಿಂದುಂಟಾಗುವ ಪ್ರಯೋಜನಗಳನ್ನು ಹೇಳುತ್ತಾರೆ.**

---

ಈ ಮೇಲಿನ ಅಭಿಪ್ರಾಯವನ್ನೇ ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ.—(೧) ನಾರಾಯಣಾಯ **ಆಯ** ಎಂದು ನಾರಾಯಣ ಶಬ್ದವನ್ನು ವಿಶೇಷಣವನ್ನಾಗಿಯೂ, ಆಯ ಎಂಬುದನ್ನು ವಿಶೇಷ್ಯವಾಗಿಯೂ, ಭಾವಿಸುವದರಿಂದ ಇನ್ನೊಂದು ಮಹತ್ಪ್ರಯೋಜನ ಉಂಟು, ಅದು ಯಾವುದೆಂದರೆ ಪರತತ್ವ ನಿರ್ಣಯದಲ್ಲಿ ಭಿನ್ನಾಭಿಪ್ರಾಯಗಳಿರುವದು ಸರಿಯಲ್ಲವಾಗಿ, ನಿಸ್ಸಂಶಯವಾಗಿ ಪರತತ್ವವು ನಾರಾಯಣನೇ ಎಂದು ಈ ಯೋಜನೆಯು ಬೋಧಿಸುತ್ತದೆಂದು ಹೇಳುತ್ತಾರೆ— **ಸರ್ವಬೀಜಾಕ್ಷರವಾಚ್ಯಮಾನ**-ಸಮಸ್ತ ಅಕ್ಷರಗಳಿಗೂ ಮೂಲಭೂತವಾಗಿರುವ ಅಕಾರವಾಚ್ಯನಾದ, **ಸರ್ವಕಾರಣಮ್** – ಸಮಸ್ತಕ್ಕೂ ಸರ್ವವಿಧ ಕಾರಣನಾದ ಪರಬ್ರಹ್ಮವು, **ದೇವತಾನ್ತರನೋ ವೆನ್ರು ಶಙ್ಕಿಯಾದಪಡಿ**– ಬ್ರಹ್ಮರುದ್ರಾದಿ ಬೇರೆ ದೇವತೆಯೋ ಎಂಬ ಶಙ್ಕಾವಿಗೆ ಮಾರ್ಗವಿಲ್ಲದಹಾಗೆ, **ನಾರಾಯಣನೆನ್ರು ವಿಶೇಷಿಕ್ಕೈಯಾಲುಮ್** - ಅನ್ಯ ದೇವತೆಯಲ್ಲವು, ನಾರಾಯಣನೇ ಪರತತ್ವವೆಂದು ವಿಶೇಷಿಸಿ ಹೇಳಿರುವದರಿಂದ, **ಸಪ್ರಯೋಜನಮ್** – ಮುಖ್ಯವಾದ ಪ್ರಯೋಜನವೂ ಉಂಟು. **"ಸಮಸ್ತಶಬ್ದಮೂಲತ್ವಾದ ಕಾರಸ್ಯ ಸ್ವಭಾವತಃ । ಸಮಸ್ತವಾಚ್ಯಮೂಲತ್ವಾದ್ಬ್ರಹ್ಮಣೋಪಿ ಸ್ವಭಾವತಃ । ವಾಚ್ಯವಾಚಕ ಸಂಬಂಧ ಸ್ತಯೋರರ್ಥಾತ್ಪ್ರತೀಯತೇ"** ಎಂಬ ಪ್ರಮಾಣವು ಅಕಾರಕ್ಕೆ ಸರ್ವಕಾರಣತ್ವವನ್ನು ಬೋಧಿಸುತ್ತದೆ. ಹಾಗೆಯೇ ಪ್ರಣವದ ಅಕಾರದಿಂದ ಪರಮಾತ್ಮನ ವಿಷಯದಲ್ಲಿ ನಾಲ್ಕು ಮುಖ್ಯಭಾವಗಳು ಹೇಳಲ್ಪಡುತ್ತವೆಂದು ಹಿಂದೆಯೇ **"ಏವಮಕ್ಷರರೂಪೇಣ ಕಾರಣತ್ವ ಮಿಹೋದಿತಮ್ । ರಕ್ಷಕತ್ವಂಚ ಧಾತ್ವರ್ಥಾತ್ ಶೇಷಿತ್ವಂ ಪದರೂಪತಃ । ಶ್ರೀಶತ್ವಂ ವಾಚ್ಯಗತ್ಯಾಚ ಯುಜ್ಯತೇ ಪರಮಾತ್ಮನಃ ॥"** ಎಂಬ ಪ್ರಮಾಣದಲ್ಲಿ ಕೇಳಲ್ಪಟ್ಟಿತು. ಆಗಲಿ ನೀವು ಹೀಗೆ ಪರತತ್ವ ನಿರ್ಣಯವನ್ನು ಮಾಡುವದನ್ನೇನೋ ಅಂಗೀಕರಿಸೋಣ. ಆದರೆ ಮೂಲಮಂತ್ರದಲ್ಲಿ ಆಯ ನಾರಾಯಣಾಯ ಎಂದು ಮೊದಲು ಆಯ ಶಬ್ದವು, ನಾರಾಯಣಾಯ ಎಂಬ ಶಬ್ದವೂ ಅನಂತರವೂ ಇರುವಾಗ ನಾರಾಯಣಾಯ ಆಯ ಎಂದು ಹೇಗೆ ಅನ್ವಯಿಸಿದಿರಿ ಎಂದು ಪೂರ್ವ

**ಮನ್ತ್ರಙ್ಗಳುಕ್ಕು ಪದಕ್ರಮಮ್ ಅಧ್ಯಯನ ನಿಯತಮ್. ಅನ್ವಯಮ್ ಅರ್ಥಾನುಗುಣಮಾಗಕ್ಕಡವದು.**

೧. ವಾಕ್ಯದ್ವಯೇನ ಸ್ವರೂಪಪರಯೋಜನಾಮಾಹ.

---

**ಇಪ್ಪಡಿ ವಾಕ್ಯದ್ವಯಮಾನಾಲ್ ತಿರುಮನ್ತ್ರಮ್ ಮುಳಕ್ಕ ಸ್ವರೂಪ**

---

ಪಕ್ಷವನ್ನು ತರಬಹುದು. ಅದಕ್ಕೆ ಮುಂದಿನ ವಾಕ್ಯಗಳಿಂದ ಸಮಾಧಾನವನ್ನು ಹೇಳುತ್ತಾರೆ- ಮಂತ್ರ ಪಠನದಲ್ಲಿ ಮಾತ್ರ ಯಥಾಕ್ರಮವಾಗಿಯೇ ಹೇಳತಕ್ಕದ್ದು. ಓಂ, ನಮೋ, ನಾರಾಯಣಾಯ ಎಂದು ಮಂತ್ರ ಪಠನ ಮಾಡತಕ್ಕದ್ದೇವಿನಾ, ಓಂ ನಾರಾಯಣಾಯ ನಮಃ ಎಂದಾಗಲಿ, ನಾರಾಯಣಾಯ ನಮ ಓಂ ಎಂಬ ಇತ್ಯಾದಿ ಕ್ರಮದಲ್ಲಾಗಲಿ ಹೇಳಕೂಡದು. ಆದರೆ ಮಂತ್ರಕ್ಕೆ ಅರ್ಥ ಸ್ವಾರಸ್ಯವನ್ನು ಹೇಳುವ ಸಂದರ್ಭದಲ್ಲಿ ಅಭಿಪ್ರಾಯಾನುಗುಣವಾಗಿ ಪದಕ್ರಮ ವ್ಯತ್ಯಸ್ತದಿಂದ ಅನ್ವಯಿಸಬಹುದೆಂದು ಹೇಳುತ್ತಾರೆ.—**ಮನ್ತ್ರಙ್ಗಳುಕ್ಕು** - ಮಂತ್ರಗಳಿಗೆ, ಇದರಿಂದ ವೇದಮಂತ್ರಗಳೂಸಹ ಬೋಧಿತವು. **ಪದಕ್ರಮಮ್** - ಪದಗಳಿರುವ ಕ್ರಮವು, **ಅಧ್ಯಯನ ನಿಯತಮ್** - ಉಚ್ಚರಿಸುವದರಲ್ಲಿ ನಿಯತವಾದುದು, ಅದನ್ನು ಬದಲಾಯಿಸುವದು ಸರಿಯಲ್ಲವು. ಹಾಗೆಯೇ ನಾರಾಯಣ ಸೂಕ್ತದಲ್ಲಿ "ಓಮಿತ್ಯಗ್ರೇ ವ್ಯಾಹರೇತ್, ನಮ ಇತಿ ಪಶ್ಚಾತ್ ನಾರಾಯಣಾಯ ಇತಿ ಮನ್ತ್ರೋಪಾಸಕಃ" ಎಂದು ಈ ಮಂತ್ರದ ವಿಷಯದಲ್ಲೇ ವಿಧಿಸಿರುತ್ತದೆ, ಹೀಗೆ ಪದಕ್ರಮವು ಅಧ್ಯಯನ ವಿಷಯದಲ್ಲಿ ನಿಯತವು. ಆದರೆ **ಅರ್ಥಾನುಗುಣಮಾಗ** - ಮಂತ್ರಾರ್ಥದ ಸ್ವಾರಸ್ಯವನ್ನು ಹೇಳುವದಕ್ಕನುಗುಣವಾಗಿ, **ಅನ್ವಯಮ್ ಕಡವದು** ಅನ್ವಯವು ಇರುತ್ತದೆ. ಆದುದರಿಂದ **ನಾರಾಯಣಾಯ ಅಯ**— ಎಂದು ಅನ್ವಯಿಸಿ ಅರ್ಥಸ್ವಾರಸ್ಯವನ್ನು ಹೇಳುವದರಲ್ಲೇನೂ ಬಾಧಕವಿಲ್ಲವೆಂಬ ತಾತ್ಪರ್ಯವು.

೧. ಎರಡು ವಾಕ್ಯವುಳ್ಳದು ಎಂಬ ಭಾವನೆಯಿಂದ ಸ್ವರೂಪಪರವಾದ ಯೋಜನೆಯು.

---

**ಇಪ್ಪಡಿ ವಾಕ್ಯದ್ವಯಮಾನಾಲ್** - ಮೇಲೆ ಉಪಪಾದಿಸಿದ ರೀತಿಯಲ್ಲಿ ಮೂಲ ಮಂತ್ರವನ್ನು, **ನಾರಾಯಣಾಯ ಅಯ** ಮತ್ತು **ನಮಃ** ಎಂದು ಎರಡುವಾಕ್ಯವಾಗಿ ಭಾವಿಸಿದರೆ, **ತಿರುಮನ್ತ್ರಮ್** - ಈ ಮೂಲಮಂತ್ರವು, **ಮುಳಕ್ಕ** - ಸಂಪೂರ್ಣವಾಗಿ, **ಸ್ವರೂಪಪರಮ್** - ಆತನ ಶೇಷಿತ್ವ ಮತ್ತು ತನ್ನ ನಿರುಪಾಧಿಕ ಶೇಷತ್ವರೂಪಸ್ವರೂಪವನ್ನು ಪ್ರದರ್ಶಿಸುವಂಥಾದ್ದು. **ನಾರಾಯಣಾಯ ಆಯ**-ಎಂಬುದರಿಂದಲೂ ಶೇಷಿ ಶೇಷತ್ವವು ಬೋಧಿಸಲ್ಪಟ್ಟಿತು. **ಮಃ ನಃ** ಎಂಬುದರಿಂದ **ತನ್ನದಾಗಿ ಯಾವುದೂ** ಇಲ್ಲವು ಎಂಬುದರಿಂದ ಪರಶೇಷತ್ವವು

**ಪರಮ್. ಇನ್ದ ಸ್ವರೂಪ ಪರಯೋಜನ್ನೈಯ್ಯೈ ಪ್ಪತ್ತ ತಿರುಮನ್ತ್ರತ್ತಿಲೇ ಪಿರನ್ದು, ದ್ವಯತ್ತಿಲೇ ವಳರ್ನ್ದು ದ್ವಯೈಕ ನಿಷ್ಠನಾವಾ ಎನ್ರು ಪೂರ್ವರ್ ಗಳ್ ಅರುಳಿಚ್ಚೆಯ್ದಾರ್ಗಳ್. ಪಿರಕ್ಕೈಯಾವುದು ? ಸ್ವರೂಪಜ್ಞಾನಂ ಪಿರಕ್ಕೈಯಾಲೇ (೧) "ಅನ್ರುನಾನ್ ಪಿರನ್ದಿಲೇನ್, ಪಿರನ್ದಪಿನ್ ಮರನ್ದಿಲೇನ್" ಎಙ್ಗಿರ ಮುನ್ಬುತ್ತ ನಿಲ್ಲೈ ಕಳಿಗೈ.**

---

ಸ್ಥಾಪಿತವು. ಆದುದರಿಂದ ಈ ಮಂತ್ರವು **ಮುಳಕ್ಕ ಸ್ವರೂಪಪರ** ವೆಂದು ಹೇಳಿದರು. ಹೀಗೆ ಪೂರ್ವಾಚಾರ್ಯರುಗಳು ಹೇಳಿದ್ದಾರೆ ಎಂದು ತಿಳಿಸುವದರ ಮೂಲಕ, ಯುಕ್ತಿ ಮೂಲಕ ಹೇಳುವ ಅಥವಾ ಶಾಸ್ತ್ರ ಸಮ್ಮತವಾದ ವ್ಯುತ್ಪತ್ತಿಯಮೂಲಕ ಹೇಳುವ ಅಭಿಪ್ರಾಯವು ಮಾತ್ರವೇ ಅಲ್ಲವು. ಸತ್ಸಂಪ್ರದಾಯಾರ್ಥವೂ ಹೌದು ಎಂದುತಿಳಿಸುತ್ತಾರೆ. ಶ್ರೀ ಪರಾಶರಭಟ್ಟರವರು ಯದ್ಯಪಿ ಅಷ್ಟಶ್ಲೋಕಿಯಲ್ಲಿ ನಾಲ್ಕು ಶ್ಲೋಕಗಳಿಂದ ಮೂಲಮಂತ್ರಾರ್ಥವನ್ನು ವಿಶದೀಕರಿಸಿದ್ದರೂ ಸಂಪೂರ್ಣವಾಗಿ ಶೇಷತ್ವ ಪರವೆಂದು ಹೇಳದಿದ್ದರೂ, ಅವರಿಗೂ ಪೂರ್ವಾಚಾರ್ಯರುಗಳು ಹೇಳಿ, ದುದನ್ನು ತಿಳಿಸುತ್ತಾರೆ ಏನೆಂದರೆ ? **ಇನ್ದ ಸ್ವರೂಪ ಯೋಜನ್ನೈ ಯಪ್ಪತ್ತ** - ಹೀಗೆ ಎರಡು ವಾಕ್ಯವೆಂದು ವಿಭಾಗಿಸಿ ಎರಡೂ ಸಂಪೂರ್ಣವಾಗಿ ಸ್ವರೂಪ ಪರವಾದ ಯೋಜನೆಯನ್ನು ಕುರಿತು, **ತಿರುಮನ್ತ್ರತ್ತಿಲೇ ಪಿರನ್ದು** - ಪರಮಾತ್ಮನಿಗೆ ಜೀವಾತ್ಮನು ನಿರೂಪಾಧಿಕ ಶೇಷಭೂತನೆಂಬ ಅನುಸಂಧಾನವು ಹೀಗೆ ಈ ಮೂಲ ಮಂತ್ರದಲ್ಲಿ ಜನಿಸಿ, **ದ್ವಯತ್ತಿಲೇ ವಳರ್ನ್ದು** - ದ್ವಯ ಮಂತ್ರದಲ್ಲಿ ಚೆನ್ನಾಗಿ ಬೆಳೆದು, ಎಂದರೆ ಅಭಿವೃದ್ಧಿಯನ್ನು ಹೊಂದುವದರ ಮೂಲಕ. **ದ್ವಯೈಕನಿಷ್ಠನಾವಾ ಎನ್ರು** - ದ್ವಯ ಮನ್ತ್ರೋಚ್ಚಾರಣೆಯಿಂದ ಶರಣಾಗತಿಯನ್ನನುಷ್ಠಿಸಿ ತದನಂತರ ಅದನ್ನು ಜಪಿಸುತ್ತಾ ಇರುವನೆಂದು, **ಪೂರ್ವರ್ಗಳ್** - ಹಿಂದಿನ ಆಚಾರ್ಯರುಗಳು **ಅರುಳಿಚ್ಚೆಯ್ದಾರ್ಗಳ್** - ಕೃಪಯಾ ಅಪ್ಪಣೆ ಕೊಡಿಸಿರುತ್ತಾರೆ. ಸ್ವರೂಪ ಪರಾನುಸಂಧಾನವು ಮೂಲಮಂತ್ರದಲ್ಲಿ ಹುಟ್ಟಿ, ದ್ವಯದಲ್ಲಿ ಬೆಳೆದು, ಎಂದು ಹೇಳಲ್ಪಟ್ಟಿತಲ್ಲಾ, ಹಾಗೆಂದರೇನು ಎಂದು ಕೇಳಬಹುದಾಗಿ ಅದರ ಅಭಿಪ್ರಾಯವನ್ನು ತಿಳಿಸುತ್ತಾರೆ. **ಪಿರಕ್ಕೈಯಾವುದು ?** ತಾನು ಶೇಷಭೂತನೆಂಬ ಜ್ಞಾನವು ಹುಟ್ಟುವುದು ಎಂದರೇನು? **ಸ್ವರೂಪಜ್ಞಾನಮ್** - ಸ್ವರೂಪ ಜ್ಞಾನವು, ತಾನು ಪರಮಾತ್ಮನಿಗೆ ನಿರುಪಾಧಿಕ ಶೇಷಭೂತನೆಂಬ ಭಾವವು **ಪಿರುಕ್ಕೈಯಾಲೇ** - ಉಂಟಾಗುವದರಿಂದ, **"ಅನ್ರುನಾನ್ ಪಿರನ್ದಿಲೇ** - ಇಂತಹ ಜ್ಞಾನ ಉಂಟಾಗುವವಕ್ಕಿಂತ ಮುಂದೆ ನಾನು ಹುಟ್ಟಿದವನೇ ಅಲ್ಲವು, **ಎಙ್ಗಿರ**- ಎಂದು ಹೇಳಿರುವ, **ಮುನ್ಬುತ್ತನಿಲ್ಲೈ** - ಮೊದಲಿದ್ದ ದೇಹಾತ್ಮ ಭ್ರಮೆ ಸ್ವತಂತ್ರಾತ್ಮಭ್ರಮೆಯುಳ್ಳ ಅವಸ್ಥೆಯು, **ಕಳಿಗೈ** - ತೊಲಗಿ ಹೋಗೋಣವು, ತಾನು ಪರ

---

(೧) ತಿರುಚ್ಛಂದವಿರುತ್ತಮ್. ೬೪.

ಮಾತ್ಮನಿಗೆ ಶೇಷಭೂತನೆಂಬ ಜ್ಞಾನ ಉಂಟಾಗುವದಕ್ಕೆ ಮೊದಲು ತಾನು ಸ್ವತಂ ತ್ರನು ಎಂಬ ಭ್ರಮಜ್ಞಾನ ಉಳ್ಳ ಅವಸ್ಥೆಯನ್ನು ಹೊಂದಿರುವ ೯ಾಳು ಬಾಳಲ್ಲವು ತನ್ನ ಸ್ವರೂಪಜ್ಞಾನ ಉಂಟಾದನಂತರ ಬಾಳೇ ಬಾಳು ಎಂಬುದು ಅಭಿಪ್ರಾಯವು.

ಆ ಪೂರಾ ಪಾಶುರವು ಯಾವುವೆಂದರೆ—

**ನಿನ್ರದೆನ್ದೈಯೂರಗತ್ತಿರುನ್ದದೆನ್ದೈ ಪಾಡಗತ್ತು ।**
**ಅನ್ರು ವೆಂಕೆಣೈಕಿಡನ್ದ ದೆನ್ನಿಲಾದ ಮುನ್ನೆಲಾಮ್ ।**
**ಅನ್ರು ನಾನ್ ಪಿರನ್ದಿಲೇನ್, ಪಿರನ್ದಪಿನ್ ಮರನ್ದಿಲೇನ್ .**
**ನಿನ್ರದು ಮಿರುನ್ದದು ಕ್ಕಿಡುನ್ದದು ಮೆನ್ನೆಞ್ಜುಳೇ ||೬೪||**

**ಇದರರ್ಥವು**—**ಎನ್ದೈ** – ನನಗೆ ಶೇಷಿಯಾಗಿ ಸ್ವಾಮಿಯಾದವನು. **ಊರ ಗತ್ತು** - ತಿರುಪ್ಪಾದಗವೆಂಬೂರಲ್ಲಿ, **ನಿನ್ರದು** - ನಿಂತು ಸೇವೆಯನ್ನು ಕೊಡುವದೂ. **ಎನ್ದೈ** - ನನಗೆ ಶೇಷಿಯಾಗಿ ಸ್ವಾಮಿಯಾದವನು, **ಪಾಡಗತ್ತು** - ತಿರುಪ್ಪಾಡಗ ವೆಂಬ ಊರಲ್ಲಿ, **ಇರುನ್ದದು** - ಕೂತು ಸೇವೆಯನ್ನು ಕೊಡುವದೂ, **ಅನ್ರು** – ಮೇಲೆಹೇಳಿದ ಎರಡು ದಿವ್ಯ ದೇಶಗಳಲ್ಲೂ ನನಗೆ ರುಚಿಯುಂಟಾಗದೇ ಇರುವ ಕಾಲದಲ್ಲಿ, **ವೇಙ್ಕಣೈ** - ತಿರುವೆಂಕಾ ಎಂಬ ಊರಲ್ಲಿ, **ಕಿಡನ್ದು** - ಪವಳಿಸಿ, **ಎನ್ನಿ ಲಾದ** – ನಿನಗೆ ಶೇಷಭೂತನಾದ ನಾನು ಸರ್ವಶೇಷಿಯಾದ ನಿನಗೆ ಅಭಿಮುಖನಾ ಗದೇ ಇರುವ, **ಮುನ್ನೆಲಾಮ್** – ಮುಂದಿನ ಕಾಲದಲ್ಲೆಲ್ಲಾ, **ಅನ್ರು** – ಆವಾಗ, **ನಾನ್** - ನಿನಗೆ ನಿರುಪಾಧಿಕ ದಾಸಭೂತನಾದ ನಾನು, **ಪಿರನ್ದಿಲೇನ್** - ಶೇಷ ಭೂತನೆಂಬ ಸ್ವರೂಪಜ್ಞಾನವಿಲ್ಲದುದರಿಂದ ಅಸತ್ಕಲ್ಪನಾಗಿದ್ದೆನು, ಜನ್ಮವೆತ್ತಿ ದ್ದರೂ ಸ್ವರೂಪಜ್ಞಾನವಿಲ್ಲದುದರಿಂದ ನಾನು ವಸ್ತುವೇ ಅಲ್ಲವು ಎಂಬಹಾಗೆ ಜನ್ಮ ವ್ಯರ್ಥವಾದ ಸ್ಥಿತಿಯಲ್ಲಿದ್ದೆನು ; **ಪಿರನ್ದಪಿನ್** - ಓ ಸ್ವಾಮಿಯೇ ನಿನ್ನ ಕೃಪಾ ಪ್ರಭಾವದಿಂದ ಈ ಶೇಷಭೂತನೆಂಬ ಸ್ವರೂಪ ಜ್ಞಾನವು ಲಭಿಸಿದನಂತರ, **ಮರ ನ್ದಿಲೇನ್** - ನನಗೆ ವಿಸ್ಮೃತಿಯಿಲ್ಲವು, ನಾನು ಸ್ವತಂತ್ರನು ಎಂಬ ಭ್ರಮ ಜ್ಞಾನವು ಉಂಟಾಗುವದಿಲ್ಲವೆಂಬ ಭಾವವು. ಹಾಗೆ ಎಂದಿಗೂ ಆ ಜ್ಞಾನ ಲಾಭ ವನ್ನು ಮರೆಯುವದಿಲ್ಲವೆಂದು ಹೇಳಿದುದು ಹೇಗೆ ಎನ್ನುತ್ತೀಯೋ, **“ದದಾಮಿ ಬುದ್ಧಿ ಯೋಗಂತಂ”** ಎಂದು ನೀನೇ ಕೃಪೆಗೈದು ದಯಪಾಲಿಸಿದ ಸುಜ್ಞಾನ ವನ್ನು ಮರೆಯುವದೂ, ಭ್ರಮಜ್ಞಾನವು ಪುನಃ ಆವರಿಸುವದು, ಸಾಧ್ಯವೋ ಎಂದಿಗೂ ಇಲ್ಲವೆಂದು ಹೇಳುತ್ತಾರೆ. **ಎನ್ದೈ** - ನನಗೆ ಸ್ವಾಮಿಯಾಗಿ, **ನಿನ್ರದು**- ತಿರುವೂರಗದಲ್ಲಿ ನಿಂತು ಸೇವೆಯನ್ನಿತ್ತದ್ದೂ, **ಇರುನ್ದದುಮ್** – ತಿರುಪಾಡಗದಲ್ಲಿ ಕುಳಿತು ಸೇವೆಯನ್ನಿತ್ತದ್ದೂ, **ಕಿಡನ್ದದುಮ್** - ತಿರುವೇಂಗಣೈಯಲ್ಲಿ ಪವಳಿಸಿ ಸೇವೆಯನ್ನಿತ್ತದ್ದೂ, **ಎನ್ನೆಞ್ಜುಳೇ** – ನನ್ನ ಹೃದಯದಲ್ಲಿ ಚನ್ನಾಗಿ ಸ್ಥಾಪಿತವಾ ಗಿರುವಾಗ ನಿನಗೂ ನನಗೂ ಇರುವ ಶೇಷಿ ಶೇಷಭಾವ ಸಂಬಂಧವನ್ನು ಎಂದಿಗಾ ದರೂ ಮರೆಯಲು ಸಾಧ್ಯವೇ ಎಂದು ದಿವ್ಯ ಸೂರಿಗಳಾದ ತಿರುಮಳಿಶೈಯಾಳ್ವಾ

**ಅದಾವದು ? ತನ್ನಿಶ್ಶೈವಾಲುಮ್ ಅನನ್ಯಶೇಷನಾಯ್, ಅನನ್ಯಾಧೀನನಾಯ್, ಅದಡಿಯಾಗ ಅನನ್ಯಪ್ರಯೋಜನನಾಯ್, ಅನನ್ಯಶರಣನಾಗೈ.**

**ವಳರುಗೈಯಾವದು ? ಅಧಿಕಾರವಿಶೇಷಾನುರೂಪ ಕರ್ತವ್ಯ ವಿಶೇಷ ವಿಷಯಜ್ಞಾನ ವಿಶೇಷತ್ತಾಲೇ ಉಪಾಯಪರಿಗ್ರಹಂ ಪಣ್ಣಗೈ.**

---

ರ್ರವರು ಹೇಳುತ್ತಾರೆ. ಈ ಸಂದರ್ಭದಲ್ಲಿ "**ಸ್ವೋಜ್ಜೀವನೇಚ್ಛಾ ಯದಿ ತೇ ಸ್ವಸತ್ತಾಯಾಂ ಸ್ಪೃಹಾ ಯದಿ । ಆತ್ಮದಾಸ್ಯಂ ಹರೇಸ್ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ" ॥ ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಮ್"** ಇತ್ಯಾದಿ ಪ್ರಮಾಣಗಳು ಇಲ್ಲಿ ಅನುಸಂಧೇಯಗಳು.( ಪುಟವನ್ನು ನೋಡಿ)

ಆತ್ಮನು ಸ್ವಯಂಪ್ರಕಾಶವಾದ ಧರ್ಮಭೂತಜ್ಞಾನದಿಂದ ಕಂಗೊಳಿಸುವ ಜ್ಞಾನೈಕಸ್ವರೂಪನು. ಅಂತವನಿಗೆ ಮೊದಲು ಭ್ರಮಜ್ಞಾನದಿಂದ ಅಸತ್ಕಲ್ಪವಾದ ಸ್ವರೂಪನಾಶವೂ, ಜ್ಞಾನಲಾಭದಿಂದ ಸ್ವರೂಪ ಪ್ರಾಪ್ತಿಯೂ ಎಂದರೇನು? ಆತ್ಮನಿಗೆ ಸ್ವರೂಪನಾಶವಿಲ್ಲವಲ್ಲಾ ? ಎಂದರೆ ತನ್ನ ಸ್ವರೂಪದ ಜ್ಞಾನವು ತಿರೋಹಿತವಾಗಿತ್ತು ; ಈಗ ವಿಕಸಿತವಾಯಿತು ; ಎಂಬ ಅಭಿಪ್ರಾಯವೆಂದು, **ಸ್ವರೂಪ ಪಿರುಕ್ಕೈ** ಎಂಬ ಶಬ್ದಕ್ಕೆ ಸಮಂಜಸಾರ್ಥವನ್ನು ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ತಾನು ಸ್ವತಂತ್ರನೆಂಬ ಮುನ್ಪುತ್ತನಿಲೈ ಕಳಿಗೈ ಎಂದು ಹೇಳಲ್ಪಟ್ಟತಲ್ಲಾ ಅದಾವದು - ಮೊದಲಿದ್ದ ಭ್ರಮಜ್ಞಾನವು ಕಳಿಯಿತು ಹಾಗೆಂದರೇನು? **ತನ್ನಿಶ್ಶೈವಾಲುಮ್**-ಇತರರ ಬಲಾತ್ಕಾರವಿಲ್ಲದೆ ಸಂಪೂರ್ಣ ಸ್ವೇಚ್ಛೆಯ ಮೂಲಕವಾಗಿಯೇ ತಾನು, **ಅನನ್ಯ ಶೇಷನಾಯ್** - ತಾನು ಅನ್ಯದೇವತೆಗಳಿಗಲ್ಲದೆ ಭಗವಂತನಿಗೇನೇ ಶೇಷಭೂತನು, ಇತರರಿಗಲ್ಲದೆ ಪರಮಾತ್ಮನಿಗೆ ಅಧೀನನು, **ಅದಡಿಯಾಗ** - ತನ್ಮೂಲಕವಾಗಿ, **ಅನನ್ಯ ಪ್ರಯೋಜನನಾಯ್** - ಆತನಿಗೇನೇ ಪ್ರಯೋಜನವು ಇತರರಿಗೆ ತಾನು ಪ್ರಯೋಜನನಲ್ಲವು, ಆದುದರಿಂದ **ಅನನ್ಯ**-ತನಗೆ ಭಗವಂತನಲ್ಲದೆ ಇನ್ನು ಯಾರೂ ರಕ್ಷಕರಾಗಲಾರರು, ಆದುದರಿಂದ ಆತನೇ **ಶರಣನಾಗೈ**—ತನಗೆ ರಕ್ಷಕನೆಂಬ ಜ್ಞಾನ ಉಂಟಾಗುವಿಕೆ ಎಂಬ ತಾತ್ಪರ್ಯವು ಹೀಗೆ ಹಿಂದೆ "**ಮನುನಾ ಮೂಲೇನ ಲಬ್ಧಾತ್ಮಕಃ** ಎಂದು ಹೇಳಿರುವ ಹಾಗೆ ತನ್ನ ನೈಜ ಸ್ವರೂಪ ಜ್ಞಾನವನ್ನು ಹೊಂದೋಣವು.

ಹಿಂದಿನ ಪೂರ್ವಾಚಾರ್ಯೋಕ್ತಿಯಲ್ಲಿ ಅನನ್ಯ ಶೇಷತ್ವ ಜ್ಞಾನವು ಮೂಲಮನ್ತ್ರದಲ್ಲಿ ಉದ್ಭವಿಸಿ, ದ್ವಯದಲ್ಲಿ ವೃದ್ಧಿಯನ್ನು ಹೊಂದುತ್ತದೆ ಎಂದು ಹೇಳಲ್ಪಟ್ಟಿತು. **ಸ್ವರೂಪಜ್ಞಾನಮ್ ತಿರುಮನ್ತ್ರತ್ತಿಲೇ ಪಿರನ್ದು** ಎಂಬುದರ ಸಮಂಜಸಾರ್ಥವನ್ನು ತಿಳಿಸಿದರು. ಮುಂದೆ **ದ್ವಯತ್ತಿಲ್ ವಳರ್‌ನ್ದು** - ಎಂಬುದರ ತಾತ್ಪರ್ಯವೇನೆಂಬುದನ್ನು ಉಪದೇಶಿಸುತ್ತಾರೆ. **ವಳರುಗೈ ಯಾವದು ?** ಆ ಸ್ವರೂಪ ಜ್ಞಾನವು, ತಾನು ಶ್ರೀಮನ್ನಾರಾಯಣನಿಗೆ ಶೇಷಭೂತನು ಎಂಬ ಜ್ಞಾನವು ಬೆಳೆ

ಯುವದು, ವೃದ್ಧಿಯನ್ನು ಹೊಂದುವದು ಎಂದರೇನು? ಉತ್ತರವನ್ನು ಹೇಳು ತ್ತಾರೆ. **ಅಧಿಕಾರ ವಿಶೇಷಾನುರೂಪ** - ಯಾವಾಗ ಸ್ವರೂಪ ಜ್ಞಾನವು ತಾನು ಶ್ರೀಮನ್ನಾರಾಯಣನಿಗೆ ಶೇಷಭೂತನೆಂಬುದು ಹುಟ್ಟಿತೋ, ತಾನು ಶೇಷವೃತ್ತಿ ಯನ್ನು ಮಾಡಲು ಅರ್ಹನೆಂಬ ಅಧಿಕಾರ ವಿಶೇಷವು ಉಂಟಾಗುತ್ತದೆ, ಅಂತಹ ಅಧಿಕಾರ ವಿಶೇಷಕ್ಕೆ ಅನುಗುಣವಾದ, **ಕರ್ತವ್ಯ ವಿಶೇಷ ವಿಷಯ** - ನಿತ್ಯಕೈಂಕರ್ಯ ವನ್ನೆಸಗುವ ಕರ್ತವ್ಯ ವಿಶೇಷವನ್ನು ಕುರಿತ, **ಜ್ಞಾನ ವಿಶೇಷತ್ತಾಲೇ** - ಜ್ಞಾನ ವಿಶೇಷದಿಂದ, **ಉಪಾಯ ಪರಿಗ್ರಹಂ ಪಣ್ಣುಗೈ** - ಒಬ್ಬ ಶ್ರೇಷ್ಠರಾದ ಆಚಾ ರ್ಯರನ್ನು ಆಶ್ರಯಿಸಿ ತನ್ಮೂಲಕ ಅವರು ಉಪದೇಶಿಸಿದ ದ್ವಯಮಂತ್ರದ ಮೂಲಕ ಭರನ್ಯಾಸಾನುಷ್ಠಾನವನ್ನು ಮಾಡೋಣವು, ಹುಟ್ಟಿದ ಮಗುವಿಗೆ ಹಾಲು ಮೊದಲಾದವುಗಳನ್ನು ಕೊಟ್ಟು, ವ್ಯಾಧಿ ಸಂಭವಾದಿಗಳುಂಟಾಗದಹಾಗೆ ತಾಯಿಯು ಹೇಗೆ ರಕ್ಷಿಸುವಳೋ ಹಾಗೆ, ಯಾವಾಗ ಶೇಷತ್ವಜ್ಞಾನವು ಪರ ಮಾತ್ಮ ಕೃಪೆಯಿಂದ ಸದಾಚಾರ್ಯಕಟಾಕ್ಷದಿಂದಲೂ ಪ್ರಾದುರ್ಭವಿಸಿತೋ, ಹಾಗೆಯೇ, ದಯಾಳುವಾದ ಮಾತೃಸ್ಥಾನದಲ್ಲಿರುವ ಆಚಾರ್ಯರು ಈ ಜ್ಞಾನಕ್ಕೆ ಏನೊಂದೂ ಪ್ರತಿಬಂಧಕಗಳು ಬಾರದೆ ಹಾಗೆ ಮಾಡಿ ಕೊನೆಗೆ ಆ ಜ್ಞಾನವು ಅಭಿ ವೃದ್ಧಿಯನ್ನು ಹೊಂದಿ, ಶೇಷಭೂತನಾದ ತನಗೆ ಪರಮಾತ್ಮನಿಗೆ ಕೈಂಕರ್ಯ ಮಾಡುವದೇ ಕರ್ತವ್ಯ ವಿಶೇಷವೆಂದು ತಿಳಿದು, **ಕುರುಷ್ವಮಾಮನುಚರಮ್ ವೈಧರ್ಮ್ಯಂ ನೇಹವಿದ್ಯತೇ**" ಎಂದೂ, "**ಅಹಂ ಸರ್ವಂ ಕರಿಷ್ಯಾಮಿ**" ಎಂದೂ ಶೇಷತ್ವ ಸ್ವರೂಪವನ್ನು ತಿಳಿದು ಲಕ್ಷ್ಮಣನು ಪ್ರಾರ್ಥಿಸಿದ ತೆರದಿ ಪ್ರಾರ್ಥಿಸಿ, ಅದ ಕ್ಕಾಗಿ ಏನುಮಾಡತಕ್ಕದೆಂಬುದನ್ನು ತನ್ನ ಆಚಾರ್ಯರ ಮೂಲಕ ತಿಳಿದು, ಅನನ್ಯ ಶರಣ್ಯನಲ್ಲಿ ಶರಣಾಗತಿಯನ್ನನುಷ್ಠಿಸದ ಹೊರ್ತು ಸಾಧ್ಯವಿಲ್ಲವೆಂಬ ಈವಳರ್ನ್ದ ಜ್ಞಾನವನ್ನು ಸಂಪಾದಿಸಿ, ಭರನ್ಯಾಸವನ್ನು ಅವರು ಉಪದೇಶಿಸಿದ ದ್ವಯ ಮನ್ತ್ರದ ಮೂಲಕ ಅನುಷ್ಠಿಸುವದು. ಹೀಗೆ ಪ್ರಪದನವನ್ನು ಅನುಷ್ಠಿಸುವದೇ ಆ ಜ್ಞಾನವು ಅಭಿವೃದ್ಧಿಯನ್ನು ಹೊಂದಿದುದಕ್ಕೆ ಗುರ್ತು ಎಂಬ ಭಾವವು. ಅಧಿಕಾರಪ್ರಾ ಪ್ತಿಯೂ, ಉಪಾಯಾನುಷ್ಠಾನವೂ ಸಹ ಆತ್ಮಾ ವಳರ್ನ್ದದು ಎಂದು ಹೇಳಿದುದರ ಅಭಿಪ್ರಾಯವು. ಹುಟ್ಟಿದ ಮಗುವು ಮಾಡುವ ಪ್ರವೃತ್ತಿಯಿಂದ ಬೆಳೆಯಿತು ಎಂಬುದು ಹೇಗೆ ದ್ಯೋತಿತವೋ, ಹಾಗೆಯೇ ಈ ಶೇಷತ್ವ ಜ್ಞಾನವು ಉಪಾಯಾನು ಷ್ಠಾನರೂಪಪ್ರವೃತ್ತಿಯಲ್ಲಿ ಅನ್ವಯವನ್ನುಂಟುಮಾಡಿದರೆ, ಆಗ ಅದು ಅಭಿವೃದ್ಧಿ ಯನ್ನು ಹೊಂದಿತು ಎಂಬುದಕ್ಕೆ ಹೆಗ್ಗುರುತು ಎಂಬ ಭಾವವು.

ಹಿಂದೆ ಪೂರ್ವಾಚಾರ್ಯರ ದಿವ್ಯ ಸೂಕ್ತಿಯಲ್ಲಿ ಈ ಸ್ವರೂಪಜ್ಞಾನವುಳ್ಳವ ನನ್ನು ಕುರಿತು "**ತಿರುಮನ್ತ್ರತ್ತಿಲೇ ಪಿರನ್ದು, ದ್ವಯತ್ತಿಲೇ ವಳರ್ನ್ದು ದ್ವಯೈ ಕನಿಷ್ಠನಾವಾನ್**" ಎಂದು ಹೇಳಲ್ಪಟ್ಟಿತು; **ಪಿರನ್ದು ವಳರ್ನ್ದು** ಎಂಬೆರಡು ಪದಗಳಲ್ಲಿರುವ ಅರ್ಥಸ್ವಾರಸ್ಯಗಳನ್ನು ಉಪದೇಶಿಸಿದರು; ಮುಂದೆ **ದ್ವಯೈಕ ನಿಷ್ಠ ನಾವಾನ್** - ಎಂಬುದರ ಅಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ.—

ದ್ವಯೈಕನಿಷ್ಠಾನಾಗೈಯಾವದು ? ದ್ವಯಾನುಸಂಧಾನತ್ತಾಲೇ ಉಪಾಯಾನ್ತರತ್ತಿಲುಮ್, ಪ್ರಯೋಜನಾನ್ತರತ್ತಿಲುಮ್. ತುವಕ್ಕರ ಇದಿರ್ಚೊನ್ನ ಉಪಾಯತ್ತಿಲುಮ್, ಪ್ರಯೋಜನತ್ತಿಲುಮ್ ಪ್ರತಿಷ್ಠಿತನಾಗೈ. ಇಪ್ಪಡಿ ತಿರುಮನ್ತ್ರಮುಮ್ ದ್ವಯಮುಙ್ಗೂಡ, ಸ್ವರೂಪೋಪಾಯ ಪುರುಷಾರ್ಥಙ್ಗಳೈಕ್ಕಾಟ್ಟುಗಿನ್ರನ.

---

ದ್ವಯೈಕನಿಷ್ಠನಾಗೈಯಾವದು ?—ಹಾಗೆ ಸ್ವರೂಪಜ್ಞಾನವು ಹುಟ್ಟಿ ಬೆಳದನಂತರ ದ್ವಯೈಕನಿಷ್ಠನಾಗುತ್ತಾನೆ ಎಂದರೇನು? ದ್ವಯಾನುಸಂಧಾನತ್ತಾಲೇ - ಭರನ್ಯಾಸಾನುಷ್ಠಾನೋತ್ತರಕಾಲದಲ್ಲಿ, ತನಗೆ ಸಾಧ್ಯವಾದ ಕಾಲದಲ್ಲೆಲ್ಲಾ, "ಸಕಲಂಕಾಲಂ ದ್ವಯೇನಕ್ಷಿಪೇತ್" ಎಂದು ಹಿಂದೆ ಹೇಳಿರುವ ಹಾಗೆ ದ್ವಯಾನುಸಂಧಾನದಿಂದ, ಉಪಾಯಾನ್ತರತ್ತಿಲುಮ್ - ಬೇರೇ ಉಪಾಯವಾದ ಭಕ್ತಿಯೋಗದಲ್ಲೂ, ಪ್ರಯೋಜನಾನ್ತರತ್ತಿಲುಮ್ - ಮೋಕ್ಷೇತರ ಪ್ರಯೋಜನದಲ್ಲೂ, ತುವಕ್ಕರ - ಸಂಪೂರ್ಣವಾಗಿ ಸಂಬಂಧವು ತೊಲಗುವ ಹಾಗೆ, ಇದಿರ್ ಚೊನ್ನ - ಈ ದ್ವಯಮಂತ್ರದಲ್ಲಿ ಹೇಳಲ್ಪಟ್ಟ, ಉಪಾಯತ್ತಿಲುಮ್ - ಭರನ್ಯಾಸ ರೂಪವಾದ ಉಪಾಯದಲ್ಲೂ, ಪ್ರಯೋಜನತ್ತಿಲುಮ್- ಆ ಉಪಾಯಾನುಷ್ಠಾನದಿಂದುಂಟಾಗುವ ಪುರುಷಾರ್ಥರೂಪವಾದ ನಿತ್ಯಕೈಙ್ಕರ್ಯ ಪ್ರಾಪ್ತಿಯುಂಟೆಂಬ ಜ್ಞಾನದಲ್ಲೂ, ಪ್ರತಿಷ್ಠಿತನಾಗೈ, - ನಿಸ್ಸಂದೇಹವಿಲ್ಲದವನಾಗೋಣವು ಎಂದರೆ ತಾನು ಕೃತಕೃತ್ಯನು ಎಂಬ ಸಂಪೂರ್ಣ ನಂಬಿಕೆಯುಂಟಾಗೋಣವು. ಹೀಗೆ ದ್ವಯೈಕನಿಷ್ಠತೆಯಿಂದ ಶ್ರಿಯಃಪತಿಯೇ ಉಪಾಯೋಪೇಯನೆಂಬ ಸ್ಥಿರವಾದ ಜ್ಞಾನವನ್ನು ಹೊಂದೋಣವು; ಇದೇ ದ್ವಯ ಮಂತ್ರಾರ್ಥವು ಎಂಬ ಭಾವವು. ಇದು ಎರಡನೆಯ ಪ್ರಯೋಜನವು. ಇಪ್ಪಡಿ - ಹೀಗೆ, ತಿರುಮನ್ತ್ರಮುಮ್ - ಈ ಮೂಲಮಂತ್ರವು, ದ್ವಯಮುಙ್ಗೂಡ - ದ್ವಯವೂಕೂಡ, ಸ್ವರೂಪೋಪಾಯ ಪುರುಷಾರ್ಥಗಳನ್ನು, ಕಾಟ್ಟುಗಿರದು - ತೋರಿಸುತ್ತದೆ. ಇಲ್ಲಿ ಸ್ವರೂಪ ಜ್ಞಾನವನ್ನು ಮುಖ್ಯವಾಗಿ ಮೂಲ ಮಂತ್ರವು ಪ್ರದರ್ಶಿಸುತ್ತದೆಂದು ಉಪಪಾದಿಸಿದರು. ಹಾಗೆಯೇ ಉಪಾಯಪರವೆಂದೂ ಪುರುಷಾರ್ಥಪರವೆಂದೂ ಮುಂದೆ ಸಮರ್ಥನೆ ಮಾಡುತ್ತಾರೆ.—

ಅನಂತರ ಎರಡು ವಾಕ್ಯಭಾವನೆಯಿಂದ ಉಪಾಯಪರವಾದ
ಯೋಜನೆಯನ್ನು ತಿಳಿಸುತ್ತಾರೆ.

---

೩. ಇವ್ವಿರಣ್ಡುವಾಕ್ಯಮಾನಯೋಜನೈ ತನ್ನಿಲೇ—ಈ ಮೂಲಮಂತ್ರವು ಎರಡು ವಾಕ್ಯವೆಂಬ ಯೋಜನೆಯಲ್ಲಿ, ತಿರುಮನ್ತ್ರಮುಳುಕ್ಕ - ತಿರುಮಂತ್ರವು ಸಂಪೂರ್ಣವಾಗಿ, ಸಪರಿಕರಾತ್ಮ ಸಮರ್ಪಣ ಪರಮೆನ್ರುಮ್ ಅನುಸಂಧಿಪ್ಪಾ

## ೩. ಅಥ ವಾಕ್ಯದ್ವಯೇನ ಉಪಾಯಪರಯೋಜನಾಮಾಹ

**ಇವ್ವಿರಣ್ಡು ವಾಕ್ಯಮಾನ ಯೋಜನೈ ತನ್ನಿಲೇ ತಿರುಮನ್ತ್ರಂ ಮುಳುಕ್ಕ ಸಪರಿಕರಾತ್ಮ ಸಮರ್ಪಣ ಪರಮೆನ್ನುಮ್ ಅನುಸಂಧಿಪ್ಪಾರ್ ಗಳ್. ಅಪ್ಪೋದು ಪ್ರಣವತ್ತಿಲ್ ಮಕಾರಮ್ ಪ್ರಥಮಾನ್ತಮೇಯಾಗವಮೈಯುಮ್. ಹವಿಸ್ಸಮರ್ಪಣ ನ್ಯಾಯತ್ತಾಲೇ ನಿರುಪಾಧಿಕಮಾನ ಆತ್ಮ ಹವಿಸ್ಸು ನಿರುಪಾಧಿಕ ದೇವತೈಯಾಯ್, ಅಕಾರವಾಚ್ಯನಾನ ನಾರಾಯಣನುಕ್ಕೇ ಭರಮಾಗ ಸಮರ್ಪಿತ ಮೆನ್ರದಾಯಿತ್ತು.**

---

**ರ್ ಗಳ್** - ಕೆಲವು ಪ್ರಾಜ್ಞರು ಐದು ಅಂಗಗಳಿಂದ ಕೂಡಿದ ಆತ್ಮಸಮರ್ಪಣರೂಪವಾದ ಶರಣಾಗತಿಯು ಪರವೆಂದು ಭಾವಿಸುವರು. ಸಾಙ್ಗಪ್ರಪದನ ರೂಪವಾದುದು ಎಂಬ ತಾತ್ಪರ್ಯವು. ಇದು ಪ್ರತಿಜ್ಞಾವಾಕ್ಯವು; ಅದು ಹೇಗೆ ಎಂಬುದನ್ನು ಪ್ರತಿಪಾದಿಸುತ್ತಾರೆ. ಆಗ ಮಕಾರವಾಚ್ಯನಾದ ನನ್ನ ಆತ್ಮಾವನ್ನು, **ಆಯ್ಯೈವ ನಾರಾಯಣಾಯ ನಮಃ** - ಅಕಾರವಾಚ್ಯನಾದ ಶ್ರಿಯಃಪತಿಗೆ ಯಾದುದರಿಂದ ಆತನಲ್ಲೇ ರಕ್ಷಣೆ ಮೊದಲಾದ ಸರ್ವಭರವನ್ನೂ ಸಮರ್ಪಿಸಿರುತ್ತೇನೆ; **ಮಃನ** - ನನಗೆ ಅದರಲ್ಲಿ ಸ್ವಾತಂತ್ರ್ಯವಿಲ್ಲವು. ಅದರ ರಕ್ಷಣೆಯ ಭರವು ನನಗಿಲ್ಲವು; ಆತನದೇ ಸರ್ವಭರವು ಎಂಬರ್ಥ ಉಂಟಾಗುತ್ತದೆ, ಆಗ ಸಮರ್ಪಿಸುವೆನು ಎಂದು ಇಟ್ಟುಕೊಂಡರೆ ಸಕರ್ಮಕವಾಗಿ ದ್ವಿತೀಯಾಂತಪದವು ಬೇಕಾಗುತ್ತದೆ, ಅದರೆ ಮಕಾರವು ಪ್ರಥಮಾಂತವು; ಆಗ ಅರ್ಥವು ಹೇಗೆ ಎಂದರೆ ಉಪಪಾದಿಸುತ್ತಾರೆ. **ಅಪ್ಪೋದು** - ಹಾಗೆ ಸಪರಿಕರಾತ್ಮಸಮರ್ಪಣ ಪರವಾದಾಗ, **ಪ್ರಣವತ್ತಿಲ್ ಮಕಾರಮ್** - ಪ್ರಣವದಲ್ಲಿರುವ ಮಕಾರವು, **ಪ್ರಥಮಾನ್ತಮೇ ಯಾಗವಮೈಯುಮ್** - ಪ್ರಥಮಾಂತವಾಗಿದ್ದರೂ ಸಾಕು, ಪ್ರಥಮಾಂತವಾಗಿದ್ದರೂ ಆಗಬಹುದು, ಏನೊಂದೂ ಬಾಧಕವಿಲ್ಲವೆನ್ನುತ್ತಾರೆ. ಹೇಗೆಂದರೆ **ಹವಿಸ್ಸಮರ್ಪಣ ನ್ಯಾಯತ್ತಾಲೇ** - ಹವಿಸ್ಸನ್ನು ಸಮರ್ಪಿಸುವ ನ್ಯಾಯದಿಂದ, "ಇಂದ್ರಾಯ ಇದಂ ನಮಮ" ಎಂದು ಹೇಳುವ ಪ್ರಕಾರ ಎಂಬ ಭಾವವು, **ನಿರುಪಾಧಿಕಮಾನ ಆತ್ಮ ಹವಿಸ್ಸು** - ಭಗವಂತನಿಗೇನೇ ನಿರುಪಾಧಿಕ ಶೇಷಭೂತವಾದ ಹವಿಸ್ಸನ್ನು, **ನಿರುಪಾಧಿಕ ದೇವತೈಯಾಯ್** - ನಿರುಪಾಧಿಕಶೇಷಿಯಾದ ಪರದೇವತೆಯಾಗಿ ಭಗವಂತನಾಗಿರುವ, **ಅಕಾರವಾಚ್ಯನಾನ ನಾರಾಯಣನುಕ್ಕೇ** - ಅಕಾರವಾಚ್ಯನಾದ ನಾರಾಯಣನಿಗೇನೇ; **ಭರಮಾಗ ಸಮರ್ಪಿತಮ್** - ರಕ್ಷಿಸಿಕೊಳ್ಳುವ ಭರವು ಅವನದೇ ಎಂದು ಸಮರ್ಪಿಸಲ್ಪಟ್ಟಿತು, **ಎನ್ರದಾಯಿತ್ತು** - ಎಂದು ಹೇಳಿದಂತಾಯಿತು, ಹಿಂದೆಯೇ **ನಮಃ** ಎಂಬುದು ಸಪರಿಕರ ಆತ್ಮ ಸಮರ್ಪಣ ಪರವೆಂದು ಅಹಿರ್ಬುಧ್ನ್ಯ ಸಂಹಿತಾವಾಕ್ಯದಿಂದ ಉಪಪಾದಿತವು. ಆಗ ಎರಡು

ಇಪ್ಪಡಿ ನಿರುಪಾಧಿಕಮಾನ ವಾತ್ಮಯಾಗತ್ತಿಲ್ "ನಮಃ" ಎನ್ರು ತನ್ನೋಡು ತನ್ ತುವಕ್ಕರತ್ತು ಎನಕ್ಕು ಭರಮಲ್ಲೇ ನೆನ್ರದಾಯಿತ್ತು, "ಇದ ಮಿಂದಾ,ಯ, ನಮಮ" ಎನ್ನುಮಾಪ್ಪೋಲೇ ಇಜ್ಜುವ್ ಪರಸಂಬಂಧನಿಷಿ ಯಿಲುಮ್ ಸ್ವಸಂಬಂಧ ನಿಷೇಧತ್ತಿಲುಮ್ ಪ್ರವೃತ್ತಮಾಗೈಯಾಲೇ ವಾಕ್ಯ ದ್ವಯಮುಮ್ ಸಪ್ರಯೋಜನಮ್.

ಇನ್ನಮಸ್ಸು ಸಮರ್ಪಣಮ್ ತನ್ನಿಲುಮ್ ಪರನಿರಪೇಕ್ಷ ಕರ್ತೃತ್ವಾದಿ ಗಳೈ ನಿಷೇಧಿಕ್ಕೈಯಿಲೇ ತತ್ಪರಮಾಗವುಮಾಮ್. ವೇರೊರುತ್ತರುಕ್ಕುಮ್

---

ವಾಕ್ಯಗಳು ಯಾವುವು ಎಂದರೆ. (೧) ಆಯೈವ ನಾರಾಯಣಾಯ ನಮಃ (೨) ಮಃ ನ, ನಮಮ. ಇಂದ್ರಾಯ ಇದಂ ನಮಮ ಎಂಬುವಹಾಗೆ ಎಂದು ಮುಂದೆ ಚನ್ನಾಗಿ ವ್ಯಕ್ತಪಡಿಸಿ ಉಪದೇಶಿಸುತ್ತಾರೆ. ನಾರಾಯಣನು ಸ್ವತಃ ಪ್ರಾಪ್ತಶೇಷೀ, ಈ ಜೀವಾತ್ಮನು ಸ್ವತಃ ಶೇಷನು; ಅವನು ಇವನಿಗೆ ಸ್ವಾಮಿಯು, ಈತನು ಅವನ ಸ್ವತ್ತು; ಹೀಗೆ ನಿತ್ಯಸಂಬಂಧನಾದುದರಿಂದ ನಿರು ಪಾಧಿಕ ಶಬ್ದ ಪ್ರಯೋಗವು. ಸಮರ್ಪಿತಮೆನ್ರ ದಾಯಿತ್ತು ಎಂದು ಹೇಳಲ್ಪ ಟ್ಟಿತಲ್ಲಾ ಇದಕ್ಕೆ ಮೂಲಮಂತ್ರದಲ್ಲಿ ಪದವೆಲ್ಲಿದೆ? ಎಂದರೆ ಇಂದ್ರಾಯ ಇದಂ ಎಂದರೇನೆ ಸಮರ್ಪಣೆಯು ಅರ್ಥಾತ್ ತೋರಿಬರುವಹಾಗೆ ಊಹಿಸಬಹುದು. ಅಥವಾ ನಮಃ ಎಂಬುದೂ ಸಮರ್ಪಣಪರವಾದುದೆಂದು ಹಿಂದೆ ಉಪಪಾದಿಸ ಲ್ಪಟ್ಟಹಾಗೆ ಅದನ್ನೂ ಸೇರಿಸಿ ಒಂದು ವಾಕ್ಯವಾಗುವಹಾಗೆ ಭಾವಿಸಬಹುದು. ಆಗ ಏಕವಾಕ್ಯವಾಗಲಿಲ್ಲವೋ ಎಂದರೆ ನಮಶ್ಶಬ್ದಾರ್ಥವಿವರಣೆಯಲ್ಲಿ ನಮಃ, ನಮಮ ಎಂದು ಭಾವಿಸಬಹುದೆಂದು ಹೇಳಲ್ಪಟ್ಟಿದುದರಿಂದ ಅಖಂಡವಾಗಿ ಮೊದಲಿನ ವಾಕ್ಯಕ್ಕೆ ಸೇರಿಸಿ, ಎರಡನೆಯ ವಾಕ್ಯವನ್ನು ಸಖಂಡನಮಸ್ಸಾಗಿ ನಮಮ ಎಂದು ಭಾವಿಸಬಹುದು. ಇಲ್ಲಿ ಹವಿಸ್ಸಮರ್ಪಣನ್ಯಾಯ ಎಂಬ ವಾಕ್ಯದಿಂದ ತೋರುವ ಅಭಿಪ್ರಾಯವೇನೆಂದರೆ? ಈ ಸಂದರ್ಭದಲ್ಲಿ ಹವಿಸ್ಸಮರ್ಪಣೆಗೆ ಉದ್ದೇಶ್ಯನಾದ ಪರ ದೇವತೆಯೂ ನಿರುಪಾಧಿಕನಾದ ಸ್ವತಶ್ಶೇಷಿಯು. ಹವಿಸ್ಸಾದ ಆತ್ಮಾವೂ ನಿರುಪಾ ಧಿಕನಾದ ಸ್ವತಃ ಶೇಷಭೂತನು. ಈ ಯಾಗವೂ ಕೂಡ ನಿರುಪಾಧಿಕವಾಗಿ ಸ್ವತಃ ಶೇಷಿಯ ವಿಷಯವಾದುದು ಎಂಬ ಭಾವವು. ಇಂದ್ರಾಯ ನಮಃ ಎಂಬಲ್ಲಾ ದರೋ! ಅನ್ಯದೇವತಾ ಪರವಾಗಿ ಈ ನಿರುಪಾಧಿಕ ಶೇಷಿ ಶೇಷಭಾವವು ಇಲ್ಲವು.

ಈ ಉಪಾಯ ಪರಯೋಜನೆಯಲ್ಲಿ ಪ್ರಥಮ ವಾಕ್ಯಾರ್ಥವನ್ನು ಉಪಪಾದಿಸಿ ದರು. ಎರಡನೆಯ ವಾಕ್ಯವಾದ ನಮಃ ಎಂಬುದರ ತಾತ್ಪರ್ಯವನ್ನು ವ್ಯಕ್ತ ಪಡಿಸುತ್ತಾರೆ.—ಇನ್ನಮಸ್ಸು ಸಮರ್ಪಣಂ ತನ್ನಿಲುಮ್ – ಈ ಎರಡನೆಯ ವಾಕ್ಯವಾದ ಸಮರ್ಪಣ ಪರವಾದ ನಮಸ್ಸಿನಿಂದ, ಪರನಿರಪೇಕ್ಷ ಕರ್ತೃತ್ವಾದಿ ಗಳೈ - ಪರಮಾತ್ಮನ ಅವಶ್ಯಕತೆಯಿಲ್ಲದ ಕರ್ತೃತ್ವ ಉಂಟೆಂಬಿವೇ ಮೊದಲಾದ

ಭರಮುನ್ನು, ಎನಕ್ಕುಮ್ ಭರಮುನ್ನು ಎನ್ರು ವಾಕ್ಯದ್ವಯಾಭಿಪ್ರಾಯಮಾಗ ವುಮಾಮ್.

---

ಭ್ರಮ ಜ್ಞಾನಗಳನ್ನು **ನಿಷೇಧಕ್ಕೈಯಿಲೇ** - ನಿರಸನ ಮಾಡುವದರಲ್ಲಿ, **ತತ್ಪರಮಾಗುವುಮಾಮ್** – ಉಪಯುಕ್ತವಾದುದಾಗುತ್ತದೆ. ಇದು ಹೇಗೆ ಎಂದರೆ ಪ್ರಣವದ ಉಕಾರವು ಅವಧಾರಣವಾದುದರಿಂದ **ಅಯ್ಯೈವ** - ಶ್ರೀಮನ್ನಾರಾಯಣನಿಗೇನೇ ಈ ಭರಸಮರ್ಪಣವು ಎನ್ನುವದರಿಂದ ಪರಮಾತ್ಮನಲ್ಲದೆ ಇನ್ನು ಅನ್ಯದೇವತೆಯಾಗಲಿ, ತಾನೇಯಾಗಲಿ ಸಮರ್ಥರಲ್ಲವು ಎಂಬ ಅರ್ಥವು ಉಂಟಾಗುತ್ತದೆ ಎಂಬ ಭಾವವು. ಈ ಅವಧಾರಣದಿಂದಲೇ **ನಮಃ** ಎಂಬ ವಾಕ್ಯಾರ್ಥವೂ ಸಿದ್ಧಿಸುವಾಗ, ಈ ಎರಡನೆಯ ವಾಕ್ಯವು ನಿರರ್ಥಕವಲ್ಲವೋ ಎಂದರೆ, **ಅಯ್ಯೈವ ನಾರಾಯಣಾಯ** - ಎಂಬುದರಿಂದ ಸಮರ್ಪಣಕ್ಕೆ ಅನ್ಯ ದೇವತೆಗಳಿಗೆ ಯೋಗ್ಯತೆ ಯಿಲ್ಲವೆಂದು ಇಷ್ಟುಮಾತ್ರವೇ ಹೇಳಿತೆಂದು ಇಟ್ಟುಕೊಂಡು, **ನಮಃ** ಎಂಬ ಎರಡನೆಯ ವಾಕ್ಯದಿಂದ ತನಗೂ ತನ್ನನ್ನು ರಕ್ಷಿಸಿಕೊಳ್ಳುವ ಭರವಿಲ್ಲವೆಂದು ಅರ್ಥಹೇಳಬಹುದು. ಹೀಗೆ ಅನ್ವಯಿಸುವ ನ್ಯಾಯಕ್ಕೆ ಗೋಬಲೀವರ್ದನ್ಯಾಯವೆಂಬ ಹೆಸರು. **ಗಾಮಾನಯ ಬಲೀವರ್ದಮಾನಯ**– ಎಂಬಲ್ಲಿ ಯದ್ಯಪಿ ಗೋಶಬ್ದವು ಆಕಳಿಗೂ ಎತ್ತಿಗೂ ಅರ್ಥವಾದರೂ, ಮುಂದೆ ಬಲೀವರ್ದ ಶಬ್ದದಿಂದ ಎತ್ತೆಂಬುದು ತೋರಿಬರುವದರಿಂದ, ಹಿಂದಿನ ಗೋ ಶಬ್ದಕ್ಕೆ ಹೆಣ್ಣು ಗೋವು ಎಂದು ಇಷ್ಟೇ ಅರ್ಥವನ್ನು ಹೇಳುವದು ಹೇಗೆ ನ್ಯಾಯವೋ ಹಾಗೆಯೇ ಇಲ್ಲಿಯೂ ಭಾವಿಸತಕ್ಕದ್ದೆಂದು ಮುಂದಿನ ವಾಕ್ಯದಿಂದ ಉಪಪಾದಿಸುತ್ತಾರೆ. ಹಿಂದಿನ ವಾಕ್ಯದಿಂದ ಸ್ವಭರ ನಿಷೇಧವು ಅಷ್ಟು ಸ್ಫುಟವಾಗಿತೋರುವದಿಲ್ಲವಾದುದರಿಂದಲೂ ಮತ್ತು ತಾನು ಸ್ವತಂತ್ರನು ಎಂಬ ಭ್ರಮ ನಿವಾರಣವು ಆವಶ್ಯಕವಾಗಿ ಹೇಳತಕ್ಕದ್ದಾದುದರಿಂದಲೂ, ಪ್ರಪನ್ನನಿಗೆ ಮುಖ್ಯವಾಗಿ ಈ ಅನುಸಂಧಾನವು ಬೇಕಾಗಿರುವದರಿಂದಲೂ, ಈ ಎರಡನೆಯ ವಾಕ್ಯವು ನಿರರ್ಥಕವಾದದಲ್ಲವು, ಸಾರ್ಥಕವಾದುದೇ ಎಂದು ಹೇಳುತ್ತಾರೆ. ಈ ಆತ್ಮ ಸಮರ್ಪಣದಲ್ಲಿ ಆತ್ಮನನ್ನು ರಕ್ಷಿಸುವ ಭರವು, ಪರಮಾತ್ಮನದೇ; ಆದುದರಿಂದ **ವೇರೊರುತ್ತರುಕ್ಕುಮ್ ಭರಮುನ್ನು** - ಬೇರೆ ಯಾರಿಗೂ ಎಂದರೆ ಅನ್ಯ ದೇವತೆಗಳಿಗೆ ಯಾರಿಗೂ ಸಾಧ್ಯವಾದುದಲ್ಲವು; (ಇದು ಪ್ರಥಮ ವಾಕ್ಯದಲ್ಲಿ ಉಕಾರಾರ್ಥವು); **ಎನಕ್ಕುಮ್ ಭರಮುನ್ನು** - ನನಗೂ ಸಾಧ್ಯವಲ್ಲವು (ಇದು ಎರಡನೆಯ ವಾಕ್ಯದರ್ಥವು.) ಮಃ **ನ** - ನನ್ನ ರಕ್ಷಣೆಯಲ್ಲಿ ನನಗೆ ಸ್ವಾತಂತ್ರ್ಯವಿಲ್ಲವು ಎಂಬ ಭಾವವು. **ಎನ್ರು ವಾಕ್ಯದ್ವಯಾಭಿಪ್ರಾಯ ಮಾಗವುಮಾಮ್** - ಎಂಬದಾಗಿ ಈ ಎರಡು ವಾಕ್ಯಗಳ ಅಭಿಪ್ರಾಯವಾಗಬಹುದು.

## ಅಸ್ಮಿನ್ ಉಪಾಯರೂಪಾತ್ಮ ಸಮರ್ಪಣಪಕ್ಷೇ ಸಾಂಪ್ರದಾಯಿಕೇ ಮಪ್ಯಸ್ತೀತ್ಯಾಹ.

ತಿರುಮನ್ತ್ರಮ್ ಆತ್ಮನಿವೇದನಪರಮೆನ್ರು ಮಿಡತ್ತಿಲ್ ಶ್ರೀ ಭಾಷ್ಯಕಾರರ್ ನಿತ್ಯತ್ತಿಲೇ "ಮೂಲಮನ್ತ್ರೇಣ ಸ್ವಾತ್ಮಾನಂ ದೇವಾಯ ನಿವೇದ್ಯ" ಎನ್ರರುಳಿಚ್ಚೆಯ್‌ದಾರ್. ಇಪ್ಪಡಿ ಶ್ರೀ ವೈಕುಂಠ ಗದ್ಯತ್ತಿಲುಮ್, "ಶ್ರೀಮತಾ ಮೂಲಮನ್ತ್ರೇಣ ಮಾಮೈಕಾನ್ತಿಕಾತ್ಯನ್ತಿಕ ಪರಿಚರ್ಯಾಕರಣಾಯ, ಪರಿ

---

## ಈ ಉಪಾಯ ರೂಪವಾದ ಆತ್ಮ ಸಮರ್ಪಣ ಪಕ್ಷದಲ್ಲಿ ಆಚಾರ್ಯ ದಿವ್ಯಸೂಕ್ತಿಯೂ ಉಂಟು

---

**ತಿರುಮನ್ತ್ರವು, ಆತ್ಮನಿವೇದನಪರಮೆನ್ರುಮ್** - ಆತ್ಮ ಹವಿಸ್ಸನ್ನು ಪರಮಾತ್ಮನ ಪಾದಕಮಲದಲ್ಲಿ ಸಮರ್ಪಿಸುವ ಪರವಾದುದೆಂಬುವ, **ಇಡತ್ತಿಲ್** - ಸಂದರ್ಭದಲ್ಲಿ, **ಶ್ರೀ ಭಾಷ್ಯಕಾರರ್** - ಶ್ರೀ ಯತಿವರ್ಯರು, **ನಿತ್ಯತ್ತಿಲೇ** - ಅವರು ಬರೆದಿರುವ ನಿತ್ಯವೆಂಬ ಗ್ರಂಥದಲ್ಲಿ, "**ಮೂಲಮನ್ತ್ರೇಣ** - ಮೂಲ ಮಂತ್ರವನ್ನು ಪಠಿಸುತ್ತಾ, **ಸ್ವಾತ್ಮಾನಂ** - ತನ್ನ ಆತ್ಮಾವನ್ನು, **ದೇವಾಯ** - ಕ್ರೀಡಾಪರನಾದ ಅಥವ ನಿರತಿಶಯ ತೇಜೋರೂಪನಾದ ಪರಮಾತ್ಮನಿಗೋಸ್ಕರ, **ನಿವೇದ್ಯ** - ಹವಿಸ್ಸಿನ ರೂಪದಲ್ಲಿ ಆತನ ಪಾದದಲ್ಲಿ ಸಮರ್ಪಿಸಿ" ಮುಂದಕ್ಕೆ "**ಪ್ರಣಮ್ಯಾನುಜ್ಞಾಪ್ಯ ಭಗವದಾರಾಧನ ಮಾರಭೇತ**" ಎಂದು ಇರುತ್ತದೆ, ನಮಸ್ಕರಿಸಿ ಅನುಜ್ಞೆಯನ್ನು ಹೊಂದಿ ಭಗವದಾರಾಧನವನ್ನು ಉಪಕ್ರಮಿಸತಕ್ಕದ್ದು ಎಂದು ವಿಧಿಸಿರುತ್ತಾರೆ. **ಎನ್ರರುಳಿ ಚೆಯ್‌ದಾರ್** - ಎಂದು ಕೃಪಯಾ ಹೇಳಿರುತ್ತಾರೆ. ಹಾಗೆಯೇ ಶ್ರೀ ಯತಿವರ್ಯರು ಅವರು ರಚಿಸಿರುವ ವೈಕುಂಠ ಗದ್ಯದಲ್ಲಿ ಈ ಉಪಾಯಪರವಾದ ಅರ್ಥವನ್ನು ಬೋಧಿಸಿದುದಲ್ಲದೆ ಪುರುಷಾರ್ಥರೂಪ ಅರ್ಥವನ್ನೂ ಸಹ ಮೂಲಮಂತ್ರವು ಬೋಧಿಸುತ್ತದೆಂದು ತಿಳಿಸುತ್ತಾರೆ.— **ಇಪ್ಪಡಿ** - ಹೀಗೆಯೇ ಎಂದರೆ ನಿತ್ಯದಲ್ಲಿ ಹೇಳಿರುವ ಮೇರಿಗೆ **ಶ್ರೀ ವೈಕುಂಠಗದ್ಯತ್ತಿಲುಮ್** - ಅವರು ರಚಿಸಿರುವ ವೈಕುಂಠಗದ್ಯದಲ್ಲೂ, "**ಶ್ರೀಮತಾ ಮೂಲಮನ್ತ್ರೇಣ** - ನಿರತಿಶಯ ಶ್ರೇಯಸ್ಸನ್ನು ಕೊಡುವ ಮೂಲ ಮಂತ್ರದಿಂದ, **ಐಕಾನ್ತಿಕಾತ್ಯನ್ತಿಕ ಪರಿಚರ್ಯಾಕರಣಾಯ** - ಏಕಾಂತ ಮನಸ್ಸಿದಿಂದ ಪರಿಚ್ಛಿತ್ತಿಯಿಲ್ಲದ, ಅಥವಾ ನಿತ್ಯವಾದ ಕೈಂಕರ್ಯಗಳನ್ನು ಮಾಡುವದಕ್ಕಾಗಿ, **ಮಾಂ** - ನನ್ನನ್ನು, **ಪರಿಗೃಹ್ಣೀಷ್ವ** - ಸ್ವೀಕರಿಸು, **ಇತಿ** - ಎಂಬದಾಗಿ, **ಯಾಚಮಾನಃ** - ಪ್ರಾರ್ಥಿಸುವವನಾಗಿ, **ಪ್ರಣಮ್ಯ** - ನಮಸ್ಕರಿಸಿ, **ಆತ್ಮಾನಂ** - ತನ್ನ ಆತ್ಮಾವನ್ನು, **ನಿವೇದಯೇತ್** - ಹವಿಸ್ಸಿನ ರೂಪದಲ್ಲಿ ಸಮರ್ಪಿಸಿದಹಾಗೆ **ಭಾವಿಸತಕದ್ದು;**" **ಎನ್ರು** - ಎಂಬದಾಗಿ, **ಇವ್ವರ್ಥಂ** - ಈ ಅಭಿಪ್ರಾಯವು, **ದರ್ಶಿತಂ** - ಪ್ರಕಟಿಸಲ್ಪಟ್ಟಿತು.

ಗೃಹ್ಣೀಷ್ವೇತಿ" ಯಾಚಮಾನಃ ಪ್ರಣಮ್ಯಾತ್ಮಾನಂ ಭಗವತೇ ನಿವೇದ ಯೇತ್" ಎನ್ರಿವ್ವರ್ಥಮ್ ದರ್ಶಿತಮ್.

೪. ವಾಕ್ಯದ್ವಯಪಕ್ಷೇ ಪುರುಷಾರ್ಥಪರತ್ವ ತೀಯಾ ಯೋಜನಾ.

---

**ವಾಕ್ಯಂ ತೋರುಮ್ ಒರುಪ್ರಾರ್ಥನಾ ಪದತ್ತೈ ಅಧ್ಯಾಹರಿತ್ತು ತಿರುಮನ್ತ್ರಮ್ ಮುಳುಕ್ಕ ದ್ವಯತ್ತಿಲ್ ಉತ್ತರಖಂಡಮ್ಪೋಲೇ ಇಷ್ಟಪ್ರಾಪ್ತ್ಯನಿಷ್ಟನಿವೃತ್ತಿರೂಪ ಪುರುಷಾರ್ಥ ಪ್ರಾರ್ಥನಾಪರಮಾಗವು ಮನುಸಂಧಿಪ್ಪರ್‌ಗಳ್.**

---

ಇಲ್ಲಿ ಹೇಳಿರುವದು ಮೂಲಮಂತ್ರದ ಉಚ್ಚಾರಣೆಯಲ್ಲಿ ಇಂತಹ ಅನುಸಂಧಾನವು ಇರತಕ್ಕದ್ದೆಂಬ ಭಾವವು. ಹೀಗೆ ನಿತ್ಯದಲ್ಲಿ ಭಗವದಾರಾಧನೆಯ ಕ್ರಮದಲ್ಲಿ ಶ್ರೀ ಯತಿವರ್ಯರು ಹೀಗೆ ಅನುಸಂಧಾನವಿರಬೇಕೆಂಬ ಭಾವವನ್ನು ಉಪದೇಶಿಸಿರುವದನ್ನು ಮರೆತು, ಒಬ್ಬ ಮಹಾ ಪ್ರಾಜ್ಞರು ಶ್ರೀ ಯತಿವರ್ಯರ ಆಜ್ಞಾನುಸಾರ ನಿತ್ಯವೂ ಭರನ್ಯಾಸವನ್ನೇ ಮಾಡತಕ್ಕದ್ದೇ ವಿನಾ ಒಂದೇ ಸಲ ಪುರುಷಾಯುಸ್ಸಿನಲ್ಲಿ ಮಾಡತಕ್ಕದ್ದು ಯುಕ್ತವಲ್ಲವೆಂದು ಭಾವಿಸಿದರು. ಇದು ಸರಿಯಾದ ಅಭಿಪ್ರಾಯವಾಗುವದಿಲ್ಲವು. ಭರನ್ಯಾಸವು ಗುರುಮುಖೇನ ಸಕೃತ್ ಅನುಷ್ಠಿಸತಕ್ಕದ್ದೆಂಬ ಅಭಿಪ್ರಾಯಕ್ಕೆ ವಿರುದ್ಧವು. ಆದುದರಿಂದ ಇದನ್ನು ಹಿಂದೆ ಮಾಡಿದ ಭರನ್ಯಾಸದ ಅನುಸಂಧಾನವೆಂದೇ ಭಾವಿಸತಕ್ಕದ್ದಾಗಿರುತ್ತದೆ. ಸಕೃದನುಷ್ಠೇಯ ತಕ್ಕದ್ದೆಂದು ಹಿಂದೆಯೇ ಸಪ್ರಮಾಣವಾಗಿ ಉಪಪಾದಿಸಲ್ಪಟ್ಟಿರುತ್ತದೆಯಷ್ಟೇ.

**ಎರಡು ವಾಕ್ಯವೆಂಬ ಪಕ್ಷದಲ್ಲಿ ಪುರುಷಾರ್ಥಪರ ವಾದ ಮೂರನೆಯ ಯೋಜನೆಯು.**

ಹಿಂದಿನ ಶ್ರೀ ಯತಿವರ್ಯರ ಶ್ರೀ ವೈಕುಂಠ ಗದ್ಯದಲ್ಲೇ **"ಪರಿಚರ್ಯಾ ಕರಣಾಯ ಪರಿಗೃಹ್ಣೀಷ್ವ** ಎಂದು ಪ್ರಾರ್ಥಿಸಿರುವ ಸ್ಥಳದಲ್ಲೇ ಮೂಲಮಂತ್ರವು ಪುರುಷಾರ್ಥವನ್ನೂ ಬೋಧಿಸುತ್ತದೆಂಬುದು ಸೂಚಿಸಿತು. ಅದನ್ನೇ ಇಲ್ಲಿ ವ್ಯಕ್ತವಾಗಿ ಉಪಪಾದಿಸಿ ಹೇಳುತ್ತಾರೆ. **ವಾಕ್ಯಂ ತೋರುಮ್**-ವಾಕ್ಯವೆಲ್ಲಾ. **ಒರು ಪ್ರಾರ್ಥನಾ ಪದತ್ತೈ ಅಧ್ಯಾಹರಿತ್ತು**-**"ಸ್ಯಾಮ್"** ಎಂಬ ಒಂದು ಪ್ರಾರ್ಥನೆಯನ್ನು ಸೂಚಿಸುವ ಪದವನ್ನು ಸೇರಿಸಿಕೊಳ್ಳುವದರಮೂಲಕ, **ತಿರುಮನ್ತ್ರ ಮುಳುಕ್ಕ** - ತಿರುಮಂತ್ರವು ಸಂಪೂರ್ಣವಾಗಿ, **ದ್ವಯತ್ತಿಲ್ ಉತ್ತರ ಖಣ್ಡಮ್ಪೋಲೇ** - ದ್ವಯಮಂತ್ರದ ಎರಡನೆಯ ಖಂಡವಾದ **ಶ್ರೀಮತೇ ನಾರಾಯಣಾಯ ನಮಃ** ಎಂಬುದರ ಹಾಗೆ, **ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿ** ರೂಪವಾದ, **ಪುರುಷಾರ್ಥ ಪ್ರಾರ್ಥನಾ ಪರಮಾಗುವುಮ್** - ಪುರುಷಾರ್ಥವನ್ನು ಅಪೇಕ್ಷಿಸೋಣವನ್ನು ಕುರಿತದ್ದೆಂದೂ, **ಅನುಸಂಧಿಪ್ಪರ್‌ಗಳ್** - ಅನುಸಂಧಾನ ಮಾಡುವರು. ಈ ಅರ್ಥ

**ಅಪ್ಪೋೇದುಮ್ ಸ್ವರೂಪಾನು ಸಂಧಾನಮ್ ಇದಿಲೇಯಂತರ್ಗತಮ್.**

---

ಉಂಟಾಗುವದಕ್ಕೆ ಯೋಜನೆಯು ಹೇಗೆ ಎಂದರೆ ಮಕಾರಾರ್ಥಃ ಅಹಂ ಅಕಾರವಾಚ್ಯಾಯ ನಾರಾಯಣಾಯಸ್ಯಾಮ್, ಮಃ ನ – ಎಂಬುದರಿಂದ ಮಕಾರ ವಾಚ್ಯನಾದ ನಾನು, ಪುರುಷಾರ್ಥಪರವಾದ ನಿತ್ಯ ಕೈಂಕರ್ಯಕ್ಕಾಗಿಯೇ ಆಗಬೇಕೆಂಬ ಪ್ರಾರ್ಥನೆಯು; ಮಃ ನ - ಆ ಕೈಂಕರ್ಯಗಳು ನನ್ನ ಪ್ರಯೋಜನಕ್ಕಾಗಿ ಅಲ್ಲವು; ಎಂಬದಾಗಿ ಅರ್ಥವು. ಇಂತಹ ನಿತ್ಯ ಕೈಂಕರ್ಯರೂಪ ಇಷ್ಟಪ್ರಾಪ್ತಿಯು ಉಂಟಾಗಬೇಕಾದರೆ, ಅನಿಷ್ಟನಿವೃತ್ತಿರೂಪ ಪಾಪಗಳ ನಾಶವೂ ಪ್ರಾಕೃತ ಶರೀರ ವಿಶ್ಲೇಷೆಯೂ ಅರ್ಥಾತ್ ಬೋಧಿತವು, ಅಥವಾ ಎರಡನೆಯ ವಾಕ್ಯವಾದ ನಮಸ್ಸಿನಿಂದಲೂ ಅನಿಷ್ಟ ನಿವೃತ್ತಿಯು ತೋರಿಬರುತ್ತದೆ; ಹೇಗೆಂದರೆ ಮಃ - ನನಗೆ, ನ - ಯಾವ ಅನಿಷ್ಟವೂ ಬೇಡ; ಹೀಗೆ ಪೂರ್ವ ವಾಕ್ಯದಿಂದ ಇಷ್ಟರೂಪ ಕೈಂಕರ್ಯ ಪ್ರಾಪ್ತಿಯೂ, ಎರಡನೆಯ ವಾಕ್ಯದಿಂದ ಅನಿಷ್ಟ ನಿವೃತ್ತಿಯೂ ಪ್ರಾರ್ಥಿಸಲ್ಪಟ್ಟವು. ಮಃ ನ, ಸ್ಯಾತ್ ಎಂದು ಅಧ್ಯಾಹಾರ ಮಾಡಿಕೊಳ್ಳಬಹುದೆಂಬುದು ಶ್ರೀಮಾನ್ ಶೆಟ್ಟಿಲೂರು ನರಸಿಂಹಾಚಾರ್ಯರ ಅಭಿಪ್ರಾಯವು ಚನ್ನಾಗಿದೆ. ಹೀಗೆ ಪುರುಷಾರ್ಥಪರವಾಗಿ ಅನ್ವಯಿಸಿಬಿಟ್ಟರೆ ಮೂಲ ಮಂತ್ರವು ಮುಖ್ಯವಾಗಿ ಚೇತನನ ಶೇಷಭೂತ ಸ್ವರೂಪವನ್ನು ಪ್ರದರ್ಶಿಸೋಣವು ತಪ್ಪಿಹೋಗುವದಿಲ್ಲವೋ ? ಎಂದರೆ ಆ ಯೋಜನೆಯಲ್ಲಿ ಸ್ವರೂಪವು ಅರ್ಥವಾಗಿ ತೋರಿಬರುತ್ತದೆಂದೂ, ಮಂತ್ರವನ್ನು ಎರಡುವಾಕ್ಯಗಳನ್ನಾಗಿ ಭಾವಿಸಿ ಪುರುಷಾರ್ಥ ಪರವಾಗಿ ಅನುಸಂಧಾನಮಾಡುವಾಗ ಸ್ವರೂಪವೂ, ಸ್ವರೂಪ ಪರವಾಗಿ ಅನುಸಂಧಾನಮಾಡುವಾಗ ಪುರುಷಾರ್ಥವೂ ತೋರಿಬರತ್ತವೆಂದೂ, ಮುಂದಿನ ವಾಕ್ಯಗಳಿಂದ ಉಪಪಾದಿಸುತ್ತಾರೆ.

ಅಪ್ಪೋೇದುಮ್ - ಎರಡು ವಾಕ್ಯವಾಗಿ ಭಾವಿಸಿ ಪುರುಷಾರ್ಥ ಪರವಾಗಿ ಪ್ರಾರ್ಥಿಸುವ ಸಂದರ್ಭದಲ್ಲಿ, ಸ್ವರೂಪಾನುಸಂಧಾನಮ್ – ತಾನು ಪರಮಾತ್ಮನಿಗೆ ನಿರುಪಾಧಿಕ ದಾಸನು, ಶೇಷಭೂತನು ಎಂಬ ತನ್ನ ಸ್ವರೂಪದ ಅನುಸಂಧಾನವು, ಇದಿಲೇ - ಈ ಯೋಜನೆಯಲ್ಲೇ, ಅಂತರ್ಗತಮ್ - ಅಡಗಿರುತ್ತದೆ. ಹೇಗೆಂದರೆ? ನಿತ್ಯ ಕೈಂಕರ್ಯವನ್ನು ಪ್ರಾರ್ಥಿಸಬೇಕಾದರೆ, ತಾನು ಯಾವಾಗಲೂ ಪರಮ ಪುರುಷನಿಗೆ ಶೇಷಭೂತನೆಂಬ ಅನುಸಂಧಾನವು ವ್ಯಕ್ತವಾದುದರಿಂದಲೇ (ಹಿಂದೆ ಶ್ರೀ ಯತಿವರ್ಯರ ದಿವ್ಯ ಸೂಕ್ತಿಯಲ್ಲಿ "ಮಾಂ ಏಕಾನ್ತಿಕಾತ್ಯಂತಿಕ ಪರಿಚರ್ಯಾಕರಣಾಯ ಪರಿಗೃಹ್ಣೀಷ್ವ ಎಂದು ಹೇಳಿರುವಹಾಗೆ) ತನ್ನ ಶೇಷತ್ವ ರೂಪ ಸ್ವರೂಪವೂ ಬೋಧಿತವು. ಆದುದರಿಂದಲೇ ಇದರಲ್ಲೇ ಸ್ವರೂಪವೂ ಅಂತರ್ಗತಮ್ ಎಂದು ಹೇಳಲ್ಪಟ್ಟಿತು.

ಮುಂದೆ ಸ್ವರೂಪಪರಯೋಜನೆಯಲ್ಲೂ ಪುರುಷಾರ್ಥವೂ ಬೋಧಿತ

**ಸ್ವರೂಪಮಾತ್ರೆ ಪರಮಾನಪ್ಪೋದುಮ್ ಪುರುಷಾರ್ಥ ವಿಶೇಷಮ್ ಸೂಚಿತಮ್. ಅದಿನುಪಾಯಮುಮ್ ಪ್ರಾರ್ಥನೈಯುಮ್ ತತ್ತತ್ಪ್ರಮಾಣ ವಶತ್ತಾಲೇ ವರುಮ್.**

---

ವೆಂದು ಹೇಳುತ್ತಾರೆ.—**ಸ್ವರೂಪ ಪರಮಾನಪ್ಪೋದುಮ್** – ಎರಡು ವಾಕ್ಯವಾಗಿ ಭಾವಿಸಿ ಶೇಷತ್ವಾನುಸಂಧಾನರೂಪಪ್ರಥಮಯೋಜನೆಯಲ್ಲೂ, **ಪುರುಷಾರ್ಥ ವಿಶೇಷಮ್** - ಶೇಷಿಗೆ ಕೈಂಕರ್ಯವನ್ನು ಮಾಡಬೇಕೆಂಬ ಪುರುಷಾರ್ಥವೂ **ಸೂಚಿತವು**. ವಾಕ್ಯದ್ವಯದ ಮೂಲಕ ಮೂರುಯೋಜನೆಯು, ಒಂದು ಸ್ವರೂಪ ಪರವಾಗಿಯೂ, ಇನ್ನೊಂದು ಉಪಾಯ ಪರವಾಗಿಯೂ, ಮತ್ತೊಂದು ಪುರುಷಾರ್ಥ ಪರವಾಗಿಯೂ, ಉಪಪಾದಿಸಲ್ಪಟ್ಟಿತು. ಹಿಂದಿನ ವಾಕ್ಯದಲ್ಲಿ ಪುರುಷಾರ್ಥ ಪರವಾದಾಗ ಸ್ವರೂಪವೂ ಅರ್ಥವಾಗಿ ಬೋಧಿತವೆಂದು ಹೇಳಿದರು. ಈಗ ಸ್ವರೂಪ ಪರವಾದಾಗಲೂ ಪುರುಷಾರ್ಥವು ಬೋಧಿತವೆಂದು ಹೇಳುತ್ತಾರೆ. ಹೇಗೆಂದರೆ ? **ಅಕಾರವಾಚ್ಯ ನಾರಾಯಣಾಯ** ಎಂಬುದರಿಂದ ಯಾವಾಗ ಶೇಷತ್ವವು ವ್ಯಕ್ತವಾಗಿ ಹೇಳಲ್ಪಟ್ಟಿತೋ, ಆ ಶೇಷತ್ವಕ್ಕನುಗುಣವಾದ ಕೈಙ್ಕರ್ಯವೂ ವ್ಯಕ್ತಚತುರ್ಥಿಯಿಂದ ಸೂಚಿತವು; ಅಥವಾ ಸ್ವರೂಪಕ್ಕೆ ಅನುಗುಣವಾದ ಪ್ರವೃತ್ತಿಯು ಇದ್ದೇ ಇರಬೇಕೆಂಬುದು ಸೂಚಿತವು ಎಂಬ ಭಾವವು. ಹೀಗೆ ಸ್ವರೂಪಪರವಾದಾಗ ಪುರುಷಾರ್ಥವೇನೋ ಸೂಚಿತವೆಂಬೋದನ್ನು ಒಪ್ಪೋಣ. ಪುರುಷಾರ್ಥವು, ಉಪಾಯಾನುಷ್ಠಾನ ಪುರುಷಾರ್ಥಗಳಿಲ್ಲದೆ ಹೇಗೆ ಸಿದ್ಧಿಸೀತು? ಅರ್ಥವಾಗಿ ಇತರ ಉಪಾಯಗಳನ್ನು ವಿಧಿಸುವ ಪ್ರಮಾಣಗಳ ಮೂಲಕವಾಗಿ ಊಹಿಸಬಹುದು ಎಂದು ತಿಳಿಸುತ್ತಾರೆ. ಪ್ರಥಮಯೋಜನೆಯ ಪ್ರಕಾರ ಸ್ವರೂಪ ಪರವಾದಾಗ **ಅದಿ ಉಪಾಯಮುಮ್ ಪ್ರಾರ್ಥನೈಯುಮ್** - ಆ ಪುರುಷಾರ್ಥ ಪ್ರಾಪ್ತಿಗೆ ಬೇಕಾದ ಉಪಾಯವೂ, ಆ ಪುರುಷಾರ್ಥ ಪ್ರಾರ್ಥನೆಯೂ **ಸಹ, ತತ್ತತ್ಪ್ರಮಾಣವಶತ್ತಾಲೇ** - ಆಯಾ ಪ್ರಮಾಣಗಳ ಮೂಲಕವಾಗಿ, **ವರುಮ್** – ಉಂಟಾಗುತ್ತವೆ. **"ಶರಣಮಹಂ ಪ್ರಪದ್ಯೇ ಶ್ರೀಮತೇ ನಾರಾಯಣಾಯ ನಮಃ" "ತವದಾಸ್ಯೈಕ ಭೋಗೀಸ್ಯಾಮ್" "ಶಾಶ್ವತೀ ಮಮ ಸಂಸಿದ್ಧಿರಿಯಂ ಪ್ರಹ್ವೀಭವಾಮಿಯತ್"** ಎಂಬ ಪ್ರಮಾಣಬಲದಿಂದ ತಾನೇ ತೋರಿ ಬರುತ್ತದೆಂಬುದು ತಾತ್ಪರ್ಯವು. ಇದು ಅರ್ಥವಾಗಿ ತೋರಿಬರುತ್ತದೆಂಬ ಭಾವವು.

**ಈ ವಾಕ್ಯದ್ವಯಪಕ್ಷದಲ್ಲಿ ಕೆಲವರು ಈ ಮನ್ತ್ರವು ಪ್ರಾಪ್ಯಪರವೂ ಹೌದು ಎಂದು ಹೇಳುವದರ ಅಭಿಪ್ರಾಯವನ್ನು ತಿಳಿಸುತ್ತಾರೆ.**

ಎರಡು ವಾಕ್ಯವೆಂದು ಭಾವಿಸಿ, ಸ್ವರೂಪಪರವಾಗಿಯೂ, ಉಪಾಯಪರವಾಗಿಯೂ, ಪುರುಷಾರ್ಥಪರವಾಗಿಯೂ ಮೂರು ಯೋಜನೆಗಳನ್ನು ತಿಳಿಸಿದರು. ಮತ್ತು ಸ್ವರೂಪಪರವಾದಾಗ ಪುರುಷಾರ್ಥವೂ ಸೂಚಿತವೆಂದೂ ಹೇಳಿದರು.

## ವಾಕ್ಯದ್ವಯಪಕ್ಷೇ, ಕೇಚಿತ್ ಮನ್ತ್ರಃ ಪ್ರಾಪ್ಯಪರ ಇತಿ ಕಥನ ತಾತ್ಪರ್ಯಮಾಹ

---

ಇಮ್ಮನ್ತ್ರೋತ್ಪದ್ಯಙ್ಗಳಾನ ಶೇಷತ್ವಜ್ಞಾನಾದಿಗಳ್ ಮುನ್ಬು ಪ್ರಾಪ್ತಙ್ಗಳಲ್ಲಾಮೈಯಾಲೇ, ಇಮ್ಮನ್ತ್ರಮ್ ಮುಳುಕ್ಕ ಪ್ರಾಪ್ಯ ಪರಮೆನ್ಬದು ಅನ್ಯಪರಮ್. ಎಙ್ಗನೇ ಎನ್ನಿಲ್? ಪ್ರಾಪ್ಯಪರಮೆನ್ಬದು ಪ್ರಾಪ್ಯಪ್ರತಿಪಾದಕ

---

ಆದರೆ ಕೆಲವರು ಪ್ರಾಪ್ಯಪರವೆಂದೂ ಹೇಳುವರು, ಹೀಗೆ ಯೋಜನೆಯನ್ನು ಕಲ್ಪಿಸಿ ಹೇಳಲು ಸಾಧ್ಯವಿಲ್ಲವಾದರಿಂದ, ಸಾಕ್ಷಾತ್ತಾಗಿ ಪ್ರಾಪ್ಯಪರವೆಂದು ಅರ್ಥ ಹೇಳಲು ಸಾಧ್ಯವಿಲ್ಲವಾಗಿ, ಪ್ರಾಪ್ಯಸಾಧಕ ಪರವೆಂದು ಲಾಕ್ಷಣಿಕಾರ್ಥವನ್ನು ಹೇಳಬೇಕೆಂದು ತಿಳಿಸುತ್ತಾರೆ. ಅದು ಹೇಗೆ ಎಂಬುದನ್ನು ಉಪಪಾದಿಸುತ್ತಾರೆ.— ಇಮ್ಮನ್ತ್ರೋತ್ಪದ್ಯಙ್ಗಳಾನ - ಈ ಮನ್ತ್ರದಿಂದ ಹುಟ್ಟುವ ಎಂದರೆ ತೋರಿ ಬರುವ, ಶೇಷತ್ವ ಜ್ಞಾನಾದಿಗಳ್ - ತಾನು ಪರಮಾತ್ಮನಿಗೆ ಶೇಷಭೂತನೆಂಬ ಸ್ವರೂಪದ ಜ್ಞಾನ, ಮತ್ತು ಆದಿಪದದಿಂದ ಉಪಾಯ ಪುರುಷಾರ್ಥಗಳ ಜ್ಞಾನವೂ ಬೋಧಿಸಲ್ಪಟ್ಟಿತು; ಮುನ್ಬು ಪ್ರಾಪ್ತಙ್ಗಳಲ್ಲಾಮೈಯಾಲ್ – ಹಿಂದೆ ಹೇಳಲ್ಪಡದೇ ಇರುವದರಿಂದ, ಇಮ್ಮನ್ತ್ರಮ್ – ಈ ಅಷ್ಟಾಕ್ಷರ ಮನ್ತ್ರವು, ಮುಳುಕ್ಕ - ಸಂಪೂರ್ಣವಾಗಿ, ಪ್ರಾಪ್ಯಪರಮೆನ್ಬದು – ಪ್ರಾಪ್ಯಪರವಾದುದೆಂದು ಕೆಲವು ಸಂಪ್ರದಾಯಸ್ಥರು ಹೇಳುವದು, ಅನ್ಯಪರಂ - ಮೂಲಮನ್ತ್ರವಲ್ಲದೆ ಆದರಿಂದ ಸಾಧಿಸಲ್ಪಡುವ ಬೇರೇ ಉಪಾಯಾನುಷ್ಠಾನ ಪರವಾದುದು. ಮೂಲಮನ್ತ್ರವು ಎರಡು ವಾಕ್ಯವೆನ್ನುವ ಭಾವನೆಯಿಂದ ಶೇಷತ್ವ, ಉಪಾಯತ್ವ ಪುರುಷಾರ್ಥತ್ವ ಪರವಾದುದಾಯಿತು. ಕೆಲವು ಸಂಪ್ರದಾಯಸ್ಥರು ನಾಲ್ಕನೇದು ತಾತ್ಪರ್ಯವೂ ಉಂಟು ಎಂದು ಭಾವಿಸಿ ಪ್ರಾಪ್ಯ ಪರವೆಂದೂ ಹೇಳುತ್ತಾರೆ. ಹೀಗೆ ಹೇಳುವ ಯೋಜನೆಯು ಸಾಧ್ಯವಿಲ್ಲವಾಗಿ ಪ್ರಾಪ್ಯಪರವೆಂದು ಹೇಳುವದರಲ್ಲಿ ಗೌಣಾಭಿಪ್ರಾಯದಿಂದ ಹಾಗೆ ಹೇಳುತ್ತಾರೆ, ಪ್ರಾಪ್ಯಪರವು ಮೂಲಮನ್ತ್ರವಾಗುವದಿಲ್ಲವಾದುದರಿಂದ, ಪ್ರಾಪ್ಯಪರವು ಪ್ರಪದನಾನುಷ್ಠಾನವಾದ ದ್ವಯಾದಿಗಳಾದುದರಿಂದ, ಈ ಮೂಲಮನ್ತ್ರವಾದರೋ, ಪ್ರಾಪ್ಯಪ್ರಯೋಜಕಪರ ವಾದುದರಿಂದ ಅನ್ಯಪರವೆಂದು ಇಲ್ಲಿ ಹೇಳಲ್ಪಟ್ಟಿತು. "ಯತ್ಪರಃಶಬ್ದಃ ಸಃಶಬ್ದಾರ್ಥಃ" ಎಂಬ ನ್ಯಾಯರೀತ್ಯಾ, ಪ್ರಾಪ್ಯಪರವೆಂದು ಹೇಳಬೇಕಾದರೆ ಯೋಜನೆಯಿಂದಲೇ ಶಬ್ದಗಳ ಮೂಲಕ ಆ ಅರ್ಥವು ಉಂಟಾಗಬೇಕು; ಪ್ರಾಪ್ಯಪರವಾಗಿ ಮೂಲಮಂತ್ರದ ಶಬ್ದದಿಂದ ತೋರಿಬರುವದಿಲ್ಲವು. ಆದರಿಂದುಂಟಾಗುವ ಅರ್ಥಗಳು ಸ್ವರೂಪೋಪಾಯ ಪುರುಷಾರ್ಥಗಳು; ಪ್ರಾಪ್ಯಪರವಾಗಿ ಶಬ್ದತಃ ಉಂಟಾಗುವದಿಲ್ಲವಾದುದರಿಂದ ಗೌಣವಾಗಿ ಭಾವಿಸಿ, ಪ್ರಾಪ್ಯಪ್ರಯೋಜಕಪರವೆಂದು ಅರ್ಥಮಾಡುವದು ಯುಕ್ತವಾದುದ

ಮೆನ್ರಪಡಿಯುನ್ರು; ಶಬ್ದತ್ತಾಲ್ ಉತ್ಪಾದ್ಯಮಾನಜ್ಞಾನಮ್ ಶಬ್ದತ್ತುಕ್ಕು ಪ್ರತಿಪಾದ್ಯಮನ್ರಿರೇ.

---

ರಿಂದ, ಹೀಗೆ ಪ್ರಾಪ್ಯ ಪರವೆಂದು ಹೇಳುವ ಸಂಪ್ರದಾಯಾರ್ಥವು ಪ್ರಾಪ್ಯ ಪ್ರಯೋಜಕಪರವೆಂಬ ಭಾವನೆಯಿಂದಲೇ ಎಂದು ತಿಳಿಸುತ್ತಾರೆ. ಈ ಚೇತನನು ಯಾವಾಗ ಸ್ವರೂಪತಃ ಪರಮಾತ್ಮನಿಗೆ ಶೇಷಭೂತನೆಂದಾಯಿತೋ, ಆಗ ಈ ಆತ್ಮಾವನ್ನು ಆತನಲ್ಲೇ ಸಮರ್ಪಿಸುವದೇ ನ್ಯಾಯವೆಂಬುದು ಏರ್ಪಟ್ಟು ಹಾಗೆ ಅನುಷ್ಠಿಸುವದರ ಮೂಲಕ ಪ್ರಾಪ್ಯ ಪ್ರಯೋಜಕ ಪರವಾಯಿತು ಎಂಬ ಭಾವವು. ಈ ಅಭಿಪ್ರಾಯವನ್ನೇ ಎಂದರೆ ಅದು ಹೇಗೆ ಅನ್ಯಪರವೆಂಬುದನ್ನು ಉಪಪಾದಿಸುತ್ತಾರೆ. ಎಙ್ಙನೇ ಎನ್ನಿಲ್? – ಅದು ಹೇಗೆ ಎಂದರೆ? ಪ್ರಾಪ್ಯ ಪರಮೆನ್ರದು - ಅವರುಗಳು ಹಾಗೆ ಪ್ರಾಪ್ಯಪರವೆಂದು ಹೇಳುವದರ ಅಭಿಪ್ರಾಯವು, ಪ್ರಾಪ್ಯಪ್ರತಿಪಾದಕ ಮೆನ್ರಪಡಿಯುನ್ರು - ಈ ಮೂಲಮಂತ್ರವೇ ಪ್ರಾಪ್ಯವನ್ನು ಪ್ರತಿಪಾದಿಸುತ್ತದೆ ಎಂಬರ್ಥವಲ್ಲವು; ಹೇಗೆಂದರೆ—ಶಬ್ದತ್ತಾಲ್ ಉತ್ಪಾದ್ಯಮಾನ ಜ್ಞಾನಮ್ - ಮೂಲಮನ್ತ್ರದಲ್ಲಿ ಶಬ್ದತಃ ಉಂಟಾಗುವ ಶೇಷತ್ವ ಜ್ಞಾನವು, ಶಬ್ದತ್ತುಕ್ಕು ಪ್ರತಿಪಾದ್ಯಮನ್ರಿರೇ - ಅದರಿಂದ ಉಂಟಾಗುವ ಫಲಕ್ಕೆ ಹೇತುವಾದೀತೇ ಹೊರತು, ತನಗೆ ತಾನೇ ಹೇತುವಾಗಲಾರದಷ್ಟೇ ಎಂಬ ಭಾವವು; ಆದುದರಿಂದಲೇ ಅನ್ಯಪರವೆಂದು ಹೇಳಲ್ಪಟ್ಟಿತು. ಹೀಗೆ ಗೌಣವಾಗಿ ಪ್ರಾಪ್ಯಪರವೆಂದರೆ ಪ್ರಾಪ್ಯಪ್ರಯೋಜಕಪರವೆಂದು ಅರ್ಥವು, ಸಾಕ್ಷಾತ್ತಾಗಿಯೂ ಪ್ರಾಪ್ಯಪರವೆಂದು ಅರ್ಥಮಾಡುವುದು ಅಸಮಂಜಸವಾದುದೆಂದು ಮೇಲಿನ ಉಪಪಾದನೆಯಿಂದ ತಿಳಿಸಿದರು. ಮೂಲಮಂತ್ರದಿಂದುಂಟಾಗುವದು ಭಗವಚ್ಛೇಷತ್ವ ಜ್ಞಾನವು. ಆ ಜ್ಞಾನದಿಂದುಂಟಾಗುವದು ಪ್ರಾಪ್ಯಪರವಾದ ಫಲವನ್ನು ಕೊಡುವ ಪ್ರಪದನಾನುಷ್ಠಾನವು. ಆದುದರಿಂದ ಈ ಪ್ರಪದನಾನುಷ್ಠಾನರೂಪ ಪ್ರಾಪ್ಯಫಲವನ್ನು ಕೊಡುವಂತಹದ್ದು, ಅದಕ್ಕೆ ಬೇಕಾದ ಜ್ಞಾನವನ್ನು ಕೊಡುವ ಮೂಲಮನ್ತ್ರದಲ್ಲೇ ಅದು ಹೇಗೆ ತೋರಿಬಂದೀತು? ಹೀಗೆ ಅಸಾಮಂಜಸ್ಯವು. ಹಾಗೆಯೇ ಕರ್ಮಯೋಗವು ಭಕ್ತಿಯೋಗಕ್ಕೆ ಸಾಧಕವು. ಭಕ್ತಿಯೋಗವು ಪ್ರಾಪ್ಯಫಲವನ್ನು ಕೊಡುತ್ತದೆ, ಹೀಗಿರುವಾಗ ಕರ್ಮಯೋಗವೇ ಹೇಗೆ ಪ್ರಾಪ್ಯಪರವಾದೀತು? ನಾಹಂ ವೇದೈಃ ಎಂಬಲ್ಲಿ ಅಸಮಂಜಸವೆಂದು ಹೇಗೆ ಹೇಳಿರುತ್ತದೋ, ಹಾಗೆಯೇ ಇಲ್ಲಿಯೂ ಎಂದು ಭಾವಿಸತಕ್ಕದ್ದು.

### ಮುಂದೆ ವಾಕ್ಯತ್ರಯವಾದರೆ ಐದು ವಿಧವಾದ ಯೋಜನೆಗಳು

---

ಮೂರು ವಾಕ್ಯಗಳಾಗಿ ಭಾವಿಸಿದರೆ ಪ್ರಥಮಕಲ್ಪದಲ್ಲಿ ಸ್ವರೂಪ ಪುರುಷಾರ್ಥಗಳು ಶಾಬ್ದವಾಗಿ ಉಪಾಯವು ಆರ್ಥವಾಗಿಯೂ, ದ್ವಿತೀಯ ಕಲ್ಪದಲ್ಲಿ

## ವಾಕ್ಯತ್ರಯಪಕ್ಷೇ ಪಂಚಪ್ರಕಾರಯೋಜನಾಃ

**೫. ತಿರುಮನ್ತ್ರಂ ಮೂನ್ರು ವಾಕ್ಯಮಾನಪ್ಪೋದು (೧) "ಸ್ವರೂಪಮುಮ್ ಪುರುಷಾರ್ಥಮುಮ್ ಶೊಲ್ಲ ಉಪಾಯಮುಮ್ ಅರ್ಥಮಾದಲ್, (೨) ಸ್ವರೂಪಮುಮ್ ಉಪಾಯಮುಮ್ ಶೊಲ್ಲ ಪುರುಷಾರ್ಥಮ್ ಅರ್ಥಮಾದಲ್ (೩) ಉಪಾಯಮುಮ್ ಪುರುಷಾರ್ಥಮುಮ್ ಶೊಲ್ಲ ಸ್ವರೂಪಮ್ ಅರ್ಥಮಾದಲ್, (೪) ಸ್ವರೂಪೋಪಾಯ ಪುರುಷಾರ್ಥಙ್ಗಳದ್ವೈವೆ ಶಬ್ದಙ್ಗಳಾಗಕ್ಕಡವದು.**

---

ಸ್ವರೂಪೋಪಾಯಗಳು ಶಾಬ್ದವಾಗಿ ಪುರುಷಾರ್ಥವು ಆರ್ಥವಾಗಿಯೂ, ತೃತೀಯ ಯೋಜನೆಯಲ್ಲಿ ಉಪಾಯ ಪುರುಷಾರ್ಥಗಳು ಶಾಬ್ದವಾಗಿ ಸ್ವರೂಪವು ಆರ್ಥವಾಗಿಯೂ, ನಾಲ್ಕನೆಯ ಪಕ್ಷದಲ್ಲಿ ಸ್ವರೂಪೋಪಾಯ ಪುರುಷಾರ್ಥಗಳು ಮೂರೂ ಶಾಬ್ದವಾಗಿಯೂ, ಐದನೆಯ ಪಕ್ಷದಲ್ಲಿ ಈ ಸ್ವರೂಪೋಪಾಯ ಪುರುಷಾರ್ಥಗಳ ಬೋಧವು ವ್ಯಾಸಸೂತ್ರಗಳಿಗೆ ಅನುಸಾರವಾದುದೆಂಬುದಾಗಿಯೂ, ಎಂದು, ಹೀಗೆ ಐದು ಯೋಜನೆಗಳನ್ನು ಉಪಪಾದಿಸಿ ಹೇಳುತ್ತಾರೆ—**ತಿರುಮನ್ತ್ರಂ ಮೂನ್ರು ವಾಕ್ಯಮಾನಪ್ಪೋದು** - ಮೂಲಮನ್ತ್ರವು ಮೂರು ವಾಕ್ಯವುಳ್ಳುದಾದರೆ(೧) ಸ್ವರೂಪ ಪುರುಷಾರ್ಥಗಳು, **ಶೊಲ್ಲ** – ಶಾಬ್ದವಾಗಿ ತೋರಿಬಂದರೆ, ಉಪಾಯವು **ಅರ್ಥಮಾದಲ್** - ಅರ್ಥವಾಗಿ **ಆಗಕ್ಕಡವದು** - ತೋರಿಬರುತ್ತದೆ ; (೨) ಸ್ವರೂಪೋಪಾಯಗಳು, **ಶೊಲ್ಲ** - ಶಾಬ್ದವಾಗಿ ತೋರಿ, ಪುರುಷಾರ್ಥವು ಆರ್ಥವಾಗಿ ತೋರಿಬರುತ್ತದೆ. (೩) ನೆಯ ಸಂದರ್ಭದಲ್ಲಿ ಉಪಾಯ ಪುರುಷಾರ್ಥಗಳು **ಶೊಲ್ಲ** - ಶಾಬ್ದವಾಗಿ ಹೇಳಲ್ಪಟ್ಟು, ಸ್ವರೂಪವು, **ಅರ್ಥಮಾದಲ್** – ಆರ್ಥವಾಗಿಯಾದರೂ ತೋರಿಬರುತ್ತದೆ. (೪) **ಸ್ವರೂಪೋಪಾಯ ಪುರುಷಾರ್ಥಙ್ಗಳ್**– ಇವು ಮೂರುಗಳ, **ಅದ್ವೈವೆ** - ಹೊಂದೋಣವು ಎಂದರೆ ಜೋಳೋಣವು **ಶಾಬ್ದಙ್ಗಳಾದಲ್ಕ್ಕಡವದು** – ಶಾಬ್ದವಾಗಿಯೇ ಯಾಗಲಿ ಉಂಟಾಗಬಹುದು. ಇದು ಪ್ರತಿಜ್ಞಾವಾಕ್ಯವು, ಅದು ಹೇಗೆ ಎಂದು ಎಙ್ಙನೇಎನ್ನಿಲ್ ? ಎಂದಾರಂಭಿಸಿ ಉಪಪಾದಿಸುತ್ತಾರೆ. ಹೀಗೆ ಅರ್ಥಮಾಡಲು ಸಂಪ್ರದಾಯದ ಬಲವುಂಟೋ ? ಎಂದರೆ ಪರಾಶರ ಭಟ್ಟರ ದಿವ್ಯಸೂಕ್ತಿಯನ್ನು ಉದಾಹರಿಸುತ್ತಾರೆ:—

### ಅದರಲ್ಲಿ ಮೊದಲನೆಯ ಯೋಜನೆಯು.

ಓಂ ನಮಃ ನಾರಾಯಣಾಯ ಇವು ಮೂರೂ, ಮೂರು ವಾಕ್ಯಗಳೆಂದು ಭಾವಿಸಿ, ಈ ಪ್ರಥಮ ಯೋಜನೆಯ ಅರ್ಥವನ್ನು ಶ್ರೀ ಪರಾಶರಭಟ್ಟರು ಅವರು ರಚಿಸಿದ ಅಷ್ಟಶ್ಲೋಕಿಯಲ್ಲಿ ಉಪಪಾದಿಸಿರುವದರಿಂದ ಅದನ್ನು ಮೊದಲು ಉದಾಹರಿಸಿ ತುಂಬಾ ವಿಸ್ತಾರವಾಗಿ ಉಪನ್ಯಾಸಮಾಡುತ್ತಾರೆ. ಆ ಶ್ಲೋಕಾರ್ಥವೇನೆಂದರೆ—**ಅಹಂ** - ನಾನು, **ಅಕಾರಾರ್ಥಾಯೈವ** - ಅಕಾರ ವಾಚ್ಯನಾದ ಶ್ರೀ ಮಹಾವಿಷ್ಣುವಿಗಾಗಿಯೇ ಆದ, **ಸ್ವಂ** - ಸ್ವತ್ತಾಗಿ ಇದ್ದೇನೆ ಎಂದರ ಶೇಷ

## ತತ್ರ ಪ್ರಥಮ ಯೋಜನಾ

ಎಜ್ಞನೇ ಯೆನ್ನಿಲ್–(೧)"ಅಕಾರಾರ್ಥಾಯೈವಸ್ವಮಹ ಮಥಮಹ್ಯಂ ನ ನಿವಹಾ ನರಾಣಾಂ ನಿತ್ಯಾನಾಮಯನಮಿತಿ ನಾರಾಯಣ ಪದವ್ ಯಮಾಹಾಸ್ಮೈ ಕಾಲಂ ಸಕಲಮಪಿ ಸರ್ವತ್ರ ಸಕಲಾ ಸ್ವವಸ್ಥಾ ಸ್ವಾವಿಸ್ಯುರ್ಮ

ಭೂತನಾಗದ್ದೇನೆ; ಇದು ಓಂ ಎಂಬುದರ ಅರ್ಥವಾಗಿ ಪ್ರಥಮ ವಾಕ್ಯವು. ಇದರಿಂದ ಸ್ವರೂಪವು ಹೇಳಲ್ಪಟ್ಟಿತು. ಅಥಮಹ್ಯಂ ನ - ಅನಂತರದಲ್ಲಿ ಅಹಂ - ನಾನು, ಮಹ್ಯಂ – ನನಗಾಗಿ ಅಲ್ಲವು; ಇದರಿಂದ ಜೀವಾತ್ಮನ ಸ್ವರೂಪವು ಶೋಧಿಸಲ್ಪಟ್ಟಿತು; ಇದು ನಮಃ ಎಂಬ ದ್ವಿತೀಯ ವಾಕ್ಯಾರ್ಥವು. ಮಃ ನ ಎಂಬ ಸಖಂಡನಮಸ್ಸಿನಿಂದುಂಟಾಗುವ ಅರ್ಥವು. ಹೀಗೆ ತಾನು ನಿರುಪಾಧಿಕ ಶೇಷಭೂತನೆಂಬುದು ಈ ಎರಡು ವಾಕ್ಯಗಳಿಂದ ಶಬ್ದಾತ್ ಹೇಳಲ್ಪಟ್ಟಿತು. ಮಿಕ್ಕ ಶ್ಲೋಕಭಾಗದಿಂದ ಮೂರನೆಯ ವಾಕ್ಯವಾದ ನಾರಾಯಣಾಯ ಎಂಬುದರ ಅರ್ಥವನ್ನು ಉಪಪಾದಿಸುತ್ತಾರೆ:—ಧಾತುವ್ಯುತ್ಪತ್ತಿಮೂಲಕ ನರಾಃ ಎಂದರೆ ನಿತ್ಯವಾದವು, ಅವುಗಳ ಸಮೂಹಗಳು ನಾರಾಃ ಎಂದು ಹೇಳಲ್ಪಡುವುವು ಅವುಗಳು ಯಾವುವೆಂಬುದೂ ಹಿಂದೆ ಹೇಳಲ್ಪಟ್ಟವು, ಆದರೂ ಪುನಃ ಹೇಳುವೆವು; ಜ್ಞಾನಾನಂದಾಮಲತ್ವಾದಿಗಳು, ಜ್ಞಾನಶಕ್ತ್ಯಾದಿಯುಗಳು, ವಾತ್ಸಲ್ಯ ಸೌಶೀಲ್ಯಾದಿಗಳು, ದಿವ್ಯಾತ್ಮಗುಣಗಳೂ, ದಿವ್ಯಮಙ್ಗಳ ವಿಗ್ರಹವೂ, ಕಾನ್ತಿಸೌಕುಮಾರ್ಯಾದಿಗಳೂ ದಿವ್ಯಮಙ್ಗಳ ವಿಗ್ರಹಗುಣಗಳೂ, ದಿವ್ಯಭೂಷಣಗಳೂ, ದಿವ್ಯಾಯುಧಗಳೂ ದಿವ್ಯ ಮಹಿಷಿಗಳೂ ನಿತ್ಯ ಸೂರಿಗಳೂ ಛತ್ರಚಾಮರಾದಿ ಪರಿಚರಣ ಸಾಧನಗಳೂ, ದ್ವಾರಪಾಲಕರೂ, ಗಣಾಧಿಪರೂ, ಮುಕ್ತರೂ, ನಿತ್ಯವಿಭೂತಿ, ಮೂಲಪ್ರಕೃತಿ, ಬದ್ಧಾತ್ಮರೂ, ಕಾಲವೂ, ಮಹದಾದಿ ವಿಕಾರಗಳೂ, ಅಂಡಗಳೂ, ಅಂಡಾಂತರ್ಗತಾದಿಗಳೂ, ಈ ಕೂನೆಯಲ್ಲಿ ಹೇಳಿದ ಮೂರೂ ಪ್ರವಾಹತಃ ನಿತ್ಯಗಳು; ಹಿಂದೆ ಹೇಳಿದವೆಲ್ಲಾ ಸ್ವರೂಪತಃ ನಿತ್ಯಗಳು. ಇಂತಹ ನಾರಾಣಾಂ ಅಯನಂ–ನಾರಾಯಣಃ ಎಂಬ ತತ್ಪುರುಷ ಸಮಾಸವೇನು ನಾರಾಃ ಅಯನಂ ಆಧಾರೋ ಯಸ್ಯಸಃಎಂಬಬಹುವ್ರೀಹಿ ಸಮಾಸವೇನು, ಇವುಗಳಿಂದ ಬೋಧಿತವಾದ ಪ್ರಾಪ್ಯ ಪ್ರಾಪಕನಾಗಿಯೂ ಆಧಾರನಾಗಿಯೂ ಅಂತರ್ಯಾಮಿಯಾಗಿಯೂ ಸೌಲಭ್ಯಾದಿ ಗುಣಯುಕ್ತನಾಗಿಯೂ ಪರಸ್ವರೂಪನಾಗಿಯೂ ಇರುವವನನ್ನು ಬೋಧಿಸುವ, ಯಂ - ಯಾವ ಪ್ರಸಿದ್ಧನಾದ ಪರಮಪುರುಷನಾದ ಶ್ರೀ ಮಹಾ ವಿಷ್ಣುವನ್ನು ಬೋಧಿಸುತ್ತದೋ, ಅಸ್ಮೈ - ಅಂತಹ ನಾರಾಯಣನಿಗೇನೇ, ಸಕಲಂಕಾಲಂ - ಸಮಸ್ತ ಕಾಲದಲ್ಲೂ, ಸರ್ವತ್ರ - ಎಲ್ಲಾ ಪ್ರದೇಶದಲ್ಲೂ, ಸಕಲಾಸ್ವವಸ್ಥಾಸು - ಎಲ್ಲಾ ಅವಸ್ಥೆಗಳಲ್ಲೂ, ಮಮ-ನಾನು ಶೇಷನೆಂಬ

(೧) ಅಷ್ಟ ಶ್ಲೋಕಿಯ ೩ನೆಯ ಶ್ಲೋ.

**ಸಹಜ ಕೈಙ್ಕರ್ಯವಿಧಯಃ" ಎನ್ಗಿರಪಡಿಯೇ, ಪ್ರಣವಮುಮ್ ನಮಸ್ಸುಮ್ ಸ್ವರೂಪತ್ತೈ ಶೋಧಿಕ್ಕಿರನ. ಮೂನ್ರಾಮ್ಪದಮ್ ಪ್ರಣವತ್ತಿಲ್ ಸೊನ್ನ ತಾದರ್ಥ್ಯತ್ತೈ ಪುರಸ್ಕರಿತ್ತುಕ್ಕೊಂಡು ಅಧ್ಯಾಹೃತಮಾನ ಕ್ರಿಯಾಪದತ್ತೋಡೆ ಕೂಡಿ ಪುರುಷಾರ್ಥ ಪ್ರಾರ್ಥನಾರ್ಥಮ್.**

---

**ಸ್ವರೂಪ** ಜ್ಞಾನವನ್ನು ಹೊಂದಿದ ನನಗೆ, **ಸಹಜಕೈಙ್ಕರ್ಯ ವಿಧಯಃ** - ಸ್ವಾಭಾವಿಕಗಳಾದ ದಾಸನು ಮಾಡತಕ್ಕ ಕೈಙ್ಕರ್ಯವಿಧಿಗಳು ಎಂದರೆ ಕೈಙ್ಕರ್ಯಾನುಷ್ಠಾನಗಳು, **ಆವಿಸ್ಯುಃ** - ಪ್ರಾರಬ್ಧ ಕರ್ಮಾದಿ ಪ್ರತಿಬಂಧಕಗಳಿದ್ದರೂ ಕೂಡ, ಆವಿರ್ಭವಿಸಲಿ. ಇದು **ನಾರಾಯಣಾಯ** ಎಂಬಲ್ಲಿರುವ ವ್ಯಕ್ತ ಚತುರ್ಥಿಯ ಅರ್ಥವು.". **ಎನ್ಗಿರಪಡಿಯೇ** - ಎಂದು ಹೇಳಿರುವ ಹಾಗೆ, **ಪ್ರಣವಮುಮ್ ನಮಸ್ಸುಮ್** – ಓಂ ನಮಃ ಎಂಬ ಎರಡು ಪದಗಳು ಎಂದರೆ ಎರಡು ವಾಕ್ಯಗಳು, **ಸ್ವರೂಪತ್ತೈ**-ಜೀವಾತ್ಮನು ಪರಮಾತ್ಮನಿಗೇನೇ ನಿರುಪಾಧಿಕ ಶೇಷಭೂತನೆಂಬ ಸ್ವರೂಪವನ್ನು, **ಶೋಧಿಕ್ಕಿರನ** – ವಿವೇಚನೆಯನ್ನು ಮಾಡಿ ಹೇಳುತ್ತದೆ. **ಮೂನ್ರಾಮ್ಪದಮ್** - ಮೂರನೇ ನಾರಾಯಣಾಯ ಎಂಬ ವಾಕ್ಯವು, **ಪ್ರಣವತ್ತಿಲ್ ಸೊನ್ನ** ಪ್ರಣವದಲ್ಲಿಹೇಳಲ್ಪಟ್ಟ, **ತಾದರ್ಥ್ಯತ್ತೈ ಪುರಸ್ಕರಿತ್ತುಕ್ಕೊಂಡು**-ಮಕಾರ ಶಬ್ದವಾಚನಾದ ಜೀವಾತ್ಮನು ಅಯ್ಯೆವ - ಶ್ರೀ ಮಹಾವಿಷ್ಣುವಿಗಾಗಿಯೇ ಎಂದು **ತಾದರ್ಥ್ಯತ್ತೈ** - ಶೇಷಭಾವವನ್ನು, **ಪುರಸ್ಕರಿತ್ತುಕ್ಕೊಂಡು** - ಮೂಲ ಮಾಡಿಕೊಂಡು, **ಅಧ್ಯಾಹೃತಮಾನ ಕ್ರಿಯಾಪದತ್ತೋಡು** - "ಆವಿಸ್ಯುಃ" ಅಥವಾ "**ಭವೇಯುಃ**" ಎಂದು ಅಧ್ಯಾಹಾರಮಾಡಿಕೊಳ್ಳಬೇಕಾದ ಕ್ರಿಯಾಪದದೊಂದಿಗೆ **ಪುರುಷಾರ್ಥಪ್ರಾರ್ಥನಾರ್ಥಮ್** - ಪುರುಷಾರ್ಥ ಪ್ರಾರ್ಥನೆಯ ತಾತ್ಪರ್ಯವುಳ್ಳದು. ಹೀಗೆ ಸ್ವರೂಪ ಪುರುಷಾರ್ಥಗಳೆರಡೂ ಶಾಬ್ದವಾಗಿಯೇ ತೋರಿಬರುತ್ತವೆ ಎಂಬುದು ತಾತ್ಪರ್ಯವು.

ಹೀಗೆ "**ನಾರಾಯಣಾಯಭವೇಯುಮ್**" ಎಂದು ಮೂರನೆಯ ವಾಕ್ಯದಿಂದ ನಿತ್ಯಕೈಙ್ಕರ್ಯಪ್ರಾಪ್ತಿರೂಪ ಪುರುಷಾರ್ಥವು ಬೋಧಿತವೆಂದೇನೋ ಹೇಳಲ್ಪಟ್ಟಿತು. ಆದರೆ ಅನಿಷ್ಟನಿವೃತ್ತಿಯಿಲ್ಲದೆ ಪುರುಷಾರ್ಥ ಪ್ರಾಪ್ತಿ ಇಲ್ಲವಲ್ಲಾ ಎಂದರೆ, ಅದೂ ಅರ್ಥಸ್ವಭಾವದಿಂದಲೇ ತೋರಿಬರುತ್ತದೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ— **ಅಪ್ಪೋದು** - ಆ ಯೋಜನೆಯಲ್ಲಿ, ನಮಸ್ಸು ಈತನ ಸ್ವರೂಪವಾದ ಶೇಷಭಾವವನ್ನು ಉಪಪಾದಿಸುತ್ತದೆಂಬುದು ಸ್ಥಾಪಿತವಾದನಂತರ, **ಅನಿಷ್ಟನಿವೃತ್ತಿ** ಪ್ರಾರ್ಥನೈ.ಶೇಷಭೂತನು ಪರಮಶೇಷಿಗೆ ನಿತ್ಯಕೈಙ್ಕರ್ಯಮಾಡುವದೇ ಸ್ವರೂಪವಾದುದರಿಂದ ಅಂತಹ ಕೈಙ್ಕರ್ಯಪ್ರಾಪ್ತಿಯು ಇಷ್ಟಪ್ರಾರ್ಥನೆಯೆಂದು ಏರ್ಪಟ್ಟು, ಅದು ಅನಿಷ್ಟ ನಿವೃತ್ತಿಯಿಲ್ಲದೆ, ಅಹಂಕಾರ ಮಮಕಾರಗಳೂ ಪಾಪಗಳೂ ತೊಲಗದೆ ಉಂಟಾಗಲಾರದಾದುದರಿಂದ, ಅಂತಹ ಅನಿಷ್ಟ ನಿವೃತ್ತಿಯ

**ಅಪ್ಪೋದು ಅನಿಷ್ಟನಿವೃತ್ತಿ ಪ್ರಾರ್ಥನೈ ಅರ್ಥಸ್ವಭಾವತ್ತಾಲೇ ವರಕ್ಕಡವದು. ದ್ವಯತ್ತಿಲುಮ್, "ಭವಾಂಸ್ತು ಸಹವೈದೇಹ್ಯಾ" ಇತ್ಯಾದಿಗಳಿಲುಮ್ ಶೊಲ್ಲುಗಿರಪಡಿಯೇ ಕೈಂಕರ್ಯ ಪ್ರತಿಸಂಬಂಧಿಯುಮ್ ಸಪತ್ನೀಕನಾನ ಪಡಿಯಾಲೇ (ಇಜ್ಜುವರ್) ಸಲಕ್ಷ್ಮೀಕನಾನ ನಾರಾಯಣ್ಣ ಪೊರುಟ್ಟಾವೆನ್ನೆನ್ರಪಡಿ.**

---

ಪ್ರಾರ್ಥನೆಯು ಅರ್ಥಸ್ವಭಾವತ್ತಾಲೇ ವರಕ್ಕಡವದು - ಅರ್ಥವಾಗಿ ತೋರಿಬರುವಂತಾದ್ದಾಗುವುದು. "ಮತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್" (ಗೀ.೧೮ ೬೨) ಈ ಅನಿಷ್ಟನಿವೃತ್ತಿಯಿಲ್ಲದೆ, ಮೋಕ್ಷಪ್ರಾಪ್ತಿ ಇಲ್ಲವೇ, ಮತ್ತು ಈ ಅನಿಷ್ಟ ನಿವೃತ್ತಿಗೆ ಭಕ್ತಿಯೋಗವನ್ನು ಅನುಷ್ಠಿಸಲು ತನಗೆ ಶಕ್ತಿಯಿಲ್ಲವೇ ಎಂದಲ್ಲವೇ ಅರ್ಜುನನು ಶೋಕಿಸಿದುದು? ಅದಕ್ಕೆ ಕೃಪಾಸಾಗರನು ಶರಣಾಗತಿಯನ್ನುಪದೇಶಿಸಿ, ಮಾಶುಚಃ ಎಂದು ಸಮಾಧಾನವನ್ನು ಮಾಡಿದುದು? ಎಂಬಲ್ಲೂ ಮತ್ತು, ಪುಣ್ಯಪಾಪೇವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ (ಮುಂ.೩-೧ .೩) ಎಂಬಲ್ಲಿಯೂ ಹೇಳಿರುವ ಹಾಗೆ, ತೋರಿಬರುತ್ತದೆ.

ಮುಂದೆ ಈ ಜೀವಾತ್ಮನು ಪ್ರಾರ್ಥಿಸುವ ನಿತ್ಯಕೈಂಕರ್ಯವು ನಾರಾಯಣನಿಗೆ ಮಾತ್ರವೇ ಅಥವಾ, ಲಕ್ಷ್ಮೀನಾರಾಯಣರಿಬ್ಬರೂ ಪರಮಪದದಲ್ಲಿ ಒಡ್ಡೋಲಗದಲ್ಲಿ ದಿವ್ಯಪರ್ಯಂಕದಲ್ಲಿ ಕೂತಿರುವಾಗ, ಇಬ್ಬರಿಗೂ ಸೇರಿದುದೇ? ಎಂಬ ಸಂದೇಹದಲ್ಲಿ, ಈ ಪ್ರಾರ್ಥನೆಯು ಇಬ್ಬರಿಗೂ ಕೈಂಕರ್ಯಮಾಡಬೇಕೆಂಬುದನ್ನೇ ಉಪದೇಶಿಸುತ್ತಾರೆಂದು, ಹಾಗೆಯೇ ದ್ವಯದ ಉತ್ತರ ಖಂಡದಲ್ಲಿ "ಶ್ರೀಮತೇ ನಾರಾಯಣಾಯ" ಸಲಕ್ಷ್ಮೀಕನಾದ ನಾರಾಯಣನಿಗೇನೇ ತಾನು ಶೇಷಭೂತನಾದುದರಿಂದ ಶೇಷವೃತ್ತಿಯು ಇಬ್ಬರಿಗೂ ಸೇರಿದುದು ಎಂಬ ಭಾವವನ್ನು ಮುಂದಿನ ವಾಕ್ಯದಿಂದ ಹೇಳುತ್ತಾರೆ; ಅದರ ಸಮರ್ಥನೆಗಾಗಿ ಮಹರ್ಷಿವಾಕ್ಯವನ್ನು ಉದಾಹರಿಸುತ್ತಾರೆ- **ದ್ವಯತ್ತಿಲುಮ್** – ದ್ವಯದ ಉತ್ತರ ಖಂಡವಾದ ಶ್ರೀಮತೇನಾರಾಯಣಾಯ ಎಂಬಲ್ಲೂ, ಮತ್ತು **"ಭವಾಂಸ್ತು ಸಹವೈದೇಹ್ಯಾ" ಇತ್ಯಾದಿಗಳಿಲುಮ್** ರಾ. ಅಯೋಧ್ಯಾ. ೩೧.೦೭) ಎಂಬ ಲಕ್ಷ್ಮಣೋಕ್ತಿಯೇ ಮೊದಲಾದುವುಗಳಲ್ಲೂ, **ಶೊಲ್ಲುಗಿರಪಡಿಯೇ** - ಹೇಳಿರುವ ರೀತಿಯಲ್ಲಿ, **ಕೈಂಕರ್ಯಪ್ರತಿಸಂಬಂಧಿಯುಮ್.** ಕೈಂಕರ್ಯದಲ್ಲಿ ಅನ್ವಯವು, **ಸಪತ್ನೀಕನಾನಪಡಿಯಾಲೇ** - ನಾರಾಯಣನು ಶ್ರೀಮನ್ನಾರಾಯಣನಾಗಿ ನಿತ್ಯಾನಪಾಯನಿಯಾದ ಹೆಂಡತಿಯಾದ ಲಕ್ಷ್ಮಿಯೊಂದಿಗೇನೇ ಇರುವದರಿಂದ, **ಇಜ್ಜುವುಮ್**-ಈ ಕೈಂಕರ್ಯ ಪ್ರಾರ್ಥನಾಸಂದರ್ಭದಲ್ಲೂ, **ಸಲಕ್ಷ್ಮೀಕನಾನ ನಾರಾಯಣ್ಣ ಪೊರುಟ್ಟಾ ವೇನೆನ್ರಪಡಿ**-ಲಕ್ಷ್ಮೀ ಸಹಿತನಾದ ನಾರಾಯಣನ ಉದ್ದೇಶವಾಗಿಯೇ ಆಗುವೆನು ಎಂದು ಹೇಳಿದಂತಾಯಿತು, **ಎನ್ರಪಡಿ** ಎಂಬುದರಿಂದ ಶಾಬ್ದವಾಗಿ ತೋರಿಬಾರದೇ ಇದ್ದರೂ, ಅರ್ಥವಾಗಿ ತೋರಿಬರುತ್ತದೆಂಬ ತಾತ್ಪರ್ಯವು. ಮೇಲಿನ ವಾಕ್ಯದಲ್ಲಿ **ಇತ್ಯಾದಿಗಳುಮ್** ಎಂಬ

ಪ್ರಯೋಗವು, "ಭವಾಂಸ್ತು ಸಹವೈದೇಹ್ಯಾ" ಎಂಬ ಶ್ಲೋಕದಲ್ಲಿ ಮಾತ್ರವೇ ಅಲ್ಲವು. ಇತ್ತೂ ಅನೇಕ ಪ್ರಮಾಣಗಳೂ ಸಾಂಪ್ರದಾಯಿಕೋಕ್ತಿಗಳೂ ಉಂಟೆಂಬ ಭಾವವನ್ನು ಸೂಚಿಸುತ್ತಿದೆ. "ಅಥಮಿಥುನ ಪರಂ ಪ್ರಾಪ ಮೇನಂ ಪ್ರಸಿದ್ಧಂ" ಎಂಬ, ಮತ್ತು "ಇಷ್ಟೋಪಾಯತಯಾ ಶ್ರಿಯಾಃ ಸಹಿತಾ ಯಾತ್ಮೇಶ್ವರಾ ಯಾರ್ಥಯೇ ಕರ್ತುಂ ದಾಸ್ಯಮಶೇಷ ಮಪ್ರತಿಹತಂ ನಿತ್ಯಂ ತ್ವಹಂನಿರ್ಮಮಃ" ಎಂಬ ಶ್ರೀ ಪರಾಶರ ಭಟ್ಟರ ದಿವ್ಯಸೂಕ್ತಿಗಳು ಈ ಆದಿಪದದಿಂದ ಅನುಸಂಧೇಯ ಗಳು. ಹಾಗೆಯೇ "ಪ್ರಾಚಪಪೇಕಶೇಷೀ" "ಉಭಯಾಧಿಷ್ಠಾನಂ ಚೈಕ ಶೇಷಿತ್ವಂ" ಇತ್ಯಾದಿ ಪ್ರಮಾಣಗಳೂ ಅನುಸಂಧೇಯಗಳು. "ಭವಾಂಸ್ತು ಸಹ ವೈದೇಹ್ಯಾ ಗಿರಿಸಾನುಷುರಂಸ್ಯಸೇ। ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವ ಪತಶ್ಚತೇ" ಎಂಬುದು ಮೇಲೆ ಉದಾಹರಿಸಲ್ಪಟ್ಟ ರಾಮಾಯಣದ ಪೂರಾ ಶ್ಲೋಕವು. ಇದರರ್ಥವೇನೆಂದರೆ—ಇದು ಲಕ್ಷ್ಮಣವಾಕ್ಯವು. ಶ್ರೀರಾಮಚಂದ್ರ ಪ್ರಭುವು ಲಕ್ಷ್ಮಣನನ್ನು ವನವಾಸಕ್ಕೆ ಬರಬೇಡ, ಅಯೋಧ್ಯೆಯಲ್ಲೇ ಇರು ಎಂದು ಹೇಳಿದುದಕ್ಕೆ ಬದಲಾಗಿ ಈ ವಾಕ್ಯದ ಹಿಂದೆ ಹೇಳುತ್ತಾನೆ—ನಿರುಪಾಧಿಕ ಶೇಷಿ ಯಾದ ರಾಮನನ್ನು ನಿರುಪಾಧಿಕ ಶೇಷಭೂತನಾದ ಲಕ್ಷ್ಮಣನು ತನ್ನ ಸ್ವರೂಪ ಕ್ಕನುಗುಣವಾಗಿ ಪ್ರಾರ್ಥಿಸುತ್ತಾನೇನೆಂದರೆ "ಕುರುಷ್ವಮಾಮನುಚರಂ ವೈಧರ್ಮ್ಯಂ ನೇಹ ವಿದ್ಯತೇ। ಕೃತಾರ್ಥೋಽಹಂ ಭವಿಷ್ಯಾಮಿ ತವಚಾರ್ಥಃ ಪ್ರಕಲ್ಪತೇ" ಮಾಂ - ನಿನಗೆ ಸಹಜ ಶೇಷಭೂತನಾದ ನನ್ನನ್ನು, ಅನುಚರಂ - ವನದಲ್ಲಿ ನಿನಗೆ ಕೈಂಕರ್ಯ ಮಾಡುವ ದಾಸನನ್ನಾಗಿ, ಕುರುಷ್ವ - ಮಾಡಿಕೋ, ಇಹ - ಹೀಗೆ ನೀನು ಮಾಡಿಕೊಳ್ಳುವ ಸಂದರ್ಭದಲ್ಲಿ, ವೈಧರ್ಮ್ಯಂ - ಸೇವ್ಯ ಸೇವಕ ಧರ್ಮಕ್ಕೆ ವಿರುದ್ಧವಾದುದು, ನವಿದ್ಯತೇ - ಏನೂ ಇರುವುದಿಲ್ಲವು; ನೀನು ನಿರುಪಾಧಿಕ ಸರ್ವಶೇಷಿಯಾದುದರಿಂದ ನೀನು ಸಹಜ ಸ್ವಾಮಿಯು; ನಾನಾದರೋ ನಿನಗೆ ಸ್ವರೂಪತಃ ಸಹಜ ದಾಸಭೂತನಾಗಿ ಸೇವಕನಾಗಿರತಕ್ಕವನು. ಆ ಕಾರಣ ದಿಂದ ವೈಧರ್ಮ್ಯವಿಲ್ಲವು. ಅಣ್ಣನಾದ ತನಗೂ ತನ್ನ ಹೆಂಡತಿಗೂ ದಾಸವೃತ್ತಿ ಯನ್ನು ಮಾಡುವದಕ್ಕಾಗಿ ತಮ್ಮನನ್ನು ಕರೆದುಕೊಂಡು ಹೋದನೆಂಬ ವೈಧರ್ಮ್ಯ ದಿಂದ ನಿನಗೆ ಲೋಕಾಪವಾದ ಭಯಕ್ಕೆ ಕಾರಣವಿಲ್ಲವು; ಏಕೆಂದರೆ ನಾನು ನಿನಗೆ ಸಹಜ ದಾಸನು ಶೇಷಭೂತನು. ನೀನು ಸ್ವಾಭಾವಿಕ ಶೇಷಿಯು. ಶೇಷಭೂತನು ತನ್ನ ಶೇಷಿಗೆ ಸರ್ವವಿಧ ಕೈಂಕರ್ಯವನ್ನುವನ್ನು ಮಾಡುವದೇ ಸ್ವರೂಪವಾಗಿ, ಅದೆಲ್ಲಾ ಶೇಷಿಯ ಪ್ರಯೋಜನಕ್ಕಾಗಿಯೇ, ಆದುದರಿಂದ ನನ್ನನ್ನು ಕರೆದುಕೊಂಡು ಹೋಗು ಎಂದು ಪ್ರಾರ್ಥಿಸುತ್ತಾನೆ. ಅಥವಾ ಲೋಕರೀತ್ಯಾ ನೋಡಿದರೂ ವೈಧರ್ಮ್ಯವಿಲ್ಲವು. ಜ್ಯೇಷ್ಠಭ್ರಾತಾ ಪಿತೃಸಮನಾಗಿ, ಅನುಜನು ಪುತ್ರಸಮಾನನಾಗಿ ಪುತ್ರನು ಪಿತಾವಿಗೂ ಮಾತಾವಿಗೂ ಕೈಂಕರ್ಯವನ್ನೆಸಗುವದರಲ್ಲಿ ವೈಧರ್ಮ್ಯವೇನಿದೆ ಎಂಬ ಭಾವವೂ ತೋರುತ್ತದೆ. ಆದುದರಿಂದ ಭವಾಂಸ್ತುಸಹವೈದೇಹ್ಯಾ -

ಇಙ್ಙನೆ "ನಾರಾಯಣಾಯ" ಎಂಗಿರವಿದುಕ್ಕು ಕ್ರಿಯಾಪೇಕ್ಷೈ ಯುಂಡಾಗೈಯಾಲ್ ಔಚಿತ್ಯತ್ತಾಲೇ "ಭವೇಯಮ್" ಎನ್ನೊರು ಪದಂ ಅದ್ಧ್ಯಾಹಾರ್ಯಮ್.

---

ನೀನಾದರೋ ನಿನ್ನ ಪತ್ನಿಯಾದ ಸೀತೆಯೊಂದಿಗೆ, ಇವರಿಂದ ಲಕ್ಷ್ಮೀನಾರಾಯಣರು ಹೇಳಲ್ಪಟ್ಟರು, ಗಿರಿಸಾನುಷು ರಂಸ್ಯಸೇ - ಪರ್ವತ ತೊಪ್ಪಲುಗಳಲ್ಲಿ ವಿಹರಿಸುತ್ತೀಯೇ, ಇದರಿಂದ ಲಕ್ಷ್ಮೀನಾರಾಯಣರು ಈ ಲೀಲಾವಿಭೂತಿಯಲ್ಲಿ ರಮಿಸುತ್ತಾರೆಂಬ ಭಾವವು ದ್ಯೋತಿತವು. ಅಹಂ - ಸನ್ನಸ್ವರೂಪವಾದ ಶೇಷತ್ವಜ್ಞಾನವುಳ್ಳ ನಾನು, ಜಾಗ್ರತಸ್ಸ್ವಪತಶ್ಚತೇ-ಎಚ್ಚರವಾಗಿರುವ ಅಥವಾ ನಿದ್ರೆಮಾಡುತ್ತಿರುವ ತೇ - ಸಹವೈದೇಹ್ಯಾಭವರ್ಾ ಎಂದು ಇರುವದರಿಂದ ಸೀತಾಯುಕ್ತನಾದ ನಿನಗೆ ಸರ್ವಂ - ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಕೈಂಕರ್ಯಗಳನ್ನೂ ಕರಿಷ್ಯಾಮಿ ಮಾಡುವೆನು. ಹೀಗೆ ಈ ಚೇತನನು ಮಾಡುವ ಸರ್ವವಿಧ ಕೈಂಕರ್ಯವೂ ಲಕ್ಷ್ಮೀನಾರಾಯಣರಿಬ್ಬರಿಗೂ ಎಂಬ ಶಾಸ್ತ್ರಾರ್ಥವು ಇಲ್ಲಿ ಉಪದೇಶಿಸಲ್ಪಟ್ಟಿತು.

ಆಗಲಿ, ನಾರಾಯಣಾಯ ಎಂಬುದಕ್ಕೆ ಈ ಚೇತನನು ಮಾಡುವ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ವಿವಿಧ ಕೈಂಕರ್ಯಗಳೆಲ್ಲಾ, ನಿತ್ಯಾನಪಾಯಿನಿಯಾದ ಲಕ್ಷ್ಮಿಯೊಂದಿಗೇನೇ ನಾರಾಯಣನು ಇರುವದರಿಂಲೂ, ದಿವ್ಯವೈಕುಂಠದಲ್ಲಿ ಲಕ್ಷ್ಮೀಸಹಿತನಾಗಿಯೇ ಪರವಾಸುದೇವನಿರುವದರಿಂದಲೂ, ಇಬ್ಬರೂ ಈ ಚೇತನನಿಗೆ ಶೇಷಿಗಳಾದುದರಿಂದಲೂ, ಇಬ್ಬರಿಗೂ ಅನ್ವಯಿಸತಕ್ಕದ್ದೆಂಬುದೇನೋ ಒಪ್ಪೋಣ. ಈ ನಾರಾಯಣಾಯ ಎಂಬ ಮೂರನೆಯ ಶಬ್ದವು ವಾಕ್ಯವೆಂದು ಹೇಳಲ್ಪಟ್ಟಿದುದು ಹೇಗೆ? ಕ್ರಿಯಾಪದವೇ ಇಲ್ಲವಲ್ಲಾ? ಎಂದರೆ "ಭವೇಯಮ್" ಎಂಬ ಒಂದು ಪದವನ್ನು ಅಧ್ಯಾಹಾರಮಾಡಿಕೊಂಡರೆ ತಾತ್ಪರ್ಯವುಪೂರ್ಣತೆಯನ್ನು ಹೊಂದುತ್ತದೆಂದು ಉಪದೇಶಿಸುತ್ತಾರೆ—'ಇಙ್ಙನೆ - ಈ ಸಂದರ್ಭದಲ್ಲೂ, ನಾರಾಯಣಾಯ, ಎಂಗಿರುತ್ತುಕ್ಕು - ಎಂಬುವದಕ್ಕೆ, ಕ್ರಿಯಾಪೇಕ್ಷೈಯುಂಡಾಗೈಯಾಲ್ - ಈ ವಾಕ್ಯ ಪೂರಣಕ್ಕೆ ಕ್ರಿಯಾಪದದ ಅಪೇಕ್ಷೆಯು ತೋರಿಬರುವದರಿಂದ, ಔಚಿತ್ಯತ್ತಾಲೇ - ಔಚಿತ್ಯದಿಂದ ಎಂದರೆ ಸಾಮಂಜಸ್ಯವು ಉಂಟಾಗುವದಕ್ಕಾಗಿ, "ಭವೇಯಮ್" ಎನ್ನೊರುಪದಂ - ಎಂಬ ಒಂದು ಪದವನ್ನು ಅಧ್ಯಾಹಾರ್ಯಮ್ – ಅಧ್ಯಾಹಾರವೆಂದು ಭಾವಿಸುವದು ಉಚಿತವು. ಶ್ರೀ ಪರಾಶರ ಭಟ್ಟರು ಹಿಂದಿನ ಅಕಾರಾರ್ಥಾಯೈವ ಎಂಬ ಶ್ಲೋಕದಲ್ಲಿ ಪ್ರಯೋಗಿಸಿರುವ, ಆವಿಸ್ಯಾಃ ಎಂಬ ಪದವನ್ನನುಸರಿಸಿ, ಭವೇಯಮ್ ಎಂದು ಇಟ್ಟುಕೊಳ್ಳತಕ್ಕದ್ದೆಂದು ಉಪದೇಶಿಸಿರುತ್ತಾರೆ. ಎರಡೂ ಪ್ರಾರ್ಥನಾಪರಶಬ್ದಗಳು.

ಹೀಗೆ ಅಧ್ಯಾಹಾರ ಮಾಡಿಕೊಳ್ಳತಕ್ಕದ್ದು ಎಂಬ ಉಪದೇಶವೇನೋ ಸ್ವಾರಸ್ಯವಾದುದೇ? ಆದರೆ ಸ್ವಾರಸ್ಯವನ್ನು ಕಲ್ಪಿಸುತ್ತೇನೆಂದು ಮನಸ್ಸು ಬಂದಹಾಗೆ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬಹುದೋ? ಎಂದರೆ ಆಳ್ವಾರಾಚಾರ್ಯರುಗಳ ದಿವ್ಯಸೂಕ್ತಿಗಳನ್ನು ಉದಾಹರಿಸಿ ಹಾಗೆ ಅಧ್ಯಾಹಾರಮಾಡಿಕೊಂಡು ಅರ್ಥವನ್ನು ಪಪಾದಿಸಿದುದಕ್ಕೆ ಸಂಪ್ರದಾಯರೂಪಪ್ರಮಾಣಸ್ಥಾಪನೆಗಾಗಿ ನಮ್ಮಾಳ್ವಾರ್ರವರ ಪಾಶುರವನ್ನು ಉದಾಹರಿಸುತ್ತಾರೆ—ಇದು ನಿತ್ಯಾನುಸಂಧಾನ ಪಾಶುರವು.

**“ಒಳಿವಿಲ್ ಕಾಲಮೆಲ್ಲಾ ಮುಡನಾಯ್ ಮನ್ನಿ। ವಳುವಿಲಾವಡಿಮ್ಶೆಯ್ಯ ವೇಣ್ಡುನಾಮ್। ತೆಳಿಕುರಲರುವಿ ತ್ತಿರವೇಙ್ಗಡತ್ತು, ಎಳಿಲ್ ಕೊಳ್। ಶೋತಿಯೆನ್ದೈ ತನ್ದೈ ತನ್ದೈಕ್ಕೇ ॥೧॥**

ತಿರುಪತಿ ಶ್ರೀನಿವಾಸನ ಪಾದಾರವಿಂದದಲ್ಲಿ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಶೇಷವೃತ್ತಿಯನ್ನು ಮಾಡೋಣ ಬನ್ನಿ ಎಂದು ಪ್ರಪನ್ನ ಮಂಡಲಿಯನ್ನು ಕರೆಯುತ್ತಾರೆ—**ತೆಳಿಕುರಲರುವಿ** - ಗಂಭೀರವಾದ ಧ್ವನಿಯುಳ್ಳ ಬೆಟ್ಟವಾದ, ವೇಙ್ಕಟಗಿರಿ, ಧ್ವನಿಯಾವುದು ಎಂದರೆ, ಭಗವದ್ಭಾಗವತ ಕೈಂಕರ್ಯವೇ ಪರಾಕಾಷ್ಠದೆಶೆಯೆಂದು ಚನ್ನಾಗಿ ಅರಿತ ಭಾಗವತೋತ್ತಮರೇ ಬಂದು ತಿರುವೇಙ್ಗಡಮುಡಿಯಾನನಿಗೆ ಕೈಙ್ಕರ್ಯಮಾಡಿರಿ ಎಂದು ಏನಾದರೂ ಹೇಳುತ್ತದೋ ಎಂಬುವ ಹಾಗೆ ಗಂಭೀರ ಧ್ವನಿಯುಳ್ಳ, **ತಿರುವೇಙ್ಗಡತ್ತು** - ತಿರುವೇಙ್ಗಡವೆಂಬ ಹೆಸರುಳ್ಳ ತಿರುಮಲೆಯು, **ಎಳಿಲ್ ಕೊಳ್ ಶೋತಿ** – **“ಆದಿತ್ಯವರ್ಣಮ್”** ಎಂಬುದರಿಂದ ತೋರಿಬರುವ ಸರ್ವಲಾವಣ್ಯವನ್ನು ಹೊಂದಿದ ತೇಜೋರೂಪನಾದವನಿಗೆ, **“ತಸ್ಯ ಭಾಸಾಸರ್ವಮಿದಂ ವಿಭಾತಿ”** ಎಂದು ಹೇಳಿರುವದರಿಂದಾಗಲಿ, **“ಅಪ ನೇಯಂಹಿ ತತ್ತೇಜಃ ಯಸ್ಯಸಾ ಜನಕಾತ್ಮಜಾ”** ಎಂಬ ಮಾರೀಚವಾಕ್ಯಾನುಗುಣವಾಗಿಯಾಗಲಿ, **ಎನ್ದೈ ತನ್ದೈ ತೆನ್ದೈಕ್ಕು** - ನಮ್ಮ ಪಿತೃಪಿತಾಮಹ ಪ್ರಪಿತಾಮಹರುಗಳಿಗೂ ನಾಥನಾದ ಶ್ರೀನಿವಾಸನಿಗೆ, **ಒಳಿವಿಲ್ ಕಾಲಮೆಲ್ಲಾಮ್** - ವಿಚ್ಛೇದವಿಲ್ಲದ ಹಾಗೆ ಸರ್ವಕಾಲದಲ್ಲೂ, **ಉಡನಾಯ್ ಮನ್ನಿ**- ಆಶ್ರಯಿಸಿ, ಎಂದರೆ ಸರ್ವದೇಶ ಸರ್ವಾವಸ್ಥೆಗಳಲ್ಲೂ ವಿಶ್ಲೇಷವಿಲ್ಲದ ಹಾಗೆ, ಇದ್ದುಕೊಂಡು, **ನಾಮ್** - ಪ್ರಣವದಲ್ಲಿ ಹೇಳಲ್ಪಟ್ಟ ನಮ್ಮ ಸ್ವರೂಪವಾದ ಶೇಷವೃತ್ತಿಯ ಮಾಹಾತ್ಮ್ಯೆಯನ್ನು ಸದ್ಗುರುವಿನ ಉಪದೇಶದಿಂದ ತಿಳಿದ ನಾವು ನಾವು ಎಂಬುದರಿಂದ ತಾವೂ ತಮ್ಮ ಹಾಗಿರುವ ಎಲ್ಲಾ ಪ್ರಪನ್ನರೂ ಹೇಳಲ್ಪಟ್ಟರು. **ವಳುವಿಲಾಅಡಿಮ್ಶೈಯ್ಯವೇಣ್ಡುಮ್** – ಒಂದನ್ನೂ ತಪ್ಪದ ಹಾಗೆ

(೧) ತಿರುವಾಯ್ಮೊಳಿ ೩. ೩. ೧.

(೨)"ಅಡಿಯೋನ್ನೈಯಾಳ್ ಕೊಂಡರುಳೇ" ಎನ್ರುವ್, (೩)"ನಿತ್ಯ ಕಿಂಕರತಾಂ

---

ಸರ್ವವಿಧ ಶೇಷವೃತ್ತಿಯನ್ನೂ ಮಾಡಬೇಕು; "ಅಹಂ ಸರ್ವಂ ಕರಿಷ್ಯಾಮಿ ಜಾಗ್ರತ ಸ್ವಪತಶ್ಚ ತೇ" ಎಂದು ಲಕ್ಷ್ಮಣನು ತನ್ನ ಶೇಷವೃತ್ತಿ ಸ್ವರೂಪವನ್ನು ಪ್ರಕಟಿಸಿದಹಾಗೆ, ನಿರುಪಾಧಿಕ ಶೇಷಭೂತರಾದ ನಾವು, ಸರ್ವಕಾಲ ಸರ್ವದೇಶ ಸರ್ವಾವಸ್ಥೆಗಳಲ್ಲಿ ಸರ್ವವಿಧ ಕೈಙ್ಕರ್ಯಗಳನ್ನು ಮಾಡತಕ್ಕದ್ದೇ ನಮಗೆ ಸ್ವರೂಪವು ಎಂಬುದಾಗಿ ಹೇಳಲ್ಪಟ್ಟಿತು. ಇದರಿಂದ "ನಾರಾಯಣಾಯ ಭವೇಯಮ್" ಎಂಬುದರ ಅರ್ಥವು ಬೋಧಿತವು. ಹಾಗೆಯೇ "ಇಪ್ಪಾಟ್ಟಾಲ್, ಪ್ರಾಪ್ಯ ಪ್ರಧಾನಮಾನ ತಿರುಮನ್ತ್ರತ್ತಿಲರ್ಥತ್ತೈ ಯರುಳಿಚ್ಚೈಯ್‌ಗಿರಾರ್........ "ಶೆಯ್ಯವೇಣ್ಡು" ಮೆಙ್ಗಿರವಿತ್ತಾಲ್ ಚತುರ್ಥಿಯಿಲ್ ಪ್ರಾರ್ಥನೈಯೈ, ಚೊಲ್ಲುಗಿರದು, "ನಾಮ್" ಎಙ್ಗಿರವಿಡಮ್ ಪ್ರಣವ ಪ್ರತಿಪಾದ್ಯಮಾನ ವಿವಸುತ್ತೈಯು ಸ್ವರೂಪತ್ತೈ ಚೊಲ್ಲುಗಿರದು" ಎಂದು ಆಳ್ವಾರವರ ಹೃದಯವನ್ನರಿತ ಪರಮ ಭಾಗವತರ ವ್ಯಾಖ್ಯಾನವು. ಇದು ಹಿಂದೆ ಉತ್ತರ ಕೃತ್ಯಾಧಿಕಾರದಲ್ಲೂ ಉದಾಹೃತವು. ೧೨೩೩ನೆಯ ಪುಟ ನೋಡಿ.

ಮೂಲಮಂತ್ರದ ಚತುರ್ಥಿಯಲ್ಲಿ ಕೈಂಕರ್ಯಪ್ರಾರ್ಥನಾದ್ಯೋತಿತವೆಂಬುದಕ್ಕೆ ಮುಂದೆ ಶ್ರೀ ತಿರುಮಙ್ಗೈಯಾಳ್ವಾರ್‌ರವರ ಪಾಶುರವನ್ನು ಉದಾಹರಿಸುತ್ತಾರೆ. ಭೋಗ್ಯವಲ್ಲದವುಗಳಲ್ಲಿ ಭೋಗ್ಯತಾಬುದ್ಧಿಯನ್ನು ಮಾಡಿದೆನು. ಈ ಅಪರಾಧವನ್ನು ಸಹಿಸಿ ಕೃಪೆಮಾಡಬೇಕೆಂದು ಶರಣಾಗತಿಯನ್ನನುಷ್ಠಿಸುತ್ತಾರೆ.—

"ಮಾನೇಯ್ ಕಣ್ ಮಡವಾರ್ ಮಯಕ್ಕಿಲ್ ಪಟ್ಟು, ಮಾನಿಲತ್ತು ।
ನಾನೇ ನಾನಾ ವಿಧ ನರಕಮ್ ಪುಗುಮ್ ಪಾವಮ್ ಶೆಯ್‌ದೇನ್; ।
ತೇನೇಯ್ ಪೂಮ್ ಪೊಳಿಲ್ ಶೂಳ್ ತಿರುವೇಙ್ಗಡ ಮಾಮಲೈಯನ್ ।
ಆನಾಯ್, ವಂದಡೈನ್ದೇ ನಡಿಯೇನ್ನೈ ಆಳ್ ಕೊಣ್ಡರುಳೇ ॥ ೨ ॥

ಅರ್ಥ—ತೇನ್ – ಜೇನುಹುಳುಗಳು, ಏಯ್ – ತುಂಬಿರುವ, ಪೂಪ್ಪೊಳಿಲ್ - ಹೂವುಗಳು ಇರುವ ವೃಕ್ಷಗಳಿಂದ ಶೂಳ್ - ತುಂಬಿ ಉದ್ಯಾನವನಗಳಿಂದ ಶೋಭಿಸುವ, ತಿರುವೇಙ್ಕಡಮಾಮಲೈ - ಶ್ರೀನಿವಾಸನ ಮಹತ್ತಾದ ಶೇಷಾಚಲವನ್ನೇ ವಾಸಸ್ಥಾನವಾಗ ಉಳ್ಳವನಾಗಿ, ಎನ್ ಆನಾಯ್ - ನನ್ನ ಅಪರಾಧಗಳನ್ನು ಆನೆಯ ಹಾಗೆ ಸಹಿಸಿಕೊಳ್ಳುವನೇ, ಮಾನ್ ಏಯ್ - ಕೃಷ್ಣಮೃಗದ ಹಾಗೆ. ಕಣ್ – ಕಣ್ಣುಗಳನ್ನುಳ್ಳ, ಮಡವಾರ್ - ಸ್ತ್ರೀಯರುಗಳ, ಮಯಕ್ಕಿಲ್ ಪಟ್ಟು - ಬೆಡಗಿಗೆ ಸಿಲುಕಿ, ಮಾನಿಲತ್ತು – ಈ ಮಹಾ ಪೃಥಿವಿಯಲ್ಲಿ, ನಾನಾ ವಿಧ ನರಕಗಳನ್ನೆಲ್ಲಾ, ಪುಕುಮ್ - ಪ್ರವೇಶಿಸುವ ಹಾಗೆ, ಪಾಪಂ . ಪಾಪವನ್ನು

---

(೨) ಪೆ. ತಿರು. ೧. ೯. ೨. (೩) ಭಾಷ್ಯ. ಮಿತಗದ್ಯಾಧಿಕಾರಃ.

ಪ್ರಾರ್ಥಯೇ" ಎನ್ರುಮ್, (೪) "ನಿತ್ಯ ಕಿಂಕರೋ ಭವಾನಿ" ಎನ್ರುಮ್, ಇಪ್ಪ್ರಾರ್ಥನೈಯೈ ಪ್ರಯೋಗಿತ್ತಾರ್‌ಗಳಿರೇ. ತಾದರ್ಥ್ಯಮ್ ನಿತ್ಯಸಿದ್ಧ

---

ನಾನೇ - ನಾನೊಬ್ಬನೇ; ಶೆಯ್‌ದೇನ್ - ಮಾಡಿರುತ್ತೇನೆ. ಆದುದರಿಂದ, ವನ್ದಡೈನ್ದೇನ್ - ಬಂದು ನಿನ್ನ ಪಾದವನ್ನು ಆಶ್ರಯಿಸಿ ಶರಣಾಗತಿಯನ್ನು ಅನುಷ್ಠಿಸಿರುತ್ತೇನೆ; ಆಳ್‌ಕೊಂಡು ಅರುಳೇ - ಅದನ್ನು ಸ್ವೀಕರಿಸಿ ಅನುಗ್ರಹಿಸಬೇಕು ಎಂದು ಪ್ರಾರ್ಥಿಸುತ್ತಾರೆ.—ಇಲ್ಲಿ ದಾಸಭೂತನಾದ ನನ್ನನ್ನು ನಿನ್ನ ನಿತ್ಯ ಕೈಙ್ಕರ್ಯವನ್ನು ಮಾಡುವಹಾಗೆ ದಯಪಾಲಿಸು ಎಂದು ಪ್ರಾರ್ಥಿಸಿರುತ್ತಾರೆ. ಶ್ರೀಯತಿವರ್ಯರು ಮಿತಗದ್ಯದಲ್ಲಿ (೩) "ಪರಮಕಾರುಣಿಕೋ ಭಗವಾನ್ ಸ್ವಾನುಭವ ಪ್ರೀತ್ಯೋಪನೀತೈಕಾನ್ತಿಕಾತ್ಯನ್ತಿಕ ನಿತ್ಯ ಕೈಙ್ಕರ್ಯೈಕರತಿರೂಪ ನಿತ್ಯ ದಾಸ್ಯಂ ದಾಸ್ಯತೀತಿ ವಿಶ್ವಾಸಪೂರ್ವಕಂ ಭಗವನ್ತಂ ನಿತ್ಯ ಕಿಙ್ಕರತಾಂ ಪ್ರಾರ್ಥಯೇ" ಎಂದು ಪ್ರಾರ್ಥಿಸಿರುತ್ತಾರೆ. ಇದರ ಅರ್ಥವು ಸ್ಪಷ್ಟವು." ಎನ್ರಂ - ಎಂಬದಾಗಿಯೂ, (೪) "ನಿತ್ಯಕಿಙ್ಕರೋ ಭವಾನಿ" ಸದಾ ಕೈಂಕರ್ಯವನ್ನೆಸಗುವ ದಾಸಭೂತನಾಗುವೆನು, ಎನ್ರುಮ್ - ಎಂದೂ, ಇಪ್ಪ್ರಾರ್ಥನೈಯೈ - ಈ ಕೊನೆಯ ಚತುರ್ಥಿಯಲ್ಲಿ ತೋರುವ ಪ್ರಾರ್ಥನೆಯನ್ನೇ ಮಾಡಿದರಲ್ಲವೇ ? ಆದುದರಿಂದ ಆಳ್ವಾರುಗಳೂ ಪರಮಾಚಾರ್ಯರುಗಳೂ ನಿತ್ಯಕೈಂಕರ್ಯಪ್ರಾಪ್ತಿಯನ್ನು ಅಪೇಕ್ಷಿಸಿರುವದರಿಂದ, ನಾರಾಯಣಾಯ ಭವೇಯಮ್ ಎಂದು ಅಧ್ಯಾಹಾರ ಮಾಡಿಕೊಳ್ಳುವದೇ ಸಮಂಜಸವು ಎಂದು ಹೇಳಿದರು.

ಆಗಲಿ. ಪರಮಪುರುಷನಿಗೂ ನಮಗೂ ಶೇಷಿಶೇಷಭಾವವೆಂಬುವದು ಸಿದ್ಧವಾದುದು. ನಿರುಪಾಧಿಕವಾಗಿ ಯಾವಾಗಲೂ ಇರುವ ಸಂಬಂಧವು. ಹೀಗಿರುವಾಗ ಈ ದಾಸಭೂತನು ಪ್ರಾರ್ಥಿಸುವದು ಏತಕ್ಕೆ ? ಸರ್ವೇಶ್ವರನಿಂದಲೇ ದಾಸವೃತ್ತಿಯು ನಿಯತವಾಗಿರುವಾಗ ಅದನ್ನು ಪ್ರಾರ್ಥಿಸಬೇಕೇ ? ಎಂದು ಕೆಲವರು ಪೂರ್ವಪಕ್ಷವನ್ನು ತರಬಹುದು ಎಂದು ಯೋಚಿಸಿ, ಪೂರ್ವಪಕ್ಷವನ್ನು ಪಪಾದಿಸಿ ಸಮಾಧಾನ ಹೇಳುತ್ತಾರೇನೆಂದರೆ—ಕೆಲವು ಕಾರಣಗಳಿಂದ ಪ್ರಾರ್ಥಿಸುವದರಲ್ಲಿ ಔಚಿತ್ಯ ಉಂಟೆಂದು ಕಾರಣಗಳನ್ನು ಹೇಳುತ್ತಾರೆ. ತಾದರ್ಥ್ಯಮ್ - ಪರಮಾತ್ಮನಿಗೇ ಈ ಜೀವಾತ್ಮನು ಶೇಷಭೂತನೆಂಬುದು, ನಿತ್ಯಸಿದ್ಧಮಾಗೈಯಾಲೇ - ನಿರುಪಾಧಿಕವಾಗಿ ಯಾವಾಗಲೂ ಸಿದ್ಧವಾಗಿರುವದರಿಂದ, ಅಶಾಸಿಕ್ಕ ವೇಣ್ಡಾನ್ಮೈಯಾಲುಮ್ - ಪ್ರಾರ್ಥಿಸಬೇಕಾದುದರ ಆವಶ್ಯಕತೆ ಇಲ್ಲದಿದ್ದರೂ ಕೂಡ, ಕೆಲವು ಕಾರಣಗಳಿಂದ ಆವಶ್ಯಕವೇ ಎಂದು ತಿಳಿಸುತ್ತಾರೆ—ಇಸ್ಸಂಬಂಧ ಸ್ವರೂಪಮ್ - ಈ ಶೇಷಿಶೇಷ ಸಂಬಂಧದ ಸ್ವರೂಪವು, ಪ್ರಣವತ್ತಿಲೇ ಶೊಲ್ಲುಗೈಯಾಲುಮ್ - ಮಕಾರವಾಚ್ಯಃ ಜೀವಃ ಆಯೈವ ಎಂಬ ಯೋಜನೆಯ ಮೂಲಕ ಪ್ರಣವದಲ್ಲಿ ಹೇಳುವದರಿಂದಲೂ, ಇದಿನ್‌ಫಲಮಾಯ್ - ಇದರ ಫಲ

**ಮಾಗೈಯಾಲೇ ಆಶಾಸಿಕ್ಕವೇಣ್ಡಾವೈಯಾಲುಮ್, ಇಸ್ಸಂಬಂಧ ಸ್ವರೂಪಮ್ ಪ್ರಣವತ್ತಿಲೇ ಶೊಲ್ಲುಗೈಯಾಲುಮ್ ಇರ್ತ್ತಿಫಲಮಾಯ್"ಸಮುದ್ರೇ ಗೋಷ್ಪದಮಸ್ತಿ" ಎನ್ನುಮಾಪ್ಪೋಲೇ ಪುರುಷಾರ್ಥಾಂತರಙ್ಗಳೈಯೆಲ್ಲಾಮ್ ವಿಳಾಕ್ಕಲ್ಲೈ ಕೊಣ್ಡಿರುಕ್ಕಿರ ಪರಿಪೂರ್ಣಬ್ರಹ್ಮಾನುಭವ ಪರೀವಾಹಮಾನಕೈಙ್ಕರ್ಯಮ್, "ಒಳವಿಲ್ ಕಾಲತ್ತಿರ್"ಪಡಿಯೇ ಇಙ್ಗು ಅಪೇಕ್ಷಿಕ್ಕಪ್ಪಡಗಿರದು.**

---

ವಾಗಿ, **"ಸಮುದ್ರೇ ಗೋಷ್ಪದಮಸ್ತಿ"** ಗೋಷ್ಪದದಲ್ಲಿರುವ ಎಂದರೆ ಆಕಳು ಹೆಜ್ಜೆ ಇಟ್ಟ ಸ್ಥಳದಲ್ಲಿರುವ ಅಲ್ಪವಾದ ಉದಕಾಪೇಕ್ಷೆ ಇರುವವರಿಗೆ ಸಮುದ್ರ ನೀರಿನಲ್ಲೂ ಅದು ಇದೆ", **ಎನ್ನುಮಾಪ್ಪೋಲೆ** - ಎಂದು ಹೇಳಿರುವ ಹಾಗೆ **ಪುರುಷಾರ್ಥಾನ್ತರಙ್ಗಳೈ ಎಲ್ಲಾಮ್** - ಐಶ್ವರ್ಯ ಕೈವಲ್ಯಗಳಾದ ಇತರ ಪುರುಷಾರ್ಥಗಳೆಲ್ಲವನ್ನೂ, **ವಿಳಾಕ್ಕಲ್ಲೈ ಕೊಣ್ಡಿರುಕ್ಕಿರ** - ತನ್ನಲ್ಲಿ ಅಂತರ್ಗತವಾಗಿ ಇಟ್ಟುಕೊಂಡಿರುವ, **ಪರಿಪೂರ್ಣಬ್ರಹ್ಮಾನುಭವ ಪರೀವಾಹಮಾನ** - ಮೋಕ್ಷದಲ್ಲಿ ಉಂಟಾಗುವ ಪರಿಪೂರ್ಣ ಬ್ರಹ್ಮಾನುಭವದ ಪ್ರವಾಹವಾದ, **ಕೈಙ್ಕರ್ಯಮ್** - ಕೈಙ್ಕರ್ಯವು, **"ಒಳವಿಲ್ ಕಾಲ" ತ್ತಿರ್ಪಡಿಯೇ** - **ಒಳವಿಲ್ ಕಾಲಮೆಲ್ಲಾಮ್** ಎಂಬ ಪಾಶುರದಲ್ಲಿ ಹೇಳಿರುವ ಹಾಗೆ, **ಇಙ್ಗುಮ್** - ಈ ನಾರಾಯಣಾಯ ಎಂಬಿದಕ್ಕೆ ವಾಕ್ಯವ್ಯವಸ್ಥೆಯನ್ನು ಮಾಡುವಾಗ, **ಅಪೇಕ್ಷಿಕ್ಕ ಪಡುಗಿರದು** - ಪ್ರಾರ್ಥನೆಯನ್ನು ಸೂಚಿಸುತ್ತದೆ. (೨೩೩ನೆಯ ಪುಟ ನೋಡಿ. ಉತ್ತರ ಕೃತ್ಯಾಧಿಕಾರದಲ್ಲಿ ಉದಾಹೃತವು. ಕೈಂಕರ್ಯವೇ ಈ ದಾಸಭೂತನಾದ ಚೇತನನಿಗೆ ಸ್ವರೂಪವೆಂಬುದು ಪ್ರಣವದಲ್ಲಿ ವ್ಯಕ್ತವಾದುದರಿಂದ, ಅಂತಹ ಕೈಂಕರ್ಯವನ್ನು ಪ್ರಾರ್ಥಿಸುವದು ನ್ಯಾಯವು. ಕೆಲವರು ಐಶ್ವರ್ಯವನ್ನೂ ಕೆಲವರು ಕೈವಲ್ಯವನ್ನೂ ಇನ್ನು ಕೆಲವರು ಪರಿಪೂರ್ಣಬ್ರಹ್ಮಾನುಭವವನ್ನೂ ಅಪೇಕ್ಷಿಸಬಹುದು. ಸರ್ವೋತ್ಕೃಷ್ಟ ಫಲವು ಪರಿಪೂರ್ಣಬ್ರಹ್ಮಾನುಭವವೆಂದು ತಿಳಿದು ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ವಿವಿಧ ಕೈಂಕರ್ಯ ಪ್ರಾಪ್ತಿ ನನಗೆ ಬೇಕೆಂದು ಕೇಳುವದರಲ್ಲಿ ಸರ್ವಸಾಮಂಜಸ್ಯ ಉಂಟೆಂಬ ಭಾವವು. ಈ ಪ್ರಾರ್ಥನೆಯು ಸಂಪೂರ್ಣವಾಗಿ ತನ್ನ ಪ್ರಯೋಜನಕ್ಕಾಗಿಯೇ ಎಂದಾದರೆ ಆಗೇನೋ ಪ್ರಾರ್ಥನೆಯು ಸರಿಯಲ್ಲವೆಂದು ಹೇಳಬಹುದು. ಹೀಗೆ ಸರ್ವವಿಧ ಕೈಙ್ಕರ್ಯಪ್ರಾಪ್ತಿಯು ಉಂಟಾಗಲಿ ಎಂಬ ಪ್ರಾರ್ಥನೆಯು ಸ್ವಾರ್ಥವಾಗಿಯೇ ಪರಾರ್ಥವಾಗಿಯೇ ಎಂಬ ಚರ್ಚೆಯಲ್ಲಿ, ಮೇಲೆ ಮೇಲೆ ಸ್ವಾರ್ಥವಾಗಿ ತೋರಿದರೂ ಪರಾರ್ಥವಾಗಿ,ಆದರಿಂದ ಇಬ್ಬರಿಗೂ ಸಂತೋಷವನ್ನುಂಟು ಮಾಡುತ್ತದೆಯಾದುದರಿಂದ,ಪ್ರಾರ್ಥನೆಯಲ್ಲಿ ಪರಮೌಚಿತ್ಯ ಉಂಟೆಂಬ ಅಭಿಪ್ರಾಯವನ್ನು ತಿಳಿಸುವದಕ್ಕಾಗಿ ಆರಂಭಿಸಿದ ವಾಕ್ಯವಾಗಿರುತ್ತದೆ.

ಕಾ. ಅತ್ರ ಸ್ವಲಾಭಾಪೇಕ್ಷಾಪಿ ಸ್ವಾಮಿಲಾಭಾವಸಾಯಿನೀ ।
ಸ್ವಾಮಿಪ್ರಯೋಜನಾಪೇಕ್ಷಾಪ್ಯತಸ್ಸ್ವಾನಂದ ಹೇತುಕಾ ॥೮೫॥

---

ಈ "ನಾರಾಯಣಾಯ" ಎಂಬ ಮೂಲಮನ್ತ್ರದ ಮೂರನೆಯ ಪದವನ್ನು ಒಂದು ವಾಕ್ಯವಾಗಿ ಭಾವಿಸಬೇಕಾದರೆ, ನಾರಾಯಣಾಯಸ್ಯಾಮ್ ಎಂದು ಅಧ್ಯಾಹಾರ ಮಾಡಿಕೊಳ್ಳುವದರಿಂದ ಪ್ರಾಪ್ತವಾದ ವಾಕ್ಯಾರ್ಥವೇನೆಂದರೆ— "ನಾರಾಯಣಾಯ ಸಕಲಕಲ್ಯಾಣಗುಣಾಕರಾಯ ಶ್ರೀಮತೇ ನಿರುಪಾಧಿಕ ಶೇಷಿಣೇ ನಿರುಪಾಧಿಕ ಕೈಙ್ಕರ್ಯಕಾರೀ ಭವೇಯಮ್" ಎಂಬ ಪ್ರಾರ್ಥನೆಯು. ಆದರೆ ಸ್ವತಸ್ಸಿದ್ಧವಾದ ಶೇಷಿಶೇಷ ಸಂಬಂಧವಿರುವಾಗ ಪ್ರಾರ್ಥನೆಯಲ್ಲಿ ಔಚಿತ್ಯವೆಲ್ಲಿಯದು ? ಎಂಬ ಪೂರ್ವಪಕ್ಷಕ್ಕೆ ಮೇಲಿನ ವಾಕ್ಯದಲ್ಲಿ ಸಮಾಧಾನವನ್ನು ಹೇಳಿದರು. ಆ ಅಭಿಪ್ರಾಯವನ್ನೇ ಸಂಗ್ರಹಿಸಿ ಒಂದು ಕಾರಿಕೆಯನ್ನು ದಯಪಾಲಿಸುತ್ತಾರೆ. ತನಗೆ ಆನಂದವನ್ನುಂಟುಮಾಡುವ ಪುರುಷಾರ್ಥವನ್ನು ಬಯಸುವದರ ಮೂಲಕ ಸ್ವಾರ್ಥಪರವಾದುದೆಂಬ ದೋಷ ಉಂಟಾಗಲಿಲ್ಲವೇ ? ಎಂದರೆ ಆ ಪ್ರಾರ್ಥನೆಯಲ್ಲಿ ಪರಮಾತ್ಮನಿಗೆ ಪ್ರೀತ್ಯತಿಶಯವನ್ನುಂಟುಮಾಡುವ ಪರಾರ್ಥತೆಯು ಇರುವದರಿಂದ ದೋಷವಿಲ್ಲವೆಂದೂ, ಆತನಿಗೆ ಆನಂದ ಉಂಟಾಗುವದು ತನಗೂ ಆನಂದವಾಗಿ ಅದು ಇಬ್ಬರಿಗೂ ಆನಂದಾವಹವಾಗಿ, ಇಬ್ಬರಿಗೂ ಪ್ರಯೋಜನವನ್ನುಂಟು ಮಾಡತಕ್ಕದ್ದಾಗಿರುತ್ತದೆಂದು ಹೇಳುತ್ತಾರೆ.

ಅವತಾರಿಕೆ—"ಶಾಶ್ವತೀ ಮಮಸಂಸಿದ್ಧಿ ರಿಯಂ ಪ್ರಹ್ವೀ ಭವಾಮಿಯತ್ । ಪುರುಷಂ ಪರ ಮುದ್ದಿಶ್ಯ ನಮೇ ಸಿದ್ಧಿರಿತೋಽನ್ಯಥಾ । ಇತ್ಯಜ್ಞಮುದಿತಂ ಶ್ರೇಷ್ಠಂ ಫಲೇಪ್ಸಾತದ್ವಿರೋಧಿನೀ" (೯೫೬ನೆಯ ಪುಟ ನೋಡಿ) ಎಂಬ ಅಹಿರ್ಬುಧ್ನ್ಯ ಸಂಹಿತಾ ವಾಕ್ಯದಲ್ಲಿ ಫಲಪ್ರಾರ್ಥನೆಯು ನಿಂದಿಸಲ್ಪಟ್ಟಿರುತ್ತದೆ; ಹೀಗಿರುವದರಿಂದ ನಾರಾಯಣಾಯಸ್ಯಾಮ್ ಎಂಬ ಯೋಜನೆಯು ಹೇಗೆ ಯುಕ್ತವು ? ಹಾಗೆ ಫಲಾಪೇಕ್ಷೆಯಿಲ್ಲದಿದ್ದರೆ ಯಾವನು ತಾನೇ ಅಂತಹ ಪ್ರವೃತ್ತಿಯನ್ನು ಅವಲಂಬಿಸುವನು? "ಪ್ರಯೋಜನ ಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ" ಪ್ರಯೋಜನವಿಲ್ಲದೆ ಪ್ರವೃತ್ತಿ ಎಲ್ಲಿರುತ್ತದೆ. ಹೀಗೆ ಎರಡು ವಿಧ ಆಕ್ಷೇಪಣೆಗಳಿಗೂ ಸಮಾಧಾನವು ಇಲ್ಲಿ ಹೇಳಲ್ಪಡುತ್ತದೆ. ಪರಮಾತ್ಮನಿಗಾಗಿಯೇ ಕೈಂಕರ್ಯ ಪ್ರಾರ್ಥನೆಯು ; ಅದರಿಂದ ತನಗೂ ಆನಂದವು. ಹೀಗೆ ಇಬ್ಬರಿಗೂ ಪ್ರಯೋಜನವು. ಅತ್ರ - ನಾರಾಯಣಾಯಸ್ಯಾಮ್ ಎಂಬ ಯೋಜನೆಯ ಸಂದರ್ಭದಲ್ಲಿ, ಸ್ವಲಾಭಾಪೇಕ್ಷಾಪಿ – ತನಗೆ ನಾರಾಯಣ ಕೈಙ್ಕರ್ಯಪ್ರಾಪ್ತಿ ಬೇಕೆಂಬ ಪ್ರಯೋಜನಾಪೇಕ್ಷೆಯೂ ಕೂಡ, ಸ್ವಾಮಿಲಾಭಾವಸಾಯಿನೀ - ತನಗೆ ನಿರುಪಾಧಿಕ ಶೇಷಿಯಾಗಿ ತನ್ಮೂಲಕ ಸ್ವಾಮಿಯಾದ ಭಗವಂತನ ಪ್ರೀತ್ಯತಿಶಯ ಸಂಪಾದಕವಾಗಿ ಪರಗತಾತಿಶಯ ಸಿದ್ಧಿಯನ್ನುಂಟುಮಾಡುವ ಪರ್ಯಂತವಾದುದು ;

ಉನ್ನೈ ಉಗಪ್ಪಿಕ್ಕುಮ್ ಕೈಙ್ಕರ್ಯತ್ತೈ ನಾನ್‌ಪೆರವೇಣುಮೆನ್ಱು ಲುವರ್, ಎನ್ನೈ ಅಡಿಮೈಕೊಂಡು ನೀಯುಗಕ್ಕವೇಣುಮೆನ್ಱುಲುವರ್,

---

ಆದುದರಿಂದ ಸ್ವಾರ್ಥಭೋಗ ದೋಷವುಳ್ಳದುದಲ್ಲವು. "ಕುರುಷ್ವ ಮಾಮನು ಚರಂ" ಎಂದು ಪ್ರಾರ್ಥಿಸಿ "ಅಹಂ ಸರ್ವಂ ಕರಿಷ್ಯಾಮಿ" ಎಂದು ಲಕ್ಷ್ಮಣನು ಶ್ರೀರಾಮನನ್ನು ಕುರಿತು ಪ್ರಾರ್ಥಿಸಿದುದು, ತನಗೆ ರಾಮನನ್ನು ಹಿಂಬಾಲಿಸಿ ಹೋಗುವ ಆನಂದವನ್ನುಂಟುಮಾಡಿದರೂ, ಆ ಪ್ರಾರ್ಥನೆಯು ಶ್ರೀ ಸೀತಾರಾಮ ಕೈಙ್ಕರ್ಯಕ್ಕಾಗಿ ಅವರಿಗೆ ಪ್ರೀತ್ಯತಿಶಯವನ್ನುಂಟುಮಾಡುವದಕ್ಕಾಗಿಯೇಯಾದುದ ರಿಂದ ಸ್ವಪ್ರಯೋಜನಪ್ರಾರ್ಥನಾರೂಪದೋಷಕ್ಕೆ ಗುರಿಯಾಗುವದಿಲ್ಲವು. ಕುರುಷ್ವ ಮಾಮನುಚರಮ್ ಎಂದು ಪ್ರಾರ್ಥನೆಯಿಲ್ಲದೆ, ಶ್ರೀಸೀತಾರಾಮರಿಗೆ ಕೈಙ್ಕರ್ಯ ಮೂಲಕ, ಶೇಷಭೂತನಿಗೆ ಸ್ವರೂಪವಾದ, ಸ್ವಾಮಿಗೆ ಪ್ರೀತ್ಯತಿಶಯವನ್ನುಂಟು ಮಾಡುವುದು, ಲಭಿಸಲಾರದ ಪ್ರಯುಕ್ತ, ದೋಷಾವಹವಲ್ಲವೆಂಬುದು ತಾತ್ಪರ್ಯವು. "ವೈಧರ್ಮ್ಯಂ ನೇಹವಿದ್ಯತೇ ಎಂಬ ಲಕ್ಷ್ಮಣೋಕ್ತಿಯಲ್ಲೂ ಈ ಅಭಿಪ್ರಾಯವೇ ಸೂಚಿತವು. ತನಗೆ ಪುರುಷಾರ್ಥರೂಪವಾದುದನ್ನು ಲಕ್ಷ್ಮಣನು ಪ್ರಾರ್ಥಿಸಿದನು, ಸ್ವಾರ್ಥಪರನು ಎಂಬ ವೈಧರ್ಮ್ಯವೇನೂ ಎಂದರೆ ದೋಷವೇನೂ ಇಲ್ಲವು. ಏಕೆಂದರೆ ಶೇಷಿಗೆ ಶೇಷನು ಕೈಙ್ಕರ್ಯಮಾಡುವದು ಶೇಷಭೂತನಿಗೆ ಸ್ವರೂಪವೆಂಬ ಭಾವವು. ತನ್ನ ಸ್ವಾಮಿಗೆ ಮಾಡುವ ಕೈಙ್ಕರ್ಯದಿಂದ ಆತನು ಪ್ರೀತನಾಗಬೇಕೆಂಬ ಅಪೇಕ್ಷೆಯೂ ಕೂಡ ತನಗೆ ಆನಂದಾವಹವೆಂದು ಹೇಳುತ್ತಾರೆ— ಸ್ವಾಮಿ ಪ್ರಯೋಜನಾ ಪೇಕ್ಷಾಪಿ – ತಾನೂ ಮಾಡುವ ಕೈಙ್ಕರ್ಯವು ತನಗೆ ಶೇಷಿಯಾದ ವನಿಗೆ ಪ್ರಯೋಜನವಾಗಬೇಕೆಂಬ ಅಪೇಕ್ಷೆಯೂ ಕೂಡ, ಅತಃ – ಆ ಕಾರಣದ ದೆಶೆಯಿಂದ, ಸ್ವಾನಂದಹೇತುಕಾ - ತನ್ನ ಆನಂದಕ್ಕೂ ಕೂಡ ಹೇತುವಾಗಿ ಉಳ್ಳದ್ದು. ಹೀಗೆ ತನ್ನ ಕೈಙ್ಕರ್ಯಪ್ರಾರ್ಥನೆಯು ತನಗೆ ಆನಂದವನ್ನುಂಟು ಮಾಡುವದಾಗಿ ಪ್ರಯೋಜನವು. ಹೀಗೆ ಇಬ್ಬರಿಗೂ ಪ್ರಯೋಜನಸಿದ್ಧಿಯು. ಈ ಅಭಿಪ್ರಾಯವನ್ನೇ ಸೌಮಿತ್ರಿಯು "ಕೃತಾರ್ಥೋಽಹಂ ಭವಿಷ್ಯಾಮಿ ತವ ಚಾರ್ಥಃ ಪ್ರಕಲ್ಪತೇ" (ರಾಮಾ. ಅಯೋಧ್ಯಾ. ೩೧.೨೫) ಎಂಬುದರಿಂದ ವ್ಯಕ್ತ ಪಡಿಸಿ ಉಭಯತ್ರ ಪ್ರಯೋಜನವೆಂಬುದನ್ನು ಸ್ಥಾಪಿಸಿರುತ್ತಾನೆ.

ಹೀಗೆ ಇಬ್ಬರಿಗೂ ಪ್ರಯೋಜನರೂಪವಾದುದೆಂಬುದನ್ನೇ ಮುಂದಿನ ವಾಕ್ಯ ದಿಂದ ಉಪಪಾದಿಸುತ್ತಾರೆ.—ಉನ್ನೈ-ಸ್ವಾಮಿಯಾದ ನಿನ್ನನ್ನು, ಉಗಪ್ಪಿಕ್ಕುಮ್ ಕೈಙ್ಕರ್ಯತ್ತೈ - ಸಂತೋಷಗೊಳಿಸುವ ಕೈಙ್ಕರ್ಯವನ್ನು, ನಾನ್‌ಪೆರವೇಣುಮೆನ್ಱು ಲುವರ್ - ನಾನು ಹೊಂದಬೇಕೆಂದು ಪ್ರಾರ್ಥಿಸಿದರೂ, ಹಾಗೆಯೇ ಎನ್ನೈ ಅಡಿಮೈಕೊಂಡು ನೀಯುಗಕ್ಕವೇಣುಮೆನ್ಱುಲುವರ್ - ನನ್ನನ್ನೂ ದಾಸ

**ಇರವರುಕ್ಕುಮ್ ಪ್ರಯೋಜನಸಿದ್ಧಮ್, (೧) ತ್ರೈಗುಣ್ಯಂ ಷಡ್ಗುಣಾಢ್ಯಂಚ ದ್ವಿಧಾನ್ನಮ್ ಪರಿಕೀರ್ತಿತಮ್ । ತ್ರೈಗುಣ್ಯಮನ್ನಂ ಬದ್ಧಾನಾಮಿತ**

---

ನಾಗಿ ಮಾಡಿಕೊಂಡು ನೀನು ಸಂತೋಷಿಸತಕ್ಕದ್ದು ಎಂದು ಪ್ರಾರ್ಥಿಸಿದರೂ, **ಇರುವರುಕ್ಕುಮ್** - ಶೇಷಿಶೇಷಗಳಿಬ್ಬರಿಗೂ ಅದರಿಂದ **ಪ್ರಯೋಜನ ಸಿದ್ಧಮ್**-ಪ್ರಯೋಜನವೆಂಬುದು ಸ್ಥಾಪಿತವು. **ಅಹಂ ಸರ್ವಂ ಕರಿಷ್ಯಾಮಿ** ಅನುಜ್ಞೆಯನ್ನು ಕೊಡು, ಎಂದು ಸ್ವಾಮಿಗೆ ಪ್ರೀತ್ಯತಿಶಯವನ್ನುಂಟುಮಾಡಬೇಕೆಂಬ ಪ್ರಾರ್ಥನೆಯಲ್ಲಿ, ತಾನೂ ಕೃತಾರ್ಥನಾಗುವ ಆನಂದವಿರುವದರಿಂದ, ತನಗೂ ಪ್ರಯೋಜನವು; ನಿನಗೆ ಕೈಙ್ಕರ್ಯವನ್ನು ಮಾಡುವ ಆನಂದವನ್ನು ಕೊಡು ಎಂದು ಪ್ರಾರ್ಥಿಸಿದರೂ, ಅದು ಪ್ರೀತ್ಯತಿಶಯವನ್ನುಂಟುಮಾಡುವದಾಗಿ ಆತನಿಗೂ ಪ್ರಯೋಜನವು. ಹೀಗೆ ಸ್ವಲಾಭಪ್ರಾರ್ಥನೆಯಲ್ಲಿ, ಸ್ವಾಮ್ಯತಿಶಯಪ್ರಾರ್ಥನೆಯೂ, ಸ್ವಮ್ಯತಿಶಯ ಪ್ರಾರ್ಥನೆಯಲ್ಲಿ ಸ್ವಲಾಭಪ್ರಾರ್ಥನೆಯೂ ಸೇರಿದವುಗಳಾಗಿ, ಎರಡು ವಿಧದಲ್ಲೂ ಇಬ್ಬರಿಗೂ ಪ್ರಯೋಜನ ಉಂಟೆಂಬುದು ತಾತ್ಪರ್ಯವು.

ಆದರೆ ಕೈಂಕರ್ಯವು ನಿರತಿಶಯ ಪುರುಷಾರ್ಥವೆಂದು ಹೇಳುದುದು ಹೇಗೆ? ಇನ್ನೂ ಆನಂದವನ್ನೂ ಪುರುಷಾರ್ಥವನ್ನಾಗಿ ಹೇಳುವದು ನ್ಯಾಯವು. ಪ್ರಮಾಣಗಳಲ್ಲಿ **ಷಡ್ಗುಣಾಢ್ಯೋನ್ನ** ವೆಂದು ಮುಕ್ತನ ಆನಂದವು ಹೇಳಲ್ಪಟ್ಟಿರುವಾಗ, ಕೈಙ್ಕರ್ಯವು ಹೇಗೆ ಪುರುಷಾರ್ಥವೆಂದು ಆಕ್ಷೇಪಿಸಿದರೆ, ಪರಿಪೂರ್ಣಬ್ರಹ್ಮಾನುಭವವು ತತ್ಕೈಙ್ಕರ್ಯಪರ್ಯನ್ತವಾದುದರಿಂದ ಆಕ್ಷೇಪಣೆಗೆ ಕಾರಣವಿಲ್ಲವೆಂದು ಪ್ರಮಾಣವನ್ನು ಉದಾಹರಿಸಿ ಅದರ ತಾತ್ಪರ್ಯವನ್ನು ತಿಳಿಸುತ್ತಾರೆ. ಈ ಅಭಿಪ್ರಾಯವು ಪರಿಪೂರ್ಣಬ್ರಹ್ಮಾನುಭವಾಧಿಕಾರದಲ್ಲಿ ಉಪಪಾದಿತವಾದರೂ ವಿಶದವಾಗಿ ಇಲ್ಲಿ ತಿಳಿಸುತ್ತಾರೆ—೧೮೫೨-೩ನೆಯ ಪುಟಗಳನ್ನು ಪರಾಂಬರಿಸಿ (೧) "**ಅನ್ನಮ್** - ಭೋಗ್ಯವಾದುದು, **ತ್ರೈಗುಣ್ಯಂ** - ಮೂರು ಗುಣಗಳಾದ ಸತ್ವರಜಸ್ತಮಸ್ಸುಗುಳುಳ್ಳ ಪ್ರಕೃತಿರೂಪವಾದುದೆಂದೂ, **ಷಾಡ್ಗುಣ್ಯಾಢ್ಯಂಚ**-ಜ್ಞಾನ ಶಕ್ತ್ಯಾದಿ ಆರು ಗುಣಗಳಿಂದ ಪರಿಪೂರ್ಣನಾದ ಪರಮಪುರುಷರೂಪವಾದುದೆಂದೂ, **ದ್ವಿಧಾ** - ಎರಡು ವಿಧವಾಗಿ, **ಪರಿಕೀರ್ತಿತಮ್** - ಹೇಳಲ್ಪಟ್ಟಿರುತ್ತದೆ. ಈ **ತ್ರೈಗುಣ್ಯಮನ್ನ**ವಾದರೋ, **ಬದ್ಧಾನಾಂ** - ಬದ್ಧಚೇತನರಿಗೆ ಭೋಗ್ಯವು, **ಅಥ** - ಮತ್ತೇನೆಂದರೆ, **ಇತರೇಷಾಂ** - ಬದ್ಧರಲ್ಲದ ಇತರರಿಗೆ ಎಂದರೆ ಮುಕ್ತರಿಗಾದರೋ, **ಇತರತ್** - ಮತ್ತೊಂದಾದ ಷಡ್ಗುಣಾಢ್ಯವಾದ ಅನ್ನವು" **ಎಜ್ಞಿರ** – ಎಂಬ ಪ್ರಮಾಣದಲ್ಲಿ ಹೇಳಿರುವ, **ಷಡ್ಗುಣಾಢ್ಯಮಾನ ಅನ್ನಮಾವದು**? - ಷಡ್ಗುಣಾಢ್ಯವಾದ ಅನ್ನವೆಂದು ಹೇಳಿದುದು ಯಾವುದು? ಎಂದರೆ ಭಗವದ್ಗುಣಾನುಭವವೇ; ಇಲ್ಲಿ

---

(೧) ಲಕ್ಷ್ಮೀತಂತ್ರ

**ರೇಷಾ ಮುಥೇತರತ್"ಎಙ್ಗ್ಇರ ಷಡ್ಗುಣಾಢ್ಯಮಾನ ಅನ್ನಮಾವದು ? ಭಗವ ದ್ಗುಣಾನುಭವಮ್, ಅದಡಿಯಾಗ ವರುಗಿರ ಭೋಗ್ಯತಮ ಕೈಙ್ಕರ್ಯವಿಶೇಷ**

---

**ಅನ್ನಂ** ಎಂಬುದರಿದ ಭೋಗ್ಯವಸ್ತುವು ಹೇಳಲ್ಪಟ್ಟಿರುವದರಿಂದ, ಭಗವಂತನೇ ಭೋಗ್ಯನಾಗಿಹೇಳಲ್ಪಟ್ಟನೆಂದೂ ಭಾವಿಸಬಹುದು. ಮತ್ತು **ಅದಡಿಯಾಗ** - ತನ್ಮೂಲಕವಾಗಿ, **ವರುಗಿರ** - ಉಂಟಾಗುವ, **ಭೋಗ್ಯತಮಕೈಙ್ಕರ್ಯವಿಶೇಷಙ್ಗಳಾಗವುನಾಮ್** - ಅತ್ಯಂತ ಭೋಗ್ಯಗಳಾದ ಕೈಙ್ಕರ್ಯ ವಿಶೇಷಗಳೂ ಎಂದು ಹೇಳಬಹುದು. **"ಏತತ್ಸಾಮಗಾಯನ್ನಾಸ್ತೇ"** (ತೈ. ಆನಂದ.) **"ಯೇನ ಯೇನ ಧಾತಾ ಗಚ್ಛತಿ ತೇನತೇನ ಸಹಗಚ್ಛತಿ"** (  ) ಇವೇ ಮೊದಲಾದವುಗಳಿಂದ ಸಿದ್ಧಿಗುಣವಿಭೂತಿ ವಿಶಿಷ್ಟ ಪರಬ್ರಹ್ಮನೇ ಅನುಭಾವ್ಯನಾದುದರಿಂದ **ಷಡ್ಗುಣಾಢ್ಯಮ್** ಎಂಬ ಪದಪ್ರಯೋಗವು. ಈ ಅನುಭವವು ಆತ್ಮನಿಗೆ ನಿರತಿಶಯ ಭಕ್ತಿವಿಶೇಷದಿಂದ ಮಾಡುವ ಸಮಸ್ತ ವಿಧ ನಿತ್ಯಕೈಙ್ಕರ್ಯ ಮಾಡುವ ಪರ್ಯಂತವಾದುದೆಂದು ಭಾವಿಸತಕ್ಕದ್ದು. ಮುಕ್ತಿದೆಶೆಯಲ್ಲಿ ಭೋಗ್ಯವಾದ ಅನ್ನವೆಂದು ಎನ್ನಿಸಿಕೊಳ್ಳುವದು ಯಾವುದೆಂದರೆ—(೧) ಪರಿಪೂರ್ಣ ಬ್ರಹ್ಮದ ಗುಣಾನುಭವವೂ (೨) ತನ್ಮೂಲಕವಾಗಿ ಅವನ ಕೈಙ್ಕರ್ಯಗಳೂ ಸಹ. ಆದುದರಿಂದ ಭಗವತ್ಕೈಙ್ಕರ್ಯಪ್ರಾಪ್ತಿಯೇ ನಿರತಿಶಯ ಪುರುಷಾರ್ಥರೂಪವಾದ, ದಾಗಿ ಸರ್ವೇಶ್ವರನಿಗೂ ತನಗೂ ಸಹ ಪ್ರಯೋಜನವಾದುದೆಂಬುದು ಸಿದ್ಧವೆಂಬ ಭಾವವು.

ಆದರೆ **"ಪುಣ್ಯಪಾಪೇವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ"** (ಮುಂ. ೩-೧.೩) ಎಂಬಲ್ಲಿ ಮುಕ್ತನೊಂದಿಗೆ ಪರಮ ಸಾಮ್ಯವನ್ನು ಹೊಂದುತ್ತಾನೆಂದು ಹೇಳುವಾಗ ಆತನಿಗೆ ಕೈಙ್ಕರ್ಯವನ್ನು ಮಾಡುವದೇ ಪರಮ ಪುರುಷಾರ್ಥವೆಂದು ಹೇಳುವದು ಹೇಗೆ ಕೂಡುತ್ತದೆ? ಸಮನಾದವನು ಕೈಙ್ಕರ್ಯವನ್ನು ಮಾಡಬೇಕೇ ? ಹೀಗೆ ಸಮನಾದ ಮಿತ್ರನಿಂದ ಸ್ವಾಮಿ ತಾನೇ ಕೈಙ್ಕರ್ಯ ಮಾಡಿಸಿಕೊಳ್ಳುವನೇ ? ಹಾಗೆಯೇ ಇತರ ಕಡೆಯಲ್ಲೂ **"ಸೋಶ್ನುತೇ ಸರ್ವಾನ್ ಕಾಮಾನ್ ಸಹಬ್ರಹ್ಮಣಾ ವಿಪಶ್ಚಿತಾ"** (ತೈ. ಆನಂದ. ೧) ಎಂದು ಹಾಗೆಯೇ ಹೇಳುತ್ತದೆ. ಮಹರ್ಷಿಯೂ ಕೂಡ ಸೂತ್ರದಲ್ಲಿ **"ಭೋಗಮಾತ್ರ ಸಾಮ್ಯ ಲಿಙ್ಗಾಚ್ಚ"** ಎಂದು ಮಾತ್ರ ಶಬ್ದವನ್ನು ಪ್ರಯೋಗಿಸಿರುವದರಿಂದ ಕೈಙ್ಕರ್ಯವೃತ್ತಿ ಎಲ್ಲಿಯದು ? ಹೀಗೆಲ್ಲಾ ಪೂರ್ವಪಕ್ಷ ಉಂಟಾದರೆ ಸಮಾಧಾನವನ್ನು **"ಭೋಗ ಮಾತ್ರ ಸಾಮ್ಯಲಿಙ್ಗಾಚ್ಚ"** ಎಂದಾರಂಭಿಸದ ವಾಕ್ಯದಿಂದ ಹೇಳುತ್ತಾರೆ— **"ಭೋಗಮಾತ್ರ ಸಾಮ್ಯಲಿಙ್ಗಾಚ್ಚ" "ಸೋಶ್ನುತೇ"** ಇತ್ಯಾದಿ ಶ್ರುತಿಯಲ್ಲಿ ಮುಕ್ತನಿಗೆ ಬ್ರಹ್ಮಯಾಥಾತ್ಮ್ಯಾನುಭವ ಭೋಗ ಉಂಟಾಗುವದರ ಮೂಲಕ ಮುಕ್ತನಿಗೆ ಪರಮಾತ್ಮನಿಗೆ ಸಮಾನವಾದ ಆನಂದದಲ್ಲಿ ಮಾತ್ರವೇ ವಿನಾ, ಜಗ

**ಙ್ಗಳಾಕವುಮಾವ್. “ಭೋಗಮಾತ್ರ ಸಾಮ್ಯಲಿಙ್ಗಾಚ್ಚ ಎಙ್ಗಿರಪಡಿಯೇ ಮುಕ್ತದಶೈಯಿಲ್ ಪರಮಸಾಮ್ಯಂ ಭೋಗತ್ತಿಲುಮ್ ಜ್ಞಾನತ್ತಿಲುಮ್ ಆಗೈಯಾಲ್, ಅಪ್ಪೋದುಮ್ ಸ್ವರೂಪಾನುಬಂಧಿಯಾನ ಶೇಷತ್ವತ್ತು ಕ್ಕುಮ್, ಇದಿನ್ ಫಲಮಾನ ಕೈಙ್ಕರ್ಯತ್ತುಕ್ಕುಮ್, ವಿರೋಧಮಿಲ್ಲೈ.**

---

ತ್ಕಾರಣತ್ವಾದಿಗಳಲ್ಲಿ ಸಾಮ್ಯವಿಲ್ಲವೆಂದು “ಜಗದ್ವ್ಯಾಪಾರ ವರ್ಜಮ್” (೪. ೪. ೭) ಎಂಬ ಬ್ರಹ್ಮಸೂತ್ರದಲ್ಲಿ ಮಹರ್ಷಿಯು ವ್ಯಕ್ತಪಡಿಸಿರುತ್ತಾರೆ.— **“ಭೋಗಮಾತ್ರ ಸಾಮ್ಯ ಲಿಙ್ಗಾಚ್ಚ”** (೪. ೪. ೨೧) ಎಂದರೆ, ಶ್ರುತಿಯು **“ಪರಮಂಸಾಮ್ಯಮುಪೈತಿ”** (ಮುಂ. ೩- ೧. ೩.) ಎಂಬಲ್ಲಿ ಹೇಳಿರುವ ಸಾಮ್ಯವು ಎಂತಾದ್ದೆಂದರೆ, **“ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ”** ಎಂಬುವ ಶ್ರುತಿಯಲ್ಲಿ ಹೇಳಿರುವ ಹಾಗೆ, ಮುಕ್ತನಿಗೆ ಆನಂದದಲ್ಲಿ ಮಾತ್ರವೇ ಸಾಮ್ಯವು. ಇನ್ನು ಏತರಲ್ಲಿಲ್ಲವೆಂದರೆ ಜಗತ್ತಿನ ಸೃಷ್ಟಿಸ್ಥಿತಿ ಲಯಾದಿಗಳಲ್ಲಿ ಸಾಮ್ಯವಿಲ್ಲವು. ಇಲ್ಲಿರುವ ಮಾತ್ರ ಶಬ್ದವು ಜಗದ್ವ್ಯಾಪಾರವನ್ನು ವ್ಯಾವರ್ತಿಸಿ ಹೇಳಿತೇ ವಿನಾ ಪರಮಾತ್ಮನಿಗೆ ಮಾಡುವ ಕೈಙ್ಕರ್ಯವು ವ್ಯಾವರ್ತಿಸಿ ಹೇಳಲ್ಪಡಲಿಲ್ಲವೆಂದು ಹೇಳುತ್ತಾರೆ.—**ಎಙ್ಗಿರಪಡಿಯೇ** - ಎಂದು ಈ ಸೂತ್ರದಲ್ಲಿ ಹೇಳಿರುವ ಹಾಗೆ, **ಮುಕ್ತದಶೈಯಿಲ್** - ಮುಕ್ತದೆಶೆಯಲ್ಲಿ, **ಪರಮಸಾಮ್ಯವು, ಭೋಗತ್ತಿಲುಮ್ ಜ್ಞಾನತ್ತಿಲುಮ್ ಆಗೈಯಾಲೇ** - ಆನಂದದಲ್ಲೂ, ಸರ್ವಜ್ಞತ್ವವುಂಟಾಗುವದರಿಂದ ಜ್ಞಾನದಲ್ಲೂ, ಆದುದರಿಂದ, **ಅಪ್ಪೋದು** - ಆ ಮುಕ್ತದದೆಶೆಯಲ್ಲಿ, **ಸ್ವರೂಪಾನುಬಂಧಿಯಾನ** - ತನ್ನ ಆವಿರ್ಭವಿಸಿದ ಸ್ವರೂಪಕ್ಕೆ ಸಂಬಂಧಿಸಿದ, **ಶೇಷತ್ವಕ್ಕುಮ್** - ಶೇಷಭಾವಕ್ಕೂ, **ಇದಿನ್ ಫಲಮಾನ** - ಅದರ ಕಾರ್ಯವಾದ **ಕೈಂಕರ್ಯತ್ತುಕ್ಕುಮ್** - ಪರಮ ಪುರುಷನಿಗೆ ಕೈಙ್ಕರ್ಯಮಾಡುವುದಕ್ಕೂ, **ವಿರೋಧಮಿಲ್ಲೈ** - ವಿರೋಧವಿಲ್ಲವು. ಮೋಕ್ಷದೆಶೆಯಲ್ಲಿ, ಹಿಂದೆ ಪ್ರಾಪ್ತವಾಗಿದ್ದ ಜ್ಞಾನಸಂಕೋಚವು ತೊಲಗಿ, ಸರ್ವಜ್ಞತೆಯುಂಟಾಗುತ್ತದೆ. ಮೋಕ್ಷಪ್ರಾಪ್ತಿಗೆ ಮುಂಚೆಯೇ ಉಪಾಯಾನುಷ್ಠಾನ ಕಾಲದಲ್ಲೇ, ಈತನಿಗೆ ಶೇಷತ್ವಜ್ಞಾನವು ಉಂಟಾಗಿತ್ತು. ಅದು ಮುಕ್ತದಶೆಯಲ್ಲಿ ಇನ್ನು ಸ್ಫುಟವಾಗಿ ಪ್ರಕಾಶಿಸುತ್ತದೆ. ಆ ಸಂದರ್ಭದಲ್ಲಿ ಅಂತಹ ಸ್ವಾಮಿಗೆ ಕೈಙ್ಕರ್ಯ ಮಾಡುವದೇ ಶೇಷನಾದ ತನಗೆ ಸ್ವರೂಪವು ಎಂಬುದು ವ್ಯಕ್ತವಾಗುವಾಗ, ವಿರುದ್ಧವೆಲ್ಲಿಯದು? ಆಗಲಿ, ತನಗೆ ಒಂದು ಸಾಮ್ರಾಜ್ಯರೂಪ ಪದವಿಯು ಪ್ರಾಪ್ತವಾಗಿದೆ ಎಂದಲ್ಲವೇ ಆಗ ಭಾವಿಸುವನು? **“ನನಾಕಪೃಷ್ಠಂ ನ ಚ ಸಾರ್ವಭೌಮಂ ನಪಾರಮೇಷ್ಠ್ಯಂ ನರಸಾಧಿಪತ್ಯಮ್ । ನಯೋಗಸಿದ್ಧೀ ರಪುನರ್ಭವಂ ವಾ ವಾಂಛನ್ತಿ ಯತ್ಪಾದರಜಃಪ್ರಪನ್ನಾಃ”** (ಭಾಗ. ೧೦. ೧೬. ೩೭) ಇಲ್ಲಿ **ಅಪುನರ್ಭವಂವಾ** ಎಂಬುದರಿಂದ ಕೈವಲ್ಯವು

ಹೇಳಲ್ಪಟ್ಟಿತು ; ಎಂಬಲ್ಲಿ ಹೇಳಿರುವ ಹಾಗೆ ಇವುಗಳೆಲ್ಲಾ ಆ ಕೈಂಕರ್ಯ ಸಾಮ್ರಾಜ್ಯದ ಮುಂದೆ ಅತಿತುಚ್ಛವಾದುವೆಂಬ ಜ್ಞಾನವಿರುವದರಿಂದ, ಕೈಂಕರ್ಯದ ಮುಂದೆ ಇನ್ನು ಯಾವುದನ್ನೂ ಅತಿಶಯವಾದುದೆಂದು ಭಾವಿಸನು. ಇದರ ಮಾಹಾತ್ಮ್ಯೆಯು ಜ್ಞಾನವನ್ನು ತಿಳಿದಿರುವದರಿಂದಲೇ ಮಹರ್ಷಿಗಳಿಂದ "ಸ ತು ನಾಗವರಶ್ರೀಮಾನ್" ಎಂದು ಕಷ್ಟದೆಶೆಯಲ್ಲಿದ್ದ ಗಜೇಂದ್ರನೂ, " "ಲಕ್ಷ್ಮಣೋ ಲಕ್ಷ್ಮಿವರ್ಧನಃ" ವನವಾಸವನ್ನನುಭವಿಸುವ ಲಕ್ಷ್ಮಣನೂ, "ಅಂತರಿಕ್ಷ ಗತಶ್ರೀಮಾನ್" ಎಂದು ಎಲ್ಲವನ್ನೂ ತ್ಯಜಿಸಿ ಬಂದ ವಿಭೀಷಣನೂ, ಕೊಂಡಾಡಲ್ಪಟ್ಟರು.

ಆಗಲಿ, **ನಾರಾಯಣಾಯ ಸ್ಯಾಮ್** ಅಥವಾ **ನಾರಾಯಣಾಯ ಭವೇಯಮ್** ಎಂಬ ಪ್ರಾರ್ಥನೆಯಲ್ಲೂ, **ಅಹಂ ಸರ್ವಂ ಕರಿಷ್ಯಾಮಿ** ಎಂಬಲ್ಲೂ, ಅಹಂಭಾವವು ತೋರಿಬರುತ್ತದಲ್ಲಾ, ಅದು ಪ್ರಪನ್ನನಿಗೆ ಸ್ವರೂಪವಿರುದ್ಧವಲ್ಲವೋ ? ಮುಮುಕ್ಷುದೆಶೆಯಲ್ಲೂ, ಮುಕ್ತದೆಶೆಯಲ್ಲೂ ಸಹ, ಇಂತಹ ಅಹಂಭಾವವು ಕೂಡದಲ್ಲಾ, ಎಂದರೆ ಅದಕ್ಕೆ ಸಮಾಧಾನವನ್ನು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ.– **ಮುಮುಕ್ಷುದಶೈಯಿಲುಮ್** - ಮೋಕ್ಷಾರ್ಥಿಯಾಗಿರುವ ದಶೆಯಲ್ಲೂ, **ಮುಕ್ತದಶೈಯಿಲುಮ್** - ಮುಕ್ತಿಯನ್ನು ಹೊಂದಿದ ದಶೆಯಲ್ಲೂ, **ಉಂಡಾನ ಅಹಂಗ್ರಹಂ** - ನಾನು ಸರ್ವವಿಧ ಕೈಙ್ಕರ್ಯವನ್ನು ಮಾಡುವೆನು ಅಥವಾ ಅಪೇಕ್ಷಿಸುವೆನು ಎಂಬ ಭಾವದಲ್ಲಿ ಪ್ರಾಪ್ತವಾಗುವ ಅಹಂಭಾವವು, **ಶರೀರಾತ್ಮಭಾವತ್ತಾಲೇ** – ಈತನು ಅಪೃಥಕ್ಸಿದ್ಧವಿಶೇಷಣರೂಪವಾದ ಶರೀರವಾಗಿ, ಪರಮಾತ್ಮನು ಆತ್ಮಾವಾಗಿರುವ ಭಾವದಿಂದುಂಟಾದುದು, ಎನ್ರು - ಎಂಬುದಾಗಿ, **ಭಾಷ್ಯಾದಿಗಳಿಲೇ** - **"ಆತ್ಮೇತಿ ತೂಪಗಚ್ಛನ್ತಿ ಗ್ರಾಹಯನ್ತಿ ಚ"** ಎಂಬ ಬ್ರಹ್ಮಸೂತ್ರದಲ್ಲಿ (೪.೧.೩) **"ತ್ವಂ ವಾ ಅಹಮಸ್ಮಿ"** ಎಂಬ **"ಅಹಂ ಬ್ರಹ್ಮಾಸ್ಮಿ** (ಬೃ. ೩.೪.೧೦) ಎಂಬ ಇತ್ಯಾದಿ ಶ್ರುತ್ಯರ್ಥವನ್ನು ಉಪಪಾದಿಸುವದರಲ್ಲಿ, **ಸಮರ್ಥಿತಮಾಗೈಯಾಲ್** - ಸ್ವರೂಪಪ್ರಾಪ್ತವಾದುದೇ ಎಂದು ಸಮರ್ಥಿಸಲ್ಪಟ್ಟಿರುವದರಿಂದ, **ಇವ್ವಹಂ ಗ್ರಹಮ್** - ನಾನು ಕೈಙ್ಕರ್ಯ ಮಾಡುವೆನು ಎಂಬಲ್ಲಿ ತೋರುವ ಅಹಂಭಾವವು, **ಪಾರಾರ್ಥ್ಯ ಕಾಷ್ಠೈ ಅಡಿಯಾಗ ವನ್ದದಿರೇ** - ತಾನು ಸರ್ವೇಶ್ವರನಿಗೇನೇ ನಿರುಪಾಧಿಕ ಶೇಷಭೂತನಾಗಿ ಆತನ ಪ್ರಯೋಜನಕ್ಕಾಗಿಯೇ ತಾನು; ಆ ಕಾರಣದಿಂದ ಆತನಿಗೆ ಕೈಙ್ಕರ್ಯಮಾಡುವದೇ ತನಗೆ ಸ್ವರೂಪವೆಂಬ ಉತ್ಕೃಷ್ಟಜ್ಞಾನಮೂಲಕವಾಗಿ ಪ್ರಾಪ್ತವಾದುದಷ್ಟೇ. ಆದುದರಿಂದ ಇಂತಹ ಅಹಂಭಾವವು ವಿರೋಧವಾದುದಲ್ಲವು ; ಅಷ್ಟು ಮಾತ್ರವೇ ಅಲ್ಲದೆ ಈತನ ಪಾರಾರ್ಥ್ಯಕಾಷ್ಠೆಯನ್ನು ಪ್ರಕಟಿಸುವದಾಗಿ ಈತನಿಗೆ ಅತಿಶಯಾವಹವೆಂಬ ಭಾವವೂ ಸೂಚಿತವು. ಮೇಲಿನ ವಾಕ್ಯದಲ್ಲಿ **ಭಾಷ್ಯಾದಿ** ಎಂಬಲ್ಲಿರುವ **ಆದಿ**ಪದದಿಂದ ದೀಪಸಾರಗಳಲ್ಲೂ ಹೇಳಲ್ಪಟ್ಟವೂ ಸಙ್ಗ್ರಹೀತವು. ಮೇಲಿನ ಶಾರೀರಕ ಸೂತ್ರಾಭಿಪ್ರಾಯವೇನೆಂದರೆ ಪರಮಾತ್ಮನನ್ನು ಈ ಚೇತನನು ಉಪಾಸಿಸುವಾಗ, ತನಗೆ ಪರಮಾತ್ಮನು ಬೇರೆ

**ಮುಮುಕ್ಷು ದಶೈಯಿಲುಮ್, ಮುಕ್ತದಶೈಯುಲುಮ್, ಉಣ್ಣಾನ ಅಹಂಗ್ರಹಮ್ ಶರೀರಾತ್ಮ ಭಾವತ್ತಾಲೇ ಎನ್ರು ಭಾಷ್ಯಾದಿಗಳಿಲೇ ಸಮರ್ಥಿತಮಾಗೈಯಾಲೇ, ಇವ್ವಹಂಗ್ರಹಮ್ ಪಾರಾರ್ಥ್ಯಕಾಷ್ಠೈ ಅಡಿಯಾಗ ವನ್ದದಿರೇ.**

---

ಎಂದು ಉಪಾಸಿಸತಕ್ಕದ್ದೇ, ಅಥವಾ **ಶರೀರಾತ್ಮಭಾವವಿರುವದರಿಂದ** ಒಂದೇ ಎಂದೇ ಭಾವಿಸಿ ತನಗೆ ಆತನು ಆತ್ಮಾ ಎಂದು ಉಪಾಸಿಸತಕ್ಕದ್ದೇ,ಎಂಬ ಸಂದೇಹದಲ್ಲಿ ಪೂರ್ವಪಕ್ಷಿಯು **ಅಧಿಕಂತುಭೇದ ನಿರ್ದೇಶಾತ್** ಇತ್ಯಾದಿ ಸೂತ್ರಗಳಲ್ಲೂ **"ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ"**ಎಂಬ ಶ್ರುತಿಯಲ್ಲೂ,ಜೀವಾತ್ಮನಿಗಿಂತ ಅಧಿಕನೆಂದು ಹೇಳಿರುವದರಿಂದ ತನಗಿಂತಲೂ ಬೇರೆಯಾಗಿಯೇ ಭಾವಿಸಿ ಉಪಾಸಿಸತಕ್ಕದ್ದೆಂದು ಪೂರ್ವಪಕ್ಷವನ್ನು ಹೇಳಿದರೆ, ಆ ಅಭಿಪ್ರಾಯವು ಈ ಸೂತ್ರದಲ್ಲಿ ಖಂಡಿಸಲ್ಪಡುತ್ತದೆ. ಶರೀರಾತ್ಮ ಭಾವವಿರುವದರಿಂದ **"ಅಹಂ ಬ್ರಹ್ಮಾಸ್ಮಿ"** ನಾನೂ ಪರಮಾತ್ಮ ಶರೀರಕನಾಗಿರುವದರಿಂದ, ಆತನು ನನಗೆ ಆತ್ಮಾವಾಗಿರುವದರಿಂದ ನಾನೂ ಪರಮಾತ್ಮಾತ್ಮಕನೆಂದೇ ಉಪಾಸಿಸತಕ್ಕದ್ದೆಂದು ಹೇಳಲ್ಪಟ್ಟಿತು. ಶರೀರಾತ್ಮಭಾವದಿಂದ ಒಂದೇ ಎಂದೇ ಉಪಾಸಿಸತಕ್ಕದ್ದೆಂಬುದು ಸೂತ್ರಾಭಿಪ್ರಾಯವು. ಹೀಗೆ ಈ ನಾರಾಯಣಾಯ **ಸ್ಯಾಮ್** ಎಂಬ ಪ್ರಾರ್ಥನೆಗೆ ಕಾರಣವು:—ಈತನು ತನ್ನ ಯಥಾವಸ್ಥಿತ ಸ್ವರೂಪಜ್ಞಾನಮೂಲಕವಾಗಿ ತಿಳಿದ ತನ್ನ ಶೇಷತ್ವದ ಪರಾಕಾಷ್ಠಾ ದಶೈಯಾದುದರಿಂದ ಆಹಂಭಾವವೆಂದು ಭಾವಿಸಲು ಸಾಧ್ಯವಿಲ್ಲವೆಂಬುದು ತಾತ್ಪರ್ಯವು. ಇದನ್ನೇ ಮುಂದಿನ ಎರಡು ವಾಕ್ಯಗಳ ಮೂಲಕ ಉಪಪಾದಿಸುತ್ತಾರೆ.—ಮುಂದೆ ಮುಮುಕ್ಷು ದಶೈಯಲ್ಲಿ ಮಾಡುವ ಕೈಙ್ಕರ್ಯದ ಲಕ್ಷಣವನ್ನು ಬೋಧಿಸುತ್ತಾರೆ.—ಮೋಕ್ಷದಶೆಗಿಂತ ಇದು ವೈಲಕ್ಷಣ್ಯದಲ್ಲಿ ಸ್ವಲ್ಪ ಕಡಿಮೆ ಎಂದು ಉಪದೇಶಿಸುತ್ತಾರೆ—**ಮುಮುಕ್ಷು ದಶೈಯಿಲ್** - ಮೋಕ್ಷಾರ್ಥಿಯಾಗಿರುವ ದಶೆಯಲ್ಲಾದರೋ, **ಸ್ವಯಂ ಪ್ರಯೋಜನಮಾಗ ಪಣ್ಣುಮ್ ಕೈಙ್ಕರ್ಯಮ್** - ಫಲಾದಿಗಳ ಸಂಬಂಧವಿಲ್ಲದೆ ಮಾಡುವ ಕೈಙ್ಕರ್ಯವು, ಮುಕ್ತದಶೈಯುಲ್ಲಿನ ಹಾಗೆ ನಿರುಪಾಧಿಕವಾಗಿ ಸ್ವತಃ ಪ್ರಾಪ್ತವಲ್ಲದಿದ್ದರೂ, **ಸುಕೃತ ವಿಶೇಷೋಪಾಧಿಕಮಾಯ್** - ಹಿಂದೆ ಮಾಡಿದ ಸುಕೃತರೂಪವಾದ ಉಪಾಧಿ ಮೂಲಕ ಉಂಟಾದುದಾಗಿ, **ದ್ವಂದ್ವಾತಿತಿಕ್ಷಾ ಯುಕ್ತಮಾಯ್** - ಶೀತೋಷ್ಣ ಸುಖದುಃಖಲಾಭಾಲಾಭಾದಿ ದ್ವಂದ್ವಗಳು ತಪ್ಪಿದ್ದಲ್ಲವಾಗಿ, ಅವುಗಳನ್ನು ಸಹಿಸಿಕೊಳ್ಳುವನಾಗಿ **ನಿದ್ರಾದಿಗಳಿಲೇ ಅನ್ತರಿತಮಾಯ್** - ನಿದ್ರಾ ಆಲಸ್ಯ ವೃಥಾಲಾಪ ಮೊದಲಾದ ಕಾಲಗಳಲ್ಲಿ ಇಲ್ಲದವುಗಳಾಗಿ, ಹೀಗೆ **ಅವಚ್ಛಿನ್ನ ರಸಮಾಯಿರುಕ್ಕುಮ್** - ಪರಿಮಿತವಾದ ಆನಂದವನ್ನುಂಟುಮಾಡುವದಾಗಿರುತ್ತದೆ. **ಇಪ್ಪಡಿ - "ಅಹಂ ನಾರಾಯಣಾಯಸ್ಯಾಮ್"** ಎಂಬ ಪ್ರಾರ್ಥನೆಯು ಪಾರಾರ್ಥ್ಯ ಕಾಷ್ಠಾಮೂಲಕ

**ಇಪ್ಪಡಿ ಮುಕ್ತದಶೈಯಿಲ್ ವರುಮ್ ಕೈಙ್ಕರ್ಯಮ್, ಸ್ವತಃ ಪ್ರಾಪ್ತ ಮಾಯ್, ದ್ವಂದ್ವದುಃಖ ರಹಿತಮಾಯ್, ನಿರನ್ತರಮಾಯ್ ಅವಿಚ್ಛಿನ್ನ ರಸಮಾಯಿರುಕ್ಕುಮ್. ಮುಮುಕ್ಷುದಶೈಯಿಲ್ ಸ್ವಯಂಪ್ರಯೋಜನ ಮಾಗಪ್ಪಣ್ಣುಮ್ ಕೈಙ್ಕರ್ಯಮ್, ಸುಕೃತವಿಶೇಷೋಪಾಧಿಕಮಾಯ್, ದ್ವಂದ್ವತಿತಿಕ್ಷಾಯುಕ್ತಮಾಯ್, ನಿದ್ರಾದಿಗಳಾಲೇ ಅನ್ತರಿತಮಾಯ್, ಅವಚ್ಛಿನ್ನ ರಸಮಾಯಿರುಕ್ಕುಮ್.**

---

ವಾಗಿರುವದರಿಂದಲೇ, ಮುಕ್ತದಶೈಯಲ್ಲಿ, **ವರುಮ್ ಕೈಙ್ಕರ್ಯಂ** - ಬರುವ ಕೈಙ್ಕರ್ಯವು, **ಸ್ವತಃ ಪ್ರಾಪ್ತಮಾಯ್** - ಸ್ವರೂಪತಃ ಉಂಟಾಗುವದಾಗಿ, **ದ್ವಂದ್ವ ದುಃಖ ರಹಿತಮಾಯ್** - ಶಿತೋಷ್ಣಾದಿ ರೂಪವಾದ ದುಃಖವಿಲ್ಲದಾಗಿ, **ನಿರನ್ತರ ಮಾಯ್** – ನಿತ್ಯವಾದುದಾಗಿ, **ಅನವಚ್ಛಿನ್ನ ರಸಮಾಯ್** – ಅನವಧಿಕಾನಂದ ದಾಯಕವಾಗಿ, **ಇರುಕ್ಕುಮ್** - ಇರುವದು. ಈ ಲೋಕದಲ್ಲಿ ಸೇವಕನು ತನ್ನ ಯಜಮಾನನಿಗೆ ದುಡ್ಡಿಗಾಗಿ ಮಾಡುವ ಕೈಙ್ಕರ್ಯವು ಹೀಗಿರುವದಿಲ್ಲವು ; ಅದು ಸೋಪಾಧಿಕವು ; ಸ್ವತಃ ಪ್ರಾಪ್ತವಾದುದಲ್ಲವು ; ದ್ವಂದ್ವ ದುಃಖರಹಿತವಾದುದೂ ಅಲ್ಲವು ; ನಿರನ್ತರವಾದುದೂ ಅಲ್ಲವು ; ಅನವಚ್ಛಿನ್ನ ಆನಂದವೂ ಅಲ್ಲವು. ಅದರೆ ಲಕ್ಷ್ಮಣನು ಶ್ರೀರಾಮಪ್ರಭುವಿಗೆ ಮಾಡಿದ ಕೈಙ್ಕರ್ಯವೂ, ಆಂಜನೇಯನು ಶ್ರೀರಾಮ ನಿಗೋಸ್ಕರ ಮಾಡಿದ ಕೈಙ್ಕರ್ಯವೂ, ಶಬರಿಯು ಮತಙ್ಗಮಹರ್ಷಿಗೆ ಮಾಡಿದ ಕೈಂಙ್ಕರ್ಯವೂ, ಈ ಮೇಲೆ ಕೊಂಡಾಡಲ್ಪಟ್ಟ ಮುಮುಕ್ಷುವಿನ ಕೈಙ್ಕರ್ಯವಾಗುತ್ತದೆ. ಹಾಗೆಯೇ ತೊಂಡರಡಿಪ್ಪೊಡಿಯವರು ಮಾಡಿದ ಕೈಙ್ಕರ್ಯವೂ ಸಹ ಎಂದು ಭಾವಿಸ ತಕ್ಕದ್ದು. ಇವರುಗಳು ಆಸದೃಶ ಪ್ರೀತಿಯಿಂದ ಮಾಡಿದ ಕೈಙ್ಕರ್ಯವಾದುದ ರಿಂದ, ಇದು ಪರಿಚ್ಛಿನ್ನವಾದರೂ,**ರಸಮಾಯಿರುಕ್ಕುಮ್** - ಆನಂದಾವಹವಾಗಿಯೇ ಇರುತ್ತದೆಂದು ಹೇಳಿದರು. ಇದೂ ಮುಕ್ತಾನಂದದಷ್ಟು ನಿರತಿಶಯವಲ್ಲದಿದ್ದರೂ, ಇಲ್ಲಿ ಮುಮುಕ್ಷುದಶೆಯಲ್ಲಿ ಮಾಡುವ ಕೈಙ್ಕರ್ಯವೂ ಇದ್ದಮಟ್ಟಿಗೆ ಭೋಗ್ಯಭೂತ ವಾಗಿ ಸುಖವಾಗಿರುವದನ್ನು ನೋಡಿ, ಶ್ರೀಮದಾಳ್ವಾರ್ರವರು ಸ್ವರೂಪೈಕ್ಯವಾದಿ ಯನ್ನು ಕುರಿತು **ಇಚ್ಚ್ಗೇತಿರಿಯುಮೋ** ಎಂದು ಹೇಳಿಬಿಟ್ಟರು. ಆದುದರಿಂದ ಕೈಙ್ಕರ್ಯಪ್ರಾರ್ಥನೆಯು ತನ್ನ ಸ್ವರೂಪದಿಂದ ತೋರಿಬರುವ ಶೇಷತ್ವಜ್ಞಾನದ ಪರಾಕಾಷ್ಠಾದಶೈಯಾದುದರಿಂದ, ಈತನಿಗೆ ಯೋಗ್ಯವಾದುದೇ ವಿನಾ ಅಹಂಭಾವದ ವಿಜೃಂಭಣೆ ಏನೂ ಅಲ್ಲವೆಂಬುದು ಮುಖ್ಯ ತಾತ್ಪರ್ಯವು. ಇಲ್ಲಿ **ದ್ವಂದ್ವತಿತಿಕ್ಷಾ ಯುಕ್ತಮಾಯ್** ಎಂದು ಹೇಳಿರುವದು, "**ಮಾತ್ರಾ ಸ್ಪರ್ಶಾ ಸ್ತು ಕೌಂತೇಯ ಶೀತೋಷ್ಣ ಸುಖದುಃಖದಾಃ । ಆಗಮಾಪಾಯಿನೋಽನಿತ್ಯಾಃ ತಾಂಸಿ ತಿಕ್ಷಸ್ವಭಾರತ**" ಎಂಬ (ಗೀ. ೨. ೧೪.) ಶ್ರೀ ಕೃಷ್ಣೋಪದೇಶವು ಸ್ಮಾರಿತವು. ಅಹಂಗ್ರಹವು ಎಲ್ಲಿ ತುಂಬಾ ನಿಂದಿತವು ಎಂದರೆ ಐಹಿಕವಾಗಿ ಅಶಾಶ್ವತ

**ಕೈಙ್ಕರ್ಯಾತಿರಿಕ್ತ ವ್ಯಾಪಾರೇಷು ಕರ್ತವ್ಯಾ ಕರ್ತವ್ಯ ವಿಭಾಗವಾಹ.**

**ಇಙ್ಗ ಇವನ್ ಕೈಙ್ಕರ್ಯಮೊಳಿಯಪ್ಪಣ್ಣುಮ್ ವ್ಯಾಪಾರಙ್ಗಳಿಲ್ ಭಗವದಾಜ್ಞೈಕ್ಕು ಪ್ಪೊರುನ್ದಾದವೈ ಯೆಲ್ಲಾ ಮೇದೇನು ಮೊರುಪ್ರತಿಕೂಲ ಫಲತ್ತೈಕ್ಕೊಡುಕ್ಕುಮ್. ಭಗವದನುಜ್ಞಾತಙ್ಗಳಾನ ಕಾಮ್ಯಙ್ಗಳಿಲ್ ಸ್ವರ್ಗ**

---

ವಾಗಿರುವ ವಿಷಯಾನುಭವಗಳಲ್ಲಿ ಮಮಕಾರವು ದುಷ್ಟವು, ಬಂಧಕವು. ಆ ಸಂದರ್ಭದಲ್ಲಿ **"ಮಮೇತಿ ದ್ವ್ಯಕ್ಷರೋ ಮೃತ್ಯುಃ ನಮಮೇತಿ ಚ ಶಾಶ್ವತಃ"** ಎಂಬುದು ಅನುಸಂಧೇಯವು. ಇದನ್ನೂ ಮುಂದೆ ಉಪಪಾದಿಸುತ್ತಾರೆ.

**ಕೈಙ್ಕರ್ಯವಲ್ಲದ ಇತರ ವ್ಯಾಪಾರಗಳಲ್ಲಿ ಮಾಡತಕ್ಕ ಮತ್ತು ಮಾಡಕೂಡದ ವ್ಯಾಪಾರ ವಿಭಾಗಗಳನ್ನು ತಿಳಿಸುತ್ತಾರೆ।**

**ಇಙ್ಗ** - ಈ ಸಂದರ್ಭದಲ್ಲಿ, **ಇವನ್** - ಈ ಮೋಕ್ಷಾರ್ಥಿಯು, **ಕೈಙ್ಕರ್ಯಮೊಳಿಯ** - ಕೈಙ್ಕರ್ಯಗಳಲ್ಲದೆ, **ಪಣ್ಣುಮ್ ವ್ಯಾಪಾರಙ್ಗಳಿಲ್** - ಮಾಡುವ ವ್ಯಾಪಾರಗಳಲ್ಲಿ, **ಭಗವದಾಜ್ಞೈಕ್ಕು** - ಭಗವಂತನ ಆಜ್ಞೆಗಳಾದ ವಿಧಿ ನಿಷೇದ ವಾಕ್ಯಗಳಿಗೆ, **ಪೊರುನ್ದಾದವೈ ಯೆಲ್ಲಾ** – ವಿರುದ್ಧವಾದ ವ್ಯಾಪಾರವೆಲ್ಲಾ, **ಏದೇನು ಮೊರು ಪ್ರತಿಕೂಲ ಫಲತ್ತೈ ಕೊಡುಕ್ಕುಮ್** - ಯಾವುದಾದರೂ ಒಂದು, ಪ್ರತಿಕೂಲಫಲವನ್ನು ಎಂದರೆ ದುಃಖವನ್ನು ಕೊಡುತ್ತದೆ. ಅನುಕೂಲ ಫಲವು ಸುಖವು, ಪ್ರತಿಕೂಲಫಲವು ದುಃಖವು. ಏಕೆಂದರೆ ಭಗವಂತನ ಆಜ್ಞೆಗಳಿಗೆ ವಿರುದ್ಧಾಚರಣೆಯಾದ ಅಧರ್ಮವು, ಸ್ವಾಮಿಯ ನಿಗ್ರಹವನ್ನುಂಟುಮಾಡುತ್ತದೆ. **"ನ ಖಲು ಭಾಗವತಾ ಯಮ ವಿಷಯಂ ಗಚ್ಛನ್ತಿ** ಎಂದು ಹೇಳಿರುವ ಹಾಗೆ, ಉಪಾಯಾನುಷ್ಠಾನ ಮಾಡಿದ ಮೋಕ್ಷಾರ್ಥಿಯು, ಯಮನ ಪಟ್ಟಣವಾದ ನರಕವನ್ನು ಕುರಿತು ಹೋಗದಿದ್ದರೂ, **"ಇಹೈ ವೈಷಾಂ ಕೇಚಿದು ಪಪ್ಲವಾ ಭವನ್ತಿ"** ಎಂದು ಹೇಳಿರುವ ಹಾಗೆ ಕ್ಲೇಶಗಳನ್ನು ಅನುಭವಿಸುವರು. ಹಿಂದೆ ಅಂತವನು ಸಾಧಾರಣವಾಗಿ ಬುದ್ಧಿಪೂರ್ವಕವಾಗಿ ಕೃತ್ಯಾಕರಣ, ಅಕೃತ್ಯಾಕರಣರೂಪಗಳಾದ ಅಪರಾಧಗಳಿಗೆ ಗುರಿಯಾಗುವುದಿಲ್ಲವೆಂದು "**"ಧೀಪೂರ್ವೋತ್ತರ ಪಾಪ್ಮನಾಮ ಜನನಾತ್"** ಎಂದು ಹೇಳಿದರು. ಹಾಗೆ ಒಂದು ವೇಳೆ ಭಗವದಾಜ್ಞೆಗೆ ವಿರುದ್ಧವಾಗಿ ನಡೆದರೆ, ಅದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ **"ಶಿಕ್ಷಯಾಪ್ಯ ನಘರ್ಯ ಕ್ರೋಡೀಕರೋತಿ ಪ್ರಭುಃ"** ಎಂಬಲ್ಲಿ ಪ್ರತಿಕೂಲಫಲವನ್ನನುಭವಿಸುವನೆಂದು ಅಪರಾಧ ಪರಿಹಾರಾಧಿಕಾರದಲ್ಲಿ ಹೇಳಲ್ಪಟ್ಟಿರುತ್ತದೆ (೧೬೦೭ನೆಯ ಪುಟವನ್ನು ನೋಡಿ)

ಮುಂದೆ ಭಗವದನುಜ್ಞಾತವಾದುವಾಗಿ ಕಾಮ್ಯಗಳಾದ ಕರ್ಮಗಳಾಗಿದ್ದರೆ ಹೇಗೆ ಎಂಬುದನ್ನು ತಿಳಿಸುತ್ತಾರೆ—**ಭಗವದನುಜ್ಞಾತಙ್ಗಳಾನ** - ಭಗವದನುಜ್ಞೆ

**ಪಶ್ವಾದ್ಯರ್ಥಙ್ಗಳಾನವೈಯೆಲ್ಲಾಮನೇಕದೋಷ ದುಷ್ಟಙ್ಗಳಾನ ಅನುಕೂಲಾಭಾಸಙ್ಗಳೈಕ್ಕೊಡುತ್ತು ಅವ್ವುಖತ್ತಾಲೇ ಬಾಧಕಙ್ಗಳಾವುನ್. ಆಗೈಯಾಲೇ ಮುಮುಕ್ಷುವುಕ್ಕು (೧) "ತ್ರೈವರ್ಗಿಗಾಂ ಸ್ತ್ಯಜೇದ್ಧರ್ಮಾನ್"**

---

ಇರುವ, **ಕಾಮ್ಯಙ್ಗಳಿಲ್** - ಕಾಮ್ಯಕರ್ಮಗಳಲ್ಲಿ, **ಸ್ವರ್ಗಪಶ್ವಾದ್ಯರ್ಥಙ್ಗಳಾನವೈಯೆಲ್ಲಾಮ್** - ಸ್ವರ್ಗಭೋಗ, ಗೋವೊದಲಾದ ಸಮೃದ್ಧಿ, ಇವೇ ಮೊದಲಾದ ಪ್ರಯೋಜನಗಳೆಲ್ಲಾ, **ಅನೇಕ ದೋಷದುಷ್ಟಙ್ಗಳಾನ** - ಅನೇಕ ದೋಷಗಳಿಂದ ದೂಷಿತಗಳಾದ, **ಅನುಕೂಲಾಭಾಸಙ್ಗಳೈಕ್ಕೊಡುತ್ತು** - ಅನುಕೂಲಗಳೆಂಬ ಭ್ರಮೆಯನ್ನುಂಟುಮಾಡಿ, **ಅವ್ವುಖತ್ತಾಲೇ** - ಆ ಮೂಲಕವಾಗಿ, **ಬಾಧಕಙ್ಗಳಾವುನ್** – ಈತನಿಗೆ ದುಃಖವನ್ನುಂಟುಮಾಡುವುಗಳಾಗಬಹುದು. ಪುತ್ರದ್ರವ್ಯಾದಿ ಪ್ರಾಪ್ತಿಗಳಿಗೆ ಈತನು ಕಾಮ್ಯಕರ್ಮಗಳನ್ನು ಅನುಷ್ಠಿಸಿದುದಾದರೆ, ಆ ಪುತ್ರದ್ರವ್ಯಾದಿ ಪ್ರಾಪ್ತಿಯು ತತ್ಕಾಲದಲ್ಲಿ ಸುಖವಾಗಿ ತೋರಿದರೂ, ಅವುಗಳಿಗೆ ಪ್ರಾಪ್ತವಾಗುವ ಪುತ್ರವ್ಯಾಧಿದ್ರವ್ಯನಾಶ ಇವೇ ಮೊದಲಾದವುಗಳ ಮೂಲಕ ತುಂಬಾ ಕ್ಲೇಶಕ್ಕೆ ಕಾರಣವಾಗಬಹ ದೆಂಬ ಭಾವವು. ಕಾಮ್ಯಫಲವೆಲ್ಲಾ ಅಲ್ಪಾಸ್ಥಿರಗಳಾದವು, ಪ್ರಾಜ್ಞನಾದ ಮುಮುಕ್ಷುವು ಅವುಗಳಲ್ಲಿ ಮಮತೆಯನ್ನಿಟ್ಟು ಅಂತಹ ಕರ್ಮಗಳನ್ನು ಆಚರಿಸತಕ್ಕದ್ದಲ್ಲವೆಂಬ ಭಾವವು. ಮಕ್ಕಳಿಲ್ಲವೆಂದು ದಶರಥಮಹಾರಾಯನು ಕಾಮ್ಯರೂಪ ಪುತ್ರಕಾಮೇಷ್ಟಿಯನ್ನನುಷ್ಠಿಸಿ, ಪುತ್ರರನ್ನು ಪಡೆದು, ಪರಮಸುಖವನ್ನು ಹೊಂದಿದೆನೆಂದು ಭಾವಿಸುತ್ತಿರುವಾಗಲೇ, ಶ್ರೀರಾಮಲಕ್ಷ್ಮಣರನ್ನು ವನವಾಸಕ್ಕೆ ಕಳುಹಿಸಬೇಕಾಗಿ ಬಂದುದರಿಂದ ದುಃಖದಿಂದಲೇ ಮೃತನಾದನು ; ಹಾಗೆ **ಸುಖಾಭಾಸಗಳು ಕಾಮ್ಯಕರ್ಮಗಳು** ಎಂಬ ಭಾವವು. ಹಾಗೆಯೇ ನಹುಷ ಮಹಾರಾಜನು ಇಂದ್ರಪದವಿಯನ್ನು ಕಾಮ್ಯಗಳಾದ ಯಜ್ಞಗಳ ಮೂಲಕ ಹೊಂದಿದುದು ಅಜಗರವಾಗಿ ಪುನರ್ಜನ್ಮವೆತ್ತುವದಕ್ಕೆ ಕಾರಣವಾಯಿತು. ಹೀಗೆ ಕಾಮ್ಯಕರ್ಮಗಳಿಂದ ದುಃಖಮಿಶ್ರವಲ್ಲದ ಸುಖವಿಲ್ಲದುದರಿಂದ, ಸುಖಾಭಾಸವೆಂಬ ಪ್ರಯೋಗವು ; ಆದುದರಿಂದ ಕೇಚಿದು **ಪಪ್ಲನಾ ಭವಂತಿ** ಎಂದು ಹೇಳಲ್ಪಟ್ಟಿತು. ಇಲ್ಲಿ ಇಂತಹ ಕಾಮ್ಯಗಳೂ ತ್ಯಾಜ್ಯಗಳು ಎಂದು ಹೇಳಲ್ಪಟ್ಟವು. ಮುಂದೆ ಪ್ರಾಜ್ಞನಾದವನು ಕಾಮ್ಯಕರ್ಮಗಳನ್ನು ಹೇಗೆ ಅನುಷ್ಠಿಸಿದರೆ ಬಂಧಕವನ್ನೂ ಮತ್ತು ಕ್ಲೇಶಗಳನ್ನೂ, ಉಂಟುಮಾಡುವುದಿಲ್ಲವು ಎಂದರೆ ತಿಳಿಸುತ್ತಾರೆ.—

ಹಾಗಾದರೆ ಎಲ್ಲಾ ಕಾಮ್ಯಗಳೂ ತ್ಯಾಜ್ಯವೋ ? ಎಂದರೆ, ಭಗವದ್ಭಕ್ತಿ ತತ್ವಜ್ಞಾನ ಭಗವದ್ಭಾಗವತ ಸಮೃದ್ಧಿಯನ್ನು ಕುರಿತು ಮಾಡುವ ಕಾಮ್ಯಕರ್ಮಗಳು ಬಾಧಕಗಳಾಗದೆ ಉಚಿತ ಕೈಙ್ಕರ್ಯ ಕೋಟಿಯಲ್ಲಿ ಸೇರಿದವು ಎಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—**ಆಗೈಯಾಲೆ** – ಹೀಗೆ ಸ್ವಪ್ರಯೋಜನಾರ್ಥಗಳಾದ ಕಾಮ್ಯಕರ್ಮಗಳು ದುಃಖಪ್ರದಗಳಾದುದರಿಂದ, **ಮುಮುಕ್ಷುವುಕ್ಕು** - ಮೋಕ್ಷಾ

ಎಙ್ಗಿರಪಡಿಯೇ ಪ್ರಯೋಜನಾಂತರ ಹೇತುಕ್ಕಳೈ ವಿಟ್ಟು, ಭಕ್ತಿತತ್ವಜ್ಞಾನ ಙ್ಗಳೈಯುಮ್ ಭಗವದ್ಭಾಗವತ ಸಮೃದ್ಧಿಯೈಯುಮ್ಪತ್ತಿಚ್ಚೈಯ್ಯುಙ್ಕಾಮ್ಯ ಙ್ಗಳಾನ ಭಗವದ್ಧರ್ಮಙ್ಗಳ್ ಸಾಧನಮಾಗ ವನುಷ್ಠಿಕ್ಕಚೆಯ್‌ದೆಯುಮ್ ಬಂಧಙ್ಗಳಲ್ಲಾಮೈಯಾಲೇ ಉಚಿತಮಾನ ಕೈಙ್ಕರ್ಯಕೋಟಿಯಿಲೇ ಶೇರ್‌ನ್ದು ಕಿಡಕ್ಕುಮ್.

---

ರ್ಥಿಗೆ (೧) ತ್ರೈವರ್ಗಿಕಾ – ಧರ್ಮ, ಅರ್ಥ, ಕಾಮುಗಳೆಂಬ ಮೂರು ಪ್ರಯೋಜನಗಳುಳ್ಳ, ಧರ್ಮಾ - ಪ್ರವೃತ್ತಿಗಳನ್ನು ತ್ಯಜೇತ್ - ತ್ಯಜಿಸತಕ್ಕದ್ದು" ಎಙ್ಗಿರ ಪಡಿಯೇ - ಎಂದು ಹೇಳಿರುವ ಹಾಗೆ, ಪ್ರಯೋಜನಾನ್ತರ ಹೇತುಕ್ಕಳೈ - ಮೋಕ್ಷವಲ್ಲದೆ, ಇತರ ಪ್ರಯೋಜನಗಳಿಗೆ ಕಾರಣಭೂತಗಳಾದ ಕಾಮ್ಯಕರ್ಮಗಳನ್ನು, ವಿಟ್ಟು - ತ್ಯಜಿಸಿ, ಭಕ್ತಿ ತತ್ವಜ್ಞಾನಙ್ಗಳೈಯುಮ್ – ಪರಮಾತ್ಮನಲ್ಲಿ ಭಕ್ತಿ ಮತ್ತು ತತ್ವತ್ರಯ ಜ್ಞಾನಗಳನ್ನೂ, ಭಗವದ್ಭಾಗವತ ಸಮೃದ್ಧಿಯುಮ್- ಭಗವಂತನ ಮತ್ತು ಭಾಗವಂತರ ಮಾಹಾತ್ಮ್ಯಯನ್ನು,ಪತ್ತಿಚ್ಚೈಯ್ಯುಮ್–ಕುರಿತು ಮಾಡುವ, ಕಾಮ್ಯಙ್ಗಳಾನ - ಇತರ ಫಲಾಪೇಕ್ಷೆಯಿಲ್ಲದೆ ಮಾಡುವ ಐಚ್ಛಿಕಗಳಾದ, ಭಗವದ್ಧರ್ಮಙ್ಗಳ್ - ಭಗವಂತನಿಗೆ ಸಂತೋಷವನ್ನುಂಟುಮಾಡುವ ಶಾಸ್ತ್ರವಿಹಿತಗಳಾದ ಕರ್ಮಗಳು, ಸಾಧನಮಾಗಅನುಷ್ಠಿಕ್ಕಚ್ಚೆಯ್‌ದೇಯುಮ್- ಮೋಕ್ಷಪ್ರಾಪ್ತಿಗೆ ಸಹಕಾರಿಯಾದವು ಎಂದು ಅನುಷ್ಠಿಸಿದರೂ, ಬಂಧಙ್ಗಳಲ್ಲಾಮೈಯಾಲೇ - ಅವು ಪುನಸ್ಸಂಸಾರವನ್ನುಂಟುಮಾಡುವವಲ್ಲವಾದುದರಿಂದ, ಉಚಿತಮಾನ - ಮೋಕ್ಷಾರ್ಥಿಯ ಸ್ವರೂಪಕ್ಕೆ ಯೋಗ್ಯವಾದ, ಕೈಂಕರ್ಯಕೋಟಿಯಿಲೇ - ಭಗವಂತನಿಗೆ ಕೈಙ್ಕರ್ಯಗಳೆಂಬ ವರ್ಗದಲ್ಲೇ, ಶೇರ್‌ನ್ದುಕಿಡಕ್ಕುಮ್–ಶೇರಿದುದಾಗಿರುತ್ತದೆ. ತನಗೆ ನಶ್ವರಗಳಾಗಿ ಧರ್ಮಾರ್ಥಕಾಮಪ್ರಾಪ್ತಿಗಳಾಗಿ ಮಾಡುವ ಕಾಮ್ಯಧರ್ಮಗಳೇಗ ತ್ಯಾಜ್ಯವಾದವೆಂದು ವಿಷ್ಣುಪುರಾಣೋಕ್ತಿಯನ್ನು ಉದಾಹರಿಸಿದರು. ಹಾಗೆಯೇ ಆದೇ ವಿಷ್ಣುಪುರಾಣದ ಇನ್ನೊಂದುಕಡೆಯಲ್ಲೂ "ಧರ್ಮಾರ್ಥಕಾಮೈರಲಮಲ್ಪಕಾಸ್ತೇ" ಎಂದೂ ಹೇಳಲ್ಪಟ್ಟಿರುತ್ತದೆ. ಹಾಗೆ ಇಂತಹ ಕಾಮ್ಯ ಕರ್ಮಗಳನ್ನನುಷ್ಠಿಸುವವರನ್ನು ಸ್ವಾಮಿ ದೇಶಿಕರವರು ತೃಣಮಿವತ್ರೈವರ್ಗಿಕಾ ಭಾವಯ" ಎಂದು ಶಿಂಗಭೂಪಾಲನಿಗೆ ಉಪದೇಶಿಸಿರುತ್ತಾರೆ.—ಕಾಮ್ಯಗಳಾದರೂ, ಸರ್ವೇಶ್ವರನಲ್ಲಿ ಭಕ್ತಿಯನ್ನೂ ತತ್ವಜ್ಞಾನವನ್ನೂ ಭಗವದ್ಭಾಗವತರಲ್ಲಿ ವಿಶ್ವಾಸವನ್ನೂ ಉಂಟುಮಾಡುವಂತವುಗಳಾದರೋ ಗ್ರಾಹ್ಯವೇ ಎಂದೂ ಉಪದೇಶಿಸಿದರು. ಇವುಗಳು ತನಗೆ ಮೋಕ್ಷಸಾಧನಗಳೆಂಬ ಅಭಿಸಂಧಿಯಿಂದ ಅಂತಹ ಕರ್ಮಗಳನ್ನು ಅನುಷ್ಠಿಸತಕ್ಕದ್ದಲ್ಲವಾದರೂ, ಒಂದು ವೇಳೆ ಹಾಗೆ ಅನುಷ್ಠಿಸಿದರೂ ಈತನಿಗೆ ಬಂಧಕಗಳಾಗುವದಿಲ್ಲವು, ಭಗವತ್ಪ್ರೀತಿಕರವಾದುವೇ ಎಂಬ ಭಾವವು.

## ಏವಂ ಪ್ರಾರ್ಥಿತ ಭಗವತ್ಕೈಂಕರ್ಯಸ್ಯ ಭಾಗವತಪರ್ಯಂತತ್ವ ಮಿತ್ಯುಪಪಾದಯತಿ

ಪ್ರಣವತ್ತಿಲ್ ಸೊನ್ನ ಭಗವಚ್ಛೇಷತ್ವಮ್, ನಮಸ್ಸಿಲೇ ಔಚಿತ್ಯರೂಪ ಮಾನ ವತನ್ತ್ರ ಪಾರತಂತ್ರ್ಯ ಪಾರಾರ್ಥ್ಯಙ್ಗಳ್ ಅಡಿಯಾಗ ಯಥಾಪ್ರಮಾಣಮ್ ತದೀಯ ಪರ್ಯನ್ತಮಾಯ್ ನಿಱ್ಕೈಯಾಲೇ "ನಾರಾಯಣಾಯ" ಎಙ್ಗಿಱವಿಡತ್ತಿಲ್ ಅಪೇಕ್ಷಿಕ್ಕಿಱ ಭಗವತ್ಕೈಙ್ಕರ್ಯಂ ತದೀಯ ಪರ್ಯನ್ತಂ. (೧) "ಮಮ ಮದ್ಭಕ್ತ ಭಕ್ತೇಷು ಪ್ರೀತಿ ರಭ್ಯಧಿಕಾಭವೇತ್ । ತಸ್ಮಾನ್ಮ

---

## ಹೀಗೆ ಪ್ರಾರ್ಥಿಸಲ್ಪಟ್ಟ ಭಗವತ್ ಕೈಙ್ಕರ್ಯವು ಭಾಗವತ ಕೈಙ್ಕರ್ಯಪರ್ಯಂತವೆಂದು ಉಪಪಾದಿಸುತ್ತಾರೆ.

**ಪ್ರಣವತ್ತಿಲ್ ಸೊನ್ನ** - ಪ್ರಣವದಲ್ಲಿ, ಮಕಾರವಾಚ್ಯನು ಆಯ್ಯೈವ–ಶ್ರಿಯಃಪತಿಗೇನೇ ಎಂಬ ವ್ಯುತ್ಪತ್ತಿಯಿಂದ ಹೇಳಲ್ಪಟ್ಟ, **ಭಗವಚ್ಛೇಷತ್ವಮ್** - ಭಗವಂತನಿಗೆ ಶೇಷಭೂತನಾಗಿ ಎಂದರೆ ದಾಸಭೂತನಾಗಿರೋಣವು, **ನಮಸ್ಸಿಲೇ** – ನಮಶ್ಶಬ್ದದಲ್ಲಿ ಮಮನ ಎಂಬ ಯೋಜನೆಯಿಂದ ಸ್ವಾತಂತ್ರ್ಯವೂ ಸ್ವಪ್ರಯೋಜನವೂ ತನಗಲ್ಲವೆಂಬುದಾಗಿ, **ಔಚಿತ್ಯಮಾನ** - ತನ್ನ ಶೇಷತ್ವ ಸ್ವರೂಪಕ್ಕೆ ಯೋಗ್ಯವಾದ, **ಪಾರತಂತ್ರ್ಯ ಪಾರಾರ್ಥ್ಯಙ್ಗಳ್** - ಭಗವಂತನಿಗೆ ಪರತಂತ್ರನಾಗಿ ಎಂದರೆ ಅಧೀನನಾಗಿರೋಣವು ಮತ್ತು ಆತನ ಪ್ರಯೋಜನಕ್ಕಾಗಿಯೇ ತಾನು ಎಂದು ಇರೋಣವೂ, ಇವುಗಳ, **ಅಡಿಯಾಗ** – ಮೂಲವಾಗಿ, **ಯಥಾ ಪ್ರಮಾಣಮ್**- ಮುಂದೆ ಉದಾಹರಿಸುವ ಪ್ರಮಾಣಕ್ಕನುಗುಣವಾಗಿ, **ತದೀಯ ಪರ್ಯನ್ತಮಾಯ್ ನಿಱ್ಕೈಯಾಲೇ** - ಮಹಾಭಾಗವತರ ಪರ್ಯನ್ತವಾಗಿ ನಿಲ್ಲುವದರಿಂದ, **ನಾರಾಯಣಾಯ ಎಙ್ಗಿಱವಿಡತ್ತಿಲ್** - ನಾರಾಯಣಾಯ ಎಂದಿರುವ ಸ್ಥಳದಲ್ಲಿ, **ಅಪೇಕ್ಷಿಕ್ಕಿಱ**-ಮೋಕ್ಷಾರ್ಥಿಯು ಅಪೇಕ್ಷಿಸುವ, **ಭಗವತ್ಕೈಙ್ಕರ್ಯವು, ತದೀಯ ಕೈಙ್ಕರ್ಯ ಪರ್ಯನ್ತಮಾಮ್** - ಆತನ ಭಕ್ತರಾದ ಭಾಗವತರ ಕೈಙ್ಕರ್ಯ ಪರ್ಯನ್ತವೂ ಆಗುತ್ತದೆ. ಯಾವಾಗ **ನಾರಾಯಣಾಯ** ಎಂಬುದರಿಂದ ಭಗವತ್ಕೈಙ್ಕರ್ಯ ಪ್ರಾರ್ಥನೆಯು ಮಾಡಲ್ಪಟ್ಟಿತೋ, ಆದರಿಂದಲೇ ಭಾಗವತಕೈಙ್ಕರ್ಯವೂ ಕೂಡ ಪ್ರಾರ್ಥಿಸಲ್ಪಟ್ಟಿತೆಂಬ ತಾತ್ಪರ್ಯವು. ಇದನ್ನೇ ಸಪ್ರಮಾಣವಾಗಿ ಉಪಪಾದಿಸುತ್ತಾರೆ—**(೧)** ಈ ಶ್ಲೋಕವು ಹಿಂದೆ ಉದಾಹರಿಸಲ್ಪಟ್ಟಿರುತ್ತವೆ. ೧೩೬೩ನೆಯ **ಪುಟವನ್ನು ನೋಡಿ ;** ನನ್ನ ಭಕ್ತರ ಭಕ್ತರುಗಳಲ್ಲಿ ನನಗೆ ಪ್ರೀತಿಯು ನಿರತಿಶಯವಾದುದು ; ಆದುದರಿಂದ **ನನ್ನ** ಭಕ್ತರ ಭಕ್ತರೂ ಸಹ, ವಿಶೇಷವಾಗಿ ಪೂಜಿಸಲು ಅರ್ಹರು ; ಅಲ್ಲಿ ಇನ್ನೂ ಕೆಲವು ಪ್ರಮಾಣಗಳನ್ನು ಉದಾಹರಿಸಿರುತ್ತಾರೆ— **"ಮದ್ಭಕ್ತ ಜನವಾತ್ಸಲ್ಯಂ ಪೂಜಾಯಾಂಚಾನುಮೋದನಮ್"** (ಭಾರತ) **"ತದಾಶ್ರಯಸ್ಯಾಶ್ರಯಣಾತ್ತಸ್ಯ ತಸ್ಯಚ ತಸ್ಯಚ । ಸಂಸೇವನಾನ್ನರಾಲೋಕೇ**

---

(೧) ಭಾರ. ಆಶಂ. ೧೦.೬.೨೩

ದ್ಭಕ್ತೇ ಭಕ್ತಾಶ್ಚ ಪೂಜನೀಯಾ ವಿಶೇಷತಃ" (೨) "ತಸ್ಮಾದ್ವಿಷ್ಣು ಪ್ರಸಾದಾಯ ವೈಷ್ಣವಾನ್ ಪರಿತೋಷಯೇತ್। ಪ್ರಸಾದಸು ಮುಖೋ ವಿಷ್ಣು ಸ್ತೇನೈವ ಸ್ಯಾನ್ನ ಸಂಶಯಃ" ಇತ್ಯಾದಿಗಳಿಲಃ ಮನ್ವರ್ಥಂ ಸಿದ್ಧಮ್.

ಪೂಯನ್ತೇ ಸರ್ವಪಾತಕೈಃ" "ಯೇ ಯಜನ್ತಿ ಪಿತೄನ್ ದೇವಾನ್। ಬ್ರಾಹ್ಮಣಾನ್ ಸಹುತಾಶನಾನ್ । ಸರ್ವಭೂತಾನ್ತರಾತ್ಮಾನಂ ವಿಷ್ಣುಮೇವ ಯಜನ್ತಿ ತೇ" (ಭಗದ್ಗೀತೆ) ಇತ್ಯಾದಿಗಳು. ಇದೂ ಅಪರಾಧ ಪರಿಹಾರಾಧಿಕಾರದಲ್ಲಿ ಉದಾಹೃತವು. ೧೫೭೮ನೆಯ ಪುಟವನ್ನು ನೋಡಿ. ತಸ್ಮಾತ್ - ನಿಕೃಷ್ಟ ಜಾತಿಯ ಭಾಗವತನನ್ನು ಸಾಮಾನ್ಯನಾಗಿ ಭಾವಿಸುವದರಿಂದ ಪ್ರತ್ಯವಾಯ ಉಂಟಾಗುವದರಿಂದ, ವಿಷ್ಣುವಿನ ಅನುಗ್ರಹವನ್ನು ಸಂಪಾದಿಸಿಕೊಳ್ಳುವದಕ್ಕಾಗಿ ವಿಷ್ಣುಭಕ್ತರನ್ನು ಕೈಙ್ಕರ್ಯಗಳ ಮೂಲಕ ಸಂತೋಷಪಡಿಸತಕ್ಕದ್ದು. ಆದರಿಂದ ಶ್ರೀ ಮಹಾವಿಷ್ಣುವು ಅಂತಹ ಭಾಗವತ ಪ್ರಸನ್ನತೆಯಿಂದ ಸುಮುಖನಾಗಿ ಅನುಗ್ರಹಿಸುವನೆಂಬುದರಲ್ಲಿ ಈಷದಪಿ ಸಂಶಯವಿಲ್ಲವು. "ಇತ್ಯಾದಿಗಳಿಲಃಮ್ - ಇವೇ ಮೊದಲಾದ ಪ್ರಮಾಣಗಳಲ್ಲಿ, ಇನ್ವರ್ಥಮ್ - ಭಗವತ್ಕೈಙ್ಕರ್ಯವು ಭಾಗವತ ಕೈಙ್ಕರ್ಯ ಪರ್ಯನ್ತವೆಂಬ ತಾತ್ಪರ್ಯವು, ಸಿದ್ಧಮ್-ಸ್ಥಾಪಿತವು. ಇಷ್ಟು ಮಾತ್ರವೇ ಅಲ್ಲವು. ಭಾಗವತಾರಾಧನೆಯು, "ಶ್ರೀಮದ್ಭಾಗವತಾರ್ಚನಮ್ ಭಗವತಃ ಪೂಜಾವಿಧೇರುತ್ತಮಮ್" ಎಂಬಲ್ಲಿ ಹೇಳಿರುವ ಹಾಗೆ ಭಗವದಾರಾಧನೆಗಿಂತ ಶ್ರೇಷ್ಠವಾದುದೆಂದೂ ಹಿಂದೆಯೇ ಉಪಪಾದಿತವು. "ತದೀಯಾರಾಧನಮ್ ಪರಮ್" ಎಂಬ ಸೂಕ್ತಿಯೂ ಉಂಟು. ಆಗಲಿ, ಸರ್ವಂಪರವಶಂ ದುಃಖಂ ಎಂದು ಹೇಳಿರುವ ಹಾಗೆ ಪರಾಧೀನತೆಯೆಲ್ಲಾ ದುಃಖರೂಪವಾಗಿರುವಾಗ, ಭಗವತ್ಕೈಂಕರ್ಯ ಪ್ರಾರ್ಥನೆಯಲ್ಲಿ ಭಾಗವತ ಕೈಙ್ಕರ್ಯ ಪರ್ಯನ್ತವೆಂದು ಹೇಳಿದುದು ಹೇಗೆ? ಸೀತೆಯೂ ಕೂಡ, ಈ ಅಭಿಪ್ರಾಯವನ್ನೇ ಸಮರ್ಥಿಸಿ, ತಾನು ಸೆರೆಯಲ್ಲಿ ಕಷ್ಟಪಡುತ್ತಿದ್ದುದನ್ನು ಕುರಿತು, "ಧಿಗಸ್ತು ಖಲುಮಾನುಷ್ಯಂ ಧಿಗಸ್ತು ಪರವಶ್ಯತಾಮ್" ಎಂದು ಪಾರತಂತ್ರ್ಯವನ್ನು ನಿಂದಿಸಿರುತ್ತಾಳೆ. ಹೀಗಿರುವಾಗ ಈ ಮೋಕ್ಷಾರ್ಥಿಯು ಅಂತಹ ಪಾರತಂತ್ರ್ಯವನ್ನೂ ಕೈಙ್ಕರ್ಯವನ್ನೂ ಅಪೇಕ್ಷಿಸಿದುದು ಹೇಗೆ? ಅದು ದುಃಖರೂಪವಲ್ಲವೋ ? ಅದು ಭಗವದನುಗ್ರಹ ಸಂಪಾದಕವು ಹೇಗೆ ? ಎಂದರೆ ಸಮಾಧಾನವನ್ನು ಮುಂದಿನ ವಾಕ್ಯಗಳಿಂದ ಹೇಳುತ್ತಾರೆ.— "ಸರ್ವಂ ಪರವಶಂ ದುಃಖಂ" ಪರವಶವಾಗಿರುವದೆಲ್ಲಾ ದುಃಖರೂಪವಾದುದು, ಇತ್ಯಾದಿಗಳಿಲೇ-ಇವೇ ಮೊದಲಾದ ಪ್ರಮಾಣಗಳಲ್ಲಿ, ತನಕ್ಕೆ ಪ್ರಾಪ್ತಮಲ್ಲಾದ ಮೋಕ್ಷಾರ್ಥಿಯಾದ ತನಗೆ ಉಚಿತವಲ್ಲದ, ಕ್ಷುದ್ರ ವಿಷಯತ್ತಿಲೇ - ಅಲ್ಪಾಸ್ಥಿರಗಳಾದ ವಿಷಯದಲ್ಲಿ, ಕರ್ಮಮೂಲಕಮಾಯ್ - ಕರ್ಮಮೂಲಕವಾಗಿ, ವರುಗಿರ-

(೨) ಇತಿ. ಸಮು. ೨೭.೪೭.

(೩) "ಸರ್ವಂ ಪರವಶಂ ದುಃಖಮ್" ಇತ್ಯಾದಿಗಳ್ ತನಕ್ಕು ಪ್ರಾಪ್ತ ಮಲ್ಲಾದ ಕ್ಷುದ್ರವಿಷಯತ್ತಿಲೇ ಕರ್ಮಮೂಲಕಮಾಗ ವರುಗಿರ ಪಾರವಶ್ಯಂ ದುಃಖಕಾರಣ ಮೆಜ್ಗಿರನ. ಭಗವದ್ಭಾಗವತ ವಿಷಯತ್ತಿಲ್ ಪಾರ ತನ್ತ್ರ್ಯಮ್ ಆತ್ಮಾಭಿಮಾನಾನುಗುಣ ಪುರುಷಾರ್ಥವ್ಯವಸ್ಥೈಯಾಲೇ ನಿರತಿಶಯ ಪ್ರೀತಿ ಕಾರಣಮ್.

---

ಬರುವ, ಪಾರವಶ್ಯಂ – ಸ್ವಾಧೀನತೆಯು, ದುಃಖಕಾರಣ ಮೆನ್ಗಿರನ- ದುಃಖಪ್ರಾಚುರ್ಯವುಳ್ಳದೆಂಬುದನ್ನೇನೋ ಒಪ್ಪತಕ್ಕದ್ದೇ ಎಂಬ ಭಾವವು. ಮನುವಾಕ್ಯವೂ ಸೀತಾವಾಕ್ಯವೂ ಈ ಅಭಿಪ್ರಾಯವನ್ನೇ ಸೂಚಿಸುತ್ತವೆ. ಸರ್ವಂ ಪರವಶಂ ದುಃಖಮ್ ಎಂಬ ಪೂರಾಶ್ಲೋಕವು ಯಾವುದೆಂದರೆ--"ಸರ್ವಂ ಪರ ವಶಂ ದುಃಖಂ ಸರ್ವಮಾತ್ಮವಶಂ ಸುಖಮ್ । ಏತದ್ವಿದ್ಯಾತ್ಸಮಾಸೇನ ಲಕ್ಷಣಂ ಸುಖದುಃಖಯೋಃ" ಪರವಶವಾಗಿರುವದೆಲ್ಲಾ ದುಃಖರೂಪವಾದುದು, ತನ್ನ ವಶವಾದುದೆಲ್ಲವೂ ಸುಖರೂಪವಾದುವು. ಹೀಗೆ ಸುಖದುಃಖಗಳ ಲಕ್ಷಣ ವೆಂದು ಭಾವಿಸತಕ್ಕದ್ದೆಂಬ ತಾತ್ಪರ್ಯವು. ಅನುಕೂಲಾವಸ್ಥೆಯೇ ಸುಖವು. ಅನಾನುಕೂಲಾವಸ್ಥೆಯು ದುಃಖವು. ಉಪಾಧಿಯಿಂದ ಒಂದಕ್ಕೆ ಅನುಕೂಲ ವಾದುದು ಇನ್ನೊಂದಕ್ಕೆ ಅನಾನುಕೂಲವಾಗಬಹುದು. ಒಂಟೆಗೆ ಬೇವಿನ ಎಲೆ ಸ್ವಾದುವು ನಮಗೆ ಕಹಿಯು. "ಅನ್ನಂ ಭೋಜ್ಯಂ ಮನುಷ್ಯಾಣಾ ಮಮೃತಂತು ದಿವೌಕಸಾಂ । ಶ್ವಪಶೂ ವಿಟ್ತೃಣಾಹಾರೌ ಪಸ್ತೋದಾಸ್ಯೈಕ ಜೀವನಾ" ಮನುಷ್ಯರಿಗೆ ಅನ್ನವು ಭೋಗ್ಯವಾದುದು; ದೇವತೆಗಳಿಗೆ ಅಮೃತವು; ನಾಯಿಗೆ ಅಮೇಧ್ಯವು, ಹಸುವಿಗೆ ಹುಲ್ಲು, ಮಹಾಭಾಗವತರುಗಳಿಗೆ ದಾಸ್ಯವು ಮುಖ್ಯವಾಗಿ ಭೋಗ್ಯವು, ಎಂದರೆ ಕೈಙ್ಕರ್ಯವೇ ಪ್ರಿಯವಾದುದೆಂಬ ಭಾವವು. ಐಹಿಕದಲ್ಲೂ ಕೂಡ ರಾಜಾದಿಗಳಿಗೆ ಪರವಶನಾಗಿ ಕೈಙ್ಕರ್ಯವನ್ನೆಸಗುವದು ಅನುಕೂಲವಾದು ದಾಗಿಯೇ ಇರುತ್ತದೆ. ಹಾಗೆಯೇ ಭಾಗವತರುಗಳಾದ ಗುರು ಮೊದಲಾದವರು ಗಳಿಗೂ, ಮಾತಾಪಿತೃಗಳಿಗೂ ಮಾಡುವ ಕೈಙ್ಕರ್ಯವೂ ಪರಮಹಿತವಾಗಿಯೇ ಇರುತ್ತದೆ. ಆದರೆ ಎಂತಹ ಪಾರತಂತ್ರ್ಯ, ಪಾರಾರ್ಥ್ಯಗಳು ಸುಖಾವಹಗಳಾಗಿ ಭಗವದನುಗ್ರಹ ಸಂಪಾದಕಗಳೆಂದರೆ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.— ಭಗವದ್ಭಾಗವತವಿಷಯದಲ್ಲಿ ಪಾರತನ್ತ್ರ್ಯವು, ಆತ್ಮಾಭಿಮಾನಾನುಗುಣ ವ್ಯವಸ್ಥೆಯಾಲೇ - ಆತ್ಮಾವಿನ ಅಭಿಮತಕ್ಕೆ ಜ್ಞಾನಕ್ಕೆ ಅನುಗುಣವ್ಯವಸ್ಥೆಯಿಂದ ಎಂದರೆ ತನಗೆ ಪುರುಷಾರ್ಥಕಾಷ್ಠೆಯು ಯಾವುದೆಂಬ ವ್ಯವಸ್ಥೆಯಿಂದ, ನಿರತಿಶಯ ಪ್ರೀತಿಕಾರಣಂ – ನಿರತಿಶಯವಾದ ಪ್ರೀತಿಗೆ ಕಾರಣವು. ಈ ಪುರುಷಾರ್ಥಗಳ ಮರ್ಯಾದೆಯು ಆತ್ಮಾಭಿಮಾನಾನುಗುಣ ಹೇಗೆ? ಎಂದರೆ, ಅದು ದೇಹಾತ್ಮಾಭಿ

---

(೩) ಮನುಸ್ಮೃತಿ ೪.೧೬೦.

ತದೀಯಪದ ವಿವಕ್ಷಿತವಾಹ

ಇಜ್ಞ್ಗ "ತದೀಯರೆಜ'್ಗರದು ತದೀಯತ್ವ ವ್ಯವಸಾಯ ರಸ ಮುಡೈಯವರ್‌ಗಳೈ.

---

ಮಾನರೂಪವಾದುದಾದರೆ, ದುಃಖರೂಪಗಳಾದ ಮತ್ತು ನಶ್ವರಗಳಾದ ಅರ್ಥ ಕಾಮಗಳು ಪುರುಷಾರ್ಥವಾಗಿ ತೋರುತ್ತವೆ; ದೇಹಾದಿ ವಿಲಕ್ಷಣ ಜ್ಞಾನದೆಶೆಯಲ್ಲಿ ಅಸ್ಥಿರಗಳಾದ ಸ್ವರ್ಗಾದಿ ಭೋಗಗಳು ಪುರುಷಾರ್ಥವಾಗಿ ತೋರುತ್ತವೆ. ತಾನು ಭಗವಂತನಿಗೆ ಶೇಷಭೂತನೆಂಬ ಉತ್ಕೃಷ್ಟಜ್ಞಾನವು ಪ್ರಾಪ್ತವಾದಾಗ ಭಗವತ್ಕೈಙ್ಕರ್ಯವು ಪುರುಷಾರ್ಥವಾಗಿ ತೋರುತ್ತದೆ. ಭಗವಚ್ಛೇಷತ್ವವು ಭಾಗವತ ಶೇಶತ್ವದವರೆಗೂ ಎಂಬ ಜ್ಞಾನದ ಪರಾಕಾಷ್ಠಾದೆಶೆಯನ್ನು ಹೊಂದಿದ್ದಾಗ, ಭಾಗವತ ಪಾರತಂತ್ರ್ಯ ಕೈಙ್ಕರ್ಯಗಳು ಪುರುಷಾರ್ಥವಾಗಿ ತೋರುತ್ತವೆ. ಪ್ರಪನ್ನನು ಇಂತಹ ಪರಾಕಾಷ್ಠಾದಶೆಯನ್ನು ಹೊಂದಿದವನಾದುದರಿಂದ ಭಾಗವತ ಪಾರತಂತ್ರ್ಯವು ಆತನಿಗೆ ಪರಮ ಸುಖಾವಹವೇ ಎಂಬ ಭಾವವು. ಆದುದರಿಂದ ತದೀಯರ ಕೈಙ್ಕರ್ಯಪ್ರಾರ್ಥನೆಯೂ ನಾರಾಯಣಾಯ ಎಂಬ ಕೈಙ್ಕರ್ಯ ಪ್ರಾರ್ಥನಾ ವಾಕ್ಯದಲ್ಲೇ ಅಂತರ್ಗತವು. ಮುಂದೆ ತದೀಯರು ಎಂದು ಯಾವಾಗ ಭಾವಿಸಬಹುದೆಂಬುದನ್ನು ತಿಳಿಸುತ್ತಾರೆ—

ತದೀಯ ಪದದಿಂದ ಬೋಧಿತಾರ್ಥವನ್ನು ತಿಳಿಸುತ್ತಾರೆ.

ಇಜ್ಞ್ಗ - ಈ ಸಂದರ್ಭದಲ್ಲಿ "ತದೀಯ" ರೆಜ'್ಗರದು-"ತದೀಯ"ರೆಂದು ಹೇಳಿರುವುದು, ತದೀಯತ್ವ ವ್ಯವಸಾಯರಸ ಮುಡೈಯವರ್‌ಗಳೈ - ಭಗವಂತನಿಗೆ ತಾನು ಶೇಷಭೂತನೆಂಬ ಜ್ಞಾನದ ಮೂಲಕ ಪ್ರಾಪ್ತವಾದ ಭಗವತ್ಕೈಙ್ಕರ್ಯವೇ ಮುಖ್ಯ ಧನವಾಗಿ ಅಥವಾ ಆನಂದವಾಗಿವುಳ್ಳವರುಗಳನ್ನು ಕುರಿತು ಹೇಳಿದುದು. ಲೋಕದಲ್ಲಿರುವವರೆಲ್ಲರೂ ತದೀಯರೇ. ಅಂತವರಿಗೆಲ್ಲಾ ಕೈಙ್ಕರ್ಯಮಾಡತಕ್ಕದ್ದೆಂದು ಅರ್ಥಮಾಡಿದರೆ, ಅಯೋಗ್ಯರಿಗೆಲ್ಲಾ ಕೈಙ್ಕರ್ಯಮಾಡುವದು ಸರ್ವೇಶ್ವರನಿಗೆ ಪ್ರೀತಿಕರವಾದುದೆಂದು ಏರ್ಪಡುವದರಿಂದ, ತದೀಯ ಶಬ್ದಕ್ಕೆ ಸರಿಯಾದ ತಾತ್ಪರ್ಯವೇನೆಂಬುದನ್ನು ತಿಳಿಸಿದರು. ತದೀಯರೆಂಬುದು ಸಾಧಾರಣವಾಗಿ ಎಲ್ಲರನ್ನೂ ಬೋಧಿಸುವದಿಲ್ಲವೆಂದೂ ಭಗವಚ್ಛೇಷತ್ವ ಜ್ಞಾನವು ಚನ್ನಾಗಿ ಸ್ಥಾಪಿತವಾಗಿ ಆತನಿಗೆ ತಾವು ದಾಸಭೂತರಾದುದರಿಂದ ಅಂತವನಿಗೆ ಕೈಙ್ಕರ್ಯ ಮಾಡುವದೇ ತಮಗೆ ಸರ್ವಸ್ವವು ಎಂಬ ಸ್ಥಿರಬುದ್ಧಿಯನ್ನು ಹೊಂದಿರುವವರು ಎಂಬ ತಾತ್ಪರ್ಯವು.

ಆಗಲಿ, ಈ ಭಾಗವತ ಕೈಙ್ಕರ್ಯದ ಪ್ರಾರ್ಥನೆಯೂ, ನಾರಾಯಣ ಶಬ್ದಾರ್ಥದಲ್ಲೇ ಅಂತರ್ಗತವಲ್ಲವೋ? ಹಾಗಿದ್ದ ಪಕ್ಷದಲ್ಲಿ ಇಷ್ಟು ದೂರ ಕಷ್ಟಪಟ್ಟು ಉಪಪಾದನೆಯು ಏತಕ್ಕೆ? ಎಂದರೆ ಈ ಪ್ರಾರ್ಥನೆಯು ನಾರಾಯಣ ಶಬ್ದದಲ್ಲೇ

**ನಾರಙ್ಗಳಾಲೇ ವಿಶಿಷ್ಟನಾನ ನಾರಾಯಣನೈಪ್ಪತ್ತ ಕೈಂಕರ್ಯತ್ತೈ ಅಪೇಕ್ಷಿಕ್ಕುಮ್ಪೋದು ವಿಶೇಷಣಮಾನ ನಾರಙ್ಗಳೈಯುಮ್ಪತ್ತ ಕೈಙ್ಕರ್ಯಮ್ ಆಪೇಕ್ಷಿಕ್ಕಪ್ಪಟ್ಟಿದಾಮೆನ್ನುಮಿಡಮ್ ನ್ಯಾಯಸಿದ್ಧಮಾಗೈಯಾಲೇ ಇಙ್ಗೇ ತದೀಯ ಕೈಙ್ಕರ್ಯಮ್ ಸಿದ್ಧಿಕ್ಕಿರದೆನ್ರು ಶಿಲರ್ ಶೊಲ್ಲುವರ್‌ಗಳ್. ಇಪ್ಪಡಿ**

---

ಅಂತರ್ಗತದೆಂದು ಕೆಲವರು ಹೇಳುವರು. ಅಂತಹ ಕೆಲವರ ಭಾವನೆಯು ಸರಿಯಲ್ಲವೆಂದು ಉಪಪಾದಿಸುತ್ತಾರೆ.—**ನಾರಙ್ಗಳಾಲೇ ವಿಶಿಷ್ಟನಾನ ನಾರಾಯಣನೈಪ್ಪತ್ತ**-ನಾರಾಯಣ ಶಬ್ದದ ವ್ಯುತ್ಪತ್ತಿಯ ಪ್ರಕಾರ **ನಾರಙ್ಗಳಾಲೇ** ಎಂದರೆ ನಿತ್ಯವಾದ ವಸ್ತುಗಳಿಂದ ಕೂಡಿದ ನಾರಾಯಣನನ್ನು ಕುರಿತ, **ಕೈಙ್ಕರ್ಯಂ ಅಪೇಕ್ಷಿಕ್ಕಪಟ್ಟಿದಾವ್** - ಕೈಙ್ಕರ್ಯವು ಪ್ರಾರ್ಥಿಸಲ್ಪಟ್ಟಿತು ಎಂದಾಗುತ್ತದೆಂದು, **ಎನ್ರುಮಿಡಮ್** - ಎನ್ನುವ ಸಂದರ್ಭದಲ್ಲಿ, **ನ್ಯಾಯಸಿದ್ಧಮಾಗೈಯಾಲೇ** - ನ್ಯಾಯ ಪ್ರಕಾರವೇ ಸಿದ್ಧವಾಗುವದರಿಂದ, **ಇಙ್ಗೇ** – ಈ ವ್ಯುತ್ಪತ್ತಿ ರೀತ್ಯಾ ನಾರಾಯಣಶಬ್ದದಲ್ಲಿ, **ತದೀಯಕೈಙ್ಕರ್ಯಮ್** - ಭಗವತ್ಕೈಙ್ಕರ್ಯದೊಂದಿಗೆ ಭಾಗವತ ಕೈಙ್ಕರ್ಯವೂ ಸಹ, **ಸಿದ್ಧಿಕ್ಕಿರದೆನ್ರು** - ಪ್ರಾರ್ಥಿತವೆಂಬುದು ಸಿದ್ಧವು ಎಂಬುದಾಗಿ, **ಶಿಲರ್** - ಕೆಲವರು, **ಚೊಲ್ಲುವರ್‌ಗಳ್** - ಹೇಳುವರು. ಹಿಂದೆ ಆರ್ಥವಾಗಿ, ಭಗವತ್ಕೈಙ್ಕರ್ಯ ಪ್ರಾರ್ಥನೆಯು ಭಾಗವತ ಕೈಙ್ಕರ್ಯ ಪ್ರಾರ್ಥನಾಪರ್ಯನ್ತವೆಂದು ಪ್ರಮಾಣಗಳೊಂದಿಗೆ ಪ್ರದರ್ಶಿಸಿದರು ; ಇಷ್ಟು ಕಷ್ಟವೇಕೆ; ನಾರಾಯಣ ಶಬ್ದದಲ್ಲಿನ ನಾರಶಬ್ದದಲ್ಲೇ ಭಾಗವತರೂ ಅಂತರ್ಗತರಾದುದರಿಂದ, **ನಾರಾಯಣಾಯ** ಎಂಬ ಭಗವತ್ಕೈಙ್ಕರ್ಯ ಪ್ರಾರ್ಥನೆಯಿಂದ ಶಾಬ್ದವಾಗಿಯೇ ಭಾಗವತ ಕೈಙ್ಕರ್ಯ ಪ್ರಾರ್ಥನಾ ಸಿದ್ಧಿಯುಂಟೆಂದು ಕೆಲವರು ಅಭಿಪ್ರಾಯ ಪಡುವರು. ಈ ಅಭಿಪ್ರಾಯವು ಸರಿಯಲ್ಲವೆಂದು ಉಪಪಾದಿಸುತ್ತಾರೆ. ಏಕೆಂದರೆ ನಾರಶಬ್ದದಿಂದ ಹೇಳಲ್ಪಟ್ಟವರಿಗೆಲ್ಲಾ ಕೈಙ್ಕರ್ಯಮಾಡಬೇಕೆಂಬ ಪ್ರಾರ್ಥನೆಯಾಗುವದರಿಂದ, ಆ ನಾರಶಬ್ದದಲ್ಲಿ ನಿತ್ಯರಾದ ಎಲ್ಲಾ ಜೀವವರ್ಗವೂ ಅಡಗಿರುವದರಿಂದ, ಆಗ ದೇವತಾಂತರಗಳಿಗೂ, ಪಶ್ವಾದಿಗಳಿಗೂ, ಘಾತುಕ ಮೃಗಗಳಿಗೂ, ಭಗವದ್ವೇಷಿಗಳಿಗೂ, ನಾಸ್ತಿಕರಿಗೂ ಹೀಗೆ ಎಲ್ಲರಿಗೂ ಕೈಙ್ಕರ್ಯಮಾಡಬೇಕೆಂಬ ಪ್ರಾರ್ಥನೆಯಾಗುವದರಿಂದ ಆ ಯೋಜನೆಯು ಸಮಂಜಸವಾಗುವದಿಲ್ಲವು. ಆದುದರಿಂದ ಭಗವತ್ಕೈಙ್ಕರ್ಯಾಪೇಕ್ಷೆಯಲ್ಲಿ, ಭಗವಂತನಿಗೆ ಅತ್ಯರ್ಥಪ್ರಿಯರಾದ ಭಾಗವತರ ಕೈಙ್ಕರ್ಯಾಪೇಕ್ಷೆಯು ಅಂತರ್ಗತವೆಂಬ ಭಾವನೆಯೇ ಸಾಧುವಾದುದೆಂದು ಉಪದೇಶಿಸುತ್ತಾರೆ.—

**ಇಪ್ಪಡಿ** - ಹೀಗೆ ಕೆಲವರು ಉಪಪಾದಿಸಿದ ರೀತಿಯಲ್ಲಿ, **ವಿಶೇಷಣತ್ವಮೇ** - ನಾರಗಳಿಂದ ಸೇರಿರುವ ನಾರಾಯಣನೆಂದು ವಿಶೇಷಿಸಿ ಹೇಳೋಣವೇ, **ಪ್ರಯೋಜನಮಾನಾಲ್** - ಭಾಗವತ ಕೈಙ್ಕರ್ಯವೂ ಶಾಬ್ದವಾಗಿ ಬೋಧಿತವೆಂಬ ಪ್ರಯೋ

**ವಿಶೇಷಣತ್ವಮೇ ಪ್ರಯೋಜನಮಾನಾಲ್, ನಾರಶಬ್ದಾರ್ಥಙ್ಗಳಾಗ ಇಙ್ಗು ವಿವಕ್ಷಿತಙ್ಗಳಾನ ಬ್ರಹ್ಮಾದಿ ದೇವತಾಂತರಙ್ಗಳೈಯುಮ್, (ಪಶ್ವಾದಿಗಳೈಯುಮ್) ಭಗವದ್ದ್ವೇಷಿಗಳೈಯುಮ್ ಪತ್ತ ಕೈಙ್ಕರ್ಯಾಪೇಕ್ಷೈ ಪಣ್ಣಿತ್ತಾಮ್.**

---

ಜನ ಉಂಟಾದರೆ, ಇಙ್ಗು - ಈ ನಾರಶಬ್ದದಲ್ಲಿ, **ವಿವಕ್ಷಿತಙ್ಗಳಾನ** - ಬೋಧಿತಗಳಾದ, ಬ್ರಹ್ಮಾದಿ ದೇವತಾಂತರಙ್ಗಳೈಯುಮ್ - ಚತುರ್ಮುಖನೇ ಮೊದಲಾದ ದೇವತೆಗಳನ್ನೂ, **ಪಶ್ವಾದಿಗಳೈಯುಮ್** - ಪಶು, ಆದಿಶಬ್ದದಿಂದ ಇತರ ತಿರ್ಯಗ್ಜಂತುಗಳನ್ನು, **ಭಗವದ್ದ್ವೇಷಿಗಳೈಯುಮ್** - ಭಗವಂತನಿಗೆ ಇಷ್ಟವಿಲ್ಲದ ಆಸುರ ಪ್ರಕೃತಿಗಳು ನಾಸ್ತಿಕರು ಮೊದಲಾದವರನ್ನು, **ಪತ್ತ** - ಕುರಿತು ಕೈಙ್ಕರ್ಯಾಪೇಕ್ಷೈಪಣ್ಣಿತ್ತಾಮ್ - ಕೈಙ್ಕರ್ಯಮಾಡಬೇಕೆಂಬ ಪ್ರಾರ್ಥನೆಯನ್ನು ಮಾಡಿದ ಹಾಗಾಗುತ್ತದೆ. ಪ್ರಪನ್ನನಿಗೆ ಅನ್ಯದೇವತಾ ಕೈಙ್ಕರ್ಯವು "**ನಾನ್ಯಂ ದೇವಂ ನಮಸ್ಕುರ್ಯಾಂ**" ಎಂಬಲ್ಲಿ ಹೇಳಿರುವ ಹಾಗೆ ಪರಮ ನಿಷಿದ್ಧವು. ಗೀತೆಯಲ್ಲಿ, "**ನಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ। ಮಾಯಯಾ ಪಹೃತಜ್ಞಾನಾಃ ಆಸುರಂಭಾವ ಮಾಶ್ರಿತಾಃ**"॥ (ಗೀ. ೭. ೧೫.) "**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯನ್ತೇಽನ್ಯ ದೇವತಾಃ**" (ಗೀ. ೭.೨೦) "**ಕ್ಷಿಪಾಮ್ಯಜಸ್ರ ಮಶುಭಾ್ ಆಸುರೀಷ್ವೇವ ಯೋನಿಷು**" ಹೀಗೆ ಇಂತವರೆಲ್ಲರೂ ನಾರಶಬ್ದದಲ್ಲಿ ಸೇರಿರುವದರಿಂದ, ಆ ಪ್ರಾರ್ಥನೆಯಲ್ಲಿ ಇಂತಹ ಭಗವಂತನಿಗೆ ಇಷ್ಟವಿಲ್ಲದವರಿಗೆಲ್ಲಾ ಕೈಙ್ಕರ್ಯಾಪೇಕ್ಷೆಯನ್ನು ಪ್ರದರ್ಶಿಸಿದ ಅರ್ಥ ಉಂಟಾಗುವದರಿಂದ ಅಂತಹ ಯೋಜನೆಯು ಅಸಾಧುವೆಂಬ ಭಾವವು. ರಾಜನಿಗೆ ಮಾಡುವ ಕೈಂಕರ್ಯವು ಆತನ ಸೇವಕಾದಿ ಪ್ರಜೆಗಳ ಪರ್ಯಂತವಾದುದೆಂದು ಹೇಳಲು ಸಾಧವಿಲ್ಲವಷ್ಟೇ. ಆದುದರಿಂದ ಬರೀ ವಾದವಾಗಲಿ ನ್ಯಾಯವಾಗಲಿ ಇಂತಹ ಸಂದರ್ಭದಲ್ಲಿ ಸರಿಹೋಗುವದಿಲ್ಲವು; ಪ್ರಮಾಣ ಬಲದಿಂದ ಅರ್ಥವಾಗಿ ತೋರುತ್ತದೆಂದು ಉಪಪಾದಿಸುತ್ತಾರೆ. ಮುಂದಿನ ನಾಲ್ಕು ವಾಕ್ಯಗಳ ಮೂಲಕ ಬರೀ ತರ್ಕವು ಪ್ರತಿಷ್ಠಿತವಾದಜ್ಞಾನಕ್ಕೆ ಹೇತುವಾಗುವದಿಲ್ಲವೆಂದು "ತರ್ಕಾಽಪ್ರತಿಷ್ಠಾನಾತ್" ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದ ಅಭಿಪ್ರಾಯವು ಉಪಪಾದಿತವು. ಆದುದರಿಂದ ನಾರಶಬ್ದ ಮೂಲಕಉಪಪಾದನೆ ಮಾಡಿ ಹೇಳುವ, ಕೆಲವರ ಅಭಿಪ್ರಾಯವು ಅಷ್ಟು ಸಾಧುವಾದುದಲ್ಲವು. ಯಾವಾಗ ಭಗವತ್ಕೈಙ್ಕರ್ಯಾಪೇಕ್ಷೆಯು ಮಾಡಲ್ಪಟ್ಟಿತೋ, ಆತನ ಅಂತರಙ್ಗ ಭಕ್ತರ ಕೈಙ್ಕರ್ಯವು ತನ್ನ ಕೈಙ್ಕರ್ಯಕ್ಕಿಂತ ಪ್ರಿಯತರವಾದುದರಿಂದ ಭಾಗವತ ಕೈಙ್ಕರ್ಯ ಪ್ರಾರ್ಥನೆಯು ಮಾಡಲ್ಪಟ್ಟಿತೆಂಬ ಭಾವನೆಯೇ ಸಾಧುವೆಂಬ ಭಿಪ್ರಾಯವು. ಮುಂದೆ ಒಂದು ದೃಷ್ಟಾಂತ ಮೂಲಕವಾಗಿಯೂ ಆ ನಾರಶಬ್ದ ವಿಶೇಷಣ ಮೂಲಕ ಸಾಮಂಜಸ್ಯವು ದೊರೆಯುವದಿಲ್ಲವೆಂದು ಸ್ಥಾಪಿಸುತ್ತಾರೆ— **ನರಪತಿಯೈಪ್ಪತ್ತ** - ನರರಿಗೆ ಸ್ವಾಮಿಯಾದ ರಾಜನನ್ನು ಕುರಿತ, ಕೈಙ್ಕರ್ಯತ್ತೈ-

**ನರಪತಿಯೈಪ್ಪತ್ತ ಕೈಂಕರ್ಯತ್ತೈ ಅಪೇಕ್ಷಿತ್ತಾನೆನ್ರಾಲ್, ನರರೈಪ್ಪತ್ತ ಕೈಂಕರ್ಯಮ್ (ಅಪೇಕ್ಷಿತಮ್) ಆಗಾದಾಪ್ಪೋಲೇ, ಇಂಗುಮ್ ನ್ಯಾಯಮಾತ್ರತ್ತಾಲ್ ನಾರಂಗಳೈಪ್ಪತ್ತ ಕೈಂಕರ್ಯಾಪೇಕ್ಷೈ ಸಿದ್ಧಿಯಾದು.**

**ಅನಪಿನ್ಬು ಪ್ರಮಾಣ ಮುಖತ್ತಾಲೇ ಸ್ವಾಮಿಯನುಡೈಯ ಅಭಿಮತಮ್**

---

ಕೈಙ್ಕರ್ಯವನ್ನು, **ಅಪೇಕ್ಷಿತ್ತಾನೆನ್ರಾಲ್** – ಒಬ್ಬನು ಅಪೇಕ್ಷಿಸಿದನು ಎಂದು ಹೇಳಿದರೆ, **ನರರೈಪ್ಪತ್ತ ಕೈಙ್ಕರ್ಯಮ್** - ಪ್ರಜೆಗಳನ್ನು ಕುರಿತ ಕೈಙ್ಕರ್ಯವು, **ಆಗಾದಾಪ್ಪೋಲೇ** – ಹೇಗೆ ಆಗಲಾರದೋ ಹಾಗೆಯೇ, **ಇಙ್ಗುಮ್** – ಈ ಸಂದರ್ಭದಲ್ಲೂ ಎಂದರೆ ಭಗವತ್ಕೈಙ್ಕರ್ಯವು ಭಾಗವತ ಕೈಙ್ಕರ್ಯವೆಂಬ ಸಂದರ್ಭದಲ್ಲಿ, **ನ್ಯಾಯಮಾತ್ರತ್ತಾಲೇ** – ಶಾಸ್ತ್ರಪ್ರಮಾಣ ಬಿಟ್ಟು ಬರೀ ತರ್ಕಮೂಲಕವಾಗಿ, ಆ ತರ್ಕ ಯಾವುದು ಎಂದರೆ ಸನ್ನಿಯೋಗ ಶಿಷ್ಟನ್ಯಾಯವು; ವಿಶೇಷಣ ಪರವಾದ ನ್ಯಾಯವು, ನಾರಶಬ್ದದಲ್ಲಿ ತದೀಯರೂ ಅಂತರ್ಗತರೆಂಬ ನ್ಯಾಯವು. **ನಾರಙ್ಗಳೈಪ್ಪತ್ತ** - ನಾರಶಬ್ದದಿಂದ ಹೇಳಲ್ಪಟ್ಟವನ್ನು ಕುರಿತ, **ಕೈಙ್ಕರ್ಯಾಪೇಕ್ಷೈ ಸಿದ್ಧಿಯಾದು** - ಕೈಙ್ಕರ್ಯಾಪೇಕ್ಷೆಯು, ಸಿದ್ಧಿಸಲಾರದು. **ನರಪತಿಯಾದ ರಾಜನಿಗೆ ಕೈಙ್ಕರ್ಯ** ಮಾಡಬೇಕೆಂಬ ಅಪೇಕ್ಷೆಯಲ್ಲಿ ಬೀದಿಯಲ್ಲಿ ಹೋಗುವ ಸರ್ವ ಅಸಾಧು ಪ್ರಜೆಗಳು, ಆತನ ದ್ವೇಷಿಗಳು, ಅಧರ್ಮಿಗಳು, ದುಷ್ಟರು ಮೊದಲಾದ ಸರ್ವಪ್ರಜೆಗಳಿಗೂ ಕೈಙ್ಕರ್ಯಾಪೇಕ್ಷೆಯಾದರೆ ರಾಜಸಮ್ಮತಿ ಹೇಗೆ ದೊರೆಯದೋ, ಹಾಗೆಯೇ ಇಲ್ಲಿಯೂ. ಹಾಗಲ್ಲದೆ ಆತನಿಗೆ ತುಂಬಾ ಅಭಿಮತರಾದವರಿಗೂ ಸಹ ಕೈಙ್ಕರ್ಯ ಮಾಡುವ ಅಪೇಕ್ಷೆಯಾಗಿ ಲೋಕಹಿತವನ್ನುಂಟುಮಾಡುವದರಲ್ಲಿ ಪರಿಣಮಿಸಿದರೆ, ರಾಜನಿಗೆ ಹೇಗೆ ಸಮ್ಮತವೋ, ಹಾಗೆಯೇ ಇಲ್ಲಿಯೂ ಎಂದು ಭಾವಿಸತಕ್ಕದ್ದೆಂಬ ಭಾವವು. ಆದುದರಿಂದ ಪ್ರಣವ ನಮಸ್ಸುಗಳಿಂದತೋರಿಬರುವ ಶೇಷತ್ವಪಾರತಂತ್ರಗಳಿಂದಲೇ ಎಂಬ ಭಾವವು. ಭಾಗವತ ಶೇಷತ್ವ ಪಾರತಂತ್ರ್ಯಗಳೂ ಏರ್ಪಡುವದರಿಂದ ಶ್ರೀಮನ್ನಾರಾಯಣನ ಕೈಙ್ಕರ್ಯಾಪೇಕ್ಷೆಯಲ್ಲಿಯೇ ಭಾಗವತ ಕೈಙ್ಕರ್ಯಾಪೇಕ್ಷೆಯೂ ಅಂತರ್ಗತವೆಂಬುದು ಸಿದ್ಧವು. ಎಲ್ಲಾ ನರಸಮೂಹವೂ ಅಪೃಥಕ್ಸಿದ್ಧ ವಿಶೇಷಣವಾಗಿದೆ ಎಂಬ ನ್ಯಾಯಮಾತ್ರದಿಂದಲೇ, ಭಗವಂತನಿಗೆ ಎಲ್ಲವೂ ಅಭಿಮತವೆಂದು ಭಾವಿಸಲು ಸಾಧ್ಯವಿಲ್ಲವು. ಸ್ವಾಮಿಗೆ ಅಭಿಮತವಾದ ಕೈಙ್ಕರ್ಯವೇ ಇಲ್ಲಿ ಪ್ರಾರ್ಥನೀಯವೂ ಅನುಷ್ಠೇಯವೂ.

ಹಾಗಾದರೆ ಭಗವಂತನಿಗೆ ಅಭಿಮತವಾಗಿರುವ ಕೈಙ್ಕರ್ಯಸಿದ್ಧಿಯ ಪ್ರಕಾರವು ಹೇಗೆ? ಎಂದರೆ ಉಪದೇಶಿಸುತ್ತಾರೆ.—ಕೇವಲವಾದವನ್ನು ತ್ಯಜಿಸಿ ಪ್ರಮಾಣ ಬಲದಿಂದ ಈ ಸಂದರ್ಭದಲ್ಲಿ ವಿಮರ್ಶಿಸಿ ತಿಳಿಯತಕ್ಕದ್ದುಂಟು ಎಂದು ತಿಳಿಸುವದಕ್ಕಾಗಿ ಹಿಂದಿನ ವಾಕ್ಯದಲ್ಲಿ ನ್ಯಾಯಮಾತ್ರತ್ತಾಲೇ ಎಂಬ, ಮತ್ತು ಈ ವಾಕ್ಯದಲ್ಲಿ ಪ್ರಮಾಣಮುಖತ್ತಾಲೇ ಎಂಬ ಪ್ರಯೋಗಗಳು. **ಅನಪಿನ್ಬು** – ಹೀಗಾದ

**ಶೆಯ್ಯ ಅಪೇಕ್ಷಿಕ್ಕಿರಾ ನಾಗ್ಯೆಯಾಲೇ ಅವನುಕ್ಕು ಪ್ರಿಯತಮರಾಯಿರುಕ್ಕಿರ ಶೇಷತ್ವಜ್ಞಾನಮುಡೈಯ ಅನನ್ಯಪ್ರಯೋಜನರ್ಕಳ್ಪ್ಪತ್ತ ಕೈಂಕರ್ಯಂ ಅಪೇಕ್ಷಿತ ಮಾಮಿತ್ತನೈ.**

---

ನಂತರ ಎಂದರೆ ನಾರ ಶಬ್ದದ ವಿಶೇಷಣತ್ವದ ಮೂಲಕ ಭಾಗವತ ಕೈಙ್ಕರ್ಯ ಪ್ರಾರ್ಥನಾ ಸಿದ್ಧಿಯುಂಟಾಗದೇ ಹೋದನಂತರ, **ಪ್ರಮಾಣ ಮುಖತ್ತಾಲೇ.** ಹಿಂದೆ ನಾವು ಉದಾಹರಿಸಿದ **"ಮಮಮದ್ಭಕ್ತ ಭಕ್ತೇಷು ಪ್ರೀತಿರಭ್ಯಧಿಕಾ ಭವೇತ್...." "ತಸ್ಮಾದಿಷು ಪ್ರಸಾದಾಯ ವೈಷ್ಣವಾನ್ ಪರಿತೋಷಯೇತ್" "ತದೀಯಾರಾಧನಮ್ ಪರಮ್"** ಇತ್ಯಾದಿ ಪ್ರಮಾಣಗಳ ಮೂಲಕವಾಗಿ, **ಸ್ವಾಮಿಯಿನುಡೈಯ** - ತನ್ನ ಸ್ವಾಮಿಗೆ, **ಅಭಿಮತಂ ಶೆಯ್ಯ ಅಪೇಕ್ಷಿಕ್ಕರಾನಾಗ್ಯೆಯಾಲೇ** - ಪ್ರಿಯವಾದ ಕೈಙ್ಕರ್ಯವನ್ನೇ ಮಾಡಬೇಕೆಂದು ಅಪೇಕ್ಷಿಸುವನಾದುದರಿಂದ, **ಅವರಕ್ಕು ಪ್ರಿಯತಮರಾಯಿರುಕ್ಕಿರ** - ತನ್ನ ಶೇಷಿಗೆ ಅತ್ಯರ್ಥ ಪ್ರಿಯರಾಗಿರುವ, **ಶೇಷತ್ವಜ್ಞಾನಮುಡೈಯ** - ತಾನು ಪರಮಾತ್ಮನಿಗೆ ದಾಸಭೂತನು, ಆತನಿಗಾಗಿಯೇ ತಾನು ಎಂಬ ಜ್ಞಾನವುಳ್ಳ, **ಅನನ್ಯಪ್ರಯೋಜನರ್ಕಳ್ಪ್ಪತ್ತ** - ಪರಮಾತ್ಮಪ್ರಾಪ್ತಿಗಿಂತ ಇತರಗಳಾದ ಪ್ರಯೋಜನಗಳನ್ನು ಪರಿಗಣಿಸದವರನ್ನು ಕುರಿತ, **ಕೈಙ್ಕರ್ಯಂ ಅಪೇಕ್ಷಿತ ಮಾಮಿತ್ತನೈ** - ಕೈಙ್ಕರ್ಯವೀಗ ಅಪೇಕ್ಷಿತವಾಗುತ್ತದೆಂಬುದು ಇಷ್ಟು ಮಾತ್ರವೇ ಈ ಸಂದರ್ಭದಲ್ಲಿ ಅಭಿಪ್ರಾಯವು. ನಾರಶಬ್ದವು ವಿಶೇಷಣವಾಗಿರುವದರಿಂದ ಭಾಗವತ ಕೈಙ್ಕರ್ಯವು ಅಪೇಕ್ಷಿತವೆಂಬ ವಾದಕ್ಕಿಂತ ಮೇಲೆ ಹೇಳಿದ ಪ್ರಮಾಣಬಲದಿಂದ ಭಗವತ್ಕೈಙ್ಕರ್ಯಾಪೇಕ್ಷೆಯುಳ್ಳಿ ಶೇಷತ್ವಜ್ಞಾನವೇನು, ಅನನ್ಯ ಪ್ರಯೋಜನಜ್ಞಾನವೇನು ಇಂತವುಗಳನ್ನು ಹೊಂದಿ, ಭಗವಂತನಿಗೆ ಅಂತರಂಗಭೂತರಾಗಿ ತುಂಬಾ ಪ್ರಿಯರಾಗಿರುವ ಕೈಙ್ಕರ್ಯವೂ ಭಗವಂತನಿಗೆ ತನ್ನ ಕೈಙ್ಕರ್ಯಕ್ಕಿಂತ ಪ್ರಿಯತಮವಾಗುವದರಿಂದ, ಭಗವತ್ಕೈಂಕರ್ಯಪ್ರಾರ್ಥನೆಯು ಪರಮ ಭಾಗವತ ಕೈಙ್ಕರ್ಯ ಪರ್ಯನ್ತವೆಂದು ಭಾವಿಸುವದು ಸರ್ವಸಮಂಜಸವೆಂಬ ತಾತ್ಪರ್ಯವು.

ಇಲ್ಲಿ ಪ್ರಸನ್ನನಾದವನು ಇಲ್ಲಿರುವ ಕಾಲವೂ ಎಂತವರಿಗೆ ಮಾತ್ರ ಕೈಙ್ಕರ್ಯ ಮಾಡುವುದು ಸಾಧುವೆಂಬ ವಿಷಯದಲ್ಲಿ "ಶೇಷತ್ವಜ್ಞಾನಮುಡೈಯ ಅನನ್ಯ ಪ್ರಯೋಜನರ್ಕಳ್ಪ್ಪತ್ತ ಕೈಙ್ಕರ್ಯಮ್" ಎಂದು ವ್ಯಕ್ತಪಡಿಸಿದರು.

ಆಗಲಿ, ನಾರಶಬ್ದದಿಂದ ಅದು ವಿಶೇಷಣವೆಂದಿಷ್ಟು ಮಾತ್ರದಿಂದ ಭಾಗವತ ಕೈಙ್ಕರ್ಯ ಸಿದ್ಧಿಸುವದಿಲ್ಲವೆಂದರೆ, ಮೋಕ್ಷದೆಶೆಯಲ್ಲಿ ಪರಿಪೂರ್ಣ ಬ್ರಹ್ಮಾನುಭವ ಕಾಲದಲ್ಲೂ, ನಾರಶಬ್ದಕ್ಕೆ ಈ ಸಂಕುಚಿತಾರ್ಥವನ್ನೇ ಹೇಳಬೇಕಾಗಿ ಬರುವದಿಲ್ಲವೋ ? ನಾರಶಬ್ದದಿಂದ ಹೇಳಬೇಕಾದವೆಲ್ಲವೂ ಸೇರದೇ ಹೋಗಬೇಕಾಗುವದಿಲ್ಲವೇ ? ಎಂದರೆ ಪ್ರಮಾಣ ಬಲದಿಂದ ಸಂಕೋಚವಿಲ್ಲದೆ ಸರ್ವವೂ

**ಅನುಭಾವ್ಯತ್ತೈಯಿಲುಮ್ ನಾರಶಬ್ದಾರ್ಥಮಾನ ಸರ್ವಮುಮ್ ಪ್ರವಿಷ್ಟಮಾಮೆನ್ರು ಇಡಮುಮ್ ಪ್ರಮಾಣಬಲತ್ತಾಲೇ ವನ್ದದತ್ತನ್ನೈ.**

**ಇಪ್ಪಡಿ ತಿರುಮನ್ರತ್ತಿಲ್ ವಾಕ್ಯತ್ರಯತ್ತಿಲೇ ಇರಣ್ಡುವಾಕ್ಯಂ ಸ್ವರೂಪ ಪರಮಾಯ್, ಒರುವಾಕ್ಯಂ ಪುರುಷಾರ್ಥ ಪರಮಾಗ ಯೋಜಿತ್ತದು.**

---

ಅಂತರ್ಗತವೆಂದು ಹೇಳುತ್ತಾರೆ. **ಅನುಭಾವ್ಯತ್ತೈಯಿಲುಮ್** - ಪರಿಪೂರ್ಣ ಬ್ರಹ್ಮಾನುಭವರೂಪವಾದ ಮೋಕ್ಷದೆಶೆಯಲ್ಲಿ, **ನಾರಶಬ್ದಾರ್ಥವಾದ, ಸರ್ವಮುಮ್** - ಸಮಸ್ತವೂ, **ಪ್ರವಿಷ್ಟಮಾಮೆನ್ರು** - ಅಂತರ್ಗತವು ಎಂದರೆ ಸೇರಿದುದು ಎಂಬ, **ಇಡಮ್** – ಸಂದರ್ಭವೂ ಕೂಡ, **ಪ್ರಮಾಣಬಲತ್ತಾಲೆ** – ಶಾಸ್ತ್ರಪ್ರಮಾಣದ ಬಲದಿಂದ, **ವನ್ದದತ್ತನ್ನೈ** - ಉಂಟಾದುದಷ್ಟೇ. ಆ ಶಾಸ್ತ್ರ ಪ್ರಮಾಣಗಳು ಯಾವುವೆಂದರೆ **"ಸೋಽಶ್ನುತೇ ಸರ್ವಾನ್ಕಾಮಾನ್ ಸಹಬ್ರಹ್ಮಣಾ ವಿಪಶ್ಚಿತಾ" ವಿಪಶ್ಚಿತಾ** - ನಿರುಪಾಧಿಕವಾಗಿ ಅನ್ಯಾಧೀನವಲ್ಲದ, ಸಂಕೋಚವೂ ಇಲ್ಲದ ಸರ್ವ ವಿಷಯಕ ಜ್ಞಾನವುಳ್ಳ, **ಬ್ರಹ್ಮಣಾಸಹ** ಪರಬ್ರಹ್ಮನೊಂದಿಗೆ, **ಸರ್ವಾನ್ಕಾಮಾನ್** - ಕಾಮ್ಯಂತ ಇತಿಕಾಮಾಃ ಎಂಬ ವ್ಯುತ್ಪತ್ತಿಯಿಂದ, **ಕಾಮಾಃ** ಎಂದರೆ ಕಲ್ಯಾಣಗುಣಗಳು, ಅವುಗಳನ್ನೂ, **ಸಃ** - ಆ ಮುಕ್ತನು, **ಅಶ್ನುತೇ** - ಅನುಭವಿಸುವನು. ಇಲ್ಲಿ **ಬ್ರಹ್ಮಣಾ ಸಹ** ಎಂಬುದು ಅಪ್ರಧಾನ ತೃತೀಯೆ ಅಲ್ಲವು. **ಪಯಸಾ ಸಹ** ಓದನಂಭುಜ್ತೇ ಎಂಬಲ್ಲಿ ಹೇಳಿರುವ ಹಾಗೆ ಪ್ರಧಾನವಾಗಿ ಭೋಗ್ಯತಮತ್ವವನ್ನು ಪರಬ್ರಹ್ಮನಿಗೆ ಬೋಧಿಸುತ್ತದೆಂದು ಶ್ರೀಯತಿವರ್ಯರು ಉಪದೇಶಿಸಿರುತ್ತಾರೆ. ಹಾಗೆಯೇ ಇನ್ನೊಂದು ಪ್ರಮಾಣವು **"ಸರ್ವಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ"** (ಛಾಂ. ೭.೨೬.೨) **ಪಶ್ಯಃ** - ಪರಬ್ರಹ್ಮನನ್ನು ಸಾಕ್ಷಾತ್ಕರಿಸುವ ಉಪಾಸಕನು, ಹೀಗೆ ಸಾಕ್ಷಾತ್ಕರಿಸುವವನು ಸಂಕಲ್ಪ ಮಾತ್ರದಿಂದಲೇ ಎಲ್ಲಾ ಕಾಲದಲ್ಲೂ ಎಲ್ಲವನ್ನೂ ಹೊಂದುವನು ಎಂದರೆ ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳ ಆವಿರ್ಭಾವವನ್ನು ಹೊಂದುವನು ಎಂಬರ್ಥವು.

ಹೀಗೆ ಮೂಲಮಂತ್ರವನ್ನು ಮೂರು ವಾಕ್ಯವೆಂದು ಭಾವಿಸಿ, ಮೊದಲಿನ ಎರಡು ವಾಕ್ಯಗಳಾದ **ಓಂ ನಮಃ** ಎಂಬುವು ಸ್ವರೂಪಪರವಾಗಿಯೂ, ಮೂರನೆಯದಾದ **ನಾರಾಯಣಾಯ** ಎಂಬುದು ಪುರುಷಾರ್ಥಪರವಾಗಿಯೂ, ಅನ್ವಯಿಸಿ ವಿಪುಳವಾಗಿ ಉಪಪಾದನೆ ಮಾಡಿದುದನ್ನು ಮುಂದಿನ ವಾಕ್ಯದಿಂದ ನಿಗಮನ ಮಾಡಿ ಹೇಳುತ್ತಾರೆ. **ಇಪ್ಪಡಿ** – ಹಿಂದೆ ಉಪಪಾದಿಸಿದ ರೀತಿಯಲ್ಲಿ, **ತಿರುಮನ್ರತ್ತಿಲ್** - ಮೂಲಮನ್ತ್ರದಲ್ಲಿ, **ವಾಕ್ಯತ್ರಯತ್ತಿಲ್** - ಮೂರು ವಾಕ್ಯವೆಂಬಲ್ಲಿ, **ಇರಣ್ಡುವಾಕ್ಯಮ್** - ಮೊದಲು ಎರಡು ವಾಕ್ಯಗಳಾದ **ಓಂ** ಮತ್ತು **ನಮಃ** ಎಂಬುವು ಸ್ವರೂಪ ಪರವಾಗಿಯೂ, ಹೇಗೆಂದರೆ ಪ್ರಣವದಿಂದ ತಾನು ಪರಮಾತ್ಮನಿಗೇನೇ ಶೇಷಭೂತನು ಇತರರಿಗಲ್ಲವು ಎಂಬುದರಿಂದ ಶೇಷತ್ವ

## ವಾಕ್ಯತ್ರಯಪಕ್ಷೇ ದ್ವಿತೀಯಯೋಜನಾ

**೭. ಇಙ್ಙನನ್ರಿಕ್ಕೆ ಪ್ರಣವಂ ಸ್ವರೂಪಪರಮಾಯ್, ನಮಸ್ಸಿಲೇ ಅನಿಷ್ಟ ನಿವೃತ್ತಿ ಪ್ರಾರ್ಥನೈಯಾಯ್, ಅನಿಷ್ಟಮ್ ನಿವರ್ತ್ತಿತ್ತಾಲ್ ವರುಮ್ ಪುರು**

---

ಸ್ವರೂಪವು ಬೋಧಿತವು, ಎರಡನೆಯ ವಾಕ್ಯವಾದ ನಮಸ್ಸು ಸ್ವರೂಪಪರವು ಹೇಗೆಂದರೆ? ಅನಿಷ್ಟನಿವೃತ್ತಿರೂಪ ಪ್ರಾರ್ಥನೆಯಿಂದ ಸ್ವಸ್ವರೂಪಾವಿರ್ಭಾವವನ್ನು ಅಪೇಕ್ಷಿಸುವದರ ಮೂಲಕವೂ ಸ್ವರೂಪಪರವು ; ಹೀಗೆ ಎರಡೂ ಸ್ವರೂಪಪರವಾಗಿ, **ಒರುವಾಕ್ಯಮ್** - ಮೂರನೆಯದಾದ ಇನ್ನೊಂದು ವಾಕ್ಯವಾದ **ನಾರಾಯಣಾಯ** ಎಂಬುದಾದರೋ **ಪುರುಷಾರ್ಥ ಪ್ರಾರ್ಥನಾ ಪರಮಾಗ ಯೋಜಿತ್ತತು** - ಇಲ್ಲಿಯೂ ಮತ್ತು ಮೋಕ್ಷದೆಶೆಯಲ್ಲೂ ಸದಾ ಕೈಙ್ಕರ್ಯವನ್ನು ಮಾಡಬೇಕೆಂಬ ಪ್ರಾರ್ಥನೆಯ ಪರವೆಂಬ ಯೋಜನೆಯು ಹೇಳಲ್ಪಟ್ಟಿತು.

### ಮೂಲಮನ್ತ್ರವು ಮೂರು ವಾಕ್ಯವೆಂದು ಭಾವಿಸಿ ಎರಡನೆಯ ಯೋಜನೆಯು.

ಈ ಯೋಜನೆಯಲ್ಲಿ ಮೊದಲು ವಾಕ್ಯವು ತನ್ನ ಪರಶೇಷತ್ವವನ್ನು ವ್ಯಕ್ತಪಡಿಸುತ್ತದೆಂದೂ, ನಾರಾಯಣಾಯ ಎಂಬುದು ಪುರುಷಾರ್ಥವಾದ ಕೈಙ್ಕರ್ಯವನ್ನು ವ್ಯಕ್ತಗೊಳಿಸುತ್ತದೆಂದೂ, ಉಪಪಾದಿಸಿ ಹೇಳಿ, ಇದು ಮಹಾ ಪ್ರಾಜ್ಞರಾದ ಶ್ರೀ ಪರಾಶರ ಭಟ್ಟರು ಉಪಪಾದಿಸಿದ ಅಭಿಪ್ರಾಯವೆಂದು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ—ಹಿಂದಿನ ಪ್ರಥಮ ಯೋಜನೆಯಲ್ಲಿ ನಮಸ್ಸು ಸ್ವರೂಪಪರವೆಂದು ಅರ್ಥಮಾಡಿದರೆ, ಅನಿಷ್ಟ ನಿವೃತ್ತಿಯೆಂದು ಹೇಳಿದಂತಾಗಲಿಲ್ಲವು. ಪುರುಷಾರ್ಥರೂಪವಾದ ಇಷ್ಟಪ್ರಾಪ್ತಿಯು ಅನಿಷ್ಟ ನಿವೃತ್ತಿಯಿಲ್ಲದೆ ಉಂಟಾಗುವದಿಲ್ಲವು. ಆದುದರಿಂದ ಶ್ರೀ ಪರಾಶರ ಭಟ್ಟರವರು ನಮಶ್ಶಬ್ದವು ಅನಿಷ್ಟ ನಿವೃತ್ತಿಪರವೆಂದು ಉಪಪಾದಿಸಿರುತ್ತಾರಾದುದರಿಂದ ಅಂತಹ ಪ್ರಾಜ್ಞರ ಅಭಿಪ್ರಾಯವು ಉಪಾದೇಯವೆಂಬ ಭಾವವನ್ನು ಪ್ರದರ್ಶಿಸುತ್ತಾರೆ.—**ಇಙ್ಙನನ್ರಿಕ್ಕೇ** - ಪ್ರಥಮ ಯೋಜನೆಯಲ್ಲಿ ಉಪಪಾದಿಸಿದ ರೀತಿಯಲ್ಲಿ ಅಲ್ಲದೆ, ಎಂದರೆ ಮೊದಲು ಎರಡು ವಾಕ್ಯಗಳೂ ಸ್ವರೂಪ ಪರವೆಂದೂ ಮೂರನೇಯದು ಪುರುಷಾರ್ಥಪರವೆಂಬದಾಗಿ ಭಾವಿಸದೆ ಎಂಬರ್ಥವು. **ಪ್ರಣವಂ ಸ್ವರೂಪ ಪರಮಾಯ್** - ಹಿಂದಿನ ಯೋಜನೆಯ ಹಾಗೆಯೇ ಪ್ರಣವವು ಶೇಷತ್ವವನ್ನು ಮಾತ್ರ ಬೋಧಿಸುವಂಥಾದ್ದಾಗಿಯೂ, **ನಮಸ್ಸಿಲೇ ಅನಿಷ್ಟ ನಿವೃತ್ತಿ ಪ್ರಾರ್ಥನೆಯಾಯ್** - ನಮಸ್ಸಿನಲ್ಲಿ ಎಂದರೆ ನಮಸ್ಸಿನ ಮೂಲಕ **ಅನಿಷ್ಟ ನಿವೃತ್ತಿ ಪ್ರಾರ್ಥನೆಯಾಯ್** ಎಂದರೆ **ಮೋಕ್ಷಪ್ರಾಪ್ತಿಗೆ** ಪ್ರತಿಬಂಧಕಗಳಾದ ಪುಣ್ಯಪಾಪಗಳ ನಿವೃತ್ತಿ ಪೂರ್ವಕವಾಗಿಯೂ **ಅನಿಷ್ಟನಿವೃತ್ತಿತ್ತಾಲ್** – ಹಾಗೆ ಅನಿಷ್ಟ ನಿವೃತ್ತಿಯುಂಟಾದರೇನೇ, **ವರುಮ್** - ಒರುವ, **ಪುರುಷಾರ್ಥತ್ತೈ** – ಭಗವತ್ ಕೈಙ್ಕರ್ಯರೂಪ ಪುರುಷಾರ್ಥವನ್ನು,

ಷಾರ್ಥತ್ತೈ "ನಾರಾಯಣಾಯಸ್ಯಾಮ್" ಎನ್ರು ಕಣಿಶಿಕ್ಕಿರತಾಗವುಮಾಮ್. ಇನ್ನಮ್ನಸ್ಸುಕ್ಕುಮ್ ಇಪ್ಪಡಿ ದ್ವಯತ್ತಿಲ್ ನಮಸ್ಸುಕ್ಕು ಪ್ಪೋಲೆ ವಿರೋಧಿ ನಿವೃತ್ತಿಪ್ರಾರ್ಥನೈಯಿಲೇ ತಾತ್ಪರ್ಯಮಾನ ಯೋಜನಾವಿಶೇಷಮುಮ್ (೧) "ಪ್ರಣವೋದಿತ ತಚ್ಛೇಷ ಭಾವೋಹಂ ನಿಜಕರ್ಮಭಿಃ । ಅಹಙ್ಕಾರಮಮತ್ವಾಭ್ಯಾ ಮಭಿಭೂತೋಪ್ಯತಃ ಪರಮ್। ತಚ್ಛೇಷತ್ವಾನುಸಂಧಾನ ಪೂರ್ವತಚ್ಛೇಷವೃತ್ತಿಕಃ । ಭೂಯಾಸ ಮಿತ್ಯಮುಂ ಭಾವಂ ವ್ಯನಕ್ತಿ ನಮ ಇತ್ಯತಃ ॥" ಎನ್ರು ಭಟ್ಟರ್ ನಿತ್ಯತ್ತಿಲೇ ಪ್ರದರ್ಶಿತಮ್.

---

**ನಾರಾಯಣಾಯಸ್ಯಾಂ**-ಪರಮ ಪುರುಷನಾದ ಶ್ರೀಮನ್ನಾರಾಯಣನಿಗೇನೇ ನಾನು ಆಗುವೆನು, ಮಾಡುವೆನು, **ಎನ್ರು** - ಎಂಬದಾಗಿ, **ಕಣಿಶಿಕ್ಕಿರದಾಗುವಮಾಮ್**-ಅಭಿಪ್ರಾಯ ಉಂಟಾಗುವದಾಗುತ್ತದೆ. **ಇಪ್ಪಡಿ** – ಈ ರೀತಿಯಲ್ಲಿ, **ನಮಸ್ಸುಕ್ಕುಮ್** - ಈ ಮೂಲಮನ್ತ್ರದಲ್ಲಿರುವ ನಮಸ್ಸಿಗೂ, **ದ್ವಯತ್ತಿಲ್** - ದ್ವಯ ಮನ್ತ್ರದಲ್ಲಿರುವ, **ನಮಸ್ಸುಕ್ಕುಪ್ಪೋಲೇ** - ನಮಸ್ಸಿನ ಹಾಗೆ, ವಿರೋಧ ನಿವೃತ್ತಿ **ಪ್ರಾರ್ಥನೈಯಿಲೇ** - ಮೋಕ್ಷಪ್ರಾಪ್ತಿಗೆ ಪ್ರತಿಬಂಧಕಗಳಾದ ಪುಣ್ಯಪಾಪಗಳ ನಿವೃತ್ತಿಯಾಗಬೇಕೆಂಬ ಪ್ರಾರ್ಥನೆಯಲ್ಲಿ, **ತಾತ್ಪರ್ಯಮಾನ** - ಅಭಿಪ್ರಾಯವಾದ, **ಯೋಜನಾ ವಿಶೇಷವು** - ಶ್ರೀ ಪರಾಶರ ಭಟ್ಟರಿಂದ ಪ್ರದರ್ಶಿಸಲ್ಪಟ್ಟಿತೆಂದು ಅವರು ರಚಿಸಿದ ನಿತ್ಯವೆಂಬ ಗ್ರಂಥದ ಶ್ಲೋಕವನ್ನು ಮುಂದೆ ಉದಾಹರಿಸುತ್ತಾರೆ—"**ಪ್ರಣವೋದಿತ** - ಪ್ರಣವದಲ್ಲಿ ಹೇಳಲ್ಪಟ್ಟ, **ತಚ್ಛೇಷಭಾವಃ** - ತಚ್ಛಬ್ದದಿಂದ ಬೋಧಿತನಾದ ಭಗವಂತನಿಗೆ ಶೇಷಭೂತನಾಗಿರುವ ಸ್ವರೂಪವುಳ್ಳ, **ಅಹಂ** - ನಾನು, **ನಿಜಕರ್ಮಭಿಃ** - ತನ್ನ ಪ್ರವೃತ್ತಿಗಳಿಂದ, **ಅಹಙ್ಕಾರ ಮಮತ್ವಾಭ್ಯಾಮ್** - ಅಹಂಕಾರ ಮಮಕಾರ ಭಾವಗಳಿಂದ, **ಅಭಿಭೂತೋಪಿ** - ವ್ಯಾಪಿಸಲ್ಪಟ್ಟು ಪರಿಪೂರ್ಣನಾಗಿದ್ದರೂ ಕೂಡ, **ಅತಃಪರಂ** – ತದನಂತರ, **ತಚ್ಛೇಷತ್ವಾನುಸಂಧಾನ ಪೂರ್ವ ತಚ್ಛೇಷವೃತ್ತಿಕಃ** - ಆ ಭಗವಂತನಿಗೇ ತಾನು ಸ್ವರೂಪತಃ ಶೇಷಭೂತನೆಂಬ ಅನುಸಂಧಾನ ಪೂರ್ವಕವಾಗಿ ಆ ಭಗವಂತನಿಗಾಗಿಯೇ ತಾನು ಮಾಡತಕ್ಕ ಸರ್ವವಿಧ ಕೈಂಕರ್ಯಗಳನ್ನುಳ್ಳವನಾಗಿ, **ಭೂಯಾಸಮ್** – ಆಗುವೆನು, **ಇತಿ**-ಎಂಬ, **ಅಮುಂಭಾವಂ**-ಇಂತಹ ಅಮೋಘ ತಾತ್ಪರ್ಯವನ್ನು, **ನಮ ಇತ್ಯತಃ** - ಮೂಲಮನ್ತ್ರದ ನಮಃ ಎಂಬ ಪದದ ಮೂಲಕ, **ವ್ಯನಕ್ತಿ** - ವ್ಯಕ್ತಗೊಳಿಸುತ್ತದೆ, **ಎನ್ರು** – ಎಂಬುದಾಗಿ, **ಭಟ್ಟರ್** - ಶ್ರೀ ಪರಾಶರ ಭಟ್ಟರವರು, **ನಿತ್ಯತ್ತಿಲೇ** - ಅವರು ರಚಿಸಿದ ನಿತ್ಯವೆಂಬ ಗ್ರಂಥದಲ್ಲಿ, **ಪ್ರದರ್ಶಿತಮ್** - ಪ್ರದರ್ಶಿಸಲ್ಪಟ್ಟಿತು. ಈ ಶ್ಲೋಕ ತಾತ್ಪರ್ಯವೇನೆಂದರೆ—ಈ ಜೀವಾತ್ಮನು ಮೂಲಮನ್ತ್ರದ ಪ್ರಣವಾರ್ಥಾನುಸಂಧಾನದಿಂದ ತನ್ನ ಸ್ವರೂಪವಾದ ಭಗವಚ್ಛೇಷತ್ವವನ್ನು ಅರಿತವನಾದರೆ, ಆತನು ಹಿಂದೆ ಅಹಂಕಾರ ಮಮಕಾರ ಭಾವ

**ಅಗ್ನೈಯಾಲೇ "ಅಹಂ ನ ಮಮ ಸ್ಯಾಮ್" ಎನ್ರಾದಲ್, "ನ ಮಮ ಕಿಂಚಿತ್ಸ್ಯಾತ್" ಎನ್ರಾದಲ್, ವಾಕ್ಯಾನ್ವಯಮಾಯ್, ಇತ್ತಾಲೇ (೨) "ಅಸ್ಯ ಜೀವಾತ್ಮನೋಽನಾದ್ಯವಿದ್ಯಾಸಂಚಿತ ಪುಣ್ಯಪಾಪರೂಪಕರ್ಮ ಪ್ರವಾಹ ಹೇತುಕ ಬ್ರಹ್ಮಾದಿ ಸುರನರತಿರ್ಯಕ್ಸ್ಥಾವರಾತ್ಮಕ ಚತುರ್ವಿಧ ದೇಹ ಪ್ರವೇಶಕೃತ**

---

ಗರ್ಭಿತಗಳಾದ ಎಷ್ಟು ಕೃತ್ಯಗಳನ್ನು ಮಾಡಿದ್ದರೂ, ನಾರಾಯಣಾಯ ಎಂಬಲ್ಲಿ ಬೋಧಿತೆಶಾದ ತನ್ನ ಶೇಷಿಗೇನೆ ತಾನು ಸರ್ವ ವಿಧ ಕೈಂಕರ್ಯಗಳನ್ನೂ ಮಾಡುವದು ಉಚಿತವೆಂದು ಭಾವಿಸಿ ಅಂತಹ ನಿತ್ಯ ಕೈಂಕರ್ಯಪ್ರಾಪ್ತಿಯನ್ನು ಅಪೇಕ್ಷಿಸುವದಕ್ಕೆ ಮೊದಲೇ ತತ್ಪ್ರಾಪ್ತಿಗೆ ವಿರೋಧವಾದ ಪುಣ್ಯಪಾಪಗಳ ನಿವೃತ್ತಿಯನ್ನು ಪ್ರಾರ್ಥಿಸುವದು ಯುಕ್ತವೆಂದು ಮಧ್ಯಮ ವಾಕ್ಯವಾದ ನಮಶ್ಶಬ್ದವು ಸೂಚಿಸುತ್ತದೆಂಬ ಅಭಿಪ್ರಾಯವು. ಈ ಮೂಲಮಂತ್ರದ ಮಧ್ಯಮ ಪದವು ಈ ಅನಿಷ್ಟ ನಿವೃತ್ತಿರೂಪ ಭಾವವನ್ನು ಹೇಗೆ ಪ್ರದರ್ಶಿಸುತ್ತದೆಂಬುದನ್ನು ಮುಂದಿನ ವಾಕ್ಯವಾದ ಆಗ್ನೈಯಾಲ್ ಎಂಬುದರ ಮೂಲಕ ಉಪಪಾದಿಸುತ್ತಾರೆ.—

**ಅಗ್ನೈಯಾಲ್** - ಹೀಗೆ ಸಾಂಪ್ರದಾಯಕವಾದ ಅಭಿಯುಕ್ತರ ಅಭಿಪ್ರಾಯವಾದುದರಿಂದ, ಆ ಅಭಿಪ್ರಾಯವು ನಮಶ್ಶಬ್ದಕ್ಕೆ ಉಂಟಾಗುವದಕ್ಕಾಗಿ, ಸ್ಯಾಮ್ ಅಥವಾ ಸ್ಯಾತ್ ಎಂಬ ಕ್ರಿಯಾಪದವನ್ನು ಸೇರಿಸಿಕೊಂಡರೆ, ಆ ಅನಿಷ್ಟ ನಿವೃತ್ತಿಯ ಪ್ರಾರ್ಥನೆಯ ಬೋಧವುಂಟಾಗುತ್ತದೆಂದು ತಿಳಿಸುತ್ತಾರೆ.— **ಅಹಂ ನ ಮಮ ಸ್ಯಾಂ** – ನಾನು ನನಗಲ್ಲವು, ನಾನು ನನಗೆ ಶೇಷಭೂತನಲ್ಲವು, ನಾನು ಸ್ವತಂತ್ರನು ನಾನೇ ಸ್ವಾಮಿಯು ಎಂಬ ಅಭಿಮಾನವಿಲ್ಲದವನಾಗುವೆನು ಎಂಬರ್ಥವು, ಎಂದರೆ ಅಹಂಕಾರ ಮಮಕಾರವಿಲ್ಲದವನಾಗುವೆನು ಭಗವತ್ಕೃಪೆಯಿಂದ ಎಂಬ ಭಾವವು; **ಎನ್ರಾದಲ್** - ಎಂದಾದರೂ, ಅಥವಾ **"ನಮಮ ಕಿಂಚಿತ್ಸ್ಯಾತ್** - ತನಗೆ ಸಂಬಂಧವಿರುವದೆಲ್ಲವೂ ತನ್ನದು ಎಂಬ ಮಮಕಾರಾದಿಗಳು ನನಗೆ ಸ್ವಲ್ಪವಾಗಲಿ ಉಂಟಾಗದಿರಲಿ, **ಎನ್ರಾದಲ್** - ಎಂದಾದರೂ, **ವಾಕ್ಯಾನ್ವಯಮಾಯ್** ಹೀಗೆ ವಾಕ್ಯತಾತ್ಪರ್ಯವಾಗಿ ಭಾವಿಸಿ, **ಇತ್ತಾಲೇ** - ಇಂತಹ ಭಾವನೆಯಿಂದ ನಿವೃತ್ತಿಸಿದ ಅಹಂಕಾರ ಮಮಕಾರಗಳನ್ನು ಹೊಂದುವದರಿಂದ ಅನಿಷ್ಟನಿವೃತ್ತಿಪ್ರಾರ್ಥನೆಯು ನಮಶ್ಶಬ್ದದಿಂದ ಬೋಧಿತವೆಂದು ಹೇಳಲು ಹೊರಟು ತದುಪಪಾದನೆಗಾಗಿ ಶ್ರೀ ಯತಿವರ್ಯರ ವಾಕ್ಯವನ್ನೂ ನಮ್ಮಾಳ್ವಾರ್ ವಾಕ್ಯವನ್ನೂ ಉದಾಹರಿಸುತ್ತಾರೆ.—(೨) **ಅಸ್ಯಜೀವಾತ್ಮನಃ** – ಈ ಜೀವಾತ್ಮನಿಗೆ, **ಅನಾದ್ಯವಿದ್ಯಾ** - ಅನಾದಿಯಾಗಿ ಬಂದ, ಅಜ್ಞಾನ, ಅನ್ಯಥಾ ಜ್ಞಾನ, ವಿಪರೀತ ಜ್ಞಾನದಿಂದ, **ಸಂಚಿತ** – ಸಂಪಾದಿಸಲ್ಪಟ್ಟ, **ಪುಣ್ಯಪಾಪರೂಪವಾದ ಕರ್ಮ ಪ್ರವಾಹವೇ, ಹೇತುಕ** - ಕಾರಣವಾಗಿವುಳ್ಳ, **ಬ್ರಹ್ಮಾದಿ** - ಚತುರ್ಮುಖನೇ ಮೊದ

---

(೨) ವೇದಾರ್ಥ ಸಙ್ಗ್ರಹ.

**ತತ್ತದಾತ್ಮಾಭಿಮಾನ ಜನಿತಾವರ್ಜನೀಯ ಭವ ಭಯ ವಿಧ್ವಂಸನಾಯ" ಎನ್ರುಮ್, (೨) ಪೊಯ್ ನ್ನಿನ್ರ ಜ್ಞಾನಮುಮ್ ಪೊಲ್ಲಾಪ್ಪೊಳುಕ್ಕುಮ್ ಅಳ ಕ್ಕುಡಂಬುಮ್" ಎನ್ರುಮ್ ಚೊಲ್ಲುಗಿರ ಅವಿದ್ಯಾಕರ್ಮ ತದುಭಯ ವಾಸನಾ**

---

ಲಾದ, **ಸುರನರತಿರ್ಯಕ್ಸ್ಥಾವರಾತ್ಮಕ** - ದೇವತೆಯೇನು, ಮನುಷ್ಯನೇನು, ಮೃಗವೇನು, ವೃಕ್ಷಸಸ್ಯಾದಿಗಳೇನು, **ಚತುರ್ವಿಧ**-ಹೀಗೆ ನಾಲ್ಕು ವಿಧವಾದ **ದೇಹ ಪ್ರವೇಶ** - ಇವುಗಳ ಶರೀರವನ್ನು ಪ್ರವೇಶಿಸುವದರಿಂದ, **ಕೃತ** - ಮಾಡಲ್ಪಟ್ಟ, **ತತ್ತದಾತ್ಮಾಭಿಮಾನ** - ಆ ದೇಹಗಳೇ ಆತ್ಮಾ ಎಂಬ ಅಹಂಭಾವದಿಂದ, **ಜನಿತ**- ಉಂಟಾದ, **ಅವರ್ಜನೀಯ** – ತಪ್ಪಿದ್ದಲ್ಲದ, **ಭವಭಯ** – ಸಂಸಾರದ ಭಯದ, **ವಿಧ್ವಂಸನಾಯ** - ನಾಶಕ್ಕಾಗಿ" **ಎನ್ರುಮ್** - ಎಂದೂ; ಇಲ್ಲಿ ಶ್ರೀ ಯತಿವರ್ಯರ ವಾಕ್ಯಾಭಿಪ್ರಾಯವೇನೆಂದರೆ—ಈ ಜೀವಾತ್ಮನಿಗೆ ಪ್ರಕೃತಿಸಂಬಂಧ, ಆ ಕಾರಣ ದಿಂದ ಅವಿದ್ಯಾಕರ್ಮ ವಾಸನಾರುಚಿಗಳು ಅನಾದಿಯಾಗಿ ಅನುವರ್ತಿಸಿಕೊಂಡು ಚಕ್ರರೂಪದಲ್ಲಿ ಜನ್ಮ ಜನ್ಮಕ್ಕೂ ಬರುತ್ತವೆಂದು ಹಿಂದೆಯೇ (೧೮೩ನೆಯ ಪುಟ ನೋಡಿ) ಉಪಪಾದಿಸಿದುದನ್ನು ಇಲ್ಲಿಯೂ ಹೇಳಿ, ಈ ವಾಕ್ಯದಲ್ಲೂ ಉಪಪಾದಿಸು ವರಾಗಿ ಇಂತಹ ಅನಿಷ್ಟ ನಿವೃತ್ತಿಯನ್ನೇ ಶ್ರೀ ಯತಿವರ್ಯರೂ ಬೋಧಿಸಿರುತ್ತಾ ರೆಂದು ಹೇಳುವ ಪ್ರಕರಣವು; ಅನಾದ್ಯವಿದ್ಯೆಯಿಂದ ಬಂದುದು ಪುಣ್ಯಪಾಪ ರೂಪ ಕರ್ಮಪ್ರವಾಹವು; ಇಂತಹ ಕರ್ಮಪ್ರವಾಹಕ್ಕೆ ಸಿಲುಕಿದವರೇ ಚತುರ್ಮುಖ ಬ್ರಹ್ಮ ಮೊದಲುಗೊಂಡು ಆತನಿಂದ ಸೃಷ್ಟಿಸಲ್ಪಟ್ಟ ದೇವ ಮನುಷ್ಯ ತಿರ್ಯಕ್ ಸ್ಥಾವರ ನಾಲ್ಕು ವಿಧ ಪ್ರಾಣಿಗಳು; ಇಂತಹ ಶರೀರಗಳ ಪ್ರಾಪ್ತಿಯಿಂದ ಜ್ಞಾನ ಸಂಕೋಚವನ್ನು ಹೊಂದಿ ದೇಹವೇ ಆತ್ಮಾ ಎಂಬ ಭ್ರಮೆಗೆ ಒಳಗಾಗಿರು ತ್ತಾರೆ; ಇಂತಹ ಭ್ರಮಜ್ಞಾನವಿರುವ ತನಕ ಸಂಸಾರದ ಭಯ ತಪ್ಪದಾದುದ ರಿಂದ, ಅಂತಹ ದೇಹಸಂಬಂಧವೂ ತನ್ಮೂಲಕ ಸಂಸಾರ ಭಯವೂ ನಾಶವಾಗ ಬೇಕು ಎಂದು ಅನಿಷ್ಟ ನಿವೃತ್ತಿಯನ್ನೇ ಉಪಪಾದಿಸಿ ಹೇಳುವದಕ್ಕಾಗಿ ಅವರ ದಿವ್ಯಸೂಕ್ತಿಯನ್ನು ಉದಾಹರಿಸಿದರು". ಅದನ್ನೇ ಉಪಪಾದಿಸುವದಕ್ಕಾಗಿ ಶ್ರೀ ಕುಲಶೇಖರಾಳ್ವಾರವರ ಒಂದು ಪಾಶುರವನ್ನು ಉದಾಹರಿಸುತ್ತಾರೆ.— (೨) **"ಪೊಯ್ ನಿನ್ರಜ್ಞಾನಮುಮ್** - ದೇಹವೇ ಆತ್ಮಾ ಎಂಬ ಸುಳ್ಳಾದ ಜ್ಞಾನವೂ ಮತ್ತು ತಾನೇ ಸ್ವತಂತ್ರನು ಎಂಬ ಭ್ರಮ ಜ್ಞಾನವೂ; **ಪೊಲ್ಲಾ ವೊಳುಕ್ಕುಂ** - ಅದರಿಂದುಂಟಾಗುವ ಕರ್ಮವಾಸನಾ, ದುಷ್ಟಪ್ರವೃತ್ತಿಯೂ, **ಅಳಕ್ಕುಡಂಬುಂ**-ಹೇಯಮಲಗಳಿಂದಲೂ ಮತ್ತು ಮನಸ್ಸಿನ ಮಲಪಾಪಾಚರಣೆ ಗಳಿಂದಲೂ ಉಂಟಾದಹೇಯ ದೇಹಸಂಬಂಧವನ್ನೂ" ಇದರಿಂದ ಅನಿಷ್ಟವಾದುದು, ಭ್ರಮಜ್ಞಾನರೂಪವಾದ ಅವಿದ್ಯೆಯೂ, ಕರ್ಮವಾಸನಾಪ್ರೇರಿತವಾದ ಪ್ರವೃತ್ತಿಯೂ

---

(೨) ತಿರುವರುತ್ತಂ ೧.

**ರುಚಿ ಪ್ರಕೃತಿ ಸಂಬಂಧಾದಿರೂಪಮಾನ ಸರ್ವಾನಿಷ್ಟಮು ಮತ್ಯನ್ತ ನಿವೃತ್ತ ಮಾಗ ವೇಣುಮೆನ್ರಪೇಕ್ಷಿತ್ತದಾಯಿತ್ತು.**

---

ಇದಕ್ಕೆಲ್ಲಾ ಕಾರಣಭೂತವಾದುದು ಪ್ರಕೃತಿಸಂಬಂಧವೂ ಇವೇ ಮೊದಲಾದವು ಹೇಳಲ್ಪಟ್ಟವು; ಈ ನಮ್ಮಾಳ್ವಾರ್ರವರ ತಿರುವರುತ್ತಂ ಪೂರಾಪಾಶುರಕ್ಕೂ ಅರ್ಥಕ್ಕೂ ೧೨೭೬-೭ನೆಯ ಪುಟಗಳನ್ನು **ನೋಡಿ**". **ಎನ್ರುಮ್ ಚೊಲ್ಲುಗಿರ** - ಎಂದು ಹೇಳುವ, **ಅವಿದ್ಯಾ** - ಭ್ರಮಜ್ಞಾನ, **ಕರ್ಮ** - ಪುಣ್ಯ ಪಾಪರೂಪ ಕರ್ಮ, **ತದುಭಯವಾಸನಾ** - ಆ ಅವಿದ್ಯಾ ಕರ್ಮಗಳಿಂದುಂಟಾದ ವಾಸನಾ, ಅಥವಾ **ತತ್** - ಆ ಕರ್ಮದ, **ಉಭಯ** ರೂಪಗಳಾದ ಪುಣ್ಯಪಾಪ ಕರ್ಮಗಳ ವಾಸನಾ ಎಂದಾಗಲಿ ಅರ್ಥಮಾಡಬಹುದು, **ರುಚಿ** - ಆ ಹಿಂದಿನ ಪುಣ್ಯಪಾಪ ಕರ್ಮಗಳ ವಾಸನಾನುಗುಣವಾಗಿ ಪ್ರಾಪ್ತವಾಗುವ ಅಭಿರುಚಿಯು, ಇವುಗಳ ಅನುಭವಕ್ಕನುಗುಣವಾದ **ಪ್ರಕೃತಿ ಸಂಬಂಧ** - ಶರೀರ ಪ್ರಾಪ್ತಿಯು, **ಆದಿ** ಇವೇ ಮೊದಲಾದ, ಆದಿಪದದಿಂದ ಅಲ್ಪಾಸ್ಥಿರ ಸುಖದುಃಖಾನುಭವಾದಿಗಳು ಹೇಳಲ್ಪಟ್ಟವು. **ರೂಪಮಾನ** - ಇಂತಹ, **ಸರ್ವಾನಿಷ್ಟಮುಮ್** - ಎಲ್ಲಾ ಅನಿಷ್ಟವೂ, **ಅತ್ಯನ್ತ ನಿವೃತ್ತಮಾಗ ವೇಣುಮೆನ್ರ** – ಸಂಪೂರ್ಣವಾಗಿ ನಿವೃತ್ತಿಸಿಹೋಗಿ ಬಿಡಬೇಕೆಂದು, **ಅಪೇಕ್ಷಿತ್ತದಾಯಿತ್ತು** - ಈ ಮೂಲಮನ್ತ್ರದ ಎರಡನೆಯ ಶಬ್ದವಾದ **ನಮಃ** ಎಂಬುದನ್ನು ವಾಕ್ಯವಾಗಿ ಭಾವಿಸಿ "**ಅಹಂ ನ ಮಮ ಸ್ಯಾಂ**" ಎಂಬ ಅಥವಾ "**ನಮಮ ಕಿಂಚಿತ್ಸ್ಯಾತ್**" ಎಂಬ ಯೋಜನೆಯಲ್ಲಿ, ಪ್ರಾರ್ಥಿಸಿದಂತಾಗುತ್ತದೆ. ಅತ್ಯನ್ತ ನಿವೃತ್ತಮ್ ಎಂದು ಹೇಳಿರುವದು ಅಲ್ಪಕಾಲಿಕ ನಿವೃತ್ತಿಯನ್ನು ವ್ಯಾವರ್ತಿಸಿ ಹೇಳಲ್ಪಟ್ಟಿತು. ಸ್ವಲ್ಪ ಕಾಲ ಅಜ್ಞಾನರೂಪ ಭ್ರಮಗಳು ನಿವರ್ತಿಸಬಹುದು; ದುಃಖಾನುಭವವು ತಪ್ಪಬಹುದು; ಸ್ಥೂಲ ಶರೀರಪ್ರಾಪ್ತಿಯು ಅಲ್ಪಕಾಲ ವಿಳಂಬಿಸಬಹುದು; ಹಾಗಲ್ಲದೆ ಸಂಪೂರ್ಣವಾಗಿ ನಿವೃತ್ತಿಸಬೇಕೆಂಬ ಭಾವವು. ನಿಷ್ಪನ್ನೋಪಾಯನಿಷ್ಠನಿಗೆ | ದೇಹಾವಸಾನಾನಂತರ ಅರ್ಚಿರಾದಿಗತಿಯು ಭಗವಂತನಿಂದ ಸಙ್ಕಲ್ಪಿಸಲ್ಪಟ್ಟು ಉಂಟಾಗಿ, ವಿರಜಾವಗಾಹನವು ಈತನಿಗೆ ಪ್ರಾಪ್ತವಾದಾಗ ಅನಿಷ್ಟ ನಿವೃತ್ತಿಯೂ, ಅನಂತರ ಇಷ್ಟಪ್ರಾಪ್ತಿರೂಪ ಪರಮಾತ್ಮ ಸಾಯುಜ್ಯವೂ, ಪರಿಪೂರ್ಣ ಬ್ರಹ್ಮಾನುಭವವೂ, ತನ್ನಿತ್ಯ ಕೈಙ್ಕರ್ಯಪ್ರಾಪ್ತಿಯೂ, ದೊರೆಯುತ್ತವೆ. ಆದುದರಿಂದ ಮೊದಲು ಅನಿಷ್ಟ ನಿವೃತ್ತಿಯೂ ಅನಂತರ ಒಡನೆಯೇ ಇಷ್ಟಪ್ರಾಪ್ತಿಯೂ ಉಂಟಾಗುತ್ತವೆ. ಅನಿಷ್ಟ ನಿವೃತ್ತಿ ಮಾತ್ರವೇ ಅಪರಿ ಜಿಜ್ಞಾಸುವಿಗೆ ಉಂಟಾಗುವ ಹಾಗೆ ಕೈವಲ್ಯ ಪ್ರಾಪ್ತಿಯೇ ಪ್ರಥಮತಃ ಉಂಟಾಗಬಹುದು. ಆದುದರಿಂದ **ನಮಃ** ಎಂಬುದರಿಂದ ಅನಿಷ್ಟ ನಿವೃತ್ತಿ ಪ್ರಾರ್ಥನೆಯೂ, **ನಾರಾಯಣಾಯ** ಎಂಬುದರಿಂದ ಇಷ್ಟಪ್ರಾರ್ಥನೆಯೂ ಸಹ ಎರಡೂ ಸಮಂಜಸವೇ ಎಂದು ಮುಂದೆ ಸ್ಥಾಪಿಸು

**ಇಪ್ಪಡಿ ಅನಿಷ್ಟ ನಿವೃತ್ತಿಯೈ ಪ್ರಾರ್ಥಿತ್ತಾಲ್ ಇಷ್ಟಪ್ರಾಪ್ತಿಯೈಯಪೇಕ್ಷಿಕ್ಕವೇಣುಮೋ ? (೧)"ಸಂಪದ್ಯಾವಿರ್ಭಾವಸ್ಸ್ವೇನಶಬ್ದಾತ್" ಎನ್ರುಮ್,**

---

ತ್ತಾರೆ—ಮೊದಲು ಪೂರ್ವಪಕ್ಷವನ್ನು ಉಪಪಾದಿಸಿ ಸಿದ್ಧಾಂತವನ್ನು ಹೇಳುತ್ತಾರೆ.

ಪೂರ್ವಪಕ್ಷವೇನೆಂದರೆ—ಹೀಗೆ ಅನಿಷ್ಟ ನಿವೃತ್ತಿಯ ಪ್ರಾರ್ಥನೆಯನ್ನೂ, ಇಷ್ಟಪ್ರಾಪ್ತಿಯ ಪ್ರಾರ್ಥನೆಯನ್ನೂ ಮೂಲಮಂತ್ರದ ಎರಡನೆಯ ಮೂರನೆಯ ಪದಗಳು ಬೋಧಿಸುತ್ತವೆಂಬ ಯೋಜನೆಯು ಸರಿಯಲ್ಲವು; ಏಕೆಂದರೆ ಅನಿಷ್ಟ ನಿವೃತ್ತಿಯೇ ಇಷ್ಟಪ್ರಾಪ್ತಿಯು ಎಂದು ಪ್ರಮಾಣಗಳು ಬೋಧಿಸುತ್ತವಲ್ಲಾ ಎಂದು ಎರಡು ಪ್ರಮಾಣಗಳನ್ನು ಉದಾಹರಿಸುತ್ತಾರೆ. —(೧) "**ಸಂಪದ್ಯಾವಿರ್ಭಾವಸ್ಸ್ವೇನಶಬ್ದಾತ್**" ಜೀವಾತ್ಮನು ಮುಕ್ತದಶೆಯಲ್ಲಿ ಗುಣಾಷ್ಟಕಗಳಿಂದ ವಿರಾಜಿಸೋಣವು, ಯಾರಿಂದಲಾದರೂ ಸಾಧಿಸಲ್ಪಟ್ಟಿತೇ? ಇಲ್ಲವೇ ತಿರೋಹಿತತ್ವಕ್ಕೆ ಕಾರಣವು ತೊಲಗಿದುದರಿಂದ ಮೊದಲು ಇದ್ದುದೇ ಆವಿರ್ಭವಿಸಿ ಸ್ವಯಂ ಪ್ರಕಾಶವಾಗಿ ಪ್ರಕಾಶಿಸುತ್ತದೆಯೇ ಎಂಬ ಸಂದೇಹದಲ್ಲಿ ಈ ಎರಡನೆಯ ವಿಕಲ್ಪವೇ ವಾಸ್ತವನಾದುದೆಂದೇ ಈ ಸೂತ್ರವು ಬೋಧಿಸುತ್ತದೆ: ಮುಂದಿನ ಎರಡು ಸೂತ್ರಗಳು ಇದನ್ನೇ ಸಮರ್ಥಿಸಿ ಹೇಳುತ್ತವೆ. ಈ ವಿಷಯವನ್ನು ಬೋಧಿಸುವ ಶ್ರುತಿವಾಕ್ಯವು ಯಾವುದೆಂದರೆ "**ಏವ ಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾ ತ್ಸಮುತ್ಥಾಯ ಪರಂಜ್ಯೋತಿ ರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ**" ಹೀಗೆ ಈ ಜೀವಾತ್ಮನು ಈ ಸ್ಥೂಲಶರೀರವನ್ನೂ ಸೂಕ್ಷ್ಮಶರೀರವನ್ನೂ ಕಳೆದುಕೊಂಡು ಆದರಿಂದ ಬಿಡುಗಡೆಯನ್ನು ಹೊಂದಿ, ಪರವಾಸುದೇವನ ಸಾಯುಜ್ಯವನ್ನು ಹೊಂದಿ ತನಗೆ ಮೊದಲೇ ಸಿದ್ಧವಾಗಿದ್ದ, ನೈಜವಾದ ಸ್ವರೂಪವನ್ನು ತಾಳುವನು" ಎಂಬುದು ಈ ಶ್ರುತ್ಯರ್ಥವು. ಆದುದರಿಂದ ಈ ಸೂತ್ರಾರ್ಥವೇನೆಂದರೆ—**ಸಂಪದ್ಯ**-ಸ್ಥೂಲ ಸೂಕ್ಷ್ಮ ಶರೀರ ವಿಯೋಗಾನಂತರ ಪರಬ್ರಹ್ಮನೊಂದಿಗೆ ಸಂಪತ್ತಿ ಎಂದರೆ ಸಾಯುಜ್ಯ ಉಂಟಾಗಿ, ಆವಿರ್ಭಾವಃ-ತನಗೆ ನೈಜವಾದ ಸ್ವರೂಪದ ಪ್ರಕಾಶವು ಉಂಟಾಗುತ್ತದೆ. ಹೊಸದಾಗಿ ಉತ್ಪತ್ತಿಯಾಗುವದಿಲ್ಲವೋ? ಎಂದರೆ ಇಲ್ಲವು; ಏಕೆಂದರೆ "**ಸ್ವೇನ**" **ಶಬ್ದಾತ್** ಶ್ರುತಿಯಲ್ಲಿ "ಸ್ವೇನ" ಎಂಬ ಶಬ್ದವಿರುವದರಿಂದ; ಸ್ವೇನರೂಪೇಣಾಭಿನಿಷ್ಪದ್ಯತೇ ಮೊದಲಿದ್ದ ಗುಣಾಷ್ಟಕಗಳುಳ್ಳ ಸ್ವರೂಪದಿಂದಲೇ ವಿರಾಜಿಸುತ್ತಾನೆ; ತನ್ನ ನೈಜವಾದ ಸ್ವರೂಪವೇ ವ್ಯಕ್ತಪಡುತ್ತದೆ ಎಂಬ ತಾತ್ಪರ್ಯವು ತೋರಿಬರುವದರಿಂದ. ಭಗವತ್ಸಂಕಲ್ಪವು ಕಾರಣವಲ್ಲವೋ ಎಂದರೆ ಹೌದು, ಮೊದಲಿದ್ದುದರ ಅಭಿವ್ಯಕ್ತಿಗೆ ಕಾರಣವು; ಹೊಸದಾಗಿ ಉತ್ಪತ್ತಿಯನ್ನು ಹೊಂದಲಿಲ್ಲವೆಂಬ ತಾತ್ಪರ್ಯವು." **ಎನ್ರುಮ್** - ಎಂಬದಾಗಿಯೂ, (೨) **ಮಣೇಃ - ರತ್ನಕ್ಕೆ,**

---

(೧) ಶಾ. ಸೂ. ೪. ೪. ೧. (೨) ವಿ. ತ.

(೨) "ಯಥಾನಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾನ್ಮಣೇಃ । ದೋಷಪ್ರಹಾಣಾನ್ನಜ್ಞಾನ ಮಾತ್ಮನಃ ಕ್ರಿಯತೇ ತಥಾ।ಯಥೋದಪಾನಕರಣಾತ್ ಕ್ರಿಯತೇ ನ ಜಲಾಂಬರಮ್ । ಸದೇವ ನೀಯತೇ ವ್ಯಕ್ತಿಂ ಅಸತಸ್ಸಂಭವಃ ಕುತಃ । ತಥಾ ಹೇಯಗುಣಧ್ವಂಸಾತ್ ।ಅವಬೋಧಾದಯೋ ಗುಣಾಃ

---

ಮಲಪ್ರಕ್ಷಾಳನಾತ್ - ಅಂಟಿಕೊಂಡಿರುವ ಮಣ್ಣು ಕೊಳೆ ಮೊದಲಾದ ಮಲವನ್ನು ತೊಳೆಯುವದರಿಂದ, ಜ್ಯೋತ್ಸ್ನಾ - ಕಾಂತಿಯು, ಯಥಾ - ಹೇಗೆ, ನಕ್ರಿಯತೇ - ಹೊಸದಾಗಿ ಉಂಟಾಗುವದಿಲ್ಲವೋ, ಎಂದರೆ ಮೊದಲು ಅದರಲ್ಲೇ ಇದ್ದ ಕಾನ್ತಿಯು ಹೇಗೆ ಪ್ರಕಾಶಿಸುತ್ತದೋ, ತಥಾ - ಹಾಗೆಯೇ ಆತ್ಮನಃ – ಜೀವಾತ್ಮನ, ಜ್ಞಾನಮ್ - ಜ್ಞಾನವೂ ಸಹ, ದೋಷಪ್ರಹಾಣಾತ್ - ಪ್ರಕೃತಿ ಸಂಬಂಧ ತನ್ಮೂಲಕ ಉಂಟಾದ ಅಜ್ಞಾನ, ಕರ್ಮವಾಸನಾದಿ ದೋಷಗಳು ಕಳೆಯುವದರಿಂದ, ನಕ್ರಿಯತೇ - ಹೊಸದಾಗಿ ಉಂಟಾಗುವದಿಲ್ಲವು; ಎಂದರೆ ಮೇಲೆ ಹೇಳಿದ ದೋಷಗಳಿಂದ ನಿವೃತ್ತಿಯುಂಟಾಗಿ ಮೊದಲು ತಿರೋಹಿತವಾದ ಜ್ಞಾನ ಸ್ವರೂಪವು ಈಗ ನೈಜತೇಜಸ್ಸಾಗಿ ಪ್ರಕಾಶಿಸುತ್ತದೇ ವಿನಾ ಹೊಸದಾಗಿ ಯಾವುದೂ ಉತ್ಪತ್ತಿಯನ್ನು ಹೊಂದಲಿಲ್ಲವೆಂಬ ಭಾವವು. ರತ್ನವು ಕೆಸರಿನಲ್ಲಿ ಬಿದ್ದರೆ ಅದರ ಕಾನ್ತಿಯು ಮಾಲಿನ್ಯವನ್ನು ಹೊಂದುತ್ತದೆ; ಅದನ್ನೇ ನೀರಿನಿಂದ ಚೆನ್ನಾಗಿ ತೊಳೆದರೆ, ಹಿಂದೆ ಇದ್ದ ದೀಪ್ತಿಯಿಂದ ಹೇಗೆ ಪ್ರಕಾಶಿಸುತ್ತದೋ ಹಾಗೆ ಎಂದು ಎರಡು ದೃಷ್ಟಾಂತದಿಂದ ಉಪದೇಶಿಸಲ್ಪಟ್ಟಿತು. ಇದನ್ನು ಇನ್ನೊಂದು ದೃಷ್ಟಾಂತದಿಂದಲೂ ಉಪದೇಶಿಸುತ್ತಾರೆ. ಅಗಲಿ ಭಾವಿಯನ್ನು ಅಗೆದರೆ ಮೊದಲು ಇಲ್ಲದೆ ಇದ್ದ ನೀರು ಅಲ್ಲಿ ಹೇಗೆಉತ್ಪತ್ತಿಯಾಗುತ್ತದೆಯೋ ಹಾಗಲ್ಲವೋ ಎಂದರೆ ಆಸಂದರ್ಭದಲ್ಲೂ ಹೊಸದಾಗಿ ಯಾವುದೂ ಉತ್ಪನ್ನವಾಗುವುದಿಲ್ಲವು ; ಮೊದಲು ಅಲ್ಲಿ ಇದ್ದ ನೀರೇ, ಮಣ್ಣು ಹೋದುದರಿಂದ ವ್ಯಕ್ತವಾಗಿ ತೋರುತ್ತದೆಂದು ತಿಳಿಸುತ್ತಾರೆ.—ಉದಪಾನಕರಣಾತ್ - ಕೊಳ, ಭಾವಿಗಳನ್ನು ತೋಡುವದರಿಂದ, ಜಲಾಂಬರಂ-ಜಲವನ್ನೂ ಮತ್ತು ಆಕಾಶವನ್ನೂ, ಯಥಾ-ಹೇಗೆ, ನಕ್ರಿಯತೇ - ಇಲ್ಲದಿದ್ದುದು ಹೊಸದಾಗಿ ಮಾಡಲ್ಪಡುವದಿಲ್ಲವೋ ; ಮುಂದೆ ಸತ್ಕಾರ್ಯವಾದ ಸಿದ್ಧಾನ್ತವು ಹೇಳಲ್ಪಡುತ್ತದೆ ; ಸದೇವ – ಯಾವಾಗಲೂ ಇರುವದೇನೇ, ವ್ಯಕ್ತಿಂ - ಸ್ಫುಟವಾಗಿ ತೋರುವ ಅವಸ್ಥೆಯನ್ನು ನೀಯತೇ - ಹೊಂದುತ್ತದೆ; ಮೊದಲು ಇದ್ದುದೇ ಈಗ ವ್ಯಕ್ತವಾಗಿ ತೋರಿಬರುತ್ತದೆ; ಏಕೆಂದರೆ ಅಸತಃ - ಇಲ್ಲದುದಕ್ಕೆ, ಸಂಭವಃ - ಉತ್ಪತ್ತಿ ಎಂಬುದು ; ಕುತಃ - ಎಲ್ಲಿಯದು? ಇಲ್ಲದಿರುವದು ಹೊಸದಾಗಿ ಉತ್ಪತ್ತಿಯನ್ನು ಹೊಂದುವದಿಲ್ಲವು ; ಹಾಗೆಯೇ ಇರುವದು ಇಲ್ಲದೇ ಹೋಗುವದಿಲ್ಲವು. ಅವಸ್ಥಾ ಭೇದಗಳು ಮಾತ್ರ ಇರುತ್ತವೆ. ತಥಾ - ಹಾಗೆಯೇ, ಹೇಯಗುಣಧ್ವಂಸಾತ್-ಶರೀರದ ಸಾತ್ವಿಕ ರಾಜಸ ತಾಮಸಗಳಾದ

**ಪ್ರಕಾಶ್ಯನ್ತೇ ನಜನ್ಯನ್ತೇ? ನಿತ್ಯಾ ಏವಾತ್ಮನೋ ಹಿ ತೇ" ಎನ್ರುಮ್ ಶೊಲ್ಲುಗಿರ ಪಡಿಯೇ ಇಷ್ಟಪ್ರಾಪ್ತಿತಾನೇ ವಾರಾದೋ? ವೆನ್ನಿಲ್,**

---

ಹೇಯಗುಣಗಳು ನಾಶವಾಗುವದರಿಂದ, **ಅವಬೋಧಾದಯೋ ಗುಣಾಃ** - ಜ್ಞಾನವೇ ಮೊದಲಾದ ಗುಣಗಳು, ಇಲ್ಲಿ ಆದಿ ಪದದಿಂದ ಗುಣಾಷ್ಟಕಗಳಲ್ಲಿ ಮಿಕ್ಕವು ಹೇಳಲ್ಪಟ್ಟವು; **ಪ್ರಕಾಶ್ಯನ್ತೇ** - ಪ್ರಕಾಶವನ್ನು ಹೊಂದುತ್ತವೆ; **ನಜನ್ಯನ್ತೇ**-ಹೊಸದಾಗಿ ಹುಟ್ಟುವದಿಲ್ಲವು; ಹೀಗೆ ಹೇಳಲು ಕಾರಣವೇನೆಂದರೆ, **ಹಿ** - ಯಾವ ಕಾರಣದಿಂದ ಎಂದರೆ, **ಆತ್ಮನಃ** - ಜೀವಾತ್ಮ ಸ್ವರೂಪದ, **ತೇ** - ಆ ಗುಣಗಳು, **ನಿತ್ಯಾ ಏವ** - ನಿತ್ಯವಾದವುಗಳೇ", **ಎನ್ರುವ್** - ಎಂಬದಾಗಿ, **ಶೊಲ್ಲುಗಿರಪಡಿಯೇ**-ಹೇಳಿರುವ ಹಾಗೆ, **ಇಷ್ಟಪ್ರಾಪ್ತಿ ತಾನೇ ವಾರಾದೋ** - ಅನಿಷ್ಟ ನಿವೃತ್ತಿ ಯಾವಾಗ ಆಯಿತೋ ಆಗ ಸ್ವತಸ್ಸಿದ್ಧವಾಗಿ ಇಷ್ಟಪ್ರಾಪ್ತಿಯೂ ಉಂಟಾಗುವದಿಲ್ಲವೋ? **"ನಮಃ"** ಎಂಬುದರಿಂದ ಯಾವಾಗ ಅನಿಷ್ಟ ನಿವೃತ್ತಿಯು ಪ್ರಾರ್ಥಿಸಲ್ಪಟ್ಟಿತೋ, ಆಗ **ನಾರಾಯಣಾಯ** ಎಂಬ ಪ್ರಾರ್ಥನೆಯಲ್ಲಿ ತೋರಿಬರುವ ಇಷ್ಟಪ್ರಾಪ್ತಿಯೂ ಪ್ರಾರ್ಥಿಸಲ್ಪಟ್ಟ ಹಾಗೆ ಆಗುವದರಿಂದ, ಈ ಮೂರನೆಯ ವಾಕ್ಯವು ನಿರರ್ಥಕವಲ್ಲವೋ? ಎಂಬುದು **ಪೂರ್ವಪಕ್ಷವು, ಎನ್ನಿಲ್** - ಹೀಗೆ ಆಕ್ಷೇಪ ತಂದರೆ, ಸಮಾಧಾನವನ್ನು ಒಂದು ತಮ್ಮ ಕಾರಿಕೆಯ ಮೂಲಕವಾಗಿ ಅನುಗ್ರಹಿಸುತ್ತಾರೆ; ಹೀಗೆ ಆಕ್ಷೇಪಗಳಿಗೆ ಸಿದ್ಧಾನ್ತಿಸಿ ಸಮಾಧಾನವನ್ನು ಹೇಳುವ ಸಂದರ್ಭಗಳಲ್ಲೆಲ್ಲಾ ತಮ್ಮ ಕಾರಿಕೆಗಳನ್ನು ಅನುಗ್ರಹಿಸುತ್ತಾರೆ.

ಈಗ ಆಕ್ಷೇಪವೇನೆಂಬುದನ್ನು ಚನ್ನಾಗಿ ತಿಳಿಯತಕ್ಕದ್ದು ಆವಶ್ಯಕವು. ಹೀಗೆ **ನಮಃ** ಎಂಬುದರಿಂದ ಅನಿಷ್ಟ ನಿವೃತ್ತಿಯ ಪ್ರಾರ್ಥನೆಯನ್ನೂ **ನಾರಾಯಣಾಯ** ಎಂಬುದರಿಂದ ಇಷ್ಟಪ್ರಾಪ್ತಿಯನ್ನೂ ಪ್ರಾರ್ಥಿಸುವ ಹಾಗೆ ಮಾಡಿದ ಯೋಜನೆಯಲ್ಲಿ ಎರಡು ಪ್ರಾರ್ಥನೆಗಳು ಏಕೆ? ಅನಿಷ್ಟ ನಿವೃತ್ತಿಯೇ ಇಷ್ಟಪ್ರಾಪ್ತಿಯಲ್ಲವೋ ಎಂದಾಕ್ಷೇಪಿಸಿ ಆದರ ಸಮರ್ಥನೆಗಾಗಿ **"ಸಂಪದ್ಯಾ ವಿರ್ಭಾವಸ್ಸ್ವೇನಶಬ್ದಾತ್"** ಎಂಬ ವ್ಯಾಸಸೂತ್ರವನ್ನೂ ಅದರ ಉಪಬ್ರಹ್ಮಣರೂಪವಾದ **"ಯಥಾ ನಕ್ರಿಯತೇ"** ಎಂಬ ವಿಷ್ಣುಧರ್ಮದ ಪ್ರಮಾಣವನ್ನೂ ಉದಾಹರಿಸಿದರು. ಎರಡು ಪ್ರಾರ್ಥನೆಯನ್ನೂ ಮಾಡುವದರಲ್ಲೇನೂ ವಿರೋಧವಿಲ್ಲವೆಂದು ಈ ಕಾರಿಕೆಯನ್ನು ಸದೃಷ್ಟಾನ್ತವಾಗಿ ಉಪಪಾದಿಸುತ್ತಾರೆ.— **ಪುತ್ರಃ** - ಮಗನು, **ಸ್ವತಃ** - ಪಿತಾವಿಗೆ ತಾನು ಪುತ್ರನಾದುದರಿಂದಲೇ ಸ್ವತಸ್ಸಿದ್ಧವಾದ, **ಸ್ವಾರ್ಹಂ** – ತನಗೆ ಉಚಿತವಾದ, **ಭಾಗಂ** ಪುತ್ರನು ಸಾಪರಾಧಿಯು, ಈತನಿಗೆ ಕೊಡತಕ್ಕದ್ದು ಯೋಗ್ಯವಲ್ಲವೆಂದು ಆತನಿಗಾಗಿ ಇಟ್ಟಿದ್ದ, ದಾಯಧನವನ್ನು, **ಪಿತುಃ** - ತನ್ನ ತಂದೆಯ ದೆಶೆಯಿಂದ, **ಯಥಾ** - ಹೇಗೆ, **ಅಪೇಕ್ಷತೇ** . ಲೋಕವ್ಯವಹಾರ ರೀತ್ಯಾ ನ್ಯಾಯವಾಗಿ ಅಪೇಕ್ಷಿಸುವನೋ, **ತಥಾ** - ಹಾಗೆಯೇ

**ಕಾ. ಸ್ವತಸ್ಸ್ವರ್ಹಂ ಯಥಾಭಾಗಂ ಪುತ್ರಃ ಪಿತುರಪೇಕ್ಷತೇ ।**
**ಸಾಪರಾಧಸ್ತಥಾ ದಾಸಃ ಕೈಙ್ಕರ್ಯಂ ಪರಮಾತ್ಮನಃ ॥**

**೯೫ ಅಪರಾಧತ್ತಾಲೇ ಸ್ವತಃ ಪ್ರಾಪ್ತತ್ತೈ ಇಳನ್ದು ಕಿಡಕ್ಕಿರ**

---

**ದಾಸಃ** - ದಾಸನಾದ, ಇದುವರಿವಿಗೂ ಸಾಪರಾಧಿಯಾದ ಈ ಚೇತನನೂ, **ಪರಮಾತ್ಮನಃ** - ಲೋಕಪಿತಾವಾಗಿ ತನ್ನ ಸ್ವಾಮಿಯಾದ ಪರಮ ಪುರುಷನಿಂದ, **ಕೈಙ್ಕರ್ಯಂ** - ಇದುವರಿಗೂ ಅನರ್ಹವೆಂದು ಭಾವಿಸಲ್ಪಟ್ಟ, **ಕೈಙ್ಕರ್ಯಂ** - ನಿತ್ಯ ಕೈಙ್ಕರ್ಯವನ್ನು ಮಾಡುವ ಸಂಪತ್ತನ್ನು, **ಅಪೇಕ್ಷತೇ** - ಅಪೇಕ್ಷಿಸುತ್ತಾನೆ; ಹಾಗೆ ಅಪೇಕ್ಷಿಸುವದೂ ನ್ಯಾಯವೇ ಎಂಬ ಭಾವವು. ಈ ಹೇಯವಾದ ಶರೀರ ಪ್ರಾಪ್ತಿಯು ಬೇಡವೆಂದು ಅನಿಷ್ಟನಿವೃತ್ತಿಯನ್ನು ಪ್ರಾರ್ಥಿಸುವ ವೇಳೆಯಲ್ಲಿ ನಿತ್ಯ ಕೈಙ್ಕರ್ಯರೂಪ ಇಷ್ಟಪ್ರಾಪ್ತಿಯನ್ನು ಅಪೇಕ್ಷಿಸುವದರಲ್ಲೇನೂ ವಿರೋಧವಿಲ್ಲವೆಂಬ ಭಾವವು. ಆದುದರಿಂದಲೇ ಶ್ರುತಿಯೂ ಈ ಎರಡನ್ನೂ ಮನಸ್ಸಿನಲ್ಲಿಟ್ಟೇ **ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ** ಎಂದೂ, ಹಾಗೆಯೇ ಸ್ಮೃತಿಯೂ **ತತ್ಪ್ರಸಾದಾತ್ ಪರಾಂಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್** ಎಂದೂ ಹೇಳಿತು. ಈ ಸ್ಮೃತಿಯ ವ್ಯಾಖ್ಯಾನದಲ್ಲಿ ಶ್ರೀ ಯತಿವರ್ಯರು "ತತ್ಪ್ರಸಾದಾತ್ ಪರಾಂ **ಶಾನ್ತಿಂ - ಸರ್ವಕರ್ಮಬಂಧೋಪಶಮಂ, ಶಾಶ್ವತಂಚ ಸ್ಥಾನಂ ಪ್ರಾಪ್ಸ್ಯಸಿ**" (ಗೀ. ೧೮.೬೨) ಎಂದು ಅನಿಷ್ಟ ನಿವೃತ್ತಿಯನ್ನೂ, ಇಷ್ಟಪ್ರಾಪ್ತಿಯನ್ನೂ ಎರಡನ್ನೂ ಬೋಧಿಸಿರುವದು ಹೇಗೆ ಸಮಂಜಸವೋ, ಹಾಗೆಯೇ ಅಂತಹ ಪ್ರಾರ್ಥನೆಯೂ ಸಹ ಸಮಂಜಸವೇ. ಹಾಗೆಯೇ ಇನ್ನೊಂದು ಕಡೆಯಲ್ಲೂ **ವಿಮುಕ್ತೋ ಮಾಮುಪೈಷ್ಯಸಿ** (ಗೀ. ೯.೨೮) ಎಂದೂ ಹೇಳಲ್ಪಟ್ಟಿರುತ್ತದೆ. ಆದರೆ ಚರಮ ಶ್ಲೋಕದಲ್ಲಿ ಅನಿಷ್ಟ ನಿವೃತ್ತಿಯೊಂದೇ ಹೇಳಿದೆಯಲ್ಲಾ ಎಂದರೆ, ಅರ್ಜುನನು ಅನಿಷ್ಟ ನಿವೃತ್ತಿಯು ಸಾಧ್ಯವೇ ಎಂದು ಅಲ್ಲಿ ಶೋಕಿಸುತ್ತಿದ್ದವನನ್ನು ಕುರಿತು ಹೇಳಿದ ಅಭಯಪ್ರದಾನ ರೂಪ ವಾಕ್ಯವಾದುದರಿಂದ ಅನಿಷ್ಟ ನಿವೃತ್ತಿ ಮಾತ್ರವೇ ಅಲ್ಲಿ ಹೇಳಲ್ಪಟ್ಟಿತು. ಅನಿಷ್ಟ ನಿವೃತ್ತಿಮಾತ್ರವೇ ಪ್ರಾರ್ಥಿಸಲ್ಪಟ್ಟರೆ, ಅದು ಕೈವಲ್ಯವಾಗಿ ಪರಿಣಮಿಸಬಹುದು, ಆದುದರಿಂದ ಇಷ್ಟಪ್ರಾಪ್ತಿಯೂ ಅವಶ್ಯಕವಾಗಿ ಪ್ರಾರ್ಥನೀಯವು; ಇದು ಪರಮಾತ್ಮಸಂಪತ್ತಿ ಮೂಲಕ ಪರಮಾತ್ಮ ಸಙ್ಕಲ್ಪಾನುಸಾರ ಬರುವಂಥಾದ್ದು ಎಂದು ತಿಳಿಯತಕ್ಕದ್ದಾಗಿರುತ್ತದೆ.

ಈ ತಮ್ಮ, ಮೇಲಿನ ಕಾರಿಕೆಯ ದೃಷ್ಟಾನ್ತದಲ್ಲಿ ತೋರಿಬರುವ ಅರ್ಥವನ್ನು ದಾರ್ಷ್ಟಾನ್ತಿಕದಲ್ಲಿ ತಾವೇ ಉಪಪಾದಿಸಿ ಹೇಳುತ್ತಾರೆ—**೯೫ ಅಪರಾಧತ್ತಾಲೇ** - ಚೇತನನಾದ ತಾನು ಮಾಡಿದ ಅಪರಾಧ ಸಹಸ್ರದಿಂದ, **ಸ್ವತಃ ಪ್ರಾಪ್ತತ್ತೈ** - ಅತನಿಗೆ ಪುತ್ರನಾಗಿರುವ ತನಗೆ ಸ್ವತಃ ಬರಬೇಕಾದ ದಾಯ

ವಿರ್ನ ಎನ್ ಕೂರುನ್ನಾನ್ ಪೆರವೇಣುಮ್ ಅದಕ್ಕಾಗ ಎನ್ ಅಪರಾಧತ್ತೈಪ್ಪೊರು ತ್ತರುಳವೇಣುಮೆನ್ರು ಅಪೇಕ್ಷಿಕ್ಕೈಯಿಲ್ ವಿರೋಧಮಿಲ್ಲೈ. ಇತ್ತಾಲ್ ಪ್ರತಿಬಂಧಕ ನಿವೃತ್ತಿಯಿಲ್ ಮಾಣಿಕ್ಕತ್ತಿಲೊಳಿಯುಮ್ (೧) ಇಚ್ಛಾಛತ ಏವ ತವ ವಿಶ್ವಪದಾರ್ಥ ಸತ್ತಾ” ಎನ್ಗಿರಪಡಿಯೇ ನಿಯತ್ತೈಯಾನ ಈಶ್ವ

---

ಧನದ ರೂಪದಲ್ಲಿರುವ, ಕೈಙ್ಕರ್ಯವನ್ನು, ಇಳನ್ದು ಕಿಡಕ್ಕಿರ - ತ್ಯಾಗ ಮಾಡಿದ ಸ್ಥಿತಿಯಲ್ಲಿರುವ, **ಇವರ್ನ** - ಈ ಪ್ರಪನ್ನನು, **ಎನ್ ಕೂರು** - ನನಗೆ ಬರಬೇಕಾದ ಭಾಗವನ್ನು, **ಪೆರವೇಣುಮ್** - ನಾನು ಹೊಂದಬೇಕು, **ಅದ ಕ್ಕಾಗ** - ಅದಕ್ಕಾಗಿ. **ಎನ್ ಅಪರಾಧತ್ತೈ** - ನನ್ನ ಮಹಾಪರಾಧವನ್ನೆಲ್ಲಾ **ಪೊರುತ್ತು** - ಕೃಪಯಾ ಕ್ಷಮಿಸಿ, **ಅರುಳ ವೇಣುಮೆನ್ರು** - ಕೃಪೆಗೈಯ್ಯಬೇಕೆಂದು, **ಅಪೇಕ್ಷಿಕ್ಕೈಯಿಲ್** – ಪ್ರಾರ್ಥನೆಯಲ್ಲಿ, '**ವಿರೋಧಮಿಲ್ಲೈ** - ವಿರೋಧವಿಲ್ಲವು. **ಎನ್ ಅಪರಾಧತ್ತೈ ಪೊರುತ್ತು** – ಎಂಬುದರಿಂದ ಅನಿಷ್ಟನಿವೃತ್ತಿಯು, **ಎನ್ ಕೂರು ಪೆರವೇಣುಮ್** ಎಂಬುದರಿಂದ ಇಷ್ಟಪ್ರಾಪ್ತಿಯು, ಪ್ರಾರ್ಥನೆಗಳೆರಡೂ ಸಮಂಜಸವೆಂದು ಉಪಪಾದಿಸಿ ಹೇಳಿದರು. ಯಾವಾಗ ಇವೆರಡೂ ಪರಮಾತ್ಮ ಸಙ್ಕಲ್ಪಾಧೀನವಾಯಿತೋ, ಆ ಕಾರಣದಿಂದ ಇಷ್ಟಪ್ರಾಪ್ತಿಗಾಗಿಯೂ ಭಗವಂತ ನನ್ನು ಪ್ರಾರ್ಥಿಸುವದು ಯುಕ್ತವೇ ಎಂದು ಹೇಳುತ್ತಾರೆ—

ಮುಂದೆ ಈ ಅನಿಷ್ಟ ನಿವೃತ್ತಿಯೂ, ಇಷ್ಟಪ್ರಾಪ್ತಿಯೂ ಎರಡೂ ಭಗವತ್ಸ ಙ್ಕಲ್ಪಾಧೀನವಾಗಿ ಪ್ರಪನ್ನನ ವಿಷಯದಲ್ಲಿರುವ ಕೃಪಾತಿರೇಕದಿಂದ ಪ್ರಾಪ್ತ ವಾಗುವದರಿಂದಲೂ, ಹಾಗೆ ಎರಡರ ಪ್ರಾರ್ಥನೆಯೂ ಯುಕ್ತವೇ ಎಂದು ಉಪ ಪಾದಿಸುತ್ತಾರೆ.—**ಇತ್ತಾಲ್** – ಇವರಿಂದ ಎಂದರೆ ಮೇಲಿನ ಉಪಪಾದನೆಯಿಂದ, **ಪ್ರತಿಬಂಧಕ ನಿವೃತ್ತಿಯಿಲ್** - ಪ್ರಕೃತಿಸಂಬಂಧಾದಿಗಳಿಗೆ ಕಾರಣವಾದ ಪ್ರತಿ ಬಂಧಕಗಳ ನಿವೃತ್ತಿಯಲ್ಲಿ, **ಮಾಣಿಕ್ಕತ್ತಿಲೊಳಿಯುಮ್** – ಮಾಣಿಕ್ಯದಲ್ಲಿರುವ ಪ್ರಕಾಶವೂ ಸಹ. “ಇಚ್ಛಾಛತಏವ ತವ ವಿಶ್ವಪದಾರ್ಥಸತ್ತಾ” ಎಂದರೆ “ವಿಶ್ವ ದಲ್ಲಿರುವ ಸರ್ವ ಚಿದಚಿತ್ತುಗಳಿಂದ ಸೇರಿರುವ ಸಮಸ್ತ ವಸ್ತುಗಳಿಗೆ ಸ್ವರೂಪ ವೆಲ್ಲಾ ನಿನ್ನ ಸಙ್ಕಲ್ಪಾಧೀನವು” ಎಂದು ಶ್ರೀ ಕೂರತ್ತಾಳ್ವಾರವರು, **ಎನ್ಗಿರ ಪಡಿಯೇ** - ಎಂದು ಅಪ್ಪಣೆ ಕೊಡಿಸಿರುವ ಹಾಗೆ, **ನಿಯತ್ತೈಯಾನ ಈಶ್ವರೇ ಚ್ಛೈಯಾಲ್** – ನಿಯತವಾದ ಸರ್ವೇಶ್ವರ ಸಙ್ಕಲ್ಪದಿಂದ, **ಪರಮ್ಪುಮಾ ಪ್ಪೋಲೇ, ವರುಮಾಪ್ಪೋಲೆ** – ಸಾಣೆ ಹಿಡಿದರೆ ಪ್ರಕಾಶವು ಪ್ರಸರಿಸುವ ಹಾಗೆ, **ಇಙ್ಗುಮ್** – ಈ ಸಂದರ್ಭದಲ್ಲೂ, **ಸ್ವಾಭಾವಿಕಮಾನ** – ಆತ ನಿಗೆ ಸಹಜವಾದ ಎಂದರೆ ಮೊದಲೇ ಸಿದ್ಧವಾದ **ಜ್ಞಾನವಿಕಾಸಾದಿಗಳ್**- ಜ್ಞಾನದ ಪ್ರತಿಬಂಧಕ ನಿವೃತ್ತಿ ಮೂಲಕ ಉಂಟಾದ ವಿಕಾಸವೇ ಮೊದ ಲಾದವುಗಳು ಆದಿಶಬ್ದದಿಂದ ಗುಣಾಷ್ಟಕಗಳಲ್ಲಿನ ಮಿಕ್ಕ ಗುಣಗಳು ಹೇಳಲ್ಪ

**ಚ್ಛೈಯಾಲ್ ಪರಿಮ್ಬುವಾಪ್ಪೋಲೆ ಇವ್ವಗ್ಗಳ್ ಸ್ವಾಭಾವಿಕಮಾನ ಜ್ಞಾನ ವಿಕಾಸಾದಿಗಳ್ ಸಹಜ ಕಾರುಣ್ಯರೂಪೈಯಾನ ಈಶ್ವರೇಚ್ಛೈಯಾಲೇ ವರುಗಿರನ ವೆನ್ರುಮಿಡಮ್ ತೋತ್ತುಗಿರದು.**

---

ಟ್ಟವು, **ಸಹಜ ಕಾರುಣ್ಯರೂಪೈಯಾನ ಈಶ್ವರೇಚ್ಛೈಯಾಲೇ** - ಸಹಜವಾದ ಕಾರುಣ್ಯರೂಪವಾದ ಸರ್ವೇಶ್ವರನ ಸಙ್ಕಲ್ಪದಿಂದ, ಎಂದರೆ ಪರಮ ಕಾರುಣ್ಯ ಪ್ರೇರಿತ ಸಙ್ಕಲ್ಪದಿಂದ, **ವರುಗಿರನ** - ಉಂಟಾಗುತ್ತದೆ, **ಎನ್ರುಮಿಡಮ್** - ಎನ್ನುವ ಸಂದರ್ಭವು, **ತೋತ್ತುಗಿರದು** – ತೋರಿಬರುತ್ತದೆ. ರತ್ನದಲ್ಲಿರುವ ಕಾಂತಿಯು ಅದಕ್ಕುಂಟಾಗಿರುವ ಮಲವನ್ನು ತೊಳೆಯುವದರಿಂದ ವ್ಯಕ್ತವಾದರೂ, ಆವರ ದೀಪ್ತಿಯೂ ಕೂಡ ಸ್ವಾಮಿ ಸಙ್ಕಲ್ಪದಿಂದ ಹೇಗೆ ಉಂಟಾಗಿರುತ್ತದೋ, ಹಾಗೆಯೇ, ಈ ಚೇತನನ ಜ್ಞಾನವೂ ಮತ್ತು ಇತರ ಗುಣಗಳೂ ಸಹ ಬದ್ಧ ದೆಶೆಯಲ್ಲಿ ಮಾಲಿನ್ಯವನ್ನು ಹೊಂದಿದ್ದರೂ, ಪ್ರಕೃತಿ ವಿಯುಕ್ತ ದೆಶೆಯಲ್ಲಿ ಸ್ವತಸ್ಸಿದ್ಧವಾದುವಾಗಿ ವಿಕಸಿತವಾಗಿ ಕಂಗೊಳಿಸಿದರೂ, ಅಂತಹ ಸ್ವಯಂಪ್ರಕಾಶವಾದ ಜ್ಞಾನಾದಿಗಳೂ ಸಹ ಸರ್ವೇಶ್ವರನ ನಿತ್ಯಸಙ್ಕಲ್ಪದಿಂದ ಸಿದ್ಧವಾದವುಗಳೆಂದು ಭಾವಿಸತಕ್ಕದ್ದು; ಹಾಗೆಯೇ ಬದ್ಧದೆಶೆಯಲ್ಲಿ ಪ್ರಾಪ್ತವಾಗಿದ್ದ ಜ್ಞಾನ ತಿರೋಹಿತತ್ವವೂ ಸಹ ಪರಮಾತ್ಮನ ಅನಿತ್ಯಸಙ್ಕಲ್ಪದಿಂದ ಉತ್ಪನ್ನವಾಗಿದ್ದುದರಿಂದ ಮುಕ್ತದೆಶೆಯಲ್ಲಿ ಅದು ಬಿಟ್ಟುಹೋಯಿತು. ಈ ಅಭಿಪ್ರಾಯಗಳನ್ನು ತಿಳಿಸುವದಕ್ಕಾಗಿಯೇ **ನಿಯತ್ತೈಯಾನ ಈಶ್ವರೇಚ್ಛೈಯಾಲ್** ಎಂಬ ಪ್ರಯೋಗವು. ಈ ನಿತ್ಯಾನಿತ್ಯ ಪದಾರ್ಥಸತ್ತೆಯ ವಿಷಯದಲ್ಲಿ ಉಪಪಾದನೆಯನ್ನು ಹಿಂದೆ ಕಾಣಬಹುದು—“**ಅನಿತ್ಯಙ್ಗಳ್ ಅನಿತ್ಯೇಚ್ಛೈಯಾಲೇ ಉತ್ಪನ್ನಙ್ಗಳಾಯುಮ್, ನಿತ್ಯಙ್ಗಳ್ ನಿತ್ಯೇಚ್ಛಾಸಿದ್ಧಙ್ಗಳಾಯುಮಿರುಕ್ಕೈ**” ಎಂದು ಅಲ್ಲಿ ಹೇಳಲ್ಪಟ್ಟಿರುತ್ತದೆ. ೨೬೩ ಳನೆಯ ಪುಟಗಳನ್ನು ನೋಡಿ. **ಸಹಜಕಾರುಣ್ಯರೂಪೈಯಾನ ಈಶ್ವರೇಚ್ಛೈಯು** ಎಂದು ಸ್ವಾಮಿ ಸಙ್ಕಲ್ಪವು ಕಾರುಣ್ಯರೂಪವಾದುದಾದು ಹೇಗೆ? ದುಷ್ಟರನ್ನು ಶಿಕ್ಷಿಸುವ ದಂಡ ಧರತ್ವವನ್ನೂ ಕೂಡ ಕಂಡಿರುವೆವಲ್ಲಾ ಎಂದು ಆಕ್ಷೇಪಿಸಿದರೆ, ಅಂತಹ ಶಿಕ್ಷೆಯೂ ಕೂಡ, ದುರ್ಮಾರ್ಗದಲ್ಲಿ ಪ್ರವರ್ತಿಸುವ ಮಗನನ್ನು ಸನ್ಮಾರ್ಗಕ್ಕೆ ತಿರುಗಿಸಬೇಕೆಂಬ ಕುತೂಹಲದಿಂದ ಮಾಡುವ ತಂದೆಯ ಶಿಕ್ಷೆಯ ಹಾಗೆ, ಸರ್ವೇಶ್ವರನ ಶಿಕ್ಷೆಯೂ ಕೂಡ ಕಾರುಣ್ಯದ ಮಾಹಾತ್ಮ್ಯೆಯೇ. ಕ್ಷತ್ರಬಂಧು, ದ್ರೌಪದಿ, ಕುಚೇಲ, ಜಟಾಯು, ವಿಭೀಷಣಾದಿಗಳ ದುರ್ದಶೆಯೂ ಕರುಣಾಸಾಗರನಿಂದ ಪ್ರಥಮತಃ ಉಂಟಾದರೂ ಅದು ಅವರುಗಳ ಪರಮ ಶ್ರೇಯಸ್ಸಿಗೆ ಹೇತುವಾದುದರಿಂದ. **ಸಹಜ ಕಾರುಣ್ಯರೂಪವಾದುದೇ ಈಶ್ವರೇಚ್ಛೆ** ಎಂದು ಹೇಳಿದರು. ಇದನ್ನೇ ಅವರು **ದಯಾಶತಕ**ದಲ್ಲಿ ಬಹು ಚನ್ನಾಗಿ ಉಪಪಾದಿಸಿರುತ್ತಾರೆ. ವಾಯಸನ ಒಂದು ಕಣ್ಣನ್ನು

## ಅನಿಷ್ಟ ನಿವೃತ್ತೀಷ್ಟ ಪ್ರಾಪ್ತ್ಯೋಃ ಪುನರುಕ್ತಿ ಮಾಶಂಕ್ಯ ಪರಿಹರತಿ

ಆನಾಲುಮ್ ಭಾವಾನ್ತರಾಭಾವಪಕ್ಷತ್ತಿಲ್ ಸರ್ವಾನಿಷ್ಟ ನಿವೃತ್ತಿತಾನೇ ಇಷ್ಟಪ್ರಾಪ್ತಿಯಾಯಿರುಕ್ಕ ತನಿತ್ತು ಚೊನ್ನಾಲ್ ಪುನರುಕ್ತಿವಾರೋದೋ? "ಅವಿದ್ಯಾ ನಿವೃತ್ತಿರೇವ ಮೋಕ್ಷಃ" ಎನ್ನು ಶ್ರೀ ಭಾಷ್ಯಕಾರರ್ ಅರುಳಿ ಚ್ಚೆಯ್‌ದಿಲರೋ? ವೆನ್ನಿಲ್,

---

ಬ್ರಹ್ಮಾಸ್ತ್ರರೂಪ ದರ್ಭದಿಂದ ನಿರಸನ ಮಾಡಿದುದೂ ಆತನ ಹಿತಕ್ಕಾಗಿಯೇ. ಅತನ ಕೋಪವೂ ಕೂಡ ಕರುಣಾ ಪ್ರೇರಿತವಾದುದೇ. ಈ ಲೋಕದಲ್ಲಿ ಕಾಣ ಬರುವ ಹಾಗೆ ದೋಷಾಸೂಯೆಗಳಿಂದ ಪ್ರೇರಿತವಾದುದಲ್ಲವು. ಹೀಗೆ ಅನಿಷ್ಟ ನಿವೃತ್ತಿಯೂ ಇಷ್ಟಪ್ರಾಪ್ತಿಯೂ ಸಹ ಸ್ವಾಮಿಸಙ್ಕಲ್ಪದಿಂದಲೇ ಉಂಟಾಗತಕ್ಕ ದ್ದಾದುದರಿಂದ ಎರಡನ್ನೂ ಪ್ರಾರ್ಥಿಸುವದರಲ್ಲಿ ಏನೊಂದೂ ಅಸಾಮಂಜಸ್ಯ ವಿಲ್ಲವೆಂಬ ಭಾವವು.

**ಆನಾಲುಮ್** - ಆದರೂ ಎಂದರೆ ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿಗಳೆರಡೂ ಈಶ್ವರ ಸಙ್ಕಲ್ಪಾಧೀನವಾಗಿ ಪ್ರಾಪ್ತವಾಗುವದರಿಂದ, ಎರಡರ ಪ್ರಾರ್ಥನೆಯೂ **ನಮಃ ನಾರಾಯಣಾಯ** ಎಂಬುದರಿಂದ ಹೇಳಲ್ಪಟ್ಟಿತೆಂದು ಒಪ್ಪಿದರೂ, ಇದರ ಮೇಲೂ ಇನ್ನೊಂದು ಆಕ್ಷೇಪವಾದ ಪುನರುಕ್ತಿ ದೋಷವು ಪ್ರಾಪ್ತವಾಗುತ್ತದೆಂದು ಅದನ್ನು ಉಪಪಾದಿಸಿ ಹೇಳಿ, ಆ ಪೂರ್ವಪಕ್ಷ ಸಮಾಧಾನಾರ್ಥವಾಗಿ ಒಂದು ಕಾರಿಕೆಯ ಮೂಲಕ ಸಿದ್ಧಾನ್ತಾರ್ಥವನ್ನು ತಿಳಿಯಪಡಿಸಿ, ಆ ಶ್ಲೋಕಾರ್ಥವನ್ನೇ ಮುಂದೆ ವ್ಯಕ್ತಪಡಿಸುತ್ತಾರೆ:—

**ಭಾವಾನ್ತರಾಭಾವಪಕ್ಷತ್ತಿಲ್** - ನಮ್ಮ ಸಿದ್ಧಾನ್ತ ರೀತ್ಯಾ ಅಭಾವ ವೆಂಬುದೂ ಭಾವಾನ್ತರವಾದುದರಿಂದ, **ಸರ್ವಾನಿಷ್ಟ ನಿವೃತ್ತಿತಾನೇ** - ಸಮಸ್ತ ವಾದ ಅನಿಷ್ಟ ನಿವೃತ್ತಿಯೇ, ಇಷ್ಟಪ್ರಾಪ್ತಿಯಾಗಿರುವಾಗ, **ತನಿತ್ತುಚ್ಚೊನ್ನಾಲ್** - ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿಯೆಂದು ಬೇರೆ ಬೇರೆಯಾಗಿ ಹೇಳಿದರೆ, **ಪುನರುಕ್ತಿ ವಾರಾದೋ** - ಪುನರುಕ್ತಿದೋಷವುಂಟಾಗಲಿಲ್ಲವೋ? ಮುಂದೆ ಈ ಆಕ್ಷೇಪಕ್ಕೆ ಸಾಧಕವಾಗಿ ಶ್ರೀ ಯತಿವರ್ಯರು ಶ್ರೀ ಭಾಷ್ಯದ (೧. ೧. ೧. ಸೂತ್ರದಲ್ಲಿ) ಪ್ರಯೋ ಗಿಸಿರುವ ವಾಕ್ಯವು ಉದಾಹರಿಸಲ್ಪಡುತ್ತದೆ.— **"ಅವಿದ್ಯಾ ನಿವೃತ್ತಿರೇವ ಮೋಕ್ಷಃ"** ಅವಿದ್ಯಾ ನಿವೃತ್ತಿರೂಪವಾದ ಅಜ್ಞಾನದ ಅಭಾವವೇ **ಮೋಕ್ಷಃ** - ಮೋಕ್ಷವು", **ಎನ್ನು** - ಎಂಬದಾಗಿ, ಶ್ರೀ ಭಾಷ್ಯಕಾರರವರು, **ಅರಳಿಚ್ಚೆಯ್ ದಿಲರೋ** - ಕೃಪೆಯಾ ಅಪ್ಪಣೆ ಕೊಡಿಸಿದರಲ್ಲವೇ? ಅವಿದ್ಯಾರೂಪವಾದ ಅನಿಷ್ಟ ನಿವೃತ್ತಿಯೇ, ಇಷ್ಟಪ್ರಾಪ್ತಿಯಾದ ಮೋಕ್ಷವೆಂದು ಪ್ರಥಮ ಸೂತ್ರದ ಲಘುಪೂರ್ವ ಪಕ್ಷ ಉಪನ್ಯಾಸದಲ್ಲಿ ಎರಡು ಒಂದೇ ಎಂದು ಹೇಳಿದರಲ್ಲವೇ, **ಎನ್ನಿಲ್** - ಎಂದು ಪೂರ್ವಪಕ್ಷ ತಂದರೆ, ಮುಂದೆ ಸಮಾಧಾನವನ್ನು ಹೇಳುತ್ತಾರೆ. ನಮ್ಮ ಸಿದ್ಧಾನ್ತ

ಕಾ· ಏಕಮೇವ ಸ್ವರೂಪೇಣ ಪರೇಣಚ ನಿರೂಪಿತಮ್ ।
ಇಷ್ಟಪ್ರಾಪ್ತಿ ರನಿಷ್ಟಸ್ಯ ನಿವೃತ್ತಿಶ್ಚೇತಿ ಕೀರ್ತ್ಯತೇ ॥ ೮೭
ಒನ್ರು ತನ್ನೈಯೇ ಸ್ವರೂಪತ್ತಾಲುಮ್ ಪ್ರತಿಯೋಗಿಯಾಲುಮ್, ನಿರೂಪಿತ್ತು ಪ್ರಯೋಜನ ವಿಶೇಷಾಭಿ ಸಂಧಿಯಾಲೇ ಪಿರಿಯಚ್ಚೊಲ್ಲಕ್ಕಡವ

---

ರೀತ್ಯಾ ಅಭಾವವೆಂಬ ಏಳನೆಯ ಪದಾರ್ಥವಿಲ್ಲವು. ಅಭಾವವೆಂಥರೆ ಭಾವಾಂತರವು ಇಲ್ಲಿ ಘಟಾಭಾವಃ ಎಂದು ಹೇಳಿದರೆ, ಪಟವಿದ್ದರೆ ಪಟೋಸ್ತಿ ಎಂದಾದರೂ ಭೂತಲಮಸ್ತಿ ಎಂದಾದರೂ ಹೇಳಿದಂತಾಗುವದು. ಆದುದರಿಂದ ಅನಿಷ್ಟದ ಅಭಾವವು ಎಂದರೆ, ಇಷ್ಟದ ಭಾವವೇ ಆಯಿತು. ಹಾಗೆಯೇ ಶ್ರೀ ಯತೀಂದ್ರರ ಸಿದ್ಧಾನ್ತವಾಗಿ, ಅವರೇ ಅವಿದ್ಯಾ ನಿವೃತ್ತಿಯಾದ ಭಾವವೇ, ಇಷ್ಟ ಪ್ರಾಪ್ತಿಯ ಎಂದರೆ ಮೋಕ್ಷದ ಭಾವವಾಯಿತು. ಹೀಗೆ ಎರಡೂ ಒಂದಾಗಿ ಪುನರುಕ್ತಿ ದೋಷವು ಬರಲಿಲ್ಲವೇ ಎಂಬುದು ಪೂರ್ವಪಕ್ಷವು. ಇದಕ್ಕೆ ಸಮಾಧಾನವನ್ನು ಒಂದು ಕಾರಿಕೆಯ ಮೂಲಕ ತಿಳಿಸುತ್ತಾರೆ.—

ಈ ಶ್ಲೋಕಾರ್ಥವೇನೆಂದರೆ—**ಏಕಮೇವ** - ಒಂಡೇ ವಸ್ತುವೇ, **ಸ್ವರೂಪೇಣ ನಿರೂಪಿತಂ** – ಅದರ ಸ್ವರೂಪ ಮೂಲಕವಾಗಿ ಇಂತಾದ್ದೆಂದು ಹೇಳಲ್ಪಟ್ಟಿದುದೇ, **ಪರೇಣಚ** – ಅದಕ್ಕೆ ಪ್ರತಿದ್ವಂದ್ವಿ ರೂಪದಲ್ಲೂ, **ನಿರೂಪಿತಂ** - ನಿರೂಪಿಸಲ್ಪಟ್ಟದಾಗಿ, ಇಷ್ಟಪ್ರಾಪ್ತಿ ಎಂದೂ, **ಅನಿಷ್ಟಸ್ಯ ನಿವೃತ್ತಿಶ್ಚೇತಿ** - ಅನಿಷ್ಟ ನಿವೃತ್ತಿ ಎಂದೂ ಸಹ **ಕೀರ್ತ್ಯತೇ** - ಹೇಳಲ್ಪಡುತ್ತದೆ. ಇದು ಘಟಃ ಎಂದು ಸ್ವರೂಪತಃ ಹೇಳಿದ ಭಾವವೇ **ಪಟಾಭಾವಃ**ಎಂದು **ಪ್ರತಿಯೋಗಿತ್ವೇನ** ಹೇಳಲ್ಪಟ್ಟಿದುದರಿಂದ ಎರಡೂ ಒಂದೇ ತಾತ್ಪರ್ಯವುಳ್ಳವಾದರೂ, ಅರ್ಥದಲ್ಲಿ ಭೇದ ವಿರುವದರಿಂದ ಪರ್ಯಾಯ ಪದಗಳಾಗುವದಿಲ್ಲವು; ಒಂದೇ ಫಲಕ್ಕಾಗಿ ಪ್ರಕಾರಾಂತರವಾಗಿ ಪ್ರಾರ್ಥನೆ ಮಾಡುವದರಲ್ಲೇನೂ ಪುನರುಕ್ತಿ ದೋಷವಿರುವದಿಲ್ಲ ವೆಂಬುದು ಮುಖ್ಯ ಭಾವವು.

ಮುಂದೆ ಈ ಕಾರಿಕೆಯಲ್ಲಿ ಹೇಳಿದ ಸಮಾಧಾನವೇ ಕೆಲವು ವಿಧದಲ್ಲಿ ಪರಿಶೀಲಿಸಿದರೆ ವ್ಯಕ್ತಪಡುತ್ತದೆಂದು ಉಪಪಾದಿಸಿ ಹೇಳುತ್ತಾರೆ—ಹೇಗೆಂದರೆ **ಒನ್ರು ತನ್ನೈಯೈ** - ಒಂದನ್ನೇ, **ಸ್ವರೂಪತ್ತಾಲುಮ್** - ಇಷ್ಟಪ್ರಾಪ್ತಿ ರೂಪ ಸ್ವರೂಪ ರೂಪವಾಗಿಯೂ. **ಪ್ರತಿಯೋಗಿಯಾಲುಮ್** - ಆದಕ್ಕೆ ವಿರುದ್ಧವಾದ, ಅನಿಷ್ಟದ ನಿವೃತ್ತಿರೂಪವಾಗಿಯೂ, **ನಿರೂಪಿತ್ತು** - ಪ್ರದರ್ಶಿಸುವದರ ಮೂಲಕ **ಪ್ರಯೋಜನ ವಿಶೇಷಾಭಿಸಂಧಿಯಾಲೇ** - ಹಾಗೆ ಎರಡು ವಿಧವಾಗಿ ಹೇಳುವದರಲ್ಲಿ ಪ್ರಯೋಜನ ವಿಶೇಷ ಉಂಟೆಂಬ ಅಭಿಪ್ರಾಯದಿಂದ, **ಪಿರಿಯಚೊಲ್ಲಕ್ಕಡವದಾಯಿರುಕ್ಕುಮ್** - ಬೇರೇ ಎರಡು ವಿಧ ಪ್ರಾರ್ಥನೆಯ ಹಾಗೆ ಹೇಳಿದಂತೆ ತೋರುತ್ತದೆ. ಅಂತಹ ಪ್ರಯೋಜನ ವಿಶೇಷಾಭಿ ಸಂಧಿಯು ಯಾವುದು ಎಂಬುದನ್ನು

**ಚಾಯಿರುಕ್ಕುಮ್. ಸಂಸಾರ ದಶೈಯಿಲ್ ಓರು ಪ್ರತಿಕೂಲ ನಿವೃತ್ತಿ ಪ್ರತಿ ಕೂಲಾನ್ತರಮಾಯುಮ್ ಅನುಕೂಲ ಪ್ರತಿಕೂಲೋಭಯ ನಿವೃತ್ತಿಯಾ ಯುಮಿರುಕ್ಕುಮ್; ಇಙ್ಗು ಸರ್ವ ಪ್ರತಿಕೂಲ ನಿವೃತ್ತಿಯಾಗೈಯಾಲೇ ಮೇಲ್ ಮುಳಕ್ಕ ಅನುಕೂಲಮೇ ಯಾಯಿರುಕ್ಕುಮ್; ಆಗೈಯಾಲ್**

---

ಮುಂದಿನ ಮೂರು ವಾಕ್ಯಗಳಿಂದ ಸಮರ್ಥನೆ ಮಾಡಿ ಹೇಳುತ್ತಾರೆ. ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿ ಎರಡೂ ಒಂದೇ ವಿಧವಾದ ಫಲವನ್ನೇ ಬೋಧಿಸಿದರೂ, ಹೀಗೆ ಎರಡು ವಿಧವಾಗಿ ಭಾವಿಸಿ ಪ್ರಾರ್ಥಿಸುವದರಲ್ಲಿ ಪ್ರಯೋಜನ ವಿಶೇಷ ಉಂಟು; ಆ ಕಾರಣದಿಂದ ಹೀಗೆ ಎರಡು ವಿಧವಾಗಿ ಪ್ರಾರ್ಥಿಸುವದು ಸಮಂಜಸವೇ ಎಂದು ಉಪಪಾದಿಸುತ್ತಾರೆ-**ಸಂಸಾರ** ದೆಶೆಯಲ್ಲಾದರೋ ಒಂದು ಅನಿಷ್ಟ ನಿವೃತ್ತಿಯುಂಟಾದರೆ, ಇನ್ನೊಂದು ಅನಿಷ್ಟವು ಸಿದ್ಧವಾಗಿರಬಹುದು; ಅಥವಾ ಇನ್ನೊಂದು ಅನಿಷ್ಟಪ್ರಾಪ್ತಿಯಿಲ್ಲದಿದ್ದರೂ, ಇಷ್ಟಪ್ರಾಪ್ತಿಯೂ ಇಲ್ಲದೆ ಇರಬಹುದು. ಮುಕ್ತದಶೆಯಲ್ಲಾದರೂ ಸಮುಸ್ತವಾದ ಅನಿಷ್ಟನಿವೃತ್ತಿಯೂ ಉಂಟಾಗುವದರಿಂದ ಮುಂದಕ್ಕೆ ಏನೊಂದೂ ಅನಿಷ್ಟಗಳಿಲ್ಲದೆ ಸರ್ವಾನುಕೂಲವಾದ ಇಷ್ಟದಶೆಯು ಉಂಟಾಗುವದರಿಂದ. ಬದ್ಧದಶೆಯು ಅನಿಷ್ಟತಮತ್ವವನ್ನೂ ಮುಕ್ತದಶೆಯು ಇಷ್ಟ ತಮತ್ವವನ್ನೂ ಆದರಾತಿಶಯದಿಂದ ಪ್ರದರ್ಶಿಸುವದರಿಂದ ಹಾಗೆ ಎರಡು ವಿಧ ಪ್ರಾರ್ಥನೆಯಲ್ಲಿ ಪ್ರಯೋಜನ ಉಂಟೆಂದು ಹೇಳುತ್ತಾರೆ.–**ಸಂಸಾರದಶೈಯಿಲ್** - ಬದ್ಧದಶೆಯಲ್ಲಿ, **ಒರುಪ್ರತಿಕೂಲನಿವೃತ್ತಿ** - ಒಂದು ಅನಿಷ್ಟರೂಪವಾದ ಪ್ರತಿಕೂಲ ನಿವೃತ್ತಿಯು, **ಪ್ರತಿಕೂಲಾನ್ತರ ಮಾಯುಮ್** - ಇನ್ನೊಂದು ಅನಿಷ್ಟ ಪ್ರಾಪ್ತಿಯನ್ನುಳ್ಳದ್ದಾಗಿಯೂ, **ಅಥವಾ** ಹಾಗೂ ಇಲ್ಲದಿದ್ದರೂ **ಅನುಕೂಲ ಪ್ರತಿಕೂಲೋಭಯ ನಿವೃತ್ತಿ ಯಾಯುಮಿರುಕ್ಕುಮ್** - ಅನುಕೂಲ ಪ್ರತಿಕೂಲ ಎರಡೂ ಇಲ್ಲದ ಹಾಗೂ ಇರಬಹುದು; **ಇಙ್ಗು** - ಈ ಸಂದರ್ಭದಲ್ಲಾದರೋ ಎಂದರೆ **ಸರ್ವಪ್ರತಿಕೂಲ ನಿವೃತ್ತಿಯಾಗೈಯಾಲೇ** - ಸಮುಸ್ತ ಪ್ರತಿಕೂಲವೂ ನಿವರ್ತಿಸಿ ಹೋಗುವದರಿಂದ, **ಮೇಲ್ ಮುಳಕ್ಕೆ** - ಅನಂತರ ಸಂಪೂರ್ಣವಾಗಿ **ಅನುಕೂಲಮಾಯಿಯೇ ಇರುಕ್ಕುಮ್** - ಅನುಕೂಲವಾಗಿಯೇ ಇರುತ್ತದೆ. ಮೋಕ್ಷದೆಶೆಯಲ್ಲಿನ ಅನಿಷ್ಟನಿವೃತ್ತಿಯೂ, ಜೀವಂತನಾಗಿರುವಾಗ ಅನಿಷ್ಟ ನಿವೃತ್ತಿಗೂ ವ್ಯತ್ಯಾಸವುಂಟೆಂದು ಉಪಪಾದಿಸಿದರು. ಜೀವದಶೆಯಲ್ಲಿ ಒಂದು ಅನಿಷ್ಟ ನಿವೃತ್ತಿಯು ಉಂಟಾಗಿ ಸ್ವಲ್ಪ ಕಾಲ ಅನುಕೂಲವಾಗಿ ತೋರಿದರೂ ಇನ್ನೊಂದು ಅನಿಷ್ಟವು ಉಂಟಾಗಬಹುದು. ಹಾಗಲ್ಲದೆ ಮೋಕ್ಷದೆಶೆಯಲ್ಲಾದರೋ ಸರ್ವಾನಿಷ್ಟಗಳ ನಿವೃತ್ತಿಯೂ ಉಂಟಾಗಿ ಯಾವಾಗಲೂ ಅನುಕೂಲವಾಗಿ ದುಃಖಸಂಬಂಧವೇ ಇಲ್ಲದ ನಿರತಿಶಯಾನಂದವನ್ನು ಹೊಂದುವನು. ಆದುದರಿಂದ ಸರ್ವಾನಿಷ್ಟ ನಿವೃತ್ತಿಯನ್ನೂ ನಿರಂತರಾನುಕೂಲದೆಶೆಯಾದ ಇಷ್ಟಪ್ರಾಪ್ತಿಯನ್ನೂ

**ಪೂರ್ವಾವಸ್ಥೈಯಿನುಡೈಯ ಅನಿಷ್ಟತಮತ್ವತ್ತೈಯುಮ್, ಕೇವಲಾನುಕೂಲ ರೂಪೈಯಾನ ಉತ್ತರಾವಸ್ಥೈಯಿನುಡೈಯ ಅನಿಷ್ಟತಮತ್ವತ್ತೈಯುಮ್ ಶ್ರೋತೃವಿತ್ತೈಕ್ಕಾಗ, ಆದರಾತಿಶಯತ್ತಾಲೇ ಪಿರಿಯ ಅಪೇಕ್ಷಿಕ್ಕಿರದು. ಭಗವನ್ನಿಗ್ರಹಾದಿ ನಿವೃತ್ತಿಯುಮ್, ಜೀವನುಡೈಯ ಜ್ಞಾನವಿಕಾಸಾದಿ**

---

ಹೀಗೆ ಎರಡನ್ನೂ ಪ್ರಾರ್ಥಿಸುವದರಲ್ಲಿ ಏನೊಂದೂ ವಿರೋಧವಿಲ್ಲವೆಂದು ಮುಂದೆ ಹೇಳುತ್ತಾರೆ.—**ಆಗ್ಯೈಯಾಲ್** - ಹೀಗೆ ಐಹಿಕಾನಿಷ್ಟನಿವೃತ್ತಿಗೂ, ಮುಕ್ತದೆಶೆಯಲ್ಲುಂಟಾಗುವ ಸರ್ವಾನಿಷ್ಟನಿವೃತ್ತಿಗೂ ವ್ಯತ್ಯಾಸದ ಮೂಲಕ ಸರ್ವಾನುಕೂಲ ಸ್ಥಿತಿಯುಂಟಾಗುವದರಿಂದ, **ಪೂರ್ವಾವಸ್ಥೈಯಿನುಡೈಯ** - ಬದ್ಧಾವಸ್ಥೆಯ, **ಅನಿಷ್ಟತಮತ್ವತ್ತೈಯುಮ್** - ದೋಷಸಪ್ತಕಗಳಿಂದ ಅನಿಷ್ಟತಮವಾದ ಭಾವವನ್ನೂ, **ಕೇವಲಾನುಕೂಲ ರೂಪೈಯಾನ** ಸಂಪೂರ್ಣವಾದ ಅನುಕೂಲರೂಪವಾದ, **ಉತ್ತರಾವಸ್ಥೈಯಿನುಡೈಯ** – ಮುಂದೆ ಬರುವ ಮುಕ್ತಾವಸ್ಥೆಯ, **ಇಷ್ಟತಮತ್ವತ್ತೈಯುಮ್** - ಅತ್ಯಂತ ಇಷ್ಟವಾದ ಭಾವವನ್ನೂ, **ಶ್ರೋತ್ತುವಿಕ್ಕೈಕ್ಕಾಗ** - ವ್ಯಕ್ತವಾಗಿ ತಿಳಿಯಪಡಿಸುವದಕ್ಕಾಗಿ, **ಆದರಾತಿಶಯತ್ತಾಲೇ** - ವಿಶೇಷವಾದ ಆದರದಿಂದ, **ಪಿರಿಯ ಅಪೇಕ್ಷಿಕ್ಕಿರದು** – ಬೇರೆ ಬೇರೆಯಾಗಿ, **ನಮಃ** ಎಂಬುದರಿಂದ ಅನಿಷ್ಟ ನಿವೃತ್ತಿಯ ಪ್ರಾರ್ಥನೆಯನ್ನೂ, **ನಾರಾಯಣಾಯ** ಎಂಬುದರಿಂದ ಇಷ್ಟಪ್ರಾರ್ಥನೆಯನ್ನು ಮಾಡುವದಾಗಿರುತ್ತದೆ. ಬದ್ಧದೆಶೆಯಲ್ಲಿ ಅನಿಷ್ಟ ಪರಂಪರೆಗಳು ಒದಗುವದರಿಂದ, ಅಂತಹ ಅನಿಷ್ಟ ಪರಂಪರೆಗಳೆಲ್ಲಾ ತೊಲಗಬೇಕೆಂದೂ, ಮುಕ್ತದೆಶೆಯಲ್ಲಿ ಸರ್ವವೂ ಅನುಕೂಲವಾದುದಾಗುವದರಿಂದ, ಅಂತಹ ಇಷ್ಟತಮವಾದ ಅವಸ್ಥೆಯುಂಟಾಗಬೇಕೆಂದೂ ಪ್ರಾರ್ಥನೆಯಿಂದ ಅವುಗಳಿಗಿರುವ ವೈಲಕ್ಷಣ್ಯವು ಚೆನ್ನಾಗಿ ಪ್ರದರ್ಶಿಸುವದಕ್ಕಾಗಿ ಈ ಪ್ರಾರ್ಥನೆಯನ್ನು ಎರಡು ವಿಧವಾಗಿ ಮಾಡುವದು ನ್ಯಾಯವೇ ಎಂದು ಹೇಳಿದರು.

ಇನ್ನೊಂದು ವಿಧವಾಗಿಯೂ ಈ ಉಭಯ ವಿಧ ಪ್ರಾರ್ಥನೆಯು ಸಮಂಜಸವೆಂದು ಉಪಪಾದಿಸುತ್ತಾರೆ—ಭಗವನ್ನಿಗ್ರಹ ನಿವೃತ್ತಿರೂಪವಾದುದು ಅನಿಷ್ಟ ಪರಂಪರೆಗಳ ನಿವೃತ್ತಿಯು; ಭಗವದನುಗ್ರಹರೂಪವಾದುದು ತನಗೆ ಉಂಟಾಗುವ ಇಷ್ಟವಾದ ಜ್ಞಾನವಿಕಾಸ, ಗುಣಾಷ್ಟಕಗಳ ಪ್ರಾಪ್ತಿಯು; ಆದುದರಿಂದ ಇವೆರಡನ್ನೂ ಪ್ರಾರ್ಥಿಸುವದೂ ನ್ಯಾಯವೇ ಎಂದು ಹೇಳುತ್ತಾರೆ.—**ಭಗವನ್ನಿಗ್ರಹಾದಿ ನಿವೃತ್ತಿಯುಮ್** - **ನಮಃ** ಎಂಬ ವಾಕ್ಯದಲ್ಲಿ ತೋರಿಬರುವ ಭಗವಂತನ ನಿಗ್ರಹರೂಪವೇನು, ಆದಿಶಬ್ದದಿಂದ ಪ್ರಕೃತಿ ಸಂಬಂಧ ಕರ್ಮವಾಸನಾದಿಗಳು ಹೇಳಲ್ಪಟ್ಟವು, ಇವುಗಳ ನಿವೃತ್ತಿಯೂ, **ಜೀವನುಡೈಯ ಜ್ಞಾನವಿಕಾಸಾದಿಗಳುಮ್** - ಜೀವನ ನೈಜವಾದ ಜ್ಞಾನವಿಕಾಸವೇನು ? ಆದಿಶಬ್ದದಿಂದ ಮಿಕ್ಕ ಗುಣಾಷ್ಟಕಗಳ ಪ್ರಾಪ್ತಿರೂಪ ಭಗವಂತನ ಅನುಗ್ರಹವೂ ಪರಿಪೂರ್ಣ ಬ್ರಹ್ಮಾನು

**ಗಳುಮ್, ವೇರಾಗೈಯಾಲೇ ಪಿರಿಯ ವಪೇಕ್ಷಿಕ್ಕಿರದಾಗವುಮಾಮ್. ಜ್ಞಾನ ಸಙ್ಕೋಚಾದಿಗಳುಕ್ಕು ಹೇತುವಾನ ಭಗವನ್ನಿಗ್ರಹಾದಿಗಳುಡೈಯ ನಿವೃತ್ತಿಯಾನ ಜ್ಞಾನವಿಕಾಸ ಕೈಙ್ಕರ್ಯಾದಿಗಳುಮ್ ವೇರ್‌ಪಟ್ಟವೈ ಆಗೈಯಾಲೇ ಪಿರಿಯ ಅಪೇಕ್ಷಿಕ್ಕಕ್ಕುರೈಯಿಲ್ಲೈಯಿರೇ.**

---

ಭವವೂ ಕೈಂಕರ್ಯ ಪ್ರಾಪ್ತಿಯೇ ಮೊದಲಾದವು ಹೇಳಲ್ಪಟ್ಟವು. **ವೇರಾಗೆಯಾಲೇ** - ನಿಗ್ರಹ ನಿವೃತ್ತಿ ಅನುಗ್ರಹ ಪ್ರಾಪ್ತಿ ಹೀಗೆ ಇವೆರಡೂ ಬೇರೆ ಬೇರೆಯಾದುದರಿಂದ, **ಪಿರಿಯ ಅಪೇಕ್ಷಿಕ್ಕಿರದಾಗವುಮಾಮ್**-ಬೇರೆ ಬೇರೆ ಪ್ರಾರ್ಥನೆ ಎಂದೂ ಭಾವಿಸಬಹುದು.

ಹೀಗೆ ಹೇಳಿದರೆ ಪೂರ್ವಪಕ್ಷಿಯು ಪುನಃ ಆಕ್ಷೇಪಿಸಬಹುದು; ಏನೆಂದರೆ ಅನಿಷ್ಟ ತಮತ್ವದ ಅಭಾವವು ಬೇರೆಯಲ್ಲವಾದುದರಿಂದ ನಮ್ಮ ಸಿದ್ಧಾಂತ ರೀತ್ಯಾ ಅಭಾವವೆಂಬುದು ಬೇರೇ ಇಲ್ಲವಾದುದರಿಂದ, ಇಷ್ಟ ತಮತ್ವದ ಭಾವವೇ ಆಯಿತು. ಆಗ ಇಷ್ಟತಮತ್ವವನ್ನು ಬೋಧಿಸುವ ಜ್ಞಾನವಿಕಾಸಗಳ ಭಾವವನ್ನೇ ಬೋಧಿಸಿದ ಹಾಗಾಗಲಿಲ್ಲವೇ; ಆಗಲು ಎರಡು ಬೇರೆ ಬೇರೆ ಪ್ರಾರ್ಥನೆಯು ಹೇಗಾಯಿತು ? ಹೀಗೆ ಆಕ್ಷೇಪ ತಂದರೆ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ—**ಜ್ಞಾನಸಂಕೋಚಾದಿಗಳುಕ್ಕು** - ಬದ್ಧದೆಶೆಯಲ್ಲಿ ಈ ಜೀವಾತ್ಮನಿಗೆ ಉಂಟಾಗಿರುವ ಜ್ಞಾನಸಂಕೋಚವೇ ಮೊದಲಾದವುಗಳಿಗೆ, **ಹೇತುವಾನ** - ಕಾರಣವಾದ. **ಭಗವನ್ನಿಗ್ರಹಾದಿಗಳುಡೈಯ ನಿವೃತ್ತಿಯಾನ** ಭಗವನ್ನಿಗ್ರಹವೇ ಮೊದಲಾದವುಗಳ ನಿವೃತ್ತಿರೂಪವಾದ ಜ್ಞಾನವಿಕಾಸ ಮತ್ತು ಕೈಙ್ಕರ್ಯವೇ ಮೊದಲಾವುಗಳೂ, **ವೇರ್‌ಪಟ್ಟವೈ ಆಗೈಯಾಲೇ** - ಬೇರೆಯಾದವು ಆದುದರಿಂದ, **ಪಿರಿಯ ಅಪೇಕ್ಷಿಕ್ಕಕ್ಕುರೆಯಿಲ್ಲೈಯಿರೇ** - ಬೇರೆ ಬೇರೆಯಾಗಿ ಅಪೇಕ್ಷಿಸುವದರಲ್ಲಿ ಏನೊಂದೂ ಕೊರೆತೆಯು ಇಲ್ಲವಷ್ಟೇ ಎಂದರೆ ಏನೊಂದೂ ಬಾಧಕ ಅಥವಾ ಅಸಮಂಜಸವೆಂಬ ದೋಷರೂಪ ನ್ಯೂನತೆಯೇನೂ ಇಲ್ಲವಷ್ಟೇ. ನಿಗ್ರಹ ಫಲರೂಪವಾದ ಅನಿಷ್ಟ ನಿವೃತ್ತಿಯೂ ಇಷ್ಟಪ್ರಾಪ್ತಿಯೂ ಒಂದೇಯಾದರೂ ಇಷ್ಟಪ್ರಾಪ್ತಿಯಿಲ್ಲದೆ ಅನಿಷ್ಟರೂಪ ಭಗವನ್ನಿಗ್ರಹ ಶಮನವು ಉಂಟಾಗಬಹುದಾದುರಿಂದ, ಹೀಗೆ ತಾತ್ಪರ್ಯಭೇದವಿರುವದರಿಂದ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿ ಹೀಗೆ ಎರಡರ ಪ್ರಾರ್ಥನೆಯೂ ಸಮಂಜಸವೇ ಎಂಬ ಭಾವವು. ಘಟಾಭಾವವು ಎಂದರೆ ಬರೀ ಭೂತಲವಾದರೂ ಆಗಬಹುದು; ಅಥವಾ ಪಟದ ಭಾವವಾದರೂ ಆಗಬಹುದು. ಆದುದರಿಂದ ಪೃಥಕ್ಕಾಗಿ ಅಭಾವ, ಭಾವವೆರಡರ ಪ್ರಾರ್ಥನೆಯನ್ನೂ ಮಾಡಬಹುದು. ತಾತ್ಪರ್ಯ ಭೇದವಿರಬಹುದಾದುದರಿಂದ ಅನಿಷ್ಟ ನಿವೃತ್ತಿಯ ಪ್ರಾರ್ಥನೆಯನ್ನು ನಮಃ ಎಂಬುದರಿಂದಲೂ ಪ್ರಾರ್ಥನೆಯನ್ನು ನಾರಾಯಣಾಯ ಎಂಬುದರಿಂದಲೂ ಮಾಡುವದೇನೂ ದೋಷಾವಹವಲ್ಲವೆಂಬ ತಾತ್ಪರ್ಯವು.

ಜ್ಞಾನಸಙ್ಕೋಚವೂ ಹೋಗಬೇಕು, ಜ್ಞಾನವಿಕಾಸವೂ ಉಂಟಾಗಬೇಕು ಎಂಬ ಪ್ರಾರ್ಥನೆಯಲ್ಲಿ ಏನೊಂದೂ ವಿರೋಧವಿಲ್ಲವೆಂಬ ತಾತ್ಪರ್ಯವು. ಕಾರಣ ಕಾರ್ಯಗಳಿಗೆ ಐಕ್ಯವನ್ನು ಒಪ್ಪಿಕೊಳ್ಳುವದು ನ್ಯಾಯವು. ಈ ಅನನ್ಯತ್ವವು ಬ್ರಹ್ಮಸೂತ್ರದಲ್ಲಿ ಉಪಪಾದಿತವು. (೨. ೧. ೧೫) ಕಾರಣ ಕಾರ್ಯಗಳಿಗೆ ಭಿನ್ನತ್ವವನ್ನು ಹೇಳುವ ನೈಯಾಯಿಕನ ಮತವು ಶ್ರುತಿಸಮ್ಮತವಲ್ಲನಾದುದರಿಂದ ಅವುಗಳಿಗೆ ಐಕ್ಯವು ಸಮ್ಮತವಾದರೂ, ಕಾರಣಾಭಾವವೂ, ಕಾರ್ಯಾಭಾವವೂ ಒಂದೇ ಅಲ್ಲವು. ಭಿನ್ನವಾಗಿರಬಹುದು. ಹೇಗೆಂದರೆ ಘಟವಿಲ್ಲವಾದರೆ, ಮೃತ್ತೇ ಇಲ್ಲದೆ ಇಂಬೇಕೆಂಬ ಆವಶ್ಯಕತೆಯಿಲ್ಲವು ; ಪಟವಿರಬಹುದು ಅಥವಾ ಭೂತಲವೇ ಇರಬಹುದು. ಆದುದರಿಂದ ಕಾರಣಾಭಾವವೂ ಕಾರ್ಯಭಾವವೂ ಅತ್ಯಂತ ಭಿನ್ನವು ಎಂಬ ತಾತ್ಪರ್ಯದಿಂದ **"ಪಿರಿಯ ಅಪೇಕ್ಷೈಕ್ಕು ಕ್ಕುರೈಯಿಲ್ಲೈಯಿರೇ"** ಎಂಬ ಪ್ರಯೋಗವು. ಇಲ್ಲಿ ಭಗವನ್ನಿಗ್ರಹ ರೂಪವಾದ ಅನಿಷ್ಟನಿವೃತ್ತಿಯೂ, ಅನಂತರ ಭಗವತ್ಸಂಪ್ರೀಣನ ಕೃಪಾಗಳಿಂದ ಉಂಟಾಗುವ ಜ್ಞಾನವಿಕಾಸವೂ, ಬೇರೆ ಬೇರೆಯೇ ಎಂಬ ಭಾವವು. ಇದರಿಂದ ಹೀಗೆ ಭಿನ್ನತ್ವವೆಂಬುದು ವ್ಯಕ್ತವಾದುದೆಂದು ಹೇಳುವದಕ್ಕಾಗಿ **ಕುರೈ ಇಲ್ಲೈಯಿರೇ** ಎಂದು ಹೇಳಿದರು. **ಜ್ಞಾನ ಸಂಕೋಚಾದಿ** ಎಂಬಲ್ಲಿರುವ **ಆದಿ** ಶಬ್ದದಿಂದ ಆ ಜ್ಞಾನಸಂಕೋಚದಿಂದುಂಟಾಗುವ ಅಕೃತ್ಯಕರಣ ಕೃತ್ಯಾಕರಣಗಳು ಹೇಳಲ್ಪಟ್ಟವು. **ಕೈಂಕರ್ಯಾದಿಗಳುಮ್** ಎಂಬಲ್ಲಿರುವ **ಆದಿ** ಪದದಿಂದ ಆ ಕೈಂಕರ್ಯದಿಂದುಂಟಾದ ಆನಂದವೇನು, ಪರಮಾತ್ಮನ ಮುಖೋಲ್ಲಾಸವೇನು ಇವುಗಳು ಹೇಳಲ್ಪಟ್ಟವು.

ಮುಂದೆ ಪೂರ್ವಪಕ್ಷಿಯು ಪುನಃ ಆಕ್ಷೇಪಿಸಬಹುದು.—ಹೇಗೆಂದರೆ? ನೀರಿಗೆ ಆಣೆ ಎಂದರೆ ಕಟ್ಟೆ ಹಾಕಿರುತ್ತದೆ, ಅದರ ನಿವೃತ್ತಿಯುಂಟಾದರೆ, ಕಟ್ಟೆಯ ಕೆಳಗಿನ ಜಮೀನಿನ ಮೇಲೆ ನೀರು ಹಾಯಿತು ಎಂದು ಹೇಳಬೇಕೇ? ಹಾಗೆಯೇ ಜ್ಞಾನಸಙ್ಕೋಚ ಕಳೆದರೆ ಜ್ಞಾನವಿಕಾಸವು ಸ್ವತಃ ಪ್ರಾಪ್ತವಾಗುತ್ತದೆ ; ಆದುದರಿಂದ ಎರಡು ಪ್ರಾರ್ಥನೆಯು ನಿರರ್ಥಕವು ; ಒಂದೇ ಕಾರ್ಯಕಾರಿಯು ಎಂದರೆ ಅದಕ್ಕೂ ಎರಡು ಸಮಾಧಾನವನ್ನು ಹೇಳುತ್ತಾರೆ.—(೧) ಯಾವಾಗ ಜ್ಞಾನ ಸಂಕೋಚವಿಲ್ಲವೋ, ಆಗ ಪಾಷಾಣಸಮವಾದ ಅವಸ್ಥೆಯು ಉಂಟಾಗಬಹುದೆಂದು ಕೆಲವರು ಹೇಳುವರು, ಅಂತಹ ಅಪಸಿದ್ಧಾನ್ತ ನಿರಸನಮಾಡಿ ನಿರತಿಶಯ ಜ್ಞಾನ ವಿಕಾಸಪ್ರಾಪ್ತಿಯುಂಟೆಂದು ತಿಳಿಸುವದಕ್ಕಾಗಿಯಾದರೂ ಎರಡು ಪ್ರಾರ್ಥನೆಯೂ ಪ್ರಯೋಜನವುಳ್ಳವೆಂದು ಭಾವಿಸಬಹುದು. (೨) ಅಥವಾ ಮೋಕ್ಷದೆಶೆಯಲ್ಲಿ ಉಂಟಾಗುವ ಸುಖವು ಇಂದ್ರಾದಿ ಲೋಕ ಭೋಗದಹಾಗೆ ತದನಂತರ ದುಃಖ ಸಂಬಂಧವು, ಈಷದಪಿ ಇಲ್ಲ ಎಂದು ವೈಲಕ್ಷಣ್ಯವನ್ನು ತಿಳಿಯಪಡಿಸುವದಕ್ಕಾಗಿ ಎರಡರ ಪ್ರಾರ್ಥನೆಯು ಎಂದೂ ಭಾವಿಸಬಹುದೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ.—

**ಸರ್ವಾನಿಷ್ಟನಿವೃತ್ತಿ ಪಿರನ್ದಾಲ್, ಪಾಷಾಣ ಕಲ್ಪತ್ವಾದಿ ಮತಾನ್ತರ ಶಙ್ಕೈ ವಾರಾಮೈಕ್ಕಾಗವುಮ್, ಭಗವತ್ಪ್ರಾಪ್ತಿಯಿಲ್ ಇನ್ದ್ರಾದಿ ಪ್ರಾಪ್ತಿಯಿರ್ಪೋಲೇ ದುಃಖಸಂಬಂಧಮ್ ಇಲ್ಲೈ ಎನ್ರು ತೋತ್ತುವಿಕ್ಕೈಯಿಲ್ ತಾತ್ಪರ್ಯತ್ತಾಲುಮ್ ಪಿರಿತ್ತು ಚೊಲ್ಲುಗಿರದಾಗವುಮಾಮ್.**

---

**ಸರ್ವಾನಿಷ್ಟ ನಿವೃತ್ತಿ ಪಿರನ್ದಾಲ್** – ಸಮಸ್ತ ಅನಿಷ್ಟಗಳ ನಿವೃತ್ತಿಯು ಉಂಟಾದರೆ, **ಪಾಷಾಣಕಲ್ಪತ್ವಾದಿ ಮತಾಂತರಶಙ್ಕೈ** - ಕಲ್ಲಿಗೆ ಸಮಾನವಾಗಿ ಇದ್ದುಬಿಡುವನು ಎಂಬಿವೇ ಮೊದಲಾದ ಶಾಸ್ತ್ರವಿರುದ್ಧವಾದ ಇತರ ಮತಾಭಿಪ್ರಾಯದ ಶಙ್ಕೆಯು, **ವಾರಾಮೈಕ್ಕಾಗವುಮ್**-ಬಾರದೇ ಇರುವದಕ್ಕಾಗಿಯೂ, ಅಥವಾ **ಭಗವತ್ಪ್ರಾಪ್ತಿಯಿಲ್**-ಭಗವತ್ಪ್ರಾಪ್ತಿಯಲ್ಲಿ, **ಇಂದ್ರಾದಿ ಪ್ರಾಪ್ತಿಯಿರ್ಪೋಲೇ**– ಇಂದ್ರನೇ ಮೊದಲಾದವರ ಲೋಕದ ಪ್ರಾಪ್ತಿಯಲ್ಲಿ ಉಂಟಾಗುವಹಾಗೆ, **ದುಃಖ ಸಂಬಂಧಮ್ ಇಲ್ಲೈ**-ಆ ಭೋಗವು ಮುಗಿದ ನಂತರ ಈ ಕರ್ಮಭೂಮಿಗೆ ಪುನಃ ಬರಬೇಕಾದ ದುಃಖದ ಸಂಬಂಧವೂ ಇಲ್ಲವು, **ಎನ್ರು ತೋತ್ತುವಿಕ್ಕೈಯಿಲ್** - ಎಂದು ಪ್ರದರ್ಶಿಸುವದರಲ್ಲಿ, **ತಾತ್ಪರ್ಯತ್ತಾಲುಮ್**-ಅಭಿಪ್ರಾಯದಿಂದಲಾದರೂ, **ಪಿರಿತ್ತು ಚೊಲ್ಲುಗಿರದಾಗವುಮಾಮ್** - ಅನಿಷ್ಟನಿವೃತ್ತಿಯನ್ನೂ ಇಷ್ಟಪ್ರಾಪ್ತಿಯನ್ನೂ ಬೇರೆ ಬೇರೆಯಾಗಿ ಹೇಳಲ್ಪಟ್ಟವೆಂದಾದರೂ ಭಾವಿಸಬಹುದು. ಅನಿಷ್ಟ ನಿವೃತ್ತಿಯಾದರೆ ಪಾಷಾಣಕ್ಕೆ ಸಮನಾಗಿದ್ದು ಬಿಡುವನು ಎಂಬುದು ನೈಯಾಯಿಕವೈಶೇಷಿಕರ ಅಭಿಪ್ರಾಯಗಳು ; ಈಶ್ವರೋಪಾಸನದಿಂದ ಸುಖದುಃಖಗಳು ನಶಿಸಿಹೋದರೆ ಪಾಷಾಣಕಲ್ಪನಾಗುವನು. ಇದೇ ಮೋಕ್ಷಾವಸ್ಥೆಯೆಂದು ಹೇಳುವರು. ೨೧೬ನೆಯ ಪುಟವನ್ನು ನೋಡಿ. ಮೋಕ್ಷದ ಅಭಿಪ್ರಾಯವು ನಮಗಾದರೋ ಹಾಗಲ್ಲವು. ನೈಜವಾದ ಜ್ಞಾನವಿಕಾಸವೂ ಗುಣಾಷ್ಟಕಗಳ ಪ್ರಾಪ್ತಿಯೂ, ಪರಿಪೂರ್ಣಬ್ರಹ್ಮಾನುಭವ ರೂಪವಾದ ಆನಂದವೂ, ಭಗವಂತನಿಗೆ ಮಾಡುವ ನಿತ್ಯ ಕೈಙ್ಕರ್ಯಪ್ರಾಪ್ತಿಯೂ ಉಂಟಾಗುತ್ತವೆ ಎಂದು ಶ್ರುತಿಯಲ್ಲಿ ಹೇಳಿರುವದರಿಂದ, ಇವೆಲ್ಲಾ ನಮಗೆ ಇಷ್ಟಪ್ರಾಪ್ತಿಯು. ಹೀಗೆ ಎರಡನ್ನೂ ವ್ಯಕ್ತಗೊಳಿಸುವದಕ್ಕಾಗಿ ಎರಡರ ಪ್ರಾರ್ಥನೆ ಎಂಬ ಭಾವವು. **ಪಾಷಾಣಕಲ್ಪತ್ವಾದಿ** ಎಂಬಲ್ಲಿರುವ ಆದಿಪದದಿಂದ ಇತರ ವಿಧ ಮೋಕ್ಷಾಭಿಪ್ರಾಯಗಳೂ ಸರಿಯಲ್ಲವೆಂದು ಹೇಳಲ್ಪಟ್ಟಿತು. ಭಿನ್ನ ಭಿನ್ನವಾದ ಮೋಕ್ಷಾಭಿಪ್ರಾಯಗಳಿಗೆ ೧೯೦ನೆಯ ಪುಟವನ್ನು ನೋಡಿ. ಕೆಲವರು ಭಗವಂತನೊಂದಿಗೆ ಸ್ವರೂಪೈಕ್ಯವೇ ಮೋಕ್ಷವೆಂದು ಹೇಳುವರು. ಇದು ನಾರಾಯಣಾಯ ಎಂಬ ವಾಕ್ಯದಲ್ಲಿ ತೋರುವ **"ಅಹಂ ಸರ್ವಂ ಕರಿಷ್ಯಾಮಿ"** (ರಾ. ಅಯೋಧ್ಯಾ) ಎಂಬಲ್ಲಿ ತೋರಿಬರುವ ಸರ್ವವಿಧ ಕೈಙ್ಕರ್ಯವನ್ನೂ ನಿರಂತರ ಮಾಡಬೇಕೆಂಬ ಇಷ್ಟಪ್ರಾಪ್ತಿಪ್ರಾರ್ಥನೆಗೆ ವಿರುದ್ಧವಾದುದು ಎಂದು ತೋರ್ಪಡಿಸುವದಕ್ಕಾಗಿಯೂ ಎರಡೂ ಆವಶ್ಯಕವೆಂಬ ಭಾವವು. ಹೀಗೆ ಎರಡರ ಪ್ರಾರ್ಥನೆಯೂ ಇಲ್ಲದೆ ಒಂದರ

**ಇಪ್ಪಡಿ ಸ್ವರೂಪಮುಮ್ ಪುರುಷಾರ್ಥಪ್ರಾರ್ಥನಮುಮ್ ಶಾಬ್ದ ಮಾನಾಲ್, ಇಪ್ಪುರುಷಾರ್ಥತ್ತುಕ್ಕು ಸಾಧನಮಾಗ, ಶಾಸ್ತ್ರವಿಹಿತಮಾನ**

---

ಪ್ರಾರ್ಥನೆ ಮಾತ್ರವೇ ಇದ್ದುದಾದರೆ, ಇಂತಹ ಶಜ್ಕಾಗಳಿಗೆ ಕಾರಣವಾಗುತ್ತದೆ. ಹೇಗೆಂದರೆ ಅನಿಷ್ಟ ನಿವೃತ್ತಿ ಮಾತ್ರವೇ ಪ್ರಾರ್ಥಿಸಲ್ಪಟ್ಟರೆ ಪಾಷಾಣಾದಿ ತುಲ್ಯ ಪ್ರಾಪ್ತಿ ಮಾತ್ರವೇ ಅಪೇಕ್ಷಿತವಾದರೆ ದುಃಖಮಿಶ್ರತ್ವ ದುಃಖಸಂಬಧಾದಿ ಶಜ್ಕಾ ಉಂಟಾಗಬಹುದು. ಎರಡನ್ನೂ ಹೇಳುವುದಕ್ಕೆ ಇನ್ನೊಂದು ಕಾರಣವನ್ನು ತಿಳಿಸು ತ್ತಾರೆ—**ಭಗವತ್ಪ್ರಾಪ್ತಿಯಿಲ್** - ಭಗವತ್ಪ್ರಾಪ್ತಿಯಲ್ಲಿ, **ಇನ್ದ್ರಾದಿ ಪ್ರಾಪ್ತಿ ಯಿಲ್ಪೋಲೇ** - ಇಂದ್ರನ ಲೋಕವಾದ ಸ್ವರ್ಗಪ್ರಾಪ್ತಿಯಹಾಗೆ, **ದುಃಖ ಸಂಬಂಧಮುಮಿಲ್ಲೈ** - **"ಕ್ಷೀಣೇಪುಣ್ಯೇ ಮರ್ತ್ಯಲೋಕಂವಿಶನ್ತಿ"** ಎಂಬಲ್ಲಿ ಹೇಳಿರುವ ಹಾಗೆ ದುಃಖಸಂಬಂಧವೂ ಉಂಟಾಗುವದಿಲ್ಲವೆಂದೂ ತಿಳಿಸುವದರ ತಾತ್ಪರ್ಯದಿಂದಲೂ, **ಪಿರಿತ್ತು ಚೊಲ್ಲುಗಿರದಾಗವುಮಾಮ್** - ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿ ಎರಡೂ ಪೃಥಕ್ಕಾಗಿ ಹೇಳಲ್ಪಟ್ಟತೆಂದಾಗಲಿ ಆಗಬಹುದು. ಆದುದ ರಿಂದ ಎರಡರ ಪ್ರಾರ್ಥನೆಯೂ ಆವಶ್ಯಕವು.

ಆಗಲಿ, ಹೀಗೆ ಎರಡನ್ನೂ ಪೃಥಕ್ಕಾಗಿ ಪ್ರಾರ್ಥಿಸಿದುದು ಸಮಂಜಸವೆಂದು ಸಮರ್ಥಿಸಿರುವದು, ಶ್ರೀ ಯತಿವರ್ಯರು ಪೂರ್ವಪಕ್ಷಿಯ ಅಭಿಪ್ರಾಯವಾದ **ಅವಿದ್ಯಾ ನಿವೃತ್ತಿರೇವಮೋಕ್ಷಃ** ಎಂಬುದನ್ನು ಹೇಳಿ, **ತದಭ್ಯುಪಗಮತೇ** ಎಂದು ಒಪ್ಪಿಕೊಂಡಿರುತ್ತಾರೆಯಷ್ಟೇ. ಇದನ್ನೇ ಶ್ರುತ ಪ್ರಕಾಶಾಚಾರ್ಯರೂ ಸಹ ಉಪ ಪಾದಿಸಿರುತ್ತಾರೆ. ಅನಿಷ್ಟ ನಿವೃತ್ತಿಯೂ, ಇಷ್ಟಪ್ರಾಪ್ತಿಯೂ, ಒಂದು ಸಾಧನ ಇನ್ನೊಂದು ಸಾಧ್ಯ ಹೀಗೆ ಎಂದಿಗೂ ಇಲ್ಲವೆಂಬುದು ಅವರಭಿಪ್ರಾಯವಾಗಿರು ತ್ತದೆ. ಹೀಗಿರುವಾಗ ಶ್ರೀ ಯತಿವರ್ಯರ ಅಭಿಪ್ರಾಯಕ್ಕೂ ಶ್ರೀ ದೇಶಿಕರವರ ಅಭಿಪ್ರಾಯಕ್ಕೂ, ಪರಸ್ಪರ ವಿರೋಧವೋ ಎಂದರೆ, ಹಾಗೆ ಯಾವುದೂ ಇಲ್ಲ ವೆಂದು ಮೂದಲಿಸುತ್ತಾರೆ—

ಮುಂದೆ ಹೀಗೆ ನಮಃ ಎಂಬ ವಾಕ್ಯವು ಅನಿಷ್ಟನಿವೃತ್ತಿರೂಪ ಪ್ರಾರ್ಥನೆಯು, ಎಂದಾದರೆ, ಆ ಅನಿಷ್ಟ ನಿವೃತ್ತಿಯೂ ತನ್ಮೂಲಕ ಇಷ್ಟಪ್ರಾಪ್ತಿಯೂ ಸಹ ಸಾಧ್ಯೋ ಪಾಯಾನುಷ್ಠಾನದ ಮೂಲಕವಲ್ಲವೋ ? ಎಂದರೆ ಅರ್ಥವಾಗಿ ಸಾಧ್ಯೋಪಾಯ ವಾದ ಭರನ್ಯಾಸವೂ ಸೂಚಿತವೆಂದು ತಿಳಿಸುತ್ತಾರೆ—**ಇಪ್ಪಡಿ** - ಹಿಂದೆ ಸಮರ್ಥಿಸಿ ಹೇಳಲ್ಪಟ್ಟ ರೀತಿಯಲ್ಲಿ, **ಸ್ವರೂಪಮುಮ್** - ಪ್ರಣವದಿಂದ ಸ್ವರೂಪವಾದ ಪರ ಶೇಷತ್ವವೂ, **ಪುರುಷಾರ್ಥಪ್ರಾರ್ಥನಮುಮ್** - ನಾರಾಯಣಾಯ ಎಂಬು ದರಿಂದ ಪುರುಷಾರ್ಥವಾದ ನಿತ್ಯ ಕೈಙ್ಕರ್ಯ ಪ್ರಾರ್ಥನೆಯೂ, **ಶಾಬ್ದಮಾನಾಲ್** - ಆ ಪದಗಳಿಂದಲೇ ತೋರಿಬರುವ ಅಭಿಪ್ರಾಯಗಳಾದರೆ, **ಇಪ್ಪುರುಷಾರ್ಥ ತ್ತುಕ್ಕು** - ಈ ನಿತ್ಯಕೈಙ್ಕರ್ಯಪ್ರಾಪ್ತಿರೂಪ ಪುರುಷಾರ್ಥಕ್ಕೆ, **ಸಾಧನಮಾಕ** -

**ಸಾಧ್ಯೋಪಾಯಮುಮ್ ಭರನ್ಯಾಸ ಪರ್ಯನ್ತಮಾಗ ವಕಿಂಚನನುಕ್ಕು ಅನಿಷ್ಟನಿವೃತ್ತಿಯೈ ಚ್ಚೊಲ್ಲುಗಿರ ನಮಸ್ಸಿಲೇ ಅರ್ಥಮಾಗ ಅನುಸಂಧೇಯಮ್.**

---

ಸಾಧನವಾದ, **ಶಾಸ್ತ್ರವಿಹಿತಮಾನ** - ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ, ಕಠ ತೈತ್ತರೀಯ ಶ್ರುತಿಗಳು ಪಾಂಚರಾತ್ರಾದಿ ಶಾಸ್ತ್ರ, ಗೀತಾಶಾಸ್ತ್ರ, ಭಾಗವತ, ರಾಮಾಯಣ, ಪಾದ್ಮಪುರಾಣ, ಇವೇ ಮೊದಲಾದ ಶಾಸ್ತ್ರಗಳಲ್ಲಿ ಉಪಪಾದಿಸಲ್ಪಟ್ಟ, **ಸಾಧ್ಯೋಪಾಯಮುಮ್** - ಸಾಧ್ಯೋಪಾಯವಾದ ಶರಣಾಗತಿಯು, **ಭರನ್ಯಾಸಪರ್ಯಂತಮಾಗ** - ಆತ್ಮ ಸಮರ್ಪಣೆಯನ್ನು ದ್ವಯಮನ್ತ್ರ ಮೂಲಕ ಮಾಡಿ ಸರ್ವ ಭರವನ್ನು ಪರಮ ಪುರುಷನಲ್ಲಿಟ್ಟು ನಿರ್ಭರನಾಗಿಯೂ ನಿರ್ಭಯನಾಗಿಯೂ ಇರುವ ತನಕ ಎಲ್ಲವನ್ನೂ, **ಅಕಿಂಚನನುಕ್ಕು** - ಪರಮ ಪುರುಷನ ವಿನಾ ತನಗೆ ಇನ್ನು ಯಾರೂ ಗತಿಯಿಲ್ಲವೆಂದು ದೈನ್ಯವನ್ನು ಹೊಂದಿದವನಿಗೆ **ಅನಿಷ್ಟನಿವೃತ್ತಿಯೈಚೊಲ್ಲುಗಿರ** - ಅನಿಷ್ಟ ನಿವೃತ್ತಿಯನ್ನು ಬೋಧಿಸುವ, **ನಮಸ್ಸಿಲೇ** - ನಮಸ್ಸೆಂಬ ಶಬ್ದದಲ್ಲಿ, **ಅರ್ಥವಾಗಿ, ಅನುಸಂಧೇಯಮ್** - ಅನುಸಂಧಾನ ಮಾಡತಕ್ಕದ್ದಾಗಿರುತ್ತದೆ. ಮುಖ್ಯವಾದ ಈ ಸಾಧ್ಯೋಪಾಯವು ಅರ್ಥವಾಗಿ ಹೇಳಲ್ಪಡುವದು ನ್ಯಾಯವೋ? ಸಾಕ್ಷಾತ್ತಾಗಿ ಶಾಬ್ದವಾಗಿ ಹೇಳಲ್ಪಡಬೇಡವೇ? ಎಂಬಾಕ್ಷೇಪವು ಉಂಟಾಗಬಹುದು. ಇದಕ್ಕೆ ಮುಂದಿನ ಯೋಜನೆಯಲ್ಲಿ ಸಮಾಧಾನವು ಹೇಳಲ್ಪಡುತ್ತದೆ. ಆಗಲಿ, ಅರ್ಥವಾಗಿ ನಮಸ್ಸಿನಲ್ಲಿ ಎಲ್ಲಿ ಹೇಳಲ್ಪಟ್ಟಿದೆ ಎಂದರೆ ಹಿಂದೆಯೇ ನಮಶ್ಶಬ್ದಾರ್ಥಗಳನ್ನು ಉಪಪಾದಿಸಿ ಹೇಳುವಾಗ, ನಮಶ್ಶಬ್ದವೇ ಶರಣಾಗತಿಯನ್ನು ಬೋಧಿಸುತ್ತದೆ. ಮತ್ತು ನಮಸ್ಸಿನ ಮಕಾರವು, ನನ್ನನ್ನು ರಕ್ಷಿಸಿಕೊಳ್ಳುವ ಶಕ್ತಿಯು ನನಗಿಲ್ಲವು ಎಂಬ ಯೋಜನೆಯ ಮೂಲಕ ಆಕಿಂಚನ್ಯವನ್ನು ಬೋಧಿಸುತ್ತದೆ.

ಆದರೆ, ಶ್ರೀ ಯತಿವರ್ಯರು, ಲಘುಪೂರ್ವಪಕ್ಷದಲ್ಲಿ ಹೇಳಿದ **"ಅವಿದ್ಯಾನಿವೃತ್ತಿರೇವ ಮೋಕ್ಷಃ"** ಎಂಬ ವಾಕ್ಯವನ್ನು ತಮ್ಮ ಸಿದ್ಧಾನ್ತದಲ್ಲಿ **"ಯದುಕ್ತ ಮವಿದ್ಯಾನಿವೃತ್ತಿರೇವ ಮೋಕ್ಷಃ, ಸಾಚ ಬ್ರಹ್ಮವಿಜ್ಞಾನಾದೇವ ಭವತೀತಿ ತದಭ್ಯುಪಗಮ್ಯತೇ"** ಎಂದು ಒಪ್ಪಿಕೊಂಡರಲ್ಲವೇ? ಆದನ್ನೇ ಶ್ರುತಿ ಪ್ರಕಾಶಕಾಚಾರ್ಯರೂ ಸಹ ಸಾಧ್ಯ ಸಾಧನರೂಪದಲ್ಲಿ ಎರಡಿಲ್ಲವೆಂದು ಹೇಳಿದರಲ್ಲವೇ? ಪ್ರತಿಬಂಧಕವಾದ ಅನಿಷ್ಟ ನಿವೃತ್ತಿಯು ಕರ್ಮಸಾಧ್ಯವಾದುದು. ಅದು ಯಾವಾಗ ಉಂಟಾಯಿತೋ, ಜ್ಞಾನವಿಕಾಸ ಬ್ರಹ್ಮಪ್ರಾಪ್ತಿಯು ಸ್ವತಸ್ಸಿದ್ಧವಾದುದು ಎಂದು ಅವರು ವ್ಯಾಖ್ಯಾನ ಮಾಡಿರುತ್ತಾರಲ್ಲಾ; ಅದಕ್ಕಾಗಿ ಸೇತುಭಗ್ನದಿಂದ ಸ್ವತಃ ಜಲವು ಪ್ರವಹಿಸುವ ದೃಷ್ಟಾಂತವನ್ನು ಕೊಟ್ಟಿರುತ್ತಾರಲ್ಲವೇ? ಅದಕ್ಕೆ ಈಗ ಉಪಪಾದಿಸಲ್ಪಟ್ಟ ಅಭಿಪ್ರಾಯವು ವಿರುದ್ಧವಾದುದಲ್ಲವೋ ಎಂಬಾ

ಕ್ಷೇಪವು ಹಾಗೆಯೇ ಉಳಿಯಿತಲ್ಲವೇ ಎಂದರೆ, ಇದಕ್ಕೆ ಸಮಾಧಾನವು ಹೇಗೆಂದರೆ- ಅನಿಷ್ಟನಿವೃತ್ತಿಯೂ ಇಷ್ಟಪ್ರಾಪ್ತಿಯೂ ಸಹ ಒಂದೇ, ಅದರಲ್ಲಿ ಸಂದೇಹವಿಲ್ಲವು ; ಜ್ಞಾನಸಂಕೋಚ ನಿವೃತ್ತಿಯೇ ಜ್ಞಾನವಿಕಾಸವೆಂಬುದೇನೋ ಶ್ರೀ ಭಾಷ್ಯಕಾರಾದಿಗಳ ಮತವು ಒಪ್ಪತಕ್ಕದ್ದೇ. ಆದರೆ ಈಗಿನ ಉಪಪಾದನೆಯಿಂದ, ಅನಾದಿಕಾಲ ಪ್ರವೃತ್ತಾನಂತ ದುಸ್ತರ ಕರ್ಮದಿಂದುಂಟಾದ ಜ್ಞಾನಸಂಕೋಚರೂಪವಾದ ಅವಿದ್ಯೆಯು ನಿವೃತ್ತಿ ಹೊಂದಿದರೆ, ಅದಕ್ಕೆ ಕಾರಣಭೂತವಾದ ಭಗವನ್ನಿಗ್ರಹಶಮನ ರೂಪವಾದುದಾದುದರಿಂದ ಇಷ್ಟಪ್ರಾಪ್ತಿಯು, ಭಗವದನುಗ್ರಹ ಹೇತುಭೂತವಾಗಿ ಉಂಟಾಗುತ್ತದೆಂದು ಎರಡನ್ನೂ ಬೇರೆಯಾಗಿ ಇಲ್ಲಿ ಉಪಪಾದಿಸಿದ್ದರಲ್ಲೇನು ಅಸಾಮಂಜಸ್ಯವಿಲ್ಲವೆಂದು ಭಾವಿಸತಕ್ಕದ್ದು. ಅಥವಾ ಶ್ರೀ ಯತಿವರ್ಯರು **ಅವಿದ್ಯಾನಿವೃತ್ತಿರೇವ ಮೋಕ್ಷಃ** ಎಂಬ ಪೂರ್ವಪಕ್ಷಿಯ ವಾಕ್ಯವನ್ನು ಬೇರೇ ಅಭಿಪ್ರಾಯದಿಂದ ಒಪ್ಪಿದ್ದರೂ ಒಪ್ಪಿರಬಹುದು- ಹೇಗೆಂದರೆ? ಅವಿದ್ಯಾ ನಿವೃತ್ತಿ ಯಾವಾಗ ಆಯಿತೋ ಆಗ ಮೋಕ್ಷಪ್ರಾಪ್ತಿ ಆದಹಾಗೆ ಎಂಬ ಭಾವದಿಂದ ಹಾಗೆ ಹೇಳಿರಬಹುದು. ಪೂರ್ವಪಕ್ಷಿಯ **"ಜ್ಞಾನಾನ್ಮೋಕ್ಷಃ"** ಎಂಬ ವಾಕ್ಯವನ್ನು ಒಪ್ಪಿರುತ್ತಾರೆ. ಆದರ ಹಾಗೆಯೇ ಪೂರ್ವಪಕ್ಷಿಯ ಜ್ಞಾನಾರ್ಥಕ್ಕೂ ಸಿದ್ಧಾನ್ತ ಜ್ಞಾನಾರ್ಥಕ್ಕೂ ವ್ಯತ್ಯಾಸವು ಉಂಟೇ ಉಂಟು. ಹಾಗೆಯೇ, **ಸೋಽಹಂ** ತತ್ತ್ವಮಸಿ ಇತ್ಯಾದಿ ವಾಕ್ಯಗಳು ಪೂರ್ವ ಪಕ್ಷಿಗೂ ಸಿದ್ಧಾನ್ತಿಗೂ ಸಮ್ಮತವಾದುವೇ ; ಆದರೆ ಅರ್ಥಬೇಧವು ಇದ್ದೇ ಇರುತ್ತದೆ, ಹಾಗೆಯೇ ಅನಿಷ್ಟಾಭಾವವಾದ ಅವಿದ್ಯಾನಿವೃತ್ತಿಯಿಂದ ಕೈವಲ್ಯವಾದರೂ ಆಗಬಹುದು, ಮೋಕ್ಷವಾದರೂ ಆಗಬಹುದು ; ಯಾವಾಗ ಕೈವಲ್ಯ ಪ್ರಾಪ್ತಿಯೋ, ಆಗ ಮೋಕ್ಷವು ಸಿದ್ಧವು. ಆದುದರಿಂದ **ಅವಿದ್ಯಾನಿವೃತ್ತಿರೇವ ಮೋಕ್ಷಃ** ಎಂಬ ವಾಕ್ಯವು ಸರ್ವಸಮಂಜಸವೇ. ಆದುದರಿಂದ ಶ್ರೀ ಭಾಷ್ಯಕಾರರ ಮತ್ತು ಶ್ರೀ ದೇಶಿಕರವರ ಉಪಪಾದನೆಗಳಿಗೆ ಏನೊಂದೂ ವಿರೋಧವಿಲ್ಲವು. ಐಕಕಂಠ್ಯವೇ ಇರುತ್ತದೆ ಎಂಬುನನ್ನು ಗ್ರಹಿಸತಕ್ಕದ್ದಾಗಿರುತ್ತದೆ. ಇದೂ ಅಲ್ಲದೆ ಇನ್ನೊಂದು ವಿಧವಾಗಿಯೂ ಸಾಮಂಜಸ್ಯವನ್ನು ಹೇಳಬಹುದು. ನಾವು ಪ್ರಾರ್ಥಿಸುವದು ಬದ್ಧದಶೆಯಲ್ಲಿ; ಅದು ಫಲರೂಪದಲ್ಲಿ ಅವಿದ್ಯಾನಿವೃತ್ತಿ ಮೊದಲು ಉಂಟಾಗಿ (ಕೈವಲ್ಯ) ಅನಂತರ ಇಷ್ಟಪ್ರಾಪ್ತಿಯೂ ಲಭಿಸಿದರೂ ಲಭಿಸಬಹುದಾದುದರಿಂದ, ಹಾಗಲ್ಲದೆ ಎರಡೂ ಒಟ್ಟಿಗೆ ಲಭಿಸಲಿ ಎಂಬುದು ಅಭಿಪ್ರಾಯವು. ಆದರೆ ಶ್ರೀ ಯತಿವರ್ಯರವರ ಅಭಿಪ್ರಾಯವಾದರೋ ಯಾವಾಗ ಅವಿದ್ಯಾನಿವೃತ್ತಿಯುಂಟಾಯಿತೋ ಆಗ ಇಷ್ಟಪ್ರಾಪ್ತಿಯೂ ಸಿದ್ಧವು ಎಂಬ ಭಾವದಿಂದಲೇ **ಅವಿದ್ಯಾನಿವೃತ್ತಿರೇವ ಮೋಕ್ಷಃ** ಎಂದು ಹೇಳಿರುವರು. ಆ ಪ್ರಕರಣವೇ ಬೇರೆ, ಈ ಪ್ರಕರಣವೇ ಬೇರೆ. **"ಯಾಗತಿರ್ಯಜ್ಞಶೀಲಾನಾಂ"** ಎಂಬಲ್ಲಿ ಯಜ್ಞಶೀಲರಿಗೆ ಯಾವ ಗತಿಯೋ ಅಂತಹ ಗತಿಯು ಉಂಟಾಗಲಿ ಎಂದು ಜಟಾಯುವಿಗೆ ಔರ್ಧ್ವದೇಹಿಕಕ್ರಿಯೆಯನ್ನು ಮಾಡಿ ಪ್ರಾರ್ಥಿಸಿದ ಶ್ರೀರಾಮ ವಾಕ್ಯಕ್ಕೂ, **"ನಾಹಂವೇದೈರ್ನ ತಪಸಾ**

## ವಾಕ್ಯತ್ರಯಪಕ್ಷೇ ತೃತೀಯ ಯೋಜನಾ

**(ಅ). ಇಷ್ಟಪುರುಷಾರ್ಥ ಪ್ರಾರ್ಥನೈ ಇಚ್ಛಾಮಾತ್ರಮಾಯಿರುಕ್ಕೈ ಯನ್ರಿಕ್ಕೆ ಗೋಪ್ತೃತ್ವವರಣರೂಪೈಯಾಗೈಯಾಲೇ ಶೇಷ ಮುಪಲಕ್ಷಿತ ಮಾಗ ವುಮಾಮ್. ಅಪ್ಪೋದು ತಿರುಮನ್ತ್ರಮ್ ಸ್ವರೂಪೋಪಾಯ ಪ್ರಧಾನ**

---

ನದಾನೇನನ ಚೇಜ್ಯಯಾ" ಎಂಬ ಶ್ರೀ ಕೃಷ್ಣೋಕ್ತಿಗೂ ಹೇಗೆ ವಿರೋಧ ವಿಲ್ಲವೋ ಹಾಗೆಯೇ, ಶ್ರೀ ದೇಶಿಕವರ್ಯರ ಮತ್ತು ಶ್ರೀ ಯತಿವರ್ಯರುಗಳ ಅಭಿ ಪ್ರಾಯಗಳಿಗೇನೂ ವ್ಯತ್ಯಾಸವಿಲ್ಲವೆಂದು ಭಾವಿಸತಕ್ಕದ್ದು.

**ಮೂರು ವಾಕ್ಯವೆಂಬ ಭಾವನೆಯಲ್ಲಿ ಮೂರನೆಯ ಯೋಜನೆಯು**

ಹಿಂದಿನ ಯೋಜನೆಯಲ್ಲಿ ಪ್ರಥಮ ಪದವು ಸ್ವರೂಪ ಪರವಾಗಿಯೂ, ಎರಡನೆಯ ಮೂರನೆಯ ಪದಗಳು ಪುರುಷಾರ್ಥಪರವಾಗಿಯೂ ಅನ್ವಯಿಸಿ, ಇವು ಶಾಬ್ದವಾಗಿ ತೋರಿಬರುತ್ತವೆಂದು ಹೇಳಿ, ಉಪಾಯವು ಹೇಳಲ್ಪಡಲಿಲ್ಲವಲ್ಲಾ ಎಂದರೆ ಆರ್ಥವಾಗಿ ತೋರಿಬರುತ್ತದೆಂದು ಹೇಳಿ ಮುಗಿಸಿದರು. ಈ ತೃತೀಯ ಯೋಜನೆಯಲ್ಲಿ ಪ್ರಥಮ ಪದವು ಯಥಾ ಪ್ರಕಾರ ಸ್ವರೂಪ ಪರವೆಂದೂ, ದ್ವಿತೀಯ ತೃತೀಯ ಪದಗಳು ಉಪಾಯ ಪರವೆಂದೂ, ಮುಖ್ಯವಾಗಿ ಗೋಪ್ತೃತ್ವ ವರಣರೂಪವಾದುದೆಂದೂ ಹೇಳುತ್ತಾರೆ. ಆದರೆ ಇತರ ಅಙ್ಗಗಳೂ ಅಙ್ಗಿಯಾದ ಆತ್ಮನಿಕ್ಷೇಪವೂ ಹೇಳಲ್ಪಡಬೇಡವೇ ಎಂದರೆ ಅವುಗಳನ್ನು ಉಪಲಕ್ಷಣ ರೂಪದಲ್ಲಿ ಗ್ರಹಿಸಬಹುದೆಂದು ಉಪಪಾದಿಸುತ್ತಾರೆ.—

**ಇಷ್ಟಪುರುಷಾರ್ಥಪ್ರಾರ್ಥನೈ** – ಹಿಂದಿನ ಯೋಜನೆಯಲ್ಲಿ ದ್ವಿತೀಯ ತೃತೀಯ ಪದಗಳಿಂದ ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿರೂಪ ಪ್ರಾರ್ಥನೆಯು **ಇಚ್ಛಾಮಾತ್ರಮಾಯಿರುಕ್ಕೈ ಯನ್ರಿಕ್ಕೈ** - ಪ್ರಾರ್ಥನೆಯ ರೂಪವಾಗಿ ಮಾತ್ರವೇ ಅಲ್ಲದೇ, **ಗೋಪ್ತೃತ್ವ ವರಣರೂಪೈ ಯಾಗೈಯಾಲೇ** - ರಕ್ಷಿಸು ಎಂಬದಾಗಿ ಆತನನ್ನು ವರಿಸುವ ರೂಪವಾದುದೂ ಆದುದರಿಂದ, **ಶೇಷಮ್** - ಶರಣಾಗತಿಯ ಮಿಕ್ಕ ನಾಲ್ಕು ಅಙ್ಗಗಳೂ ಅಙ್ಗಿಯಾದ ಆತ್ಮ ನಿಕ್ಷೇಪವೂ ಸಹ, **ಉಪಲಕ್ಷಿತಮಾಗವುಮಾಯ್** - ಗೋಪ್ತೃತ್ವವರಣವನ್ನು ಹೇಳಿರುವದು ಇವುಗಳಿಗೆಲ್ಲಾ ಉಪಲಕ್ಷಣವಾಗಿ ಹೇಳಲ್ಪಟ್ಟಿತೆಂದು ಭಾವಿಸಬಹುದು. **ಅಪ್ಪೋದು** - ಹೀಗೆ ದ್ವಿತೀಯ ತೃತೀಯ ಪದಗಳು ಗೋಪ್ತೃತ್ವವರಣವನ್ನು ಬೋಧಿಸಿದವೆಂದು ಭಾವಿಸಿದರೆ ಆಗ, **ತಿರುಮನ್ತ್ರಮ್** - ಮೂಲಮನ್ತ್ರವು, **ಸ್ವರೂಪೋಪಾಯ ಪ್ರಧಾನ ಮಾಯಿರುಕ್ಕುಮ್** - ಸ್ವರೂಪವನ್ನೂ, ಉಪಾಯವನ್ನೂ ಸಹ ಮುಖ್ಯವಾಗಿ ಬೋಧಿಸುವಂತಾದ್ದಾಗಿ ಇರುವದು. ಈ ದ್ವಿತೀಯ ತೃತೀಯ ಪದಗಳಿಂದ ಗೋಪ್ತೃತ್ವ ವರಣ ಬೋಧವು ಹೇಗೆ ಎಂದರೆ, **ನಾರಾಯಣಾಯ** ಎಂಬಲ್ಲಿರುವ ಶಬ್ದದಲ್ಲಿ, **ನರಮತೀತಿನರಃ** ಐಹಿಕದಲ್ಲಿ ರಮಿಸದೇ ಇರುವ ಪ್ರಪನ್ನನು ನರಶಬ್ದ

**ವಾಯಿರುಕ್ಕುನ್ . ಅಯನ ಶಬ್ದತ್ತಿಲ್ ಕರಣವ್ಯುತ್ಪತ್ತಿಯಾಲೇ ಈಶ್ವರನುಡೈಯ ಉಪಾಯತ್ವಮುಮ್ ಸಿದ್ಧಿಕ್ಕುಮ್.**

---

ದಿಂದ ಹೇಳಲ್ಪಟ್ಟನು ; ಅವರುಗಳ ಸಮೂಹವು **ನಾರವು**; ಇಂತಹ ನಾರಾಣಾಂ-ಪ್ರಪನ್ನರಿಗೆ, **ಅಯನಂ** - ಪ್ರಾಪಕನು. **ಈಯತೇ ಅನೇನ** ಎಂಬ ಕರಣ ವ್ಯುತ್ಪತ್ತಿಯಿಂದ ಪ್ರಾಪಕನೆಂಬ ಅರ್ಥವು ಶಾಬ್ದವಾಗಿ ಉಂಟಾಗುತ್ತದೆ. ಆದುದರಿಂದ **ನಮಃನಾರಾಯಣಾಯ** ಎಂಬ ದ್ವಿತೀಯ ತೃತೀಯ ಎರಡು ಪದಗಳಿಂದಲೂ ಶಾಬ್ದವಾಗಿ "ನನಗೆ ಅನಿಷ್ಟ ನಿವೃತ್ತಿಯಾಗಬೇಕು, ಪ್ರಪನ್ನರಿಗೆ ಪ್ರಾಪಕನಾದ ಸಿದ್ಧೋಪಾಯನಿಗೆ ನಾನು ನಿತ್ಯ ಕೈಙ್ಕರ್ಯವನ್ನು ಮಾಡಬೇಕು" ಎಂಬೀ ಯೋಜನೆಯಿಂದ ಗೋಪ್ತೃತ್ವವರಣವು ಎಂದರೆ ಅನಿಷ್ಟ ನಿವೃತ್ತಿಯನ್ನುಂಟುಮಾಡಿ ನನ್ನನ್ನು ರಕ್ಷಿಸು ಎಂಬ ಪ್ರಾರ್ಥನೆಯು ತೋರಿಬರುತ್ತದೆಂಬ ಭಾವನೆಯು. **"ಗೋಪಾಯಿತಾ ಭವೇತ್ಯೇವಂ ಗೋಪ್ತೃತ್ವ ವರಣಂ ಸ್ಮೃತಃ"** ಎಂಬಲ್ಲಿ ಹೇಳಿರುವ ಹಾಗೆ ನನಗೆ ರಕ್ಷಕನಾಗು ಎಂಬ ಪ್ರಾರ್ಥನೆಯು ವ್ಯಕ್ತವು.

ಉಪಾಯಪರವಾಗಿ ಅರ್ಥ ಹೇಳಿದರೆ ಸಾಧ್ಯೋಪಾಯವೂ ಸಿದ್ಧೋಪಾಯವೂ ಎರಡೂ ಹೇಳಲ್ಪಡಬೇಕಲ್ಲವೇ ? ಎಂದರೆ ದ್ವಿತೀಯ ಪದವು ಸಾಧ್ಯೋಪಾಯಪರವೆಂದು ಹಿಂದೆಯೇ ಹೇಳಲ್ಪಟ್ಟಿತು. **ನಮಃ** ಎಂಬುದನ್ನು **ಮಮನ** ಎಂಬ ವಾಕ್ಯವಾಗಿ ಅನ್ವಯಿಸಿದರೆ, ಅವಿದ್ಯಾ ಸಂಬಂಧವು ನನಗೆ ಹೇಗೆ ಇಲ್ಲದಿರಬೇಕೋ ಹಾಗೆ ನನ್ನನ್ನು ಪ್ರವರ್ತಿಸುವ ಹಾಗೆ ಮಾಡು; ಎಂಬುದರಿಂದ ಭರಸಮರ್ಪಣೆ ಮಾಡಿ ರಕ್ಷಣೆಯನ್ನು ಅಪೇಕ್ಷಿಸಿದಂತಾಗುತ್ತದೆಂಬ ಭಾವವು. ಪ್ರಣವದಲ್ಲಿ ಸ್ವರೂಪವು ಶಾಬ್ದವು, ಅಕಾರ ವಾಚ್ಯನಾದ ಶ್ರಿಯಃಪತಿಗೆ, ಮಕಾರವಾಚ್ಯನಾದ ನಾನು ಶೇಷಭೂತನು. ನಾರಾಯಣಾಯ ಎಂಬಲ್ಲಿ **ಈಶ್ವರನುಡೈಯ ಉಪಾಯತ್ವವು ಸಿದ್ಧಿಕ್ಕುಮ್** ಎಂದು ಸಿದ್ಧೋಪಾಯತ್ವವು ಹೇಳಲ್ಪಟ್ಟಿತು. ತೃತೀಯಪದವು ಸಿದ್ಧೋಪಾಯಪರವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ :—**ಅಯನ ಶಬ್ದತ್ತಿಲ್**-ನಾರಾಯಣ ಶಬ್ದದಲ್ಲಿರುವ ಅಯನ ಶಬ್ದದಲ್ಲಿ, **ಕರಣವ್ಯುತ್ಪತ್ತಿಯಾಲೇ**-**ಈಯತೇ ಅನೇನ** ಎಂಬ ತೃತೀಯಾರ್ಥವುಳ್ಳ ವ್ಯುತ್ಪತ್ತಿಯಿಂದ, **ಈಶ್ವರನುಡೈಯ ಉಪಾಯತ್ವಮುಮ್** - **"ಕೃಷ್ಣಂ ಧರ್ಮಂ ಸನಾತನಮ್"** ಎಂಬಲ್ಲಿ ಹೇಳಿರುವ ಸರ್ವೇಶ್ವರನ ಸಿದ್ಧೋಪಾಯತ್ವವೂ ಕೂಡ, **ಸಿದ್ಧಿಕ್ಕುಮ್** – ಸಿದ್ಧಿಸುತ್ತದೆ. **ಈಶ್ವರನುಡೈಯ ಉಪಾಯತ್ವಮುಮ್** ಎಂಬಲ್ಲಿ **ಚ** ಅಥವಾ **ಅಪಿ** ಶಬ್ದಾರ್ಥವು ತೋರಿಬರುವದರಿಂದ, ಸಿದ್ಧೋಪಾಯತ್ವವೂ ಕೂಡ ಸಿದ್ಧಿಸುತ್ತದೆ, ಎಂದರೆ ಸಾಧ್ಯೋಪಾಯವೂ ಕೂಡ ಅಯನ ಶಬ್ದದಲ್ಲೇ ತೋರಿಬರುತ್ತದೆಂಬುದು ಅರ್ಥವಾಗಿ ತೋರುತ್ತದೆ. ಸಾಧ್ಯೋಪಾಯಾಭಿಪ್ರಾಯವು ಹೇಗೆಂದರೆ ? ಕರ್ಮಣಿ ವ್ಯುತ್ಪತ್ತಿಯಿಂದ, **ಈಯತೇ ಇತ್ಯಯನಂ** ಎಂಬಾಗುವದರಿಂದ ಪ್ರಾಪ್ಯನೆಂಬರ್ಥ

## ವಾಕ್ಯತ್ರಯಪಕ್ಷೇ ತುರೀಯ ಯೋಜನಾ.

(೯). **ಕೇಚಿತ್ತು ಚರಮಶ್ಲೋಕೇ ದ್ವಯೇ ಚೋಕ್ತಕ್ರಮಾ ದಿಹ ।**
**ಭರನ್ಯಾಸಪರಂ ತಾರಂ ಶೇಷಂ ಫಲಪರಂ ವಿದುಃ ॥ ೮೮ ॥**

---

ಬರುವದರಿಂದ, ಅಂತಹ ಪ್ರಾಪ್ಯವು ಸಾಧ್ಯೋಪಾಯ ಮೂಲಕವೇಯಾದುದರಿಂದ ಸಾಧ್ಯೋಪಾಯವೂ ಆರ್ಥವಾಗಿ ತೋರಿಬರುತ್ತದೆ. ಹೀಗೆ ಸಾಧ್ಯೋಪಾಯವನ್ನು ಎರಡನೆಯ ಪದದಲ್ಲಿ ಶಾಬ್ದವಾಗಿಯೂ, ಮೂರನೆಯ ಪದದಲ್ಲಿ ಆರ್ಥವಾಗಿಯೂ ಕಾಣಬಹುದು. ಆದುದರಿಂದಲೇ **ತಿರುಮನ್ತ್ರಮ್ ಸ್ವರೂಪೋಪಾಯ ಪ್ರಧಾನ ಮಾಯಿರುಕ್ಕುಮ್** ಎಂದು ಹೇಳಲ್ಪಟ್ಟಿತು.

### ಮೂರು ವಾಕ್ಯಗಳಿಂದ ಸೇರಿದುದು ಎಂಬ ಪಕ್ಷದಲ್ಲಿ ನಾಲ್ಕನೆಯ ಯೋಜನೆಯು

ಈ ಯೋಜನೆಯಲ್ಲಿ ಪ್ರಣವವು ಭರನ್ಯಾಸಪರವೆಂದೂ, ಮಿಕ್ಕ ಎರಡು ಪದಗಳೂ ಫಲಪರವಾಗಿ, ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿಪರವೆಂದೂ ಉಪದೇಶಿಸುತ್ತಾರೆ.––

**ಅರ್ಥವು—ಕೇಚಿತ್ತು** – ಇನ್ನೂ ಕೆಲವು ಆಚಾರ್ಯರಾದರೋ, **ಚರಮಶ್ಲೋಕೇದ್ವಯೇ ಚ** - ಚರಮ ಶ್ಲೋಕದಲ್ಲೂ, ದ್ವಯಮನ್ತ್ರದಲ್ಲೂ, **ಉಕ್ತಕ್ರಮಾತ್** – ಹೇಳಿರುವ ಕ್ರಮ ಪ್ರಕಾರ, **ಇಹ** – ಮೂರು ವಾಕ್ಯವಾಗಿ ಭಾವಿಸುವ ಈ ಸಂದರ್ಭದಲ್ಲಿ, **ಕ್ರಮಾತ್** - ಕ್ರಮವಾಗಿ, **ತಾರಂ** - ಪ್ರಣವವು, **ಭರನ್ಯಾಸಪರಂ** - ಉಪಾಯಾನುಷ್ಠಾನವಾದ ಭರನ್ಯಾಸವನ್ನು ಕುರಿತದ್ದು, **ಶೇಷಃ** - ಮಿಕ್ಕ **ನಮಃ ನಾರಾಯಣಾಯ** ಎಂಬಿವು, **ಫಲಪರಂ** – ಅನಿಷ್ಟ ನಿವೃತ್ತಿ, ಇಷ್ಟಪ್ರಾಪ್ತಿರೂಪವಾದ ಫಲವನ್ನು ಕುರಿತವು. **ಪ್ರಣವವು** ಭರನ್ಯಾಸಪರವು ಹೇಗೆಂದರೆ. **ಅಕಾರಾರ್ಥಾಯೈವ** – ಜಗತ್ಕಾರಣನಾಗಿ ಶ್ರಿಯಃಪತಿಯಾಗಿ ಶೇಷಿಯಾಗಿರುವ ವಿಷ್ಣುವಿಗೇನೇ, ಮಕಾರವಾಚ್ಯನಾದ ನಾನು ; ಎಂದರೆ **ಸ್ವಭರತ್ವೇನ ಸಮರ್ಪಿತಃ** – ಸಮರ್ಪಿಸಲ್ಪಟ್ಟಿರುವೆನು ಎಂಬ ಭಾವವು ; ಹೀಗೆ ಅರ್ಥಮಾಡಿದರೆ ಭರನ್ಯಾಸಪರವೆಂಬ ಭಾವವು.

**ಮುಂದೆ ಸರ್ವೋತ್ಕೃಷ್ಟವಾದ ಐದನೆಯ ಯೋಜನೆಯನ್ನು ತಿಳಿಸುತ್ತಾರೆ.**

ಒಂದು ವಾಕ್ಯಭಾವನೆಯಿಂದ ಎರಡರ್ಥವೂ, ಎರಡು ವಾಕ್ಯಭಾವನೆಯಿಂದ ಮೂರು ಅರ್ಥವೂ, ಹಿಂದೆ ಹೇಳಲ್ಪಟ್ಟು, ಮೂರು ವಾಕ್ಯಭಾವನೆಯಿಂದ ಇದುವರೆಗೂ ನಾಲ್ಕು ಅರ್ಥಗಳನ್ನು ಹೇಳಿ, ಮುಂದೆ ಐದನೆಯ ಯೋಜನೆಯನ್ನು ತಿಳಿಸಿ, ಹೀಗೆ ಎಲ್ಲಾ ಒಟ್ಟು ಹತ್ತು ಅರ್ಥಗಳು ತೋರಿಬರುತ್ತವೆಂದು ಮುಗಿಸುತ್ತಾರೆ— ಈ ಕೊನೆಯ ಯೋಜನೆಯು ಹಿಂದೆ ಹೇಳಿದ ಯೋಜನೆಗಳಿಗಿಂತಲೂ ವಿಲಕ್ಷಣ

**ಅಥ ವಾಕ್ಯತ್ರಯಪಕ್ಷೇ ಸರ್ವಶೇಷ ಪಂಚಮಯೋಜನಾಮಾಹ.**

---

**(೧೦) ಇತ್ತಿರುಮನ್ತ್ರತ್ತಿಲ್ ಸ್ವರೂಪೋಪಾಯ ಪುರುಷಾರ್ಥಙ್ಗಳ್ ಮೂನ್ರುಮ್ ಅಡೈವೆ ಶಾಬ್ದಮಾಪ್ಪೋದು, ಪ್ರಣವಮ್ ಸ್ವರೂಪಪರಮ್, ನಮಸ್ಸ**

---

ವಾದುದು.ಹೇಗೆಂದರೆ ? ಹಿಂದಿನ ಯೋಜನೆಗಳಲ್ಲಿ ಸ್ವರೂಪ, ಉಪಾಯ, ಪುರುಷಾರ್ಥಗಳಾದ ಮೂರರಲ್ಲಿ ಕೆಲವು ಶಾಬ್ದವಾಗಿಯೂ ಕೆಲವು ಆರ್ಥವಾಗಿಯೂ ಉಪಪಾದಿತವು. ಈ ಎಲ್ಲಾ ವೇದಾನ್ತ ಶಾಸ್ತ್ರಗಳಲ್ಲೂ ಉಪಪಾದಿತವಾಗಿರುವದು ಈ ಮೇಲೆ ಹೇಳಿದ ತತ್ವಹಿತ ಪುರುಷಾರ್ಥಗಳು. ಇವು ಮೂರೂ ಶಾಬ್ದವಾಗಿ ಈ ಮೂರೂ ಪದಗಳಲ್ಲೂ ತೋರಿಬರುವದರಿಂದ ಈ **ಯೋಜನೆಯು** ಅವೆಲ್ಲಕ್ಕಿಂತ ಮೇಲಾದುದು. **ಸರ್ವವೇದಾಂತ** ಪ್ರತಿಪಾದಿತಾರ್ಥಗಳಿಗೂ ಈ ಯೋಜನೆಗೂ ಐಕಕಂಠ್ಯವು ದೊರೆಯುವದರಿಂದ, ತಮಗೆ ತುಂಬಾ ಅಭಿಮತವಾದುದೆಂಬ ಭಾವನೆಯಿಂದ ಆ ಐಕಕಂಠ್ಯವನ್ನೂ ಮುಂದೆ ಉಪಪಾದಿಸಿ ಹೇಳುತ್ತಾರೆ.— **ಇತ್ತಿರುಮನ್ತ್ರತ್ತಿಲ್** - ಈ ಮೂಲಮನ್ತ್ರದಲ್ಲಿ, **ಸ್ವರೂಪ, ಉಪಾಯ, ಪುರುಷಾರ್ಥಗಳು.** ಮೂನ್ರುಮ್ **ಅಡೈವೆ** – ಈ ಮೂರನ್ನು ಹೊಂದುವದು ಎಂದರೆ ಮೂರರ ಪರವಾಗಿ ಬೋಧನೆಯು, **ಶಾಬ್ದಮಾವ್ಪೋದು** - ಹಿಂದಿನ ಯೋಜನೆಗಳ ಹಾಗಲ್ಲದೆ ಮೂರೂ ಶಾಬ್ದವಾಗಿ ಅರ್ಥ ಹೇಳಿದಾಗ, **ಪ್ರಣವವು, ಸ್ವರೂಪಪರಮ್**-ಶೇಷಿತ್ವವನ್ನೂ ಜೀವನಾದ ತನ್ನ ಶೇಷರೂಪತ್ವವನ್ನೂ ಬೋಧಿಸುತ್ತದೆ; **ನಮಸ್ಸು, ಉಪಾಯಪರಮ್** - ಉಪಾಯವನ್ನು ತಿಳಿಸುತ್ತದೆ; **ಶೇಷಮ್** - ಮಿಕ್ಕಿದ್ದು ಎಂದರೆ ಮೂರನೆಯ ಪದವಾದ **ನಾರಾಯಣಾಯ** ಎಂಬುದು, **ಪುರುಷಾರ್ಥಪ್ರಾರ್ಥನಾ ಪರಮ್** - ಪುರುಷಾರ್ಥವಾದ ಮೋಕ್ಷದೆಶೆಯಲ್ಲಿ ನಿತ್ಯಕೈಂಕರ್ಯವನ್ನು ಬೋಧಿಸುವಂತಹದ್ದಾಗಿರುತ್ತದೆ. ಪ್ರಣವದಿಂದ, ಮಕಾರವಾಚ್ಯೋಹಂ **ಅಯ್ಯೈವ** – ಅಕಾರವಾಚ್ಯನಾದ ವಿಷ್ಣುವಿಗೇನೇ ವಿನಾ ಇತರರಿಗಲ್ಲವು ಎಂಬುದರಿಂದ, ಚೇತನನ ಸ್ವರೂಪವಾದ ಅನನ್ಯಾರ್ಹ ಶೇಷತ್ವವು ಬೋಧಿತವು. ಅಹಿರ್ಬುಧ್ನ್ಯ ಸಂಹಿತಾವಾಕ್ಯದ ಮೂಲಕ ಹಿಂದೆ ಉಪಪಾದಿಸಿದ ರೀತಿಯಲ್ಲಿ, **ನಮಃ** ಎಂಬ ಉಕ್ತಿ**ಪೂರ್ವ**ಕವಾಗಿ ಪ್ರಣಾಮರೂಪ ಶರಣಾಗತಿಯು ಹೇಳಲ್ಪಟ್ಟಿತು; ಅಥವಾ ಸೂಕ್ಷ್ಮ ಯೋಜನೆಯಲ್ಲಿ ಸಖಂಡ ಸಮಸ್ತವಾಗಿ ಭಾವಿಸಿ, **ನಮಃ** ಎಂದರೆ ಮಃ ನ, ಮಮನ ಎಂದಾಗುವದರಿಂದ ಅಹಂ ಮಮ**ನ, ಮದ್ರಕ್ಷಣ ಭರೋಪಿ** ಮಮನ, **ಫಲಮಪಿ** ಮಮನ - ನಾನು ನನ್ನವನಲ್ಲವು ಎಂದರೆ ಸ್ವತಂತ್ರವು ನನ್ನದಲ್ಲವು. ನನ್ನ ರಕ್ಷಣದಲ್ಲೂ ನನಗೆ ಶಕ್ತಿಯಿಲ್ಲವು, ಫಲವೂ ನನ್ನದಲ್ಲವು; “**ಅಹಂ ಮದ್ರಕ್ಷಣ ಭರೋ ಮದ್ರಕ್ಷಣ ಫಲಂತಥಾ । ನಮಮ ಶ್ರೀಪತೇರೇವೇತ್ಯಾತ್ಮಾನಂ ನಿಕ್ಷಿಪೇದ್ಬುಧಃ**” (ನ್ಯಾಸದಶಕ) ಈ ಸಮಸ್ತ

**ಉಪಾಯ ಪರಮ್, ಶೇಷಮ್ ಪುರುಷಾರ್ಥ ಪ್ರಾರ್ಥನಾಪರಮ್. ಇಮ್ಮೂನ್ರಿಲ್ ನಿರಿವೆಲ್ಲಾಮ್ ಅಧ್ಯಾತ್ಮಶಾಸ್ತ್ರಙ್ಗಳೈ ಕ್ಕೊಣ್ಡು ತೆಳಿನ್ದು ಇಙ್ಗೇ ಅನುಸಂಧೇಯಮ್.**

---

ಭರವೂ ಶ್ರಿಯಃಪತಿಗೆ ಸೇರಿದುದೇ ಎಂಬ ಆತ್ಮ ನಿಕ್ಷೇಪ ಶರಣಾಗತಿಯಾಗಿ ನಮಃ ಎಂಬ ಶಬ್ದವು ಉಪಾಯಪರವಾಗುತ್ತದೆ ; ಅಥವಾ ವಿಸರ್ಗವು ಪರಮಾತ್ಮನನ್ನು ಬೋಧಿಸುವ, ಮಃ - ಮಹತ್ತಾದ ಪ್ರಧಾನವಾದ ಸಿದ್ಧೋಪಾಯನು, ಇನ್ನು ಯಾರು ಅಲ್ಲವು, ಇದರಿಂದ ಸಿದ್ಧೋಪಾಯವು ಹೇಳಲ್ಪಟ್ಟಿತು ; ಸಾಧ್ಯೋಪಾಯಾರ್ಥವು ಹೇಗೆಂದರೆ ? ವಿಸರ್ಗದಿಂದ ಬೋಧಿತನಾದ ಸಿದ್ಧೋಪಾಯನ ವಶೀಕರಣಾರ್ಥವಾಗಿ ಮಹತ್ತಾದ ಉಪಾಯವಾದ ಪ್ರಪತ್ತಿಯು, ಇತರೋಪಾಯವಾದ ಭಕ್ತಿಗಿಂತಲೂ **"ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತಮಾಹುಃ"** (ತೈ. ನಾ. ೪) ಎಂದು ಉಪನಿಷತ್ತಿನಲ್ಲಿ ಹೇಳಿರುವ ಹಾಗೆ ಅತಿಶಯಿತವಾದ ಉಪಾಯವೆಂಬುದೂ ತೋರಿಬರುತ್ತದೆ. ಮೂರನೆಯ ಪದವಾದ **ನಾರಾಯಣಾಯ** ಎಂಬಲ್ಲಿ **ನಾರಾಯಣಾಯಸ್ಯಾಮ್** ಎಂಬುದರಿಂದ ನಿತ್ಯಕೈಙ್ಕರ್ಯಪ್ರಾಪ್ತಿ ಪ್ರಾರ್ಥನಾರೂಪವಾದ ಪುರುಷಾರ್ಥ ಪ್ರಾರ್ಥನೆಯು ಬೋಧಿತವು. ಹೀಗೆ ಈ ಮೂರು ಪದಗಳು ಮೂರು ವಾಕ್ಯಗಳಾಗಿ ಸ್ವರೂಪ, ಉಪಾಯ, ಪುರುಷಾರ್ಥ ಪ್ರಾರ್ಥನೆಗಳನ್ನು ಬೋಧಿಸುತ್ತವೆ.

೫. ನಾಲ್ಕನೆಯ ಯೋಜನೆಯು ದ್ವಯ ಚರಮ ಶ್ಲೋಕಾರ್ಥಗಳನ್ನು ಅನುಸರಿಸಿ ಕೆಲವರು ಹೇಳಿದ ಅರ್ಥವು ಸಂಗತವಾಗಿದ್ದರೂ, ಈ ಐದನೆಯ ಯೋಜನೆಯುಸ್ವರೂಪ ಉಪಾಯ ಪುರುಷಾರ್ಥಗಳನ್ನು (ತತ್ವಹಿತ ಪುರುಷಾರ್ಥಗಳನ್ನು) ಬೋಧಿಸುವದರಿಂದ ಸರ್ವ ಸಮ್ಮತ ಯೋಜನೆಯೆಂದು ಹೇಳಿರುದು ಹೇಗೆ ? ಎಂದರೆ ಮುಂದಿನ ವಾಕ್ಯದಿಂದ ಈ ಯೋಜನೆಯು ಅಧ್ಯಾತ್ಮಶಾಸ್ತ್ರವನ್ನನುಸರಿಸಿದುದಾಗಿ, ಶಾರೀರಕ ಶಾಸ್ತ್ರದ ನಾಲ್ಕು ಅಧ್ಯಾಯದ ಕ್ರಮವನ್ನು ಅನುಸರಿಸುವದರಿಂದ ತುಂಬಾ ಗ್ರಾಹ್ಯವೆಂದು ಪ್ರತಿಜ್ಞಾ ವಾಕ್ಯವನ್ನು ಹೇಳುತ್ತಾರೆ.— **ಇಮ್ಮೂನ್ರಿಲ್** – ಈ ಸ್ವರೂಪ, ಉಪಾಯ, ಪುರುಷಾರ್ಥ ಪ್ರಾರ್ಥನೆಗಳ, **ನಿರಿವೆಲ್ಲಾಮ್** - ಉಪಪಾದನೆ ಎಲ್ಲವನ್ನೂ, **ಅಧ್ಯಾತ್ಮಶಾಸ್ತ್ರಙ್ಗಳೈ ಕೊಂಡು** – ಅಧ್ಯಾತ್ಮ ಶಾಸ್ತ್ರಗಳಾದ ಉಪನಿಷತ್ತು ಬ್ರಹ್ಮಸೂತ್ರಗಳ ಮೂಲಕ **ತೆಳಿನ್ದು** - ಗ್ರಹಿಸಿ, **ಇಙ್ಗೇ** – ಈ ಐದನೆಯ ಯೋಜನೆಯಲ್ಲಿ, **ಅನುಸಂಧೇಯಮ್** – ಅನುಸಂಧಾನ ಮಾಡತಕ್ಕದ್ದು. ಸ್ವರೂಪ, ಉಪಾಯ ಪುರುಷಾರ್ಥಗಳೇ ಕ್ರಮವಾಗಿ ಈ ಅಧ್ಯಾತ್ಮ ಶಾಸ್ತ್ರಗಳಲ್ಲಿ ಹೇಳಿರುವದು. ಇದಕ್ಕೆ ಐಕಕಂಠ್ಯವಾಗಿಯೇ ಈ ಐದನೆಯ ಯೋಜನೆಯು ಬೋಧಿಸುವದರಿಂದ ಇದು ತುಂಬ ಗ್ರಾಹ್ಯವೆಂಬ ಅಭಿಪ್ರಾಯವು.

**ಇನ್ದ ಯೋಜನೈಕ್ಕು ವೇದಾನ್ತಶಾಸ್ತ್ರತ್ತಿಲ್ ತತ್ತ್ವೋಪಾಯ ಪುರುಷಾ ರ್ಥಙ್ಗಳೈ ನಿರೂಪಿತ್ತ ಕ್ರಮತ್ತೋಡು ಶೇರ್ತ್ತಿಯುಂಡು, ಎಙ್ಗನೇ ಎನ್ನಿಲ್? ಮುದಲ್ ಇರಣ್ಡು ಅಧ್ಯಾಯತ್ತಾಲೇ ಪರಾವರ ತತ್ತ್ವಙ್ಗಳೈ ತೆಳಿವಿತ್ತು, ತೃತೀಯತ್ತಾಲೇ ಅಧಿಕಾರ ಪರಿಕರಙ್ಗಳೋಡೇ ಕೂಡಿನ ಉಪಾಯಮ್ ಶೊಲ್ಲಿ, ಚತುರ್ಥತ್ತಾಲೇ ಫಲಮ್ ಶೊಲ್ಲಿಯಿರೆ ಶಾರೀರಕ ಶಾಸ್ತ್ರಮ್ ತಲೈಕಟ್ಟಿತ್ತು.**

---

ಇದನ್ನೇ ಮುಂದಿನ ವಾಕ್ಯದ ಮೂಲಕ ಈ ಕ್ರಮವೇ ಅಧ್ಯಾತ್ಮ ಶಾಸ್ತ್ರದಲ್ಲಿ ಎಲ್ಲಿ ಹೇಳಲ್ಪಟ್ಟಿದೆ ಎಂದು ಪ್ರಶ್ನಿಸಿಕೊಂಡು ಅದಕ್ಕೆ ಉತ್ತರವನ್ನು ಹೇಳುತ್ತಾರೆ-ವ್ಯಾಸಸೂತ್ರಗಳಲ್ಲಿ ಇದೇ ಕ್ರಮವೆಂದು ಉಪಪಾದಿಸುತ್ತಾರೆ.—**ಇನ್ದ ಯೋಜನೈಕ್ಕು** ಮೂರು ವಾಕ್ಯಗಳೆಂಬ ಭಾವನೆಯಲ್ಲಿ ಈ ಐದನೆಯ ಯೋಜನೆಗೆ, **ವೇದಾನ್ತಶಾಸ್ತ್ರತ್ತಿಲ್** - ವೇದಾನ್ತ ಶಾಸ್ತ್ರದಲ್ಲಿ, **ತತ್ತ್ವೋಪಾಯ ಪುರುಷಾರ್ಥಙ್ಗಳೈ ನಿರೂಪಿತ್ತಕ್ರಮತ್ತೋಡು** - ಪರಮಾತ್ಮ ಜೀವಾತ್ಮರ ಸ್ವರೂಪಗಳನ್ನು ತಿಳಿಸಿ ಶೇಷಿ ಶೇಷಭಾವವೇನು, ಉಪಾಯವೇನು ಪುರುಷಾರ್ಥವೇನು ಇವುಗಳನ್ನು ಕ್ರಮವಾಗಿ ಉಪಪಾದಿಸಿದ ರೀತಿಯೊಂದಿಗೆ, **ಶೇರ್ತಿಯುಂಡು** - ಸಾದೃಶ್ಯವುಂಟು ಎಂದರೆ ಇವೆರಡಕ್ಕು ಐಕಕಂಠ್ಯವುಂಟು. ಇಲ್ಲಿ **ವೇದಾನ್ತಶಾಸ್ತ್ರತ್ತಿಲ್** ಎಂಬ ಪ್ರಯೋಗವಿರುವದರಿಂದ ಉಪನಿಷತ್ತುಗಳಲ್ಲೂ ಇದೇ ಕ್ರಮವೆಂಬ ಭಾವವನ್ನು ಸೂಚಿಸಿರುತ್ತಾರೆ. ಹೇಗೆಂದರೆ "**ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾಜುಷ್ಟಸ್ತತಸ್ತೇನಾಮೃತತ್ವಮೇತಿ**" ಎಂದೂ, "**ಸತ್ಯಂ ಜ್ಞಾನ ಮನಂತಂ ಬ್ರಹ್ಮ ಯೋವೇದ ನಿಹಿತಂಗುಹಾಯಾಂ ಪರಮೇವ್ಯೋಮನ್**" ಎಂದೂ, "**ಸೋಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ**" ಎಂದೂ, ಹೀಗೆಯೇ ಮೂಲ ಮನ್ತ್ರಾರ್ಥವೇ ಉಪಪಾದಿತವು. ಎಲ್ಲಾ ವೇದಾನ್ತದಲ್ಲೂ, ಶಾರೀರಕ ಸೂತ್ರದಲ್ಲೂ, ಮೂಲಮನ್ತ್ರದಲ್ಲೂ ತತ್ವಹಿತ ಪುರುಷಾರ್ಥಗಳೇ ಉಪಪಾದಿತವಾಗಿರುವದರಿಂದ ಐಕಕಂಠ್ಯವು. ಈ ಅಧ್ಯಾತ್ಮ ಶಾಸ್ತ್ರವಾದ ಬ್ರಹ್ಮಸೂತ್ರಗಳ ಕ್ರಮವನ್ನು ಪರಿಶೀಲಿಸಿದರೆ, ಅದರಲ್ಲಿ ಕ್ರಮವಾಗಿ ಹೇಳಿರುವ ಹಾಗೆ ಮೊದಲು ಪರಮಾತ್ಮ ಜೀವಾತ್ಮ ಸ್ವರೂಪವೂ, ಅನಂತರ ಉಪಾಯವೂ, ಕೊನೆಗೆ ಪುರುಷಾರ್ಥವೂ ಉಪಪಾದಿಸಲ್ಪಟ್ಟ ಕ್ರಮವೇ ಈ ಯೋಜನೆಯಲ್ಲಿ ಹೇಳಲ್ಪಟ್ಟಿರುವದರಿಂದ ಎರಡಕ್ಕೂ ಐಕಕಂಠ್ಯವೆಂದರೆ ಸಾದೃಶ್ಯವುಂಟು. **ಎಙ್ಗನೇ ಎನ್ನಿಲ್** - ಅದು ಎಲ್ಲಿ ಎಂದರೆ ? ಉಪಪಾದಿಸಿ ಹೇಳುತ್ತಾರೆ. **ಮುದಿಲ್ ಇರಣ್ಡು ಅಧ್ಯಾಯತ್ತಾಲೇ** – ಮೊದಲಿನ ಎರಡು ಅಧ್ಯಾಯಗಳಿಂದ, **ಪರಾವರ ತತ್ವಙ್ಗಳೈತೆಳಿವಿತ್ತು** - ಈಶ್ವರತತ್ವ ಜೀವತತ್ವಗಳ ಸ್ವರೂಪ ಭೇದಗಳನ್ನೂ, ಆ ತತ್ವಗಳಿಗಿರುವ ಶೇಷಿಶೇಷಾದಿ ಸಂಬಂಧಗಳನ್ನೂ ತಿಳಿಯಪಡಿಸಿ, **ತೃತೀಯತ್ತಾಲೇ** - ಮೂರನೆಯ ಅಧ್ಯಾಯದಿಂದ, **ಅಧಿಕಾರಪರಿಕರಙ್ಗಳೋಡೇ ಕೂಡಿನ** – ಅರ್ಥಿತ್ವ ಸಾಮರ್ಥ್ಯದಿಂದ ಕೂಡಿದ

ಅಧಿಕಾರವೇನು, ಅಙ್ಗಗಳೇನು ಇವುಗಳಿಂದ ಸೇರಿದ, **ಉಪಾಯಂಶೊಲ್ಲಿ** – ಮೋಕ್ಷಸಾಧನವಾದ ಉಪಾಯವನ್ನು ಹೇಳಿ, **ಚತುರ್ಥತ್ತಾಲೇ** - ನಾಲ್ಕನೆಯ ಅಧ್ಯಾಯದಿಂದ, **ಫಲಮ್** ಅಪುನರಾವೃತ್ತಿರೂಪಫಲವನ್ನು, **ಶೊಲ್ಲಿಯಿರೇ**-ಹೇಳಿ ಯಲ್ಲವೆ, **ಶಾರೀರಕಶಾಸ್ತ್ರಮ್** - ಬ್ರಹ್ಮವಿದ್ಯೆಯನ್ನು ಬೋಧಿಸುವ ಶಾಸ್ತ್ರವು, **ತಲೈಕಟ್ಟಿತ್ತು** - ನಿಗಮನ ಮಾಡಿ ಸ್ಥಿರೀಕರಿಸಿತು. ಮೂಲಮನ್ತ್ರದಲ್ಲಿ ಮೂರು ಪದಗಳಿವೆ. ಶಾರೀರಕ ಶಾಸ್ತ್ರವಾದ ವ್ಯಾಸಸೂತ್ರಗಳಲ್ಲಿ ನಾಲ್ಕು ಅಧ್ಯಾಯಗಳಿವೆ. ಹೀಗಿರುವಾಗ ಅವುಗಳಿಗೆ ಸಾಮ್ಯವು ಹೇಗೆ ? ಎಂದರೆ ಪ್ರಣವದಲ್ಲಿ ಪರತತ್ವ ಜೀವಾತ್ಮ ಸ್ವರೂಪಗಳೆರಡೂ ಬೋಧಿತವಾಗುವದರಿಂದ ಪರತತ್ವ ಜೀವಾತ್ಮ ಸ್ವರೂಪಗಳುಶಾರೀರಕ ಶಾಸ್ತ್ರದಲ್ಲಿ ಹಾಗೆಯೇ ಮೊದಲಿನ ಎರಡು ಅಧ್ಯಾಯಗಳಲ್ಲಿ ಉಪಪಾದಿತವಾಗಿರುವದರಿಂದ ಇವೆರಡಕ್ಕೂ ಸಾಮ್ಯವು ಸಿದ್ಧವು ಎಂಬ ತಾತ್ಪರ್ಯವು. ಈ ಅಧ್ಯಾತ್ಮ ಶಾಸ್ತ್ರವು ಶಾರೀರಕ ಶಾಸ್ತ್ರವೆಂದು ಏಕೆ ಹೇಳಲ್ಪಟ್ಟಿರುತ್ತದೆಂದರೆ ? ಅನಾದಿಯಾಗಿ ನಿತ್ಯವಾಗಿರುವುವು **"ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ"** (ಶ್ವೇತಾ ೧.೧.೨) ಎಂಬಲ್ಲಿ ಹೇಳಿರುವ ಹಾಗೆ ಚಿತ್ ಅಚಿತ್ ಈಶ್ವರರೆಂಬ ಮೂರು ತತ್ವಗಳು ; ಈಶ್ವರನು ಚಿದಚಿತ್ತುಗಳನ್ನು ವ್ಯಾಪಿಸಿ ಅವುಗಳಿಗೆ ಆತ್ಮಾವಾಗಿ ಮಿಕ್ಕೆರಡೂ ಅವನಿಗೆ ಶೇಷಭೂತವಾಗಿ ಹೀಗೆ ಶರೀರಿ ಶರೀರ (ಶೇಷಿ ಶೇಷ) ಭಾವವು ಈ ಅಧ್ಯಾತ್ಮ ಶಾಸ್ತ್ರದಲ್ಲಿ ಸ್ಫುಟವಾಗಿ ಬೋಧಿತವಾದುದರಿಂದ ಇದಕ್ಕೆ ಶಾರೀರಕ ಶಾಸ್ತ್ರವೆಂದೂ ಶಾರೀರಕ ಸೂತ್ರಗಳೆಂದೂ ಹೆಸರು. ಉತ್ತರ ಮೀಮಾಂಸಾ ಶಾಸ್ತ್ರವೆಂದೂ ಕರೆಯುವರು. ಇದರಲ್ಲಿ ನಾಲ್ಕು ಅಧ್ಯಾಯಗಳೂ, ಒಂದೊಂದು ಅಧ್ಯಾಯದಲ್ಲಿ ನಾಲ್ಕು ಪಾದಗಳಿವೆ. ಮೊದಲನೆಯ ಅಧ್ಯಾಯದ ಪ್ರಥಮ ಪಾದದಲ್ಲಿ ಸ್ಥಾಪಿತವಾಗಿರುವದು, ಸರ್ವೇಶ್ವರನಿಗೆ ಬ್ರಹ್ಮಾದಿ ಶಬ್ದವಾಚ್ಯತ್ವವೂ ನಿಖಿಲಜಗದೇಕ ಕಾರಣತ್ವವೂ, ಪ್ರತ್ಯಕ್ಷಾನುಮಾನ ಪ್ರಮಾಣಗಳಿಗಲ್ಲದೆ ಶಾಸ್ತ್ರ ಮೂಲಕವಾಗಿಯೇ ಗೋಚರತ್ವವೂ, ಪರಮ ಪುರುಷಾರ್ಥ ರೂಪತ್ವವೂ, ಅಚಿತ್ತಿಗಿಂತ ವಿಲಕ್ಷಣತ್ವವೂ, ಅನವಧಿಕಾತಿಶಯಾನಂದಮಯನಾದುದರಿಂದ ಸಮಸ್ತರಾದ ಇತರ ಚೇತನ ವರ್ಗಕ್ಕಿಂತಲೂ ವಿಲಕ್ಷಣತ್ವವೂ, ಅಪ್ರಾಕೃತ ದಿವ್ಯ ಮಙ್ಗಳ ವಿಗ್ರಹಯುಕ್ತತೆಯೂ, ಹೀಗೆ ಆಕಾಶ, ಪ್ರಾಣ, ಜ್ಯೋತಿಸ್ಸು, ಇಂದ್ರ, ಇವೇ ಮೊದಲಾದ ಪದಗಳಿಂದ ಉಪನಿಷತ್ತುಗಳಲ್ಲಿ ಹೇಳಿರುವುದು, ಪರಮಾತ್ಮನನ್ನೇ ವಿನಾ ಜೀವವರ್ಗವನ್ನು ಕುರಿತು ಅಲ್ಲವೆಂಬುದು. ದ್ವಿತೀಯ ಪಾದದಲ್ಲಿ ಉಪನಿಷತ್ತುಗಳ ಅಸ್ಪಷ್ಟ ಜೀವಾದಿ ವಾಕ್ಯಗಳಿಗೂ, ಮೂರನೆಯ ಪಾದದಲ್ಲಿ ಸ್ಪಷ್ಟವಾಗಿ ತೋರುವ ಜೀವಾದಿ ವಾಕ್ಯಗಳಿಗೂ, ನಾಲ್ಕನೆಯ ಪಾದದಲ್ಲಿ ಸ್ಪಷ್ಟತರ ಜೀವಾದಿ ಲಿಙ್ಗವಾಕ್ಯಗಳಿಗೂ ಪರಮ ಕಾರಣತ್ವವು ಸ್ಥಾಪಿಸಲ್ಪಡುತ್ತದೆ. ಎರಡನೆಯ ಅಧ್ಯಾಯದಲ್ಲಿ, ಈ ಅಭಿಪ್ರಾಯಕ್ಕೆ ಕಪಿಲ, ಸಾಂಖ್ಯಾದಿಗಳ ಸಿದ್ಧಾನ್ತದಿಂದ ಮೊದಲನೆಯ ಅಧ್ಯಾಯದಲ್ಲಿ ಸ್ಥಾಪಿಸಲ್ಪಟ್ಟ ಜಗತ್ಕಾರಣತ್ವಾದಿಗಳಿಗೇನೂ

ವಿರೋಧವಿಲ್ಲವೆಂದು ತೋರಿಸಿ, ಅವುಗಳೆಲ್ಲಾ ಅಪಸಿದ್ಧಾನ್ತಗಳೆಂದು ದೂರೀಕರಿಸಿ, ಅಚಿತ್ತು ನಿತ್ಯವಾದರೂ ಸ್ವರೂಪ ಸ್ವಭಾವ ಪರಿಣಾಮುಗಳುಳ್ಳದೆಂದೂ, ಚಿತ್ತೂ ನಿತ್ಯವಾಗಿ ಸ್ವರೂಪವಿಕಾರವಿಲ್ಲದೆ ಸ್ವಭಾವ ವಿಕಾರ ಮಾತ್ರ ಹೊಂದಿದಾಗಿ, ಇವೆರಡಕ್ಕೂ ಆತ್ಮಾವಾಗಿ ನಿಯಾಮಕನಾಗಿ ಪರಬ್ರಹ್ಮವಾದುದರಿಂದ ಪರಮಾತ್ಮನೇ ಸರ್ವ ಜಗತ್ಕಾರಣನೆಂದು ಸ್ಥಾಪಿಸಲ್ಪಟ್ಟಿದೆ. ಹೀಗೆ ಎರಡು ಅಧ್ಯಾಯಗಳಿಂದಲೂ ಚಿದಚಿದೀಶ್ವರ ತತ್ವಗಳ ಸ್ವರೂಪ ಸ್ವಭಾವಗಳು ಬೋಧಿತಗಳಾಗಿ ಪರಮಾತ್ಮನಿಗೂ ಚಿದಚಿತ್ತುಗಳಗೂ ಇರುವ ಶೇಷಿಶೇಷಭಾವವು ವ್ಯಕ್ತಪಡುವದರಿಂದ ಪ್ರಣವಾರ್ಥವು ಇವೆರಡು ಅಧ್ಯಾಯಗಳಿಂದ ಬೋಧಿತವು. ಮೂರನೆಯ ಅಧ್ಯಾಯದಲ್ಲಿ ಪ್ರಥಮ ಪಾದವಾದ ವೈರಾಗ್ಯಪಾದದಲ್ಲಿ, ಈ ನಮಶ್ಶಬ್ದದಿಂದ ಬೋಧಿತವಾದ ಉಪಾಯಗಳಾದ ಭಕ್ತಿ ಪ್ರಪತ್ತಿಗಳಿಗೆ ಅಧಿಕಾರರೂಪವಾದ ವೈರಾಗ್ಯಕ್ಕಾಗಿ ಸಂಸಾರದೋಷವು ಉಪಪಾದಿಸಲ್ಪಡುತ್ತದೆ. ಎರಡನೆಯ ಉಭಯಲಿಙ್ಗಪಾದದಲ್ಲಿ ಮುಮುಕ್ಷುವಿಗೆ ಬ್ರಹ್ಮಪ್ರಾಪ್ತಿಯಲ್ಲಿ ಇಚ್ಛೆಯುಂಟಾಗುವದಕ್ಕಾಗಿ ಸರ್ವೇಶ್ವರನ ಹೇಯಪ್ರತ್ಯನೀಕತ್ವವೂ ಕಲ್ಯಾಣಗುಣಾಕರತ್ವವೂ ಉಪಪಾದಿಸಲ್ಪಡುವದರಿಂದ ಉಪಾಸ್ಯದ ಮಹಿಮೆಯು ಹೇಳಲ್ಪಡುತ್ತದೆ. ಮೂರನೆಯ ಪಾದದಲ್ಲಿ, ಅಙ್ಗರೂಪದಲ್ಲಿ ನಾನಾವಿಧ ಬ್ರಹ್ಮವಿದ್ಯಾ ಭೇದಗಳೆಲ್ಲಾ ನಿರೂಪಿಸಲ್ಪಟ್ಟಿವೆ. ನಾಲ್ಕನೆಯ ಪಾದದಲ್ಲಿ ಈ ಮೇಲಿನ ಅಧ್ಯಾಯದಲ್ಲಿ ಉಪಾಸೀತ, ಧ್ಯಾಯೀತ ಪ್ರಪದ್ಯೇತ ಇತ್ಯಾದಿ ವಾಕ್ಯಗಳಿಂದ ವಿಧಿಸಲ್ಪಟ್ಟ ಉಪಾಸನಕ್ಕೆ ಅಙ್ಗಗಳು ವರ್ಣಾಶ್ರಮ ಧರ್ಮಗಳು; ಅವುಗಳನ್ನು ಅವಶ್ಯಕವಾಗಿ ಅನುಷ್ಠಿಸತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಈ ಮೂರನೆಯ ಅಧ್ಯಾಯದ ನಾಲ್ಕು ಪಾದಗಳಿಂದಲೂ ನಮಶ್ಶಬ್ದದಲ್ಲಿ ತೋರುವ ಉಪಾಯಾನುಷ್ಠಾನ ಪ್ರಕಾರಗಳೇ ಬೋಧಿಸಲ್ಪಟ್ಟಿವೆ. ನಾಲ್ಕನೆಯ ಅಧ್ಯಾಯದಲ್ಲಿ ನಾರಾಯಣಾಯ ಎಂಬ ಮೂರನೆಯ ವಾಕ್ಯದಲ್ಲಿ ತೋರುವ ಪುರುಷಾರ್ಥವೇ ಬ್ರಹ್ಮವಿದ್ಯೆಗೆ ಫಲವಾಗಿ ಬೋಧಿಸಲ್ಪಟ್ಟಿರುತ್ತದೆ. ಹೇಗೆಂದರೆ? ಪ್ರಥಮ ಪಾದದಲ್ಲಿ ಸರ್ವಪಾಪಗಳಿಂದ ಬಿಡುಗಡೆಯೂ, ಎರಡನೆಯ ಪಾದದಲ್ಲಿ ದೇಹಾವಸಾನ ಕಾಲದಲ್ಲಿ ಸ್ಥೂಲದೇಹವು ತೊಲಗಿ ಸೂಕ್ಷ್ಮದೇಹವು ಪ್ರಾಪ್ತವಾಗಿ ಬ್ರಹ್ಮನಾಡಿಯ ಮೂಲಕ ನಿರ್ಯಾಣಕ್ರಮವೂ, ಮೂರನೆಯ ಪಾದದಲ್ಲಿ ಅರ್ಚಿರಾದಿಗಮನವೂ, ನಾಲ್ಕನೆಯ ಪಾದದಲ್ಲಿ ಪುನರಾವೃತ್ತಿಯಿಲ್ಲದೆ ಸ್ವಸ್ವರೂಪಪ್ರಾಪ್ತಿಯೊಂದಿಗೆ ಪರಿಪೂರ್ಣಬ್ರಹ್ಮಾನುಭವರೂಪದ ಮತ್ತು ಭಗವಂತನಿಗೆ ನಿತ್ಯಕೈಙ್ಕರ್ಯಮಾಡುವ, ಶ್ರೇಯಸ್ಸುಗಳ ಪ್ರಾಪ್ತಿಯೂ ಹೇಳಲ್ಪಡುವುವು; ಆದುದರಿಂದ ಈ ನಾಲ್ಕನೆಯ ಪಾದದಲ್ಲಿ ನಾರಾಯಣಾಯ ಎಂಬ ಶಬ್ದತಾತ್ಪರ್ಯವು ಬೋಧಿತವು. ಆದುದರಿಂದಲೇ ಶ್ರೀ ನಿಗಮಾನ್ತದೇಶಿಕರವರು "ವೇದಾನ್ತಶಾಸ್ತ್ರತ್ತಿಲ್ ನಿರೂಪಿತ ಕ್ರಮುತ್ತೋಡು ಶೇರ್‌ತಿಯುಂಡು" ಎಂದು ಎಂಡಕ್ಕೂ ಐಕಕಂಠ್ಯವನ್ನು ಉಪಪಾದಿಸಿದರು. ಈ

**ಅಜ್ಞ್ಗ ಮುದಿಲ್ ಇರಣ್ಡು ಅಧ್ಯಾಯತ್ತಿಲ್ಗೊನ್ನ ಪರಾವರತತ್ವಸ್ವರೂಪ**

ಮೂಲಮನ್ತ್ರದ ಉಪದೇಶ ಕ್ರಮವೂ ಶಾರೀರಕ ಶಾಸ್ತ್ರದ ಉಪದೇಶಕ್ರಮವೂ ಎರಡೂ ಒಂದೇ ಎಂದು ಪ್ರತಿಜ್ಞಾವಾಕ್ಯವನ್ನು ದಯಪಾಲಿಸಿದರು. ಅದು ಹೇಗೆ ಎಂಬುದನ್ನು ತಾವೇ ಉಪಪಾದಿಸಿ ಹೇಳುತ್ತಾರೆ.

**ಎಙ್ಙನೇ ಎನ್ನಿಲ್** – ಪ್ರತಿಜ್ಞಾವಾಕ್ಯದಲ್ಲಿ ಹೇಳಿದ ಸಾದೃಶ್ಯವು, ಐಕಕಂಠ್ಯವು ಹೇಗೆ; ಎಂದರೆ, **ಮುದಿಲ್ ಇರಣ್ಡು ಅಧ್ಯಾಯತ್ತಾಲೇ** - ಪ್ರಥಮ ದ್ವಿತೀಯ ಅಧ್ಯಾಯಗಳಿಂದ, **ಪರಾವರ ತತ್ವಙ್ಗಳೈ ತೆಳಿವಿತ್ತು** - ಪರತತ್ವವು ಸರ್ವೇಶ್ವರನು,ಕಾರಣಭೂತನಾಗಿ, ಅಂತರಾತ್ಮನಾಗಿ ನಿಯಾಮಕನಾಗಿರುವವನು; **ಅವರತತ್ವಗಳು**-ಅವನಿಂದ ನಿಯಾಮ್ಯವಾಗಿರುವ ನಿಕೃಷ್ಟತತ್ವಗಳುಚಿದಚಿತ್ತುಗಳು; ಇವುಗಳನ್ನು ತಿಳಿಯಪಡಿಸಿ ಎಂದರೆ ಇವುಗಳಿಗಿರುವ ಶೇಷಿ ಶೇಷ ಸಂಬಂಧ ಮೊದಲಾದವುಗಳನ್ನು ತಿಳಿಯಪಡಿಸಿ, **ತೃತೀಯತ್ತಾಲೇ** ಮೂರನೆಯ ಅಧ್ಯಾಯದಿಂದ, **ಅಧಿಕಾರಪರಿಕರಙ್ಗಳೋಡೇ ಕೂಡಿನ**-ತ್ರಿವರ್ಣದಿಂದ ಕೂಡಿದ;ಅರ್ಥಿತ್ವ ಸಾಮರ್ಥ್ಯಗಳಿಂದ ಕೂಡಿದ **ಅಧಿಕಾರವೇನು**, ವರ್ಣಾಶ್ರಮ ಧರ್ಮಗಳ ಅನುಷ್ಠಾನರೂಪವಾದ ಅಙ್ಗಗಳೇನು, ಇವುಗಳಿಂದ ಕೂಡಿದ, **ಉಪಾಯಮುಮ್**–ಸಾಧನಗಳಾದ ಬ್ರಹ್ಮವಿದ್ಯಾಪ್ರಭೇದಗಳನ್ನೂ, **ಶೊಲ್ಲಿ**-ಹೇಳಿ, **ಚತುರ್ಥತ್ತಾಲೇ** - ನಾಲ್ಕನೆಯ ಪಾದದಲ್ಲಿ, **ಫಲಮ್ ಶೊಲ್ಲಿಯಿರೇ**-ಅಶೇಷಪಾಪನಿವೃತ್ತಿ, ನಿರ್ಯಾಣ, ಸ್ವಸ್ವರೂಪ ಪ್ರಾಪ್ತಿ, ಪರಿಪೂರ್ಣಾನುಭವ, ಶ್ರಿಯಃಪತಿಗೆ ಮಾಡುವ ನಿತ್ಯಕೈಙ್ಕರ್ಯರೂಪ ಫಲವನ್ನು, **ಶೊಲ್ಲಿಯಿರೇ** – ಹೇಳಿಯಲ್ಲವೇ, **ಶಾರೀರಕ ಶಾಸ್ತ್ರಮ್** - ಬ್ರಹ್ಮಸೂತ್ರಗಳು, **ತಲೈಕಟ್ಟಿತ್ತು** - ನಿರ್ಧರಿಸಿ ಸಿದ್ಧಾನ್ತಿಸಿ ನಿಗಮನ ಮಾಡಲ್ಪಟ್ಟವು. ಈ ಮೂಲಮನ್ತ್ರವು, **ಪ್ರಣವ** ದಿಂದ ಪರಾವರ ತತ್ವಗಳ ಸಂಬಂಧವಾದ ಶೇಷಿ ಶೇಷರೂಪ ಸ್ವರೂಪವನ್ನೂ, **ನಮಃ** ಎಂಬುದರಿಂದ ಉಪಾಯಾನುಷ್ಠಾನದ ಪ್ರಾರ್ಥನೆಯನ್ನೂ, **ನಾರಾಯಣಾಯ** ಎಂಬುದರಿಂದ ನಿತ್ಯಕೈಙ್ಕರ್ಯರೂಪ ಫಲ ಪ್ರಾಪ್ತಿಯ ಪ್ರಾರ್ಥನೆಯನ್ನೂ, ಬೋಧಿಸಿದ ಹಾಗೆಯೇ ಶಾರೀರಕ ಶಾಸ್ತ್ರವು ಮೊದಲನೆಯ ಎರಡನೆಯ ಅಧ್ಯಾಯಗಳಿಂದ ಪರಾವರ ತತ್ವ ಸಂಬಂಧವನ್ನೂ, ಮೂರನೆಯ ಅಧ್ಯಾಯದಿಂದ ಉಪಾಯವನ್ನೂ, ನಾಲ್ಕನೆಯ ಅಧ್ಯಾಯದಿಂದ ಫಲವನ್ನೂ, ಅದೇ ಕ್ರಮದಲ್ಲೇ ಬೋಧಿಸುತ್ತದೆಂಬುದು ತಾತ್ಪರ್ಯವು.

ಮೂಲಮನ್ತ್ರವು ಸ್ವತಂತ್ರ ಪ್ರಪತ್ತಿಯನ್ನು ಬೋಧಿಸುತ್ತದೆ; ಶಾರೀರಕ ಶಾಸ್ತ್ರವು ಭಕ್ತಿರೂಪ ಬ್ರಹ್ಮವಿದ್ಯಾ ಪ್ರಭೇದಗಳನ್ನು ಬೋಧಿಸುತ್ತದೆ. ಹೀಗಿರುವಾಗ ಎರಡಕ್ಕೂ ಐಕಕಂಠ್ಯವನ್ನು ಸ್ಥಾಪಿಸಿ ಹೇಳುವದು ಯಾವ ನ್ಯಾಯವು? ಎಂದರೆ ಅದಕ್ಕೆ ಸಮಾಧಾನವನ್ನು **"ಇಙ್ಗುಮುದಿಲ್ ಇರಣ್ಡು ಅಧ್ಯಾಯತ್ತಿಲ್"** ಎಂದಾರಂಭಿಸಿ, **"ಎಲ್ಲಾಮ್ ಶ್ರೀಮದಷ್ಟಾಕ್ಷರಾಂತಸ್ಥಙ್ಗಳ್"** ಎಂದು ಮುಗಿ

**ಮುಮ್ ನಾನ್ಗಾಮಧ್ಯಾಯತ್ತಿಲ್ ಸೊನ್ನ ಫಲಮುಮ್ ಸ್ವತಂತ್ರ ಪ್ರಪತ್ತಿ ನಿಷ್ಠ ನುಕ್ಕುಮ್ ತುಲ್ಯಮ್.**

**ಮೂನ್ರಾಮಧ್ಯಾಯತ್ತಿಲ್ ವೈರಾಗ್ಯಪಾದತ್ತಿಲುಮ್, ಉಭಯಲಿಙ್ಗ ಪಾದತ್ತಿಲುಮ್ ಶೊನ್ನ ಸಂಸಾರದೋಷಮುಮ್ ಶರಣ್ಯನುಡೈಯ ಹೇಯ ಪ್ರತ್ಯನೀಕ ಕಲ್ಯಾಣೈಕ ತಾನತ್ವಮುಮ್ ಮುಮುಕ್ಷುವಾನ ಇವನಕ್ಕು ಅವ**

---

ಸಿರುವ ಏಳು ವಾಕ್ಯಗಳಿಂದ ಉಪಪಾದಿಸುತ್ತಾರೆ—ಅಙ್ಗು - ಆ ಶಾರೀರಕ ಶಾಸ್ತ್ರದಲ್ಲಿ, **ಮುದಿಲ್ ಇರಣ್ಡು ಅಧ್ಯಾಯತ್ತಿಲ್ ಸೊನ್ನ** - ಮೊದಲಿನ ಎರಡು ಅಧ್ಯಾಯಗಳಿಂದ ಹೇಳಲ್ಪಟ್ಟ, **ಪರಾವರತತ್ವ ಸ್ವರೂಪಮುಮ್** – ಪರಬ್ರಹ್ಮ ನಿಗೂ ಆತನಿಗಿಂತ ನಿಕೃಷ್ಟ ತತ್ವಗಳಾದ ಚಿದಚಿತ್ತುಗಳಾದ ತತ್ವಗಳಿಗೂ ಇರುವ ಶೇಷಿ ಶೇಷಭಾವ ಸಂಬಂಧವೂ, **ನಾನ್ಗಾಮಧ್ಯಾಯತ್ತಿಲ್ ಸೊನ್ನ ಫಲಮುಮ್** - ನಾಲ್ಕನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಅನಿಷ್ಟ ನಿವೃತ್ತಿ ಸ್ವಸ್ವರೂಪಾವಿರ್ಭಾವ ಪರಿಪೂರ್ಣಬ್ರಹ್ಮಾನುಭವ, ನಿತ್ಯಕೈಙ್ಕರ್ಯ ಪ್ರಾಪ್ತಿರೂಪ ಫಲವೂ, **ಪ್ರಪತ್ತಿನಿಷ್ಠ ನುಕ್ಕುಮ್** – ನ್ಯಾಸವಿದ್ಯೆಯನ್ನನುಷ್ಠಿಸಿದವನಿಗೂ. **ತುಲ್ಯಮ್** - ಸಮಾನವು. ಆದುದರಿಂದ ಸ್ವರೂಪ ಫಲಗಳಲ್ಲಿ ಐಕಕಂಠ್ಯವು ನಿರ್ವಿವಾದವು; ಈ ವಿಷಯದಲ್ಲಿ ಪೂರ್ವಪಕ್ಷಿಯ ಆಕ್ಷೇಪವಿರುವದಿಲ್ಲವು. ಆಕ್ಷೇಪವೆಲ್ಲಿ ಎಂದರೆ **ನಮಃ** ಎಂಬುದು ಪ್ರಪದನವನ್ನು ಬೋಧಿಸುವದರಿಂದಲೂ ಇದಕ್ಕೂ, ಮೂರನೆಯ ಅಧ್ಯಾಯವು ಉಪಾಸನಾ ಪ್ರಭೇದಗಳನ್ನು ಬೋಧಿಸುವದರಿಂದಲೂ ಇವೆರಡಕ್ಕೂ ಸಾದೃಶ್ಯವು ಸರಿಹೋಗುವದಿಲ್ಲವೆಂದು ಆಕ್ಷೇಪಿಸಿದಂತಾಯಿತು. ಮೂರನೆಯ ಅಧ್ಯಾಯ ದಲ್ಲಿ, ನಾಲ್ಕು ಪಾದಗಳಿವೆ; ಇವುಗಳಲ್ಲಿ ಮೊದಲು ಎರಡು ಪಾದಗಳಲ್ಲೂ ಐಕಕಂಠ್ಯವು ವ್ಯಕ್ತವೆಂದು ಹೇಳಿ, ಮೂರನೆಯ ಮತ್ತು ನಾಲ್ಕನೆಯ ಪಾದ ಗಳಲ್ಲೂ ಸಾದೃಶ್ಯವಿದೆ ಎಂದು ಉಪಪಾದಿಸಿ ಐಕಕಂಠ್ಯವನ್ನು ಸಮರ್ಥಿಸುತ್ತಾರೆ.

(೨) **ಮೂನ್ರಾಮಧ್ಯಾಯತ್ತಿಲ್** - ಶಾರೀರಕ ಸೂತ್ರಗಳ ಮೂರನೆಯ ಅಧ್ಯಾಯದಲ್ಲಿ, **ವೈರಾಗ್ಯಪಾದತ್ತಿಲುಮ್** – ಮೋಕ್ಷಾರ್ಥಿಯಾದ ಪ್ರಪನ್ನನಿಗೆ ಸಂಸಾರವು ದೋಷದುಷ್ಟವೆಂದೂ, ವೈರಾಗ್ಯವು ಆವಶ್ಯಕವೆಂದೂ ಹೇಳುವ ಮೊದ ಲನೆಯ ಪಾದವಾದ ವೈರಾಗ್ಯ ಪಾದದಲ್ಲೂ, **ಉಭಯ ಲಿಙ್ಗ ಪಾದತ್ತಿಲುಮ್** - ಇದು ಎರಡನೆಯ ಪಾದವು, ಇದರಲ್ಲಿ ಪರಮ ಪುರುಷನಿಗೆ ಹೇಯಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವಗಳೆಂಬ ಎರಡು ಲಿಙ್ಗಗಳು ಪ್ರತಿಪಾದಿತವಾಗುವದರಿಂದ ಹಾಗೆ ಹೆಸರು, ಹೀಗೆ ಉಭಯ ಲಿಙ್ಗವನ್ನು ಸ್ಥಾಪಿಸುವ ಎರಡನೆಯ ಅಧ್ಯಾಯ ದಲ್ಲಿ, **ಶೊನ್ನ** - ಕ್ರಮವಾಗಿ ಹೇಳಲ್ಪಟ್ಟ, **ಸಂಸಾರದೋಷಮುಮ್** - ಮೊದ ಲನೆಯ ಪಾದದಲ್ಲಿ ಹೇಳಲ್ಪಟ್ಟ ಸಂಸಾರ ದೋಷವೂ, **ಶರಣ್ಯನುಡೈಯ ಹೇಯ ಪ್ರತ್ಯನೀಕಕಲ್ಯಾಣೈಕತಾನತ್ವಮುಮ್** - ಎರಡನೆಯ ಅಧ್ಯಾಯದಲ್ಲಿ ಸ್ಥಾಪಿಸ ಲ್ಪಟ್ಟ ದೋಷರಾಹಿತ್ಯ ಮತ್ತು ಕಲ್ಯಾಣ ಗುಣಾಕರತ್ವವೂ ಸಹ, **ಮುಮುಕ್ಷು**

**ಶ್ಯಮ್ ಜ್ಞಾತವ್ಯಮ್. ಮೂನ್ರಾಂಪಾದತ್ತಿಲ್ ಉಪಾಯಮಾಗಚ್ಚೊನ್ನ ಉಪಾಸನಾಭೇದಙ್ಗಳೈ ಅವತ್ತುಕ್ಕು ಅಧಿಕಾರಿಗಳಾನವರ್‌ಗಳ್ ಅನುಷ್ಠಿಕ್ಕ ಕ್ಕಡವರ್‌ಗಳ್. ಅಕಿಂಚನಾನ ಅಧಿಕಾರಿ ತನಕ್ಕು ಅವತ್ತಿನ್ ಅರುಮೈಕ ಣ್ಡು (೧) "ನಾನಾಶಬ್ದಾದಿ ಭೇದಾತ್" ೨ "ವಿಕಲ್ಪೋಽವಿಶಿಷ್ಟಫಲತ್ವಾತ್" ಎಙ್ಗಿರ ಅಧಿಕರಣಙ್ಗಳಿಲ್ ಚೊನ್ನಕಟ್ಟಳೈಯಿಲೇ ವಿದ್ಯಾನ್ತರ ವ್ಯಾವೃತ್ತ ಮುಮಾಯ್, ಅವೈಕೊಡುಕ್ಕುಂ ಮೋಕ್ಷತ್ತೈ ಕೊಡುಕ್ಕುಮಿಡತ್ತಿಲ್ ನಿರ ಪೇಕ್ಷಮುಮಾನ ನ್ಯಾಸತ್ತೈಯೇಪ್ಪತ್ತಕ್ಕಡವರ್.**

---

**ವಾನ ಇವನುಕ್ಕು** - ಭಕ್ತಿಯೋಗ ನಿಷ್ಠನಿಗೆ ಹೇಗೋ ಹಾಗೆ ಅತನ ಹಾಗೆಯೇ ಮೋಕ್ಷಾರ್ಥಿಯಾದ ಈ ಭರನ್ಯಾಸ ನಿಷ್ಠನಿಗೂ, **ಅವಶ್ಯಮ್ ಜ್ಞಾತವ್ಯಮ್** – ಆವಶ್ಯಕವಾಗಿ ತಿಳಿಯತಕ್ಕವುಗಳೇ. ಆದುದರಿಂದ ಈ ಮೂರನೆಯ ಎರಡು ಅಧ್ಯಾಯಗಳಲ್ಲೂ ಐಕಕಂಠ್ಯವು ವ್ಯಕ್ತವು. ಆದುದರಿಂದ ಆಕ್ಷೇಪವು ಮೂರನೆಯ ಅಧ್ಯಾಯದ ಮಿಕ್ಕ ಎರಡು ಅಧ್ಯಾಯಗಳಿಗೆ ಸಂಬಂಧಿಸಿದುದೆಂದು ಹೇಳಬಹುದು. ಅಲ್ಲಿಯೂ ಆಕ್ಷೇಪಕ್ಕೆ ಕಾರಣವೇ ಇಲ್ಲವೆನ್ನುತ್ತಾರೆ.—ಏಕೆಂದರೆ ಎರಡು ಕಡೆ ಯಲ್ಲೂ ಉಪಾಯವೇ ಅಧಿಕಾರ ಭೇದದಿಂದ ಹೇಳಲ್ಪಟ್ಟಿರುತ್ತದೆ ಎನ್ನುತ್ತಾರೆ. **ಮೂನ್ರಾಂಪಾದತ್ತಿಲ್** - ಮೂರನೆಯ ಪಾದದಲ್ಲಿ, **ಉಪಾಯಮಾಗಚ್ಚೊನ್ನ** - ಉಪಾಯವಾಗಿ ಹೇಳಲ್ಪಟ್ಟ, **ಉಪಾಸನಾಭೇದಙ್ಗಳ್** - ಸದ್ವಿದ್ಯಾ, ಪ್ರಾಣ ವಿದ್ಯಾ, ಪ್ರತರ್ದನ ವಿದ್ಯಾ ದಹರವಿದ್ಯಾದಿ ೩೨ ವಿದ್ಯಾ ಭೇದಗಳನ್ನು **ಅವ ತ್ತುಕ್ಕು** - ಈ ವಿದ್ಯೆಗಳಿಗೆ **ಅಧಿಕಾರಿಗಳಾನ** - ಅರ್ಥಿತ್ವ ಸಾಮರ್ಥ್ಯಗಳನ್ನುಳ್ಳ ತ್ರಿವರ್ಣದವರು, **ಅನುಷ್ಠಿಕ್ಕಕ್ಕಡವರ್‌ಗಳ್** - ಅನುಷ್ಠಿಸತಕ್ಕವರುಗಳು. **ಅಕಿಂಚ ನನಾದ** - ಅಂತಹ ಭಕ್ತಿಯೋಗವನ್ನವಲಂಬಿಸಿ ಉಪಾಸನೆಯನ್ನು ಮಾಡಲು ತನಗೆ ಶಕ್ತಿಯಿಲ್ಲವೇ ಎಂದು ಕಾರ್ಪಣ್ಯದಿಂದ ಪ್ರೇರಿತನಾನ, **ಅಧಿಕಾರಿತನಕ್ಕು** - ಅಧಿಕಾರಿಗೆ, **ಅವತ್ತಿನ್ ಅರುಮೈಯೈಕ್ಕಣ್ಡು** - ಅವುಗಳ ದುಷ್ಕರತ್ವವನ್ನು ತಿಳಿದುಕೊಂಡು, "**ನಾನಾಶಬ್ದಾದಿ ಭೇದಾತ್**" ಎಂಬ ಮತ್ತು "**ವಿಕಲ್ಪೋಽ ವಿಶಿಷ್ಟಫಲತ್ವಾತ್**" **ಎಙ್ಗಿರ** - ಎಂಬ, ಅಧಿಕರಣಗಳಲ್ಲಿ, **ಶೊನ್ನಪ್ಪಟ್ಟ ಕಟ್ಟ ಳೈಯಿಲ್** - ಹೇಳಿರುವ **ನ್ಯಾಯದ** ಪ್ರಕಾರ, **ವಿದ್ಯಾನ್ತರವ್ಯಾವೃತ್ತಮಾಯ್** - ಉಪಾಸನ ರೂಪ ವಿದ್ಯೆಗಳಿಗಿಂತ ಬೇರೆಯಾಗಿ, **ಅವೈಕೊಡುಕ್ಕುಮ್ಮೋಕ್ಷತ್ತೈ** ಆ ಭಕ್ತಿಯೋಗದ ಸದ್ವಿದ್ಯಾ ದಹರವಿದ್ಯಾ ಶಾಂಡಿಲ್ಯವಿದ್ಯಾ ಭೂಮವಿದ್ಯಾ ಮೊದ ಲಾದವುಗಳು ಕೊಡುವ ಮೋಕ್ಷವನ್ನು. **ಕೊಡುಕ್ಕುಮಿಡತ್ತಿಲ್** – ಕೊಡುವ ಸಂದರ್ಭದಲ್ಲಿ, **ನಿರಪೇಕ್ಷಮಾನನ್ಯಾಸತ್ತೈಯೇ** - ಬೇರೆ ಯಾವುದರ ಅಪೇ ಕ್ಷೆಯೂ ಬೇಕಾಗದಿರುವ ಭರನ್ಯಾಸ ವಿದ್ಯೆಯನ್ನು, ಪ್ರಪದನವನ್ನು **ಪತ್ತ ಕ್ಕಡವರ್** – ಈ ಅಸಮರ್ಥನು ಅನುಷ್ಠಿಸಲು ಯೋಗ್ಯನು. ಈ ವಾಕ್ಯ ತಾತ್ಪರ್ಯ ವೇನೆಂದರೆ ? ಮೂರನೆಯ ಅಧ್ಯಾಯದ ಮೂರನೆಯದರಲ್ಲಿ ಶಕ್ತನಾದ

---

(೧) ಶಾರೀ. ಸೂ. ೩. ೩- ೫೭. (೨) ಶಾರೀ. ೩. ೩. ೫೭.

ತ್ರಿವರ್ಣದ ಯಾವುದಾದರೂ ಒಂದಕ್ಕೆ ಸೇರಿದವನಿಗೆ ಉಪಾಯವಾಗಿ ಅಧಿಕಾರವು ಭಕ್ತಿಯೋಗದಲ್ಲಿ ಎಂದು ಹೇಳಲ್ಪಟ್ಟು. ಆ ಬ್ರಹ್ಮವಿದ್ಯೆಯಾದ ಉಪಾಸನವು ಸದ್ವಿದ್ಯೆ ದಹರವಿದ್ಯೆ ಮೊದಲಾದ ಹೆಸರುಗಳಿಂದ, ಕೆಲವು ವಿಶೇಷಣಗಳ ಮೂಲಕ ಅನೇಕ ವಿಧಗಳು ಎಂದೂ, ಪ್ರತಿಯೊಬ್ಬ ಭಕ್ತಿಯೋಗನಿಷ್ಠನೂ ಈ ಎಲ್ಲಾ ವಿದ್ಯೆಗಳನ್ನು ಅನುಷ್ಠಿಸಬೇಕೇ ? ಅಥವಾ ಯಾವುದಾದರೂ ಒಂದು ವಿದ್ಯೆಯನ್ನು ಅನುಷ್ಠಿಸಿದರೆ ಸಾಕೇ ಎಂಬ ವಿಷಯದಲ್ಲಿ ಒಂದರ ಅನುಷ್ಠಾನದಿಂದಲೇ ಮುಕ್ತಿಯು ಲಭಿಸುತ್ತದೆಂದು ಮೇಲೆ ಹೇಳಲ್ಪಟ್ಟ ಎರಡು ಸೂತ್ರಗಳಲ್ಲೂ ಉಪಪಾದಿತವು. ಆದುದರಿಂದ ಸಮರ್ಥನಾದ ಭಕ್ತಿಯೋಗನಿಷ್ಠನಿಗೆ ಉಪಾಯದಲ್ಲಿ ಅಧಿಕಾರವು ಈ ಪಾದದಲ್ಲಿ ಹೇಳಲ್ಪಟ್ಟಿತು. ಹೀಗೆ ಎರಡಕ್ಕೂ ಐಕಕಂಠ್ಯವೆಂಬುದು ತಾತ್ಪರ್ಯವು.

**ನಾನಾಶಬ್ದಾದಿಭೇದಾತ್**" ಎಂಬ ಬ್ರಹ್ಮಸೂತ್ರಾಭಿಪ್ರಾಯವೇನೆಂದರೆ— ಈ ಪಾದದಲ್ಲಿ ಉಪಪಾದಿತಗಳಾದ ಪರಬ್ರಹ್ಮಪ್ರಾಪ್ತಿಯನ್ನುಂಟುಮಾಡುವ ಸದ್ವಿದ್ಯಾ ದಹರವಿದ್ಯಾದಿ ಎಲ್ಲಾ ವಿದ್ಯೆಗಳೂ ಏಕವಿದ್ಯೆಯೇ ಅಥವಾ ಬೇರೆ ಬೇರೆ ಬ್ರಹ್ಮವಿದ್ಯೆಗಳೇ ಎಂಬ ಸಂದೇಹದಲ್ಲಿ ಸೂತ್ರವು, ಎಲ್ಲಾ ಒಂದೇ ವಿದ್ಯೆಯಲ್ಲವು, ಬೇರೆ ಬೇರೆ ವಿಧವಾದವು ಎಂದು ಹೇಳುತ್ತದೆ. ಸದ್ವಿದ್ಯಾ ದಹರ ವಿದ್ಯಾದಿಗಳು, "**ನಾನಾ**" - ಬೇರೆ ಬೇರೆಯಾಗಿ ವಿಧವಿಧವಾದವುಗಳು, **ಕಾರಣವೇನೆಂದರೆ** —**ಶಬ್ದಾದಿಭೇದಾತ್** - ಶ್ರುತಿಗಳಲ್ಲಿ **ಯಜೇತ. ಜುಹುಯಾತ್**" ಇವೇ ಮೊದಲಾದ ಶಬ್ದಭೇದಗಳಿಂದ ಯಾಗದಾನ ಹೋಮಾದಿಗಳು ಹೇಗೆ ಪೃಥಗ್ವಿಧಗಳೋ, ಹಾಗೆಯೇ ಶ್ರುತಿ ಪ್ರತಿಪಾದ್ಯವಾದ ಜಗತ್ಕಾರಣತ್ವ ಭೂಮತ್ವ ಅಪಹತಪಾಪ್ಮತ್ವ ಇಂತಹ ಭೇದಗಳಿಂದಲೂ ನಾಮಭೇದಗಳಿಂದಲೂ, ಈ ವಿದ್ಯೆಗಳೆಲ್ಲಾ ಪೃಥಕ್ಕಾದವುಗಳು. ಈ ಸೂತ್ರವು ಹೇಗೆ ಈ ಪ್ರಕರಣಕ್ಕೆ ಸಂಬಂಧವೆಂದರೆ ನ್ಯಾಸವಿಂಶತಿಯಲ್ಲಿ ಶ್ರೀ ನಿಗಮಾನ್ತರವರು ನಾನಾಶಬ್ದಾದಿ ಭೇದಾದಿತಿತು" ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ. **ನಾನಾಶಬ್ದಾದಿಭೇದಾದಿತಿತು ಕಥಯತಾ ಸೂತ್ರಕಾರೇಣ ಸಮ್ಯ**। **ಙ್ನ್ಯಸ್ಯೋಪಾಸ್ಯೇ ವಿಭಕ್ತೇ ಯಜನ ಹವನವಚ್ಛಬ್ದ ಭೇದಾದಭಾಕ್ತಾತ್** । **ಆಖ್ಯಾರೂಪಾದಿಭೇದಃ ಶ್ರುತ ಇತರಸಮಃ ಕಿಂಚ ಭಿನ್ನಾಧಿಕಾರೀ** । **ಶೀಘ್ರಪ್ರಾಪ್ತ್ಯಾಧಿಭಿಸ್ಸ್ಯಾಜ್ಜಗುರಿತಿಚ ಮಧೂಪಾಸನಾದೌ ವ್ಯವಸ್ಥಾಮ್**" ಎಂಬುದು ಪೂರಾ ಶ್ಲೋಕವು. ಅಸಕೃದಾವೃತ್ತ ಭಗವದುಪಾಸನರೂಪ ಬ್ರಹ್ಮವಿದ್ಯಾ ಪ್ರಭೇದಗಳೆಲ್ಲಾ ಹೇಗೆ ಪೃಥಕ್ಕಾದವೋ, ಸಕೃದಾವೃತ್ತನ್ಯಾಸ ವಿದ್ಯಾರೂಪವಾದ ಬ್ರಹ್ಮವಿದ್ಯೆಯೂ, ನಾನಾ - ಬೇರೆಯಾದವುಗಳು, **ಕುತಃ** - ಏತಕ್ಕೆಂದರೆ, **ಶಬ್ದಾದಿಭೇದಾತ್ - ಯಜೇತ ಜುಹುಯಾತ್** ಎಂಬ ಶಬ್ದಗಳು ಹೇಗೆ ಭಿನ್ನಾರ್ಥಕಗಳೋ, ಹಾಗೆಯೇ **ಉಪಾಸೀತ ಶರಣ್ಯವ್ರಜ** ವೆಂಬ ಶಬ್ದಗಳು ಭಿನ್ನಾರ್ಥಕಗಳು. ಇಲ್ಲಿ **ಆದಿ** ಪದದಿಂದ ನ್ಯಾಸ ಉಪಾಸನವೆಂಬ ಆಖ್ಯಾಭೇದವೂ ಅಸ

ಕೃತ್ಸ್ನಕೃದ್ರೂಪ ಸ್ವರೂಪಭೇದವೂ, ಶಕ್ತಾಶಕ್ತ ಅಧಿಕಾರ ಭೇದವೂ ಹೇಳಲ್ಪಟ್ಟವು. ಮತ್ತು ವೇದ್ಯಾಕಾರದಲ್ಲೂ ಭೇದ ಉಂಟು; ಆಕಿಂಚನನಿಗೆ ಉಪಾಸನ ಸ್ಥಾನಾಪನ್ನತ್ವವು ಭರನ್ಯಾಸಕ್ಕೂ, ಅಪಹತ ಪಾಪ್ಮತ್ವಕಲ್ಯಾಣ ಗುಣಾಕರತ್ವವು ಉಪಾಸನಕ್ಕೂ, ವೇದ್ಯಾಕಾರತ್ವದಲ್ಲಿ ಹೀಗೆ ಭೇದವು. ಫಲಪ್ರಾಪ್ತಿಯಲ್ಲೂ ಭೇದವು ಹೇಗೆಂದರೆ ನ್ಯಾಸವಿದ್ಯೆಯಲ್ಲಿ ವಿಳಂಬವಿಲ್ಲದೆ, ಪ್ರಾರಬ್ಧಕರ್ಮ ನಿವೃತ್ತಿಯೊಂದಿಗೆ ಒಡನೆಯೇ ಬ್ರಹ್ಮಪ್ರಾಪ್ತಿಯು; ಉಪಾಸನದಲ್ಲಾದರೋ ಆ ಉಪಾಸನದಿಂದಲೇ ಪ್ರಾರಬ್ಧಕರ್ಮ ನಿವೃತ್ತಿಯುಂಟಾಗಬೇಕಾಗಿರುವದರಿಂದ ವಿಳಂಬದೊಂದಿಗೆ ಪರಬ್ರಹ್ಮಪ್ರಾಪ್ತಿಯು; ಅದಕ್ಕಾಗಿ ಜನ್ಮಾಂತರ ಪ್ರಾಪ್ತಿಯುಂಟಾಗಿ ವಿಳಂಬ ಉಂಟಾದರೂ ಉಂಟಾಗಬಹುದು. ಹೀಗೆ ಭೇದವು ಉಪಾಸನನ್ಯಾಸ ವಿದ್ಯೆಗಳಿಗುಂಟೆಂಬ ಭಾವವು.

ಈ "ನಾನಾಶಬ್ದಾದಿ ಭೇದಾತ್" ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಯತಿವರ್ಯರು ನ್ಯಾಸವಿದ್ಯೆಯಾದ ಭರನ್ಯಾಸವನ್ನು ಕುರಿತು ಹೇಳಲಿಲ್ಲವು. ಶ್ರೀ ನಿಗಮಾಂತ ದೇಶಿಕರವರ ಅಭಿಪ್ರಾಯವು ನ್ಯಾಸವಿದ್ಯೆಯೂ ಬ್ರಹ್ಮವಿದ್ಯೆಯಾದುದರಿಂದ ಇದೂ ಕೂಡ ಈ ಸೂತ್ರದಲ್ಲಿ ಸೂಚಿಸಲ್ಪಟ್ಟು, ಇವೆಲ್ಲವೂ ಬೇರೆ ಬೇರೆ ಬ್ರಹ್ಮವಿದ್ಯೆಗಳೆಂದು ಸ್ಥಾಪಿಸಿರುತ್ತಾರೆ.

ಹೀಗೆ ಬ್ರಹ್ಮವಿದ್ಯೆಗಳು ನಾನಾ ವಾದರೂ, ಇವೆಲ್ಲವನ್ನೂ ಒಬ್ಬ ಮೋಕ್ಷಾರ್ಥಿಯು ಸಮುಚ್ಚಯದಿಂದ ಅನುಷ್ಠಿಸತಕ್ಕದ್ದೇ, ಇಲ್ಲವೇ ಯಾವುದಾದರೂ ಒಂದು ವಿದ್ಯೆಯನ್ನು ತನ್ನ ಅಧಿಕಾರಾನುಗುಣವಾಗಿ ಅವಲಂಬಿಸಿದರೆ ಸಾಕೇ? ಎಂಬ ಸಂದೇಹದಲ್ಲಿ ಮುಂದಿನ ಸೂತ್ರವಾದ (೨) "ವಿಕಲ್ಪೋಽವಿಶಿಷ್ಟಫಲತ್ವಾತ್" ಎಂಬ ಸೂತ್ರವು ಯಾವುದಾದರೂ ಒಂದರಿಂದಲೇ ಮೋಕ್ಷರೂಪವಿಶಿಷ್ಟ ಫಲವೂ ದೊರೆಯುತ್ತದೆಂದು ಹೇಳುತ್ತದೆ. ವಿಕಲ್ಪಃ - ಒಬ್ಬ ಅಧಿಕಾರಿಯಲ್ಲಿ ಅಷ್ಟು ವಿದ್ಯೆಗಳಲ್ಲಿ, (ಇದರಲ್ಲೇ ನ್ಯಾಸವಿದ್ಯೆಯೂ ಅಂತರ್ಗತವು). ಒಂದು ವಿದ್ಯೆಯ ಅನುಷ್ಠಾನವೇ ಸಂಪೂರ್ಣವಾಗಿ ಅನ್ಯನಿರಪೇಕ್ಷವಾಗಿಯೇ ಮುಕ್ತಿದಾಯಕವು. ಏಕೆಂದರೆ ಅವಿಶಿಷ್ಟಫಲತ್ವಾತ್ – ಸಂಪೂರ್ಣವಾದ ಮುಕ್ತಿ ಫಲವು ಪ್ರತಿಯೊಂದು ಬ್ರಹ್ಮವಿದ್ಯೆಗೂ ಹೇಳಿರುವದರಿಂದ. ಇಲ್ಲಿ ಅವಿಶಿಷ್ಟಫಲವೆಂಬ ಪ್ರಯೋಗದಿಂದಲೇ ಆನಂದದಲ್ಲಿ ತಾರತಮ್ಯ ಉಂಟೆಂದು ಹೇಳುವ ವಾದವು ನಿರಸ್ತವು.

ಮೂಲದಲ್ಲಿ ನಿರಪೇಕ್ಷಮಾನನ್ಯಾಸತ್ತ್ರೈಯೇ - ಈ ನ್ಯಾಸವಿದ್ಯೆಯು ನಿರಪೇಕ್ಷವೆಂದು ಹೇಳಿದುದರಿಂದ ಭಕ್ತಿಯೋಗದ ವಿದ್ಯೆಗಳು ಸಾಪೇಕ್ಷವೆಂದು ಹೇಳಿದಂತಾಯಿತು. ಇದು ಹೇಗೆ ಎಂಬುದನ್ನು ಮುಂದಿನ ವಾಕ್ಯದಲ್ಲಿ ಅವರೇ ಎರಡು ಶಾರೀರಕ ಸೂತ್ರಗಳಿಂದ ಉಪಪಾದಿಸಿರುತ್ತಾರೆ. ವರ್ಣಾಶ್ರಮ ಧರ್ಮಗಳ ಅನು

**ನಾ(ಲಾಮ್) ನ್ಗಾಮ್ ಪಾದತ್ತಿರ್ ಚೊನ್ನವರ್ಣಾಶ್ರಮ ಧರ್ಮಙ್ಗಳೈ ಉಪಾಸನನಿಷ್ಠ (೩) "ಸಹಕಾರಿತ್ವೇನ" ಎಙ್ಗರಪಡಿಯೇ ವಿದ್ಯಾಪರಿಕರ ಮಾಗ ಅನುಷ್ಠಿಕ್ಕುಮ್. ಸ್ವತಂತ್ರ ಪ್ರಪತ್ತಿ ನಿಷ್ಠ (೪) ವಿಹಿತತ್ವಾಚ್ಚಾಶ್ರಮ ಕರ್ಮಾಪಿ" ಎಙ್ಗಿರಪಡಿಯೇ ಭಗವದಾಜ್ಞಾಸಿದ್ಧಮೆನ್ರು ಸ್ವಯಂಪ್ರಯೋಜನ ಮಾಗ ಅನುಷ್ಠಿಕ್ಕುಮ್.**

---

ಷ್ಠಾನವು ಆ ಬ್ರಹ್ಮವಿದ್ಯೆಗಳಿಗಾದರೋ ಅಙ್ಗರೂಪದಲ್ಲಿ ಆವಶ್ಯಕವು. ಈ ಪ್ರಪತ್ತಿ ನಿಷ್ಠನಿಗಾದರೋ ಸ್ವಾಪವಿದ್ಯಾನುಷ್ಠಾನಕ್ಕೆ ಅಙ್ಗವಾಗಿ ಬೇಕಿಲ್ಲವು. ಹೀಗೆ ಹೇಳಿದುದರಿಂದ ಕೆಲವರು ಅಭಿಪ್ರಾಯಪಡುವ ಹಾಗೆ ತ್ಯಾಜ್ಯವಲ್ಲವು. ಅವುಗಳನ್ನು ಬಿಟ್ಟರೆ "ಆಜ್ಞಾಛೇದೀ ಮಮದ್ರೋಹೀ" ಎಂದು ಹೇಳಿರುವ ಹಾಗೆ ಭಗವನ್ನಿಗ್ರಹಕ್ಕೆ ಪಾತ್ರನಾಗುವನು. ಇದನ್ನೇ ಮುಂದೆ ಉಪಪಾದಿಸುತ್ತಾರೆ.

ಹೀಗೆ ಮೂರನೆಯ ಅಧ್ಯಾಯದ ಮೂರನೆಯ ಪಾದದಲ್ಲೂ ಐಕಕಂಠ್ಯವನ್ನು ಪ್ರದರ್ಶಿಸಿದರು. ಮುಂದೆ ನಾಲ್ಕನೆಯ ಪಾದದಲ್ಲೂ ಐಕಕಂಠ್ಯ ಉಂಟೆಂದು ತಿಳಿಸುತ್ತಾರೆ.—**ನಾನ್ಗಾಮ್ ಪಾದತ್ತಿರ್ಚೊನ್ನ** - ನಾಲ್ಕನೆಯ ಪಾದದಲ್ಲಿ ಹೇಳಲ್ಪಟ್ಟ, **ವರ್ಣಾಶ್ರಮಧರ್ಮಙ್ಗಳ್** – ತನ್ನ ವರ್ಣ ಮತ್ತು ಆಶ್ರಮ ಇವುಗಳಿಗೆ ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿರುವ ಧರ್ಮಗಳನ್ನು, **ಉಪಾಸನನಿಷ್ಠ** – ಭಗವದುಪಾಸನೆಯನ್ನು ಉಪಾಯವಾಗಿ ಅವಲಂಬಿಸಿದವನು ಎಂದರೆ ಭಕ್ತಿಯೋಗನಿಷ್ಠನು (೩) **ಸಹಕಾರಿತ್ವೇನ ಚ** - **"ತಮೇತಂ ವೇದಾನು ವಚನೇನ" "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತಮಶ್ನುತೇ" "ಯಜ್ಞೋದಾನ ತಪಶ್ಚೈವ ನತ್ಯಾಜ್ಯಂ ಕಾರ್ಯಮೇವತತ್"** ಇತ್ಯಾದ್ಯನೇಕ ಶ್ರುತಿ ಸ್ಮೃತಿ ಪ್ರಮಾಣಗಳಲ್ಲಿ ಹೇಳಿರುವ ಪ್ರಕಾರ ಬ್ರಹ್ಮವಿದ್ಯೆಗೆ ಅಙ್ಗವಾಗಿ ಯಜ್ಞಾದಿಗಳನ್ನನುಷ್ಠಿಸಬೇಕೆಂದು ಹೇಳಿರುವ ಹಾಗೆ, **ವಿದ್ಯಾಪರಿಕರಮಾಗ** - ಬ್ರಹ್ಮವಿದ್ಯೆಗೆ ಅಙ್ಗವಾಗಿ **ಅನುಷ್ಠಿಕ್ಕುಮ್** - ಅನುಷ್ಠಿಸುವನು. **ಸ್ವತನ್ತ್ರಪ್ರಪತ್ತಿನಿಷ್ಠ** - ಭರನ್ಯಾಸನಿಷ್ಠನಾದರೋ, (೪) **"ವಿಹಿತತ್ವಾಚ್ಚಾಶ್ರಮಕರ್ಮಾಪಿ"** - **"ಯಾವಜ್ಜೀವಂ ಅಗ್ನಿಹೋತ್ರಂ ಜುಹುಯಾತ್" "ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇತ್"** ಇತ್ಯಾದಿ ಪ್ರಮಾಣಗಳಿಗನುಸಾರವಾಗಿ, ಯಜ್ಞಾದಿಗಳು ಆಶ್ರಮ ಧರ್ಮಗಳಾಗಿ ನಿತ್ಯಗಳಲ್ಲಿ ಸೇರಿರುವುದರಿಂದ, ಅವಶ್ಯ ಕರ್ತವ್ಯಗಳು" **ಎಙ್ಗಿರಪಡಿಯೇ** - ಎಂದು ಹೇಳಿರುವ ಹಾಗೆ, **ಭಗವದಾಜ್ಞಾಸಿದ್ಧಮೆನ್ರು** - ಭಗವಂತನ ಆಜ್ಞೆಗಳಾಗಿ ಸ್ಥಾಪಿತವೆಂದು, ಎಂದರೆ ಭಗವಂತನ ಆಜ್ಞಾರೂಪ ಕೈಙ್ಕರ್ಯಗಳೆಂದು ಭಾವಿಸಿ, **ಸ್ವಯಂಪ್ರಯೋಜನಮಾಗ** - ಬೇರೆ ಫಲವನ್ನು ಕೋರದೆ ಭಗವಂತನ ಮುಖೋಲ್ಲಾಸವೇ ಫಲವಾಗಿ ಅನುಷ್ಠಿಸುವದರಿಂದ, ಅಂತಹ ಕರ್ಮಗಳನ್ನೆಸಗುವದೇ ಫಲ

---

(೩) ಶಾರೀ. ಸೂತ್ರ ೩. ೪. ೨೨. (೪) ಶಾರೀ. ಸೂತ್ರ. ೩. ೪. ೩೨.

ವೆಂದು ಭಾವಿಸಿ, **ಅನುಷ್ಠಿಕ್ಕುಮ್** - ಅನುಷ್ಠಿಸುವನು. ನಿತ್ಯನೈಮಿತ್ತಿಕಾದಿಗಳು ಭಗವಂತನಿಂದ ವಿಧಿಸಲ್ಪಟ್ಟ ಕರ್ಮಗಳು. ಇವುಗಳನ್ನು ಮುಮುಕ್ಷುವೂ ಮುಮುಕ್ಷು ವಲ್ಲದವನೂ, ಹೀಗೆ ಎಲ್ಲರೂ ಅನುಷ್ಠಿಸಿಯೇ ತೀರಬೇಕು. ಹಾಗೆ ಅನುಷ್ಠಿಸದೇ ಹೋದರೆ ಭಗವನ್ನಿಗ್ರಹಕ್ಕೆ ಒಳಗಾಗುವರು. ಹೀಗೆ ಅನುಷ್ಠಿಸುವದರಲ್ಲಿ ಪ್ರಪನ್ನನು ಫಲ, ಸ್ವರೂಪ ಮಮತೆಗಳನ್ನು ತ್ಯಾಗಮಾಡಿ ಮಾಡತಕ್ಕದ್ದು. ಪ್ರಪನ್ನರು ಎರಡು ವಿಧವೆಂದು ಅನೇಕ ಸಲ ಹೇಳಲ್ಪಟ್ಟಿದೆ. ಅದರಲ್ಲಿ ಭಕ್ತಿಯೋಗನಿಷ್ಠನು ತನ್ನ ಉಪಾಯಾನುಷ್ಠಾನಕ್ಕೆ ಅಙ್ಗವಾಗಿ **ಸಹಕಾರಿತ್ವೇನ** ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಹಾಗೆ ನಿತ್ಯನೈಮಿತ್ತಿಕಗಳನ್ನು ಯಾವಜ್ಜೀವವೂ ಅನುಷ್ಠಿಸತಕ್ಕದ್ದಾಗಿರುತ್ತದೆ. ಪ್ರಪತ್ತಿನಿಷ್ಠನಾದರೋ ತನ್ನ ಸಕೃದನುಷ್ಠಿಸಿದ ಭರನ್ಯಾಸಕ್ಕೆ ಅಙ್ಗವಾಗಿ ಅನುಷ್ಠಿಸಬೇಕಾದ ಆವಶ್ಯಕತೆಯಿಲ್ಲವು. ಏಕೆಂದರೆ ಶೂದ್ರ ಚಂಡಾಲಾದಿಗಳಿಗೂ ಕೂಡ ಇದರಲ್ಲಿ ಅಧಿಕಾರ ಉಂಟು. ಇದರಿಂದ ಈ ಆಶ್ರಮಧರ್ಮಗಳನ್ನು ಬಿಡತಕ್ಕದ್ದಲ್ಲವು. ಬಿಟ್ಟರೆ ಪ್ರತ್ಯವಾಯ ಉಂಟು. ಭಗವನ್ನಿಗ್ರಹಕ್ಕೆ ಪಾತ್ರನಾಗುವದರಿಂದ ಅನುಷ್ಠಿಸಲೇ ಬೇಕು. ಹೀಗೆ ಸರಿಯಾದ ಅಭಿಪ್ರಾಯವನ್ನು ಗ್ರಹಿಸದೆ ಕೆಲವು ಸಿದ್ಧಾನ್ತಿಗಳೂ ನಮ್ಮಲ್ಲೀ ಕೆಲವರೂ ಸಹ, ಸರ್ವಸಂಗ ಪರಿತ್ಯಾಗ ಮಾಡಿದ ಪ್ರಪನ್ನನಿಗೆ ನಿತ್ಯನೈಮಿತ್ತಿಕಾದಿ ಕರ್ಮಗಳ ಆವಶ್ಯಕತೆಯಿಲ್ಲವೆಂದು ಅಭಿಪ್ರಾಯಪಡುವರು. ಇದು ಸರಿಯಲ್ಲವೆಂದು ಶ್ರೀ ನಿಗಮಾನ್ತ ದೇಶಿಕರವರು ಪರಮಕೃಪಯಾ ಹಿತೋಪದೇಶವನ್ನು ಮಾಡಿರುತ್ತಾರೆ. ಅವರುಗಳನ್ನು ನಿಂದಿಸಬೇಕೆಂಬ ಅಭಿಪ್ರಾಯದಿಂದ ಸುತರಾಂ ಅಲ್ಲವು.

ಶಾರೀರಕ ಸೂತ್ರಬೋಧೆಗೂ ಈ ಮೂಲಮನ್ತ್ರದ ಬೋಧೆಗೂ ಐಕಕಂಠ್ಯವನ್ನು ಸ್ಥಾಪಿಸಿದರಲ್ಲಾ ; ಶಾರೀರಕ ಸೂತ್ರದಲ್ಲಿ ಉಪಪಾದಿಸಲ್ಪಟ್ಟ ಬ್ರಹ್ಮವಿದ್ಯಾರೂಪವಾದ ಉಪಾಸನೆಯೇ, ಈ ಮೂಲಮನ್ತ್ರದಲ್ಲಿ ಹೇಳಲ್ಪಡಲಿಲ್ಲವಾದುದುರಿಂದ ಐಕಕಂಠ್ಯವು ಹೇಗೆ ಕೂಡುತ್ತದೆಂಬ ಆಕ್ಷೇಪಕ್ಕೆ ಸಮಾಧಾನ ಹೇಳಿ, ಮೂಲಮನ್ತ್ರವು ಮೂರು ವಾಕ್ಯಗಳನ್ನುಳ್ಳದು ಎಂಬ ವಿಷಯವನ್ನು ನಿಗಮನಮಾಡಿ ಹೇಳುತ್ತಾರೆ. ಸಮಾಧಾನ ಹೇಗೆ ; ಎಂದರೆ ನಾನಾವಿಧಗಳಾದ ಉಪಾಸನಗಳೂ ಹೇಗೆ ಸ್ವರೂಪೋಪಾಯ ಪುರುಷಾರ್ಥ ಪರಗಳೋ, ಹಾಗೆಯೇ ಈ ನ್ಯಾಸವಿದ್ಯೆಯನ್ನುಪಪಾದಿಸುವ ಮೂಲಮನ್ತ್ರವೂ ಸ್ವರೂಪೋ ಪಾಯ ಪುರುಷಾರ್ಥ ಪರವೆಂದು ಹೇಳುತ್ತಾರೆ. ಇಷ್ಟು ಮಾತ್ರದಲ್ಲೇ ಐಕಕಂಠ್ಯವು. ಈ ಜೀವಾತ್ಮನು ಮಾಡುವದೆಲ್ಲವೂ ಸರ್ವಶೇಷಿಯಾದ ಪರಮಾತ್ಮನಿಗೇ ಎಂಬುದು ಮೂಲಮನ್ತ್ರದ ಮುಖ್ಯಾರ್ಥವಾದರೆ, ಶಕ್ತನಾದಪನು ಉಪಾಯಾನ್ತರವನ್ನವಲಂಬಿಸುವನೆಂಬ ಅರ್ಥವೂ ಹಾಗೆಯೇ ದ್ಯೋತಿತವು.

ಈ ಮೂರು ವಾಕ್ಯವೆಂದು ಭಾವಿಸಿದ ಪಂಚಮ ಯೋಜನೆಯಿಂದ ಮೂಲಮನ್ತ್ರಕ್ಕೂ ಶಾರೀರಕ ಶಾಸ್ತ್ರಕ್ಕೂ ಐಕಕಂಠ್ಯವು ಸಿದ್ಧವೆಂದು ನಿಗಮನ ಮಾಡಿ

**ಇಪ್ಪಡಿಯಾಗ್ಯಯಾಲ್ ಶಾರೀರಕತ್ತಿಲ್ ಚೊನ್ನ ಸ್ವರೂಪೋಪಾಯ ಪುರುಷಾರ್ಥಙ್ಗಳ್ ಎಲ್ಲಾವಮ್ ಶ್ರೀಮದಷ್ಟಾಕ್ಷರಾಂತಸ್ಥಙ್ಗಳ್. ಇದಿಲರ್ಥ ಪಂಚಕಾದಿಗಳ್ ಕಿಡಕ್ಕಿರ ವಗುಪ್ಪೆಲ್ಲಾಮ್ ಕೀಳೆ ಶೊನ್ನೋಮ್.**

---

ಹೇಳುತ್ತಾರೆ.—**ಇಪ್ಪಡಿಯಾಗ್ಯಯಾಲ್** – ಹೀಗೆ ನಾವು ಈಗ ಉಪಪಾದಿಸಿದ ರೀತಿಯಲ್ಲಿ, **ಶಾರೀರಕತ್ತಿಲ್ ಚೊನ್ನ** - ವ್ಯಾಸಸೂತ್ರಗಳಲ್ಲಿ ಹೇಳಲ್ಪಟ್ಟ, **ಸ್ವರೂಪೋಪಾಯ ಪುರುಷಾರ್ಥಙ್ಗಳ್** – ಕ್ರಮವಾಗಿ ಪರಮಾತ್ಮ ಜೀವಾತ್ಮಸ್ವರೂಪವೇನು, ಅನುಷ್ಠಿಸತಕ್ಕ ಉಪಾಯವೇನು, ಆದರಿಂದುಂಟಾಗುವ ಪುರುಷಾರ್ಥಗಳೇನು ? **ಎಲ್ಲಾವಮ್**-ಹೀಗೆ ಎಲ್ಲವೂ, **ಶ್ರೀಮದಷ್ಟಾಕ್ಷರಾಂತಸ್ಥಙ್ಗಳ್**-ಸರ್ವಂ **ಶ್ರೀಮದಷ್ಟಾಕ್ಷರಾಂತಸ್ಥಂ** ಎಂದು ಹಿಂದೆ ಉದಾಹರಿಸಲ್ಪಟ್ಟ ಹಾಗೆ, ಮೂಲಮನ್ತ್ರದಲ್ಲಿ ಅಡಗಿವೆ. ಉಪಾಯವು ಐಕಕಂಠ್ಯ ಸಮಶ್ಯಬ್ದದಲ್ಲಿ ತೋರಿಬರುತ್ತದೆಂದು ಹೇಳುವದು ಹೇಗೆ? ಮೂಲಮನ್ತ್ರದಲ್ಲಿ ಹೇಳಿರುವುದು ಭರನ್ಯಾಸವು, ಶಾರೀರಕ ಸೂತ್ರಗಳಲ್ಲಿ ಹೇಳಿರುವದು ಭಕ್ತಿಯೋಗವೆನಿಸುವ ಉಪಾಸನವು. ಹೀಗಿರುವಾಗ ಐಕಕಂಠ್ಯವನ್ನು ಸಮರ್ಥಿಸುವದು ಹೇಗೆ ? ಎಂಬಾಕ್ಷೇಪಕ್ಕೆ ಸಮಾಧಾನವಾಗಿ, ನಮಶ್ಶಬ್ದವು ಶರಣಾಗತಿಯನ್ನು ಬೋಧಿಸುವದಾಗ, ಒಂದಕ್ಕೆ ಶರಣಾಗತಿಯು ಸವ್ಯಾರಕವಾಗಿಯೂ, ಇನ್ನೊಂದಕ್ಕೆ ಅದ್ವಾರಕವಾಗಿಯೂ ಆವಶ್ಯಕವಾದುದರಿಂದ ಐಕಕಂಠ್ಯವುಂಟೆಂಬ ಉಪಪಾದನೆಯಲ್ಲಿ ಆಕ್ಷೇಪಕ್ಕೆ ಕಾರಣವಿರುವದಿಲ್ಲವೆಂದು ತಿಳಿಯತಕ್ಕದ್ದು.

ಮುಂದೆ, ಸರ್ವ ಶಾಸ್ತ್ರಾರ್ಥವೂ ಮೂಲಮನ್ತ್ರದಲ್ಲಿ ಅಡಗಿದೆ ಎಂದರೆ, ಸರ್ವಶಾಸ್ತ್ರಗಳೂ ಅರ್ಥಪಂಚಕಗಳನ್ನು ಉಪಪಾದಿಸುತ್ತವೆ; ಅವುಗಳೆಲ್ಲಾ ಮೂಲಮನ್ತ್ರದಲ್ಲಿ ಇವೆಯೋ? ಎಂದರೆ. ಹಿಂದೆಯೇ ಅರ್ಥಪಂಚಕಾಧಿಕಾರದಲ್ಲಿ ವಿಶದವಾಗಿ ಉಪಪಾದಿತವೆಂದು ಹೇಳುತ್ತಾರೆ. ಅರ್ಥಪಂಚಕಾಧಿಕಾರದ ಆದಿಯಲ್ಲಿರುವ ಸಙ್ಗ್ರಹ ಶ್ಲೋಕವಾದ "**ಆದೌ ಪ್ರಾಪ್ಯಂ**" ಎಂಬುದು ಅನುಸಂಧೇಯವು. (೩೨೩-೩೦ ಪುಟಗಳನ್ನು ಪರಾಂಬರಿಸಿ.) **ಇದಿಲ್** – ಈ ಮೂಲಮನ್ತ್ರದಲ್ಲಿ, **ಅರ್ಥಪಂಚಕಾದಿಗಳ್‌ಕಿಡಕ್ಕಿರ** - ಅರ್ಥಪಂಚಕಾಭಿಪ್ರಾಯಗಳೇ ಮೊದಲಾದವುಗಳೆಲ್ಲಾ ತೋರಿಬರುವ ಇಲ್ಲಿ ಆದಿಶಬ್ದದಿಂದ ಶೇಷಶೇಷಿ ಸಂಬಂಧಾದಿಗಳು ಹೇಳಲ್ಪಟ್ಟವು, **ವಗುಪ್ಪೆಲ್ಲಾಮ್** - ಪ್ರಭೇಧ ಪ್ರಕಾರಗಳೆಲ್ಲವನ್ನೂ, **ಕೀಳೆ ಶೊನ್ನೋಮ್** – ಹಿಂದೆ ಅರ್ಥಪಂಚಕಾಧಿಕಾರದಲ್ಲಿ ಹೇಳಿದೆವು. ಅರ್ಥಪಂಚಕ ವಿಷಯದಲ್ಲೂ, ಶಾರೀರಕ ಸೂತ್ರಕ್ಕೂ ಮೂಲಮನ್ತ್ರಕ್ಕೂ ಐಕಕಂಠ್ಯವುಂಟೆಂಬ ಅಭಿಪ್ರಾಯದಿಂದಲೇ, "ಇದಿಲ್" ಎಂದಾರಂಭಿಸಿದ ಈ ವಾಕ್ಯವನ್ನು ಅನುಗ್ರಹಿಸಿರುತ್ತಾರೆ. ಅರ್ಥಪಂಚಕಾಧಿಕಾರದಲ್ಲಿ ಅರ್ಥಪಂಚಕಾಭಿಪ್ರಾಯಗಳೆಲ್ಲಾ ಶಿಕ್ಷಿತವೆಂದು ವ್ಯಕ್ತಪಡಿಸಿರುತ್ತಾರೆ. ಹಾಗೆಯೇ ಈ ಶಾರೀರಕ ಸೂತ್ರಗಳಲ್ಲೂ

**ಏಕವಾಕ್ಯತ್ವಾದಿ ಪಕ್ಷೋಕ್ತ ದಶಪ್ರಕಾರಾರ್ಥ ಬುದ್ಧಿಸೌಕರ್ಯಾಯಾನು ವರ್ದ್ಯ ನಿಗಮಯತಿ.**

**ಇಪ್ಪಡಿ ತಿರುಮನ್ತ್ರಮ್ (೧) ಏಕವಾಕ್ಯಮಾನಪೋದು ೧. ಉಪಾಯ ಪರಮೆನ್ರುಮ್. ೨. ವೃತ್ತಿಪರಮೆನ್ರುಮ್ (೨) ವಾಕ್ಯದ್ವಯಮಾನಪೋದು**

---

ಅರ್ಥಪಂಚಕಾಭಿಪ್ರಾಯಗಳೆಲ್ಲಾ ಸಮರ್ಥಿಸಲ್ಪಟ್ಟಿವೆ ಎಂಬ ಭಾವವೂ ಸೂಚಿತವು. "ವದಂತಿ ಸಕಲಾವೇದಾಃ ಸೇತಿಹಾಸಪುರಾಣಕಾಃ" ಎಂದು ಈ ಅರ್ಥಪಂಚಕಾಭಿಪ್ರಾಯಗಳಲ್ಲಿ ವೇದಗಳಲ್ಲೂ ವೇದೋಪ ಬ್ರಾಹ್ಮಣಗಳಾಗಿರುವ ಎಲ್ಲಾ ಇತಿಹಾಸ ಪುರಾಣಗಳಲ್ಲೂ ಉಪಪಾದಿತವಾಗಿರುವಾಗ ವೇದಾರ್ಥಗಳ ತತ್ತ್ವನಿರೂಪಣೆಯಲ್ಲಿ ಪ್ರವರ್ತಿಸುವ ಶಾರೀರಕ ಸೂತ್ರಗಳಲ್ಲೂ ಉಪಪಾದಿತಗಳೇ ಎಂಬ ಭಾವನೆಯಿಂದ ಈ ವಾಕ್ಯವು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಶಾರೀರಕ ಶಾಸ್ತ್ರದ ಪ್ರಥಮ ದ್ವಿತೀಯಾಧ್ಯಾಯಗಳಲ್ಲಿ ಪರಬ್ರಹ್ಮನ ನಿಖಿಲ ಜಗದೇಕಕಾರಣತ್ವವು,ಶಾಸ್ತ್ರೈಕ ಗೋಚರತ್ವವು, ಅನವಧಿಕಾತಿಶಯಾನನ್ದಮಯತ್ವವು ಅಪ್ರಾಕೃತ ದಿವ್ಯಮಙ್ಗಳ ವಿಗ್ರಹತ್ವವೇ ಮೊದಲಾದ ಉಪಾಸ್ಯನಾಗಿಯೂ ಪ್ರಾಪ್ಯನಾಗಿಯೂ ಇರುವ ಸ್ವರೂಪವು ಉಪಪಾದಿತವಾಗಿ, ಇವುಗಳಿಗೆ ವಿರುದ್ಧವಾದ ಸ್ಮೃತಿವಾಕ್ಯಗಳೆಲ್ಲಾ ಖಂಡಿಸಲ್ಪಟ್ಟವು. ಅನಂತರ ಚಿದಚಿದಾತ್ಮಕವಾದ ಜಗತ್ತು ಕಾರ್ಯರೂಪವಾದುದು ಎಂಬಲ್ಲಿ ಪ್ರಾಪ್ತನಾದ ಜೀವಾತ್ಮನ ಸ್ವರೂಪವೂ ಹೇಳಲ್ಪಡುತ್ತದೆ; ಅನಂತರ ವೈರಾಗ್ಯಪಾದದಲ್ಲಿ ಆತನ ಸ್ವರೂಪವು ವಿಶೋಧಿಸಲ್ಪಟ್ಟು, ಅಲ್ಲಿಯೇ ವಿರೋಧಿ ಸ್ವರೂಪವೂ ಉಪಪಾದಿತವು. ಮೂರನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಉಪಾಯ ಸ್ವರೂಪವು ಬೋಧಿತವು. ನಾಲ್ಕನೆಯ ಅಧ್ಯಾಯದಲ್ಲಿ ಫಲಸ್ವರೂಪವು ನಿರೂಪಿಸಲ್ಪಟ್ಟಿರುತ್ತದೆ. ಹೀಗೆ ಶಾರೀರಕ ಶಾಸ್ತ್ರದಲ್ಲೂ ಅರ್ಥಪಂಚಕಗಳು ಉಪನ್ಯಸ್ತವೆಂದು ತಿಳಿಯತಕ್ಕದ್ದು.

**ಹಿಂದೆ ಒಂದು ಎರಡು ಮೂರು ವಾಕ್ಯಗಳಾಗಿ ಭಾವಿಸಲ್ಪಟ್ಟ ಹತ್ತು ಅರ್ಥಗಳನ್ನು ಸಙ್ಗ್ರಹಿಸಿ ಹೇಳುತ್ತಾರೆ.**

ಹಿಂದೆ ಏಕವಾಕ್ಯವಾಗಿ ಭಾವಿಸುವದರಿಂದ ಎರಡು ಅಭಿಪ್ರಾಯಗಳೂ, ಎರಡು ವಾಕ್ಯಗಳಾಗಿ ಭಾವಿಸುವದರಿಂದ ಮೂರು ಅಭಿಪ್ರಾಯಗಳೂ, ಮೂರು ವಾಕ್ಯಗಳಾಗಿ ಭಾವಿಸುವದರಿಂದ ಐದು ಅಭಿಪ್ರಾಯಗಳೂ ತೋರುತ್ತವೆಂದು ವಿಸ್ತರಿಸಿ ಉಪಪಾದಿಸಿ, ಹೀಗೆ ಹತ್ತು ಯೋಜನೆಯಿಂದ ಹತ್ತು ಅರ್ಥಗಳನ್ನು ಪ್ರದರ್ಶಿಸಿದರು. ಅವುಗಳನ್ನು ಜ್ಞಾಪಕದಲ್ಲಿಟ್ಟು ಅನುಸಂಧಾನ ಮಾಡುವದಕ್ಕಾಗಿ ಸಙ್ಗ್ರಹಿಸಿ ಹೇಳುತ್ತಾರೆ.—**ಇಪ್ಪಡಿ** - ಈ ಮೇಲೆ ಉಪಪಾದಿಸಲ್ಪಟ್ಟ ರೀತಿಯಲ್ಲಿ, **ತಿರುಮನ್ತ್ರಮ್** - ಮೂಲಮನ್ತ್ರವು

೩. ಸ್ವರೂಪಪರಮೆನ್ರುಮ್. ೪. ಅನ್ವಯ ವ್ಯತಿರೇಕ ಮುಖೇನ ಸಮರ್ಪಣ ಪರಮೆನ್ರುಮ್. ೫, ಪುರುಷಾರ್ಥಪ್ರಾರ್ಥನಾ ಪರಮೆನ್ರುಮ್ (೩) ವಾಕ್ಯತ್ರಯಮಾನಪೋದು, ೧. ಮುದಲಿರಣ್ಡು ಪದಮುಮ್ ಸ್ವರೂಪಪರಮಾಯ್ ಮೇಲ್ಪದಮ್ ಪುರುಷಾರ್ಥ ಪ್ರಾರ್ಥನಾಪರಮೆನ್ರುಮ್, ೨. ಪ್ರಣವಮ್ ಸ್ವರೂಪಪರಮಾಯ್ ಮೇಲಿರಣ್ಡು ಪದಮುಮ್ ಅನಿಷ್ಟನಿವೃತ್ತಿ ಇಷ್ಟ

---

(೧) **ಏಕವಾಕ್ಯಮಾನಪೋದು** - ಒಂದು ವಾಕ್ಯವೆಂದು ಭಾವಿಸಿದಾಗ,

1. **ಉಪಾಯಪರವೆಂದೂ**, 2. **ವೃತ್ತಿಪರವೆಂದೂ**, ಶೇಷವೃತ್ತಿ ಪರವಾದ ನಮಸ್ಕಾರ ಕೈಙ್ಕರ್ಯಪರವೆಂದೂ.

(೨) **ವಾಕ್ಯದ್ವಯಮಾನಪೋದು** - ಎರಡು ವಾಕ್ಯವೆಂದು ಭಾವಿಸಿದಾಗ,

1. **ಸ್ವರೂಪಪರಮೆನ್ರು** - ಶೇಷಿ ಶೇಷತ್ವರೂಪ ಸ್ವರೂಪಪರವೆಂದೂ,

2. **ಅನ್ವಯ ವ್ಯತಿರೇಕಮುಖೇನ ಸಮರ್ಪಣ ಪರಮೆನ್ರುಮ್** – ಇಲ್ಲಿ ಸಮರ್ಪಣವು ಭರಸಮರ್ಪಣವು; ಅದು ಅನ್ವಯ ಮುಖೇನವಾದರೆ, ಪರಮಪುರುಷನಿಗೇ ಸರ್ವಭರವೆಂದೂ, ವ್ಯತಿರೇಕಮುಖೇನವಾದರೆ, ಅದು ತನಗಲ್ಲವು ಎಂಬ ಭಾವನೆಗಳನ್ನು ತೋರ್ಪಡಿಸುವದೆಂದೂ,

3. **ಪುರುಷಾರ್ಥಪ್ರಾರ್ಥನಾ ಪರಮೆನ್ರುಮ್** – ನಿತ್ಯ ಕೈಙ್ಕರ್ಯದ ಪ್ರಾರ್ಥನಾರೂಪವಾದುದೆಂದೂ,

೩. **ವಾಕ್ಯತ್ರಯ ಮಾನಪೋದು** - ಮೂರು ವಾಕ್ಯವೆಂದು ಭಾವಿಸಿದಾಗ,

1. **ಮುದಲಿರಣ್ಡುಪದಮುಮ್** - ಓಂ ನಮಃ ಎಂಬ ಮೊದಲಿನ ಎರಡು ಪದಗಳು, **ಸ್ವರೂಪಪರಮಾಯ್** - ಶೇಷಿ ಶೇಷಬಾವವನ್ನು ತಿಳಿಸುವದಾಗಿಯೂ, **ಮೇಲ್ಪದಮ್** - ಮುಂದಿನ ನಾರಾಯಣಾಯ ಎಂಬ ಪದವು **ಪುರುಷಾರ್ಥ ಪ್ರಾರ್ಥನಾಪರಮೆನ್ರುಮ್** - ಪುರುಷಾರ್ಥ ಪ್ರಾರ್ಥನಾ ಬೋಧಕವೆಂದೂ,

2. **ಪ್ರಣವಮ್ ಸ್ವರೂಪಪರಮಾಯ್** – ಪ್ರಣವವು ಶೇಷಿ ಶೇಷ ಭಾವಬೋಧಕವೆಂದೂ, **ಮೇಲಿರಣ್ಡುಪದಮುಮ್** - ಮಿಕ್ಕ ಎರಡು ಪದಗಳಾದ ನಮಃ ನಾರಾಯಣಾಯ ಎಂಬಿವು, **ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಪರ**ವೆಂದೂ,

3. **ಇಕ್ಕಟ್ಟಳೈಯಿಲೇ** - ಈ ಮೇಲೆ ಹೇಳಿದ ಪ್ರಕಾರವಾಗಿಯೇ, **ಪ್ರಥಮಪದಮ್** – ಓಂಕಾರವು **ಸ್ವರೂಪಪರಮಾಯ್** - ತನ್ನ ಶೇಷಭಾವವನ್ನು ಪ್ರದರ್ಶಿಸುವದಾಗಿ, **ಮೇಲಿರಂಡುಪದಮ್** - **ನಮಃನಾರಾಯಣಾಯ** ಪದಗಳು, **ಉಪಾಯಪರಮೆನ್ರುಮ್** – ಉಪಾಯವನ್ನು ಬೋಧಿಸುತ್ತವೆಂದೂ,

**ಪ್ರಾಪ್ತಿ ಪ್ರಾರ್ಥನಾಪರೆನ್ರುಮ್, ೮. ಇಕ್ಕಟ್ಟೈಳೈಯಿಲೇ ಪ್ರಥಮ ಪದಮ್ ಸ್ವರೂಪಪರಮಾಯ್ ಮೇಲಿರಣ್ಡು ಪದಮುಮ್ ಉಪಾಯಪರವೆನ್ರುಮ್ ೯. ಪ್ರಥಮಪದಮ್ ಸಮರ್ಪಣಪರಮಾಯ್, ಮೇಲಿರಣ್ಡು ಪದಮುಮ್ ಫಲಪ್ರಾರ್ಥನಾ ಪರಮೆನ್ರುಮ್, ೧೦. ಪದತ್ರಯಮುಮ್ ಅದ್ವೈವೇ ತತ್ವೋಪಾಯ ಪುರುಷಾರ್ಥ ಪ್ರಾರ್ಥನಾಪರಮೆನ್ರುಮ್, ಅನಂತಾರ್ಥ ಗರ್ಭಮಾನ ವಿತ್ತಿರುಮನ್ರತ್ತಿಲ್ ವಾಕ್ಯಾರ್ಥತ್ತೈ ಪ್ಪತ್ತುಪಡಿಯಾಗ ಯಥಾಸಂಪ್ರದಾಯಂ ಅನುಸಂಧಿಪ್ಪಾರ್‌ಗಳ್. ಇಪ್ಪಡಿ ಶಿಲವತ್ತೈ ಪ್ರಧಾನಮಾಗ ಅನುಸಂಧಿತ್ತಾಲುಮ್ ಮತ್ತುಳ್ಳವೈಯುಮ್ ಅರ್ಥಮಾಗಕ್ಕಡವದು.**

---

4. ಪ್ರಥಮಪದಮ್ - ಓಙ್ಕಾರವು, **ಸಮರ್ಪಣಪರಮಾಯ್** - ಭರಸಮರ್ಪಣಪರವಾಗಿ, **ಮೇಲಿರಣ್ಡುಪದಮುಮ್** - ನಮಃನಾರಾಯಣಾಯ ಎಂಬಿವು, **ಫಲಪ್ರಾರ್ಥನಾ ಪರಮೆನ್ರುಮ್** - ಪುರುಷಾರ್ಥಪ್ರಾಪ್ತಿಯನ್ನು ಬೋಧಿಸುತ್ತವೆಂದೂ,

5. **ಪದತ್ರಯಮುಮ್** - ಮೂಲಮನ್ತ್ರದ ಮೂರು ಪದಗಳೂ, **ತತ್ವೋಪಾಯ ಪುರುಷಾರ್ಥ ಪ್ರಾರ್ಥನಾ ಪರಮೆನ್ರುಮ್** - ಕ್ರಮೇಣ ತತ್ವ, ಉಪಾಯ, ಪುರುಷಾರ್ಥಪ್ರಾರ್ಥನೆಗಳನ್ನು ಬೋಧಿಸುವವೆಂದೂ,

**ಅನಂತಾರ್ಥಗರ್ಭಮಾನ** - ಹೀಗೆ ಅನೇಕಾಭಿಪ್ರಾಗಳನ್ನು ಒಳಗೊಂಡಿರುವ, **ತಿರುಮನ್ರತ್ತಿಲ್** - ಮೂಲಮನ್ತ್ರದಲ್ಲಿ, **ವಾಕ್ಯಾರ್ಥತ್ತೈ** - ಒಂದು ಎರಡು ಮೂರು ವಾಕ್ಯಗಳಾಗಿ ಭಾವಿಸಿದ ಯೋಜನೆಗಳಿಂದುಂಟಾದ ಅರ್ಥಗಳನ್ನು **ಯಥಾಸಂಪ್ರದಾಯಮ್** - ಪ್ರಪನ್ನರುಗಳಾದ ಆಚಾರ್ಯರುಗಳು ಸಂಪ್ರದಾಯ ರೀತ್ಯಾ ಉಪದೇಶಿಸಿದ ರೀತಿಯಲ್ಲಿ, **ಅನುಸಂಧಿಪ್ಪಾರ್‌ಗಳ್** - ಶಿಷ್ಯರುಗಳು ಅನುಸಂಧಾನ ಮಾಡುವರು ಎಂಬ ಭಾವವು. ಸಂಪ್ರದಾಯ ರೀತ್ಯಾ ಉಪಪಾದಿತವಾದುದರಿಂದ ಇವೆಲ್ಲವೂ ಗ್ರಾಹ್ಯಗಳೇ ಎಂಬ ಭಾವವು- ಹೀಗೆ **"ವಾಕ್ಯೈಕತ್ವೇ ಯೋಜನೇದ್ವೇತ್ರಿಸ್ರೇವಾಕ್ಯದ್ವಯೇತಥಾ । ವಾಕ್ಯತ್ರಯೇ ಪಂಚಚೋಕ್ತಾಸ್ತಾಃ ಪೃಥಕ್ಪೃಥಗೀರಿತಾಃ"** ಎಂದು ಹೇಳಿರುವ ಮೇರೆಗೆ ಒಂದು ವಾಕ್ಯವಾಗಿ ಭಾವಿಸಿದರೆ ಎರಡು ಯೋಜನೆಗಳು, ಎರಡು ವಾಕ್ಯಗಳಾದರೆ ಮೂರು ಯೋಜನೆಗಳು, ಮೂರು ವಾಕ್ಯಗಳಾದರೆ ಐದು ಯೋಜನೆಗಳು ಒಟ್ಟಿಲ್ಲಾ ಹತ್ತು ಯೋಜನೆಗಳೂ ಎಂಬ ಭಾವವು. ಈ ಹತ್ತು ಯೋಜನೆಗಳಲ್ಲಿ ಕೆಲವರು ಒಂದೊಂದನ್ನೇ ಪ್ರಧಾನಾರ್ಥವಾಗಿ ಭಾವಿಸಿದುದಾದರೆ, ಮಿಕ್ಕ ಅರ್ಥಗಳು ಬಿಟ್ಟುಹೋದ ನ್ಯೂನತೆಯುಂಟಾಗುವದಿಲ್ಲವೇ ? ಎಂದರೆ ಮಿಕ್ಕ ಅರ್ಥಗಳು ಅರ್ಥವಾಗಿ ತೋರಿಬರುವದರಿಂದ ಏನೊಂದೂ ಆಕ್ಷೇಪಕ್ಕೆ ಕಾರಣವಿಲ್ಲವೆಂಬ ಅಭಿಪ್ರಾಯದಿಂದ ಮುಂದಿನ ವಾಕ್ಯವನ್ನು ಅನುಗ್ರಹಿಸುತ್ತಾರೆ :— **ಇಪ್ಪಡಿ**-ಹೀಗೆ ಈಗ ಸಙ್ಗ್ರಹಿಸಿ

**ತದೇವಂ ಪದವಾಕ್ಯಾರ್ಥೈ ಸ್ತತ್ತ್ವವಿದ್ಗುರುದರ್ಶಿತೈಃ।**
**ತತ್ತತ್ಕುದೃಷ್ಟಿಕಥಿತಂ ನಿರಸ್ತಂ ಯೋಜನಾನ್ತರಮ್ ॥೯॥**

---

ಹೇಳಿದ ಹತ್ತು ವಿಧ ಅರ್ಥಗಳಲ್ಲಿ, **ಶಿಲವತ್ತೈ** - ಕೆಲವನ್ನು **ಪ್ರಧಾನವಾಗ - ಅನುಸಂಧಿತ್ಸಾಂಲುಮ್** - ಕೆಲವರು ತಮಗೆ ಸಂಪ್ರದಾಯ ರೀತ್ಯಾ ಬಂದು ಮುಖ್ಯಣಾಗಿ ಉಪದೇಶಿಸಲ್ಪಟ್ಟುದೆಂದು ಭಾವಿಸಿ ಅನುಸಂಧಾನ ಮಾಡಿದರೂ, ಮತ್ತು **ಳೃವೈಯುಮ್**. ಮಿಕ್ಕ ಎಲ್ಲಾ ಅಭಿಪ್ರಾಯಗಳೂ, **ಆರ್ಥವಾಗಕ್ಕಡವದು**- ಅರ್ಥವಾಗಿ **ತೋರುತ್ತವೆ.**

ಈ ಅನೋಘಗಳಾದ ಭಾವಗಳೆಲ್ಲಾ ಮೂಲಮನ್ತ್ರದಲ್ಲಿವೆ ಎಂದು ತಮಗೆ ಪರಮಾಚಾರ್ಯರಾದ ವಾದಿಹಂಸಾಂಬುವಾಹರೆಂಬ ಅಪರನಾಮವನ್ನು ಧರಿಸಿದ ಆತ್ರೇಯ ರಾಮಾನುಜ ಗುರುಗಳಿಂದ ಪರಮಕೃಪಯಾ ಉಪದೇಶಿಸಲ್ಪಟ್ಟಿತೆಂದು ತಮ್ಮ ಕೃತಜ್ಞತಾಭಾವವನ್ನು ಪ್ರದರ್ಶಿಸಿ, ಇದರಿಂದ ಇತರ ಸಿದ್ಧಾನ್ತಿಗಳು ಹೇಳುವ ಇತರ ಯೋಜನೆಗಳೆಲ್ಲಾ ಅಪಸಿದ್ಧಾನ್ತವಾಗಿ ನಿರಸ್ತವೆಂದು ಹೇಳುತ್ತಾರೆ. ಈ ಇತರ ಸಿದ್ಧಾನ್ತಿಗಳು ಹೇಳುವ ಅರ್ಥಗಳಿಗೂ ತಮ್ಮ ಗುರುಪರಂಪರೆಯಿಂದ ಬಂದ ಈ ಅರ್ಥಭೂಯಸ್ತ್ವಕ್ಕೂ ಅಜಗಜಾಂತರ ನ್ಯಾಯವಾಗಿ ಅವರುಗಳ ಅರ್ಥದಲ್ಲಿ ನಿನೊಂದೂ ಸ್ವಾರಸ್ಯವೇ ಇಲ್ಲವೆಂಬ ಭಾವನೆಯಿಂದ ಒಂದು ಪ್ರಮಾಣ ಮೂಲಕ ಗಂಭೀರವಾಗಿ ತಿಳಿಸುತ್ತಾರೆ.—**ತತ್** – ತಸ್ಮಾತ್, ಆ ಕಾರಣದಿಂದ, **ಏವಂ** - ಈ ಪರಿಯಾಗಿ, **ತತ್ತ್ವವಿದ್ಗುರುದರ್ಶಿತೈಃ** - ತತ್ತ್ವವನ್ನೆಲ್ಲಾ ವಿಮರ್ಶಿಸಿ ಚನ್ನಾಗಿ ತಿಳಿದ ತಮ್ಮ ಗುರುಗಳಾದ ಆತ್ರೇಯ ರಾಮಾನುಜರಿಂದ, ತೋರಿಸಲ್ಪಟ್ಟ **ಪದವಾಕ್ಯಾರ್ಥೈಃ** - ಮೂಲಮನ್ತ್ರದ ಪದಗಳ ಮತ್ತು ವಾಕ್ಯಗಳ ಅರ್ಥಗಳಿಂದ, ಅಥವಾ **ಗುರುದರ್ಶಿತೈಃ** - ಶ್ರೀ ನಿಗಮಾನ್ತ ದೇಶಿಕರವರು ಶ್ರೀ ಯತಿವರ್ಯರನ್ನು ತಮಗೆ ಗುರುವಾಗಿ ಸಙ್ಕಲ್ಪಸೂರ್ಯೋದಯದಲ್ಲಿ ಹೇಳಿಕೊಂಡಿರುವದರಿಂದ ಶ್ರೀ ಸಾರಾಸ್ವಾದಿನಿಯವರು, ಶ್ರೀ ಭಾಷ್ಯಕಾರಾದಿಗಳಿಂದ ತೋರಿಸಲ್ಪಟ್ಟ ಎಂದು ಅರ್ಥಮಾಡಿರುತ್ತಾರೆ. ಹೀಗೆ ಭಾಷ್ಯಕಾರಾದಿಗಳಿಂದ ಸಂಪ್ರದಾಯ ರೀತ್ಯಾ ಬಂದ ರಹಸ್ಯತ್ರಯಗಳ ಅರ್ಥವೇ ತಮ್ಮ ಸ್ವಾಚಾರ್ಯರಿಂದ ತಮಗೆ ಲಭಿಸಿತು ಎಂಬ ಭಾವವೂ ಸೂಚಿತವು. **ತತ್ತತ್ಕುದೃಷ್ಟಿ ಕಥಿತಂ** - ಶ್ರುತಿವಾಕ್ಯಗಳಿಗೆ ಅಪಾರ್ಥ ಗಳನ್ನು ಕಲ್ಪಿಸುವ ಆ ಅಪಸಿದ್ಧಾನ್ತಿಗಳಿಂದ ಹೇಳಲ್ಪಟ್ಟ, **ಯೋಜನಾಂತರಂ** - ಬೇರೆ ಯೋಜನೆಯು, ಅಕಾರ ಮಕಾರಾರ್ಥ ಸಾಮಾನಾಧಿಕರಣ್ಯವು ಹೇಳಲ್ಪಟ್ಟಿರು ವದರಿಂದ ಅಭೇದದ ಉಪಪಾದನೆಯು ಎಂಬ ಯೋಜನಾಂತರವು ನಿರಸ್ತವು. ಪ್ರಣವದ ವಿಷಯದಲ್ಲಿ ಅದ್ವೈತಿಗಳ ಅಭಿಪ್ರಾಯವು ಹೇಗೆಂದರೆ, ಅಕಾರವಾಚ್ಯ ನಿಗೂ ಮಕಾರವಾಚ್ಯನಿಗೂ ಉಕಾರವು ಅವಧಾರಣವಾಗಿ ಐಕ್ಯವನ್ನು ಉಪ ಪಾದಿಸುತ್ತದೆ; ಇತ್ಯಾದಿ ಯೋಜನಾಂತರಗಳೆಲ್ಲಾ ನಿರಸ್ತವೆಂಬ ಅಭಿಪ್ರಾಯವು.

**ಇತ್ತಿರುಮನ್ತ್ರತ್ತಿಲ್ ಬಾಹ್ಯಕುದೃಷ್ಟಿಮತಙ್ಗಳಾಲ್ ಕಲಕ್ಕವೊಣ್ಣಾದ ತೆಳಿವುಡೈಯವನೈ "ಪ್ರಜ್ಞಾಪ್ರಾಸಾದಮಾರುಹ್ಯ ಹ್ಯಶೋಚ್ಯಃ ಶೋಚತೋ ಜನಾರ್ನ್ । ಭೂಮಿಸ್ಥಾನಿವ ಶೈಲಸ್ಥೋ ಹ್ಯಜ್ಞಾರ್ನ್ ಪ್ರಾಜ್ಞಃ ಪ್ರಪಶ್ಯತಿ ॥"**

---

ಮೇಲಿನ ಕಾರಿಕಾಭಿಪ್ರಾಯವನ್ನೇ ವಿಶದೀಕರಿಸುತ್ತಾರೆ—ಹೀಗೆ ಸತ್ಸಂಪ್ರದಾಯ ರೀತ್ಯಾ ಮೇಲೆ ತಾವು ಉಪಪಾದಿಸಿದ ರೀತಿಯಲ್ಲಿ ಮೂಲಮನ್ತ್ರದ ಅಮೋಘಾರ್ಥಗಳನ್ನೆಲ್ಲಾ ಸದಾಚಾರ್ಯರಿಂದ ಅಧಿಕರಿಸಿದ ಪ್ರಪನ್ನನ ಮಹನೀಯತ್ವವನ್ನು ಕೊಂಡಾಡಿ, ಅಂತಹ ಸುಕೃತವಿಲ್ಲದಿರುವುದು, ಕುದೃಷ್ಟಿಯು ಅವಿಜ್ಞತೆಯೆಂದು ಹೇಳುತ್ತಾರೆ.—**ಇತ್ತಿರುಮನ್ತ್ರತ್ತಿಲ್** - ಈ ಮೂಲಮನ್ತ್ರದಲ್ಲಿ **ಬಾಹ್ಯಕುದೃಷ್ಟಿಮತಙ್ಗಳಾಲ್** - ವೇದ ಪ್ರಾಮಾಣ್ಯವನ್ನು ಒಪ್ಪದವರು ಬಾಹ್ಯರು, ವೇದವಾಕ್ಯಗಳಿಗೆ ಅಪಾರ್ಥವನ್ನು ಕಲ್ಪಿಸಿದವರು ಕುದೃಷ್ಟಿಗಳು, ಬಾಹ್ಯಮತಗಳು ೧೧, ಕುದೃಷ್ಟಿಮತಗಳು ೬, ಒಟ್ಟು ೧೭, ಇವು ಯಾವುವು ಎಂಬುದಕ್ಕೆ ಸಾರನಿಷ್ಕರ್ಷಾಧಿಕಾರದ ೨೦೯ರಿಂದ ೨೨೩ ಪುಟಗಳನ್ನು ಪರಾಂಬರಿಸಿ ; ಇಂತಹ ಬಾಹ್ಯಕುದೃಷ್ಟಿಮತಗಳಿಂದ, **ಕಲಕ್ಕವೊಣ್ಣಾದ** - ಚಾಂಚಲ್ಯವನ್ನು ಹೊಂದದ, **ತೆಳಿವುಡೈಯವನೈ** - ಮೂಲಮನ್ತ್ರಾದಿಗಳ ಯಥಾರ್ಥಜ್ಞಾನವನ್ನು ಹೊಂದಿರುವ ಶ್ರೀ ಭಾಷ್ಯಕಾರ ಸಿದ್ಧಾಂತಾವಲಂಬಿಯನ್ನು, ಮಹಾಪ್ರಾಜ್ಞ ಎಙ್ಗಿರದು - ಮಹಾಪ್ರಾಜ್ಞನೆಂದು ಹೇಳುವದು ಎಂಬದಾಗಿ ಒಂದು ಶ್ಲೋಕಮುಖೇನ ಕೊಂಡಾಡುತ್ತಾರೆ.—**ಪ್ರಜ್ಞಾಪ್ರಾಸಾದಂ** – ವೇದಗಳ ಮತ್ತು ಮೂಲಮನ್ತ್ರಾದಿರಹಸ್ಯಗಳ ಯಥಾರ್ಥಜ್ಞಾನವೆಂಬ ಉಪ್ಪರಿಗೆಯನ್ನು, **ಆರುಹ್ಯ** - ಹತ್ತಿ, **ಅಶೋಚ್ಯಃ** – ಯಾವುದರಿಂದಲೂ ದುಃಖಿಸಲು ಅನರ್ಹನಾದ, **ಪ್ರಾಜ್ಞಃ** - ಸಮೀಚೀನವಾದ ಶಾಸ್ತ್ರಾರ್ಥ ಪರಿಚಯವುಳ್ಳ ಪಂಡಿತನು, **ಅಜ್ಞಾರ್ನ್** - ಅಂತಹ ಜ್ಞಾನವಿಲ್ಲದ, **ಶೋಚತಃ** - ದುಃಖಿಸುತ್ತಿರುವ, **ಅಜ್ಞಾರ್ನ್** – ಜ್ಞಾನಶೂನ್ಯರಾದ **ಜನಾರ್ನ್** – ಸಾಧಾರಣ ಜನರನ್ನು, **ಶೈಲಸ್ಥಃ** - ಉನ್ನತವಾದ ಪರ್ವತದಲ್ಲಿರುವವನು, ಎಂದರೆ ಪರ್ವತಾಗ್ರವನ್ನು ಆರೋಹಣ ಮಾಡಿದವನು, **ಭೂಮಿಸ್ಥಾರ್ನ್ ಇವ** - ಕೆಳಗೆ ಭೂಮಿಯಲ್ಲಿರುವವರನ್ನು ಹೇಗೋ ಹಾಗೆ ಎಂದರೆ ತಾನು ಸುಕೃತ ಪರಿಪಾಕದಿಂದಲೂ ದೈವಾನುಗ್ರಹದಿಂದಲೂ ಮಹೋನ್ನತಿಯನ್ನು ಹೊಂದಿದವನೆಂದು ಭಾವಿಸಿಕೊಂಡು, ಅಜ್ಞರಾದವರನ್ನು, ಪರ್ವತಾಗ್ರದಿಂದ ನೋಡುವವರಿಗೆ ಕೆಳಗಿರುವವರು ಅತಿಸೂಕ್ಷ್ಮರಾಗಿ ಕಾಣುವಹಾಗೆ, ದುಷ್ಕೃತಪರಿಪಾಕದಿಂದಲೂ, ದೈವಾನುಗ್ರಹವಿಲ್ಲದುದರಿಂದ ಅವಿಜ್ಞತಾಭಾವವನ್ನು ಹೊಂದಿದರೆಂದು ಪರಿತಾಪದಿಂದ ಪ್ರಾಜ್ಞನು, **ಪ್ರಪಶ್ಯತಿ** – ಕಾಣುವನು ; ಎಂಬುದು ಶ್ಲೋಕಾರ್ಥವು. ಈ ಶ್ಲೋಕವು ಹೆಮ್ಮೆಯಿಂದ ಅಹಂಕಾರ ಭಾವವನ್ನು ಪ್ರದರ್ಶಿಸುವ ಶ್ಲೋಕವಲ್ಲವು ; ಏಕೆಂದರೆ ತಾನು ದೈವಾನುಗ್ರಹದಿಂದ ಅಶೋಚ್ಯನೆಂದೂ, ಇತರ ಅಜ್ಞರಾದ ಪಾಮರರನ್ನು

ಎಜ್ಞ್ಗಿರದು. "ಜ್ಞಾನೇನ ಹೀನಃ ಪಶುಭಿಸ್ಸಮಾನಃ" ಎಜ್ಞ್ಗಿರ ವಿಡತ್ತಿಲ್ ಜ್ಞಾನಮೆಜ್ಞ್ಗಿರದು, ಇತ್ತೆಳಿನ್ವೈ.

ಇಪ್ಪಡಿ ತೆಳಿನ್ದವರ್ (೧) "ನಪ್ರಹೃಷ್ಯತಿ ಸಮ್ಮಾನೇ ನಾವಮಾನೇಽನು

---

ಶೋಚತಃ ಎಂದೂ ಹೇಳಲ್ಪಟ್ಟಿರುವದರಿಂದ, ಪರಿತಾಪ ಸೂಚಕ ಶ್ಲೋಕವೆಂದೇ ಭಾವಿಸತಕ್ಕದ್ದು. ಪರಮ ಕಾರುಣಿಕನ ದಯೆಯಿಂದ ತಾನು ಪ್ರಜ್ಞೆ ಎಂಬ ಪ್ರಾಸಾದವನ್ನಾಗಲಿ ಪರ್ವತಾಗ್ರವನ್ನಾಗಲಿ ಆರೋಹಣ ಮಾಡಿರುವದು ; ಇತರ ರಂದ ಅಜ್ಞರಿಗೆ ಅಂತಹ ಸುಕೃತವಿಲ್ಲವೆಂಬರ್ಥದಲ್ಲೇ ಈ ಶ್ಲೋಕಕ್ಕೆ ತಾತ್ಪರ್ಯವು- "ಜ್ಞಾನೇನ ಹೀನಃ ಪಶುಭಿಸ್ಸಮಾನಃ" ಜ್ಞಾನವಿಲ್ಲದವನು ಪಶುವಿಗೆ ಸಮಾನನು, ಎಜ್ಞ್ಗಿರವಿಡತ್ತಿಲ್ - ಎಂದು ಹೇಳಿರುವ ಸ್ಥಳದಲ್ಲಿ, ಜ್ಞಾನಮೆಜ್ಞ್ಗಿರದು - ಜ್ಞಾನವೆಂದು ಹೇಳಿರುವುದು, ಇತ್ತೆಳಿನ್ವೈ - ಇಂತಹ ಶಾಸ್ತ್ರದ ಯಥಾರ್ಥವಾದ ಅಭಿಪ್ರಾಯಗಳನ್ನು ಗ್ರಹಿಸಿ ತದನುಗುಣವಾಗಿ ಮೂಲಮನ್ತ್ರಾದಿಗಳ ಯಥಾರ್ಥ ಬೋಧವನ್ನು ಗ್ರಹಿಸುವ ಪ್ರಾಜ್ಞತೆಯೇ ಎಂದು ಭಾವಿಸತಕ್ಕದ್ದು. ಪಶುವಿಗೇನೋ ಸರ್ವೇಶ್ವರನು ಶಾಸ್ತ್ರಾರ್ಥ ಮೊದಲಾದವುಗಳನ್ನು ಗ್ರಹಿಸುವ ಶಕ್ತಿಯನ್ನು ಕೊಟ್ಟಿಲ್ಲವು. ಇದು ಕರ್ಮಪರಿಪಾಕದಿಂದ ಶೋಚನೀಯವಾದ ಜನ್ಮವು. ಮನುಷ್ಯ ಜನ್ಮವನ್ನು ಹೊಂದಿ, ಸದಾಚಾರ್ಯರಿಂದ ಯಥಾರ್ಥಜ್ಞಾನವನ್ನು ಹೊಂದುವ ಶಕ್ತಿಯುಳ್ಳ ಸುಕೃತವನ್ನೂ ಹೊಂದಿದ್ದರೂ ಅಂತಹ ಜ್ಞಾನವನ್ನು ಹೊಂದಲು ಯತ್ನಿಸದೇ ಇರುವದು ಶೋಚನೀಯ ವಿಷಯವು ; ಒಂದು ವೇಳೆ ಜ್ಞಾನಕ್ಕಾಗಿ ಪ್ರವರ್ತಿಸಿದರೂ, ಬಾಹ್ಯಕುದೃಷ್ಟಿಗಳ ವಶಕ್ಕೆ ಸಿಕ್ಕಿ ಅಯಥಾರ್ಥಜ್ಞಾನವನ್ನು ಸಂಪಾದಿಸುವದು, ಇನ್ನೂ ಶೋಚನೀಯವಾದುದು. ಆದುದರಿಂದ ಸದಾಚಾರ್ಯರನ್ನು ಆಶ್ರಯಿಸಿ ಯಥಾರ್ಥಜ್ಞಾನವನ್ನು ಹೊಂದಿ ಮೂಲಮನ್ತ್ರಾದಿಗಳಿಗೆ ವಿಪರೀತಾರ್ಥಗಳನ್ನು ಕಲ್ಪಿಸದೆ, ಯಥಾರ್ಥಜ್ಞಾನವನ್ನು ಸಂಪಾದಿಸುವದು ಅವಶ್ಯಕವು ; ಅಂತಹ ಜ್ಞಾನವಿಲ್ಲದವನು ಪಶುವಿಗೆ ಸಮಾನನಾಗುವನು ; ಅಂತವನೂ ಕೂಡ ಶೋಚ್ಯನೇ ಎಂಬ ಭಾವವು.

ಮುಂದೆ ಇಂತಹ ಯಥಾರ್ಥಜ್ಞಾನವುಳ್ಳವನನ್ನು ಕೊಂಡಾಡುತ್ತಾರೆ. ಆತನಿಗೆ ಅಹಂಕಾರ ಮಮಕಾರಗಳಿಲ್ಲವಾದುದರಿಂದ ಮಾನಾವಮಾನಗಳಿಂದ ಮನಸ್ಸು ವಿಕಾರವನ್ನು ಹೊಂದದೆ ಶಾನ್ತವಾಗಿರುವನೆಂದು ಉಪದೇಶಿಸುತ್ತಾರೆ.-- ಇಪ್ಪಡಿ ತೆಳಿನ್ದವರ್ - ಇಂತಹ ಯಥಾರ್ಥಜ್ಞಾನವನ್ನು ಹೊಂದಿದವನು, (೧) ಯಃ - ಯಾವ ಪ್ರಾಜ್ಞನು, ಸಂಮಾನೇ - ತನಗೆ ಸಮ್ಮಾನವು ಎಂದರೆ ಪೂಜ್ಯತೆಯು ಉಂಟಾದಾಗ; ನಪ್ರಹೃಷ್ಯತಿ - ಸಂತೋಷಪಡುವದಿಲ್ಲವೋ, ಭಗವಂತನ ಕೃಪೆಯಿಂದ ಉಂಟಾದ ಪೂಜ್ಯತೆಯೇ ವಿನಾ, ತನ್ನ ಸ್ವಂತ ಸಾಮರ್ಥ್ಯದಿಂದ

---

(೧) ಭಾರಿತ. ಉದ್ಯೋಗ. ೩೩. ೩೩.

**ತಪ್ಯತೇ। ಗಂಗಾಹ್ರದಇವಾಕ್ಷೋಭ್ಯೋ ಯಸ್ಸಪಂಡಿತ ಉಚ್ಯತೇ" ಎಜ್ಗ್ಗಿರ ಪಡಿಯೇ ಮಾನಾವಮಾನಾದಿಗಳಿರ್ ಕಲಙ್ಗಾರ್.**

---

ಉಂಟಾದುದಲ್ಲವೆಂದು ತಿಳಿದು ಸಂತೋಷಿಸದೇ ಇರುವನೋ, **ಅವಮಾನೇ** - ತನಗೆ ಅವಮಾನವು ಉಂಟಾದಾಗ, **ನಾನುತಪ್ಯತೇ** - ಯಾವನು ಪರಿತಾಪವನ್ನು ಹೊಂದುವದಿಲ್ಲವೋ, ಎಂದರೆ ಸ್ವನಿಷ್ಠಾಭಿಜ್ಞಾಸಾಧಿಕಾರದಲ್ಲಿ ಹೇಳಿರುವ ಹಾಗೆ ತನ್ನ ಕರ್ಮಾನುಗುಣವಾಗಿ ಉಂಟಾಯಿತೆಂದೂ, ತನ್ನಲ್ಲಿರುವ ದೋಷವನ್ನು ತೋರಿಸಿದುದರಿಂದ ಮಾನನೀಯನೆಂದೂ, ತಿಳುವಳಿಕೆ ಇಲ್ಲದೆ ಹೀಗೆ ಅವಮಾನವನ್ನು ಮಾಡಿದುದರಿಂದ ತಿಳಿಯದವನೆಂದೂ ಆತನಲ್ಲಿ ಪರಿತಾಪವನ್ನು ಪ್ರದರ್ಶಿಸಿ, ಆತನು ತನ್ನಲ್ಲಿರುವ ಪಾಪವನ್ನು ತೆಗೆದುಕೊಂಡು ಹೋಗಿ ಸುಕೃತವನ್ನು ಬಿಟ್ಟು ಬಿಟ್ಟು ಹೋಗುವ ಉಪಕಾರಿಯೆಂಬಿವೇ ಮೊದಲಾದ ಭಾವಗಳಿಂದ ಅವಮಾನಕ್ಕಾಗಿ ಪರಿತಾಪವನ್ನು ಹೊಂದುವದಿಲ್ಲವೋ, **ಗಂಗಾಹ್ರದಮಿವ** – ಗಂಭೀರವಾದ ಗಂಗಾನದಿಯ ಮಡುವಿನ ಹಾಗೆ, **ಅಕ್ಷೋಭ್ಯಃ** – ಮನೋವಿಕಾರವನ್ನು ಹೊಂದುವದಿಲ್ಲವೋ, **ಸಃ** - **ಅಂತವನೇ, ಪಂಡಿತ ಉಚ್ಯತೇ** - ಪಂಡಿತನೆಂದು ಹೇಳಲ್ಪಡುವನು. ಈ ಶ್ಲೋಕವು ಈಗಿನ ಪುಸ್ತಕಗಳಲ್ಲಿ **"ನಹೃಷ್ಯತ್ಯಾತ್ಮಸಂಮಾನೇ ನಾವಮಾನೇನ ತಪ್ಯತೇ । ಗಾಂಗೋಹ್ರದ ಇವಾಕ್ಷೋಭ್ಯೋ ಯಸ್ಸಪಂಡಿತ ಉಚ್ಯತೇ"** ಎಂದಿರುತ್ತದೆ. ಅರ್ಥವ್ಯತ್ಯಾಸವೇನೂ ಇಲ್ಲವು. ಸ್ವಾಮಿ ದೇಶಿಕರವರ ಕಾಲದ ಗ್ರಂಥದಲ್ಲಿ ಇರುವದನ್ನು ಅವರು ಉದಾಹರಿಸಿರುತ್ತಾರೆ. ಪೂರ್ವ ಗ್ರಂಥೋಕ್ತಿಗಳನ್ನು ತಮ್ಮ ಮನಬಂದಂತೆ ತಿದ್ದುಪಡಿಮಾಡಿ ಅಚ್ಚುಹಾಕುವದು ಯೋಗ್ಯವಾದ ಕೆಲಸವಲ್ಲವು. ಮಹರ್ಷಿಗಳ ವಿಷಯದಲ್ಲಿ ಮಾಡುವ ಮಹತ್ತಾದ ಅಪರಾಧವು; ಇದು ಸರ್ವಾತ್ಮನಾ ಕೂಡದು" ಶ್ರೀ ದೇಶಿಕರವರ ಪಾಠದಲ್ಲಿ **ಸಂಮಾನೇ ಅವಮಾನೇ** ಎಂದು ಎರಡು ಕಡೆಯಲ್ಲೂ ಸಪ್ತಮಿ ಇರುವದು ಸಮಂಜಸವು. ನವೀನ ಪಾಠದಲ್ಲಿ ಒಂದು ಕಡೆ ಸಪ್ತಮಿಯು, ಇನ್ನೊಂದು ಕಡೆ **ಅವಮಾನೇನ** ಎಂಬುದರಿಂದ ತೃತೀಯವೂ ಇರುವದು ಸರಿಯಾಗಿ ತೋರುವದಿಲ್ಲವು. **ಎಜ್ಗ್ಗಿರ ಪಡಿಯೇ** – ಎಂಬ ಶ್ಲೋಕದಲ್ಲಿ ಉಪಪಾದಿತವಾದ ಹಾಗೆ, **ಮಾನಾವಮಾನಾದಿಗಳಿರ್** – ಪೂಜ್ಯತೆಯಾಗಲಿ ನಿಂದೆಯಾಗಲಿ ಉಂಟಾದ ಸಮಯಗಳಲ್ಲಿ, **ಕಲಙ್ಗಾರ್** - ಚಿತ್ತವೈಕಲ್ಯವನ್ನು ಹೊಂದುವದಿಲ್ಲವು. ಸ್ತೋತ್ರದಿಂದ ಆ ಪ್ರಾಜ್ಞನಿಗೆ ಸಂತೋಷವೂ ಇಲ್ಲವು. ಅವಮಾನದಿಂದ ದುಃಖವೂ ಇಲ್ಲವು. ಆದುದರಿಂದ ಪಂಡಿತನೆಂಬ ಭಾವವು. ಈ ಸಂದರ್ಭದಲ್ಲಿ **"ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯಚಾಪ್ರಿಯಮ್ । ಸ್ಥಿರಬುದ್ಧಿಃ"** ಎಂಬ ಗೀತಾ ಶ್ಲೋಕವು. (ಗೀ. ೫. ೨೦) ಅನುಸಂಧೇಯವು.

**ವ್ಯಾಪಕಾದಿ ಸರ್ವಮನ್ತ್ರೇಷು ಮೂಲಮನ್ತ್ರಸ್ಯ ಪಾರಮ್ಯಂ ಪ್ರದರ್ಶಯನ್ನಿಗಮಯತಿ.**

ಇತ್ತಿರುಮನ್ತ್ರತ್ತಿಲ್, ಯಥಾರ್ಥಜ್ಞಾನಮುಮ್ ನಿಷ್ಠೈಯುಮುಡೈಯವನೈ ಆದರಿಕ್ಕುಮ್ ದೇಶತ್ತಿಲುಮ್ (೧) "ಯತ್ರಾಷ್ಟಾಕ್ಷರ ಸಂಸಿದ್ಧೋ ಮಹಾಭಾಗೋ ಮಹೀಯತೇ। ನತತ್ರ ಸಂಚರಿಷ್ಯನ್ತಿ ವ್ಯಾಧಿ ದುರ್ಭಿಕ್ಷ

---

**ವ್ಯಾಪಕಾದಿ ಸರ್ವಮನ್ತ್ರಗಳಲ್ಲೂ ಮೂಲಮನ್ತ್ರದ ಸರ್ವೋತ್ಕೃಷ್ಟತೆಯನ್ನು ಪ್ರದರ್ಶಿಸಿ ಅಧಿಕಾರವನ್ನು ಮುಗಿಸುತ್ತಾರೆ.**

ಹೀಗೆ ಮೂಲಮನ್ತ್ರದಿಂದ ಉಪದಿಷ್ಟವಾದ ಯಥಾರ್ಥಜ್ಞಾನವನ್ನು ಹೊಂದಿದವನ ಮಹಾತ್ಮ್ಯೆಯನ್ನು ತಿಳಿಸಿದರು. ಆತನಿಗೆ ಮಾತ್ರವೇ ಮಾಹಾತ್ಮ್ಯೆಯಲ್ಲದೆ, ಅಂತಹ ಒಬ್ಬನಿದ್ದ ಅಂತವನನ್ನು ಪೂಜಿಸುವ ದೇಶಕ್ಕೂ ಕೂಡ ಮಾಹಾತ್ಮ್ಯೆಯುಂಟೆಂದು ಸಪ್ರಮಾಣವಾಗಿ ತಿಳಿಸುತ್ತಾರೆ— **ಇತ್ತಿರುಮನ್ತ್ರತ್ತಿಲ್** – ಈ ಮೂಲಮನ್ತ್ರದಲ್ಲಿ, **ಯಥಾರ್ಥಜ್ಞಾನಮುಮ್** - ಸರ್ವಸಮಂಜಸವಾದ ಯಥಾರ್ಥಜ್ಞಾನವನ್ನೂ, ಅಷ್ಟು ಮಾತ್ರವೇ ಸಾಲದೇ, **ನಿಷ್ಠೈಯುಮ್** – ಅನುಷ್ಠಾನವನ್ನೂ - ವಿಹಿತಕರ್ಮಗಳ ಅನುಷ್ಠಾನವೇನು, ಉಪಾಯಾನುಷ್ಠಾನವೇನು, ಪ್ರಪನ್ನನಿಗೆ ಸ್ವರೂಪವಾದ ಆಜ್ಞಾನುಜ್ಞಾ ಕೈಂಕರ್ಯವೇನ್ನು ಮೂಲಮನ್ತ್ರದ ಜಪಾನುಷ್ಠಾನವೇನು, ಇಂತಹ ಅನುಷ್ಠಾನವನ್ನು, **ಉಡೈಯವನೈ** – ಹೊಂದಿದವನನ್ನು, ಹೀಗೆ ಜ್ಞಾನನಿಷ್ಠೆಯನ್ನೂ ಆಚಾರನಿಷ್ಠೆಯನ್ನೂ ಹೊಂದಿದವನನ್ನು, **ಆದರಿಕ್ಕುಮ್ ದೇಶತ್ತಿಲ್** – ಪೂಜಿಸುವ ದೇಶದಲ್ಲಿ (೧) "**ಯತ್ರ** - ಯಾವ ದೇಶದಲ್ಲಿ, **ಅಷ್ಟಾಕ್ಷರ ಸಂಸಿದ್ಧಃ** - ಮೂಲಮನ್ತ್ರದ ಸಿದ್ಧಿಯನ್ನು ಹೊಂದಿದ, **ಮಹಾಭಾಗಃ** - ಮಹತ್ತಾದ ಸುಕೃತಶಾಲಿಯಾದವನು, ಮಹಾತ್ಮಾ ಎಂಬ ಭಾವವು, **ಮಹೀಯತೇ** - ಪೂಜಿಸಲ್ಪಡುವನೋ, **ತತ್ರ** - ಅಂತಹ ದಿವ್ಯಸ್ಥಳದಲ್ಲಿ, **ವ್ಯಾಧಿದುರ್ಭಿಕ್ಷ ತಸ್ಕರಾಃ** - ವ್ಯಾಧಿಯೂ ದುರ್ಭಿಕ್ಷವೂ, ಕಳ್ಳರೂ, **ನಸಂಚರಿಷ್ಯನ್ತಿ** - ಸಂಚರಿಸುವದಿಲ್ಲವು" **ಎಙ್ಗಿರಪಡಿಯೇ** - ಎಂದು ಹೇಳಿರುವ ಹಾಗೆ, **ಒರುದೋಷಙ್ಗಳುಮ್** - ಯಾವ ದೋಷಗಳೂ, **ವಾರಾದು** – ಉಂಟಾಗುವದಿಲ್ಲವು. ಅಂತಹ ಮಹನೀಯನ ಸಾನ್ನಿಧ್ಯದಿಂದ ವ್ಯಾಧಿಗಳು ತಲೆದೋರುವದಿಲ್ಲವು ; ದುರ್ಭಿಕ್ಷವೂ ಪ್ರಾಪ್ತವಾಗುವದಿಲ್ಲವು ; ಅಲ್ಲಿ ಕಳ್ಳರಕಾಟವಿರುವದಿಲ್ಲವು. ಮಹನೀಯರ ಸಾನ್ನಿಧ್ಯ ಉಂಟಾದರೆ, ಅಂತಹ ಸ್ಥಳದಲ್ಲಿ ಘಾತುಕ ಮೃಗಗಳೂ ಸಾಧುಮೃಗಗಳೂ ಪರಸ್ಪರ ಪ್ರೀತಿಯಿಂದಿರುತ್ತವೆ ಎಂದು ಋಷ್ಯಾಶ್ರಮಗಳು ಕೊಂಡಾಡಲ್ಪಟ್ಟಿರುವುವು. ಹಾಗೆಯೇ ಶ್ರೀರಾಮಚಂದ್ರ ಪ್ರಭುವು ರಾಜ್ಯಪರಿಪಾಲನೆಯನ್ನು ಮಾಡುವಾಗ ಅಂತಹ

---

(೧) ನಾರದೀಯ. ೧. ೨೦.

**ತಸ್ಕರಾಃ" ಎಙ್ಗಿರಪಡಿಯೇ ಒರುದೋಷಙ್ಗಳುಮ್ ವಾರಾದು. ಇಶ್ಲೋಕ ತ್ತಾಲ್ (೨) "ರಾಗಾದಿ (ರೋಗಾಃ) ದೋಷಾಃ ಸತತಾನುಷಕ್ತಾ ನಶೇಷ ಕಾಯ ಪ್ರಸೃತಾ ನಶೇಷಾಃ । ಔತ್ಸುಕ್ಯ ಮೋಹಾರತಿದಾಃ ಜಘಾನ**

---

ಮಹಾತ್ಮನ ಸಾನ್ನಿಧ್ಯಬಲದಿಂದ, **"ರಾಮಮೇವಾನುಪಶ್ಯನ್ತೋನಾಭ್ಯಹಿಂಸ್ಯನ್ ಪರಸ್ಪರಮ್"** (ರಾಮಾ. ಯುದ್ಧ. ಪಟ್ಟಾಭಿಷೇಕಸರ್ಗ) ಪರಸ್ಪರ ಮೈತ್ರಿಯಿಂದ ಇದ್ದರೇ ವಿನಾ ಒಬ್ಬರನ್ನೊಬ್ಬರು ಹಿಂಸಿಸಲಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಋಷ್ಯ ಶೃಂಗರು ಇದ್ದ ದೇಶದಲ್ಲಿ ಮೊದಲು ದುರ್ಬಿಕ್ಷ ಪೀಡಿತವಾಗಿದ್ದರೂ ಸುಭಿಕ್ಷ ಉಂಟಾಯಿತೆಂದು ಹೇಳಲ್ಪಟ್ಟಿರುತ್ತದೆ.

ಆದರೆ ವ್ಯಾಧಿ ದುರ್ಭಿಕ್ಷತಸ್ಕರ ಶಬ್ದಗಳಿಗೆ ಮುಖ್ಯಾರ್ಥವನ್ನು ಹೇಳಿದರೆ, ಇವುಗಳು ಐಹಿಕಗಳಾಗಿ ವಿರಕ್ತನಿಗೆ ಈ ತೊಂದರೆಗಳು ಏನೂ ಮಾಡಲಾರದ ಪ್ರಯುಕ್ತ, ಈ ಶ್ಲೋಕದಲ್ಲಿ ಮುಖ್ಯಾರ್ಥಗಳನ್ನು ತ್ಯಜಿಸಿ, ಲಾಕ್ಷಣಿಕವಾಗಿಯಾಗಲಿ ಸ್ವಾರಸ್ಯಾರ್ಥವನ್ನು ಕಲ್ಪಿಸುವದು ಯುಕ್ತವಾದುದರಿಂದ, **ವ್ಯಾಧಿ ದುರ್ಭಿಕ್ಷ ತಸ್ಕರ** ಶಬ್ದಗಳಿಗೆ ಯೋಗ್ಯವಾದ ಅರ್ಥಗಳನ್ನು ವ್ಯಕ್ತಪಡಿಸುತ್ತಾರೆ. ಈ ವ್ಯಾಧಿ ದುರ್ಭಿಕ್ಷತಸ್ಕರ ವಿಷಯವು ಐಹಿಕ ವಿಷಯವಾದುದರಿಂದ ಇವುಗಳಿಗಾಗಿಯೇ ಅಷ್ಟಾಕ್ಷರದ ಯಥಾರ್ಥಾನುಸಂಧಾನವೂ ಜಪವೂ ಎಂದು ಉಪದೇಶಿಸಿದರೆ, ವಿರಕ್ತನಿಗೆ ಮೂಲಮನ್ತ್ರದಲ್ಲಿ ಮಾಹಾತ್ಮ್ಯೆಯು ತೋರಲಾರದು. ಆ ಕಾರಣ ದಿಂದ ಈ ಶಬ್ದಗಳು ವಿಶೇಷಾರ್ಥಗಳುಳ್ಳವೆಂದು ಉಪದೇಶಿಸುತ್ತಾರೆ. ಹಿಂದೆ **"ಅಪ್ರಕಾಶ ಪ್ರಕಾಶಾಭ್ಯಾಂ ಕ್ಷೀಯೇತೇ ಸಂಪದಾಯುಷೀ"** ಎಂಬ ಸ್ಥಳದಲ್ಲಿ ಮುಖ್ಯಾರ್ಥಗಳಾದ ಸಂಪತ್ತು ಆಯುಸ್ಸೂ ಎರಡೂ ಪ್ರಪನ್ನನಿಗೆ ಬೇಕಾಗಿಲ್ಲವಾದುದರಿಂದ, ಮುಖ್ಯಾರ್ಥಗಳನ್ನು ತ್ಯಜಿಸಿ ಬೇರೆ ಅರ್ಥಗಳು ಹೇಗೆ ಹೇಳಲ್ಪಟ್ಟವೋ, ಹಾಗೆ ಇಲ್ಲಿಯೂ ಸಮಂಜಸಾರ್ಥಗಳನ್ನು ಉಪದೇಶಿಸುತ್ತಾರೆ.—**ಈ ಶ್ಲೋಕ ತ್ತಾಲ್** – ಈ **"ಯತ್ರಾಷ್ಟಾಕ್ಷರ ಸಂಸಿದ್ಧೋ"** ಎಂಬ ಶ್ಲೋಕದಿಂದ (೨) **"ರಾಗಾದಿರೋಗಾಃ ಅಥವಾ ರಾಗಾದಿ ದೋಷಾಃ** - ದೇಹಕ್ಕೆ ಸಂಬಂಧ ಪಟ್ಟ ಎಲ್ಲಾ ರೋಗಗಳಿಗಿಂತಲೂ ತುಂಬಾ ಬಲಿಷ್ಠವಾದ ರೋಗಗಳು ಯಾವುವೆಂದರೆ ರಾಗಾದಿಗಳು, **"ಕಾಮವಿಷಃ ಕ್ರೋಧವಿಷಃ"** ಎಂದು ಹೇಳಿರುವ ಹಾಗೆ ಬಲವತ್ತರಗಳಾದ **ಕಾಮಕ್ರೋಧಾದಿಗಳು, ಇವುಗಳನ್ನು, ಸತತಾನು ಷಕ್ತಾಃ** - ಯಾವಾಗಲೂ ಸಂಬಂಧಿಸಿಕೊಂಡೇ ಇರುವುವು, ಜ್ವರಾದಿಗಳು ಕೆಲವು ಕಾಲವಿರಬಹುದು, ಆನಂತರ ಬಿಟ್ಟುಹೋಗಬಹುದು, ಹಾಗಲ್ಲದೆ ಈ ರಾಗಾದಿಗಳು ಯಾವಾಗಲೂ ಅನುಸರಿಸಿಯೇ ಇರುವುವು, ಎಂಬರ್ಥವು, **ಅಶೇಷಕಾಯ ಪ್ರಸೃತಾಃ** - ತಲೆನೋವು, ಕಣ್ಣುಬೇನೆ ಮುಂತಾದವು ಶರೀರದ ಏಕದೇಶಕ್ಕೆ ಸಂಬಂಧಿಸಿದವು, ಹಾಗಲ್ಲದೆ ಸಮಸ್ತ ಶರೀರಕ್ಕೂ ಹರಡಿಕೊಂಡಿರುವುವು. ಈ ಕಾಮಕ್ರೋಧಾದಿಗಳೆಂಬ ಭಾವವು, **ಅಶೇಷಾಃ** – ಜ್ವರ ತಲೆನೋವು ಇವು

**ಯೋಽಪೂರ್ವವೈದ್ಯಾಯ ನಮೋಽಸ್ತು ತಸ್ಮೈ" ಎನ್ರು ಆಯುರ್ವೇದ ವಿತ್ರು ಕ್ಕಳ್ ಪ್ರಧಾನ ವ್ಯಾಧಿಗಳಾಕ ವೆಡುತ್ತರಾಗಾದಿಗಳೈಯುಮ್, ಸತ್ತುಕ್ಕಳುಕ್ಕು ಶ್ರೀಯೆನ್ರೋದಪ್ಪಟ್ಟ ಜ್ಞಾನಸಂಪತ್ತಿನುಡೈಯ ಸಙ್ಕೋಚಮುಮ್,**

---

ಗಳೆಲ್ಲೋ ಒಂದೆರಡು ರೋಗಗಳು, ಈ ರಾಗಾದಿಗಳು ಇದ್ದವಾದರೆ ಸರ್ವರೋಗಗಳೂ ಮನುಷ್ಯನಿಗೆ ಇದ್ದ ಹಾಗೆ ಭಾವವು, ಇನ್ನೂ ಎಂತವು ಈ ರಾಗಾದಿ ರೋಗಗಳು ಎಂದರೆ **ಔತ್ಸುಕ್ಯ ಮೋಹಾರತಿದಾಃ** – ಇವುಗಳಲ್ಲಿ ರಾಗವೆಂದರೆ ಕಾಮವು, **ಔತ್ಸುಕ್ಯದ** ಎಂದರೆ ಅನುಭವಿಸಿದ ಹೊರತು ಪ್ರಾಣವೇ ನಿಲ್ಲುವದಿಲ್ಲವೆಂಬ ಉತ್ಕಟೇಚ್ಛೆಯನ್ನು ಕೊಡುವಂತಾದ್ದು, ಅದರಿಂದುಂಟಾದ ಕ್ರೋಧವು, **ಮೋಹದವು** - ಭ್ರಮವನ್ನೂ ಅಜ್ಞಾನವನ್ನೂ ಕೊಡುವಂತಾದ್ದು, ಅಂತವನಿಗೆ ವಿವೇಕ ಜ್ಞಾನವೇ ಇರುವದಿಲ್ಲವು, ಈ ಕಾಮಕ್ರೋಧಗಳಿಗೆ ಸಂಬಂಧಿಸಿದ ಲೋಭಮಾತ್ಸರ್ಯ ಗಳು, **ಅರತಿದಾಯಿಗಳು**, **ರತಿ** ಎಂದರೆ ಪ್ರೀತಿ, ಅರತಿ ಎಂದರೆ ಪರಸ್ಪರಾ ಸೂಯಾಜನಕಗಳು. ಹೀಗೆ ಇವು **ಔತ್ಸುಕ್ಯ ಮೋಹಾರತಿದಾಃ** - ಉತ್ಕಟೇಚ್ಛೆ ಏನು, ಅಜ್ಞಾನವೇನ., ಮಾತ್ಸರ್ಯಾದಿಗಳೇನು ಇವುಗಳನ್ನು ಕೊಡುವುವು ಈ ರಾಗಾದಿ ರೋಗಗಳು, ಅವುಗಳನ್ನು, **ಯಃ** – ಯಾವ ಸರ್ವೇಶ್ವರನು, **ಜಘಾನ** - ನಾಶಮಾಡಿದನೋ, ಇಂತಹ **ಅಪೂರ್ವವೈದ್ಯಾಯ** - **ನವಿದ್ಯತೇ ಪೂರ್ವೋ ಯಸ್ಮಾತ್, ಸಃ ಅಪೂರ್ವಃ** – ಎಂಬ ವ್ಯುತ್ಪತ್ತಿಯ ಮೂಲಕ ಯಾವ ಸರ್ವೇಶ್ವರ ನಿಗಿಂತಲೂ ಪೂರ್ವದಲ್ಲಿ ಇಂತಹ ವೈದ್ಯನು ಇಲ್ಲವೋ, ಅಂತವನು ಅನಾದಿಯಾದ ವೈದ್ಯನು, ಸರ್ವರೋಗನಿವಾರಕನಾದ ವೈದ್ಯನು **ತಸ್ಮೈ** - ಅಂತಹ ಪ್ರಸಿದ್ಧನಾದ ಆದಿವೈದ್ಯನಿಗೆ, **ನಮೋಽಸ್ತು** - ನಮಸ್ಕಾರವು," ಎನ್ರು - ಎಂಬದಾಗಿ, **ಆಯು ರ್ವೇದವಿತ್ತುಗಳ್** – ಆಯುರ್ವೇದ ವಿದ್ಯೆಯನ್ನು ಅಧಿಕರಿಸಿರುವವರು, **ಪ್ರಧಾನ ವ್ಯಾಧಿಗಳಾಗ ವೆಡುತ್ತರಾಗಾದಿಗಳೈಯುಮ್** - ಮುಖ್ಯ ವ್ಯಾಧಿಗಳಾಗಿ ಹೇಳಲ್ಪಟ ಈ ಕಾಮಕ್ರೋಧಾದಿಗಳೂ, (**ವ್ಯಾಧಿದುರ್ಭಿಕ್ಷತಸ್ಕರಾಃ** ಎಂಬಲ್ಲಿ ವ್ಯಾಧಿಶಬ್ದ ದಿಂದ ಇವು ಹೇಳಲ್ಪಟ್ಟವೆಂಬ ಭಾವವು.) **ಸತ್ತುಕ್ಕಳುಕ್ಕು** – **"ಸಂತಮೇನಂ ತತೋವಿದುಃ"** ಎಂಬ ಶ್ರುತಿಯಲ್ಲಿ ಉಪಪಾದಿಸಲ್ಪಟ್ಟಿರುವ ಹಾಗೆ ತತ್ವಯಾಥಾತ್ಮ್ಯ ಜ್ಞಾನವನ್ನು ಹೊಂದಿದವರಿಗೆ, **ಶ್ರೀ** ಎನ್ರು ಓದಪ್ಪಟ್ಟ - **"ಸಾಹಿಶ್ರೀ ರಮೃತಾ ಸತಾಮ್"** ಎಂಬಲ್ಲಿ ಹೇಳಿರುವ ಹಾಗೆ, ಸಂಪತ್ತೆಂಬದಾಗಿ ಹೇಳಲ್ಪಟ್ಟ, **ಜ್ಞಾನ ಸಂಪತ್ತಿನುಡೈಯ ಸಙ್ಕೋಚಮುಮ್** - ಯಥಾರ್ಥವಾದ ತಿಳುವಳಿಕೆ ಎಂಬ ಸಂಪತ್ತಿನ ಸಙ್ಕೋಚವೂ, **ಬಾಹ್ಯತಸ್ಕರರ್ಕ್ಕು** - ಹೊರಗಿನ ವಸ್ತುಗಳನ್ನು ಕದಿ ಯುವ ಕಳ್ಳರಿಗೆ **ನಿಲಮಲ್ಲಾದ** - ಸಾಧ್ಯವಲ್ಲದ, **ಆತ್ಮಾಪಹಾರಾದಿಗಳೈ ಪೆಣ್ಣುಮ್** - ಭಗವಂತನ ಸ್ವತ್ತಾದ ಆತ್ಮವನ್ನು ತನ್ನದು ಎಂದರೆ ಸ್ವತಂತ್ರ ವೆಂದು ತಿಳಿಯುವದರ ಮೂಲಕ ಚೋರಕೃತ್ಯದ ಹಾಗೆ ಆತ್ಮಚೋರಕೃತ್ಯವೇ

**ಜಾಹ್ಯತಸ್ಕರರ್ಕ್ಕು ನಿಲಮಿಲ್ಲಾದ ಆತ್ಮಾಪಹಾರಾದಿಗಳ್ಳೈ ಪ್ಪಣ್ಣುಮ್ ಮಹಾತಸ್ಕರರಾನ ಅಹಂಕಾರಾದಿಗಳುಮ್ ನಡೈಯಾಡಾದೆನ್ರುದಾಯಿತ್ತು.**

**ಇತರ ವ್ಯಾಪಕಮನ್ತ್ರಯೋ ರಯಮೇವಾರ್ಥಃ**

---

**ಇತ್ತಿರುಮನ್ತ್ರತ್ತಿಲ್ ಅರುದಿಯಿಟ್ಟ ಪೊರುಳೇ ವಿಷ್ಣುವಾಸುದೇವಶಬ್ದ ವಿಶಿಷ್ಟಙ್ಗಳಾನ ವ್ಯಾಪಕಮನ್ತ್ರಾನ್ತರಙ್ಗಳುಕ್ಕುಮ್ ಪೊರುಳ್. (೧)"ವ್ಯಾಪ್ತಿ**

---

ಮೊದಲಾದವುಗಳನ್ನು ನಡೆಸುವ ಇಲ್ಲಿ ಆದಿಶಬ್ದದಿಂದ, ಆತ್ಮಾಪಹಾರದಿಂದುಂಟಾಗುವ ಸ್ವತಂತ್ರಾತ್ಮ ಭ್ರಾಂತಿಯು ಹೇಳಲ್ಪಟ್ಟಿತು ; ಅಥವಾ ಆತ್ಮಾಪಹಾರಕ್ಕೆ ಕಾರಣವಾದ ದೇಹವೇ ಆತ್ಮಾ ಎಂಬ ಭ್ರಮೆಯು ಹೇಳಲ್ಪಟ್ಟಿತೆಂದೂ ಭಾವಿಸಬಹುದು. **ಮಹಾತಸ್ಕರರಾನ** - ದೊಡ್ಡ ಕಳ್ಳರಾದ, **ಅಹಂಕಾರಾದಿಗಳುಮ್** – ಅಹಂಕಾರ ಮಮಕಾರಗಳೂ **ನಡೈಯಾಡಾದೆನ್ರುದಾಯಿತ್ತು** - ಸುಳಿಯಲಾರವೆಂಬುದು ಅಭಿಪ್ರಾಯವು. ಆದುದರಿಂದ **"ವ್ಯಾಧಿ ದುರ್ಭಿಕ್ಷ ತಸ್ಕರಾಃ"** ಎಂಬಲ್ಲಿ **ವ್ಯಾಧಿಯು** – ಕಾಮ ಕ್ರೋಧ ಲೋಭಾದಿಗಳು, **ದುರ್ಭಿಕ್ಷವು** - ಸರಿಯಾದ ಜ್ಞಾನವಿಲ್ಲದಿರೋಣವು, ತಸ್ಕರವೆಂದರೆ ಅಂತಶ್ಶತ್ರುಗಳಾದ ಅಹಂಕಾರ ಮಮಕಾರಗಳೆಂಬುದೇ ಅರ್ಥವೆಂದು ತೀರ್ಮಾನಿಸಿದರು.

ಮಿಕ್ಕ ಎರಡು ವ್ಯಾಪಾಕಮನ್ತ್ರಗಳಿಗೂ ಈ ಮೂಲಮನ್ತ್ರದ ಅರ್ಥವೇ ಎಂಬ ಭಾವವು.

**ಇತ್ತಿರುಮನ್ತ್ರತ್ತಿಲ್ ಅರುದಿಯಿಟ್ಟ ಪೊರುಳೇ**–ಈ ಅಷ್ಟಾಕ್ಷರ ಮನ್ತ್ರದಲ್ಲಿ ನಿರ್ಧರಿಸಲ್ಪಟ್ಟ ಅರ್ಥಗಳೇ, **ವಿಷ್ಣು ವಾಸುದೇವ ಶಬ್ದ ವಿಶಿಷ್ಟಙ್ಗಳಾನ ವ್ಯಾಪಕಮನ್ತ್ರಾನ್ತರಙ್ಗಳುಕ್ಕುಮ್ ಪೊರುಳ್** - ವಿಷ್ಣು ಶಬ್ದದಿಂದ ಕೂಡಿದ ವಿಷ್ಣು ಷಡಕ್ಷರ ಮನ್ತ್ರಕ್ಕೂ, ವಾಸುದೇವ ಶಬ್ದದಿಂದ ಕೂಡಿದ ವಾಸುದೇವ ದ್ವಾದಶಾಕ್ಷರ ಮನ್ತ್ರಕ್ಕೂ ಸಹ, **ಪೊರುಳ್** - ಅರ್ಥವು. ವ್ಯಾಪಕ ಮನ್ತ್ರಗಳು ಮೂರು ; (೧) ಅಷ್ಟಾಕ್ಷರ ಮನ್ತ್ರವು ; (೨) ಷಡಕ್ಷರ ಮನ್ತ್ರವು ; (೩) ದ್ವಾದಶಾಕ್ಷರ ಮನ್ತ್ರವು. ಈಗ ಸ್ವಾಮಿ ದೇಶಿಕರವರು ಉಪಪಾದಿಸಿ ಹೇಳಿದ ಸರ್ವಾಭಿಪ್ರಾಯಗಳೂ ಮಿಕ್ಕ ಎರಡು ವ್ಯಾಪಕ ಮನ್ತ್ರಗಳಲ್ಲಿ ಕೆಲವು ಮಾತ್ರ ಧಾತು ವ್ಯುತ್ಪತ್ತಿ ಮೂಲಕ ತೋರಿಬಂದರೂ, ಮಿಕ್ಕ ಎಲ್ಲಾ ಅಭಿಪ್ರಾಯಗಳೂ ಈ ಎರಡು ಮನ್ತ್ರಗಳಲ್ಲೂ ಅತಿದೇಶಮಾಡಿ ಇಟ್ಟುಕೊಳ್ಳಬೇಕೆಂಬ ಅಭಿಪ್ರಾಯವು. ವ್ಯುತ್ಪತ್ತಿ ಮೂಲಕ ಅವುಗಳಲ್ಲಿ ಕೆಲವು ಅಭಿಪ್ರಾಯಗಳನ್ನು ಪ್ರದರ್ಶಿಸಿ, ಮೂಲಮನ್ತ್ರವು ಪ್ರಕಾಶಪಡಿಸುವ ಅನೇಕಾರ್ಥಗಳಲ್ಲಿ ಹೀಗೆ ಕೆಲವು ಮಾತ್ರವೇ ವ್ಯಕ್ತವೆಂದು ಮುಂದಿನ ವಾಕ್ಯಗಳಿಂದ ಉಪಪಾದಿಸಿ, ಹಾಗೆಯೇ ಅವು ಹೇಗೆ ವ್ಯಾಪಕಮನ್ತ್ರ

---

(೧) ಅಹಿ. ೫೨. ೩೮.

**ಕಾಂತಿಪ್ರವೇಶೇಚ್ಛಾಸ್ತತ್ತದ್ಧಾತು ನಿಬಂಧನಾಃ । ಪರತ್ವೇಭ್ಯಧಿಕಾವಿಷ್ಣೋರ್ದೇವಸ್ಯ ಪರಮಾತ್ಮನಃ ॥" ಎನ್ರು ಅಹಿರ್ಬುಧ್ನ್ಯಾದಿಗಳಿಲ್ ನಿರ್ವಚನಮ್ ಪಣ್ಣಿನ ಪಡಿಯೇ "ವಿಷ್ಲೃ ವ್ಯಾಪ್ತೌ, ವಶಕಾನ್ತೌ, ವಿಶಪ್ರವೇಶನೇ, ಇಷು ಇಚ್ಛಾಯಾಂ" ಎಙ್ಗಿರ ಧಾತುಕ್ಕಳಿಲೇ ನಿಷ್ಪನ್ನಮಾನ ವಿಷ್ಣು ಶಬ್ದತ್ತಿಲುಳ್ಳ ಪೊರುಳ್‌ಗಳುಮ್, ವಾಸುದೇವ ಶಬ್ದತ್ತಿಲುಮ್ "ವಸಂತಿವಾಸಯತಿ"**

---

ಗಳೆಂಬುದನ್ನೂ ತಿಳಿಸುತ್ತಾರೆ.—**ಮೊದಲು,** ಷಡಕ್ಷರ ಮನ್ತ್ರದ ವಿಷ್ಣುಶಬ್ದದಲ್ಲಿರುವ ಧಾತ್ವರ್ಥಗಳ ವ್ಯುತ್ಪತ್ತಿಯಿಂದ ತೋರಿಬರುವ ಅರ್ಥಗಳನ್ನು ಉಪಪಾದಿಸಿರುವ ಅಹಿರ್ಬುಧ್ನ್ಯ ಪ್ರಮಾಣವನ್ನು ಉದಾಹರಿಸುತ್ತಾರೆ.—"**ವ್ಯಾಪ್ತಿ** - ಜಗತ್ತೆಲ್ಲವನ್ನೂ ವ್ಯಾಪಿಸಿರೋಣವು, **ಕಾಂತಿ - ಜ್ಯೋತಿಷಾಂಜ್ಯೋತಿಃ** ಎಂದು ಹೇಳಿರುವ ಹಾಗೆ ವಿಶೇಷಕಾಂತಿ, ಅಥವಾ ದಿವ್ಯಮಙ್ಗಳವಿಗ್ರಹದ ಕಾಂತಿ, ಮನೋಹರತ್ವವು, **ಪ್ರವೇಶ** - ಸಮಸ್ತ ಜಗತ್ತನ್ನು ಸೃಷ್ಟಿಸಿ ಅನುಪ್ರವೇಶವು, **ಇಚ್ಛಾ** - ಜಗತ್ತಿನ ಸೃಷ್ಟಿಸ್ಥಿತಿ ಲಯರೂಪ ವ್ಯಾಪಾರಗಳನ್ನೆಲ್ಲಾ ನಡೆಸುವ ಸಙ್ಕಲ್ಪರೂಪಜ್ಞಾನವು. ಇವುಗಳು, **ತತ್ತದ್ಧಾತುನಿಬಂಧನಾಃ** - ವಿಷ್ಣುಶಬ್ದದಲ್ಲಿರುವ ಧಾತುಗಳಾದ **ವಿಷ್ಲೃ ವ್ಯಾಪ್ತೌ,** ವಶಕಾನ್ತೌ, **ವಿಶಪ್ರವೇಶನೇ, ಇಷು ಇಚ್ಛಾಯಾಂ"** ಎಂಬ ನಾಲ್ಕು ಧಾತುಗಳ ಅರ್ಥಗಳೇ ಮೂಲವಾದವು ; ಎಂದರೆ ಈ ಧಾತುಗಳಿಂದಲೇ ಮೇಲೆ ಹೇಳಲ್ಪಟ್ಟ, ವ್ಯಾಪ್ತಿ, ಕಾನ್ತಿ, ಪ್ರವೇಶ, ಇಚ್ಛಾ ಪದಗಳಿಂದ ತೋರಿಬರುವ ಅಭಿಪ್ರಾಯಗಳು, ಇವು **ವಿಷ್ಣೋಃ** - ವಿಷ್ಣುಶಬ್ದವಾಚ್ಯನಾದ, **ದೇವಸ್ಯ** - ತೇಜೋಮಯನಾದ, ಅಥವಾ ಲೀಲಾವಿಭೂತಿಯ ಕ್ರೀಡೆಯುಳ್ಳ, **ಪರಮಾತ್ಮನ, ಪರತ್ವೇಭ್ಯಧಿಕಾಃ** - ಪರತ್ವವನ್ನು ಸ್ಥಾಪಿಸುವ ಮಹತ್ತಾದ ವಿಶೇಷಗುಣಗಳು" **ಎನ್ರು** - ಎಂಬದಾಗಿ, **ಅಹಿರ್ಬುಧ್ನ್ಯಾದಿಗಳಿಲ್** - ಅಹಿರ್ಬುಧ್ನ್ಯವೇ ಮೊದಲಾದ ಪ್ರಮಾಣಗಳಲ್ಲಿ, **ನಿರ್ವಚನಮ್ ಪಣ್ಣಿನಪಡಿಯೇ** - ಧಾತುಪ್ರತ್ಯಯಗಳಿಂದುಂಟಾದ ವ್ಯುತ್ಪತ್ತಿಯನ್ನು ತೋರಿಸಿದ ರೀತಿಯಲ್ಲಿ, ಮುಂದೆ ಅಹಿರ್ಬುಧ್ನ್ಯ ಪ್ರಮಾಣದಲ್ಲಿ ಹೇಳಲ್ಪಟ್ಟ[1] ಅರ್ಥಗಳನ್ನು ಧಾತ್ವರ್ಥಗಳ ಮೂಲಕ ಉಪಪಾದಿಸಿ ಹೇಳುತ್ತಾರೆ.—**ವಿಷ್ಲೃ ವ್ಯಾಪ್ತೌ** - ವಿಷ್ಲೃ ಎಂಬ ಧಾತುವು, ವ್ಯಾಪ್ತಿ ಎಂಬರ್ಥದಲ್ಲೂ, ವಶಕಾನ್ತೌ - ವಶವೆಂಬ ಧಾತು ಕಾಂತಿ ಎಂಬರ್ಥದಲ್ಲೂ, **ವಿಶಪ್ರವೇಶನೇ** - ವಿಶವೆಂಬ ಧಾತುವು ಪ್ರವೇಶವೆಂಬರ್ಥದಲ್ಲೂ, **ಇಷುಇಚ್ಛಾಯಾಂ** - ಇಷು ಎಂಬ ಧಾತುವು ಇಚ್ಛಾ ಎಂಬರ್ಥದಲ್ಲೂ," **ಎಙ್ಗಿರ ಧಾತುಕ್ಕಳಿಲೇ** - ಧಾತುಗಳಲ್ಲಿ, **ನಿಷ್ಪನ್ನಮಾನ** - ನಿಷ್ಪತ್ತಿಯನ್ನು ಹೊಂದಿದ ಎಂದರೆ ಉಂಟಾದ, **ವಿಷ್ಣುಶಬ್ದತ್ತಿಲುಳ್ಳ ಪೊರಳ್ಗಳುಮ್** - ವಿಷ್ಣುಶಬ್ದದಲ್ಲಡಗಿರುವ ಅರ್ಥಗಳೂ, ಇದಕ್ಕೆ ಕ್ರಿಯಾಪದವು ಮುಂದೆ "**ನಾರಾಯಣ ಶಬ್ದಾರ್ಥತ್ತಿಲೇ**

---

(೧) ಅಹಿ. ೫೨. ೩೮.

ಎನ್ರುಮ್ "ದೀವ್ಯತಿ" ಎನ್ರುಮ್ ತೋತ್ತಿನ ಸರ್ವ ವ್ಯಾಪಕತ್ವಮ್, ಸರ್ವಾಧಾರತ್ವಂ, ತದ್ಗತ ದೋಷರಹಿತತ್ವಮ್, ಕ್ರೀಡಾವಿಜಿಗೀಷಾದಿಮತ್ತ್ವಮ್ ಎಙ್ಗಿರವಾಕಾರಙ್ಗಳುಮೆಲ್ಲಾಮ್ ನಾರಾಯಣಶಬ್ದಾರ್ಥತ್ತಿಲೇಏಕದೇಶಮ್)

---

ಏಕದೇಶಮ್" ಎಂದಿರುತ್ತದೆ, ಮೂಲಮಂತ್ರದ ನಾರಾಯಣ ಶಬ್ದದಲ್ಲಿ ತೋರಿಬರುವ ಅನೇಕಾರ್ಥಗಳಲ್ಲಿ ಇವು ಎಲ್ಲೋ ಅಲ್ಪವಾದ ಅರ್ಥಗಳು. ಎಲ್ಲೋ ಕೆಲವು ಮಾತ್ರ ತೋರಿದರೂ ಮಿಕ್ಕ ಎಲ್ಲಾ ಅರ್ಥಗಳನ್ನೂ ಅತಿದೇಶಮಾಡಿ ಇಟ್ಟುಕೊಳ್ಳಬೇಕೆಂಬ ತಾತ್ಪರ್ಯವು. ಇದರಿಂದ ಷಡಕ್ಷರ ಮನ್ತ್ರಕ್ಕಿಂತ ಅಷ್ಟಾಕ್ಷರ ಮನ್ತ್ರಕ್ಕೆ ಅತಿಶಯಿತಗಳಾದ ಅನೇಕಾರ್ಥಗಳನ್ನು ಪ್ರದರ್ಶಿಸುವದರ ಮೂಲಕ ಮಾಹಾತ್ಮ್ಯೆಯು ಏರ್ಪಟ್ಟಿತು.

ಮುಂದೆ ವಾಸುದೇವ ದ್ವಾದಶಾಕ್ಷರ ಮನ್ತ್ರಾರ್ಥವು ಧಾತ್ವರ್ಥದ ಮೂಲಕ ಪ್ರದರ್ಶಿಸುವ ಅರ್ಥಗಳನ್ನು ಉಪಪಾದಿಸಿ, ಆ ಸಂದರ್ಭದಲ್ಲೂ ಮೂಲಮನ್ತ್ರದ ನಾರಾಯಣ ಶಬ್ದದಿಂದ ತೋರಿಬರುವ ಅನೇಕಾರ್ಥಗಳಲ್ಲಿ ಈ ಅರ್ಥಗಳು ಏಕದೇಶವೆಂದು ಹೇಳುತ್ತಾರೆ.—**ವಾಸುದೇವಶಬ್ದತ್ತಿಲುಮ್** - "**ವಾಸುದೇವ**" ಎಂಬ ಶಬ್ದದಲ್ಲೂ, ಧಾತ್ವರ್ಥದಿಂದ ತೋರುವದು ಮೂರು ಅರ್ಥವೆಂದು ಮುಂದೆ ಹೇಳುತ್ತಾರೆ.—**ವಸತಿ** - ಎಲ್ಲಾ ಚೇತನಾಚೇತನಗಳಲ್ಲೂ ಇರುತ್ತಾನೆ, **ವಾಸಯತಿ**-ಎಲ್ಲಾ ಚೇತನಾಚೇತನಗಳಿಗೆ ಸತ್ತೆಯನ್ನು ಕೊಟ್ಟು ವಸಿಸುವಹಾಗೆ ಮಾಡುತ್ತಾನೆ, **ಎನ್ರುಮ್** - ಎಂದೂ, **ದೀವ್ಯತಿ** - ಕ್ರೀಡಿಸುತ್ತಾನೆ, **ಎನ್ರುಮ್** - ಎಂಬದಾಗಿಯೂ, **ತೋತ್ತಿನ** - ಧಾತುನಿಷ್ಪತ್ತಿಯಿಂದ ತೋರಿಬರುವ, **ಸರ್ವವ್ಯಾಪಕತ್ವಮುಮ್** ಸಮಸ್ತವನ್ನು ವ್ಯಾಪಿಸೋಣವೂ (ಇದು ವಸತಿ ಎಂಬುದರಿಂದ ತೋರಿಬರುವ ಅರ್ಥವು) **ಸರ್ವಾಧಾರತ್ವವೂ** - ಸಮಸ್ತಕ್ಕೂ ಆಧಾರವಾಗಿರೋಣವೂ, (ಇದು ವಾಸಯತಿ ಎಂಬರ್ಥದಿಂದ ತೋರಿಬರುವಂತಾದ್ದು), **ತದ್ಗತ ದೋಷ ರಹಿತತ್ವಮ್** - ಇವೆರಡರ ಸಂಬಂಧವಿದ್ದರೂ, ಅವುಗಳ ದೋಷವಿಲ್ಲದಿರುವುದು, (ಇವು ಮೇಲಿನ ಎರಡರಿಂದಲೂ ಅರ್ಥವಾಗಿ ತೋರಿಬರುವಂತಾದ್ದು. ಅಥವಾ ದಿವ್ ಧಾತುವಿನ ಇನ್ನೊಂದು ಅರ್ಥವಾದ ಪ್ರಕಾಶದಿಂದ ತೋರುವ ಅರ್ಥವೆಂದಾದರೂ ಭಾವಿಸಬಹುದು) **ಕ್ರೀಡಾವಿಜಿಗೀಷಾದಿಮತ್ತ್ವಮುಮ್** - ಕ್ರೀಡೆ ಅಥವಾ ಜಯಿಸುವ ಅಪೇಕ್ಷೆ ಇವೇ ಮೊದಲಾದವುಗಳನ್ನು ಹೊಂದಿರೋಣವು, (ಇವು ದಿವು ಧಾತುವಿನ ಅನೇಕಾರ್ಥಗಳಿಂದ ತೋರಿಬರುವ ಅರ್ಥಗಳು,) "**ದಿವ್ ಕ್ರೀಡಾವಿಜಗೀಷಾ** ವ್ಯವಹಾರ **ದ್ಯುತಿಸ್ತುತಿ ಮೋದ** ಮದಕಾಂತಿ **ಗತಿಷು**" ಎಂಬ ನಿಘಂಟು ವಾಕ್ಯದಿಂದ ತೋರಿಬರುವ ಅರ್ಥಗಳು ; ಆದಿಪದವು ಕ್ರೀಡಾವಿಜಗೀಷಾ ಅಲ್ಲದ ಇತರ ಭಾವಗಳನ್ನು ತೋರ್ಪಡಿಸುತ್ತದೆ.) **ಎಙ್ಗಿರ ಅಕಾರಙ್ಗಳುಮೆಲ್ಲಾಮ್** - ಎನ್ನುವ ಅರ್ಥವಿಶೇಷಗಳೆಲ್ಲಾ, **ನಾರಾಯಣ**

## ನಿಗಮನೇ ಮೂಲಮನ್ತ್ರಸ್ಯ ಅನವಚ್ಛಿನ್ನ ಪ್ರಭಾವಮಾಹ

೧ "ಋಚೋ ಯಜೂಂಷಿ ಸಾಮಾನಿ ತಥೈವಾ ಥರ್ವಣಾನಿ ಚ । ಸರ್ವ ಮಷ್ಟಾಕ್ಷರಾಂತಸ್ಥಂ ಯಚ್ಚಾನ್ಯದಪಿ ವಾಙ್ಮಯಮ್" ಎನ್ಗೈಯಾಲ್, ಇತ್ತಿ

---

ಶಬ್ದತ್ತಿಲೇ- ಮೂಲಮನ್ತ್ರದ ನಾರಾಯಣ ಶಬ್ದಾರ್ಥದಲ್ಲಿ, ಏಕದೇಶಮ್ – ಅಲ್ಪಭಾಗವು ; ಎಂದರೆ ನಾರಾಯಣ ಶಬ್ದದಲ್ಲಿ, ತತ್ಪುರುಷ ಬಹುವ್ರೀಹಿ ಸಮಾಸಗಳ ಮೂಲಕವಾಗಿಯೂ, ಅಯನ ಶಬ್ದದ ಧಾತ್ವರ್ಥಗಳ ಮೂಲಕ ವಾಗಿಯೂ, ನಾರಾಯಣ ಶಬ್ದದಲ್ಲಿರುವ ಅಕ್ಷರಗಳ ನಿರುಕ್ತಿ ಮೂಲಕವಾಗಿಯೂ, ತೋರುವ ಬಹ್ವರ್ಥಗಳಲ್ಲಿ ಇವು ಎಲ್ಲೋ ಅಲ್ಪವಾದವುಗಳು ಎಂಬರ್ಥವು ವಾಸುದೇವ ಶಬ್ದಕ್ಕೆ ಹೇಳಲ್ಪಟ್ಟ ನಿರುಕ್ತಿರೂಪ ಪ್ರಮಾಣವು ಇಲ್ಲಿ ಅನುಸಂಧೇ ಯವು :—"ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇತಿ ವೈಯತಃ" ಎಂದು ವಿಷ್ಣು ಪುರಾಣೋಕ್ತಿಯು ಇದೆ. ನಾರಾಯಣ ಶಬ್ದದಲ್ಲಿ ಈ ಅರ್ಥಗಳೆಲ್ಲಾ ಹೇಗೆ ಬೋಧಿತವೆಂದು ಹಿಂದೆಯೇ ವ್ಯಕ್ತವಾಗಿ ಹೇಳಿರುವದರಿಂದ ಇಲ್ಲಿ ಪುನಃ ಹೇಳ ಲಿಲ್ಲವು. ಹಿಂದೆ ಪರಾಂಬರಿಸಬಹುದು.

## ನಿಗಮನದಲ್ಲಿ ಮೂಲಮನ್ತ್ರದ ಅಪರಿಮಿತ ಪ್ರಭಾವವನ್ನು ತಿಳಿಸುತ್ತಾರೆ.

ಹೀಗೆ ವ್ಯಾಪಕ ಮಂತ್ರಗಳ ಎಲ್ಲಾ ಅರ್ಥವು ಈ ಮೂಲಮನ್ತ್ರದಲ್ಲಿ ಅಡ ಗಿರುವದರಿಂದಲೂ ವೇದಾರ್ಥಗಳ ಮುಖ್ಯಾಭಿಪ್ರಾಯಗಳೆನ್ನೆಲ್ಲಾ ಒಳಗೊಂಡಿರು ವದರಿಂದಲೂ, ಮುಮುಕ್ಷುವಿಗೆ ಈ ಮೂಲಮನ್ತ್ರದಲ್ಲೇ ನಿರತಿಶಯ ವಿಶ್ವಾಸ ಉಂಟಾಗುವದಕ್ಕಾಗಿ ಇದಕ್ಕೆ ಹೆಚ್ಚು ಪ್ರಾಮಾಣ್ಯವೂ ಪ್ರಭಾವವೂ ಉಂಟೆಂದು ಉಪಪಾದಿಸಿ ಹೇಳುತ್ತಾರೆ-—

ಮೇಲೆ ವಿಸ್ತರಿಸಿ ಹೇಳಿದ ಉಪಪಾದನೆಯಿಂದ ಅರ್ಥಕೃತೋತ್ಕರ್ಷ ಮಾತ್ರವೇ ಅಲ್ಲದೆ ಸ್ವರೂಪತಃ ಕೂಡ ಸರ್ವೋತ್ಕೃಷ್ಟವಾದುದಾಗಿ ಈ ಅಷ್ಟಾ ಕ್ಷರ ಮನ್ತ್ರದಲ್ಲಿ ತಿಳಿಯಬೇಕಾದ ಸಮಸ್ತಾಭಿಪ್ರಾಯಗರ್ಭಿತವಾದುದೆಂಬುದಕ್ಕೆ ಸಂಹಿತಾಪ್ರಮಾಣವನ್ನು ಉದಾಹರಿಸುತ್ತಾರೆ.—

(೧) "ಋಚಃ – ಋಗ್ವೇದವಾಕ್ಯಗಳೂ, ಯಜೂಂಷಿ–ಯಜುರ್ವೇದಗಳೂ, ಸಾಮಾನಿ-ಸಾಮವೇದಗಳೂ, ತಥೈವ - ಹಾಗೆಯೇ, ಅಥರ್ವಣಾನಿಚ–ಅಥರ್ವಣ ವೇದ ವಾಕ್ಯಗಳೂ ಸಹ, ಮತ್ತು ಯಚ್ಚ-ಯಾವ ವಾಙ್ಮಯಮ್-ವಾಗ್ರೂಪವಾದ ಎಂದರೆ ಶಾಬ್ದವಾಗಿ ತೋರಬರುವ, ಅನ್ಯತ್ಸರ್ವಂ-ಇತರ ಎಲ್ಲವು, ಎಂಬುದರಿಂದ ಅರ್ಥವಾಗಿ ತೋರುವ ಸಮಸ್ತಾಭಿಪ್ರಾಯಗಳೆಲ್ಲವೂ, ಅಷ್ಟಾಕ್ಷರಾಂತಸ್ಥಮ್ – ಮೂಲಮನ್ತ್ರದಲ್ಲಿ ಅಡಗಿವೆ" ಎನ್ಗೈಯಾಲೇ - ಎಂದು ಹೀಗೆ ಮಾಹಾತ್ಮ್ಯೆ

---

(೧) ಹಾರಿ ೩-೬೫.

**ರುವಷ್ಟಾಕ್ಷರಮೇ ಮುಮುಕ್ಷುಕ್ಕಳುಕ್ಕು ತತ್ವಹಿತಾನುಬಂಧಿಗಳಾನ ಸರ್ವಾಪೇಕ್ಷಿತಙ್ಗಳುಕ್ಕುಮ್ ಪ್ರಕಾಶಕಮ್. (೨) "ಋಚೋ ಯಜೂಂಷಿ ಸಾಮಾನಿ ಯೋಽಧೀತೇಽಸಕೃದಂಜಸಾ । ಸಕೃದಷ್ಟಾಕ್ಷರಂ ಜಪ್ತ್ವಾ ಸತಸ್ಯ ಫಲಮಶ್ನುತೇ" ಎನ್ಗೈಯಾಲೇ, ಇದಿನುಡೈಯ ಸಕೃದುಚ್ಚಾರಣಮ್ ಸರ್ವವೇದ**

---

ಯನ್ನು ಪ್ರದರ್ಶಿಸಿರುವದರಿಂದ, **ಇತ್ತಿರುವಷ್ಟಾಕ್ಷರಮೇ** - ಈ ಅಷ್ಟಾಕ್ಷರ ಮಂತ್ರವೇ, **ಮುಮುಕ್ಷುಗಳುಕ್ಕು** - ಮೋಕ್ಷಾರ್ಥಿಗಳಿಗೆ, **ತತ್ವಹಿತಸಂಬಂಧಿಗಳಾನ** – ಪರತತ್ವವು ಸರ್ವಶೇಷಿಯಾದ ಶ್ರಿಯಃಪತಿ ಎಂದೂ, ಜೀವತತ್ವವು ಆತನಿಗೆ ಸರ್ವವಿಧದಲ್ಲೂ ಪರತಂತ್ರನಾಗಿ ಶೇಷನೆಂದೂ, ಹಿತವು ಭರನ್ಯಾಸವೇ ಎಂದೂ, ಹೀಗೆ ತತ್ವಹಿತಗಳಿಗೆ ಸಂಬಂಧಿಸಿದ, **ಸರ್ವಾಪೇಕ್ಷಿತಙ್ಗಳುಕ್ಕುಮ್** - ಸಮಸ್ತಗಳಾದ ಎಲ್ಲಾ ಅಪೇಕ್ಷಿತಗಳಾದ ಅಭಿಪ್ರಾಯಗಳಿಗೂ, **ಪ್ರಕಾಶಕಮ್** - ಪ್ರದರ್ಶಕವು. ಹಿಂದೆ ನಾಲ್ಕು ವೇದಗಳಲ್ಲಿರುವ ಮುಖ್ಯಾಭಿಪ್ರಾಯಗಳೆಲ್ಲಾ ಈ ಅಷ್ಟಾಕ್ಷರದಲ್ಲಿ ಅಡಗಿವೆ ಎಂದು ಅಷ್ಟಾಕ್ಷರಕ್ಕೆ ಇತರ ವ್ಯಾಪಕ ಮನ್ತ್ರಗಳಿಗಿಂತಲೂ ಮಾಹಾತ್ಮ್ಯೆಯು ಅತ್ಯಧಿಕವೆಂದು ಹೇಳಿದರು. ಆದುದರಿಂದ ಮುಂದೆ ಆ ನಾಲ್ಕು ವೇದಾಧ್ಯಯನಗಳಿಂದುಂಟಾಗುವ ಫಲವೆಲ್ಲಾ ಈ ಅಷ್ಟಾಕ್ಷರ ಮನ್ತ್ರಜಪದಿಂದಲೇ ಸಿದ್ಧಿಸುತ್ತದೆಂದು ಸಪ್ರಮಾಣವಾಗಿ ತಿಳಿಸುತ್ತಾರೆ— **ಋಚೋ ಯಜೂಂಷಿ ಸಾಮಾನಿ** - ಋಗ್ಯಜುಸ್ಸಾಮವೇದಗಳನ್ನು, **ಯಃ** - ಯಾವನು, **ಅಸಕೃತ್** - ಪುನಃ ಪುನಃ, **ಅಂಜಸಾ** - ಸಂಪೂರ್ಣವಾಗಿ, ಶೀಘ್ರವಾಗಿ, ಸತ್ಯವಾಗಿ, **ಅಧೀತೇ** - ಅಧ್ಯಯನ ಮಾಡುತ್ತಾನೋ, **ಸಃ** - ಅವನು, **ಅಷ್ಟಾಕ್ಷರಂ** – ಅಷ್ಟಾಕ್ಷರ ಮನ್ತ್ರವನ್ನು **ಸಕೃತ್** - ಒಂದು ಸಲ, **ಜಪ್ತ್ವಾ** - ಜಪಮಾಡಿದರೆ, **ತಸ್ಯ ಫಲಮಶ್ನುತೇ** - ಆ ಎಲ್ಲಾ ವೇದವನ್ನೂ ಅನೇಕ ಸಲ ಅಧ್ಯಯನ ಮಾಡಿದ ಫಲವನ್ನೇ ಹೊಂದುತ್ತಾನೆ" **ಎನ್ಗೈಯಾಲೇ** - ಎಂಬ ಪ್ರಮಾಣವಿರುವದರಿಂದ, **ಇದಿನುಡೈಯ ಸಕೃದುಚ್ಚಾರಣಮ್** – ಈ ಮೂಲ ಮನ್ತ್ರವನ್ನು ಒಂದು ಸಲ ಉಚ್ಚರಿಸೋಣವು, **ಸರ್ವವೇದ ಜಪತುಲ್ಯಮ್** - ಸಮಸ್ತ ವೇದಾಧ್ಯಯನಕ್ಕೆ ಸಮಾನವು. ಹೀಗೆ ಹೇಳಿದುದರಿಂದ ಮುಮುಕ್ಷುವಿಗೆ ಮಾತ್ರವೇ ಅಲ್ಲದೆ, ಮೂಲಮನ್ತ್ರಜಪವು ಮುಮುಕ್ಷುಗಳಲ್ಲದವರಿಗೂ ಕೂಡ ಶ್ರೇಯಸ್ಕರವೆಂದು ಹೇಳಿದಂತಾಯಿತು. ಹೀಗೆ ಒಂದು ಸಲ ಮೂಲಮನ್ತ್ರವನ್ನು ಜಪಿಸಿದರೆ, ಸರ್ವ ವೇದಗಳನ್ನೂ ಅನೇಕ ಸಲ ಅಧ್ಯಯನ ಮಾಡಿದ ಫಲವುಂಟಾಗುತ್ತದೆಂದು ಹೇಳುವದು, ಸುಮ್ಮನೆ ಮಾಹಾತ್ಮ್ಯೆಯನ್ನು ಹೇಳಿ ಮೂಲಮನ್ತ್ರಜಪದಲ್ಲಿ ಅಭಿರುಚಿಯುಂಟಾಗುವದಕ್ಕಾಗಿ ಹೇಳಿದ ಅತಿಶಯೋಕ್ತಿಯಾಗುವದಿಲ್ಲವೇ? ಎಂದರೆ ಹಾಗಲ್ಲವೆಂದು ಸಮಾಧಾನವನ್ನು ಮುಂದಿನ ವಾಕ್ಯ

---

(೨) ನಾರದೀಯ ೧-೧೦

ಜಪತುಲ್ಯಮ್. (೩) "ಯಶ್ಚ ಯಾವಾಂಶ್ಚ ವಿಶ್ವಾಸ ಸ್ತಸ್ಯ ಸಿದ್ಧಿ ಶ್ಚ ತಾವತೀ। ಏತಾವಾನಿತಿ ನೈತಸ್ಯ ಪ್ರಭಾವಃ ಪರಿಮೀಯತೇ"ಎನ್ಗೈಯಾಲೇ, ತನ್ತಾಮ್ ವಿಶ್ವಾಸ ತಾರತಮ್ಯತ್ತುಕ್ಕೇಡಾಗ ಸಿದ್ಧಿತಾರತಮ್ಯ ಮುಣ್ಡಾನಾಲುಮ್, ಮಹಾ ವಿಶ್ವಾಸಮುಡೈಯಾರ್ ಪಕ್ಕಲ್ ಇತ್ತಿರುಮನ್ತ್ರಮ್ ಅನವಚ್ಛಿನ್ನ ಪ್ರಭಾವ

---

ಗಳಿಂದ ತಿಳಿಸುತ್ತಾರೆ. ಸಕೃತ್ ಅಷ್ಟಾಕ್ಷರ ಮನ್ತ್ರೋಚ್ಚಾರಣೆಯು ಸರ್ವ ಶ್ರೇಯ ಸ್ಕರವೆಂದು ಹೇಳಲ್ಪಟ್ಟಿತಲ್ಲಾ, ಇದೇನು ಯಥಾರ್ಥೋಕ್ತಿಯೇ? ಏಕೆಂದರೆ ಕೆಲವರು ಸದಾ ಮೂಲಮನ್ತ್ರ ಜಪಿಸುತ್ತಿದ್ದರೂ, ದಾರಿದ್ರ್ಯವನ್ನು ಅನುಭವಿಸು ತ್ತಿರುವವನ್ನು ಕಂಡಿರುವೆವು, ಹೀಗಿರುವಾಗ ಇನ್ನು ಮೋಕ್ಷವನ್ನು ಸಾಧಿಸಿ ಕೊಡುವ ಮಾಹಾತ್ಮ್ಯೆಯುಪಲಾಯನಸೂಕ್ತ ಜಪಿಸಲಿಲ್ಲವೇ? ಎಂದರೆ ಅಧಿ ಕಾರಿಯ ವೈಗುಣ್ಯದಿಂದಲೋ, ವಿಶ್ವಾಸ ತಾರತಮ್ಯದಿಂದಲೋ, ಪ್ರಬಲ ಪ್ರಾರ ಬ್ಧದ ಪ್ರತಿಬಂಧಕದಿಂದಲೋ, ಕರ್ತೃವಿಗೆ ಅಪೇಕ್ಷೆ ಇಲ್ಲದಿದ್ದರಿಂದಲೋ,ಐಹಿಕಾದಿ ಶ್ರೇಯಸ್ಸಿನ ಸಿದ್ಧಿ ಇಲ್ಲದಿರಬಹುದು. ಮುಖ್ಯವಾಗಿ ವಿಶ್ವಾಸ ತಾರತಮ್ಯದಿಂದ ಸಿದ್ಧಿ ಇಲ್ಲದಿರಬಹುದೆಂದು ಉಪಪಾದಿಸಿ ಹೇಳುತ್ತಾರೆ. "**ಯಸ್ಯ** – ಯಾವನಿಗೆ **ವಿಶ್ವಾಸಃ** - ಈ ಅಷ್ಟಾಕ್ಷರದಲ್ಲಿ ವಿಶ್ವಾಸವು, **ಯಾವಾಂಶ್ಚ** – ಎಷ್ಟರಮಟ್ಟಿಗೋ **ತಸ್ಯ**- ಅವನಿಗೆ, **ಸಿದ್ಧಿಶ್ಚ** - ಅಷ್ಟಾಕ್ಷರ ಜಪ ಫಲವೂ ಸಹ, **ತಾವತೀ** - ಅಷ್ಟೇ, ನಿರತಿಶಯ ವಿಶ್ವಾಸವಿದ್ದರೆ ನಿರತಿಶಯ ಫಲವುಂಟು, ಹಾಗಲ್ಲದೆ ಮಂದ ವಿಶ್ವಾಸ ವಿದ್ದರೆ ಫಲವೂ ಮಂದವೇ ಎಂಬ ಭಾವವು. **ಏತಸ್ಯ ಪ್ರಭಾವಃ** - ಈ ಅಷ್ಟಾ ಕ್ಷರದ ಮಾಹಾತ್ಮ್ಯೆಯು, **ಏತಾವಾನ್ ಇತಿ** - ಇಷ್ಟುಮಟ್ಟಿಗೇನೇ ಎಂದು, **ನಪರಿ ಮೀಯತೇ** – ಅಳತೆಮಾಡಿ ಹೇಳಲು ಸಾಧ್ಯವಿಲ್ಲವು," ಈ ಶ್ಲೋಕವು ಸಾಧ್ಯೋ ಪಾಯ ಶೋಧನಾಧಿಕಾರದಲ್ಲೂ ಉದಾಹೃತವು. **ಎನ್ಗೈಯಾಲೇ** - ಎಂದು ಹೇಳಿರುವದರಿಂದ, **ತನ್ತಾಮ್ ವಿಶ್ವಾಸತಾರತಮ್ಯತ್ತುಕ್ಕೇಡಾಗ** - ಅವರವರುಗಳಿ ಗಿರುವ ವಿಶ್ವಾಸದಲ್ಲಿರುವ ತಾರತಮ್ಯಕ್ಕೆ ಯೋಗ್ಯವಾದ, **ಸಿದ್ಧಿತಾರತಮ್ಯಮುಣ್ಡಾ ನಾಲುಮ್** – ಫಲದಲ್ಲಿ ತಾರತಮ್ಯವು ಉಂಟಾದರೂ, **ಮಹಾವಿಶ್ವಾಸಮುಡೈ ಯಾರ್‌ಪಕ್ಕಲ್** - ಮಹತ್ತಾದ ವಿಶ್ವಾಸವನ್ನು ಹೊಂದಿದವರ ವಿಷಯದಲ್ಲಿ, ಈ ತಿರುಮನ್ತ್ರವು, **ಅನವಚ್ಛಿನ್ನಪ್ರಭಾವಮಾಯಿರುಕ್ಕುಮ್** – ಮೋಕ್ಷಪ್ರಾಪ್ತಿ ಹೇತುವಾದುದರಿಂದ, ಅಪರಿಮಿತ ಪ್ರಭಾವ ಉಳ್ಳದ್ದಾಗಿರುತ್ತದೆ. ಆದುದರಿಂದ ಸಕೃದುಚ್ಚಾರಣವು ಸರ್ವವೇದಾಧ್ಯಯನಕ್ಕೆ ಸಮಾನವೆಂದು ಹೇಳಿರುವುದೇನೂ ಅತಿಶಯೋಕ್ತಿಯಲ್ಲವು. ವಿಶ್ವಾಸತಾರತಮ್ಯದಿಂದ ಫಲಸಿದ್ಧಿಯಲ್ಲಿ ನ್ಯೂನತೆಯೇ ವಿನಾ, ನಿರತಿಶಯ ಫಲಪ್ರಾಪ್ತಿಗೂ ಹೇತುವೆಂಬುದು ಸಿದ್ಧವೆಂಬ ಅಭಿಪ್ರಾಯವು. ಈ ವಿಶ್ವಾಸದಲ್ಲಿ ತಾರತಮ್ಯವಾದರೋ ಮುಖ್ಯವಾಗಿ ಪ್ರಬಲ ಪ್ರಾರಬ್ಧ ಕರ್ಮ

---

(೩) ನಾರದೀಯಂ. ೧. ೧೪.

**ಮಾಯಿರುಕ್ಕುಮ್. ಇಶ್ಲೋಕತ್ತಿಲ್ ಇನ್ನಾರಾಲ್ ಪರಿಚ್ಛೇದಿಕ್ಕ ವೊಣ್ಣಾದೆನ್ರು ವಿಶೇಷಿಯಾವ್ಯೆಯಾಲೇ (೧) "ನರನಾರಣನಾಯ್ ಉಲಕತ್ತರುನೂಲ್ ಶಿನ್ಮಾವ್ಯೆ ವಿರಿತ್ತವರ್" ಎಜ್ಗಿರಪಡಿಯೇ ಇತ್ತಿರುಮನ್ತ್ರತ್ತುಕ್ಕು ಪ್ರವರ್ತ್ತಕನು**

---

ವಶಾತ್ ಉಂಟಾಗತಕ್ಕದ್ದು. ಇದರಿಂದ ಕೆಲವರಿಗೆ ಮೋಕ್ಷಕ್ಕೆ ತಡೆಯುಂಟಾದರೆ, ಅದರಿಂದ ಮೂಲಮನ್ತ್ರಕ್ಕೆ ಅಪರಿಚ್ಛಿನ್ನವಾದ ಫಲವನ್ನು ಕೊಡುವ ಶಕ್ತಿಯಿಲ್ಲವೆಂದು ಹೇಳಲಾಗುವುದಿಲ್ಲವು. ನಿರತಿಶಯ ವಿಶ್ವಾಸವಿದ್ದುದಾದರೆ, ನಿರತಿಶಯ ಫಲರೂಪ ಮೋಕ್ಷವುಂಟೆಂಬುದೂ ಸಿದ್ಧವು. ಹಿಂದಿನ "**ಯಸ್ಯ ಯಾವಾಂಶ್ಚ**" ಎಂಬ ಶ್ಲೋಕದಲ್ಲಿ ಮೂಲಮನ್ತ್ರದ ಪ್ರಭಾವವು ಅಪರಿಚ್ಛಿನ್ನವೆಂದು ಹೇಳಲ್ಪಟ್ಟಿತಲ್ಲಾ, ಯಾರೊಬ್ಬರಿಂದಲೂ ಇದರ ಮಹಿಮೆಯು ಇಷ್ಟೆಂದು ತಿಳಿಯಲು ಸಾಧ್ಯವಿಲ್ಲವೋ? ಇಷ್ಟು ದೂರ ವಿಸ್ತರವಾಗಿ ಉಪಪಾದಿಸಿ ಅದರ ಮಾಹಾತ್ಮ್ಯೆಯನ್ನು ಈ ಅಧಿಕಾರದಲ್ಲಿ ವಿಶದೀಕರಿಸಿದ ತಮಗೂ, ಅದರ ಅಳವು ಇಷ್ಟೆಂದು ತಿಳಿಯದೋ? ಎಂದೇನಾದರೂ ಕೇಳಿದರೆ, ತಮಗೂ ತಿಳಿಯದು, ಇನ್ನು ಯಾರಿಗೂ ತಿಳಿಯದು; ಆಗಲಿ ಸರ್ವೇಶ್ವರನಿಗಾಗಲಿ ತಿಳಿಯದೋ ಎಂದರೆ ಆತನಿಗೂ ತಿಳಿಯದೆಂದು ಉಪಪಾದಿಸಿ ಹೇಳುತ್ತಾರೆ.— **ಇಶ್ಲೋಕತ್ತಿಲ್** - ಈ "**ಯಸ್ಯಯಾವಾಂಶ್ಚ**" ಎಂಬ ಶ್ಲೋಕದಲ್ಲಿ **ಇನ್ನಾರಾಲ್ ಪರಿಚ್ಛೇದಿಕ್ಕವೊಣ್ಣಾದೆನ್ರು ವಿಶೇಷಿಯಾವ್ಯೆಯಾಲೇ** - ಇಂತವರಿಂದ ಇದರ ಮಾಹಾತ್ಮ್ಯೆಯು ಇಷ್ಟು ಪರಿಮಿತಿಯುಳ್ಳದು ಎಂದು ಹೇಳಲಸಾಧ್ಯವೆಂದು ವಿಶೇಷಿಸಿ ಹೇಳಲಿಲ್ಲವಾದುದರಿಂದ, (೧) **ನರನಾರಣನಾಯ್**-ನರನಾರಾಯಣಾವತಾರವನ್ನವಲಂಬಿಸಿದವನಾಗಿ, **ಉಲಕತ್ತು** - ಲೋಕದಲ್ಲಿ, **ಅರುನೂಲ್** - ಅರ್ಥವು ದುರ್ಗ್ರಹವಾದ ವೇದಶಾಸ್ತ್ರದಲ್ಲಿ, **ಶಿನ್ಮಾವ್ಯೆ** - ಲೋಕದಲ್ಲಿ, ಸಂಕೋಚ ನ್ಯೂನತೆ ಇಲ್ಲದೆ ಸಂಪೂರ್ಣವಾಗಿ, **ವಿರಿತ್ತವರ್**-ವಿಸ್ತರಿಸಿ ಹೇಳಿದವನು, **ಎಜ್ಗಿರಪಡಿಯೇ** – ಎಂಬ ಪಾಶುರದಲ್ಲಿ ಹೇಳಿರುವಹಾಗೆ, **ಇತ್ತಿರುಮನ್ತ್ರತ್ತುಕ್ಕು ಪ್ರವರ್ತಕನಾಯ್** - ಈ ಮೂಲಮಂತ್ರದ ಮಾಹಾತ್ಮ್ಯೆಯನ್ನು ಪ್ರದರ್ಶಿಸಿದವನಾಗಿಯೂ, ಸರ್ವವೇದಾಂತ ಪ್ರವರ್ತಕತ್ವವು ಭಗವಂತನಿಗೆ "**ಪ್ರಣವೋಥನುಃ**" ಇತ್ಯಾದಿ ಪ್ರಮಾಣಗಳ ಮೂಲಕ ಇರುವದರಿಂದ, ತದಂತರ್ಗತವಾದ ಶ್ರೀಮದಷ್ಟಾಕ್ಷರಕ್ಕೂ ಪ್ರವರ್ತಕನು ಎಂಬ ಭಾವವು. ಅಥವಾ ತಿರುಮಙ್ಗೈಯಾಳ್ವಾರ್ ವಿಷಯದಲ್ಲಿ ಸಾಕ್ಷಾತ್ಪ್ರವರ್ತಕನೆಂಬ ಇತಿಹಾಸವಿರುವದರಿಂದಲೂ ಪ್ರವರ್ತಕನು; ಅಥವಾ ಇದರ ಮಹಿಮೆಯನ್ನು ಪಾಂಚರಾತ್ರದಲ್ಲಿ ತಾನೇ ವ್ಯಕ್ತಪಡಿಸಿರುವದರಿಂದಲೂ ಪ್ರವರ್ತಕನು; ಅಥವಾ ನಾರಾಯಣೋಪನಿಷತ್ತಿನ ಮೂಲಕ ವ್ಯಕ್ತಪಡಿಸಿದುದರಿಂದಲೂ ಪ್ರವರ್ತಕನು; ಅಥವಾ ರಾಮಾಯಣಾದಿಗಳಲ್ಲಿ ತನ್ನ ಪ್ರವೃತ್ತಿಯಿಂದಲೇ ಅಗ್ರತಃ ಪ್ರಯಯೌ ರಾಮ

**ಮಾಯ್ ಪ್ರತಿಪಾದ್ಯನುಮಾಯಿರುಕ್ಕಿರ ಸ್ವತಸ್ಸರ್ವಜ್ಞನಾನ ನಾರಾಯಣರ್ ತಾನು ಮಿರ್ದಿ ಪ್ರಭಾವತ್ತೈ ಪರಿಚ್ಛೇದ ಯೋಗ್ಯಮನ್ರೆನ್ರರಿಯುಮತ್ತನ್ರೈ .**

---

ಸ್ಸೀತಾ ಮಧ್ಯೇ ಸುಮಧ್ಯಮಾ ಇತ್ಯಾದಿಗಳಿಂದ ವ್ಯಕ್ತಪಡಿಸಿದುದರಿಂದಲೂ, ಪ್ರವರ್ತಕನೆಂಬ ಭಾವವು; ಇವು ಪ್ರಣವಾರ್ಥವನ್ನು ವ್ಯಕ್ತಪಡಿಸಿದರೂ ಪ್ರಣವಾರ್ಥ ಬೋಧೆಯನ್ನೇ ಮೂಲಮನ್ತ್ರವು ವಿಸ್ತರಿಸಿ ವ್ಯಕ್ತಗೊಳಿಸುತ್ತದೆ. ಹೇಗೆಲ್ಲಾ **ಪ್ರತಿಪಾದ್ಯನುಮಾಯ್** - ಆ ಮೂಲಮನ್ತ್ರದಲ್ಲಿ ಉಪಪಾದಿಸಲ್ಪಟ್ಟವನಾಗಿಯೂ, **ಇರುಕ್ಕಿರ** - ಇರುವ, **ಸ್ವತಃ ಸರ್ವಜ್ಞನಾನ** - ಇನ್ನೊಬ್ಬರ ಕೃಪೆಯಿಂದಲ್ಲದೆ ತಾನೇ ಸರ್ವಜ್ಞನಾಗಿರುವ, **ನಾರಾಯಣರ್ ತಾನುಮ್** - ಶ್ರೀಮನ್ನಾರಾಯಣನಾದ ತಾನೂ ಸಹ, **ಇರ್ದಿಪ್ರಭಾವತ್ತೈ** - ಈ ಮೂಲಮನ್ತ್ರದ ಪ್ರಭಾವವನ್ನು, **ಪರಿಚ್ಛೇದ್ಯಯೋಗ್ಯಮನ್ರು** - ಇಷ್ಟು ಪರಿಮಿತಿಯುಳ್ಳದೆಂದು ತಿಳಿಯಲೇ ಸಾಧ್ಯವಿಲ್ಲವೆಂದು, **ಅರಿಯುಮತ್ತನ್ರೈ** - ತಿಳಿಯುವನೆಂಬುದೇ ಇದರ ಅಭಿಪ್ರಾಯವು. ಇಲ್ಲಿ **ಸ್ವತಃ ಸರ್ವಜ್ಞನು** ಸರ್ವೇಶ್ವರನೆಂದು ಹೇಳಿ, ಆತನೇ ಈ ಮನ್ತ್ರಕ್ಕೆ ಪ್ರವರ್ತಕನಾಗಿದ್ದೂ, ಆತನಿಗೂ ಸಹ ಈ ಮನ್ತ್ರದ ಮಾಹಾತ್ಮ್ಯೆಯು ಇಷ್ಟೆಂದು ತಿಳಿಯದು ಎಂದೂ ಹೇಳುವದು, ಅತಿಶಯೋಕ್ತಿಯಾಗುವದಿಲ್ಲವೋ? ಎಂದರೆ ಎಂದಿಗೂ ಇಲ್ಲವೆಂದು ಹೇಳಿರುತ್ತಾರೆ. ಹೇಗೆಂದರೆ, ಮಾಹಾತ್ಮ್ಯೆಯ ಪರಿಮಿತಿಯು ಇಲ್ಲದ ವಿಷಯವು. ಇಲ್ಲದ ವಿಷಯವು ತಿಳಿಯದು ಎಂದು ಹೇಳುವದು ಸರ್ವಜ್ಞತೆಗೆ ಏನೂ ಕುಂದಕವಲ್ಲವು. ಇಲ್ಲದ ವಿಷಯವು ನನಗೆ ತಿಳಿಯುವದೆಂಬುದು ಹುಚ್ಚನಮಾತಾಗುತ್ತದೆ. ಮತ್ತೂ ಸರ್ವಜ್ಞತೆಗೆ ಕುಂದಕವು. ಗಗನದಲ್ಲಿ ಕಮಲ ಪುಷ್ಪವಾಗಲಿ, ಮೊಲಕ್ಕೆ ಕೊಂಬುಗಳಾಗಲಿ ಇಲ್ಲದಿರುವ ವಿಷಯವು, ಗಗನಾರವಿಂದ ವಿಷಯವಾಗಲಿ, ಶಶಶೃಂಗವಿಷಯವಾಗಲಿ, ನನಗೆ ತಿಳಿಯದು ಎಂದು ಹೇಳುವದೇನೂ ಸರ್ವೇಶ್ವರನ ಸರ್ವಜ್ಞತೆಗೆ ಏನೊಂದೂ ಕುಂದಕವಿಲ್ಲವು. ನನಗೆ ಇಲ್ಲದಿರುವದು ತಿಳಿಯುವದೆಂದರೆ ಹಾಸ್ಯಾಸ್ಪದವಾಗುತ್ತದೆ. ಹೀಗೆಯೇ ಶ್ರೀ ವತ್ಸಚಿಹ್ನಮಿಶ್ರರು ತಮ್ಮ ಶ್ರೀಸ್ತವದಲ್ಲಿ **"ದೇವಿತ್ವನ್ಮಹಿಮಾವಧಿರ್ನಹರಿಣಾ ನಾಪಿತ್ವಯಾ ಜ್ಞಾಯತೇ। ಯದ್ಯಪ್ಯೇವ ಮಥಾಪಿ ನೈವಯುವಯೋಃ ಸ್ಸರ್ವಜ್ಞತಾಹೀಯತೇ।ಯನ್ನಾಸ್ತ್ಯೇವ ತದಜ್ಞತಾ ಮನುಗುಣಾಂ ಸರ್ವಜ್ಞತಾಯಾವಿದು । ರ್ವ್ಯೋಮಾಂಭೋಜ ಮಿದನ್ತಯಾಕಿಲ ವಿದನ್ ಭ್ರಾನ್ತೋಯ ಮಿತ್ಯುಚ್ಯತೇ ॥೮॥** ಎಂದು ಉಪಪಾದಿಸಿರುತ್ತಾರೆ.—"ಓ ದೇವಿಯಾದ ಲಕ್ಷ್ಮಿಯೇ! ನಿನ್ನ ಮಹಿಮೆಯ ಪರಿಮಿತಿಯು ನಿನ್ನ ಪತಿಯಾದ ಶ್ರೀ ಹರಿಯಿಂದಲೂ ಮತ್ತು ನಿನ್ನಿಂದಲೂ ತಿಳಿಯಲ್ಪಡಲಿಲ್ಲವು. ಹೀಗೆ ಹೇಳಿದುದಾದರೆ ನಿಮ್ಮಗಳ ಸರ್ವಜ್ಞತೆಗೆ ಕುಂದಕವಲ್ಲವೋ? ಎಂದರೆ ಏನೊಂದೂ ನ್ಯೂನತೆಯಿಲ್ಲವು; ಹೇಗೆಂದರೆ? ಯಾವುದು ಇಲ್ಲದಿರುವದೋ, ಅದಕ್ಕನುಗುಣವಾಗಿ ಇಲ್ಲಿ ಅವಧಿ ಇಲ್ಲದುದು ಎಂದು ತಿಳಿಯುವದೇ ಸರ್ವಜ್ಞತೆಯ ಲಕ್ಷಣವೆಂದು ಜ್ಞಾನಿಗಳು ತಿಳಿಯು

ತ್ತಾರೆ; ಗಗನಾರವಿಂದವು ಇಂತಾದ್ದೆಂದು ಹೇಳುವವನಲ್ಲವೇ ಭ್ರಾನ್ತನು ಎಂದು ಹೇಳಲ್ಪಡುತ್ತಾನೆ; ಎಂಬುದು ಈ ಶ್ಲೋಕಾಭಿಪ್ರಾಯವು. ಇಲ್ಲಿ ನರ ನಾರಾಯಣನಾಯ್ ಎಂಬ ಪ್ರಯೋಗದಿಂದ ಗೋಪ್ಯವಾಗಿ ಸೂಚಿಸಲ್ಪಟ್ಟ ಅರ್ಥವೇನೆಂದರೆ, **"ಸರ್ವಧರ್ಮಾನ್ ಪರಿತ್ಯಜ್ಯ"** ಎಂಬ ಶ್ಲೋಕವನ್ನು ಹೇಳಿ, ನಾರಾಯಣನು ನರನಾದ ಅರ್ಜುನನ ಶೋಕವನ್ನು ಹೋಗಲಾಡಿಸುವದಕ್ಕಾಗಿ ರಥದಲ್ಲಿ ಅರ್ಜುನ ಸಾರಥಿಯಾಗಿ ಕುಳಿತಿರುವ ಸನ್ನಿವೇಶವೇ ಮೂಲಮನ್ತ್ರದ ಅರ್ಥಪ್ರಕಾಶಕವೆಂಬುದು ತೋರಬರುತ್ತದೆ. ಈ ಮನ್ತ್ರಕ್ಕೆ ಅತನೇ ಹೇಗೆ ಪ್ರವ ರ್ತಕನೆಂಬುದು ಹಿಂದೆ ಶಾಸ್ತ್ರಗಳಲ್ಲಿ ಉಪಪಾದಿತವಾಗಿದ್ದರೂ, ಶ್ರೀ ತಿರುಮಙ್ಗೈ ಯಾಳ್ವಾರವರ ಸಂದರ್ಭದಲ್ಲಿ ಪ್ರವರ್ತಕನೆಂಬುದನ್ನು ಮುಂದಿನ ವಾಕ್ಯದಲ್ಲಿ ಹೇಳುತ್ತಾರೆ. ಈ ಮಂತ್ರಕ್ಕೆ ಪ್ರತಿಪಾದ್ಯನು ನರನಾರಾಯಣನೆಂಬುದು, ಮೂಲ ಮನ್ತ್ರದ ತೃತೀಯ ಪದದಲ್ಲೇ ವ್ಯಕ್ತವೂ ಅಲ್ಲದೆ, ಈ ಮನ್ತ್ರೋಪಾಸನೆಯ ಕಾಲ ದಲ್ಲಿ ಋಷಿಯು ಯಾರೆಂಬ ಸಂದರ್ಭದಲ್ಲಿ ಬದರಿಕಾಶ್ರಮವಾಸಿಯಾದ ನರನಾರಾ ಯಣ ಋಷಿಯೆಂದು ಹೇಳಲ್ಪಡುವದರಿಂದಲೂ ವ್ಯಕ್ತವು. ಮೇಲೆ ಉದಾಹರಿ ಸಿರುವ ಪಾಶುರದಿಂದ ಏನು ಉಪಪಾದಿತವು ಎಂದರೆ ಈ ಮೂಲಮನ್ತ್ರಕ್ಕೆ ಪ್ರವ ರ್ತಕನೂ ಪ್ರತಿಪಾದ್ಯನೂ ಸಹ ಸರ್ವಜ್ಞನಾದ ನಾರಾಯಣನೇ ಎಂದು ಹೇಳಿರು ತ್ತಾರೆ. ಆ ಪಾಶುರವು ಯಾವುದೆಂದರೆ--

ಎಙ್ಗಾನುಮ್ ಈತೊಪ್ಪ ತೋರ್ಮಾಯುಮುಂಡೇ? ನರನಾರಣನಾಯ್- ಉಲಗತ್ತು ಅರನೂಲ್ । ಚಿಙ್ಗಾವ್ವೈ ವಿರಿತ್ತವನ್ ಎಂಪೆರುಮಾನ್ ಅದು ವನ್ರಿಯುಮ್ ಚೆನ್‌ಶುಡರುಮ್ ನಿಲನುಮ್ । ಪೊಙ್ಗಾರ ಕಡಲುಮ್ ಪೊರುಪ್ಪುಮ್ ನೆರುಪ್ಪುಮ್ ನೆರುಕ್ಕಿಪ್ಪುಗಪ್ಪೊನ್ ಮಿಡರು ಅತ್ತ ನೈಪೋದು । ಅಙ್ಗಾನ್ದವನ ಕಾಣ್ಮಿನ್ ಇನ್ರು ಆಯ್‌ಚ್ಚಿರಾಲ್ ಅಳೈವೆಣ್ಣೈ ಯುಣ್ಡು ಆಪ್ಪುಣ್ಡಿರುನ್ದವನೇ ॥ (ಪೆರಿ. ತಿರುಮೊಳಿ ೧೦-೬-೧)

ಇದರ ಅರ್ಥವು—ಎಙ್ಗಾನುಮ್ – ಎಲ್ಲಿಯಾದರೂ, **ಈನಪ್ಪದೋರ್** - ಇದನ್ನು ಹೋಲುವ, **ಮಾಯಮುಂಡೇ**–ಆಶ್ಚರ್ಯ ಉಂಟೋ, **ನರನಾರಣನಾಯ್** ನರನಾರಾಯಣಾವತಾರಿಯಾಗಿ, **ಉಲಗತ್ತು** - ಲೋಕಕ್ಕೆಲ್ಲಾ, **ಅರನೂಲ್** - ವೇದಶಾಸ್ತ್ರೋಪದೇಶವನ್ನು, **ಶಿಂಗಾವ್ವೈ** - ಸ್ವಲ್ಪವೂ ಹ್ರಸ್ವತೆ, ನ್ಯೂನತೆ ಇಲ್ಲದೆ, **ವಿರಿತ್ತವನ್**-ಹೀಗೆ ಲೋಕಗುರುವಾಗಿ ವಿಸ್ತರಿಸಿ ಉಪದೇಶಿಸಿದವನು,**ಎಂಬೆರುಮಾನ್** ಅಂತಹ ನಮ್ಮ ಸ್ವಾಮಿಯು, ಅದು ವನ್ರಿಯುಮ್ - ಅಷ್ಟುಮಾತ್ರವೇ ಅಲ್ಲದೆ, **ಚೆನ್‌ಶುಡರಮ್** . ಸೂರ್ಯನೂ, **ನಿಲನಮ್** - ಭೂಮಿಯೂ, **ಪೊಂಗಾರ ಕಡಲುಮ್** - ಉಕ್ಕಿ ಏಳುವ ಸಮುದ್ರವೂ, **ಪೊರಪ್ಪುಮ್** - ಪರ್ವತವೂ, **ನೆರ ಪ್ಪುಮ್** - ಅಗ್ನಿಯೂ, **ನೆರುಕ್ಕಿಪುಗ** - ಒಟ್ಟಿಗೆ ಪ್ರವೇಶಿಸುವ ಹಾಗೆ, ನುಂಗುವ ಹಾಗೆ, **ಪೊನ್ಮಿಡರ್** - ಸುವರ್ಣ ಕುತ್ತಿಗೆಯನ್ನು, **ಅಂಗಾನ್ದವರ್**-ತೆರದುಕೊಂಡ ಇದ್ದವನನ್ನು, **ಕಾಣ್ಮಿನ್** – ಇಂತಹ ಜಗತ್ತಿನ ಪ್ರಳಯ ಸೃಷ್ಟಿಗೂ ಕಕರಣಭೂತನಾದ

**ಇವ್ಮನ್ತ್ರತ್ತುಕ್ಕು ದ್ರಷ್ಟಾವುಮಾಯ್ ದೇವತೈಯುಮಾನವ ಪಕ್ಕ**

---

ವನು, ಇನ್ರು – ಈಗ ಶ್ರೀ ಕೃಷ್ಣಾವತಾರಿಯಾಗಿ, ನರನಾರಾಯಣಾವತಾರಿಯಾಗಿ **ಆಯ್ಚ್ಚಿಯರಾಲ್** - ಗೋಪಸ್ತ್ರೀಯರಿಂದ, **ಅಳೈವೆಣ್ಣೆಯುಂಡು**-ತೆಗೆದು ಬೆಣ್ಣೆ ಯುಂಡು, **ಆಪ್ಪುಂಡಿರಿನ್ದವನೇ** - ಬಂಧನಕ್ಕೆ ಸಿಕ್ಕಿರುವನಾಗಿದ್ದಾನೆಯೇ, ಏನು ಆಶ್ಚರ್ಯವೆನ್ನುತ್ತಾರೆ. ಲೋಕಗುರುವಾಗಿ ಧರ್ಮೋಪದೇಶಕನು, ಲೋಕದ ಸೃಷ್ಟಿ ಸ್ಥಿತಿ ಪ್ರಳಯಗಳಿಗೆ ಕಾರಣಭೂತನು, ಇಂತವನು ಈಗ ಶ್ರೀಕೃಷ್ಣನೆನಿಸಿ, ಗೋಪಿಕಾ ಸ್ತ್ರೀಯರ ಮನೆಯಲ್ಲಿ ಬೆಣ್ಣೆಯನ್ನು ಕಳವು ಮಾಡಿ ಪರಿಗ್ರಹಿಸಿ ಬಂಧನಕ್ಕೆ ಒಳ ಗಾಗಿರುವ, ಇಂತಹ ಸೌಶೀಲ್ಯವನ್ನು ಪ್ರದರ್ಶಿಸುವ ದಿವ್ಯ ಚೇಷ್ಟಿತವು ಅತ್ಯಾಶ್ಚರ್ಯ ವಾದುದೆಂದು ಹೇಳುತ್ತಾರೆ. **"ಕಣ್ಣಿನುಣ್ ಶಿರುತ್ತಾಮ್ಬಿನಾಲ್ ಕಟ್ಟುಣ್ಣಪ್ಪ ಣ್ಣಿಯಪೆರುಮಾಯನ್"** ಎಂಬ, ಮತ್ತು **"ಕೃತಾಗಸಂ ತಂ ಪ್ರರುದನ್ತಮಕ್ಷಿಣೀ ಕಷನ್ತಮಂಜನ್ಮಷಿಣೀಸ್ವಪಾಣಿನಾ । ಉದ್ವೀಕ್ಷಮಾಣಂ ಭಯವಿಹ್ವಲೇಕ್ಷಣಂ ಹಸ್ತೇಗೃಹಿತ್ವಾಭಿಷಯನ್ತ್ಯ ವಾಗುರತ್"** ಎಂಬ (ಭಾಗ. ೧೦-೯.೧೨) ಶ್ಲೋಕವೂ ಅನುಸಂಧೇಯವು. ಹಾಗೆಯೇ ರಾಮಾಯಣದಲ್ಲೂ, **"ಲೋಕ ನಾಥಃ ಪುರೋಭೂತ್ವಾ ಸುಗ್ರೀವಂ ನಾಥಮಿಚ್ಛತಿ" "ಯಸ್ಯಪ್ರಸಾದೇ ಸತತಂ ಪ್ರಸೀದೇಯುರಿಮಾಃಪ್ರಜಾಃ । ಸರಾಮೋವಾನರೇಂದ್ರಸ್ಯ ಪ್ರಸಾದ ಮಭಿಕಾಂಕ್ಷತೇ"** ಲೀಲಾವಿಭೂತಿಯಲ್ಲಿ ಲೀಲಾಲೋಲನಿಗೆ, ಸೌಶೀಲ್ಯಾದಿಯುಕ್ತ ವಾದ ಇಂತಹ ಪರಮಾಶ್ಚರ್ಯ ಪ್ರವೃತ್ತಿಗಳುಂಟೆಂಬ ಭಾವವು.

ಹೀಗೆ ಈ ಮೂಲಮನ್ತ್ರಕ್ಕೆ ಅಪರಿಚ್ಛಿನ್ನ ಪ್ರಭಾವ ಉಂಟೆಂದು ಇಷ್ಟುದೂರ ಉಪಪಾದಿಸಿ ಹೇಳಿದರು. ಆಗಲಿ ಇಂತಹ ಇಷ್ಟು ಧರ್ಮವೂ ಎಲ್ಲಾದರೂ ಒಂದು ಮನ್ತ್ರಕ್ಕೆ ಉಂಟೋ ಎಂಬ ಸಂದೇಹಕ್ಕೆ ಅವಕಾಶವಿಲ್ಲವು. ಜಗತ್ತಿನಲ್ಲಿರುವ ಪ್ರತಿ ಯೊಂದರ ಧರ್ಮಕ್ಕೂ ವ್ಯವಸ್ಥಾಪಕನು ಯಾರು? ಎಂದು ಕೇಳಿದರೆ, ಭಗವತ್ಸಂಕಲ್ಪ ವೆಂದು ನಿಸ್ಸಂದೇಹವಾಗಿ ಹೇಳುವಿರಿ. ಹಾಗೆಯೇ ಈ ಮನ್ತ್ರಕ್ಕೂ ಇಷ್ಟು ಪ್ರಭಾವವೂ ಭಗವತ್ಸಂಕಲ್ಪವೇ ಎಂದು ಒಪ್ಪಿಕೊಳ್ಳಲು ಏನೊಂದು ವಿರೋಧವೂ ಇಲ್ಲವು. ಆದುದರಿಂದ ಪ್ರಪನ್ನರಾಗಬೇಕೆಂಬ ಅಪೇಕ್ಷೆಯುಳ್ಳವರಿಗೆ ಈ ಮನ್ತ್ರದ ಅನು ಸಂಧಾನವು, ದ್ವಯಮನ್ತ್ರದ ಮೂಲಕ ಭರನ್ಯಾಸಾನುಷ್ಠಾನವನ್ನುಂಟುಮಾಡಿ ಮೋಕ್ಷದಾಯಕವಾಗುವದರಲ್ಲಿ ನಿಸ್ಸಂದೇಹವು; ಮತ್ತು ಪ್ರಪನ್ನರಿಗೂ ಕೂಡ ಅದರ ಅರ್ಥಾನುಸಂಧಾನದ ಮೂಲಕ ಭಗವದನುಭವವನ್ನುಂಟುಮಾಡಿ ಹರ್ಷಾತಿ ರೇಕವನ್ನುಂಟುಮಾಡುವದರಲ್ಲೂ ನಿಸ್ಸಂದೇಹವು; ಇದು ಸಂಪ್ರದಾಯಸಿದ್ಧವೆಂದು ಸ್ಥಾಪಿಸುತ್ತಾರೆ.––**ಇವ್ಮನ್ತ್ರತ್ತುಕ್ಕು**-ಮನ್ತ್ರಶಬ್ದಾರ್ಥವಾದ **ಮನ್ತಾರಂತ್ರಾಯತಿ** ಎಂಬಲ್ಲಿ ತೋರುವ ಹಾಗೆ ಈ ಅಷ್ಟಾಕ್ಷರ ಮನ್ತ್ರಕ್ಕೆ, **ದ್ರಷ್ಟಾವುಮಾಯ್**-ಶ್ರೀ ಮನ್ನಾರಾಯಣನೇ ಋಷಿಯೂಯಾಗಿ, **ದೇವತೈಯುಮಾನವ ಪಕ್ಕಲಿಲೇ**-

ಅಲೇ ಇತ್ತೈ ಸಾರ್ಥಮಾಗಪ್ಪೆತ್ತ ತಿರುಮಙ್ಗೈಯಾಳ್ವಾರ್ (೨) "ಅನ್ತಣ ರ್ಮಾಟ್ಟನ್ತಿವೈತ್ತಮನ್ತಿರತ್ತೈ ಮನ್ತಿರತ್ತಾಲ್ ಮರವಾದೆನ್ರುಮ್ ವಾಳುತಿಯೇಲ್ವಾಳಲಾಮ್" ಎನ್ರು ಅರುಳಿಚ್ಚೆಯ್‌ದಾರ್.

---

ಶ್ರೀಮನ್ನಾರಾಯಣೋ ದೇವತಾ ಎಂದು ಹೇಳಿರುವದರಿಂದ, ಅಂತಹ ನಾರಾಯಣನ ಮೂಲಕವಾಗಿ ಇತ್ತೈ - ಈ ಮಹತ್ತಾದ ಮನ್ತ್ರವನ್ನು, ಸಾರ್ಥಮಾಗ- ಅದರಿಂದ ತೋರಿಬರುವ ಸರ್ವಾರ್ಥಗಳೊಂದಿಗೆ, ಪೆತ್ತ - ಸುಕೃತ ವಿಶೇಷದಿಂದ ಹೊಂದಿದ, ತಿರುಮಙ್ಗೈಯಾಳ್ವಾರವರು, "ಅನ್ದಣರ್" ಎಂದಾರಂಭಿಸಿದ ಪಾಶುರದಲ್ಲಿ, ಅರುಳಿಚ್ಚೆಯ್‌ದಾರ್ - ಕೃಪಯಾ ಹೇಳುತ್ತಾರೆ. ಈ ಪೂರಾ ಪಾಶುರವು ಯಾವುದೆಂದರೆ- "ಇನ್ದಿರರ್ಕ್ಕುಮ್ ಪಿರಮರ್ಕ್ಕುಮ್ ಮುದಳ್ ವನ್ದನೈ ಇರುನಿಲಂಕಾಲ್ ತೀನೀರ್ ವಿಣ್ಪೂದಮೈನ್ದಾಯ್ ಚೆನ್ದಿರತ್ತ ತಮಿಳೋಶೈ ವಡಚ್ಚೊಲ್ಲಾಗಿ ದಿಶೈನಾನ್ಗು ಮಾಯ್‌ತಿಙ್ಗಳ್‌ಞಾಯಿರಾಗಿ ಅನ್ದರತ್ತಿಲ್ ದೇವರ್ಕ್ಕುಮ್ ಅರಿಯಲಾಕಾ ಅನ್ದಣನೈ ಅನ್ದಣರ್ ಮಾಟ್ಟಅಂದಿವೈತ್ತ ಮನ್ದಿರತ್ತೈ ಮನ್ತಿರತ್ತಾಲ್ ಮರವಾದೆನ್ರುಮ್ ವಾಳುತಿಯೇಲ್ ವಾಳಲಾಮ್ ಮಡನೆಂಜಮೇ" ಎಂಬದಾಗಿ. ತನಗೆ ಒಳ್ಳೇದನ್ನುಂಟುಮಾಡುವ ಸಹಾಯಕರು ಹೊರಗಿನವರು ಯಾರೂ ಆಗಲಾರರಾದುದರಿಂದ, ತನ್ನೊಡನೆ ಸೇರಿ ತನ್ನೊಡನೆಯೇ ಎಲ್ಲಾ ಪ್ರವೃತ್ತಿಗಳಿಗೂ ಸಹಾಯವನ್ನುಂಟುಮಾಡುತ್ತಾ ತನಗೆ ಅಧೀನವಾಗಿರುವ ಮನಸ್ಸನ್ನು ಸಂಬೋಧಿಸಿ ಹೇಳುತ್ತಾರೆ, ಓ ಮಡನೆಂಜೇ - ನನಗೆ ಅಧೀನವಾಗಿ ಪರಮಸುಹೃತ್ತಾಗಿರುವ ಮನಸ್ಸೇ, ನಿನ್ನ ಮೂಲಕವಾಗಿ ಮೂಲಮನ್ತ್ರದ ಮಹಿಮೆಯನ್ನು ಅನುಸಂಧಾನಮಾಡಿದುದಾದರೆ, ವಾಳಲಾಮ್ - ದಿವ್ಯ ವೈಕುಂಠವನ್ನು ಸೇರಿ ನಿತ್ಯಸೂರಿಗಳ ಮಧ್ಯೆ ಇದ್ದು ಪರಿಪೂರ್ಣಬ್ರಹ್ಮಾನುಭವದೊಂದಿಗೆ ಪರಮಪುರುಷನಿಗೆ ಕೈಂಕರ್ಯವನ್ನೆಸಗುವ ಸುಕೃತವನ್ನು ಹೊಂದಬಹುದೆನ್ನುತ್ತಾರೆ.—ಇಂದಿರರುಕ್ಕುಮ್ - ಮಹೇಂದ್ರನೆಂದು ದೊಡ್ಡ ಹೆಸರನ್ನು ಧರಿಸಿರುವವರಿಗೂ, (ಎಷ್ಟು ದೊಡ್ಡ ಹೆಸರಿನವರಾದರೂ ನಮ್ಮ ಹಾಗೆಯೇ ಜೀವಕೋಟಿಗೆ ಸೇರಿದವರೇ ಎಂಬ ಭಾವದಿಂದ ಬಹುವಚನವು) ಪಿರಮರ್ಕ್ಕುಮ್ - ಚತುರ್ಮುಖನಿಗೂ, ಇಂದ್ರನನ್ನು ಹೇಳಿ ಅನಂತರ ಅವನಿಗೂ ಕಾರಣಭೂತನಾದ ಚತುರ್ಮುಖನನ್ನು ಹೇಳಿರುವದು, ಇವನೂ ಮತ್ತು ಆತನ ಮಗ ರುದ್ರನೂ ಎಲ್ಲರೂ ನಮ್ಮ ಹಾಗೆಯೇಜೀವಕೋಟಿಗೇ ಸೇರಿದವರೆಂಬ ಸಮಭಾವದಿಂದ ಎಂದು ಭಾವಿಸತಕ್ಕದ್ದು, ಮುದಲ್‌ವಂದ – ಕಾರಣಭೂತನಾಗಿರುವ ಮತ್ತು ತನ್ನೈ - ಆ ವ್ಯಷ್ಟಿಸೃಷ್ಟಿಗೆ ಅಧಿಪತಿಯನ್ನೂ ಹಾಗೆಯೇ ಸಮಷ್ಟಿಸೃಷ್ಟಿಗೆ ಸೇರಿದ, ಇರುನಿಲಂ - ದೊಡ್ಡದಾದ ವಿಸ್ತಾರವಾದ ಭೂಮಿ, ಕಾಲ್ - ವಾಯುವನ್ನೂ ತೀ -

---

(೨) ತಿರುನೆಡು ೪.

ಅಗ್ನಿ, ನೀರ್ - ಅಪ್ಪು, ವಿಣ್ - ಆಕಾಶ, ಹೀಗೆ ಭೂತಙ್ಗಳ್ಐನ್ದಾಯ್ - ಪಂಚಭೂತಗಳಿಗೂ ಅಂತರಾತ್ಮಾವಾಗಿಯೂ, ಶೆನ್‌ತಿರುತ್ತ–ಉಪಬೃಹ್ಮಣಾಪೇಕ್ಷೆ ಇಲ್ಲದಹಾಗೆ ಸ್ವಯಂ ಪ್ರಭಾವ ಹೊಂದಿರುವ. ತಮಿಳೋಶೈ - ದ್ರಾವಿಡ ಪ್ರಬಂಧದ ಇಂಪಾದ ಗಾನವಾಗಿ, ವಡಶೊಲ್ಲಾಗಿ-ಉತ್ತರ ದಿಕ್ಕಿನಲ್ಲಿ ಪ್ರಾಚುರ್ಯ ವಿರುವ ಸಂಸ್ಕೃತದಲ್ಲಿರುವ ವೇದವಾಗಿ, ದಿಶೈನಾನ್ಗುಮಾಯ್ - ನಾಲ್ಕು ದಿಕ್ಕು ಗಳಲ್ಲಿರುವ ಸರ್ವ ಚಿದಚಿತ್ತುಕ್ಕೂ ಅಂತರಾತ್ಮಾವಾಗಿ, ತಿಂಗಳ್ ನಾಯಿರಾಗಿ - ಚಂದ್ರಸೂರ್ಯರುಗಳಿಗೂ ಅಂತರಾತ್ಮಾವಾಗಿ, ಅನ್ತರತ್ತಿಲ್ - ಹೀಗೆ ನಾರಶಬ್ದ ದಿಂದಬೋಧಿತವಾದ ಎಲ್ಲಕ್ಕೂ ಅನ್ತರಾತ್ಮಾವಾಗಿರುವ ಸಂದರ್ಭದಲ್ಲಿ, ದೇವ ರ್ಕುಮ್ - ದೇವಾದಿ ಸಕಲ ಚೇತನರುಗಳಿಗೂ, ಅರಿಯಲಾಗ- "ಯಮಾತ್ಮಾ ನವೇದ" ಎಂದು ತಿಳಿಯಲು ಸಾಧ್ಯವಿಲ್ಲದೆ, ಅನ್ದಣನ್ೈ-ಹೇಯಗುಣರಹಿತನಾಗಿ ಮಹಾ ಪರಿಶುದ್ಧ ಸ್ವಭಾವನಾದ, ಅನ್ದಣರ್‌ಮಾಟ್ಟು- "ಬ್ರಾಹ್ಮಣಾನಾಂ ಧನಂ ವೇದಃ" ಎಂದು ಹೇಳಿರುವ ಹಾಗೆ ಬ್ರಾಹ್ಮಣರಿಗೆ ಧನರೂಪವಾದ ವೇದದ, ಅಂತಿವೈತ್ತ-ಕೊನೆಯಲ್ಲಿ ಪ್ರಕಾಶಿಸುವ, ಎಂದರೆ ವೇದಶಿರಸ್ಸಿನಲ್ಲಿ ಉಪನಿಷತ್ತಿನಲ್ಲಿ ಪ್ರಕಾಶಿಸುವ, ಮಂದಿರತ್ತೈ - ಸರ್ವಸ್ಮಾತ್ಪರನಾದ ಸರ್ವೇಶ್ವರನನ್ನು, ಮನ್ತಿರ ತ್ತಾಲ್ - ಅಷ್ಟಾಕ್ಷರ ಮಂತ್ರದಿಂದ, ಮರವಾದೆ-ಮರೆಯದೆ. ತಪ್ಪದೆ, ಎನ್ರುಮ್- ನಿರಂತರವಾಗಿ ಈ ಆತ್ಮಾವಿರುವವರೆಗೂ, ವಾಳುದಿಯೇಲ್ - ಅನುಭವಿಸಿದರೆ, ಓ ನನಗಧೀನವಾಗಿರುವ ಮನಸ್ಸೇ, ವಾಳಲಾಮ್-ನಿತ್ಯ ಸೂರಿಗಳ ಮಧ್ಯೆ ಇರುವ ಅನುಭವವನ್ನು ನಾವು ಹೊಂದಿ ಉಜ್ಜೀವಿಸಬಹುದು.

ಈ ಪಾಶುರದಲ್ಲಿ ಮನ್ತಿರತ್ತೈ ವಾಳುದಿಯೇಲ್ ವಾಳಲಾಮ್ ಮಡ ನೆಂಜೇ ಎಂದು ತಮ್ಮ ಮನಸ್ಸನ್ನು ಕುರಿತು ಹೇಳಿದುದರಿಂದ, ಭಾಗವತದಲ್ಲಿ ೧೧ ನೆಯ ಸ್ಕಂಧದ ಭಿಕ್ಷುಗೀತೆಯಲ್ಲಿ ಉಪಪಾದಿತವಾದತತ್ವವು ಇಲ್ಲಿಯೂಉಪಪಾದಿತವು. ಇಲ್ಲಿ ಭಿಕ್ಷುವು ಹೇಳಿರುವದೇನೆಂದರೆ—"ನಾಯಂ ಜನೋ ಮೇ ಸುಖ ದುಃಖ ಹೇತು ರ್ನ ದೇವತಾತ್ಮಾಗ್ರಹಕರ್ಮಕಾಲಾಃ। ಮನಃ ಪರಂಕಾರಣ ಮಾಮನನ್ತಿ ಸಂಸಾರ ಚಕ್ರಂ ಪರಿವರ್ತಯೇದ್ಯತ್"ಇತರ ಜನವಾಗಲಿ,ಪರಮ ಪುರುಷನಾಗಲಿ, ತನ್ನ ಆತ್ಮಾವಾಗಲಿ ತಾನು ಮಾಡುವ ಕರ್ಮವಾಗಲಿ,ಕಾಲವಾಗಲಿ ಸುಖದುಃಖಗಳಿಗೆ ಹೇತುವಲ್ಲವೆಂದು ಉಪಪಾದಿಸಿ, ತನಗೆ ಪ್ರಾಪ್ತವಾಗಿರುವ ಮನಸ್ಸೇ ಮುಖ್ಯ ಕಾರಣವೆಂದೂ, ಅದೇ ಸಂಸಾರ ಚಕ್ರದಲ್ಲಿ ಸುತ್ತಿಸುವಂತಹದ್ದೆಂದೂ ಉಪಪಾದಿಸ ಲ್ಪಟ್ಟಿರುತ್ತದೆ. ಆದುದರಿಂದ ಈ ಸಂಸಾರ ಚಕ್ರದಲ್ಲಿ ಸುತ್ತಿಸದೆ ಈ ಮೂಲ ಮನ್ತ್ರ ಬೋಧೆಯನ್ನು ಚನ್ನಾಗಿ ಅನುಭವಿಸಿ ನಿರಂತರ ಜಪಿಸಿದರೆ, ಮೋಕ್ಷವನ್ನು ಹೊಂದಬಹುದು ಎಂಬ ತಾತ್ಪರ್ಯದಿಂದ ಮಡನೆಂಜೇ ಎಂಬ ಪ್ರಯೋಗವು.

ಈ ಮನ್ತ್ರವು ನಿರತಿಶಯ ಪ್ರಭಾವ ಉಳ್ಳದಾದುದರಿಂದ ಚತುರ್ವಿಧ ಸಕಲ ಪುರುಷಾರ್ಥಗಳನ್ನೂ ಸಾಧಿಸಿಕೊಡುವ ಶಕ್ತಿಯುಳ್ಳದೆಂದು " ಎಟ್ಟುಮಾಮೂರ್ತ್ತಿ

**ಎಟ್ಟುವಮೂಮೂರ್ತಿಯೆಣ್ ಕಣ್ಣನೆಣ್ತಿಕೆಟ್ಟೈರೈ ಯೆಣ್ ಪಿರಕಿರುತಿ**
**ಎಟ್ಟುವಮೂವರೈಗಳೀನ್ರ ವೆಣ್‌ಗುಣತ್ತೋನೆಟ್ಟೆಣುವೆಣ್ಣುಣಮತಿಯೋರ್ಕ್ಕು।**
**ಎಟ್ಟವಮೂಮಲರೇಣ್ ಚಿತ್ತಿಯೆಣ್ಸತ್ತಿ ಎಟ್ಟಯೋಗಾಜ್ಞನೆಣ್ ಚೆಲ್ವಮ್।**
**ಎಟ್ಟುವಮೂಗುಣ ಮೆಟ್ಟಿಟ್ಟೆಣುಜ್ಕಲೈ ಎಟ್ಟರದ ಮೇಲನವು ಮೆಟ್ಟುನವೇ ||೪೫||**

---

ಎಂಬ ಪಾಶುರದಿಂದ ಕೊಂಡಾಡುತ್ತಾರೆ.—ಆದರೆ ಆ ಪಾಶುರದಲ್ಲಿ ವಿಶೇಷಾರ್ಥಗಳನ್ನು ಗರ್ಭೀಕರಿಸಿರುವದರಿಂದ ಇತರರು ಆ ಅರ್ಥಗಳನ್ನೆಲ್ಲಾ ವ್ಯಕ್ತಪಡಿಸಲಾರರೆಂದು ಭಾವಿಸಿ, ತಾವೇ ಆದಕ್ಕೆ ವ್ಯಾಖ್ಯಾನವನ್ನು ದಯಪಾಲಿಸುತ್ತಾರೆ. ಶ್ರೀ ಯತಿವರ್ಯರೂ ಶ್ರೀ ನಿಗಮಾಂತ ದೇಶಿಕರವರೂ ಸಹ ಎಲ್ಲಿ ಇತರರು ಸರಿಯಾದ ಅಭಿಪ್ರಾಯಗಳನ್ನು ತಿಳಿಯಲಾರರೆಂದು ತಮಗೆ ತೋರಿತೋ, ಆ ಸ್ಥಳಗಳಲ್ಲಿ ಅವುಗಳಿಗೆ ಭಾಷ್ಯಗಳನ್ನು ತಾವೇ ಪರಮ ಕೃಪಯಾ ದಯಪಾಲಿಸುತ್ತಾರೆ. **ಎಟ್ಟುಮೂರ್ತಿ** - ಪೃಥಿವ್ಯಾದಿ ಪಂಚಭೂತ ಮೂರ್ತಿಯಾಗಿಯೂ ಚಂದ್ರ ಸೂರ್ಯ ಮೂರ್ತಿಯಾಗಿಯೂ, ತಾನೂ ಸೇರಿ, ಹೀಗೆ ಎಂಟು ಮೂರ್ತಿಯಾಗಿರತಕ್ಕದೆಂದು ವರವನ್ನು ಹೊಂದಿದ ರುದ್ರನು, **ಎಣ್‌ಕಣ್**-ನಾಲ್ಕು ಮುಖವುಳ್ಳವನಾದುದರಿಂದ ಎಂಟು ಕಣ್ಣುಗಳುಳ್ಳ ಚತುರ್ಮುಖ ಬ್ರಹ್ಮನು, **ಎಣ್‌ದಿಕ್ಕು** – ಅಷ್ಟದಿಕ್ಕುಗಳ, **ಎಟ್ಟೆರೈ** - ಎಂಟು ದಿಕ್ಕುಗಳ ಸ್ವಾಮಿಗಳು ಎಂದರೆ ಇಂದ್ರಾದಿ ಅಷ್ಟ ದಿಕ್ಪಾಲಕರು **ಎಣ್‌ಪಿರಕಿರುತಿ** - ಅವ್ಯಕ್ತ ಮಹದಹಂಕಾರಗಳು ಪಂಚತನ್ಮಾತ್ರೆಗಳೂ ಸೇರಿ, ಎಂಟು ಪ್ರಕೃತಿಗಳು, **ಎಟ್ಟುಮೂವರೈಗಳು** - ಎಂಟು ಮಹಾ ಪರ್ವತಗಳು, ಇವು **"ಹಿಮವಾನ್ ನಿಷಧೋ ವಿಂಧ್ಯೋ ಮಾಲ್ಯವಾನ್ ಪಾರಿಯಾತ್ರಕಃ| ಮಂದರೋ ಮಲಯಶ್ಚೈವ ಮೇರುಣಾಷ್ಟೌ ಪ್ರಕೀರ್ತಿತಾಃ"** ಎಂಬ ಶ್ಲೋಕದಲ್ಲಿ ಹೇಳಿರುವುವು. **ಈನ್ರ** - ಇವುಗಳೆಲ್ಲವನ್ನೂ ಸೃಷ್ಟಿಸಿದ, **ಎಣ್ ಗುಣತ್ತೋನ್— "ಅಪಹತ ಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಪಿಪಾಸಸ್ಸತ್ಯಕಾಮ ಸ್ಸತ್ಯಸಙ್ಕಲ್ಪಃ"** (ಛಾಂ.೮-೧೫.) ಎಂಬ ಗುಣಾಷ್ಟಕಗಳನ್ನುಳ್ಳವನು ಸ್ವಾಮಿಯು ಇಂತಹ ಪರಮಾತ್ಮನು ಎಂಬರ್ಥವು. **ಎಟ್ಟು** - ಅಷ್ಟಾಕ್ಷರ ಮಂತ್ರವನ್ನು, **ಎಣ್ಣುಮ್** - ಅನುಸಂಧಾನಮಾಡುವ, **ಎನ್‌ಗುಣಮತಿಯೋರ್ಕ್ಕು** . ಬುದ್ಧಿಯ ಎಂಟು ಗುಣಗಳನ್ನು ಹೊಂದಿದವರಿಗೆ, ಬುದ್ಧಿಯ ಎಂಟು ಗುಣಗಳು ಯಾವುವೆಂದರೆ—**"ಗ್ರಹಣಂ ಧಾರಣಂ ಚೈವ ಸ್ಮರಣಂ ಪ್ರತಿಪಾದನಮ್। ಊಹಾಪೋಹಾರ್ಥ ವಿಜ್ಞಾನಂ ತತ್ವಜ್ಞಾನಂಚ ಧೀಗುಣಾಃ"** ಎಂದು ಹೇಳಿರುವ ಒಳ್ಳೆ ಬುದ್ಧಿಯ ಗುಣಗಳು, ಇವುಗಳನ್ನು ಹೊಂದಿದವರಿಗೆ, **ಎಟ್ಟುಮೂಮಲರ್** - ಭಗವಂತನ ಅರ್ಚನೆಗೆ ಯೋಗ್ಯವಾದ ಪುಷ್ಪಗಳೊಂದಿಗೆ ಅಧಿಕಾರಿಯಲ್ಲಿರಬೇಕಾದ ಮಹತ್ತಾದ ಎಂಟು ಪುಷ್ಪಗಳು ಯಾವುವೆಂದರೆ—**ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ"** ಎಂದಾರಂಭಿಸಿ ಮುಂದೆ

ಸ್ವಾಮಿ ವ್ಯಾಖ್ಯಾನದಲ್ಲಿ ತಿಳಿಸಲ್ಪಡುವುವು, **ಎಣ್ ಶಿತ್ತಿ** – ಅಷ್ಟ ಸಿದ್ಧಿಗಳು, ಇವೂ ಮುಂದೆ ಹೇಳಲ್ಪಡುವುವು. **ಎಣ್ಪತ್ತಿ** - ಅಷ್ಟವಿಧ ಭಕ್ತಿಗಳು, ಇವು ಮುಂದೆ "ಮದ್ಭಕ್ತ ಜನವಾತ್ಸಲ್ಯಂ" ಎಂಬ ಶ್ಲೋಕದಿಂದ ಹೇಳಲ್ಪಡುವುವು. **ಎಟ್ಟಿ ಯೋಗಾಙ್ಗಮ್** - ಎಂಟು ಅಂಗಾಂಗಿಗಳುಳ್ಳ ಉಪಾಸನವು, ಇವು ಯಾವುವೆಂದರೆ "ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಸಮಾಧಿಗಳು, **ಎಣ್ ಶೆಲ್ವಮ್** – ಅಣಿಮಾದ್ಯಷ್ಟೈಶ್ವರ್ಯಗಳು, ಇವುಗಳೂ ವ್ಯಾಖ್ಯಾನದಲ್ಲಿ ಹೇಳಲ್ಪಡುವುವು. **ಎಟ್ಟುಮಾಗುಣಮ್** – ಮುಕ್ತನಲ್ಲಿ ಆವಿರ್ಭವಿಸುವ ಎಂಟು ಗುಣಗಳು, ಅಥವಾ "**ಅಷ್ಟೌಗುಣಾಃ ಪುರುಷಂ ದೀಪಯನ್ತಿ ಪ್ರಜ್ಞಾಚ ಕೌಲ್ಯಂಚ ಶ್ರುತಂ ದಮಶ್ಚ । ಪರಾಕ್ರಮಶ್ಚಾ ಬಹು ಭಾಷತೀಚ ದಾನಂ ಯಥಾಶಕ್ತಿ ಕೃತಜ್ಞತಾಚ**" (ವಿದುರ ನೀತಿ, ೩೮-೩೨) ಎಂಬಲ್ಲಿ ಹೇಳಿರುವ ಎಂಟು ಗುಣಗಳು, **ಎಟ್ಟೆಟ್ಟೆಣ್ಣಕಲೈ** – ಎಂಟು ಎಂಟಲು ೬೪ **ಕಲೈ**-ವಿದ್ಯೆಗಳು. **ಎಟ್ಟಿರದ ಮೇಲದವುಮ್** - "**ಶೃಂಗಾರ ವೀರ ಕರುಣಾದ್ಭುತ ಹಾಸ್ಯ ಭಯಾನಕಾಃ । ಭೀಭತ್ಸ ರೌದ್ರೇ ಚರಸಾಃ**" ಎಂದು ಹೇಳಿರುವ ಎಂಟು ರಸಗಳು, ಇವುಗಳಿಗೆ **ಮೇಲದವುಮ್** - ಮೇಲಾದುದು ಶಾನ್ತಿರಸವು, ಇವು ಎಲ್ಲವೂ ಎಟ್ಟಿನವೇ, ಪ್ರಾಪ್ತವಾಗುವಷ್ಟೇ, ಇದರಿಂದ ಪ್ರಾಪ್ತವಾಗದಿರುವುವು ಯಾವುವೂ ಇಲ್ಲವೆಂಬ ಭಾವವು. ಈ ಮೂಲಮನ್ತ್ರವನ್ನು ಅನುಸಂಧಾನ ಮಾಡುವ ಮತಿಗಳಿಗೆ ಲಭಿಸದೇ ಇರುವ ಪುರುಷಾರ್ಥಗಳು ಯಾವುವೂ ಇಲ್ಲವು. ಎಲ್ಲವೂ ಲಭಿಸುತ್ತವೆ ಎಂದು ಹೇಳಲು ಕೋರಿಟು, ಯಾವು ಯಾವುವು ಲಭಿಸುತ್ತವೆ ಎಂದರೆ ಸ್ವಾಮಿಗೆ ಭೋಗ್ಯವಾದ (೧) ಎಂಟು ಬುದ್ಧಿಯ ಗುಣಗಳೂ, (೨) ಅಹಿಂಸಾದಿ ೮ ಮಹಾಪುಷ್ಪಗಳ ರೂಪದಲ್ಲಿ ಎಂಟು ಮಹಾಗುಣಗಳೂ (೩) "**ಊಹಸ್ತರ್ಕೋಽಧ್ಯಯನಂ**" ಎಂಬಲ್ಲಿ ಹೇಳಿರುವವುಗಳ ಸಿದ್ಧಿಯೂ, (೪) "**ಮದ್ಭಕ್ತ ಜನವಾತ್ಸಲ್ಯಂ**" ಎಂದಾರಂಭಿಸಿ ಹೇಳಿರುವ ಎಂಟು ವಿಧ ಭಕ್ತಿಗಳೂ, (೫) ಯಮ ನಿಯಮಾದಿ ಅಷ್ಟೈಶ್ವರ್ಯಗಳೂ, (೬) ಅಣಿಮಾದಿ ಎಂಟು ವಿಭೂತಿಗಳೂ, (೭) ಮುಕ್ತದಶೆಯಲ್ಲುಂಟಾಗುವ ಅಪಹತ ಪಾಪ್ಮಾದಿ ಗುಣಾಷ್ಟಕಗಳೂ, ಅಥವಾ **ಅಷ್ಟೌಗುಣಾಃ ಪುರುಷಂ ದೀಪಯನ್ತಿ**" ಎಂಬಲ್ಲಿ ಹೇಳಿರುವ ಎಂಟು ಗುಣಗಳೂ, (೮) ೬೪ ವಿದ್ಯೆಗಳೂ, (೯) ಎಂಟು ರಸಗಳಿಗೂ ಮೇಲಾದ ಮೋಕ್ಷ ಪ್ರಾಪ್ತಿಗೆ ಹೇತುವಾದ ಶಾನ್ತಿರಸವೂ, ಹೀಗೆ ಇವೆಲ್ಲವೂ ಲಭಿಸುತ್ತವೆ ಎಂಬುದು ಪಾಶುರಾರ್ಥವು.

ಮುಂದಿನ ವಾಕ್ಯಗಳಿಂದ ತಾವೇ ಆ ಪಾಶುರಕ್ಕೆ ಭಾಷ್ಯವನ್ನು ದಯಪಾಲಿಸುತ್ತಾರೆ.—ಮೊದಲು ಮೂಲಮನ್ತ್ರವು ಎಂತಹದ್ದೆಂದು ಪೂರ್ವಾರ್ಧದಿಂದ ಕೊಂಡಾಡಿ ಇದರಿಂದ ಲಭಿಸುವ ಪುರುಷಾರ್ಥಗಳನ್ನೆಲ್ಲಾ ಉತ್ತರಾರ್ಧದಲ್ಲಿ ವಿಸ್ತರಿಸಿ ಹೇಳುತ್ತಾರೆ.—ಈ ಮೂಲಮನ್ತ್ರಾರ್ಥದ ಅನುಸಂಧಾನವು ಸ್ತ್ರೀ ಶೂದ್ರಾದಿ

**ಸರ್ವಕಾರಣ ಭೂತನುಮಾಯ್, ಅಖಿಲಹೇಯ ಪ್ರತ್ಯನೀಕ ಕಲ್ಯಾಣೈಕ ತಾನನುಮಾನ ಸರ್ವೇಶ್ವರನುಕ್ಕು ಪ್ರತಿಪಾದಕಮಾನ ತಿರುವಷ್ಟಾಕ್ಷರತ್ತೈ ಅನುಸಂಧಿಕ್ಕುಮ್ ಮಹಾಮತಿಗಳುಕ್ಕು ಆತ್ಮಗುಣಾದಿಗಳಿಲುಮ್, ಅಷ್ಟೈಶ್ವರ್ಯಾದಿಗಳಿಲುಮ್, ಯಥಾಮನೋರಥಮ್ ದುರ್ಲಭಮಾಯಿರುಪ್ಪದು ಒನ್ರುಮಿಲ್ಲೈ ಯೆನ್ಗಿರದು.**

---

ಗಳಿಗೂ ಕೂಡ ಅನುಕೂಲಿಸುವ ಹಾಗೆ ಒಂದು ದ್ರಾವಿಡ ಗಾಥೆಯಿಂದಲೇ ಅನುಗ್ರಹಿಸಿರುತ್ತಾರೆ.—ಪ್ರಥಮವಾಕ್ಯದಿಂದ ಪಾಶುರಾರ್ಥ ಸಂಗ್ರಹವನ್ನು ದಯಪಾಲಿಸುತ್ತಾರೆ.—**ಸರ್ವಕಾರಣಭೂತನುಮಾಯ್** - ಉಪಾದಾನ ನಿಮಿತ್ತ ಸರ್ವಕಾರಣಭೂತನಾಗಿರುವ (ಇದು ಪ್ರಣವದ ಅಕಾರದಿಂದ ತೋರುವ ಅರ್ಥವು) **ಅಖಿಲಹೇಯ ಪ್ರತ್ಯನೀಕ ಕಲ್ಯಾಣೈಕತಾನುಮಾನ** – ಸಮಸ್ತ ಹೇಯಗಂಧದ ಸ್ಪರ್ಶವೇ ಇಲ್ಲದೆ, ಸಮಸ್ತ ಕಲ್ಯಾಣ ಗುಣಗಳಿಗೆ ಈತನಲ್ಲದೆ ಬೇರೆ ಆಶ್ರಯವಿಲ್ಲದೇ ಇರುವ ಎಂದರೆ ಸಮಸ್ತ ಕಲ್ಯಾಣ ಗುಣಾಕರನಾಗಿರುವ, ಇದು ನಾರಾಯಣ ಶಬ್ದಾರ್ಥವು), ಇಂತಹ **ಸರ್ವೇಶ್ವರನುಕ್ಕು ಪ್ರತಿಪಾದಕಮಾನ** - ಸರ್ವೇಶ್ವರನನ್ನು ಪ್ರತಿಪಾದಿಸುವ, **ತಿರುವಷ್ಟಾಕ್ಷರತ್ತೈ** - ಶ್ರೀಮದಷ್ಟಾಕ್ಷರ ಮನ್ತ್ರವನ್ನು, **ಅನುಸಂಧಿಕ್ಕುಮ್ ಮಹಾಮತಿಗಳುಕ್ಕು** - ಅನುಸಂಧಾನ ಮಾಡುವ, ಮಹಾ ಪ್ರಾಜ್ಞರಿಗೆ, **ಆತ್ಮಗುಣಾದಿಗಳಿಲುಮ್** – ಜೀವಾತ್ಮನ ಗುಣ ಮೊದಲಾದವುಗಳಲ್ಲೂ, **ಅಷ್ಟೈಶ್ವರ್ಯಾದಿಗಳಲ್ಲೂ, ಯಥಾ ಮನೋರಥಮ್** - ಅನುಸಂಧಾನಮಾಡುವರ ಮನೋರಥಾನುಗುಣವಾಗಿ, **ದುರ್ಲಭಮಾಯಿರುಪ್ಪದು**– ಹೊಂದಲು ಸಾಧ್ಯವಿಲ್ಲದುದು, **ಒನ್ರುಮಿಲ್ಲೈ ಎಙ್ಗಿರದು** - ಯಾವುದೂ ಇಲ್ಲವೆಂಬುದು ಈ ಪಾಶುರ ತಾತ್ಪರ್ಯವು. ಸಮಸ್ತವೂ ಲಭ್ಯವೇ ಎಂಬ ಭಾವದಿಂದ ವ್ಯತಿರೇಕದಲ್ಲಿ ಅಪ್ಪಣೆ ಕೊಡಿಸಿರುತ್ತಾರೆ. ಇತರ ದೇವತೆಯ ವಿಷಯವಾದ ಮನ್ತ್ರಗಳಿಗೆ ಹೀಗೆ ಎಲ್ಲವನ್ನೂ ಸಾಧಿಸಿಕೊಡುವ ಶಕ್ತಿ ಇಲ್ಲವೆಂದು ಹೇಳುವದಕ್ಕಾಗಿಯೂ **ಸರ್ವಕಾರಣ ಭೂತನುಮಾಯ್** ಎಂದಾರಂಭಿಸಿ, **ಸರ್ವೇಶ್ವರನುಕ್ಕು ಪ್ರತಿಪಾದಕಮಾನ ತಿರುವಷ್ಟಾಕ್ಷರಮ್** ಎಂಬ ಪ್ರಯೋಗವು. ಈ ವಿಶೇಷಣಗಳು ಅನ್ಯ ದೇವತೆಗಳನ್ನು ವ್ಯಾವರ್ತಿಸಿ ಹೇಳುತ್ತವೆ. ಮೇಲೆ ಅಷ್ಟಾಕ್ಷರವನ್ನು ಅನುಸಂಧಾನಮಾಡುವವರು ಮಹಾಮತಿಗಳು ಎಂದು ಹೇಳಿರುವದರಿಂದ, ಮೋಕ್ಷಾರ್ಥಿಗಳೇ ಮಹಾ ಪ್ರಾಜ್ಞರಾಗಿರುವಾಗ **ಯಥಾಮನೋರಥಮ್** ದುರ್ಲಭವಾದುದು ಯಾವುದೂ ಇಲ್ಲವೆಂದು ಹೇಳರುವದು ವಿರೋಧಿಸುವದಿಲ್ಲವೋ? ಎಂದರೆ, ಅಂತ್ಯದಲ್ಲಿ ಪ್ರಾಪ್ತವಾಗುವ ಮೋಕ್ಷಾಖ್ಯ ಮನೋರಥಕ್ಕೆ ಏನೆಂದೂ ವಿರೋಧವಿಲ್ಲವು. ಆದಕ್ಕೆ ಮುಂದೆ ಪ್ರಾಪ್ತವಾಗಬೇಕೆಂದು ಅಪೇಕ್ಷಿಸುವದನ್ನೆಲ್ಲಾ **"ಯಥಾ ಮನೋರಥಮ್"** ಹೊಂದುವರೆಂಬುದು ತಾತ್ಪರ್ಯವು.

"ಎಟ್ಟುಮಾಮೂರ್ತ್ತಿ"–ಆಕಾಶಾದಿಭೂತಙ್ಗಳೈನ್ದುಮ್ ಚಂದ್ರಾದಿತ್ಯರ್ ಗಳುಮ್ ಯಜಮಾನನುಮ್ ತನಕ್ಕು ಮೂರ್ತಿಗಳಾಗ ವರಂಪೆತ್ತು ಅಷ್ಟ ಮೂರ್ತಿ ಎನ್ರು ಪೇರ್ ಪೆತ್ತ ರುದ್ರ್ನ; "ಎಣ್ ಕಣ್ಣ್ನ" – ಚತುರ್ಮುಖ ನಾಗೈಯಾಲೇ ಎಟ್ಟುಕಣ್ಣುಡೈಯ ಬ್ರಹ್ಮಾ; "ಎಣ್ದಿಕ್ಕು" – ಎಟ್ಟು ದಿಕ್ಕುಗಳ್, "ಎಟ್ಟರೈ" - ಇಂದ್ರಾದಿಗಳಾನ ಎಟ್ಟು ದಿಕ್ಪಾಲಕರ್; "ಎಣ್ ಪಿರುಕಿರುತಿ" - ಅವ್ಯಕ್ತ ಮಹದಹಂಕಾರಾದಿಗಳಾನ ಎಟ್ಟುತತ್ವಙ್ಗಳ್;

---

ಆದರೆ ಪಾಶುರದಲ್ಲಿ ಆತ್ಮಗುಣಗಳ ಪ್ರಾಪ್ತಿಯೂ ಅಲ್ಲದೆ ಕೆಲವು ನಶ್ವರವಾದವುಗಳ ಪ್ರಾಪ್ತಿಯೂ ಹೇಳಲ್ಪಟ್ಟಿರುವದು ಹೇಗೆ ಸಮಂಜಸವೆಂದರೆ, ಮೋಕ್ಷ ಪ್ರಾಪ್ತಿಯೇ ಲಭಿಸುವಾಗ ಅಲ್ಪಗಳಾದ ಇತರ ಪುರುಷಾರ್ಥಗಳು ಲಭಿಸಲಾರವೇ? ಎಂದರೆ ಅವೂ ಲಭಿಸುವುವು ಎಂದು "ತಸ್ಮಿನ್ ಪ್ರಸನ್ನೇ ಕಿ ಮಿಹಾಸ್ತ್ಯ ಲಭ್ಯಮ್" ಎಂಬುದರ ಉಪಪಾದನೆಯ ರೂಪದಲ್ಲಿ ಹೇಳಲ್ಪಟ್ಟಿತು. ಕುಚೇಲರು ಪ್ರಪನ್ನರಾಗಿ ಮೋಕ್ಷಪ್ರಾಪ್ತಿಯು ಸಿದ್ಧವಾಗಿದ್ದರೂ ಶ್ರೀ ಕೃಷ್ಣಭಗವಾನ್ ರವರು ಮಹದೈಶ್ವರ್ಯವನ್ನು ಹೇಗೆ ಅನುಗ್ರಹಿಸಿದರೋ ಹಾಗೆ ಲಭ್ಯವೆಂಬ ಭಾವವು.

"ಎಟ್ಟು ಮಾಮೂರ್ತಿ" ಎಂದರೆ ಆಕಾಶಾದಿ ಭೂತಙ್ಗಳೈನ್ದುಮ್ - ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶವೆಂಬ ಪಂಚಭೂತಗಳೂ, ಚಂದ್ರಾದಿತ್ಯರ್‌ಗಳ್ – ಚಂದ್ರಸೂರ್ಯರೂ, ಯಜಮಾನನುಮ್ – ದೇವತೆಗಳಿಗೆ ಯಜಮಾನನಾದ ಅಥವಾ ಹವಿಸ್ಸನ್ನು ಕೊಡುವ ಅಗ್ನಿಯು. ರುದ್ರನು, ಹೀಗೆ ತನಕ್ಕು ಮೂರ್ತಿಗಳಾಗ – ತನಗೆ ಮೂರ್ತಿಗಳಾಗಿರಬೇಕೆಂದು, ವರಂಪೆತ್ತು - ವರವನ್ನು ಹೊಂದಿ, ಅಷ್ಟಮೂರ್ತಿ ಎನ್ರು ಪೇರ್‌ಪೆತ್ತ ರುದ್ರ್ನ – ಅಷ್ಟ ಮೂರ್ತಿಯು ಎಂಬ ಹೆಸರನ್ನು ಹೊಂದಿದ ರುದ್ರನು, "ಎಣ್ಕಣ್ಣ್ನ" ಎಂದರೆ ಚತುರ್ಮುಖನಾಗೈಯಾಲೇ ಎಟ್ಟುಕಣ್ಣುಡೈಯ ಬ್ರಹ್ಮಾ-ನಾಲ್ಕು ಮುಖಗಳುಳ್ಳವನಾದುದರಿಂದ ಎಂಟು ಕಣ್ಣುಗಳುಳ್ಳ ಚತುರ್ಮುಖ ಬ್ರಹ್ಮನು "ಎಣ್ದಿಕ್ಕು" ಎಂದರೆ ಎಟ್ಟು ದಿಕ್ಕುಕ್ಕಳ್ - ಎಂಟು ದಿಕ್ಕುಗಳು, "ಎಟ್ಟರೈ" ಎಂದರೆ ಇಂದ್ರಾದಿಗಳಾನ ಎಟ್ಟು ದಿಕ್ಪಾಲಕರ್ - "ಇನ್ದ್ರೋವಹ್ನಿಃ ಪಿತೃಪತಿರ್ನೈರುತೋ ವರುಣೋ ಮರುತ್ । ಕುಬೇರ ಈಶಃ" ಎಂದು ಹೇಳಿರುವ ಎಂಟು ದಿಕ್ಪಾಲಕರು, "ಎಣ್ ಪಿರಕಿರುತಿ" ಎಂದರೆ ಅವ್ಯಕ್ತ ಮಹದಹಂಕಾರಾದಿಗಳಾನ ಎಟ್ಟು ತತ್ವಙ್ಗಳ್ - ಅವ್ಯಕ್ತ, ಮಹತ್ತತ್ವ, ಅಹಂಕಾರತತ್ವ, ಆದಿಪದದಿಂದ ಪಂಚತನ್ಮಾತ್ರೆಗಳಾದ ಎಂಟು ಪ್ರಕೃತಿಯ ವಿಕಾರಗಳು, ಇದು ಗೀತೆಯಲ್ಲಿ "ಭೂಮಿರಾಪೋ ನಲೋ ವಾಯುಃ ಖಂ ಮನೋಬುದ್ಧಿರೇವ ಚ ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿ ರಷ್ಟಧಾ" (ಗೀ. ೭–೪) ಎಂಬಲ್ಲಿ ಉಪಪಾದಿತವು.

" ಎಟ್ಟುಮಾವರ್ೈಗಳ್ " - ಎಟ್ಟುಕುಲಪರ್ವತಙ್ಗಳ್ ; " ಈನ್ರವೆಣ್ಗುಣ ತ್ತೋರ್ೀ" - ಇವ್ವೈ ಯೆಲ್ಲಾತ್ತೈಯುಮ್ ಸೃಷ್ಟಿತ್ತ ಗುಣಾಷ್ಟಕ ವಿಶಿಷ್ಟನಾನ ಪರಮಾತ್ಮಾ ; ಇವನುಕ್ಕು ಎಟ್ಟು ಗುಣಙ್ಗಳಿಙ್ಗಿರದು ಕರ್ಮವಶ್ಯತ್ವ ಜರಾ ಮರಣ ಶೋಕ ಕ್ಷುತ್ಪಿಪಾಸೈಗಳ್ ಅನ್ರಿಕ್ಕೆ ಯೊಳಿಗೈಯುಮ್, ನಿತ್ಯಙ್ಗಳಾನ ಭೋಗ್ಯಙ್ಗಳೈಯುಡೈಯವನಾಗೈಯುಮ್, ನಿನೈತ್ತದು ಮುಡಿಕ್ಕ ವಲ್ಲವನಾ

---

ಎಟ್ಟುಮಾವರ್ೈಗಳ್ ಎಂದರೆ ಎಟ್ಟು ಕುಲ ಪರ್ವತಙ್ಗಳ್ - ಎಂಟು ಕುಲಾಚಲಗಳು, ಅವು ಯಾವುವೆಂಬುದು ಹಿಂದೆ ಹೇಳಲ್ಪಟ್ಟವು. "ಈನ್ರ ವೆಣ್ ಗುಣತ್ತೋನ್" ಎಂದರೆ ಇವ್ವೈ ಎಲ್ಲಾತ್ತೈಯುಮ್ - ಸೃಷ್ಟಿತ್ತ ಗುಣಾಷ್ಟಕ ವಿಶಿಷ್ಟನಾನ ಪರಮಾತ್ಮಾ - ಮೇಲೆ ಹೇಳಿದ ಎಲ್ಲವನ್ನೂ ಸೃಷ್ಟಿಸಿದ ಎಂಟು ಗುಣ ಗಳಿಂದ ಕೂಡಿದ ಪರಮಾತ್ಮನು, ಇವನುಕ್ಕು ಎಟ್ಟು ಗುಣಙ್ಗಳಿಙ್ಗಿರದು - ಈ ಪರಮಾತ್ಮನಿಗೆ ಎಂಟು ಗುಣಗಳುಂಟೆಂದು ಹೇಳಿರುವದು, ಕರ್ಮವಶ್ಯತ್ವ, ಕರ್ಮಕ್ಕೆ ವಶವಾಗಿರೋಣವು, ಜರಾಮರಣ - ಮುಪ್ಪು ಮರಣವು, ಶೋಕಕ್ಷು ತ್ಪಿಪಾಸೈಗಳ್–ದುಃಖ ಹಸಿವು, ನೀರಡಿಕೆ, ಅನ್ರಿಕ್ಕೇ ಯೊಳಿಗೈಯುಮ್ - ಇವುಗಳಿಲ್ಲದಿರೋಣವು. ಇದು ಶ್ರುತಿಯಲ್ಲಿ "ಅಪಹತಪಾಪ್ಮಾವಿಜರೋ ವಿಮೃ ತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸ ಸ್ಸತ್ಯಕಾಮ ಸತ್ಯಸಙ್ಕಲ್ಪಃ" ಛಾಂ.(೮–೭.೧)ಎಂದು ಹೇಳಿರುವದರ ವ್ಯಾಖ್ಯಾನವು, ಅಪಹತ ಪಾಪ್ಮತ್ವ ವೆಂದರೆ ಅಕರ್ಮವಶ್ಯತೆ ಎಂದು ವ್ಯಾಖ್ಯಾನವು; ಮುಂದೆ ಸತ್ಯಕಾಮ ಸತ್ಯಸಙ್ಕಲ್ಪಗಳು ಹೇಳಲ್ಪಡುವುವು.—ನಿತ್ಯಙ್ಗಳಾನ ಭೋಗ್ಯಙ್ಗಳೈ ಯುಡೈವನಾಗೈಯುಮ್– ನಿತ್ಯಗಳಾಗಿ ಏನೊಂದೂ ಚ್ಯುತಿ ಇಲ್ಲದ ಭೋಗಗಳುಳ್ಳವನಾಗಿಯೂ "ಇದು ಸತ್ಯ ಕಾಮಃ" ಎಂದು ಶ್ರುತಿಯಲ್ಲಿರುವ ಅರ್ಥವು. ನಿನೈತ್ತದು ಮುಡಿಕ್ಕವಲ್ಲನಾಗೈ ಯುಮ್ - (ಇದು "ಸತ್ಯಸಙ್ಕಲ್ಪಃ" ಎಂದು ಶ್ರುತಿಯಲ್ಲಿರುವದರ ಅರ್ಥವು.) ಸಙ್ಕಲ್ಪಿಸಿದುದು ವ್ಯರ್ಥವಾಗದಹಾಗೆ ನಡೆಸಿಕೊಳ್ಳುವನಾಗಿಯೂ ಇರುವ ಇಂತಹ ಗುಣಗಳುಳ್ಳ ಪರಮಾತ್ಮನು ಎಂಬ ಭಾವವು. ದುರ್ಯೋಧನಾದಿ ದುಷ್ಟರನ್ನು ಸಂಧಿಗೆ ಅವಕಾಶ ಕೊಡದೆ ನಿಗ್ರಹಿಸಬೇಕೆಂಬ, ಮತ್ತು ವಿಭೀಷಣನಿಗೆ ತನ್ನನ್ನು ಮೋಕ್ಷಾರ್ಥವಾಗಿ ಆಶ್ರಯಿಸಿದನೇ ಎಂಬ ವಾತ್ಸಲ್ಯದಿಂದ ಲಂಕಾರಾಜ್ಯ ಪ್ರದಾನ ಮಾಡುತ್ತೇನೆಂಬ, ಇವೇ ಮೊದಲಾದ ಸಙ್ಕಲ್ಪಗಳನ್ನು ಪೂರ್ಣಮಾಡಿಕೊಂಡವನು, "ಎಟ್ಟೆಣ್ಣುಮ್ ಎಣ್ಗುಣಮತಿಯೋರ್ದು" ಎಂದರೆ ಇಪ್ಪಡಿಪ್ಪಟ್ಟ ಸರ್ವೇ ಶ್ವರನುಕ್ಕು ಪ್ರಧಾನಮನ್ತ್ರಮಾನ ತಿರುವಷ್ಟಾಕ್ಷರತ್ತೈ ಸಾರ್ಥಮಾಗಕ್ಕೇಟ್ಟು ಅನುಸಂಧಿಕ್ಕುಮ್ ಅಷ್ಟಾಂಗ ಬುದ್ಧಿಯುಡೈಯ ಅನನ್ಯರಾನ ಪ್ರತಿಬುದ್ಧರ್ಕ್ಕು- ಎಂದರೆ ಮೇಲೆ ಉಪಪಾದಿಸಿದಂತೆ ಮಾಹಾತ್ಮ್ಯಯುಳ್ಳ ಸರ್ವೇಶ್ವರನನ್ನು ಪ್ರತಿಪಾದಿ ಸುವ ಮುಖ್ಯ ಮನ್ತ್ರವಾದ ಶ್ರೀಮದಷ್ಟಾಕ್ಷರ ಮನ್ತ್ರವನ್ನು ಅರ್ಥದೊಂದಿಗೆ ಗುರು

**ಗ್ಯೆಯುಮ್ ; "ಎಟ್ಟೆಣ್ಣು ಮೆಣ್ಣುಣಮುದಿಯೋರ್ಕ್ಕು" - ಇಪ್ಪಡಿಪ್ಪಟ್ಟ ಸರ್ವೇಶ್ವರನುಕ್ಕು ಪ್ರಧಾನ ಮನ್ತ್ರಮಾನ ತಿರುವಷ್ಟಾಕ್ಷರತ್ತೈ ಸಾರ್ಥಮಾಗಕ್ಕೇಟ್ಟು ಅನುಸಂಧಿಕ್ಕುಮ್ ಅಷ್ಟಾಙ್ಗಬುದ್ಧಿಯುಡೈಯ ಅನನ್ಯರಾನ ಪ್ರತಿಬುದ್ಧರ್ಕ್ಕು ಬುದ್ಧಿಕ್ಕು ಎಟ್ಟು ಅಙ್ಗಙ್ಗಳಾವನ ? - "ಗ್ರಹಣಂ ಧಾರಣಂಚೈವ ಸ್ಮರಣಂ ಪ್ರತಿಪಾದನಮ್ । ಊಹಾಪೋಹೋರ್ಥವಿಜ್ಞಾನಂ ತತ್ವಜ್ಞಾನಂಚ ಧೀಗುಣಾಃ" ಎಙ್ಗಿರವೈ ; ಎಟ್ಟುಮಾಮಲರ್ (೧) " ಅಹಿಂಸಾ ಪ್ರಥಮಂ**

---

ಗಳ ಮೂಲಕ ಕೇಳಿ ತಿಳಿದು ಅನುಸಂಧಾನಮಾಡುವ ಅಷ್ಟಾಂಗಬುದ್ಧಿಯುಳ್ಳ, ಪರಮಾತ್ಮನನ್ನಲ್ಲದೆ ಇನ್ನು ಯಾರನ್ನೂ ಆಶ್ರಯಿಸದ, ಪ್ರಾಜ್ಞರಿಗೆ, ಇಲ್ಲಿ **ಎಟ್ಟು** ಎಂದರೆ **ತಿರುವಷ್ಟಾಕ್ಷರವು** ; ಅದು ಎಂತಾದ್ದೆಂಬುದನ್ನು ತಿಳಿಸುವದಕ್ಕಾಗಿ **ಇಪ್ಪಡಿಪ್ಪಟ್ಟ ಸರ್ವೇಶ್ವರನುಕ್ಕು ಪ್ರಧಾನಮನ್ತ್ರಮಾನ** ಎಂಬ ವಿಶೇಷಣವು "**ಎಣ್ಣುಮ್**" ಎಂಬುದಕ್ಕೆ **ಸಾರ್ಥಮಾಗಕೇಟ್ಟು ಅನುಸಂಧಿಕ್ಕುಮ್** ಎಂಬ ವ್ಯಾಖ್ಯಾನವು. "**ಎಣ್ಣುಣಮತಿಯೋರ್ಕ್ಕು**" ಎಂಬುದಕ್ಕೆ **ಅಷ್ಟಾಙ್ಗಬುದ್ಧಿಯುಡೈಯ** ಅನನ್ಯರಾನ ಪ್ರತಿಬುದ್ಧರ್ಕ್ಕು ಎಂದು ವ್ಯಾಖ್ಯಾನವು. ಮುಂದೆ ಬುದ್ಧಿಗೆ ಅಷ್ಟಾಙ್ಗಗಳು ಯಾವುವು ಎಂಬುದನ್ನು ತಿಳಿಸುತ್ತಾರೆ. **ಬುದ್ಧಿಕ್ಕು - ಎಟ್ಟು ಅಙ್ಗಙ್ಗಳಾವನ** - ಬುದ್ಧಿಗೆ ಎಂಟು ಗುಣಗಳಾವುವು ? ಎಂದರೆ ತಿಳಿಸುತ್ತಾರೆ.— "**ಗ್ರಹಣಂ ಧಾರಣಂಚೈವ ಸ್ಮರಣಂ ಪ್ರತಿಪಾದನಂ। ಊಹಾಪೋಹೋರ್ಥವಿಜ್ಞಾನಂ ತತ್ವಜ್ಞಾನಂಚ ಧೀಗುಣಾಃ**"; **ಗ್ರಹಣಂ**-ಶಬ್ದ ಅಥವಾ ವಾಕ್ಯದ ಅರ್ಥವನ್ನು ಗ್ರಹಿಸುವಿಕೆಯು, **ಧಾರಣಂ** - ಗ್ರಹಿಸಿದುದನ್ನು ಮರೆತುಬಿಡದೆ ಜ್ಞಾಪಕದಲ್ಲಿಡೋಣವು, ಸ್ಮ**ರಣಂ** - ಬೇಕಾದ ಕಾಲದಲ್ಲಿ ಸ್ಮರಿಸೋಣವು. **ಪ್ರಪಾದನಂ** - ಇತರರಿಗಾಗಿ ಉಪಪಾದನೆ ಮಾಡೆ ಹೇಳೋಣವು, **ಊಹಃ**-ವ್ಯಕ್ತವಾಗಿ ಹೇಳದಿದ್ದರೂ ಹಿಂದಿನ ಅಭಿಪ್ರಾಯದಿಂದ ಸರಿಯಾಗಿ ಊಹಿಸೋಣವು, **ಅಪೋಹಃ**-ವ್ಯಕ್ತವಾಗಿ ಹೇಳದಿದ್ದರೂ ಹಿಂದಿನ ಅಭಿಪ್ರಾಯದಿಂದ ಇನ್ನೊಂದು ಅಭಿಪ್ರಾಯವು ಸರಿಯಲ್ಲವೆಂದು ತ್ಯಾಗಮಾಡೋಣವು, **ಅರ್ಥವಿಜ್ಞಾನಂ**-ಅರ್ಥವನ್ನು ವಿಮರ್ಶಿಸಿ ತಿಳಿಯೋಣವು, ತತ್ವಜ್ಞಾನಂ - ಯಥಾರ್ಥಜ್ಞಾನವನ್ನು ಹೊಂದೋಣವು. ಹೀಗೆ ಇವು ಎಂಟೂ, **ಧೀಗುಣಾಃ** ಬುದ್ಧಿಯ ಗುಣಗಳು **ಎಙ್ಗಿರವೈ** - ಎಂಬುವುಗಳು. "**ಎಟ್ಟುಮಾಮಲರ್**" ಎಂದರೆ **ಅಹಿಂಸಾ ಪ್ರಥಮಂ ಪುಷ್ಪಂ** - ಯಾವ ಪ್ರಾಣಿಯನ್ನೂ ಹಿಂಸೆ ಮಾಡದಿರುವದೇ ಎಂಟು ಹೂಗಳಲ್ಲಿ ಮೊದಲನೆಯ ಪುಷ್ಪವು, **ಪುಷ್ಪಮಿನ್ದ್ರಿಯ ನಿಗ್ರಹಃ** – ಇಂದ್ರಿಯಗಳು ವಿಷಯಗಳ ಕಡೆಗೆ ಪ್ರವರ್ತಿಸದಹಾಗೆ ನಿಗ್ರಹಿಸೋಣವು. ಎರಡನೆಯ **ಪುಷ್ಪವು ; ಸರ್ವಭೂತದಯಾಪುಷ್ಪಂ**-ಸರ್ವ ಪ್ರಾಣಿಗಳಲ್ಲೂ ದಯೆಯನ್ನು ತೋರಿ

---

(೧) ವಿ. ಪು.

**ಪುಷ್ಪಂ ಪುಷ್ಪಮಿನ್ದ್ರಿಯ ನಿಗ್ರಹಃ। ಸರ್ವಭೂತದಯಾ ಪುಷ್ಪಂ ಕ್ಷಮಾ ಪುಷ್ಪಂ ವಿಶೇಷತಃ। ಜ್ಞಾನಂ ಪುಷ್ಪಂ ತಪಃ ಪುಷ್ಪಂ ಧ್ಯಾನಂ ಪುಷ್ಪಂ ತಥೈವಚ। ಸತ್ಯ ಮಷ್ಟವಿಧಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಭವೇತ್ ॥" ಎಜ್ಞಿರಪುಷ್ಪಂಗಳ್; "ಎಣ್ಶಿತ್ತಿ" (೨) "ಊಹಸ್ತರ್ಕೋಽಧ್ಯಯನಂ ದುಃಖ**

---

ಸೋಣವು ಮೂರನೆಯ ಪುಷ್ಪವು ; ಹಿಂದೆ ಪ್ರಾಣಹಿಂಸೆ ಕೂಡದೆಂದು **ಅಹಿಂಸಾ ಪ್ರಥಮಂಪುಷ್ಪಂ** ಎಂದು ಹೇಳಲ್ಪಟ್ಟಿತು ; ಇಲ್ಲಿಯಾದರೋ ಆ ಪ್ರಾಣಿಗಳಲ್ಲಿ ದಯೆಯನ್ನು ತೋರಿಸತಕ್ಕದ್ದೆಂದು ಹೇಳಲ್ಪಟ್ಟಿತು ; **ಕ್ಷಮಾಪುಷ್ಪಂ ವಿಶೇಷತಃ** –ನಮಗೆ ಯಾರಾದರೂ ತೊಂದರೆಮಾಡಿದರೂ ಕ್ಷಮಾ ಗುಣದಿಂದ ಕೋಪಿಸದೇ ಇರೋಣವು ನಾಲ್ಕನೆಯ ಪುಷ್ಪವು ; **ಜ್ಞಾನಂ ಪುಷ್ಪಂ**–ತನ್ನ ಮತ್ತು ಪರಮಾತ್ಮನ ಯಥಾರ್ಥಜ್ಞಾನವು ಐದನೆಯ ಪುಷ್ಪವು ; **ತಪಃಪುಷ್ಪಂ** – ಕೃಛ್ರಚಾಂದ್ರಾಯಣಾದಿಗಳ ಅನುಷ್ಠಾನವು ಆರನೆಯ ಪುಷ್ಪವು ; **ಧ್ಯಾನಂ ಪುಷ್ಪಂ** – ಪರಮಾತ್ಮನ ಧ್ಯಾನವು ಏಳನೆಯ ಪುಷ್ಪವು; **ಸತ್ಯಂ** - ಹಿತವಾಗಿಯೂ ಅನೃತವಲ್ಲದೆಯೂ ಇರುವದನ್ನೇ ಹೇಳೋಣವು ಎಂಟನೆಯ ಪುಷ್ಪವು; ಹೀಗೆ **ಅಷ್ಟವಿಧಂಪುಷ್ಪಂ** - ನಾವು ಪರಮಾತ್ಮನಿಗೆ ಪುಷ್ಪಗಳಿಂದ ಆರಾಧಿಸುವದರ ಜೊತೆಯಲ್ಲಿ ಈ ಮೇಲೆ ಹೇಳಿದ ಎಂಟು ವಿಧ ಪುಷ್ಪಗಳೂ ಅಧಿಕಾರಿಯಲ್ಲಿ ಇದ್ದುದಾದರೆ, **ವಿಷ್ಣೋಃ ಪ್ರೀತಿಕರಂ ಭವೇತ್** – ವಿಷ್ಣುವಿಗೆ ತುಂಬಾ ಪ್ರೀತಿಕರವಾದುವಾಗುತ್ತವೆ. ಆ ಅರ್ಚನೆ ಹೂವುಗಳಿಗಿಂತ ಈ ಎಂಟು ಹೂವುಗಳು ಇದ್ದವಾದರೆವಿಷ್ಣುವಿಗೆ ತುಂಬಾ ಇಷ್ಟವಾಗುತ್ತವೆ ಎಂದಾದರೂ ಅರ್ಥಮಾಡಬಹುದು. ಈ ಎಂಟು ಹೂವುಗಳಿಲ್ಲದೆ ಅಧಿಕಾರಿಯು ಎಷ್ಟು ಹೂವನ್ನು ಸಮರ್ಪಿಸಿದರೂ ಪ್ರೀತಿಕರವಾಗುವದಿಲ್ಲವೆಂಬ ಭಾವವೂ ಸೂಚಿತವು. **ಎಜ್ಞಿರಪುಷ್ಪಙ್ಗಳ್** - ಎಂದು ಹೇಳಲ್ಪಟ್ಟಿರುವ ಎಂಟು ಪುಷ್ಪಗಳು.

**"ಎಣ್ಶಿತ್ತಿ"** ಎಂದರೆ ಸಾಂಖ್ಯರು ಹೇಳುವ ಎಂಟು ಸಿದ್ಧಿಗಳು,ಅವು ಯಾವುವೆಂದರೆ— **ಊಹಃ**-ಅನುಮಾನ ಪ್ರಮಾಣದಮೂಲಕ ಉಂಟಾದ ಅನುಮಿತಿಯು, ಆಗಮಕ್ಕೆ ವಿರೋಧಗಳಲ್ಲದ ನ್ಯಾಯದಿಂದ ಮತಾಂತರಗಳನ್ನು ನಿರಸನಮಾಡಿ ತಮ್ಮ ಸಿದ್ಧಾಂತವನ್ನು ಸ್ಥಾಪಿಸೋಣವು, ಇದಕ್ಕೆ ತಾರತರಾಖ್ಯಾ ಸಿದ್ಧಿ ಎಂಬ ಹೆಸರು, **ತರ್ಕಃ** - ಹಾಗೆಯೇ ಆಗಮವಿರೋಧವಿಲ್ಲದ ಯುಕ್ತಿವಾದದಿಂದ ತಮ್ಮ ಮತವನ್ನು ಸ್ಥಾಪಿಸೋಣವು, ಊಹಶ್ಶಬ್ದೋಽಧ್ಯಯನ ವೆಂದು ಪಾಠಾಂತರವು. ಶಬ್ದವೆಂದರೆ ಶಾಸ್ತ್ರಜ್ಞಾನವು, ಇದಕ್ಕೆ ಸುತಾರಾಖ್ಯಾಸಿದ್ಧಿಃ ಎಂಬ ಹೆಸರು, **ಅಧ್ಯಯನಂ** - ಆಗಮದ ಅಕ್ಷರ ಗ್ರಹಣವು, ಇದಕ್ಕೆ ತಾರಾಖ್ಯಾಸಿದ್ಧಿಃ ಎಂಬ ಹೆಸರು, **ದುಃಖವಿಘಾತಾಸ್ತ್ರಯಃ** - ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ

---

(೨) ಸಾಂಖ್ಯಕಾರಿಕೆಯು.

**ವಿಘಾತಾ ಸ್ತ್ರಯ ಸ್ಸುಹೃತ್ಪ್ರಾಪ್ತಿಃ । ಧ್ಯಾನಂಚ ಸಿದ್ಧಯೋಽಷ್ಟೌ "ಎಜ್ಗಿರನ್ಯೈ. "ಎಣ್ಬತ್ತಿ" (೩) ಮದ್ಭಕ್ತ ಜನವಾತ್ಸಲ್ಯಂ ಪೂಜಾಯಾಂ ಚಾನುಮೋದನಮ್ । ಮತ್ಕಥಾ ಶ್ರವಣೇ ಭಕ್ತಿಸ್ಸ್ವರ ನೇತ್ರಾಂಗವಿಕ್ರಿಯಾ । ಸ್ವಯಮಾರಾಧನೇ ಯತ್ನೋ ಮಮಾರ್ಥೇ ಡಂಭವರ್ಜನಮ್ । ಮಮಾನುಸ್ಮರಣಂ**

---

ಗಳೆಂಬ ಮೂರು ವಿಧ ಆಧಿಗಳ - ದುಃಖಗಳ ನಿವೃತ್ತಿಯು, ಆಧ್ಯಾತ್ಮಿಕ ದುಃಖನಿವೃತ್ತಿಗೆ **ಪ್ರಮೋದಾಖ್ಯಾ** ಸಿದ್ಧಿ ಎಂದೂ, ಆಧಿದೈವಿಕ ದುಃಖನಿವೃತ್ತಿಗೆ **ಮುದಿತಾಖ್ಯಾ** ಸಿದ್ಧಿ ಎಂದೂ, ಆದಿಭೌತಿಕ ದುಃಖನಿವೃತ್ತಿಗೆ **ಮೋದಮಾನಾಖ್ಯಾ** ಸಿದ್ಧಿ ಎಂದೂ ಹೇಳಲ್ಪಟ್ಟಿವೆ. **ಸುಹೃತ್ಪ್ರಾಪ್ತಿಃ** - ನ್ಯಾಯವಾಗಿ ತೋರುವ ಅರ್ಥ ಸಂವಾದಕ್ಕೆ ಹೇತುಭೂತನಾದ ಸುಹೃತ್ತಿನ ಪ್ರಾಪ್ತಿಯು, ಇದು **ರಮ್ಯಕಾಖ್ಯಾ** ಸಿದ್ಧಿಯು ; **ದಾನಂ** - ಸಂಶಯ ವಿಪರ್ಯಯಗಳು ತೊಲಗಿ ವಿವೇಕಜ್ಞಾನ ವುಂಟಾಗುವಿಕೆ, ಧ್ಯಾನ ವೆಂಬ ಪಾಠಾಂತರವು, ಇದು **ಸಮುದಿತಾಖ್ಯಾ** ಸಿದ್ಧಿ ಎನ್ನಲ್ಪಡುತ್ತದೆ. ಈ ಸಿದ್ಧಿಗಳ ತಾತ್ಪರ್ಯವೇನೆಂದರೆ—ಮೊದಲು ವೇದಾಧ್ಯಯನವು, ಅನಂತರ ಸಾಙ್ಗಾಧ್ಯಯನದಿಂದುಂಟಾದ **ಶಬ್ದಂ** ಎಂಬ ಪದದಿಂದ ಹೇಳಲ್ಪಟ್ಟ **ವೇದಾರ್ಥಜ್ಞಾನವು** ; ಅನಂತರ **ಊಹ** ಶಬ್ದದಿಂದ ತೋರುವ ಮೀಮಾಂಸೆಯಿಂದುಂಟಾದ **ಅರ್ಥನಿರ್ಣಯವು.** ಅನಂತರ ಅರ್ಥ ನಿರ್ಣಯ ಸಮರ್ಥನೆಗಾಗಿ ಸತ್ಸಂಗತಿಯು ಎಂದರೆ **ಸುಹೃತ್ಪ್ರಾಪ್ತಿಯು** ; ಅನಂತರ ಹೀಗೆ ಸಿದ್ಧವಾದ ಅರ್ಥದ ಅನವರತ ಭಾವನೆಯು ಧ್ಯಾನಶಬ್ದದಿಂದ ಬೋಧಿತವು. ಅನಂತರ ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ ದುಃಖಗಳ ನಿವೃತ್ತಿಯು, ಎಂದರೆ ಪರಿಗಣಿಸಿದ ಅವಸ್ಥೆಯು. ಎಜ್ಗಿರನ್ಯೈ ಹೀಗೆ ಸಿದ್ಧ್ಯಷ್ಟಕಗಳು ಎಂಬ ತಾತ್ಪರ್ಯವು.

ಎಣ್ಬತ್ತಿ - ಎಂಟು ವಿಧ ಲಕ್ಷಣೆಯಿಂದ ಕೂಡಿದ ಭಕ್ತಿ, ಅವು ಯಾವುವೆಂದರೆ ತಿಳಿಸುತ್ತಾರೆ—ಈ ಶ್ಲೋಕಗಳು **ಪುರುಷಾರ್ಥಕಾಷ್ಠಾಧಿಕಾರದಲ್ಲಿ** ಉದಾಹೃತವು. ಪ್ರತಿಪದಾರ್ಥಗಳಿಗೆ ೧೩೬೪-೭೫ ನೆಯ ಪುಟಗಳನ್ನು ನೋಡಿ. ಎಜ್ಗಾರ ಎಟ್ಟು **ವಿಧಮಾನಭಕ್ತಿಗಳ್**" ಎಂದು ಹೇಳಲ್ಪಟ್ಟಿರುವ ಎಂಟು ವಿಧ ಲಕ್ಷಣೆಗಳನ್ನುಳ್ಳದಾಗಿ ತೋರುವ ಭಕ್ತಿಗಳು. ಇದರಿಂದ ಭಕ್ತಿಗಳೇ ಅಷ್ಟು ಪ್ರಭೇದಗಳನ್ನುಳ್ಳವು ಎಂಬರ್ಥವಲ್ಲವು. ಭಗವದ್ಗೀತೆಯಲ್ಲಿ ಭಕ್ತಿಯ ಪ್ರಭೇದಗಳು ವೃದ್ಧಿ ಹೊಂದುತ್ತಾ ನಾಲ್ಕು ವಿಧಾವಸ್ಥೆಗಳನ್ನು ಹೊಂದುತ್ತವೆಂದು ಹೇಳಲ್ಪಟ್ಟಿರುತ್ತವೆ. ಸಾಮಾನ್ಯ ಭಕ್ತಿಯು ಅಪ್ರಪನ್ನರಲ್ಲೂ ಉಂಟು. ಇದು ವೃದ್ಧಿ ಹೊಂದುತ್ತಾ ಹೊಂದುತ್ತಾ ಈತನಿಗೆ ಪ್ರಪನ್ನತೆಯುನ್ನುಂಟುಮಾಡಿ ತೈಲಧಾರೆಯಹಾಗೆ ಅವಿಚ್ಛಿನ್ನ ಸ್ಮೃತಿ ಸಂತತಿರೂಪದಲ್ಲಿ ಆತನನ್ನು ಉಪಾಸಿಸುವ ಅವಸ್ಥೆಯಲ್ಲಿ ಉಂಟಾದುದು ಪರಭಕ್ತಿ ಎಂದು ಹೇಳಲ್ಪಡುತ್ತದೆ. ಹೀಗೆ ಮಾಡುತ್ತಾ ಮಾಡುತ್ತಾ ವೃದ್ಧಿ ಹೊಂದಿ, ಪರ

---

(೩) ಗರುಡಪುರಾಣ ೨೧೯-೬

**ನಿತ್ಯಂ ಯಚ್ಚ ಮಾಂ ನೋಪಜೀವತಿ । ಭಕ್ತಿರಷ್ಟವಿಧಾಹ್ಯೇಷಾ" ಎಙ್ಗಿರ ಎಟ್ಟವಿಧಙ್ಗಳಾನ ಭಕ್ತಿಗಳ್ ; " ಎಟ್ಟು ಯೋಗಾಙ್ಗಮ್ " - ಯೋಗಾಙ್ಗ ಮಾಗಚ್ಚೊಲ್ಲಪ್ಪಟ್ಟ ಯಮನಿಯಮಾದಿಗಳ್ ; "ಎಣ್ಚೆಲ್ವಮ್" - "ಅಣಿಮಾ ಮಹಿಮಾ ಚ ತಥಾ ಲಘಿಮಾ ಗರಿಮಾ ವಶಿತ್ವ ಮೈಶ್ವರ್ಯಂ। ಪ್ರಾಪ್ತಿಃ ಪ್ರಾಕಾಮ್ಯಂ ಚೇತ್ಯಷ್ಟೈಶ್ವರಾಣಿ ಯೋಗಯುಕ್ತಸ್ಯ" ಎಙ್ಗಿರ ವಿಭೂತಿಗಳ್ ; "ಎಟ್ಟುಮಾಗುಣಮ್" -ಮುಕ್ತದಶೈಯಿಲ್ ಆವಿರ್ಭವಿಕ್ಕುಮ್ ಗುಣಾಷ್ಟ**

---

ಮಾತ್ಮ ಸಾಕ್ಷಾತ್ಕಾರ ಉಂಟಾದ ಅವಸ್ಥೆಯು ದೊರೆಯುತ್ತದೆ. ಅದು ಪರಜ್ಞಾನವೆಂದು ಹೇಳಲ್ಪಡುತ್ತದೆ. ಆನಂತರ ಪರಮಾತ್ಮನನ್ನಗಲಿ ಒಂದು ನಿಮಿಷವೂ ಇರಲಾರನೆಂಬ ಉತ್ಕಟೇಚ್ಛೆಯು ಉಂಟಾಗುವ ಭಕ್ತಿಗೆ ಪರಮಾಭಕ್ತಿ ಎಂದು ಹೆಸರು. ಹೀಗೆ ಸಾಮಾನ್ಯ ಭಕ್ತಿ, ಪರಭಕ್ತಿ, ಪರಜ್ಞಾನ, ಪರಮಾಭಕ್ತಿ ಎಂದು ವಿಭಾಗಿಸಲ್ಪಟ್ಟಿವೆ. ಇವು ಇಲ್ಲಿ ಹೇಳಲ್ಪಡಲಿಲ್ಲವು. ಇಂತಹ ಭಕ್ತಿಯ ಕಾಷ್ಠಾದೆಶೆಗಳು ಭರನ್ಯಾಸನಿಷ್ಠನಿಗೂ ಉಂಟು. ಇದು ಶರಣಾಗತಿ ಗದ್ಯದಲ್ಲಿ ವ್ಯಕ್ತವು.

" ಎಟ್ಟು **ಯೋಗಾಙ್ಗಮ್** " ಎಂದರೆ **ಯೋಗಾಙ್ಗಮಾಗ ಚ್ಚೊಲ್ಲಪ್ಪಟ್ಟ ಯಮನಿಯಮಾದಿಗಳ್**-ಭಕ್ತಿಯೋಗವೆಂದರೆ ಭಗವದುಪಾಸನೆಗೆ ಅಙ್ಗಗಳಾಗಿ ಹೇಳಲ್ಪಟ್ಟ **ಯಮನಿಯಮಾದಿಗಳ್** - ಇವುಗಳಲ್ಲಿ ೭ ಅಙ್ಗಗಳೂ ಒಂದು ಅಙ್ಗಿಯೂ ಸೇರಿದರೆ ಅಷ್ಟಾಂಗಯೋಗ ಎಂಬ ಪ್ರಯೋಗವು. ಹೇಗೆ ಎಂದರೆ ೮ ವಿಷಯಗಳುಳ್ಳದು ಭಕ್ತಿಯೋಗವೆಂಬ ತಾತ್ಪರ್ಯವು. ಈ ಅಷ್ಟಾಂಗಗಳು ಯಾವುವೆಂಬುದು ಭಗವದ್ಗೀತೆಯ ಆರನೆಯ ಅಧ್ಯಾಯದಲ್ಲಿ ಉಪಪಾದಿತವು.

" ಎಣ್ಚೆಲ್ವಮ್ " ಎಂದರೆ " **ಅಣಿಮಾ** - ಸೂಕ್ಷ್ಮವಾಗಿ ಯಾವುದು ಲಭ್ಯವೋ ಅದು, **ಮಹಿಮಾ** - ಮಹತ್ವದಿಂದ ಯಾವುದು ಲಭ್ಯವೋ ಅದು, **ಗರಿಮಾ** – ಗುರುತ್ವದಿಂದ ಲಭಿಸತಕ್ಕದ್ದು, **ಲಘಿಮಾ** – ಲಘುತ್ವದಿಂದ ಲಭ್ಯವಾದುದು, **ವಶಿತ್ವಮ್** - ಇಂದ್ರಿಯಗಳು ಸ್ವಾಧೀನದಲ್ಲಿರುವಿಕೆಯು, ಐಶ್ವರ್ಯಂ – ಸರ್ವವನ್ನೂ ನಿಯಮಿಸುವದರ ಮೂಲಕ ಸರ್ವಾತಿಶಯತ್ವವು, **ಪ್ರಾಪ್ತಿಃ**–ಯಾವುದರಿಂದ ಇಷ್ಟಪ್ರಾಪ್ತಿಯೋ ಅದು, **ಪ್ರಾಕಾಮ್ಯಂ** - ಸ್ವೇಚ್ಛೆಯಿಂದ ನಿರ್ವಿಘ್ನವಾಗಿ ಸಂಚರಿಸುವ ಶಕ್ತಿಯು, ಇತಿ – ಎಂಬದಾಗಿ, **ಯೋಗಯುಕ್ತಸ್ಯ ಐಶ್ವರ್ಯಾಣಿ**– ಯೋಗಯುಕ್ತನಿಗೆ ಲಭಿಸುವ ಅಷ್ಟೈಶ್ವರ್ಯಗಳು, ಅಮರದಲ್ಲಿ " **ಅಣಿಮಾ ಮಹಿಮಾ ಚೈವ ಗರಿಮಾಲಘಿಮಾತಥಾ । ಪ್ರಾಪ್ತಿಃ ಪ್ರಾಕಾಮ್ಯ ಮೀಶತ್ವಂ ವಶಿತ್ವಂ ಚಾಷ್ಟ ಭೂತಯಃ** " ಎಂದು ಹೇಳಲ್ಪಟ್ಟಿವೆ. ಎಙ್ಗಿರ **ವಿಭೂತಿಗಳ್** - ಎಂಬ ನಿಯಾಮ್ಯ ವರ್ಗವು, ಸ್ವಾಮಿ ಕೃಪೆಯಿಂದ ಲಭಿಸತಕ್ಕದ್ದು. ಕುಬೇರನಿಗೆ ಲಭಿಸಿದ ಅಷ್ಟವಿಭೂತಿಗಳು.

"**ಎಟ್ಟು ಮಾಗುಣಮ್**" . ಮಹತ್ತಾದ ಎಂಟು ಗುಣಗಳು, ಅವು ಯಾವು

**ಕಮ್, (೪) "ಅಷ್ಟೌಗುಣಾಃ ಪುರುಷಂ ದೀಪಯನ್ತೀ" ತ್ಯಾದಿಗಳಿಲ್ ಚ್ಚೊನ್ನವೈಯೂಗವುಮಾಮ್; "ಎಟ್ಟೆಟ್ಟೆಣ್ಣುಮ್ ಕಲೈಗಳ್" - ಚತುಷ್ಷಷ್ಟಿ ಕಲೈಗಳ್; "ಎಟ್ಟುರದ ಮೇಲನುವುಮ್" (೫) "ಶೃಂಗಾರ ವೀರ ಕರುಣಾದ್ಭುತ ಹಾಸ್ಯ ಭಯಾನಕಾಃ। ಬೀಭತ್ಸರೌದ್ರೌ ಚ ರಸಾಃ"**

---

ವೆಂದರೆ–ಮುಕ್ತದಶೈಯಿಲ್ ಆವಿರ್ಭವಿಕ್ಕುಮ್-ಮೊದಲು ದೇಹಪ್ರಾಪ್ತಿಯಿಂದ ಮರೆಸಿಹೋಗಿದ್ದ ಗುಣಾಷ್ಟಕಗಳು ಮುಕ್ತಾವಸ್ಥೆಯಲ್ಲಿ ಆವಿರ್ಭವಿಸೋಣವು, ವಜ್ರವು ಕೆಸರಿನಲ್ಲಿ ಬಿದ್ದಾಗ ಅದರ ಪ್ರಕಾಶ ಗುಣವು ಹೇಗೆ ಮರೆಸಿ ಹೋಗುತ್ತದೋ ಹಾಗೆಯೇ ಈ ಆತ್ಮನಿಗೆ ದೇಹಸಂಬಂಧದಿಂದ ನೈಜಗುಣಗಳು ಮಾಲಿನ್ಯ ಹೊಂದಿದ್ದವು; ಶರೀರ ಹೋಗಿ ಮುಕ್ತಾವಸ್ಥೆಯು ಬಂದಾಗ ಈ ಎಂಟು ಗುಣಗಳು ಸ್ವತಃ ಪ್ರಕಾಶಿಸುತ್ತವೆ ಎಂಬ ಭಾವವು. ಇವು "ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮ ಸ್ಸತ್ಯಸಙ್ಕಲ್ಪಃ" (ಛಾಂ. ೮.೭.೧) ಶ್ರುತಿಯು ಮುಕ್ತದೆಶೆಯಲ್ಲಿ ಸ್ವೇನರೂಪೇಣಾ ಭಿನಿಷ್ಪದ್ಯತೇ ಎಂದು ಹೇಳಿತು, ಹಾಗೆಯೇ ಬ್ರಹ್ಮಸೂತ್ರವೂ "ಆವಿರ್ಭಾವಸ್ಸ್ವೇನಶಬ್ದಾತ್" ಎಂದು ಹೇಳಿರುತ್ತದೆ. ಇವುಗಳನ್ನನುಸರಿಸಿ ಸ್ವಾಮಿ ನಿಗಮಾನ್ತ ದೇಶಿಕರೂ "ಆವಿರ್ಭವಿಕ್ಕುಮ್ ಗುಣಾಷ್ಟಕಮ್" ಎಂದು ಪ್ರಯೋಗಿಸಿರುತ್ತಾರೆ. ಅಥವಾ ಗುಣಾಷ್ಟಕಕ್ಕೆ ಬೇರೇ ವಿಧವಾಗಿಯೂ ಅರ್ಥ ಹೇಳಬಹುದೆಂದು ತಿಳಿಸುತ್ತಾರೆ. ಈ ಪೂರಾ ಶ್ಲೋಕವು ಯಾವುದೆಂದರೆ—"ಅಷ್ಟೌಗುಣಾಃ ಪುರುಷಂ ದೀಪಯನ್ತಿ ಪ್ರಜ್ಞಾ ಚ ಕೌಲ್ಯಂ ಚ ದಮಃ ಶ್ರುತಂ ಚ। ಪರಾಕ್ರಮಶ್ಚ ಬಹುಭಾಷಿತಾ ಚ ದಾನಂ ಯಥಾ ಶಕ್ತಿ ಕೃತಜ್ಞತಾ ಚ" ಇತ್ಯಾದಿಗಳಿಲ್ ಇವೇ ಮೊದಲಾದವುಗಳಲ್ಲಿ ಚೊನ್ನವೈಯೂಗವುಮಾಮ್ - ಹೇಳಲ್ಪಟ್ಟವಾದರೂ ಆಗಬಹುದು. ಹೀಗೆ ಎರಡು ವಿಧವಾಗಿಯೂ "ಎಟ್ಟುಮಾಗುಣಮ್" ಎಂಬುದಕ್ಕೆ ಅರ್ಥಮಾಡಬಹುದು. ದೇಹವಿಯೋಗಾನನ್ತರ ಪ್ರಾಪ್ತವಾಗುವ ಎಂಟು ಗುಣವೆಂಬ ಅಭಿಪ್ರಾಯವಾದರೆ ಮೊದಲಿನಅರ್ಥವನ್ನು ಹೇಳಬಹುದು, ದೇಹವಿರುವಾಗಲೇ ಪ್ರಾಪ್ತವಾಗುವಗುಣವೆಂದು ಅಭಿಪ್ರಾಯವಾದರೆ ಎರಡನೆಯ ಅರ್ಥವನ್ನು ಇಟ್ಟುಕೊಳ್ಳಬಹುದೆಂಬತಾತ್ಪರ್ಯವು.

ಎಟ್ಟೆಟ್ಟೆಣ್ಣುಮ್ ಕಲೆಗಳು ಎಂದರೆ ಚತುಷ್ಷಷ್ಟಿಕಲೈಗಳ್ ಎಂಟೆಂಟೆಂದರೆ ೬೪, ವಿದ್ಯೆಗಳು ಎಂಬ ಭಾವವು.

"ಎಟ್ಟುರದ ಮೇಲ ದವುಮ್", ಎಂಟಕ್ಕೂ ಮೇಲಾದ ಶಾನ್ತಿರಸವು, ಅದು ಹೇಗೆ ಎಂದರೆ (೫) ಶೃಂಗಾರ, ವೀರ, ಕರುಣ ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ ಎಙ್ಗಿರ ರಸಙ್ಗಳ್ ಎಂಬ ಎಂಟು ರಸಗಳು, ಎಟ್ಟುಕ್ಕುಮ್ - ಈ ಎಂಟು ರಸಗಳಿಗೂ, ಮೇಲಾದ ಶಾನ್ತಿ ರಸಮ್ ಉತ್ಕೃಷ್ಟವಾದ

---

(೪) ಉದ್ಯೋಗ ಪರ್ವ. ೩೫.೬೪. (೫) ಅಮರ.

ಎಞ್ಗಿರ ರಸಙ್ಗಳ್, ಎಟ್ಟುಕ್ಕುಮ್ ಮೇಲಾನ ಶಾನ್ತಿರಸಮ್ ; "ಇನ್ನೈ ಯೆಲ್ಲಾ ಮೆಟ್ಟಿನನೇ" - ಇವತ್ತಿಲ್ ಇವನುಕ್ಕು ಇಚ್ಛೈಯುಳ್ಳಪೋದು ಎಟ್ಟಾದನ್ನೈ ಯೊನ್ರುಮಿಲ್ಲೈ.

ಆತ್ಮಗುಣಾದಿಗಳ್ ನಿರಮ್ಬಾದೊಳಿಗಿರದು ಅನುಸಂಧಾನತ್ತಿಲ್

---

ಶಾನ್ತ ರಸವು. ರಸ ಆಸ್ವಾದನೇ ಎಂಬ ಧಾತುವಿನ ಪ್ರಕಾರ ಇಂತಹ ಅನುಭವಗಳನ್ನುಂಟುಮಾಡುವವು ಯಾವುವೋ ಅವುಗಳಿಗೆ ರಸಗಳೆಂದು ಹೆಸರು. ಬೀಭತ್ಸವೆಂದರೆ ನಿಂಧಾರೂಪವಾಗಿಯೂ ಮನಸ್ಸಿಗೆ ಖೇದವನ್ನುಂಟುಮಾಡೋಣವೂ, ಭಯಾನಕ ವೆಂದರೆ ಮನಸ್ಸಿಗೆ ಭೀತಿಯನ್ನುಂಟುಮಾಡೋಣವು ರಾಗದ್ವೇಷಾದಿಗಳಿಲ್ಲದಿರೋಣವು ಶಾನ್ತಿರಸವೆನಿಸುತ್ತದೆ.

ಇನ್ನೈ ಯೆಲ್ಲಾ ಮೆಟ್ಟಿನನೇ ಎಂದರೆ ಇವತ್ತಿಲ್ ಇವನುಕ್ಕು ಇಚ್ಛೈಯುಳ್ಳಪೋದು ಎಟ್ಟಾದನ್ನೈಯೊನ್ರುಮಿಲ್ಲೈ-ಈ ಮೂಲಮಂತ್ರೋಪಾಸಕನಾದ ಇವನಿಗೆ ಅಪೇಕ್ಷೆ ಇದ್ದುದಾದರೆ ಲಭಿಸದೇ ಇರತಕ್ಕವು ಯಾವುವೂ ಇಲ್ಲವು ಎಂಬುದು ತಾತ್ಪರ್ಯವು. ಸರ್ವವೂ ಲಭಿಸುತ್ತವೆ ಎಂಬ ಭಾವವು. ಇಚ್ಛೈಯುಳ್ಳಪೋದು. ಎಂದು ಹೇಳಿರುವುದರ ತಾತ್ಪರ್ಯವೇನೆಂದರೆ, ಮೇಲೆ ಹೇಳಿರುವವರಲ್ಲಿ ಕೆಲವೆಲ್ಲಾ ಐಹಿಕಗಳು, ಮುಮುಕ್ಷುವಾದ ಪ್ರಪನ್ನನು ಐಹಿಕವನ್ನೆಲ್ಲಾ ಮತ್ತು ಅಷ್ಟೈಶ್ವರ್ಯಾದಿ ಸ್ವರ್ಗಾದಿ ಭೋಗಗಳನ್ನೆಲ್ಲಾ ತೃಣವಾಗಿ ಕಾಣುವವನಿಗೆ ಸಾಧಾರಣವಾಗಿ ಅಂತವುಗಳಲ್ಲಿ ಇಚ್ಛೆಯು ಇರುವದಿಲ್ಲವೆಂಬಭಾವವನ್ನು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು.

ಹೀಗೆ ಎಲ್ಲವೂ ಅಷ್ಟಾಕ್ಷರಾನುಸಂಧಾನಮಾಡುವವರಿಗೆ ದೊರೆಯುತ್ತದೆಂದು ಹೇಳಿದುದು ಅತಿಶಯೋಕ್ತಿಯಲ್ಲವೋ ? ಇದು ಸರ್ವಾರ್ಥಸಾಧಕವೆಂದು ಹೇಳುವ ಮಾತು ರೋಗಿಗೆ ಈ ಔಷಧಿಯನ್ನು ಕುಡಿ ನಿನಗೆ ಗುಣವಾಗುತ್ತದೆಂದು ವಂಚಿಸುವ ಮಾತಿನಹಾಗಲ್ಲವೋ? ಮೇಲಿನ ಪಾಶುರದಲ್ಲಿ ಹೇಳಿರುವ ಅಂತಹ ಮನ್ತ್ರಾನುಸಂಧಾನದಿಂದ, ಕೆಲವು ಆತ್ಮಗುಣಗಳ ಪ್ರಾಪ್ತಿಯೂ,ಶೀಘ್ರಸಂಸಾರ ನಿವೃತ್ತಿಯೂ ಅಷ್ಟೈಶ್ವರ್ಯಾದಿಗಳು ಲಭಿಸೋಣವೂ ಇವೆಲ್ಲಾ ಇಲ್ಲದಿರೋಣವು ಉಂಟಲ್ಲಾ ಎಂದು ಆಕ್ಷೇಪ ತಂದರೆ, ಅಂತಹ ಸಂದರ್ಭಗಳಲ್ಲಿ ಅನುಸಂಧಾನಮಾಡುವದರಲ್ಲಿ ನ್ಯೂನತೆಯೇ ವಿನಾ, ಮನ್ತ್ರಪ್ರಭಾವದ ನ್ಯೂನತೆಯಿಂದಲ್ಲವೆಂದು ನಿಗಮನಮಾಡಿ ಹೇಳುತ್ತಾರೆ.—ಆತ್ಮಗುಣಾದಿಗಳ್-" ಅಷ್ಟೌಗುಣಾಃ ಪುರುಷಂ ದೀಪಯನ್ತಿ "ಎಂದು ಹೇಳಲ್ಪಟ್ಟ ಆತ್ಮಗುಣಗಳು,ನಿರಮ್ಬಾದೊಳಿಗಿರದು-ಸಂಪೂರ್ಣವಾಗಿ ಲಭಿಸದೇ ಇರುವದು, ಅನುಸಂಧಾನತ್ತಿಲ್ - ಅನುಸಂಧಾನದಲ್ಲಿ, ಊತ್ತಮ್ಬೋರಾಮೈಯಾಲೇ-ವಿಶ್ವಾಸವು ಸಾಲದೇ ಇರುವದರಿಂದ,ಅಷ್ಟೈಶ್ವರ್ಯಙ್ಗಳ್ ವಾರಾದೊಳಿಗಿರದು-ಅಷ್ಟೈಶ್ವರ್ಯಗಳು ಬಾರದೇ ಇರುವದು, ಉಪೇಕ್ಷೈಯಾಲೇ ಪ್ರಪನ್ನ

**ಊತ್ತ್ರನ್ವ್ಯೋರಾನ್ಮೈಯಾಲೇ ; ಅಷ್ಟೈಶ್ವರ್ಯಾದಿಗಳ್ ವಾರಾದೊಳಿಗಿರದು ಉಪೇಕ್ಷೈಯಾಲೇ ; ಕಡುಗ ಸಂಸಾರಮ್ ನಿವರ್ತ್ತಿಯಾದೊಳಗಿರದು ಇಶೈವಿಲ್ ಕುರೈಯಾಲೇ ; ಆಗೈಯಾಲೇ ಇರೇ(೬) "ನಮೋನಾರಾಯಣೇತಿ ಮನ್ತ್ರಸ್ಸರ್ವಾರ್ಥಸಾಧಕಃ" ಎಙ್ಗಿರದು.**

---

ನಿಗೆ ಅವುಗಳಲ್ಲಿ ಅಪೇಕ್ಷೆ ಇಲ್ಲದುದರಿಂದ. **ಕಡುಗಸಂಸಾರಮ್ ನಿವರ್ತ್ತಿಯಾದೊಳಗಿರದು** – ಒಡನೇ ಸಂಸಾರ ನಿವೃತ್ತಿಯುಂಟಾಗದೇ ಇರುವದು, **ಇಶೈವಿಲ್ ಕುರೆಯಾಲೇ** - ಆತುರವಿಲ್ಲದುದರಿಂದ, ಎಂದರೆ ಒಡನೇ ಬೇಕೆಂಬ ಆಶೆ ಇಲ್ಲದೆ ದೇಹಾವಸಾನದಲ್ಲಾಗಲಿ ಎಂಬ ಭಾವನೆ ಇರುವದರಿಂದ. ಇವುಗಳು ಕಾರಣವೇ ವಿನಾ ಮನ್ತ್ರ ಮಾಹಾತ್ಮ್ಯೆಯಲ್ಲಿ ಏನೊಂದೂ ನ್ಯೂನತೆ ಇಲ್ಲವು ಎಂಬ ಭಾವವು. **ಆಗೈಯಾಲೇ ಇರೇ**–ಆದುದರಿಂದ ಅಲ್ಲವೇ ; " **ನಮೋ ನಾರಾಯಣಾಯ** " ಎಂಬ ಮನ್ತ್ರವು **ಸರ್ವಾರ್ಥಸಾಧಕಃ** - ಸಕಲಾಪೇಕ್ಷಿತಗಳನ್ನು ಸಾಧಿಸಿಕೊಡುವಂತಹದ್ದು" **ಎಙ್ಗಿರದು** - ಎಂದು ಹೇಳಲ್ಪಟ್ಟಿರುವದು. ಆದುದರಿಂದ, **ಸರ್ವಾರ್ಥಸಾಧಕಃ** ಎಂಬ ಮಾತು ಅತಿಶಯೋಕ್ತಿಯೂ ಅಲ್ಲವು, ವಂಚಕೋಕ್ತಿಯೂ ಅಲ್ಲವು ಎಂಬುದು ತಾತ್ಪರ್ಯವು. ಇವನು ಯಾವು ಯಾವುದನ್ನು ಹೊಂದಲು ಸಾಧ್ಯವೋ ಅವನ್ನೇ ಅಪೇಕ್ಷಿಸಿ, ಶ್ರದ್ಧಾ, ಉತ್ಸಾಹ, ವಿಶ್ವಾಸಯುಕ್ತನಾಗಿ ಅನುಸಂಧಾನ ಮಾಡಿದರೆ ಅವೆಲ್ಲವೂ ಸಾಧ್ಯವೇ; ಇದರಲ್ಲಿ ಸಂದೇಹ ಬೇಕಿಲ್ಲವೆಂಬ ತಾತ್ಪರ್ಯವು.

ಆಪರೆ ಈಗ ತಾವು ಸಮರ್ಥಿಸಿದ ಅರ್ಥಗಳಿಗೆ ಭಿನ್ನವಾಗಿ ಇತರರು ಹೇಳುತ್ತಾರಲ್ಲಾ ಅವುಗಳ ವಿಷಯ ಹೇಗೆ ? ಎಂದರೆ ತಾವು ಹೇಳಿರುವ ಅರ್ಥಗಳೆಲ್ಲಾ ಸದಾಚಾರ್ಯರುಗಳಿಂದ ಉಪದಿಷ್ಟವಾದ ಅಭಿಪ್ರಾಯಗಳಾದುದರಿಂದ ಪರಮೋಪಾದೇಯಗಳೆಂದೂ ಇತರ ಅರ್ಥಗಳೆಲ್ಲಾ ಭ್ರಮಜ್ಞಾನದಿಂದ ಉತ್ಪನ್ನಗಳಾಗಿ ಸುತರಾಂ ತ್ಯಾಜ್ಯಗಳೆಂದೂ ಹೇಳಿ ಈ ಮನ್ತ್ರದ ಭಾಷ್ಯವನ್ನು ಮುಗಿಸುತ್ತಾರೆ.

**ಅರ್ಥವು**—ಈ ಮೂಲಮನ್ತ್ರದ ಉಪಪಾದನ ರೂಪ ಅಭಿಪ್ರಾಯಗಳೆಲ್ಲಾ ತಮ್ಮ ಪೂರ್ವಾಚಾರ್ಯರುಗಳಿಂದ ಉಪದೇಶಿಸಲ್ಪಟ್ಟವು ಎಂದು ಹೇಳುತ್ತಾರೆ— ಅವರುಗಳಿಂದ, **ಆದಿಷ್ಟಂ ಇತಿ** - ಉಪದೇಶಿಸಲ್ಪಟ್ಟವಾದುದರಿಂದ, **ದರ್ಶಿತಮ್**- ಆ ಅರ್ಥಗಳೇ ಪ್ರದರ್ಶಿಸಲ್ಪಟ್ಟವು. ಯಾರಿಂದ ಎಂದರೆ, ತಮ್ಮಿಂದ ಎಂಬ ಭಾವವು. ಸತ್ಸಂಪ್ರದಾಯರೀತ್ಯಾ ಬಂದಿರುವದರಿಂದ ಪರಮಗ್ರಾಹ್ಯವೆಂಬ ಭಾವವು. ಆ ಆಚಾರ್ಯರುಗಳು ಎಂತವರೆಂದರೆ? ಮೂರು ವಿಶೇಷಣಗಳಿಂದ ಅವರುಗಳ ಮಹತ್ವವನ್ನು ಕೊಂಡಾಡುತ್ತಾರೆ. ೧. **ಅವಿದ್ಯಾ ಪೂತನೋನ್ಮುಕ್ತೈಃ** ಅಜ್ಞಾನವೆಂಬ ರಾಕ್ಷಸಿಯಾದ ಪೂತನಿಯಿಂದ ಬಿಡಲ್ಪಟ್ಟವರು. " ಅನಾತ್ಮನ್ಯಾತ್ಮಬುದ್ಧಿರ್ಯಾ ಅಸ್ವೇ ಸ್ವಮಿತಿ ಯಾಮತಿಃ । " ಅವಿದ್ಯಾತರು ಸಂಭೂತಿ ಬೀಜ

---

(೬) ನಾರದೀಯ ೧-೪೧.

**ಅವಿದ್ಯಾ ಪೂತನೋನ್ಮುಕ್ತೈ ರನವಜ್ಞಾತ ಸತ್ಪಥೈಃ ।**
**ಅಸದಾ ಸ್ವಾದನ ವ್ರೀಡೈ (ಳೈ) ರಾದಿಷ್ಟ ಮಿತಿದರ್ಶಿತಮ್ ॥೯೦॥**

---

**ಮೇತದ್ವಿಧಾಸ್ಥಿತಮ್** - ಭ್ರಮಜ್ಞಾನಗಳಾದ ದೇಹಾತ್ಮ ಭ್ರಾಂತಿ, ಸ್ವತಂತ್ರಾತ್ಮ ಭ್ರಾಂತಿ ಜೀವೇಶೈಕ್ಯಭ್ರಾನ್ತಿ ಇಂತಹ ಅನ್ಯಥಾ ವಿಪರೀತಜ್ಞಾನರೂಪ ಭ್ರಮು ಗಳಿಲ್ಲದವರು, ಪೂತನಿಯನ್ನು ಕೊಂದುದರಿಂದ ಆಕೆಯಿಂದ ಬಿಡಲ್ಪಟ್ಟ ಶ್ರೀ ಕೃಷ್ಣ ಭಗರ್ವಾರವರು ಹೇಗೆ ಶೋಭಿಸಿದರೋ ಹಾಗೆ ಇಂತಹ ಭ್ರಮಜ್ಞಾನಾಂಧಕಾರವು ಹೋಗಿ ಪ್ರಜ್ಞಾವಂತರಾದವರು. ಇಂತವರು ಕೃಷ್ಣನಾದ ಪರಮಾತ್ಮನಿಗೆ ಸಮಾನ ರೆಂಬುದು ಹಿಂದೆ ಗುರುಪರಂಪರಾಸಾರದಲ್ಲಿ ಉಪದಿಷ್ಟವಾಗಿರುವದರಿಂದ **ಪೂತ ನೋನ್ಮುಕ್ತರೆಂದು** ಹೇಳಿದುದರಿಂದ ಶ್ರೀ ಕೃಷ್ಣಸಾಮ್ಯವು ಅವರುಗಳಿಗೆ ಉಪಪಾ ದಿಸಲ್ಪಟ್ಟಿತು. **"ಆಚಾರ್ಯಾದಿಹ ದೇವತಾಂ ಸಮಧಿಕಾ ಮನ್ಯಾಂ ನಮನ್ಯಾ ಮಹೇ"** ಎಂದು ಹೇಳಲ್ಪಟ್ಟಿದುದು ಅನುಸಂಧೇಯವು. **ಪೂತನೋನ್ಮುಕ್ತರೆ** ಎಂದು ಹೇಳಿರುವದರಿಂದ, ಕಂಸನಿಂದ ಕಳುಹಿಸಲ್ಪಟ್ಟ ಪೂತನೆಯ ಹಾಗೆ, ಅರಿ ಷಡ್ವರ್ಗಗಳಿಂದ ಪ್ರೇರಿಸಲ್ಪಟ್ಟ ಭ್ರಮಜ್ಞಾನವು, ಆದರಿಂದ ಬಿಡಲ್ಪಟ್ಟವರು, ಎಂಬುದರಿಂದ ಶ್ರೀ ಕೃಷ್ಣನು ಕಂಸನನ್ನು ಧ್ವಂಸಮಾಡಿದಹಾಗೆ ಅರಿಷಡ್ವರ್ಗಗಳನ್ನು ಜಯಿಸಿದವರೆಂಬ ಭಾವವೂ ತೋರಿಬರುತ್ತದೆ. **ಅವಿದ್ಯಾಪೂತನೋನ್ಮುಕ್ತೈಃ** ಎಂಬುದರಿಂದ ಇನ್ನೊಂದು ಧ್ವನ್ಯರ್ಥವೂ ಸೂಚಿತವು. ಕೆಲವರು, ಪರಮಾತ್ಮ ನಿಗೆ ಅವಿದ್ಯಾ ಎಂಬ ಪಿಶಾಚಿಯ ಗೃಹೀತತ್ವವುಂಟೆಂಬ ವಾದವನ್ನು ತಮಗಿರುವ ಅವಿದ್ಯೆಯಿಂದ ಹೇಳುವರು, ಅಂತಹ ವಾದದಿಂದ ಬಿಡಲ್ಪಟ್ಟವರು ತಮ್ಮ ಗುರುಗಳು ಎಂಬ ಭಾವವೂ ಸೂಚಿತವು. ನಮ್ಮ ಆಚಾರ್ಯರಿಗೇ ಅವಿದ್ಯಾ ಗೃಹೀತತ್ವವಿಲ್ಲದಿರುವಾಗ ಪರಮಪುರುಷನಿಗೆ ಅದು ಎಲ್ಲಿಯದು ? ಎಂಬರ್ಥವೂ ಸೂಚಿತವು. ಇನ್ನು ಎಂತವರೆಂದರೆ—(೨) **ಅನವಜ್ಞಾತ ಸತ್ಪಥೈಃ** - ಅಜ್ಞಾತವೆಂದರೆ ತಿಳಿಯದೇ ಇರುವದು, **ಅನವಜ್ಞಾತ** - ತಿಳಿಯದೇ ಇರುವದು ಇಲ್ಲದವರು ಎಂದರೆ ಸಾದರದಿಂದ ಗ್ರಹಿಸಿದ ಒಳ್ಳೆ ಮಾರ್ಗವನ್ನವಲಂಬಿಸಿದವರು, ತಮಗೆ ವಿಹಿತಗಳಾದ ನಿತ್ಯನೈಮಿತ್ತಿಕ ಕರ್ಮಗಳನ್ನೂ ಫಲಾಭಿಸಂಧಿಯಿಲ್ಲದೆ ಅನು ಷ್ಠಿಸಿ ಉಪಾಯಾನುಷ್ಠಾನಮಾಡಿದ ಸದಾಚಾರನಿಷ್ಠರು, **ಅನವಜ್ಞಾತ** ಎಂಬುದ ರಿಂದ, ಆದರ, ಶ್ರದ್ಧಾದಿಗಳು ದ್ಯೋತಿತವು. (೩) **ಅಸದಾಸ್ವಾದನವ್ರೀಡೈಃ** - ಅಲ್ಪಾಸ್ಥಿರಗಳಾದ ಭೋಗಗಳೆಲ್ಲಾ ಅಸತ್ತುಗಳು, ವಿಷಯೋಪಭೋಗಾದಿಗಳಲ್ಲಿ ನಾಚಿಕೆಯುಳ್ಳವರು, ಪರಮಾತ್ಮನಲ್ಲಿ ಸಕ್ತರಾದ ಮನಸ್ಸುಳ್ಳ ಪ್ರಪನ್ನರು, ಐಹಿಕ ಗಳು ಅಸತ್ತುಗಳೆಂದು ಭಾವಿಸಿ ಅವುಗಳಲ್ಲಿ ರಮಿಸದವರು. ಹಿಂದೆ ಅಸಾರ ವಿಷಯ ಪ್ರವಾಹದಲ್ಲಿ ಪರಿಶುದ್ಧನಾದ ಪ್ರಪನ್ನನು ಬಿದ್ದು ಅಪವಿತ್ರನಾಗಿ ಮಾಡಿಕೊಳ್ಳುವ ದಿಲ್ಲವೆಂದು ಹೇಳಿರುತ್ತಾರೆ. **ಅಸದಾಸ್ವಾದನ ವ್ರೀಡೈಃ** ಎಂಬಲ್ಲಿ ವ್ರೀಡಾ ಶಬ್ದವು

ಸ್ತ್ರೀಲಿಂಗವಿರುವದರಿಂದ ಪುರುಷಶಬ್ದವಾಚ್ಯನು ಪರಮಪುರುಷನಾದುದರಿಂದ, ಆತನಲ್ಲೇ ಅನುರಕ್ತನಾಗಿರುವ ಪ್ರಪನ್ನನು " ಶುದ್ಧಾಂತ ಸಿದ್ಧಾಂತ " ನಾದುದರಿಂದ, ಅಸತ್ತಾದ ಅನ್ಯಪುರುಷಸ್ಥಾನದಲ್ಲಿರುವ ವಿಷಯೋಪಭೋಗಾಸಕ್ತಿಯಲ್ಲಿ ಲಜ್ಜೆಯುಳ್ಳ ಶುದ್ಧಾಂತ ಸಿದ್ಧಾಂತಿ ಎಂಬಲ್ಲಿ ಹೇಳಿರುವ ಹಾಗೆ ಪರಮ ಸಾಧ್ವಿಯ ಸಿದ್ಧಾನ್ತವನ್ನು ಕೈಕೊಂಡ ಪ್ರಪನ್ನರು ತಮ್ಮ ಆಚಾರ್ಯ ಪರಂಪರೆಯೆಂದು ಹೇಳಿತೆಂಬ ವ್ಯಂಗಾರ್ಥವೂ ಸೂಚಿತವು. ಶುದ್ಧಾನಾಂತು ಲಭೇಮಹಿ ಸಿದ್ಧಾನ್ತಸಿದ್ಧಾನ್ತಿನಾಂ ಎಂಬ ಪ್ರಯೋಗವು ಇಲ್ಲಿ ಅನುಸಂಧೇಯವು. ನಿಷಿದ್ಧಾನುಭವದಲ್ಲಿ ಲಜ್ಜೆ ಇರುವವರು ಎಂದರೆ ಅವುಗಳನ್ನು ಕಣ್ಣೆತ್ತಿ ನೋಡದವರೆಂಬ ಭಾವವು. ಆಗಲೂ ಅರ್ಥವು ಒಂದೇ. ಅಸದಾಸ್ವಾದನವ್ರೀಡೈಃ ಎಂದು ಪಾಠಾಂತರವು' ಇಂತಹ ದೇಶಿಕೈಃ ಎಂದು ಇಟ್ಟುಕೊಳ್ಳತಕ್ಕದ್ದು, ಇಂತಹ ಭ್ರಮಜ್ಞಾನಗಳಲ್ಲದ ಸದಾಚಾರನಿಷ್ಠೆಯಿಂದ ಕೂಡಿ ಉಪಾಯಾನುಷ್ಠಾನಮಾಡಿದ, ಐಹಿಕ ವಿಷಯೋಪಭೋಗಗಳಲ್ಲಿ ಬಿದ್ದು ನರಳದಿರುವ ನಮ್ಮ ಆಚಾರ್ಯಶ್ರೇಷ್ಠರಾದ ನಾಥಮುನಿ, ಮಣಕ್ಕಾಲ್‌ನಂಬಿ, ಯಾಮುನಮುನಿ, ಭಾಷ್ಯಕಾರರು, ನಡಾದೂರ್ ಅಮ್ಮಾಳ್, ಕಿಡಾಂಬಿ ಅಪ್ಪುಳಾರ್ ಮೊದಲಾದ ಆಚಾರ್ಯ ಪರಂಪರೆಯಿಂದ ಸತ್ಸಂಪ್ರದಾಯರೀತ್ಯಾ ಉಪದಿಷ್ಟವಾದುದನ್ನೇ ತಮ್ಮ ಶಿಷ್ಯವರ್ಗದ ಅನುಗ್ರಹಾರ್ಥವಾಗಿ ತಾವೂ ಉಪದೇಶಿಸಿರುವದು ಎಂದು ಹೇಳುತ್ತಾರೆ. ಆದುದರಿಂದ ಈ ಮೂಲಮನ್ತ್ರಾರ್ಥಗಳೆಲ್ಲಾ ಶಿಷ್ಯವರ್ಗಕ್ಕೆ ಸೇರಿದ ನಮ್ಮೆಲ್ಲರಿಗೂ ಪರಮಗ್ರಾಹ್ಯವಾದವುಗಳು. ಯಾವಾಗ ಶಿಷ್ಯವರ್ಗದ ಅನುಗ್ರಹಕ್ಕಾಗಿ ಉಪದಿಷ್ಟವು ಎಂಬುದು ದ್ಯೋತಿತವೋ, ಶಿಷ್ಯ ವರ್ಗಕ್ಕೆ ಸೇರಿದವರಿಗೆ ಉಪಾದೇಯ ಬುದ್ಧಿಯು ಇಲ್ಲದಿದ್ದರೂ ಅದರಿಂದ ತಮಗೆ ಏನೊಂದು ಕೊರತೆಯೂ ಇಲ್ಲವೆಂಬ ಭಾವವೂ ಸಹ ಸೂಚಿತವು. ಈಗ ತಾವು ಉಪಪಾದಿಸಿ ಹೇಳಿದ ಅಭಿಪ್ರಾಯ ಸಮೂಹಗಳಿಗೆ ವಿರುದ್ಧವಾಗಿಯೂ, ನಮ್ಮ ಸಿದ್ಧಾನ್ತಕ್ಕೆ ಅನಭಿಮತವಾದವುಗಳಾಗಿಯೂ ಹೇಳುವ ಕುತರ್ಕ ಕುವಾದಗಳಿಗೆ ಮನಕೊಡಗೂಡದೆಂಬುದೂ ಅರ್ಥಾತ್ ಸಿದ್ಧವು, ಏಕೆಂದರೆ ಸತ್ಸಂಪ್ರದಾಯಕ್ಕೆ ವಿರುದ್ಧವಾಗಿಯೂ, ಸದಾಚಾರ್ಯರ ಸಮ್ಮತಿ ಇಲ್ಲದೆಯೂ ಇರುವದರಿಂದ ಅನುಪಾದೇಯವೆಂಬುದೂ ಇದರಿಂದ ಸಿದ್ಧವು. ಈ ವಿಷಯದಲ್ಲಿ ಸ್ವಾಮಿ ದೇಶಿಕರವರು ಬರೆದಿರುವ ಸತ್ಸಂಪ್ರದಾಯಸಿದ್ಧಿ ಎಂಬ ರಹಸ್ಯವನ್ನು ಪಠಿಸಬಹುದು.

ಪಾಶುರಾರ್ಥವು—ಈ ಅಧಿಕಾರದಲ್ಲಿ ಉಪಪಾದಿಸಿದ ಅರ್ಥಗಳನ್ನು ನಿಗಮನದಲ್ಲಿ ಸಙ್ಗ್ರಹಿಸಿ ಈ ಪಾಶುರದ ಮೂಲಕ ಉಪದೇಶಿಸುತ್ತಾರೆ—ಹಿಂದೆ ಹತ್ತು ವಿಧ ಯೋಜನೆಗಳಿಂದ ಮನ್ತ್ರದಲ್ಲಿ ತೋರುವ ಅಭಿಪ್ರಾಯಗಳನ್ನೆಲ್ಲಾ ವಿಶದವಾಗಿ ಉಪಪಾದಿಸಿದರೂ ಪದೇ ಪದೇ ಅನುಸಂಧಾನಕ್ಕೆ ಪ್ರಧಾನವಾಗಿ ಮೂರು ವಾಕ್ಯಗಳ ಮೂಲಕ ತತ್ವಹಿತಪುರುಷಾರ್ಥಗಳನ್ನು ಕ್ರಮವಾಗಿ ಮನ್ತ್ರವು ಉಪದೇಶಿಸುತ್ತದೆಂಬ ಅಭಿಪ್ರಾಯವೇ ಮುಖ್ಯವೆಂಬ ಭಾವನೆಯಿಂದ ಈ ಪಾಶುರವನ್ನು ಅನು

ಉಯರ್ನ್ದ ನಙ್ಙ್ಞವಲ ನಲ್ಲಾರ್ ಕ್ಕುರಿನ್ಮೈ ತುರನ್ದು ಯಿರಾಯ್।
ಮಯರ್ನ್ದವೈತೀರ್ನ್ದುಮಱ್ಱೆರ್ವಳಿಯಿನ್ರಿಯಡೈಕ್ಕಲಮಾಯ್।
ಪ್ಪೆಯನ್ದವರ್ ನಾರಣರ್ ಪಾದಙ್ಗಳ್ ಚೇರ್ನ್ದ ಪಳನಡಿಯಾರ್।
ನಯನ್ದಕುತ್ತೇವಲೆಲ್ಲಾ ನಾಡು ನನ್ಮನುವೋದಿನವೇ ||೩೪||

---

ಗ್ರಹಿಸಿರುತ್ತಾರೆ. ಇದು ತತ್ವಹಿತಪುರುಷಾರ್ಥಗಳನ್ನು ಸಮಗ್ರವಾಗಿ ಉಪಪಾದಿಸುತ್ತದೆ ಎಂದು ಅಷ್ಟುಮಟ್ಟಿಗಾದರೂ ಅನುಸಂಧಾನವು ಮುಖ್ಯವೆಂದು ಹೇಳಿ, ಹೀಗೆ ಮೂಲಮನ್ತ್ರದ ಮುಖ್ಯಾರ್ಥಗಳನ್ನು ತಮ್ಮ ಗುರುಗಳ ಮೂಲಕ ಗ್ರಹಿಸಿದುದರಿಂದ ತಾವು ತುಂಬಾ ಸುಕೃತಿ ಎಂದು ಹೇಳಕೊಳ್ಳುತ್ತಾರೆ — **ಉಯರ್ನ್ದ**– ಸರ್ವಕಾರಣತ್ವ ಸರ್ವಶೇಷಿತ್ವ ಶ್ರಿಯಃಪತಿತ್ವಾದಿಗಳಿಂದ ನಿಸ್ಸಮಾಭ್ಯಧಿಕನೆಂದು ಹೇಳಿಸಿಕೊಳ್ಳುವ, **ಉಯರ್ನ್ದವರ್** ಎಂದು ಪಾಠಾಂತರವು. **ನಙ್ಙ್ಞವಲ್**– ನಮಗೆ ರಕ್ಷಕನಾದ ಶ್ರೀಮನ್ನಾರಾಯಣನು, ಇವೆರಡು ಪದಗಳಿಂದ ಪ್ರಣವದ ಅಕಾರದಿಂದ ತೋರುವ ನಾಲ್ಕು ಅರ್ಥಗಳು ಉಪಪಾದಿತವು- ಸರ್ವಕಾರಣತ್ವ, ಸರ್ವಶೇಷಿತ್ವಗಳಿಂದೇನೋ ಸರ್ವೋತ್ಕೃಷ್ಟತೆಯು ವಿಷ್ಣುವಿಗೆ ಏರ್ಪಟ್ಟಿತು. ಶ್ರಿಯಃಪತಿತ್ವದಿಂದ ಹೇಗೆ ಎಂದರೆ "ಅಪ್ರಮೇಯಂ ಹಿ ತತ್ತೇಜಃ ಯಸ್ಯ ಸಾ ಜನಕಾತ್ಮಜಾ" (ರಾಮಾಯಣ॥ಆರಣ್ಯ) ಎಂಬ ಮಹರ್ಷಿ ವಾಕ್ಯಾನುಸಾರವಾಗಿ ಶ್ರಿಯಃಪತಿತ್ವವು, ಶ್ರುತಿಯು "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಎಂದು ಹೇಳಿರುವ ಹಾಗೆ ಸ್ವರೂಪನಿರೂಪಕ ಧರ್ಮವಾದುದರಿಂದಲೂ ಶ್ರೀ ಮಹಾ ವಿಷ್ಣುವು ಉಯರಾನ್ದವನ್ ಎಂಬ ಭಾವವು. **ಅಲ್ಲಾರ್ಕ್ಕು** ಹೀಗೆ ಪರಮಪುರುಷನಲ್ಲದ ಅನ್ಯದೇವತೆಗಳಿಗೆ, **ಉರಿಮೈ** - ಶೇಷತ್ವವನ್ನು, ದಾಸ್ಯವನ್ನು, **ತುರಿನ್ದು** - ಕಳೆದುಕೊಂಡು, ಇದರಿಂದ ಪರಮಪುರುಷನಿಗೆ ಮಾತ್ರವೇ ದಾಸ್ಯವೇ ವಿನಾ ಅನ್ಯರಿಗೆ ಇಲ್ಲವು ಎಂಬುದರಿಂದ ಪ್ರಣವದ ಉಕಾರಾರ್ಥವಾದ ಅವಧಾರಣದಿಂದ ತೋರಿಬರುವ ಅರ್ಥವು, ಹೇಳಲ್ಪಟ್ಟಿತು ; **ಉಯಿರಾಯ್**- ಈ ಭಗವಚ್ಛೇಷತ್ವದಿಂದ ಸತ್ತೆಯನ್ನು ಹೊಂದಿದವರಾಗಿಯೂ ದೇಹೇಂದ್ರಿಯಗಳಿಗಿಂತವಿಲಕ್ಷಣನಾಗಿ ಜ್ಞಾನಸ್ವರೂಪರಾಗಿ ಜ್ಞಾನಗುಣಕರಾಗಿರುವ, ಇದರಿಂದ ಪ್ರಣವದ ಮಕಾರಾರ್ಥವು ಬೋಧಿತವು, ಹೀಗೆ ಮೊದಲು ಪಾದದಿಂದ ಪ್ರಣವಾರ್ಥವುಉಪದಿಷ್ಟವು. **ಮಯರ್ನ್ದವೈತೀರ್ನ್ದು**– ಅಹಂಕಾರಮಮಕಾರಗಳಗೆ ಕಾರಣವಾದಅಜ್ಞಾನವುಕಳೆದುಹೋಗಿ, ಇದು ಸಖಂಡ ನಮಸ್ಸಿನ ಅರ್ಥವು, **ಮತ್ತೋರ್ವಳಿಯಿನ್ರಿ**–ಉಪಾಯಾಂತರಗಳಾದ ಭಕ್ತಿಯೋಗಾದಿಗಳಲ್ಲಿ ತಮಗೆ ಶಕ್ತಿ ಇಲ್ಲದುದರಿಂದ ಅವುಗಳನ್ನೆಲ್ಲಾ ತ್ಯಜಿಸಿ, ಅನನ್ಯಗತಿಕರಾಗಿ ಮಹಾ ವಿಶ್ವಾಸದಿಂದ, **ಅಡೈಕ್ಕಲಮಾಯ್**–ಆತ್ಮರಕ್ಷಾಭರಸಮರ್ಪಣವನ್ನು ಮಾಡಿ, ಪ್ರಪನ್ನರಾಗಿ, **ಪಯನ್ದ** – "**ನರಾಜ್ಜಾತಾನಿತತ್ವಾನಿ ನಾರಾಣಿ**" ಎಂಬಲ್ಲಿ ತೋರಿಬರುವಹಾಗೆ, ಜಗತ್ಸ್ರಷ್ಟಾವಾದ, ಇದು ನಾರಾಯಣ ಶಬ್ದಾರ್ಥ

ವಿವರಣವು, **ಅನ್ನಾರಾಣ್ಣ ಪದಙ್ಗಳ್‌ಶೇರ್‌ನ್ದ**-ಆ ಪ್ರಸಿದ್ಧನಾದ ಶ್ರೀಮನ್ನಾರಾಯಣನ ಪಾದಗಳನ್ನು ಸೇರಿದ ಎಂದರೆ ಪರಮಸಾಧ್ಯೋಪಾಯವಾಗಿ ಅವಲಂಬಿಸಿದ ಎಂಬರ್ಥವು. ಇದು ಅಖಂಡ ನಮಶ್ಶಬ್ದಾರ್ಥವು. **ಪಳವಡಿಯಾರ್**-ಪ್ರಾಚೀನ ದಾಸರೆನಿಸಿದ ನಿತ್ಯ ಸೂರಿಗಳೊಂದಿಗೆ, **ನಯನ್ದ**-ಪ್ರೀತಿಯಿಂದ ಮಾಡುವ, **ಕುತ್ತೇವಲೆಲ್ಲಾಮ್** – ಸರ್ವವಿಧ ಕೈಙ್ಕರ್ಯಗಳನ್ನೆಲ್ಲಾ, ಇದು ನಾರಾಯಣಾಯ ಎಂಬಲ್ಲಿರುವ ಚತುರ್ಥಿಯ ಅರ್ಥವು, **ನಾಡುಮ್** - ವ್ಯಕ್ತವಾಗಿ ಪ್ರದರ್ಶಿಸುವ, **ನರ್ಮನು** - ಸರ್ವೋತ್ಕೃಷ್ಟವಾದ ಮೂಲಮನ್ತ್ರವನ್ನು, **ಓದಿನಮೇ** – ನಮ್ಮ ಆಚಾರ್ಯರ ಮೂಲಕ ಉಪದೇಶಿಸಲ್ಪಟ್ಟಿನು ಅಲ್ಲವೇ ! ನಮ್ಮಂತಹ ಭಾಗ್ಯವಂತರು ಯಾರು ಇದ್ದಾರೆಂಬ ಸಂತೋಷವು ಪ್ರದರ್ಶಿಸಲ್ಪಟ್ಟಿತು. ಶ್ರೀ ಮಹಾವಿಷ್ಣುವು ಸರ್ವಶೇಷಿಯಾಗಿ, ಜಗತ್ಕಾರಣನಾಗಿ, ಸರ್ವಶೇಷಿಯಾಗಿ, ಕರುಣಾಮಯಳಾದ ಲಕ್ಷ್ಮಿಗೆ ಪತಿಯಾಗಿ, ಹೀಗೆ ನಿಸ್ಸಮಾಭ್ಯಧಿಕನು, ಆ ಕಾರಣದಿಂದ ಅತನೇ ನಮಗೆ ರಕ್ಷಕನಾಗಲು ಅರ್ಹನೇ ವಿನಾ ಇತರರು ಯಾರೂ ಅಲ್ಲವು. ಜೀವಾತ್ಮರಾದ ನಾವು ಪರಮಾತ್ಮನ ದಯಯಿಂದ ಲಬ್ಧಸತ್ತಾಕರು, ಜ್ಞಾನಸ್ವರೂಪರು ಜ್ಞಾನಗುಣಕರು, ಎಂಬದಾಗಿ ತನ್ನ ಮತ್ತು ಪರಮಪುರುಷನ ಯಥಾರ್ಥಜ್ಞಾನವನ್ನು ಪ್ರಣವವು ಉಪದೇಶಿಸುತ್ತದೆಂದೂ, ಅಹಂಕಾರ ಮಮಕಾರಗಳನ್ನೂ ಇದರಿಂದುಂಟಾಗುವ ಅಜ್ಞಾನವನ್ನೆಲ್ಲಾ ನೀಗಿಕೊಂಡು ಪರಮಪುರುಷನ ಪಾದಾರವಿಂದದಲ್ಲಿ ಭರಸಮರ್ಪಣೆಯೇ ಪರಮೋಪಾಯವೇ ವಿನಾ, ಇತರೋಪಾಯಕ್ಕೆ ತಾವು ಅನರ್ಹರೆಂದು ಮಹಾವಿಶ್ವಾಸದಿಂದ ಆತ್ಮಸಮರ್ಪಣೆಯನ್ನು ಮಾಡತಕ್ಕದ್ದೆಂಬುದನ್ನು ನಮಶ್ಶಬ್ಧವು ಉಪಪಾದಿಸುತ್ತದೆಂದೂ, ಶ್ರೀಮನ್ನಾರಾಯಣನು ನಮಗೆ ಸೃಷ್ಟಿಕರ್ತಾ ಯಾವಾಗ ಆದನೋ ಆಗ ಆತನೇ ನಮಗೆ ನಿತ್ಯಸೂರಿಗಳೊಂದಿಗೆ ಪರಿಪೂರ್ಣಬ್ರಹ್ಮಾನುಭವರೂಪವಾದ ಆನಂದವನ್ನು ಕೊಟ್ಟು ರಕ್ಷಿಸುವನು, ಆದುದರಿಂದ ಅಂತಹ ಶೇಷಿಗೆ ನಾವು ಸರ್ವ ವಿಧ ಕೈಙ್ಕರ್ಯವನ್ನು ಎಸಗುವದೇ ನಮಗೆ ಸ್ವರೂಪವು ಎಂಬುದು ನಾರಾಯಣಾಯ ಎಂಬ ಶಬ್ದವು ಉಪದೇಶಿಸುತ್ತದೆಂದೂ ನಮ್ಮ ಆಚಾರ್ಯರುಗಳು ಈ ಸರ್ವೋತ್ಕೃಷ್ಟವಾದ ಮೂಲಮನ್ತ್ರಾರ್ಥಗಳನ್ನು ಉಪದೇಶಿಸಿದರಲ್ಲವೇ ! ನಮ್ಮಂತಹ ಸುಕೃತಿಗಳು ಯಾರು ಈ ಲೋಕದಲ್ಲಿ ಎಂದು ಆನಂದಿಸುತ್ತಾರೆ.—

ಇಲ್ಲಿ ಅಲ್ಲಾರ್ಕ್ಕುರಿಮೈತುರಿನ್ದು ಎಂಬುದರಿಂದ ಪ್ರಪನ್ನನಿಗೆ ಅನ್ಯದೇವತೇ ಸಂಬಂಧವೂ ಅನ್ಯದೇವತಾ ಶೇಷತ್ವವೂ ಸರಿಯಲ್ಲವು ; ಪ್ರಪನ್ನನ ಸ್ವರೂಪಕ್ಕೆ ತುಂಬಾ ಕುಂದಕವೆಂಬ ಭಾವವೂ ಪ್ರದರ್ಶಿಸಲ್ಪಟ್ಟಿತು. ಕಾವಲಿ ಎಂದು ಹೇಳಿದುದರಿಂದ ಅನ್ಯದೇವತೆಗಳಿಗೆ ಮೋಕ್ಷವನ್ನು ಕೊಟ್ಟು ರಕ್ಷಿಸುವ ಶಕ್ತಿಯು ಇಲ್ಲವೆಂದೂ, ಶ್ರೀ ಮಹಾ ವಿಷ್ಣುವಿಗೆ ಮಾತ್ರವೇ ಅಂತಹ ಶಕ್ತಿಯು ಎಂಬರ್ಥವೂ ಸೂಚಿತವು. ಆದುದರಿಂದ ಇಂತಹ ಪರಮಪುರುಷನಿಗೆ ಮಾತ್ರವೇ ಶೇಷನೆ

**ಇತ್ಥಂ ಸಂಘಟಿತಃ ಪದೈ ಸ್ತ್ರಿಭಿ ರಸಾ ವೇಕದ್ವಿಪಞ್ಚಾಕ್ಷರೈ ।**
**ರರ್ಥೈರ್ಗ ಸ್ತತ್ತ್ವಹಿತಪ್ರಯೋಜನಮಯೈ ರಧ್ಯಾತ್ಮಸಾರೈ ಸ್ತ್ರಿಭಿಃ ॥**

---

ವಿನಾ ಅನ್ಯರಿಗಲ್ಲವೆಂಬ ಯಾವಾಗ ಜ್ಞಾನವುಂಟಾಯಿತೋ, ಆಗೀಗ ಈತನು ಸತ್ತೆಯನ್ನು ಹೊಂದಿದವನಾಗುವನು ಎಂಬ ಭಾವವನ್ನು **ಉಯಿರಾಯ್** ಎಂಬ ಪ್ರಯೋಗವು ಸೂಚಿಸುತ್ತದೆ. ಇದರಿಂದುಂಟಾಗುವ ಪರಮ ಪ್ರಯೋಜನವೇ ನೆಂದರೆ, ತಾನು ತನ್ನನ್ನು ರಕ್ಷಿಸಿಕೊಳ್ಳಲು ಅಶಕ್ತನು, ತಾನು ಪರಮಾತ್ಮನ ಸ್ವತ್ತು ಆದುದರಿಂದ ಹಾಗೆ ರಕ್ಷಿಸಲು ಅಶಕ್ತವಾದ ವಸ್ತುವನ್ನು, ಆ ವಸ್ತುವಿನ ಸ್ವಾಮಿಯ ಪಾದದಲ್ಲೇ ಸಮರ್ಪಿಸತಕ್ಕದ್ದೆಂಬ ಹಿತೋಪದೇಶವು ದೊರೆಯುತ್ತ ದೆಂಬ ಅಂಶವು ಎರಡನೆಯ ಪಾದದಿಂದ ತೋರಿಬರುತ್ತದೆ. **ನಾರಣಪಾದಙ್ಗಳ್ ಶೇರ್ನ್ದ** ಎಂಬಲ್ಲಿರುವ ನಾರಣ ಶಬ್ದವು ಹೀಗೆ ಆಶ್ರಿತನನ್ನು ರಕ್ಷಿಸಲು ಉಪ ಯುಕ್ತವಾದ ಕಲ್ಯಾಣಗುಣಾಕರತ್ವಾದಿಗಳು ಆತನಲ್ಲಿ ಉಂಟೆಂಬ ಭಾವವನ್ನೂ, ಆತನೇ ನಮಗೆ ಗತಿಯು, ಆಧಾರವೂ, ಸಕಲ ವಿಧ ಬಂಧುವೂ, ಪರಮ ಸುಹೃತ್ತು ಇತ್ಯಾದಿ ಭಾವಗಳನ್ನೂ ಸೂಚಿಸುತ್ತದೆ. **ಪಳವಡಿಯಾರ್ ನಯನ್ದ ಕುತ್ತೇ ವಲೆಲ್ಲಾಮ್** ಎಂಬುದರಿಂದ ಆನಂದದೆಶೆಯಲ್ಲಿ ನಿತ್ಯಸೂರಿಗಳೊಂದಿಗೆ ಏನೊಂದೂ ತಾರತಮ್ಯವಿಲ್ಲದೆ ಪರಿಪೂರ್ಣಬ್ರಹ್ಮಾನುಭವ ಮುಕ್ತರಿಗೂ ಉಂಟೆಂಬ ಭಾವವೂ ಪ್ರದರ್ಶಿತವು. ಇಂತಹ ಸಾರತಮಗಳಾದ ಗುಹ್ಯಗಳಾದ ಮನ್ತ್ರಾರ್ಥಗಳೆಲಾ ಚಾರ್ಯಕೃಪೆಯಿಂದಲೇ ಲಭಿಸತಕ್ಕವೇವಿನಾ ಅನ್ಯಥಾ ಇಲ್ಲವೆಂಬ ಶ್ರೇಷ್ಠತಮ ಉಪದೇಶವನ್ನು **ಓದಿನಮೇ** ಎಂಬ ಪ್ರಯೋಗದಿಂದ ಗ್ರಹಿಸಬಹುದು. ಕೈಂಕರ್ಯ ಸಾಮ್ರಾಜ್ಯ ಮಾಹಾತ್ಮ್ಯೆಯನ್ನು ಪ್ರದರ್ಶಿಸುವ **ನಾರಾಯಣಾಯ** ಎಂಬ ಪದವು ಎಷ್ಟು ಅಮೋಘವಾದುದು ಎಂಬ ಭಾವವೂ ಸೂಚಿತವು.

ಹೀಗೆ ಈ ಪಾಶುರದ ಮೂಲಕ ಈ ಸರ್ವೋತ್ಕೃಷ್ಟ ಮನ್ತ್ರವನ್ನು ತತ್ತ್ವಹಿತ ಪುರುಷಾರ್ಥ ಪ್ರದರ್ಶಕ ಮನ್ತ್ರವನ್ನಾಗಿ ಕೊಂಡಾಡಿ, ಅನಂತರ ಹಿಂದಿನ ಅಧಿಕಾರ ಕ್ರಮವನ್ನನುಸರಿಸಿ ಒಂದು ಸಂಸ್ಕೃತ ಶ್ಲೋಕದ ಮೂಲಕವೂ ಶ್ಲಾಘಿಸಲ ಹೊರಟು ಈ ಮನ್ತ್ರರತ್ನವು, ಆಶ್ರಯಿಸಿದವರಿಗೆ ಸಂಸಾರ ಬಂಧವನ್ನು ಹೋಗ ಲಾಡಿಸಿ ರಕ್ಷಿಸುತ್ತದೆಂದು ಹೇಳಿ, ಆದುದರಿಂದ ಎಲ್ಲಾ ಮನ್ತ್ರಗಳಿಗಿಂತಲೂ ವಿಲಕ್ಷಣ ವಾದುದೆಂದು ನಿಗಮನಮಾಡುತ್ತಾರೆ.—

ಈ ಮನ್ತ್ರವು, ೮ ಅಕ್ಷರಗಳುಳ್ಳ, ಮೂರು ಪದಗಳಿಂದ ಕೂಡಿದುದು ಎಂದ ಹೇಳುತ್ತಾರೆ. **ಏಕದ್ವಿಪಂಚಾಕ್ಷರೈಃ**-"ಓಮಿತ್ಯೇಕಾಕ್ಷರಂ, **ನಮ ಇತಿ ದ್ವೇ ಅಕ್ಷರೇ, ನಾರಾಯಣಾಯೇತಿ ಪಂಚಾಕ್ಷರಾಣಿ** ಎಂದು ನಾರಾಯಣೋಪನಿಷತ್ತಿನಲ್ಲಿ ಹೇಳಿರುವಹಾಗೆ ಎಂಟು ಅಕ್ಷರಗಳಿಂದಲೂ, **ಪದೈಸ್ತ್ರಿಭಿಃ - ಓಂ ನಮಃ ನಾರಾಯ ಣಾಯ** ಎಂಬ ಮೂರು ಪದಗಳಿಂದಲೂ, **ಸಂಘಟಿತಃ** - ಕೂಡಿದುದಾಗಿಯೂ,

**ಆದ್ಯ(ಸ್ತ್ರ್ಯ)ಸ್ತ್ರ್ಯಕ್ಷರ ವೇದಸೂತಿ ರಜಹತ್ ಸ್ಥೂಲಾದಿವೃತ್ತಿತ್ರಯ**
**ಸ್ತ್ರೈಗುಣ್ಯಪ್ರಶಮಂ ಪ್ರಯಚ್ಛತಿ ಸತಾಂ ತ್ರಯ್ಯನ್ತಸಾರೋ ಮನುಃ ||೬೪||**
**ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರಸ್ವತಂತ್ರಸ್ಯ**
**ವೇದಾಂತಾಚಾರ್ಯಸ್ಯ ಕೃತಿಷು ಶ್ರೀಮದ್ರಹಸ್ಯತ್ರಯಸಾರೇ**
**ಮೂಲಮನ್ತ್ರಾಧಿಕಾರಸ್ಸಪ್ತವಿಂಶಃ**
**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ**

---

ಹೀಗೆ ಶಾಬ್ದವಾಗಿ ತೋರುವ ಪ್ರಕಾರವು ಹೇಳಲ್ಪಟ್ಟಿತು. **ಅಧ್ಯಾತ್ಮಸಾರೈಃ** – ಅಧ್ಯಾತ್ಮವಿದ್ಯೆಯಾದ ವೇದಾಂತಶಾಸ್ತ್ರದ ಸಾರಭೂತವಾದ, ಅಧ್ಯಾತ್ಮವೆಂದರೆ ಆತ್ಮ ಸ್ವರೂಪ ಸ್ವಭಾವಗಳನ್ನು ಉಪಪಾದಿಸಿ ಆತನಿಗೆ ಶ್ರೇಯಸ್ಸುಗಳನ್ನು ಹೊಂದಲು ಮಾರ್ಗಗಳು ಯಾವುವು ಎಂದು ಪ್ರತಿಪಾದಿಸುವ ಶಾಸ್ತ್ರ, ಉಪನಿಷತ್ತು ಶಾರೀರಕ ಮೊದಲಾದ ಶಾಸ್ತ್ರಗಳ ಸಾರಭೂತವಾದ, **ತ್ರಿಭಿಃ** - ಮೂರಾದ **ತತ್ವಹಿತಪ್ರಯೋಜನ ಮಯೈಃ** - ತತ್ವ, ಹಿತ, ಪುರುಷಾರ್ಥಗಳನ್ನು ಬೋಧಿಸುವ ವಾಕ್ಯಗಳ ಪ್ರಾಚುರ್ಯಗಳುಳ್ಳ, **ಅರ್ಥೈಃ** – ಅರ್ಥಗಳಿಂದಲೂ, **ಇತ್ಥಂ** – ಈಗ ನಾವು ಉಪಪಾದಿಸಿ ಹೇಳಿದ ರೀತಿಯಲ್ಲಿ,**ಸಂಘಟಿತಃ** ಸೇರಿರುವ ಎಂದರೆ ಶಾಬ್ದವಾಗಿಯೂ ಅರ್ಥವಾಗಿಯೂ ಸೇರಿಕೊಂಡಿರುವ, **ಅಸೌ ಆದ್ಯೋ ಮನುಃ** ಈ ಎಲ್ಲಾ ಮನ್ತ್ರಗಳಿಗೂ ಮೊದಲಾಗಿ ಮೂಲಮನ್ತ್ರವೆಂದು ಹೇಳಿಸಿಕೊಂಡಿರುವ ಸರ್ವಶ್ರೇಷ್ಠ ಮನ್ತ್ರವು, ಅಸೌ ಎಂಬುದು ಇಲ್ಲಿ ನಿಕೃಷ್ಟವಾಚಿಯಲ್ಲವು, ಪ್ರಕೃಷ್ಟವಾಚಿಯು, ಅಥವಾ **ಆದ್ಯತ್ರ್ಯಕ್ಷರ ವೇದಸೂತಿಃ** ಎಂಬದಾಗಿ ಒಂದೇ ಪದವಾಗಿ ಭಾವಿಸ ಬಹುದು. ಮೊದಲಲ್ಲಿ ಮೂರು ಅಕ್ಷರಗಳುಳ್ಳ ಓಂ ಎಂಬ ಪ್ರಣವವನ್ನೇ ವೇದ ಗಳಾರಂಭದಲ್ಲಿ ವುಳ್ಳದ್ದಾಗಿಯೂ ಎಂಬರ್ಥವು. **ಆದ್ಯಃ** ಎಂದು ಬೇರೆ ಪದ ವಾದರೆ, **ತ್ರ್ಯಕ್ಷರ ವೇದ ಸೂತಿಃ**-ಮೂರು ಅಕ್ಷರಗಳುಳ್ಳ ಪ್ರಣವವನ್ನೇ ವೇದೋಪ ಕ್ರಮಕ್ಕೆ ಕಾರಣವಾಗಿ, ಇದರಿಂದ **ತತ್ವ**ವನ್ನು ನಿರೂಪಿಸುವ ಪ್ರಣವವು ಬೋಧಿ ತವು. **ಅಜಹತ್ ಸ್ಥೂಲಾದಿ ವೃತ್ತಿತ್ರಯಃ** - ಬಿಡದೆ ಇರುವ ಸ್ಥೂಲಸೂಕ್ಷ್ಮ ಪರಯೋಜನೆಗಳಾದ ಮೂರು ಯೋಜನೆಗಳುಳ್ಳ. ಇದರಿಂದ ನಮಶ್ಶಬ್ದವು ಬೋಧಿ ತವು. **ಸತಾಂ** – ಸತ್ಪುರುಷರಾದ ಪ್ರಪನ್ನರಿಗೆ, **ತ್ರೈಗುಣ್ಯ ಪ್ರಶಮಮ್** - ಸತ್ವರಜಸ್ತಮಸ್ಸೆಂಬ ಮೂರು ಗುಣಗಳಿಂದ ಕೂಡಿದ ದೇಹೇಂದ್ರಿಯ ಸಂಬಂಧ ದಿಂದ ಬಿಡುಗಡೆಯನ್ನು, **ಈ ತ್ರಯ್ಯನ್ತಸಾರೋ ಮನುಃ** - ವೇದಾಂತಾರ್ಥ ಗಳ ಸಾರಭೂತವಾದ ಈ ಮನ್ತ್ರವು, **ಪ್ರಯಚ್ಛತಿ**-ಕೊಡುತ್ತದೆ. ಇದರಿಂದ ಮೂರ ನೆಯ ಪದದಿಂದ ಬೋಧಿತವಾದ ಪುರುಷಾರ್ಥವು ಶಿಕ್ಷಿತವು. ನಾರದೀಯ ಕಲ್ಪದಲ್ಲಿ ಈ ಮನ್ತ್ರವು ಶ್ಲಾಘಿಸಲ್ಪಟ್ಟಿರುವ ಅಭಿಪ್ರಾಯಗಳನ್ನೇ ಇಲ್ಲಿ ಉಪಪಾದಿಸಿರುತ್ತಾರೆ. ಇಲ್ಲಿ ತ್ರಯ್ಯನ್ತ ಸಾರೋ ಮನುಃ ಎಂದು ಹೇಳಿರುವ ಹಾಗೆ ಅಲ್ಲಿ "ಸರ್ವವೇದಾಂತ

ಸಾರಾರ್ಥಃ ಸಂಸಾರಾರ್ಥಾವತಾರಿಕಃ" ಎಂಬಲ್ಲಿ ಸಂಸಾರಾರ್ಥಾವತಾರಿಕಃ ಎಂಬುದೂ ತ್ರೈಗುಣ್ಯಪ್ರಶಮಂ ಪ್ರಯಚ್ಛತಿ ಎಂಬುದೂ ಸಮಾನಾರ್ಥಗಳು. ಈ ಅಭಿಪ್ರಾಯಕ್ಕೆ ಬಹವೋಽಪಿ ಮಹಾತ್ಮಾನೋಮುನಯಸ್ಸನಕಂದಯಃ ಅಷ್ಟಾಕ್ಷರಂ ಸಮಾಶ್ರಿತ್ಯ ತೇಜಗ್ಮುರ್ವೈಷ್ಣವಂ ಪದಮ್" ಎಂಬುದು ಅನುಸಂಧೇಯವು. ತ್ರೈಗುಣ್ಯ ವಿಷಯಾವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ" (ಗೀ.೨.೪೫) ಎಂಬ ಗೀತಾ ಶ್ಲೋಕವು ಈ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ. ತ್ರ್ಯಕ್ಷರ ವೇದಸೂತಿಃ ಎಂಬ ಪ್ರಯೋಗವು "ಯದ್ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತಃ"-ವೇದಾರಂಭದಲ್ಲೂ ವೇದಾಧ್ಯಯನದ ಕೊನೆಯಲ್ಲಿಯೂ "ಹರಿಃ ಓಮ್"ಎಂದು ಹೇಳಬೇಕಾದ ಸಂಪ್ರದಾಯಕ್ರಮವನ್ನು ಸೂಚಿಸುತ್ತದೆ. ಆದ್ಯಃ ಎಂದು ಹೇಳಿರುವದು "ಆದ್ಯಂತು ತ್ರ್ಯಕ್ಷರಂ ಬ್ರಹ್ಮ" ಎಂಬ ಪ್ರಮಾಣೋಕ್ತಿಯನ್ನನುಸರಿಸಿದ್ದಾಗಿರುತ್ತದೆ. ಇಲ್ಲಿ ಬ್ರಹ್ಮ ಶಬ್ದವು ವೇದವೆಂಬ ಅರ್ಥವನ್ನು ಬೋಧಿಸುತ್ತದೆ. ಪ್ರಣವವೂ ಮೂರು ಅಕ್ಷರಗಳನ್ನುಳ ವೇದವಾಕ್ಯವೇ ಎಂಬ ಭಾವವು.

ಇಂತಹ ಪರಮಮಾಹಾತ್ಮ್ಯಯುಳ್ಳ ಈ ಮೂಲಮನ್ತ್ರದ ಅನುಸಂಧಾನವು ಮೋಕ್ಷಾರ್ಥಿಗೆ, ಆದರ ವಿವರಣವಾದ ದ್ವಯಮನ್ತ್ರದ ಮೂಲಕ, ಉಪಾಯಾನುಷ್ಠಾನಕ್ಕೆ ಸಾಧಕವಾಗಿ ಮೋಕ್ಷಫಲವನ್ನುಂಟುಮಾಡುತ್ತದೆಂಬುದು ಈ ಶ್ಲೋಕದ ಮುಖ್ಯಾಭಿಪ್ರಾಯವು.

ಇಂತು ಈ ಮೂಲಮನ್ತ್ರಾಧಿಕಾರಕ್ಕೆ

ತಿರುನಾರಾಯಣಪುರಂ ಚು. ಮೇ. ವಿಜಯರಾಘವಾಚಾರ್ಯನ

ಆಚಾರ್ಯ ಹೃದಯಾನ್ವೇಷಿಣೀ

ಎಂಬ ಅರ್ಥ ತಾತ್ಪರ್ಯಗಳು ಸಂಪೂರ್ಣವು.

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

---

# ನಮ್ಮಲ್ಲಿ ದೊರೆಯುವ ಪುಸ್ತಕಗಳು

---

ಆಚಾರ್ಯಹೃದಯಾನ್ವೇಷಿಣೀ ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯ
ಗಳೊಡನೆ ಶ್ರೀಮನ್ನಿಗಮಾನ್ತದೇಶಿಕರವರ

೧. ಶ್ರೀಮದ್ರಹಸ್ಯತ್ರಯಸಾರವು
ಮೂಲಮನ್ತ್ರಾಧಿಕಾರವೂ ಸೇರಿ ೧೫ ಸಂಪುಟಗಳು. ೧೪ ೨ ೦
೨. ಅಭೀತಸ್ತವ ಶ್ರೀರಂಗನಾಥಸ್ತೋತ್ರವು ೦ ೧೨ ೦
೩. ಶ್ರೀಸ್ತುತಿ ಎಂಬ ಶ್ರೀರಂಗನಾಯಕೀಸ್ತೋತ್ರವು ೦ ೧೨ ೦
೪. ಶ್ರೀಯಾಮುನಮುನಿಗಳ ಚತುಶ್ಶ್ಲೋಕೀ ೦ ೮ ೦
೫. ಶ್ರೀಪರಾಶರಭಟ್ಟರವರ ಸಹಸ್ರನಾಮಭಾಷ್ಯಕ್ಕೆ ಕನ್ನಡ ಅರ್ಥವು ೦ ೧೪ ೦
೬. ಶ್ರೀಮದ್ಭಗವದ್ಗೀತೆಯ ಮೂಲಕ್ಕೂ ಭಾಷ್ಯಕ್ಕೂ ಪ್ರತಿಪದಾರ್ಥ, ತಾತ್ಪರ್ಯ
ಗಳೂ, ತಾತ್ಪರ್ಯಚಂದ್ರಿಕಾರ್ಥಗಳೂ, ಯಾಮುನಮುನಿಗಳ ಗೀತಾರ್ಥ
ಸಂಗ್ರಹ ಮೂರು ಸಂಪುಟಗಳು ೩ ೦ ೦, ೩ ೧೨ ೦, ೪ ೦ ೦

ದ್ವಯಾಧಿಕಾರ, ಚರಮಶ್ಲೋಕಾಧಿಕಾರಗಳೂ, ಶ್ರೀಸೂಕ್ತಭಾಷ್ಯವೂ,
ರಹಸ್ಯತ್ರಯಸಾರಾರ್ಥಸಂಗ್ರಹ, ಶ್ರೀಆಳವಂದಾರ್ ಸ್ತೋತ್ರವೂ
ಅಚ್ಚಾಗುತ್ತಲಿವೆ

ಈಗ ಅಚ್ಚಾಗಿರುವ ಎಲ್ಲಾ ಗ್ರಂಥಗಳನ್ನೂ ಒಟ್ಟಿಗೆ ( 1 set )
ತೆಗೆದುಕೊಂಡರೆ ೨೫ ೦ ೦

ಸಿ. ಎಂ. ವಿಜಯರಾಘವಾಚಾರ್

ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್‌ಪೆಕ್ಟರು,
ಬಸವನಗುಡಿ, ಬೆಂಗಳೂರು ಸಿಟಿ,